*ಪಿಹೆಚ್.ಡಿ. ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ*

# ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ – ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜದ ಮೇಲೆ ಪಾಶ್ಚಿಮಾತ್ಯ ಪ್ರಭಾವ – ಒಂದು ಸಮಗ್ರ ಅಧ್ಯಯನ (1894–1940)




ಸಲ್ಲಿಸಿದವರು

***ಎಂ.ಎಸ್. ಅನಿತ***

ಹಿರಿಯ ಶ್ರೇಣಿ ಉಪನ್ಯಾಸಕರು
ಇತಿಹಾಸ ವಿಭಾಗ
ಮಹಾರಾಣಿ ಮಹಿಳಾ ಕಲಾ ಮತ್ತು ವಾಣಿಜ್ಯ ಕಾಲೇಜು
ಮೈಸೂರು

ಮಾರ್ಗದರ್ಶಕರು

***ಡಾ. ಸುಗೀತ ಸುವರ್ಣ*** ಎಂ.ಎ., ಪಿಹೆಚ್.ಡಿ.

ರೀಡರ್, ಇತಿಹಾಸ ಅಧ್ಯಯನ ವಿಭಾಗ
ಮಾನಸ ಗಂಗೋತ್ರಿ, ಮೈಸೂರು

***ಇತಿಹಾಸ ಅಧ್ಯಯನ ವಿಭಾಗ***

ಮೈಸೂರು ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ, ಮೈಸೂರು-570006

**2007**




ಎಂ.ಎಸ್. ಅನಿತ
ಹಿರಿಯ ಶ್ರೇಣಿ ಉಪನ್ಯಾಸಕರು
ಇತಿಹಾಸ ವಿಭಾಗ
ಮಹಾರಾಣಿ ಮಹಿಳಾ ಕಲಾ ಮತ್ತು ವಾಣಿಜ್ಯ ಕಾಲೇಜು
ಮೈಸೂರು

## ಸಂಶೋಧಕರ ಪ್ರಮಾಣ ಪತ್ರ

"ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ - ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜದ ಮೇಲೆ ಪಾಶ್ಚಿಮಾತ್ಯ ಪ್ರಭಾವ - ಒಂದು ಸಮಗ್ರ ಅಧ್ಯಯನ(1894-1940)" ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಈ ಸಂಶೋಧನಾತ್ಮಕ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯದ ಮಾನಸ ಗಂಗೋತ್ರಿಯ ಇತಿಹಾಸ ಅಧ್ಯಯನ ವಿಭಾಗದಲ್ಲಿ ರೀಡರ್ ಆಗಿರುವ ಡಾ. ಸುಗೀತ ಸುವರ್ಣ ಎಂ.ಎ. ಪಿಹೆಚ್.ಡಿ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ ಎಂದು ಪ್ರಮಾಣೀಕರಿಸುತ್ತೇನೆ. ಈ ಮಹಾಪ್ರಬಂಧವನ್ನು ಈ ಹಿಂದೆ ಯಾವ ವಿಶ್ವವಿದ್ಯಾನಿಲಯಕ್ಕಾಗಲಿ, ಇನ್ನಾವುದೇ ಸಂಸ್ಥೆಗಾಗಲಿ ಯಾವುದೇ ಪದವಿಗಾಗಿ ಬರೆದು ಒಪ್ಪಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 04-06-2007
ಸ್ಥಳ : ಮೈಸೂರು

(ಎಂ.ಎಸ್. ಅನಿತ)




ಡಾ. ಸುಗೀತ ಸುವರ್ಣ ಎಂ.ಎ., ಪಿಹೆಚ್.ಡಿ.
ರೀಡರ್, ಇತಿಹಾಸ ಅಧ್ಯಯನ ವಿಭಾಗ
ಮಾನಸ ಗಂಗೋತ್ರಿ, ಮೈಸೂರು



## ಮಾರ್ಗದರ್ಶಕರ ಪ್ರಮಾಣಪತ್ರ

ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿ ಇತಿಹಾಸ ಅಧ್ಯಯನ ವಿಭಾಗದಲ್ಲಿ ಸಂಶೋಧಕರಾಗಿರುವ ಎಂ.ಎಸ್.ಅನಿತ ರವರು "ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್-ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜದ ಮೇಲೆ ಪಾಶ್ಚಿಮಾತ್ಯ ಪ್ರಭಾವ-ಒಂದು ಸಮಗ್ರ ಅಧ್ಯಯನ (1894-1940)" ಎಂಬ ವಿಷಯಕ್ಕೆ ಸಂಬಂಧಿಸಿದ ಈ ಮಹಾ ಪ್ರಬಂಧವನ್ನು ಪಿಹೆಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಪ್ರಾಮಾಣಿಕ ಉದ್ದೇಶವನ್ನಿಟ್ಟುಕೊಂಡು ಸಿದ್ಧಪಡಿಸಿದ್ದಾರೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 04-06-07
ಸ್ಥಳ:ಮೈಸೂರು

Sugitha, S.
(ಡಾ. ಸುಗೀತ ಸುವರ್ಣ)

Dr. Sugitha. S. M.A., Ph.D.,
READER
P. G. Dept. of History
University of Mysore,
Manasagangothri, MYSORE-570 006

## ಕೃತಜ್ಞತೆಗಳು

ನಾನು ವಿದ್ಯಾರ್ಥಿ ದಿಸೆಯಿಂದಲೂ ಕರ್ನಾಟಕದ ಇತಿಹಾಸ, ಸಮಾಜ, ಸಂಸ್ಕೃತಿಗಳ ಬಗ್ಗೆ ಹೊಂದಿದ್ದ ಅಪಾರ ಒಲವು ಅನಂತರದಲ್ಲಿ ಹಲವು ಸಂಸ್ಕೃತಿಗಳು ಕರ್ನಾಟಕದ ಸಂಸ್ಕೃತಿಯ ಮೇಲೆ ಹೇಗೆ ಪ್ರಭಾವ ಬೀರಿದವು ಎಂಬ ಬಗ್ಗೆ ಆಳವಾಗಿ ಅಧ್ಯಯನ ಮಾಡುವಂತೆ ಮಾಡಿತು. ಅದರಲ್ಲೂ ಪಾಶ್ಚಿಮಾತ್ಯ ಸಂಸ್ಕೃತಿ ದೇಶೀಯ ಸಂಸ್ಕೃತಿಯ ಮೇಲೆ ಹೇಗೆ ಪ್ರಭಾವ ಬೀರಿತು ಅದಕ್ಕೆ ಮೈಸೂರಿನ ಸಂಪ್ರದಾಯಬದ್ಧ ಸಮಾಜದ ಪ್ರತಿಕ್ರಿಯೆ ಹೇಗಿತ್ತು ಎಂಬ ಬಗ್ಗೆ ಸಂಶೋಧನೆ ಮಾಡಬೇಕೆಂಬ ತೀರ್ಮಾನದ ಫಲವೇ ಈ ಮಹಾಪ್ರಬಂಧ. ನನ್ನ ತೀರ್ಮಾನ ಮತ್ತು ಕನಸುಗಳಿಗೆ ಸಾಕಾರ ನೀಡಿದವರು ನನ್ನ ನೆಚ್ಚಿನ ವಿದ್ಯಾಗುರುಗಳೂ ಮತ್ತು ಸಂಶೋಧನಾ ಮಾರ್ಗದರ್ಶಕರಾದ ಡಾ|| ಸುಗೀತ ಸುವರ್ಣ, ಪ್ರವಾಚಕರು, ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು. ನನ್ನ ಇಡೀ ಸಂಶೋಧನಾವಧಿಯಲ್ಲಿ ಸಂಶೋಧನಾ ಕ್ಷೇತ್ರದ ಬಗ್ಗೆ ಹೊಸ ಒಳಹು ಮತ್ತು ದೃಷ್ಟಿಕೋನಗಳನ್ನು ನೀಡುತ್ತಾ ಹೃತ್ಪೂರ್ವಕವಾಗಿ ಸಹಕರಿಸಿದ ನನ್ನ ಮಾರ್ಗದರ್ಶಕರಾದ ಡಾ||ಸುಗೀತ ಸುವರ್ಣ ರವರಿಗೆ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಹಲವು ವರ್ಷಗಳ ಸಂಶೋಧನಾವಧಿಯಲ್ಲಿದ್ದ ಇತಿಹಾಸ ಅಧ್ಯಯನ ವಿಭಾಗ ಮಾನಸಗಂಗೋತ್ರಿಯ ಮುಖ್ಯಸ್ಥರು, ಅಧ್ಯಾಪಕರು ಮತ್ತು ಅಧ್ಯಾಪಕೇತರ ವರ್ಗದವರು ನನಗೆ ನೀಡಿರುವ ಹಲವು ವಿಧದ ಸಹಕಾರಕ್ಕೆ ಅವರೆಲ್ಲರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನನ್ನ ಸಂಶೋಧನೆಗೆ ಅಮೂಲ್ಯ ಆಕರಗಳನ್ನು ಅಭ್ಯಸಿಸಲು ಅವಕಾಶ ಮಾಡಿಕೊಟ್ಟ ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯ, ಇತಿಹಾಸ ಅಧ್ಯಯನ ವಿಭಾಗದ ಗ್ರಂಥಾಲಯ ಹಾಗೂ ಮಹಾರಾಜ ಕಾಲೇಜಿನ ಗ್ರಂಥಪಾಲಕರು ಹಾಗೂ ಅಲ್ಲಿನ ಎಲ್ಲ ಸಿಬ್ಬಂದಿಗಳ ಸಹಕಾರವನ್ನು ಮನದುಂಬಿ ನೆನೆಯುತ್ತೇನೆ.

ನನ್ನ ಸಂಶೋಧನೆಗೆ 9ನೇ ಯೋಜನೆಯಡಿಯಲ್ಲಿ ಎರಡು ವರ್ಷಗಳ ಎಫ್.ಐ.ಪಿ ಫೆಲೋಷಿಪ್ ನೀಡಿ ಸಂಶೋಧನೆಯಲ್ಲಿ ಪೂರ್ಣವಾಗಿ ತೊಡಗಿಕೊಳ್ಳಲು ಅವಕಾಶ ಮಾಡಿಕೊಟ್ಟ ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್ನಿನ ಬೆಂಗಳೂರು ಶಾಖೆಯ ಡೆಪ್ಯುಟಿ ಸೆಕ್ರೆಟರಿಯಾದ ಪ್ರೊ. ಕೃಷ್ಣಸ್ವಾಮಿಯವರಿಗೆ ಹಾಗೂ ಅಲ್ಲಿನ ಸಿಬ್ಬಂದಿಗೆ ಚಿರಋಣಿಯಾಗಿದ್ದೇನೆ. ಹಾಗೆಯೇ ಎಫ್.ಐ.ಪಿ ದೊರೆಯಲು ಸಹಕರಿಸಿದ ಮೈಸೂರು ವಿಶ್ವವಿದ್ಯಾನಿಲಯದ ಕಾಲೇಜು ಅಭಿವೃದ್ಧಿ ಮಂಡಳಿಯ ಮುಖ್ಯಸ್ಥರು ಹಾಗೂ ಅಲ್ಲಿನ ಸಿಬ್ಬಂದಿಗೆ ವಂದನೆಗಳು.

ನನ್ನನ್ನು ಎಫ್.ಐ.ಪಿ ಫೆಲೋಷಿಪ್ ಮೇಲೆ ಸಂಶೋಧನೆಗೆ ಕಳುಹಿಸಿದ ಕಾಲೇಜು ಶಿಕ್ಷಣ ನಿರ್ದೇಶನಾಲಯದ ಕಮಿಷನರ್ ಹಾಗೂ ಡೈರೆಕ್ಟರ್‌ರವರಿಗೆ ವಂದನೆಗಳು. ನನ್ನ ಸಂಶೋಧನಾವಧಿಯಲ್ಲಿ ಸಹಕರಿಸಿದ ಮೈಸೂರಿನ ಮಹಾರಾಣಿ ಕಲಾ ಮತ್ತು ವಾಣಿಜ್ಯ ಕಾಲೇಜಿನ ಪ್ರಾಂಶುಪಾಲರುಗಳು ಮತ್ತು ಅಲ್ಲಿನ ನನ್ನ ಎಲ್ಲ ಸಹೋದ್ಯೋಗಿಗಳೆಲ್ಲರಿಗೂ ಕೃತಜ್ಞತೆಗಳು.

ನನ್ನ ಸಂಶೋಧನೆಯ ವಿವಿಧ ಕಾಲಘಟ್ಟಗಳಲ್ಲಿ ಸಂಶೋಧನೆಯ ಬಗ್ಗೆ ಹಲವಾರು ರೀತಿಯಲ್ಲಿ ಸಹಕರಿಸಿದ ಮೂವರು ವ್ಯಕ್ತಿಗಳನ್ನು ಸ್ಮರಿಸಿಕೊಳ್ಳಬೇಕು. ಮೊದಲನೆಯವರು ನನ್ನ ಸಂಶೋಧನಾ ವಿಷಯದ ಆಳ, ಹರವುಗಳ ಸ್ಥೂಲ ಪರಿಚಯ ಮಾಡಿಕೊಟ್ಟು ಸಂಶೋಧನೆಯ ಬಗ್ಗೆ ಒಲವನ್ನು ಬೆಳೆಸಿದ ವಿದ್ಯಾಗುರುಗಳಾದ ದಿವಂಗತ ಪ್ರೊ. ಕೆ.ಎಸ್.ಶಿವಣ್ಣನವರಿಗೆ ಚಿರನಮನಗಳು. ನನ್ನ ಸಂಶೋಧನಾ ವಿಷಯವನ್ನು ವಿಭಿನ್ನವಾಗಿ ಚಿಂತಿಸಿ ಅಭಿವೃದ್ಧಿಪಡಿಸಲು ಹಾಗೂ ಅದಕ್ಕೆ ಪೂರಕವಾದ ಮಾಹಿತಿಗಳನ್ನು ಲಂಡನ್ನಿನ ಬ್ರಿಟಿಷ್ ಲೈಬ್ರರಿಯಲ್ಲಿ ಸಂಗ್ರಹಿಸಲು ನೆರವಾದ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಟ್ರಿನಿಟಿ ಹಾಲ್ ಕಾಲೇಜಿನ ಫೆಲೋ ಆದ ಡಾ||ನಿಜೆಲ್ ಛಾನ್ಸಲರ್‌ರವರಿಗೆ ಹೃತ್ಪೂರ್ವಕ ವಂದನೆಗಳು. ನನ್ನ ಸಂಶೋಧನಾ ವಿಷಯದ ನಾಯಕರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ರವರ ಬಗ್ಗೆ ವಿಮರ್ಶಾತ್ಮಕವಾಗಿ ಚಿಂತಿಸುವಂತೆ ಸಲಹೆ ನೀಡಿದ 18ನೇ ಯುರೋಪಿಯನ್ ಕಾನ್ಫರೆನ್ಸ್‌ನ ವಿಭಾಗದ ಮುಖ್ಯಸ್ಥರಾಗಿದ್ದ ಡಾ||ಡಿಕ್‌ಕೂಯ್ಮನ್(ಮಾನವಶಾಸ್ತ್ರ ವಿಭಾಗ, ಆಮ್‌ಸ್ಟರ್‌ಡ್ಯಾಂ)ರವರಿಗೂ ಹೃತ್ಪೂರ್ವಕ ವಂದನೆಗಳು.

ನನ್ನ ಸಂಶೋಧನಾ ವಿಷಯವನ್ನು ಕುರಿತ ಮೂಲ ಆಕರಗಳನ್ನು ಸಂಗ್ರಹಿಸಲು ಸತತವಾಗಿ17ದಿನಗಳ ಕಾಲ ಲಂಡನ್ನಿನ ಬ್ರಿಟಿಷ್ ಲೈಬ್ರರಿಯಲ್ಲಿ ಕಾರ್ಯ ನಿರ್ವಹಿಸಿದಾಗ ಅಲ್ಲಿ ಅತ್ಯಂತ ಹೊಸ ವಿಷಯಗಳನ್ನು ಪಡೆಯಲು ಹಾಗೆಯೇ ಶಿಸ್ತು, ವ್ಯವಸ್ಥೆಗೆ ಹೆಸರಾದ ಅಲ್ಲಿನ ಸಿಬ್ಬಂದಿಗಳಿಗೆ ಹೃತ್ಪೂರ್ವಕ ವಂದನೆಗಳು. ಅದೇ ರೀತಿ ನನ್ನ ಸಂಶೋಧನೆಗೆ ವಿಪುಲ ಆಕರಗಳನ್ನು ಒದಗಿಸಿದ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಹಾಗೂ ಮೈಸೂರು ಶಾಖೆಗಳ ಮುಖ್ಯಸ್ಥರು ಹಾಗೂ ಸಿಬ್ಬಂದಿಗೆ ಹೃತ್ಪೂರ್ವಕ ವಂದನೆಗಳು.

ತಮ್ಮ ಗ್ರಂಥಭಂಡಾರಗಳನ್ನು ಬಳಸಲು ಅನುವು ಮಾಡಿಕೊಟ್ಟ ಬೆಂಗಳೂರಿನ ಮಿಥಿಕ್ ಸೊಸೈಟಿ, ಗೋಖಲೆ ಇನ್‌ಸ್ಟಿಟ್ಯೂಟ್‌ಗಳ ವ್ಯವಸ್ಥಾಪಕರಿಗೆ ವಂದನೆಗಳು.ಸದಾ ನನ್ನ ಏಳಿಗೆಯನ್ನು ಬಯಸುವ ವಿದ್ಯಾಗುರುಗಳು ಹಾಗೂ ಹಿರಿಯರೂ ಆದ ಸಹೃದಯ ದಂಪತಿಗಳಾದ ಪ್ರೊ. ಎಂ. ಪ್ರಸನ್ನಕುಮಾರ್ ಮತ್ತು ರತ್ನಮ್ಮ ರವರಿಗೂ, ಆತ್ಮೀಯ ಹಿತೈಷಿಗಳಾದ ಫಾದರ್ ಪಿಂಟೋರವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ನನ್ನ ಸಂಶೋಧನ ಮಹಾ ಪ್ರಬಂಧವನ್ನು ಅಂದವಾಗಿ, ಅಚ್ಚುಕಟ್ಟಾಗಿ ಅಕ್ಷರ ಜೋಡಣೆ ಹಾಗೂ ಬೈಂಡಿಂಗ್ ಮಾಡಿಕೊಡುವಲ್ಲಿ ಸಹಕರಿಸಿದ ಗುಪ್ತ ಆಫ್‌ಸೆಟ್ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ರಾಮನಾಥಗುಪ್ತರವರಿಗೆ ಮತ್ತು ಅವರ ಸಿಬ್ಬಂದ್ಧಿ ಹಾಗೂ ನನ್ನ ನೆಚ್ಚಿನ ವಿದ್ಯಾರ್ಥಿನಿಯಾದ ಕುಮಾರಿ ನಾಗರತ್ನ ಆರ್ ಹಾಗೂ ಸುಮತಿ ಮತ್ತು ಇತರ ಸಿಬ್ಬಂದ್ಧಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

ನನ್ನ ಬಹುವರ್ಷಗಳ ಸಂಶೋಧನಾ ಕಾಲಾವಧಿಯಲ್ಲಿ ನನ್ನ ಅನುಪಸ್ಥಿತಿಯ ಕೊರತೆಯ ನಡುವೆಯೂ ಪ್ರೋತ್ಸಾಹ, ನೆರವು, ನೈತಿಕ ಬೆಂಬಲ ನೀಡಿದ ನನ್ನ ಪತಿ ಡಾ||ಕೆ.ಸದಾಶಿವ ರವರಿಗೆ ಹಾಗೂ ಅಮ್ಮ ಪಿಹೆಚ್.ಡಿ ಯಾವಾಗ ಮುಗಿಸ್ತಿಯಾ ಅಂತ ಸದಾ ಪ್ರೀತಿ ತುಂಬಿದ ಎಚ್ಚರಿಕೆ ನೀಡಿದ ನನ್ನ ಮಕ್ಕಳಾದ ಎಸ್. ಪ್ರಿಯದರ್ಶಿನಿ ಹಾಗೂ ಎಸ್. ಪೃಥ್ವಿರಾಜ್‌ರಿಗೆ ನನ್ನ ಪ್ರೀತಿಯ ನೆನಪುಗಳನ್ನು ಸಲ್ಲಿಸುತ್ತೇನೆ.

ಎಂ.ಎಸ್.ಅನಿತ

# ವಿಷಯಾನುಕ್ರಮಣಿಕೆ

# ಅಧ್ಯಾಯ - 1

# ಪೀಠಿಕೆ

## *ಅಧ್ಯಯನದ ಸ್ವರೂಪ*

ಆಧುನಿಕ ಭಾರತದ ಇತಿಹಾಸವೆಂದರೆ ಪ್ರಧಾನವಾಗಿ ಭಾರತೀಯ ಸಮಾಜವು ಪಾಶ್ಚಿಮಾತ್ಯ ಜಗತ್ತಿನ ಸಂಪರ್ಕದಿಂದ ಅದರಲ್ಲೂ ಪ್ರಮುಖವಾಗಿ ಬ್ರಿಟಿಷ್ ವಸಾಹತು ಆಡಳಿತ ಮತ್ತು ವ್ಯವಸ್ಥೆಯ ನೇರ ಸಂಪರ್ಕದಿಂದ ಪರಿವರ್ತನೆಯ ಹಾದಿಯಲ್ಲಿ ಸಾಗಿತು ಎಂಬುದೇ ಆಗಿದೆ. ಇಂತಹ ಮಹತ್ವಪೂರ್ಣ ಸಂಕ್ರಾಂತಿಯ ಕಾಲದ ಅಧ್ಯಯನ ಇತಿಹಾಸಕಾರರನ್ನು ಮತ್ತು ಸಂಶೋಧಕರನ್ನು ಎಲ್ಲಾ ಕಾಲಕ್ಕೂ ಆಕರ್ಷಿಸುತ್ತಾ ಬಂದಿದೆ. 19ನೇ ಶತಮಾನವನ್ನು ಆಧುನಿಕ ಭಾರತದ ಪುನರುಜ್ಜೀವನದ ಕಾಲವೆಂದು ಇತಿಹಾಸಕಾರರು ಸರ್ವಾನುಮತದಿಂದ ಒಪ್ಪಿಕೊಂಡಿದ್ದಾರೆ. 1857ರ ನಂತರ ನಾನಾ ಕಾರಣಗಳಿಂದಾಗಿ ಭಾರತವು ಆಧುನಿಕತೆಯತ್ತ ಅನಿವಾರ್ಯವಾಗಿ ಹಾದು ಹೋಗಬೇಕಾಯಿತು. ಬಂಗಾಳವು ಆಧುನಿಕ ಭಾರತದ ಈ ವಿಶಿಷ್ಟ ಘಟ್ಟದಲ್ಲಿ ನಾಯಕತ್ವವನ್ನು ವಹಿಸಿಕೊಂಡಿತ್ತೆಂದು ಹೇಳಿದರೆ ತಪ್ಪಾಗಲಾರದು. ಬಂಗಾಳದ ಬುದ್ಧಿಜೀವಿಗಳು ಆಲೋಚಿಸಿದ್ದನ್ನು ಸಮಗ್ರ ಭಾರತ ಅನುಸರಿಸಿದ್ದಂತೆ ಇತಿಹಾಸ ಪುಟಗಳಲ್ಲಿ ಕಂಡುಬರುತ್ತದೆ. ಪಾಶ್ಚಿಮಾತ್ಯ ಪ್ರಭಾವ ಸ್ಪಷ್ಟವಾಗಿ ಇಲ್ಲಿ ಕಾಣಿಸಿಕೊಂಡು ಮುಂದೆ ಮಹಾರಾಷ್ಟ್ರ ಮುಂತಾದ ಪ್ರದೇಶಗಳಿಗೆ ಹರಡಿತು. ಆದರೆ ಆರುನೂರಕ್ಕೂ ಹೆಚ್ಚು ಅಸ್ತಿತ್ವದಲ್ಲಿದ್ದ, ಆದರೆ ಬ್ರಿಟಿಷ್ ವಸಾಹತು ಸಾಮ್ರಾಜ್ಯದ ಭಾಗವಾಗಿದ್ದ ದೇಶೀಯ ಸಂಸ್ಥಾನಗಳು ಇಂತಹ ಪಾಶ್ಚಿಮಾತ್ಯ ಪ್ರಭಾವಕ್ಕೆ ಸ್ವಲ್ಪ ತಡವಾಗಿಯೇ ಒಳಗಾದವೆಂಬುದು ಐತಿಹಾಸಿಕ ಸತ್ಯವಾಗಿದೆ. ಆದರೆ ಎಲ್ಲಾ ದೇಶೀಯ ಸಂಸ್ಥಾನಗಳು ಈ ವಿಷಯದಲ್ಲಿ ಸಮಾನತೆಯ ಸ್ಥಾನವನ್ನು ಪಡೆದುಕೊಂಡಿರಲಿಲ್ಲ. ಭಾರತದ ಕೆಲವು ದೇಶೀಯ ಸಂಸ್ಥಾನಗಳು ಮುಖ್ಯವಾಗಿ 20ನೇ ಶತಮಾನದ ಆರಂಭ ಕಾಲದಿಂದ ಭಾರತ ಸ್ವಾತಂತ್ರ್ಯಗಳಿಸುವ ಅವಧಿಯವರೆಗೆ ಸಂಪ್ರದಾಯ ಪ್ರಧಾನವಾದ ಸಮಾಜದಿಂದ ಪಾಶ್ಚಿಮಾತ್ಯ ಪ್ರಭಾವಕ್ಕೆ ಒಳಗಾಗಿ ಪರಿವರ್ತನಾಶೀಲತೆಯ ಕಡೆಗೆ ಸಾಗಿ ಹೋದವು. ಇಂತಹ ಐತಿಹಾಸಿಕ ಪ್ರಕ್ರಿಯೆಗೆ ಬೀಜಾಂಕುರವನ್ನು ಹಾಕಿದವರು ಕೆಲವು ದೇಶೀಯ ಸಂಸ್ಥಾನದ ಮಹಾರಾಜರು ಎಂದರೆ ತಪ್ಪಾಗಲಾರದು. ಆಧುನಿಕತೆಗೆ ಒಲಿಯುತ್ತಾ ಭಾರತೀಯ ಪರಂಪರೆಯ ಬೇರನ್ನು ಬಿಟ್ಟುಕೊಡದ ಇಂತಹ ಮುಖಂಡರ ಜೀವನ ಚರಿತ್ರೆಯನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ಅಧ್ಯಯನ ನಡೆಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಅಂತಹ ದೇಶೀಯ ಸಂಸ್ಥಾನಗಳು ಸೃಷ್ಟಿಸಿದ ನಾಯಕ ಮಣಿಗಳಲ್ಲಿ ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರು ಒಬ್ಬರು.

ನಾಲ್ವಡಿ ಕೃಷ್ಣರಾಜ ಒಡೆಯರನ್ನು ಮತ್ತು ಅವರ ಕಾಲವನ್ನು ಕುರಿತಂತೆ ಆಧುನಿಕ ಮೈಸೂರಿನ ಚರಿತ್ರೆಯ ಅಧ್ಯಯನ ಸಾಕಷ್ಟು ಆಗಿದೆಯಾದರೂ ನಾಲ್ವಡಿಯವರು ಒಂದು ಸಂಪ್ರದಾಯಬದ್ಧ ಸಮಾಜಕ್ಕೆ ಯಾವ ಯಾವ ಮಾರ್ಗಗಳ ಮೂಲಕ, ಸಾಧನಗಳ ಮೂಲಕ, ಚಿಂತನೆಗಳ ಮೂಲಕ ಮತ್ತು ಭಾವನೆಗಳ ಮೂಲಕ ಪಾಶ್ಚಿಮಾತ್ಯ ಮಾದರಿಯಲ್ಲಿ ಆಧುನಿಕತೆಯನ್ನು ತಂದುಕೊಟ್ಟರು ಎಂಬುದರ ಬಗ್ಗೆ ಒಂದು ಸಮಗ್ರ ಅಧ್ಯಯನ ಇಲ್ಲಿಯವರೆಗೂ ಆಗಿಲ್ಲ. ನಾಲ್ವಡಿಯವರು ಅಧಿಕಾರಸ್ಥರಾಗಿದ್ದ ಕಾಲ ಆಧುನಿಕ ಮೈಸೂರಿನ ಇತಿಹಾಸದಲ್ಲಿ ಅತ್ಯಂತ ವಿಶಿಷ್ಟ ಘಟ್ಟ; ಪರ್ವಕಾಲವೆಂದರೂ ತಪ್ಪಾಗಲಾರದು. ಹಾಗೆಂದು ಪಾಶ್ಚಿಮಾತ್ಯ ವಿಚಾರಧಾರೆಯಾಗಲಿ, ಆಧುನಿಕತೆಯಾಗಲಿ ನಾಲ್ವಡಿಯವರ ನೇತೃತ್ವದಲ್ಲೇ ಮೈಸೂರಿನಲ್ಲಿ ಆರಂಭವಾಯಿತು ಎಂಬುದೂ ಅಲ್ಲ. ಇವರಿಗಿಂತ ಮುಂಚೆ 10ನೇ ಚಾಮರಾಜ ಒಡೆಯರ ಕಾಲದಲ್ಲಿ ಹಾಗೂ ಮೈಸೂರು ನೇರವಾಗಿ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ಐದು ದಶಕಗಳ ಕಾಲದಲ್ಲಿ (1831-1881) ಪಾಶ್ಚಿಮಾತ್ಯ ಪ್ರಭಾವಕ್ಕೆ ಒಳಗಾಗಿ ಮೈಸೂರಿನ ಸಮಾಜ ಪರಿವರ್ತನೆಯ ಕಡೆಗೆ ಸಾಗಿ ಹೋಗಲು ಅಸ್ಥಿಭಾರದ ರೂಪದಲ್ಲಿ ಕೆಲವು ಪ್ರಯತ್ನಗಳು ನಡೆದಿದ್ದವು. ಆದರೆ ಈ ಕಾಲವನ್ನು ಸ್ಥೂಲವಾಗಿ ವಿವೇಚಿಸಿದಾಗ 'ತಟಸ್ಥ' ಮನೋಭಾವವು ಹೆಚ್ಚಾಗಿ ಆಳರಸರಲ್ಲಿ ಈ ದೃಷ್ಟಿಕೋನದಿಂದ ಪ್ರಮುಖವಾಗಿತ್ತೆಂದು ಹೇಳಬಹುದು. ಆದರೆ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲ 'ತಟಸ್ಥ' ಧೋರಣೆಯಿಂದ ದೂರ ಸರಿದು ಹಿಂದೆ ಆರಂಭವಾಗಿದ್ದ ಭಾವನೆಗೆ ವ್ಯಾಪಕವಾದ ಮತ್ತು ಸ್ಪಷ್ಟವಾದ ಚಾಲನೆ ಪಡೆಯಿತು. ಈ ಹೇಳಿಕೆಯನ್ನು ಸಮರ್ಥಿಸುವುದು ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ಜೀವನದ ದೃಷ್ಟಿ ಹೇಗೆ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳನ್ನು ಹದವಾಗಿ ಮತ್ತು ಹಿತಮಿತವಾಗಿ ಸಮನ್ವಯ ಮಾಡಿಕೊಂಡಿತು ಎಂಬುದನ್ನು ವಿವರವಾಗಿ ದಾಖಲೆಗೊಳಿಸುವಂತಹ ಅಧ್ಯಯನದ ಉದ್ದೇಶ ಈ ಸಂಶೋಧನೆಯಲ್ಲಿದೆ. ಅಲ್ಲದೇ 'ಮಾದರಿ ಮೈಸೂರಿನ ಶಿಲ್ಪಿ' ಹಾಗೂ 'ರಾಜರ್ಷಿ' ಎಂಬ ಹೆಗ್ಗಳಿಕೆಗೆ ನಾಲ್ವಡಿಯವರು ಒಳಗಾಗಿರುವುದು ಸರಿಯಷ್ಟೆ. ಈ ವಿಷಯವನ್ನು ನಮ್ಮ ಅಧ್ಯಯನದ ವ್ಯಾಪ್ತಿಯೊಳಗೆ ವಿಮರ್ಶಾತ್ಮಕವಾಗಿ ಪರಿಶೀಲಿಸುವ ಪ್ರಯತ್ನವನ್ನು ಅಲ್ಲಲ್ಲಿ ಮಾಡಲಾಗಿದೆ. ಒಟ್ಟಿನಲ್ಲಿ ಸಂಪ್ರದಾಯಬದ್ಧ ಸಮಾಜದೊಳಕ್ಕೆ ಒಬ್ಬ ಆಳರಸನ ನಾಯಕತ್ವದಲ್ಲಿ ಪಾಶ್ಚಿಮಾತ್ಯ ವಿಚಾರಧಾರೆಗಳು, ತಂತ್ರಜ್ಞಾನ, ವಿಜ್ಞಾನ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳು ಆಧುನಿಕ ಭಾರತದ ಸಂದರ್ಭದಲ್ಲಿ ಅವರು ಕೈಗೊಳ್ಳುತ್ತಿದ್ದ ಕಾರ್ಯಾಚರಣೆಗಳ ಮೂಲಕ ಮೈಸೂರು ಪ್ರದೇಶವನ್ನು ಪ್ರವೇಶಿಸಿ ಹೇಗೆ ಅಂದಿನ ಸಮಾಜವನ್ನು ಪರಿವರ್ತನೆಯ ಹಾದಿಯತ್ತ ಕೊಂಡೊಯ್ದವು ಎಂಬುದರ ಸಮಗ್ರ ಅಧ್ಯಯನದ ಪ್ರಯತ್ನವೇ ಈ ಪ್ರಸ್ತುತ ಸಂಶೋಧನೆಯ ಮೂಲ ಪರಿಕಲ್ಪನೆಯಾಗಿದೆ.

## ಅಧ್ಯಯನದ ಮಹತ್ವ

ನಮ್ಮ ಸಂಶೋಧನಾ ಶೀರ್ಷಿಕೆಯಲ್ಲಿನ 'ಆಧುನಿಕ', 'ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜ' ಎಂಬ ಕೆಲವು ಪದಗಳ, ಪರಿಕಲ್ಪನೆಗಳ ಹಿಂದಿನ ವಿಶಾಲ ಅರ್ಥ ಮತ್ತು ಸ್ವರೂಪವನ್ನು ಹಾಗೂ ಅವುಗಳಿಗೆ ಉಪಲಬ್ಧವಿರುವ ಮಾಹಿತಿಗಳನ್ನು ವಿವರಿಸುವಲ್ಲಿ ಈ ಅಧ್ಯಯನದ ಮಹತ್ವ ಅಡಗಿದೆ. ಏಕೆಂದರೆ ಮಾನವಿಕ ವಿಷಯಗಳ ಅಧ್ಯಯನದ ಸ್ವರೂಪ ಆಯಾ ಕಾಲಮಾನದ ಸಂದರ್ಭಗಳಿಗೆ ತಕ್ಕಂತೆ ಬದಲಾಗುತ್ತ ಹೋಗುತ್ತದೆ. ಹಾಗಾಗಿ ಸಮಾಜ ಬದಲಾದಂತೆ ಸಮಾಜವನ್ನು ಕುರಿತ ಅಧ್ಯಯನ ವಿಧಾನಗಳು ಕೂಡ ಬದಲಾಗುತ್ತವೆ. ಬಾಹ್ಯ ಮತ್ತು ಆಂತರಿಕ ಕಾರಣಗಳಿಂದ ಸಮಾಜ ಬದಲಾವಣೆ ಪಡೆದುಕೊಳ್ಳಬಹುದು. ರಾಜಕೀಯ, ಆಡಳಿತಾತ್ಮಕ, ಆರ್ಥಿಕ ಕಾರಣಗಳು ಮತ್ತು ಸಂಸ್ಕೃತೀಕರಣ, ವಿಜ್ಞಾನ-ತಂತ್ರಜ್ಞಾನದ ಪ್ರಭಾವ ಹಾಗೂ ಪರಿಣಾಮಗಳು ಸಾಮಾಜಿಕ ಬದಲಾವಣೆಯ ಮೂಲವಾಗಿವೆ. ಸಾವಿರಾರು ವರ್ಷಗಳ ಇತಿಹಾಸವಿರುವ ನಮ್ಮ ಸಂಸ್ಕೃತಿಯನ್ನೇ ತೆಗೆದುಕೊಂಡರೂ ಅನೇಕ ಕಾಲಘಟ್ಟಗಳಲ್ಲಿ ಅದು ಬದಲಾಗುತ್ತಾ, ಆಯಾ ಕಾಲಮಾನಕ್ಕೆ ಹೊಂದಿಕೊಳ್ಳುತ್ತಾ ಬಂದಿರುವುದನ್ನು ಗುರುತಿಸಬಹುದು. ಅದರಲ್ಲೂ ವಿಜ್ಞಾನ ಮತ್ತು ತಂತ್ರಜ್ಞಾನ ಸಾಧಿಸಿದ ಪ್ರಗತಿ, ರಾಜಕೀಯ ವಿದ್ಯಮಾನಗಳು ಹಾಗೂ ಅನೇಕ ಸಾಮಾಜಿಕ, ಆರ್ಥಿಕ ಕಾರಣಗಳುಳ್ಳ ಕ್ರಾಂತಿಗಳು ಇನ್ನೂರು ಮೂನ್ನೂರು ವರ್ಷಗಳ ಮಾನವ ಸಂಸ್ಕೃತಿ-ಇತಿಹಾಸಗಳ ಸ್ವರೂಪವನ್ನೇ ಸಂಪೂರ್ಣವಾಗಿ ಮರು ಚಿಂತನೆಗೆ ಒಳಪಡಿಸಿವೆ. ಹಾಗೆಯೇ ಗಮನಾರ್ಹ ಪ್ರಮಾಣದಲ್ಲಿ ಬದಲಾವಣೆಗೂ ಗುರಿ ಮಾಡಿವೆ. ಇಂತಹ ಬದಲಾವಣೆಯನ್ನೇ 'ಆಧುನಿಕ ಪ್ರವೃತ್ತಿ'ಎನ್ನಲಾಗಿದೆ.

ಈ 'ಆಧುನಿಕ'ಅಥವಾ 'ಮಾಡರ್ನ್' ಎಂಬ ವಿಚಾರವು ಯೂರೋಪಿನ ಪುನರುಜ್ಜೀವನ ಕಾಲದಲ್ಲಿ ಉಗಮಗೊಂಡು ಜ್ಞಾನಪುನರುಜ್ಜೀವನ ಕಾಲದಲ್ಲಿ ಪ್ರಸಿದ್ಧಿಗೆ ಬಂದಿತು. ಪೌಸಿನ್ ಎಂಬುವವನು 'ಮಾಡರ್ನ್' ಎಂಬ ಶಬ್ದದ ಶೋಧಕ. ಪೌಸಿನ್ 1639ರಲ್ಲಿ ತನ್ನ 'ಫಿಯೋಡಿಯಂ' ಎಂಬ ಕೃತಿಯಲ್ಲಿ ಮೊದಲ ಭಾರಿಗೆ 'ಏನ್ಸಿಯಂಟ್', 'ಮೆಡೀವಲ್' ಮತ್ತು 'ಮಾಡರ್ನ್' ಎಂಬ ಶಬ್ದಗಳನ್ನು ಬಳಸಿದನು. ನಂತರ ಹ್ಯಾಲೆ ವಿಶ್ವವಿದ್ಯಾನಿಲಯದ ಕ್ರಿಸ್ಟೋಫರ್ ಸೆಲ್ಲಾರಿಯಸ್ (1634-1701) ಎಂಬುವವನು ಅದನ್ನು ಪ್ರಚುರಪಡಿಸಿದನು. ಆನಂತರದಲ್ಲಿ ಮಾನವತಾವಾದಿ ಬರಹಗಾರರಾದ ಪೆಟ್ರಾರ್ಕ್, ಫ್ಲೆವಿಯೊ ಬಿಯಾಂಡೊ ಮುಂತಾದವರಿಂದ ಅದು ಪ್ರಸಿದ್ಧಿಗೆ ಬಂದಿತು[1].

---

1. *ಸುರೇಂದ್ರರಾವ್ ಬಿ., ದಿ ಮಾಡರ್ನ್ ಇನ್ ಮಾಡರ್ನ್, ಇಂಡಿಯನ್ ಹಿಸ್ಟರಿ ಕಾಂಗ್ರೆಸ್ಸಿನ 16ನೇ ಸಮ್ಮೇಳದ ಅಧ್ಯಕ್ಷ ಭಾಷಣದ ಕೈಪಿಡಿ, ಕೊಲ್ಕತ್ತಾ ವಿಶ್ವವಿದ್ಯಾನಿಲಯ, ಕೊಲ್ಕತ್ತಾ 2001, ಪು. 31*

'ಆಧುನಿಕ' ಎಂಬ ಪದ ಲೌಕಿಕ ವ್ಯವಹಾರಕ್ಕೆ ಸಂಬಂಧಿಸಿದ್ದಾಗಿದ್ದು ಅನೇಕ ಅರ್ಥಗಳನ್ನು ಹೊರಡಿಸುತ್ತದೆ. 'ಇತ್ತೀಚಿನದು', 'ಅರ್ವಾಚೀನ' ಅಥವಾ 'ಇಂದಿಗೆ ಪ್ರಸ್ತುತವಾಗಿರುವ', 'ನವಕಾಲೀನ', 'ನವೀನ', 'ಪ್ರಚಲಿತ' ಎಂಬ ಸಾಮಾನ್ಯ ಅರ್ಥಗಳನ್ನು ನೀಡುವ ಹಾಗೂ ಮಧ್ಯಯುಗದಿಂದ ಈಚಿನ ಇತಿಹಾಸ ಕಾಲವನ್ನು ಸೂಚಿಸುವ ಕಾಲಸೂಚಿಯಾಗಿಯೂ ಬಳಸಲ್ಪಡುತ್ತಿದೆ.[2] "ಆಧುನಿಕತೆ" ಎಂಬುದು 'ಆಧುನಿಕ' ಶಬ್ದದ ಗುಣವಾಚಕ. ಚರಿತ್ರಕಾರರು ಆಧುನಿಕತೆಯ ಪರಿಕಲ್ಪನೆಯ ಹುಟ್ಟನ್ನು 1789 ರ ಫ್ರೆಂಚ್ ಕ್ರಾಂತಿಯಿಂದ ಉಂಟಾದ ಸಾಮಾಜಿಕ ಬದಲಾವಣೆ, ಕೈಗಾರಿಕಾಕ್ರಾಂತಿ, ನವೋದಯ ಚಳವಳಿಗಳ ಹಿನ್ನೆಲೆಯಲ್ಲಿ ಗುರುತಿಸುತ್ತಾರೆ. ಸ್ಟುವರ್ಟ್ ಹಾಲ್ ಆಧುನಿಕತೆಯ ಪರಿಕಲ್ಪನೆಯನ್ನು ಊಳಿಗಮಾನ್ಯ ಪದ್ಧತಿ ಕೊನೆಗೊಂಡ ಹಂತದಲ್ಲೇ ಗುರುತಿಸಿದ್ದಾನೆ[3].

18ನೇ ಶತಮಾನದ ಅಂತ್ಯದಲ್ಲಿ ಅಂದರೆ ಟಿಪ್ಪುವಿನ ಕಾಲದಲ್ಲೇ ಮೈಸೂರು ಪ್ರದೇಶದಲ್ಲಿ ಆಧುನಿಕತೆಯ ಅಂಶಗಳು ತಿಳಿಯಾಗಿ ಕಾಣಿಸಿಕೊಂಡವು. 19ನೇ ಶತಮಾನದ ನಡುವಿನಿಂದ ಅದರ ತೀವ್ರತೆ ನಿಧಾನಗತಿಯಲ್ಲಿ ಸಾಗಿ 20ನೇ ಶತಮಾನದ ಆರಂಭ ಕಾಲದಲ್ಲಿ ಒಂದು ಸ್ಥಾನೀಯ ಸ್ವರೂಪವನ್ನು ಪಡೆದವೆಂದೇ ಹೇಳಬಹುದು. ಈ ಕಾಲಮಾನದಲ್ಲಿ ಮೈಸೂರು ಪ್ರದೇಶದಲ್ಲಿ ನಡೆದ ಸಾಮಾಜಿಕ ಸಂಘಟನೆಯ ಫಲವಾಗಿ ಆಧುನಿಕತೆಯ ಅಂಶಗಳು ಇಡೀ ಮೈಸೂರು ಸಂಸ್ಥಾನದಲ್ಲಿ ತಲೆದೋರಿ ಸತ್ವಶಾಲಿಯಾಗಿ ನಿಂತವು. ಇದರ ಪರಿಣಾಮವಾಗಿ ನಗರೀಕರಣ, ಕೈಗಾರಿಕೋದ್ಯಮ, ವ್ಯಾಪಾರೋದ್ಯಮ, ರಾಜಕೀಯವಾಗಿ ಪ್ರಜಾಪ್ರಭುತ್ವವಾದಿ ವಿಚಾರವಂತಿಕೆ ಇವೆಲ್ಲವೂ ವಿಧವಿಧವಾಗಿ ಹೆಚ್ಚು ಹೆಚ್ಚಾಗಿ ಈ ಭಾಗದಲ್ಲಿ ವರ್ಧಿಸಲು ಸಾಧ್ಯವಾಯಿತು. ಜೊತೆಗೆ ಆಧುನಿಕ ಸಂಪರ್ಕಗಳು, ಅದರಲ್ಲೂ ವಿಶೇಷವಾಗಿ ರೈಲ್ವೆ ವ್ಯವಸ್ಥೆ ಸಾಮಾನ್ಯ ಜನಜೀವನದಲ್ಲಿ ಆಧುನಿಕತೆಯನ್ನು ತುಂಬುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವು. ಈ ಸಂಪರ್ಕ ಸಾಧನದಿಂದ ಬೇರೆ ಬೇರೆ ಭಾಗದ ಜನರೊಡನೆ ಪರಸ್ಪರ ಸಂಪರ್ಕ ಹೊಂದುವ ಅವಕಾಶ ದೊರಕಿತು. ಸ್ಥಳೀಯ ಭಾಷೆಯಲ್ಲಿ ಆರಂಭಗೊಂಡ ವರ್ತಮಾನ ಪತ್ರಿಕೆಗಳು ಹಾಗೂ ಇತರೆ ಪತ್ರಿಕೆಗಳು ಆಧುನಿಕತೆಯ ಪ್ರಸರಣೆಯ ಮೂಲಸಾಧನಗಳಾಗಿ ಕೆಲಸ ನಿರ್ವಹಿಸಿದವು. ಇದರಿಂದಾಗಿ ನವಮೌಲ್ಯಗಳ ಆಧಾರದ ಮೇಲೆ ಸಾಮಾಜಿಕ ಜೀವನ ರೂಪುಧಾರಣೆಗೊಳ್ಳತೊಡಗಿತು. ಹೀಗೆ ಆರಂಭಗೊಳ್ಳುವ ಆಧುನಿಕತೆಯ ಬೆಳವಣಿಗೆಯನ್ನು ಮಾರುಕಟ್ಟೆಯಲ್ಲಿ ಬಂಡವಾಳ ಹೂಡುವ ಕ್ರಮದಿಂದ ಹಿಡಿದು, ರಾಜಕೀಯದಲ್ಲಿ ಪ್ರಜಾತಂತ್ರ ವ್ಯವಸ್ಥೆ ರೂಪುಗೊಂಡ ಬಗೆಯವರೆಗೂ, ಸಮಾಜ ವಿಜ್ಞಾನವನ್ನು ಅನೇಕ ರೀತಿಯಲ್ಲಿ ಒಡೆದು ಹಲವಾರು ಶಿಸ್ತುಗಳಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಹಂತಗಳವರೆಗೂ

---

2. *ಆಕ್ಸಫರ್ಡ್ ಅಡ್ವಾನ್ಸ್‌ಡ್ ಲರ್ನರ್ಸ್ ಡಿಕ್ಷನರಿ., ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ ಪ್ರೆಸ್, ನ್ಯೂಡೆಲ್ಲಿ, 2001. ಪು. 820*
   *ಇಂಗ್ಲಿಷ್-ಕನ್ನಡ ನಿಘಂಟು (ಪರಿಷ್ಕೃತ), ಸಂಪುಟ 3, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1999. ಪು. 3376*
3. *ಹಾಲ್ ಸ್ಟುವರ್ಟ್ ಅಂಡ್ ಬ್ರಾಮ್ ಗಿಬ್ಬನ್ (ಸಂ)., ಫಾರ್ಮೇಷನ್ಸ್ ಆಫ್ ಮಾಡರ್ನಿಟಿ, ಪಾಲಿಟಿ ಪ್ರೆಸ್, ಕೇಂಬ್ರಿಡ್ಜ್, 1992. ಪು. 1*

ಗುರುತಿಸಬಹುದು[4]. ಹಾಗಾಗಿ ಆಧುನಿಕತೆ ಎಂಬುದರಲ್ಲಿ ಒಂದು ವಿಶ್ವಮಾನ್ಯವಾದ ಹಾಗೂ ಖಚಿತವಾದ ಭಾವನೆ ರೂಪಿತವಾಗಿದೆ. ಅದಕ್ಕೆ ಕೆಲವು ನಿಖರವಾದ ಪರಿಕಲ್ಪನೆಗಳು, ಮೌಲ್ಯಗಳು ಇವೆ. ಅವುಗಳನ್ನೊಳಗೊಂಡಂತೆ ಸಾಮಾಜಿಕ ಸಂಘಟನೆ, ಆರ್ಥಿಕ ನೀತಿ ನಿರ್ಮಿತಿ, ಸಾಂಸ್ಕೃತಿಕ ಪದ್ಧತಿ ಹಾಗೂ ರಾಜಕೀಯ ನಡವಳಿಕೆ ಆಧುನಿಕತೆಯಲ್ಲಿ ರೂಪುಗೊಳ್ಳಬೇಕಾಯಿತು. ಈ ಆಧುನಿಕತೆಯ ಪರಿಕಲ್ಪನೆಯ ಪ್ರಭಾವ ವಿಸ್ತಾರವಾದ ಗ್ರಾಮಾಂತರ ಪ್ರದೇಶಗಳಲ್ಲಿ ಹಂಚಿ ಹೋಗಿರುವ ರಾಜ್ಯದ ಬಹು ಸಂಖ್ಯಾತ ಹಳ್ಳಿಗಾಡಿನ ಜನರಿಗಿಂತ ಹೆಚ್ಚಾಗಿ ಹೊಸದಾಗಿ ರೂಪುಗೊಂಡ ಪ್ರಮುಖ ಗಣ್ಯರ ಮೇಲೆ, ಅದರಲ್ಲಿಯೂ ನಗರವಾಸಿಗಳ ಮೇಲೆ ಆಯಿತು[5].

ಆಧುನಿಕೀರಣ ಕ್ರಿಯೆ 'ಧರ್ಮಾತೀತವಾದ' ಎಂಬ ವಿಶೇಷ ವಿಧಿಸೂತ್ರದ ಆಧಾರ ಮೌಲ್ಯಗಳನ್ನು ಒಳಗೊಂಡಿದೆ ಎಂಬುದು ಸ್ಪಷ್ಟ. ಇಲ್ಲಿ ಆಧಾರ ಮೌಲ್ಯಗಳ ಮಾತನ್ನು ಹೇಳುವಂತಹ ವ್ಯಕ್ತಿಯು ಮೂಢಭಕ್ತಿ, ನಂಬಿಕೆಗಳಿಂದ ವಿಮೋಚಿತನಾಗಿರಬೇಕು, ತರ್ಕ ಸಮ್ಮತವಾದ ಮಾನವೀಯ ಮೌಲ್ಯಗಳಿಗೆ ಪ್ರಾಧಾನ್ಯತೆ ನೀಡುತ್ತಾ ಆಧುನಿಕ, ಪಾಶ್ಚಿಮಾತ್ಯ ವಿಜ್ಞಾನ ಹಾಗೂ ತಂತ್ರಜ್ಞಾನಗಳನ್ನು ತನ್ನದಾಗಿಸಿಕೊಳ್ಳುವ ತೀವ್ರಾಭಿಲಾಷೆಗಳನ್ನು ತನ್ನಲ್ಲಿ ಅಡಕವಾಗಿರಿಸಿಕೊಂಡಿರಬೇಕು. ಅಂದರೆ ಸಾರಾಂಶ ಇಷ್ಟೇ; ಆಧುನಿಕತೆಯ ಆರಂಭ ಎಂದರೆ ಬಹುತೇಕ ಪಾಶ್ಚಾತೀಕರಣ ಎಂದು.

ಹೀಗೆ 'ಆಧುನಿಕತೆ' ಪದವು ಪಾಶ್ಚಿಮಾತ್ಯ ಸಂಪರ್ಕದೊಂದಿಗೆ ಮಿಳಿತಗೊಂಡಿದ್ದಾಗಿದ್ದು ಈ ಪರಿಕಲ್ಪನೆಯ ಅಂಶಗಳು ಮೈಸೂರು ಸಂಸ್ಥಾನದ ಸಂಪ್ರದಾಯಬದ್ಧ ಸಮಾಜದಲ್ಲಿ ಮತಧರ್ಮದ ಆಧಾರದ ಮೇಲೆ ರೂಪುಗೊಂಡ ವಿಚಾರಗಳನ್ನು ವೈಜ್ಞಾನಿಕ ಮತ್ತು ತರ್ಕದ ಮೂಲಕ ಸತ್ಯದ ಮೌಲ್ಯಗಳನ್ನು ಕಂಡುಕೊಳ್ಳುತ್ತಾ ನಂಬಿಕೆಯ ಜಾಗದಲ್ಲಿ ತರ್ಕಕ್ಕೂ, ಆಧ್ಯಾತ್ಮಿಕ ಮೌಲ್ಯಗಳ ಜಾಗದಲ್ಲಿ ಭೌತಾತೀತ ಭಾವನೆಗಳಿಗೂ ಹೇಗೆ ದಾರಿಮಾಡಿಕೊಡುತ್ತಾ ಬಂದವು ಎಂಬುದನ್ನು ಹಾಗೂ ಆ ಹಿನ್ನೆಲೆಗೆ ತಕ್ಕಂತೆ ನಾಲ್ವಡಿ ಕೃಷ್ಣರಾಜ ಒಡೆಯರು ಅಳವಡಿಸಿಕೊಂಡಿದ್ದ ಆಧುನಿಕ ಮನೋಪ್ರವೃತ್ತಿ, ಕರ್ತವ್ಯದ ಹೊಣೆಗಾರಿಕೆಯಿಂದ ಕೈಗೊಂಡ ಕಾರ್ಯಯೋಜನೆಗಳು ಇವುಗಳನ್ನು ಕುರಿತಂತೆ ಲಭ್ಯವಾಗಿರುವ ಮಾಹಿತಿಗಳನ್ನು ವಿಮರ್ಶಾತ್ಮಕವಾಗಿ, ವಿಶ್ಲೇಷಣಾತ್ಮಕವಾಗಿ ವಿವರಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

---

4. *ಶ್ರೀಪಾದ ಭಟ್., ಆಧುನೀಕೋತ್ತರವಾದ, ಮಾನವಿಕ ಕರ್ನಾಟಕ, ಬೆಳ್ಳಿ ಸಂಪುಟ, ಪ್ರಸಾರಾಂಗ, ಮೈಸೂರು, 1994, ಪು. 12*

5. *ಸೂರ್ಯನಾಥ್ ಯು ಕಾಮತ್ (ಸಂ)., ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-2, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, 1985, ಪು. 581-582*

ಮತ್ತೊಂದು ಪರಿಕಲ್ಪನೆಯಾದ 'ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜ' ಎಂಬುದು ನಮ್ಮ ಇಡೀ ಅಧ್ಯಯನ ವ್ಯಾಪ್ತಿಯಲ್ಲಿ ಬಹುಗಂಭೀರವಾಗಿ, ಜಟಿಲವಾಗಿ ಹಾಗೂ ಚರ್ಚಾಸ್ಪದ ವಿಷಯವಾಗಿ ಕಾಣಿಸಿಕೊಳ್ಳುತ್ತದೆ. ಈ ಪರಿಕಲ್ಪನೆಯ ಒಂದು ಭಾಗವಾದ 'ಸಂಪ್ರದಾಯ' ವೆಂಬುದು ಈಗಾಗಲೇ ವಿವರಿಸಿರುವ 'ಆಧುನಿಕತೆ' ಎಂಬುದರ ವಿರುದ್ಧವಾದುದಾಗಿದೆ. ಅಂದರೆ ಸಂಪ್ರದಾಯವು ಜನರೂಢಿಯಲ್ಲಿರುವ ವಿಶಿಷ್ಟವಾದ ಆಚರಣೆ. ಅದು ಇಂದು ಹುಟ್ಟಿ ಬೆಳೆದು ಬಂದುದಲ್ಲ. ಅದರ ಬೇರುಗಳು ಜನಾಂಗದ ರಕ್ತರಕ್ತದಲ್ಲೂ ಸೇರಿ ಹೋಗಿರುತ್ತವೆ. ಹಾಗಾಗಿ ಒಮ್ಮೊಮ್ಮೆ ಜನತೆ ಧರ್ಮವನ್ನು ಮರೆತರೂ ಸಂಪ್ರದಾಯವನ್ನು ಮರೆಯಲಾರರು. ಸಂಪ್ರದಾಯವು ನವೀನತೆಗೆ, ಬದಲಾವಣೆಗೆ, ಸುಧಾರಣೆಗೆ ವಿರೋಧಿಯಾದುದೆಂದೇ ಅರ್ಥ[6]. ಹಾಗಿದ್ದಲ್ಲಿ ಸಂಪ್ರದಾಯಬದ್ಧ ಸಮಾಜದಲ್ಲಿ ಆಧುನಿಕತೆ ಮೂಡುತ್ತಿರುವುದಾದರೂ ಹೇಗೆ? ಎಂಬ ಪ್ರಶ್ನೆಗೆ ಉತ್ತರವೇ 'ಪರಿವರ್ತನೆ' ಎಂಬುದು. ಇದು ಸಂಪ್ರದಾಯಬದ್ಧವಾದ ಯಾವುದೇ ಸಮಾಜವನ್ನು ಯಾವ ಕಾಲದಲ್ಲೂ ಸ್ಥಗಿತವಾದ ಸ್ಥಿತಿಯಲ್ಲಿರಿಸದೇ ಹರಿಯುವ ನೀರಿನಂತೆ ಗತಿಶೀಲವಾದ ಸಮಾಜವನ್ನಾಗಿಸುವಲ್ಲಿ ಸದಾ ಕಾರ್ಯನಿರತವಾಗಿರುತ್ತದೆ. ಇಂತಹ ಸಾಮಾಜಿಕ ಜಗತ್ತಿನಲ್ಲಿ ಪರಿವರ್ತನೆಯ ಹೊರತಾಗಿ ಎಲ್ಲವೂ ಅಸ್ಥಿರ. ಸಂಪ್ರದಾಯವನ್ನು ಸ್ಥಿರಗೊಳಿಸಬೇಕೆಂದು ಚಡಪಡಿಸುತ್ತಿರುವ 'ಮಾನವನೇ' ಈ ಪರಿವರ್ತನೆಗೂ 'ರೂವಾರಿ' ಎಂಬುದು ಚೋದ್ಯ ಆದರೆ ಸತ್ಯ. ಐತಿಹಾಸಿಕವಾಗಿ ಬಹಳ ಸಾಂಪ್ರದಾಯಿಕವೆಂದು ಕರೆಯಲ್ಪಡುವ ಸಮಾಜ ಮತ್ತು ಸಂಸ್ಕೃತಿಗಳೂ ಕೂಡ ಪರಿವರ್ತನೆಯ ಪ್ರಕ್ರಿಯೆಗೆ ಒಳಗಾಗಿವೆ. ಹಾಗಾಗಿ ಪರಿವರ್ತನೆಯಾಗದ ಸಮಾಜವೇ ಇಲ್ಲವೆನ್ನಬಹುದು. ಪರಿವರ್ತನಾಶೀಲತೆಯು ಸಮಾಜದ ಒಂದು ಆಂತರಿಕ ಗುಣ. ಪರಿವರ್ತನೆ ಜಗದ ನಿಯಮ. ಅವ್ಯಾಹತವಾಗಿ ಸಾಗುತ್ತಿರುವ ಪರಿವರ್ತನಾ ಪ್ರಕ್ರಿಯೆಯಿಂದಲೇ ಮಾನವನು ಅನಾಗರಿಕ ಸ್ಥಿತಿಯಿಂದ ನಾಗರಿಕ ಸ್ಥಿತಿಗೆ ಬರಲು ಮತ್ತು ಇನ್ನೂ ಹೆಚ್ಚಿನ ಪರಿಪೂರ್ಣತೆಯ ಸ್ಥಿತಿಯನ್ನು ತಲುಪಲು ಸಾಧ್ಯವಾಗುತ್ತಿರುವುದು. ಈ ಹಿನ್ನಲೆಯಲ್ಲಿ ಸಾಮಾಜಿಕ ಪ್ರಕ್ರಿಯೆಗಳಲ್ಲಿ, ಒಡನಾಟದಲ್ಲಿ ಮತ್ತು ವ್ಯವಸ್ಥೆಗಳಲ್ಲಿ ಆಗುವ ವ್ಯತ್ಯಾಸ ಅಥವಾ ಬದಲಾವಣೆಯನ್ನು 'ಸಾಮಾಜಿಕ ಪರಿವರ್ತನೆ' ಎನ್ನಬಹುದು[7]. ಈ ಸಾಮಾಜಿಕ ಪರಿವರ್ತನೆಯು ಸಂಪ್ರದಾಯಬದ್ಧ ಸಮಾಜದಲ್ಲಿ ಗೋಚರವಾಗಿಯೋ, ಅಗೋಚರವಾಗಿಯೋ ನಿಧಾನಗತಿಯಲ್ಲಿ ಸಾಗುತ್ತಾ ಬಂದಿದೆ. ಈ ಅಭಿಪ್ರಾಯಕ್ಕೆ ಮೈಸೂರು ಸಂಸ್ಥಾನದ ಆಧುನಿಕ ಪೂರ್ವ ಸಂಪ್ರದಾಯಬದ್ಧ ಸಮಾಜವು ಹೊರತಾಗಿಲ್ಲ. ಅಂತೆಯೇ ಮೈಸೂರು ಪ್ರದೇಶದ ಆಧುನಿಕ ಸಮಾಜ ಈ ಪರಿವರ್ತನಾಶೀಲತೆಯ ದೃಷ್ಟಿಯಿಂದ ತೀವ್ರತೆಯನ್ನು ಪಡೆದುಕೊಂಡು ಹೊಸತನ್ನು ಅಭಿವ್ಯಕ್ತಗೊಳಿಸಲು ಪ್ರಧಾನವಾದ ಪ್ರಚೋದನೆ ಪಡೆದದ್ದು ಪಾಶ್ಚಿಮಾತ್ಯ ಪ್ರಭಾವದಿಂದಲೇ ಎನ್ನಬಹುದು.

---

6. *ಶಿವಕುಮಾರ ಸ್ವಾಮಿ ಸಿ.ಎಸ್. (ಸಂ)., ಕರ್ನಾಟಕದ ಜಾತ್ರೆಗಳು, ಮೈಸೂರು, 1988, ಪು 116*
7. *ಶಂಕರರಾವ್ ಸಿ.ಎನ್., ಸೋಷಿಯಾಲಜಿ, ಪ್ರೈಮರಿ ಪ್ರಿನ್ಸಿಫಲ್ಸ್ ಆಫ್ ಸೋಷಿಯಾಲಜಿ ವಿತ್ ಆನ್ ಇಂಟ್ರೋಡಕ್ಷನ್ ಟು ಸೋಷಿಯಲ್ ಥಾಟ್, ನ್ಯೂ ಡೆಲ್ಲಿ, 2004, ಪು. 484*
   - *ಜೆನ್ ಡಿ.ಎನ್. ಅಂಡ್ ಯು.ಕೆ. ಮೊಹಾಪಾತ್ರ., ಸೋಷಿಯಲ್ ಛೇಂಜ್, 2000, ಪು. 2*
   - *ಶ್ರೀನಿವಾಸ್ ಎಸ್.ಎನ್., ಡೈಮೆನ್‌ಷನ್ಸ್ ಆಫ್ ಸೋಷಿಯಲ್ ಛೇಂಜ್ ಇನ್ ಇಂಡಿಯಾ, ನ್ಯೂಡೆಲ್ಲಿ, 1977, ಪು. 24*

ಕುಲ್ಕೆಎಕೆಹಾರ್ಡ್‌ರವರು ಅಭಿಪ್ರಾಯಪಡುವಂತೆ ಪಾಶ್ಚಿಮಾತ್ಯ ಪ್ರಭಾವದ ಬದಲಾವಣೆಗಳು 'ಪ್ರಾರಂಭದಲ್ಲಿ ಸಮಾಜದ ಹೊರ ಪರಿಧಿಯಲ್ಲಿದ್ದ ಚಿಕ್ಕ ಗುಂಪುಗಳ ಮೇಲಾಯಿತು'[8]. ಈ ಆಧುನಿಕತೆಯ ಪರಿಕಲ್ಪನೆಯ ಪ್ರಭಾವ ವಿಸ್ತಾರವಾದ ಗ್ರಾಮಾಂತರ ಪ್ರದೇಶಗಳಲ್ಲಿ ಹಂಚಿಹೋಗಿರುವ ರಾಜ್ಯದ ಬಹು ಸಂಖ್ಯಾತ ಹಳ್ಳಿಗಾಡಿನ ಜನರಿಗಿಂತ ಹೆಚ್ಚಾಗಿ ಹೊಸದಾಗಿ ರೂಪುಗೊಂಡ ಪ್ರಮುಖ ಗಣ್ಯರ ಮೇಲೆ, ಅದರಲ್ಲಿಯೂ ನಗರವಾಸಿಗಳ ಮೇಲಾಯಿತು'[9] ಎಂಬ ಕುಲ್ಕೆ ಎಕೆಹಾರ್ಡ್‌ರವರ ಅಭಿಪ್ರಾಯ ಮತ್ತು ಕರ್ನಾಟಕ ರಾಜ್ಯ ಗೆಸೆಟಿಯರ್ ನ ಭಾಗ-2 ರ ಸಂಪುಟದಲ್ಲಿ ದೊರೆತ ಮಾಹಿತಿಗಳು ನಮ್ಮ ಮೇಲಿನ ಪರಿಕಲ್ಪನೆಯ ಬಗೆಗಿನ ವಿವರಣೆಗೆ ಒತ್ತು ನೀಡಿವೆ. ಅಂದರೆ ವಿಶ್ವದ ಆಗುಹೋಗುಗಳ ಹಾಗೂ ಬದಲಾವಣೆಗಳ ಬಗ್ಗೆ ತೆರೆದುಕೊಂಡಿದ್ದ ಮತ್ತು ಸಂಪರ್ಕ ಹೊಂದಿದ್ದ ವರ್ಗಗಳು ಮತ್ತು ವ್ಯಕ್ತಿಗಳು ಪಾಶ್ಚಿಮಾತ್ಯ ಪ್ರಭಾವಕ್ಕೆ ಆರಂಭದಲ್ಲೇ ಒಳಗಾದರು ಎಂದರ್ಥ. ಈ ಅರ್ಥದಲ್ಲಿ ಸಮಾಜದ ಪರಿವರ್ತನೆಯು ಸಾರ್ವತ್ರಿಕವಾದುದಾದರೂ ಅದರ ಚಲನೆ ಹಾಗೂ ಪ್ರಸರಣೆ ಏಕರೀತಿಯದಾಗಿರುವುದಿಲ್ಲ. ಪಾಶ್ಚಿಮಾತ್ಯ ಮೂಲದ ಆಧುನಿಕ ಅಂಶಗಳು ಸ್ಥಳೀಯ ವ್ಯವಸ್ಥೆಯ ಅನೇಕ ಕ್ಷೇತ್ರಗಳ ಮೇಲೆ ಪ್ರಭಾವ ಬೀರಿ ಬದಲಾವಣೆಗೆ ದಾರಿಮಾಡಿಕೊಟ್ಟವು. ಉದಾಹರಣೆ ಸಾಂಪ್ರದಾಯಿಕ ವ್ಯವಸಾಯೋತ್ಪನ್ನ ಬಾಬುಗಳ ಮೇಲೆ ಅವಲಂಬಿತವಾದ ಅರ್ಥವ್ಯವಸ್ಥೆಗೆ ಬದಲಾಗಿ ಕೈಗಾರಿಕೋತ್ಪನ್ನ, ವ್ಯಾಪಾರೋದ್ಯಮ ಆಧಾರಿತ ಅರ್ಥವ್ಯವಸ್ಥೆಯು ಹೆಚ್ಚು ಹೆಚ್ಚು ಬಲಗೊಳ್ಳತೊಡಗಿದಾಗ ವಾಣಿಜ್ಯಾಧಾರಿತ ಅರ್ಥವ್ಯವಸ್ಥೆಯ ಒಂದು ಬಗೆಯ ಆರಂಭ ಇದರಿಂದ ಹೊರಹೊಮ್ಮಿ ನಿಂತಿತು. ಅದೇ ರೀತಿ ಸಾಂಸ್ಕೃತಿಕ ನೆಲೆಯಲ್ಲಿ ಆಧುನಿಕ ಸಾಹಿತ್ಯ, ಆಧುನಿಕ ಕಲೆಗಳು ಹೊಸ ರೂಪಧಾರಣೆ ಮಾಡಿ ಅಸ್ತಿತ್ವಕ್ಕೆ ಬರತೊಡಗಿದವು. ರಾಜಕೀಯ ನೆಲೆಯಲ್ಲಿ ಒಂದು ನವೀನ ರಾಜಕೀಯ ಧೋರಣೆ, ಮೌಲ್ಯ ಹಾಗೂ ಸಂಘಟನೆಗಳು ತಲೆಎತ್ತಿದವು. ಇಂತಹ ಆಧುನಿಕ ರಾಜಕೀಯ ಸಂಸ್ಕೃತಿಯಲ್ಲಿ ಪ್ರಜಾಪ್ರಭುತ್ವ ತತ್ವದ ಆಧಾರದ ಮೇಲೆ ರೂಪಿತವಾದ ಸ್ವಯಮಾಧಿಕಾರ, ರಾಷ್ಟ್ರೀಯತೆ, ಜನತಂತ್ರ, ಸಮಾನತೆ, ಸ್ವಾತಂತ್ರ್ಯಗಳು ಅಡಕಗೊಂಡು ಜನ ಸಂಘಟನೆ ನವೀಕೃತವಾಗಿ ರಾಜಕೀಯ ಪಕ್ಷಗಳ ಉದಯ, ಸಂಘ ಸಂಸ್ಥೆಗಳ ಸ್ಥಾಪನೆ ಇವೇ ಮುಂತಾದ ಸಂಘಟಿತ ಗುಂಪುಗಳು ಅಸ್ತಿತ್ವಕ್ಕೆ ಬಂದವು. ಪ್ರಗತಿ ಪೂರಕ ಶಾಸನಗಳೂ ಕೂಡ ಜಾರಿಗೊಂಡು ಸಮಾಜವು ತನ್ನ ಗುರಿಯತ್ತ ಸಾಗಲು ಸಹಕರಿಸಿದವು. ಇಂತಹ ಪರಿವರ್ತನೆ ಅಥವಾ ಬದಲಾವಣೆಗಳು ಅಸ್ತಿತ್ವದಲ್ಲಿದ್ದ ಮೂಲ ವ್ಯವಸ್ಥೆಯ ಮೇಲೆ ಅಂದರೆ ಸಾಂಪ್ರದಾಯಿಕ ವ್ಯವಸ್ಥೆಯ ಮೇಲೆ ರೂಪುಗೊಂಡವಾಗಿದ್ದವು. ಈ ಹಿನ್ನೆಲೆಯಲ್ಲಿಯೇ ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜದ ಮೇಲೆ ಪಾಶ್ಚಿಮಾತ್ಯ ಪ್ರಭಾವ ಎನ್ನುವ ಪರಿಕಲ್ಪನೆಯನ್ನು ಈ ಅಧ್ಯಯನದಲ್ಲಿ ಪರಿಕಲ್ಪಿಸಿಕೊಂಡಿರುವುದು.

---

8. ***ಕುಲ್ಕೆ ಎಕೆಹಾರ್ಡ್.,*** *ದಿ ಪಾರ್ಸೀಸ್ ಇನ್ ಇಂಡಿಯಾ, ಎ ಮೈನಾರಿಟಿ ಏಜೆಂಟ್ ಆಫ್ ಸೋಷಿಯಲ್ ಛೇಂಜ್, ಬೆಲ್ ಬುಕ್ ಎಡಿಷನ್, ಬಾಂಬೆ, 1978*
9. ***ಸೂರ್ಯನಾಥ್ ಯು. ಕಾಮತ್ (ಸಂ).,*** *ಪೂರ್ವೋಕ್ತ, ಪು. 581-582*

ಇಂತಹ ಪರಿವರ್ತನಾಶೀಲ ಸಂಪ್ರದಾಯಬದ್ಧ ಆಧುನಿಕ ಪೂರ್ವದ ಮೈಸೂರಿನ ಸಮಾಜಕ್ಕೂ ಮತ್ತು ಪಾಶ್ಚಿಮಾತ್ಯ ಪ್ರಭಾವಗಳಿಂದ ನವೀನ ರೀತಿಯ ಬದಲಾವಣೆಗಳಿಗೆ ಒಳಗಾದ ಆಧುನಿಕ ಮೈಸೂರಿನ ಸಮಾಜಕ್ಕೂ ನಡುವೆ ನಾಲ್ವಡಿ ಕೃಷ್ಣರಾಜ ಒಡೆಯರು ಅತ್ಯಂತ ಪ್ರಮುಖ ಕೊಂಡಿಯಾಗಿ ಕಾಣಿಸಿಕೊಳ್ಳುತ್ತಾರೆ. ಏಕೆಂದರೆ ಬದಲಾವಣೆಯ ನಿಯೋಗಿಗಳಾದವರು ಅಥವಾ ಬದಲಾವಣೆಯನ್ನು ತರಬೇಕೆಂದು ಬಯಸುವ ವ್ಯಕ್ತಿ ಅಥವಾ ಸಂಸ್ಥೆಯು ತನ್ನ ಅಧೀನದ ಪ್ರಜೆಗಳ ಬಗ್ಗೆ ಕಾಳಜಿ ಹೊಂದಿರುವುದು ಅವಶ್ಯಕ. ತನ್ನ ಪ್ರಜೆಗಳನ್ನು ಆ ಮೂಲಕ ಒಟ್ಟಾಗಿ ಆ ಪ್ರದೇಶವನ್ನು ಪ್ರಗತಿಯತ್ತ ಕೊಂಡೊಯ್ಯಬೇಕೆಂಬುದೇ ಆ ಕಾಳಜಿಯ ಹಿಂದಿನ ಪ್ರೇರಕ ಶಕ್ತಿಯಾಗಿರುತ್ತದೆ. ನಾಲ್ವಡಿ ಕೃಷ್ಣರಾಜ ಒಡೆಯರು ಇಂತಹ ಕಾಳಜಿ, ದೂರದೃಷ್ಟಿ ಹೊಂದಿದ್ದ ಆಳರಸರಾಗಿದ್ದು ಪರಿವರ್ತನಾ ಪ್ರಕ್ರಿಯೆಗೆ ಮುಂದಾದರು. ಹಾಗೆಯೇ ಪರಿವರ್ತನಾ ಪ್ರಕ್ರಿಯೆಯು ಯಾವ ಮೂಲದಿಂದ ಬಂದಿತ್ತೆಂಬುದೂ ಸಹ ಸಮಾಜದ ಸ್ವೀಕೃತಿಗೆ ಅಥವಾ ಪ್ರತಿರೋಧಕ್ಕೆ ಕಾರಣವಾಗುತ್ತದೆ. ನಾಡಿನ ಆಳರಸರಾಗಿ, ಪರಿವರ್ತನೆಯ ಮುಂಚೂಣಿ ನಾಯಕರಾಗಿ ಸಾಂಪ್ರದಾಯಿಕ ಹಾಗೂ ಆಧುನಿಕ ಅಂಶಗಳನ್ನು ಬೆಸೆಯಲು ನಾಲ್ವಡಿ ಕೃಷ್ಣರಾಜ ಒಡೆಯರು ಮುಂದಾದಾಗ ಸಮಾಜ ಅವರನ್ನು ಮಾದರಿಯಾಗಿಟ್ಟುಕೊಂಡು ಸಕಾರಾತ್ಮಕವಾಗಿ ಪ್ರತಿಕ್ರಿಯಿಸುತ್ತಾ ಸಾಗಿತ್ತೆನ್ನಬಹುದು. ಅವರು ಗಳಿಸಿದ್ದ ಗೌರವ, ಪ್ರೀತಿ ಪ್ರತಿರೋಧದ ತೀವ್ರತೆಯನ್ನು ಕಡಿಮೆಗೊಳಿಸಲು ಹಾಗೂ ಪರಿವರ್ತನಾ ಪ್ರಕ್ರಿಯೆಯು ತೀವ್ರಗೊಳ್ಳಲು ಸಹಾಯಕವಾಯಿತು. ನಾಲ್ವಡಿ ಕೃಷ್ಣರಾಜ ಒಡೆಯರವರು ಮೈಸೂರಿನ ಇತಿಹಾಸದ ಒಂದು ಪರ್ವಕಾಲದಲ್ಲಿ ಈ ಎರಡೂ ಸಂಸ್ಕೃತಿಗಳ ಸಮನ್ವಯ ಸಾಧಕರಾಗಿ 'ಯಥಾರಾಜ ತಥಾಪ್ರಜಾ' ಎಂಬ ಪ್ರಾಚೀನರ ಹೇಳಿಕೆಯಂತೆ ಮಾದರಿಯಾಗಿ ಮಾದರಿ ಸಂಸ್ಥಾನವನ್ನು ಕಟ್ಟುವ ಪ್ರಯತ್ನವನ್ನು ಹೇಗೆ ಮಾಡಿದರೆಂಬುದನ್ನು ಕುರಿತಂತೆ ಉಪಲಬ್ಧವಾಗಿರುವ ಮಾಹಿತಿಗಳನ್ನು ವಿವರಿಸಿರುವುದರಲ್ಲಿ, ವಿಶ್ಲೇಷಿಸಿರುವುದರಲ್ಲೇ ಈ ಇಡೀ ಅಧ್ಯಯನದ ಮಹತ್ವ ಅಡಗಿರುವುದು.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವನ್ನು ಆರು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡಿದ್ದು ಅವು ಇಂತಿವೆ;

ಅಧ್ಯಾಯ - 1 ಪೀಠಿಕೆ : ಅಧ್ಯಯನದ ಸ್ವರೂಪ-ಮಹತ್ವ-ವ್ಯಾಪ್ತಿ-ಪ್ರಸ್ತುತ ಅಧ್ಯಯನ ಕಾಲದ ಇತಿಹಾಸದ ಮೇಲೆ ಈವರೆಗೆ ಹೊರಬಂದಿರುವ ಗ್ರಂಥಗಳ ಸಮೀಕ್ಷೆ- ಆಕರಗಳು-ಸಂಶೋಧನಾ ಮಾರ್ಗ- ಆಧುನಿಕ ಪೂರ್ವ ಮೈಸೂರು ಪ್ರದೇಶದ ಸಾಮಾಜಿಕ ಚರಿತ್ರೆಯ ರೂಪು-ರೇಷೆಗಳ ಒಂದು ಸಂಕ್ಷಿಪ್ತ ಸಮೀಕ್ಷೆ.

ಅಧ್ಯಾಯ - 2 ಸಂಪ್ರದಾಯ ಹಾಗೂ ಆಧುನಿಕತೆಯ ಸಮನ್ವಯಕರಾಗಿ ನಾಲ್ವಡಿ ಕೃಷ್ಣರಾಜ ಒಡೆಯರ ಜೀವನ ಮತ್ತು ವ್ಯಕ್ತಿತ್ವದ ವಿಕಾಸ.

ಅಧ್ಯಾಯ - 3 ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ಆರ್ಥಿಕತೆಯಲ್ಲಿ ಆಧುನಿಕತೆ.

ಅಧ್ಯಾಯ - 4 ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಶಿಕ್ಷಣ.

ಅಧ್ಯಾಯ - 5 ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಶಾಸನ.

ಅಧ್ಯಾಯ - 6 ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಸಂಸ್ಕೃತಿ.

ಅಧ್ಯಾಯ - 7 ಉಪಸಂಹಾರ.

ಎರಡನೆ ಅಧ್ಯಾಯದಲ್ಲಿ ಮೈಸೂರಿನ ಆಧುನಿಕ ಸಮಾಜದಲ್ಲಿ ಪರಿವರ್ತನೆಯನ್ನು ರೂಪಿಸಲು ಪ್ರಯತ್ನಿಸಿದ ಹಾಗೂ ನಮ್ಮ ಅಧ್ಯಯನದ ಮುಖ್ಯ ಕೇಂದ್ರ ಬಿಂದುವಾಗಿರುವ ನಾಲ್ವಡಿ ಕೃಷ್ಣರಾಜ ಒಡೆಯರವರ ಜೀವನ ಮತ್ತು ವ್ಯಕ್ತಿತ್ವದ ವಿಕಾಸದ ಹಿನ್ನೆಲೆಯಲ್ಲಿ ಕಾರ್ಯನಿರ್ವಹಿಸಿದ ಶಕ್ತಿ ಅಥವಾ ಸಿದ್ಧಾಂತ, ಆಲೋಚನೆ, ಶಿಕ್ಷಣ, ಪ್ರವಾಸ ಮತ್ತು ಪ್ರಭಾವಗಳನ್ನು ಕುರಿತು ವಿಶ್ಲೇಷಣೆಯನ್ನು ಮಾಡಲಾಗಿದೆ. ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಬ್ರಿಟಿಷ್ ರೆಸಿಡೆಂಟರ ನೇತೃತ್ವದಲ್ಲಿ ವಸಾಹತು ವ್ಯವಸ್ಥೆಯ ಹಿತಾಸಕ್ತಿಗಳಿಗೆ ಅನುಕೂಲವಾಗುವ ದೃಷ್ಟಿಯಿಂದ ಪಾಶ್ಚಿಮಾತ್ಯ ಶಿಕ್ಷಣ ಹಾಗೂ ಸ್ಥಳೀಯ ಮೈಸೂರು ಸಮಾಜದ ಅನುಕೂಲತೆಗೆ ತಕ್ಕದಾದ ಸಾಂಪ್ರದಾಯಿಕ ಶಿಕ್ಷಣವನ್ನು ನೀಡಲಾಗಿತ್ತು. ಈ ರೀತಿಯ

ಶಿಕ್ಷಣದಿಂದ ಹಾಗೂ ಶಿಕ್ಷಣದ ಮತ್ತೊಂದು ಮುಖವಾಗಿರುವ ಪ್ರವಾಸದಿಂದ ಪಡೆದ ಲೋಕಾನುಭವಗಳೇ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ವ್ಯಕ್ತಿತ್ವವನ್ನು ಮಾದರಿಯ ಹಾದಿಯಲ್ಲಿ ರೂಪಿಸಿಕೊಳ್ಳಲು ಸಹಕಾರಿಯಾದವು. ಸ್ಥಳೀಯ, ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಪ್ರವಾಸಗಳು ನಾಲ್ವಡಿಯವರಲ್ಲಿ ಹೊಸ ಚಿಂತನೆಗಳಿಗೆ, ಮಾರ್ಪಾಡುಗಳಿಗೆ, ಹೊಂದಾಣಿಕೆಗಳಿಗೆ ಅವಕಾಶ ಮಾಡಿಕೊಟ್ಟವು. ಅಂತೆಯೇ ಸ್ಥಳೀಯ, ಪೌರ್ವಾತ್ಯ, ಪಾಶ್ಚಿಮಾತ್ಯ ಗೌರವಾನ್ವಿತ ಅಧಿಕಾರಿಗಳ, ಖಾಸಗೀ ವ್ಯಕ್ತಿಗಳ, ವಸಾಹತು ಪ್ರತಿನಿಧಿಗಳ ಪ್ರಭಾವವೂ ಕೂಡ ನಾಲ್ವಡಿ ಕೃಷ್ಣರಾಜ ಒಡೆಯರ ವ್ಯಕ್ತಿತ್ವದ ವಿಕಸನದ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರಿನಲ್ಲಿ ಕೈಗಾರಿಕಾ ಕ್ರಾಂತಿಗೆ ಬುನಾದಿ ಹಾಕಿದರು ಎಂದರೆ ತಪ್ಪಿಲ್ಲ. ಆಧುನಿಕ ಭಾರತದ ಇತಿಹಾಸದಲ್ಲಿ ನವೋದಯ ಮತ್ತು ಪ್ರಗತಿಶೀಲ ಪ್ರವೃತ್ತಿಯ ಕಾಲದಲ್ಲಿ ಆಡಳಿತಗಾರರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದಿಂದ ರೂಪುಗೊಂಡವರಾಗಿದ್ದು ಬಾಲ್ಯದಿಂದಲೇ ತಾಂತ್ರಿಕ, ವೈಜ್ಞಾನಿಕ ಹಾಗೂ ಆರ್ಥಿಕ ಕ್ಷೇತ್ರಗಳ ಬಗ್ಗೆ ಅಪಾರ ಆಸಕ್ತಿ ಹೊಂದಿದವರಾಗಿದ್ದರು. ಶಿಕ್ಷಣ ಹಾಗೂ ಲೋಕಾನುಭವದಿಂದ ಪಡೆದಿದ್ದ ಜ್ಞಾನವನ್ನು ಕಾಲಕಾಲಕ್ಕೆ ಪರಿಷ್ಕರಣೆ ಮಾಡಿಕೊಳ್ಳುತ್ತಾ, ರಾಜ್ಯದ ವಿವಿಧ ಕ್ಷೇತ್ರಗಳಲ್ಲಿ ಪ್ರಾಯೋಗಿಕವಾಗಿ ಜಾರಿಗೊಳಿಸುತ್ತಾ ಬಂದರು. ಹಾಗೆಯೇ ತಮ್ಮ ಪ್ರವಾಸದ ಸಂದರ್ಭದಲ್ಲಿ ಜನರನ್ನುದ್ದೇಶಿಸಿ ಪ್ರಭಾವಶಾಲಿ ಭಾಷಣಗಳನ್ನು ಮಾಡುತ್ತಾ ಆಧುನಿಕತೆಯ ಅಂಶಗಳಾದ ತಾಂತ್ರಿಕತೆ, ವೈಜ್ಞಾನಿಕತೆ ಮತ್ತು ಆರ್ಥಿಕಾಂಶಗಳ ಬಗ್ಗೆ ಮನವರಿಕೆ ಮಾಡಿಕೊಡುತ್ತಾ ಹೋದರು. ಇದರ ಫಲವಾಗಿ ತಾಂತ್ರಿಕತೆ ಮತ್ತು ಆರ್ಥಿಕಾಂಶಗಳು ನಮ್ಮ ಅಧ್ಯಯನ ಕಾಲದ ಸಮಾಜದ ಪರಿವರ್ತನೆಗೆ ಪ್ರೇರಣೆ ನೀಡುವಂತಾದವು. ತಾಂತ್ರಿಕತೆ ಮತ್ತು ಆರ್ಥಿಕ ಬದಲಾವಣೆಗಳಿಗೆ ಪರಸ್ಪರ ಅವಿನಾಸಂಬಂಧವಿರುವುದರಿಂದ ಅದು ಆರ್ಥಿಕ ಪರಿವರ್ತನೆಗೆ ಚಾಲನೆ ನೀಡಿತು. ತಾಂತ್ರಿಕತೆಯಿಂದ ರೂಪುಗೊಂಡ ಆರ್ಥಿಕ ಬದಲಾವಣೆಗಳು ಸಮಾಜದ ನಾನಾ ಸ್ತರಗಳ ಮೇಲೆ ಪ್ರಭಾವ ಬೀರುತ್ತಾ ಸಾಗಿದವು. ಈ ಹಿನ್ನೆಲೆಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಆರ್ಥಿಕತೆಯಲ್ಲಿ ಆಧುನಿಕತೆಯನ್ನು ತರುವ ನಿಟ್ಟಿನಲ್ಲಿ ಆಯೋಜಿಸಿಕೊಂಡಿದ್ದ ಆರ್ಥಿಕ ಪರಿಷತ್ತು, ಕೃಷಿ, ಕೈಗಾರಿಕೆ, ವ್ಯಾಪಾರ ಮತ್ತು ವಾಣಿಜ್ಯಾಭಿವೃದ್ಧಿ ಯೋಜನೆಗಳು, ಹಣಕಾಸಿನ ಸೌಲಭ್ಯಗಳು ಹಾಗೂ ಸಾರಿಗೆ ಸಂಪರ್ಕ ವ್ಯವಸ್ಥೆ ಇವೇ ಮೊದಲಾದ ಅಂಶಗಳನ್ನು ಕುರಿತಾದ ಅಧ್ಯಯನವನ್ನು ಮೂರನೇ ಅಧ್ಯಾಯದಲ್ಲಿ ಮಾಡಲಾಗಿದೆ. ಇದರ ಜೊತೆಗೆ ಪರಂಪರೆಯಿಂದ ಬಂದ ಮೈಸೂರಿನ ವಿಶಿಷ್ಟವಾದ ಆರ್ಥಿಕ ಕಸುಬುಗಳಿಗೂ ನಾಲ್ವಡಿ ಕೃಷ್ಣರಾಜ ಒಡೆಯರು ನೀಡಿದ ಪ್ರೋತ್ಸಾಹವನ್ನು ಪರಿಶೀಲಿಸಲು ಪ್ರಯತ್ನಿಸಲಾಗಿದೆ.

ಯಾವುದೇ ಸಮಾಜದ ಚರಿತ್ರೆಯಲ್ಲಿ ಶಿಕ್ಷಣದ ಪ್ರಭಾವವನ್ನು ಅಲ್ಲಗಳೆಯುವಂತಿಲ್ಲ. ಆದರೆ ಸಾಮಾಜಿಕ ಪರಿವರ್ತನೆಯಲ್ಲಿ ಶಿಕ್ಷಣದ ಗುರಿ ಏನಾಗಿರಬೇಕೆಂಬುದರ ಬಗ್ಗೆ ತಜ್ಞರಲ್ಲಿ ಚರ್ಚೆಗಳು ಮತ್ತು ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ಇದಕ್ಕೆ ಸಂಬಂಧಿಸಿದಂತೆ ಎರಡು ಮೂಲಭೂತ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗುತ್ತದೆ;

i) ಶಿಕ್ಷಣವು ಸಮಾಜದ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಬೇಕೆ?

ii) ಶಿಕ್ಷಣವು ಸಾಮಾಜಿಕ ಪರಿವರ್ತನೆಯನ್ನು ತರುವ ಪ್ರಭಾವಶಾಲಿ ಮಾಧ್ಯಮವಾಗಬೇಕೆ?

ಇದು ಚರ್ಚಾಸ್ಪದ ವಿಷಯ. ಆದರೆ ಆಧುನಿಕ ಪ್ರಪಂಚದಲ್ಲಿ ಶಿಕ್ಷಣವನ್ನು ಸಾಮಾಜಿಕ ಪರಿವರ್ತನೆಯ ಬಹು ಪರಿಣಾಮಕಾರಿ ಸಾಧನವೆಂದೇ ಪರಿಗಣಿಸುವುದು ಹೆಚ್ಚು ಸೂಕ್ತ. ಶಿಕ್ಷಣ ವ್ಯವಸ್ಥೆಯು ಸಾಮಾಜಿಕ ಬದಲಾವಣೆಯ ದಿಕ್ಕನ್ನೂ, ಗತಿ-ವಿಧಾನಗಳನ್ನು ನಿರ್ಧರಿಸುವ ಮತ್ತು ಅನ್ವೇಷಿಸುವ ಗುರಿ ಹೊಂದಿರಬೇಕು ಎಂಬುದು ಆಧುನಿಕ ತಜ್ಞರ ಸಾಮಾನ್ಯ ಅಭಿಪ್ರಾಯವಾಗಿದೆ. ಈ ಗುರಿ ಸಾಧನೆಗಾಗಿಯೇ ಎಲ್ಲಾ ಆಧುನಿಕ ಸಮಾಜಗಳಲ್ಲಿ ಶಾಲಾ-ಕಾಲೇಜುಗಳನ್ನು ಮತ್ತು ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲಾಗಿದೆ. ಇಂತಹ ಶಿಕ್ಷಣ ಕೇಂದ್ರಗಳಲ್ಲಿ ಸಂಶೋಧನೆ ಮತ್ತು ಆವಿಷ್ಕಾರಗಳಿಗೆ ಸಮಾಜದ ಆಳುವವರ್ಗ ಬೆಂಬಲ ನೀಡುತ್ತಾ ಬಂದಿದೆ. ಉನ್ನತ ಶಿಕ್ಷಣದ ಅಸ್ತಿತ್ವಕ್ಕೆ ಆಧುನಿಕ ಕಾಲದಲ್ಲಿ ಸಮಾಜವು ಮಾನವ ಪ್ರತಿಭೆಯನ್ನೂ ಮತ್ತು ಭೌತಿಕ ಸಂಪತ್ತನ್ನು ಮಿಸಲಾಗಿಡುವ ಸಂಪ್ರದಾಯ ಎಲ್ಲಾ ಕಡೆ ಕಂಡುಬರುತ್ತದೆ. ಮುಕ್ತ ವಾತಾವರಣದಲ್ಲಿ ಶಿಕ್ಷಣವು ಸಾಮಾಜಿಕ ಪರಿವರ್ತನೆಯನ್ನು ತರಬಲ್ಲ ಅತ್ಯಂತ ಪ್ರಭಾವೀ ಮಾಧ್ಯಮವಾಗಬಲ್ಲದು. ಶಿಕ್ಷಣದ ಪ್ರಭಾವದಿಂದ ಆಗುವ ಸಾಮಾಜಿಕ ಪರಿವರ್ತನೆಯು ನಿಶ್ಶಬ್ಧವಾದ ಕ್ರಾಂತಿ ಈ ಪ್ರಕ್ರಿಯೆಯಲ್ಲಿ ಯಾವುದೇ ಒತ್ತಡ ಅಥವಾ ಬಲವಂತವಿರುವುದಿಲ್ಲ. ಅದಕ್ಕೆ ಬದಲು ಸ್ವಯಂ ಪ್ರೇರಣೆ ಪ್ರಮುಖವಾಗಿರುತ್ತದೆ. ಈ ಸ್ವಯಂಪ್ರೇರಣಾ ಮನೋಭಾವನೆಯನ್ನು ರೂಪಿಸುವ ಶಕ್ತಿಯೇ ಶಿಕ್ಷಣ. ಇಂತಹ ಶಿಕ್ಷಣವನ್ನು ಸಮಾಜವು ಸಾರ್ವತ್ರಿಕವಾಗಿ ಸ್ವಯಂ ಪ್ರೇರಣೆಯಿಂದ ಪಡೆಯಲು ಸಾಧ್ಯವಾಗದಿದ್ದರೆ ಸರ್ಕಾರವೆಂಬ ಸಂಸ್ಥೆಯು ಶಿಕ್ಷಣವನ್ನು ಶಾಸನಬದ್ಧವಾಗಿ ಬಲವಂತದಿಂದಲಾದರೂ ನೀಡುವುದು ಆಧುನಿಕ ಕಾಲದ ಪ್ರಧಾನ ಲಕ್ಷಣವಾಗಿ ಕಾಣುತ್ತದೆ. ಈ ಲಕ್ಷಣವೇ ಶಿಕ್ಷಣದ ಮಹತ್ವವನ್ನು ಹಾಗೂ ಬೆಳವಣಿಗೆಯನ್ನು ಮತ್ತು ಶಿಕ್ಷಣದ ನಡುವಿನ ಸಂಬಂಧವನ್ನು ಎತ್ತಿ ತೋರುತ್ತದೆ. ಈ ಹಿನ್ನೆಲೆಯಲ್ಲಿ ನಾಲ್ವಡಿಯವರು ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು, ಸಮಾಜದ ಎಲ್ಲಾ ವರ್ಗಗಳಿಗೂ ಶಿಕ್ಷಣ ದೊರಕುವಂತೆ ಮಾಡಿ ಆ ಮೂಲಕ ಸಮಗ್ರ ಮೈಸೂರಿನ ಬೆಳವಣಿಗೆ ಸಾಧಿಸಲು ಶಿಕ್ಷಣವನ್ನು

ಶಾಸನಬದ್ಧವಾಗಿ, ರಾಜ್ಯದ ಮೂಲಕ ಜಾರಿಗೊಳಿಸಲು ಹೇಗೆ ಪ್ರಯತ್ನಿಸಿದರು ಎಂಬ ಪರಿಕಲ್ಪನೆಯಲ್ಲಿ ನಾಲ್ಕನೇ ಅಧ್ಯಾಯವನ್ನು ರೂಪಿಸಿಕೊಳ್ಳಲಾಗಿದ್ದು, ನಮ್ಮ ಅಧ್ಯಯನ ಕಾಲದಲ್ಲಿ ಆಧುನಿಕ ಶಿಕ್ಷಣ ಮೈಸೂರಿನ ಸಮಾಜದಲ್ಲಿ ಯಾವ ರೀತಿಯ ಸಾಮಾಜಿಕ ಪರಿವರ್ತನೆಯನ್ನು ತಂದಿತು ಎಂಬುದನ್ನು ಪರಿಶೀಲಿಸಲಾಗುವುದು.

ಐದನೇ ಅಧ್ಯಾಯದಲ್ಲಿ ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಶಾಸನಗಳು ನಿರ್ವಹಿಸಿದ ಪಾತ್ರವನ್ನು ಕುರಿತು ಚರ್ಚಿಸಲಾಗುವುದು. ಸಾಮಾಜಿಕ ಕಲ್ಯಾಣವೇ ಕಲ್ಯಾಣ ರಾಜ್ಯದ ಗುರಿ. ಇಂತಹ ಗುರಿಗಳ ಈಡೇರಿಕೆಯಲ್ಲಿ ರಾಜ್ಯ ಅಥವಾ ಸಮೂಹದ ಮೂಲಕ ಉಗಮಗೊಳ್ಳುವ ಶಾಸನಗಳು ಸಾಮಾಜಿಕ ಪರಿವರ್ತನೆಯನ್ನು ಉಂಟುಮಾಡಬಲ್ಲವು. ಉದಾಹರಣೆಗೆ ಹಿಂದೂ ವಿವಾಹ ಕಾಯ್ದೆಯನ್ನು ತೆಗೆದುಕೊಳ್ಳಬಹುದು.

ಈ ಶಾಸನ ಎರಡು ರೀತಿಯ ಸಾಮಾಜಿಕ ಪರಿವರ್ತನೆಗಳನ್ನು ತರುವ ಗುರಿಯನ್ನು ಸಮಾಜಕ್ಕೆ ನೀಡಿದೆ;

i) ಇದು ಜಾತಿಯ ಅಡೆ-ತಡೆಗಳನ್ನು ನಿವಾರಿಸಿದೆ.

ii) ವಿವಾಹ ವಿಚ್ಛೇದನಕ್ಕೆ ಸ್ತ್ರೀ-ಪುರುಷರಿಗೆ ಸಮಾನ ಅವಕಾಶ ನೀಡಿದೆ.

ಆದರೆ ಇಲ್ಲಿ ಒಂದು ವಿಷಯವನ್ನು ಪರಿಶೀಲಿಸಬೇಕು. ಸಮಾಜದ ಪರಿವರ್ತನೆಗೆ ಮತ್ತು ಪ್ರಗತಿಗೆ ಪೂರಕವಾಗುವ ಶಾಸನಗಳನ್ನು ರಾಜ್ಯವು ಮಾಡಿದಾಗ, ಅದರ ವ್ಯಾಪ್ತಿಯೊಳಗೆ ಬರುವ ಸಮೂಹಗಳು ಅಂತಹ ಪ್ರಗತಿಪರ ಶಾಸನಗಳನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿಲ್ಲದಿದ್ದರೆ, ಅಂತಹ ಶಾಸನಗಳು ಸೋಲುತ್ತವೆ. ಅಂದರೆ ಸಮಾಜವು ಹಿಂದುಳಿದಿದ್ದು ಶಾಸನಗಳು ಪ್ರಗತಿಪರವಾಗಿದ್ದರೆ ಅಂತಹ ಶಾಸನಗಳಿಗೆ ಪ್ರತಿಭಟನೆ ಎದುರಾಗಬಹುದು. ಇದಕ್ಕೆ ವಿರುದ್ಧವಾಗಿ ಪ್ರಗತಿಪರ ಶಾಸನಗಳು ಮತ್ತು ಪ್ರಗತಿಪರ ಜನರೂ ಇದ್ದಾಗ ಒಟ್ಟು ಸಮಾಜವು ಸುಗಮವಾಗಿ ತನ್ನ ಗುರಿಯತ್ತ ಸಾಗುತ್ತದೆ. ಒಟ್ಟಾರೆ ಕಲ್ಯಾಣ ರಾಜ್ಯದ ಗುರಿ ಸಾಮಾಜಿಕ ಕಲ್ಯಾಣವನ್ನು ಸಾಧಿಸುವುದು ಎಂಬ ಹಿನ್ನೆಲೆಯಲ್ಲಿ ನಮ್ಮ ಅಧ್ಯಯನ ಕಾಲದಲ್ಲಿ ನಾಲ್ವಡಿಯವರ ನಾಯಕತ್ವದಲ್ಲಿ ಜಾರಿಗೊಂಡಂತಹ ಭೌತಿಕ, ಸಾಮಾಜಿಕ, ಭೌದ್ಧಿಕ ಹಾಗೂ ನೈತಿಕ ಶಾಸನಗಳು ಹೇಗೆ ಸಾಮಾಜಿಕ ಪರಿವರ್ತನೆಯನ್ನುಂಟು ಮಾಡಿದವು ಅಥವಾ ಶಾಸನವು ಒಂದು ಮಾಧ್ಯಮವಾಗಿ ಮೈಸೂರು ಸಂಸ್ಥಾನದಲ್ಲಿ ಸಾಮಾಜಿಕ ಪರಿವರ್ತನೆಯನ್ನು ತರುವಲ್ಲಿ ಹೇಗೆ ಕಾರ್ಯ ನಿರ್ವಹಿಸಿತು ಎಂಬುದರ ಬಗೆಗಿನ ವಿಶ್ಲೇಷಣೆಯನ್ನು ಮಾಡಲಾಗಿದೆ.

ಆರನೇ ಅಧ್ಯಾಯದಲ್ಲಿ ಸಂಸ್ಕೃತಿಯಲ್ಲಾಗುವ ಬದಲಾವಣೆಗಳು ಹೇಗೆ ಸಾಮಾಜಿಕ ಪರಿವರ್ತನೆಯನ್ನು

ತರಬಲ್ಲವು ಎಂಬುದನ್ನು ವಿಶ್ಲೇಷಿಸುವುದಾಗಿದೆ. ಸಂಸ್ಕೃತಿಯ ಪ್ರಾಕಾರಗಳಾದ ಭಾಷೆ, ಸಾಹಿತ್ಯ, ಸಂಗೀತ, ನಾಟಕರಂಗ, ಚಿತ್ರಕಲೆ ಮತ್ತು ವಾಸ್ತುಶಿಲ್ಪ ಇವೇ ಮೊದಲಾದವುಗಳಲ್ಲಿ ಯಾವು ರೀತಿ-ನೀತಿಗ'ಳಲ್ಲಿ ಪರಿವರ್ತನೆಗಳು ಕಾಣಿಸಿಕೊಂಡವು ಎಂಬುದನ್ನು ಪರಿಶೀಲಿಸಲಾಗುವುದು. ಭಾಷೆ ಸಮಾಜದ ಒಂದು ಬಹು ಮುಖ್ಯವಾದ ಹಾಗೂ ಭಾವನಾತ್ಮಕವಾದ ಅಂಶವಾಗಿದೆ. ಭಾಷೆ ಮಾನವರ ದೊಡ್ಡ ಆಸ್ತಿ. ಪ್ರಾಣಿಗಳಿಗೆ ಭಾಷೆಗಳಿಲ್ಲ. ಆದುದರಿಂದ ಅವುಗಳಿಗೆ ಸಂಸ್ಕೃತಿ ಇಲ್ಲ ಮತ್ತು ಸಾಮಾಜಿಕ ಜೀವನ ನಮ್ಮ ರೀತಿಯಲ್ಲಿಲ್ಲ. ಮಾನವ ಸಮಸ್ತ ಸೃಷ್ಟಿಯ ಅತ್ಯಂತ ಎತ್ತರದ ಜೀವಿ ಎಂದು ಪರಿಗಣಿಸಲ್ಪಟ್ಟಿರುವುದು ಆತನು ಸೃಷ್ಟಿಸಿದ ಭಾಷೆಯಿಂದ ಎಂಬುದನ್ನು ಮರೆಯುವಂತಿಲ್ಲ. ಭಾಷೆಯ ಮೂಲಕ ಕುಟುಂಬದ ಒಳಗೆ ಮತ್ತು ಸಮಾಜದ ನಾನಾ ಸ್ತರಗಳಲ್ಲಿ ಸಾಮಾಜೀಕರಣಕ್ರಿಯೆ ನಡೆಯುತ್ತಾ ಇರುತ್ತದೆ. ಆದುದರಿಂದಲೇ ಭಾಷೆಯನ್ನು 'ಸಾಹಿತ್ಯ ಮತ್ತು ಸಂಸ್ಕೃತಿಗಳ ಕಣಜ' ವೆಂದು ಕರೆಯುವುದು. ಸಂಸ್ಕೃತಿಯ ಮೌಲ್ಯಗಳು, ಭಾವನೆಗಳು ಮತ್ತು ಪರಿಕಲ್ಪನೆಗಳು ಭಾಷೆಯ ಮೂಲಕ ಸಾಮಾಜೀಕರಣ ರೂಪದಲ್ಲಿ ವ್ಯಕ್ತಿಯನ್ನು ಸುಸಂಸ್ಕೃತಗೊಳಿಸುತ್ತವೆ. ಮೈಸೂರು ಪ್ರದೇಶದ ಭಾಷೆ ಪ್ರಧಾನವಾಗಿ ಕನ್ನಡ ಭಾಷೆಯಾಗಿತ್ತು. ಇಂಗ್ಲಿಷ್ ಭಾಷೆಯ ಸಂಪರ್ಕ ನಮ್ಮ ಅಧ್ಯಯನ ಕಾಲದಲ್ಲಿ ತೀವ್ರಗತಿಯಲ್ಲಿ ಸಾಗಿತ್ತು. ಇದರ ಪರಿಣಾಮಗಳನ್ನು ಮತ್ತು ಪರಿವರ್ತನೆಗಳನ್ನು ಗುರುತಿಸುವುದೇ ಈ ಅಧ್ಯಾಯದ ಗುರಿಯಾಗಿದೆ. ಹಾಗೆಯೇ ಸಾಹಿತ್ಯವು ಮೈಸೂರು ಸಂಸ್ಥಾನದಲ್ಲಿ ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಹೆಚ್ಚಾಗಿ ಬರೆಯಲ್ಪಟ್ಟಿದ್ದು ಹೊರ ಭಾಷೆಗಳ ಪ್ರಭಾವಕ್ಕೆ ಅದು ಹೆಚ್ಚಾಗಿ ಒಳಗಾಗಿರಲಿಲ್ಲ. ಆದರೆ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಮೈಸೂರು ಸಂಸ್ಥಾನ ಒಳಗಾದ ಮೇಲೆ ದೇಶೀಯ ಸಾಹಿತ್ಯದಲ್ಲಿ ಅಗಾಧವಾದ ಬದಲಾವಣೆಗಳು ಕಾಣಿಸಿಕೊಳ್ಳಲಾರಂಭಿಸಿದವು. ಈ ಹಿನ್ನೆಲೆಯಲ್ಲಿ ಬೆಳವಣಿಗೆಗೊಂಡ ಸಾಹಿತ್ಯ ಪ್ರಾಕಾರಗಳಾವುವು ಅವು ಸಾಮಾಜಿಕ ಪರಿವರ್ತನೆಯನ್ನುಂಟುಮಾಡುವಲ್ಲಿ ಹೇಗೆ ಸಹಕಾರಿಯಾದವು ಎಂಬುದನ್ನು ಇಲ್ಲಿ ಚರ್ಚಿಸಲಾಗುವುದು. ಇದೇ ಹಾದಿಯಲ್ಲಿ ನಾಟಕರಂಗ, ಸಂಗೀತ, ಚಿತ್ರಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳುವ ಬೆಳವಣಿಗೆಯನ್ನು, ಬದಲಾವಣೆಯನ್ನು ಆ ಮೂಲಕ ಆದ ಸಾಮಾಜಿಕ ಪರಿವರ್ತನೆಯನ್ನು ಈ ಹಿನ್ನೆಲೆಯಲ್ಲಿ ನಾಲ್ವಡಿಯವರ ಪಾತ್ರವನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಕೊನೆಯ ಅಧ್ಯಾಯವು ಉಪಸಂಹಾರದ ರೂಪದಲ್ಲಿದ್ದು ಒಟ್ಟು ಅಧ್ಯಯನದಿಂದ ಒಡಮೂಡಿದ ತೀರ್ಮಾನಗಳನ್ನು ನಿರೂಪಿಸಲಾಗುವುದು. ಪರಾಮರ್ಶಿತ ಆಕಾರಗಳ ಪಟ್ಟಿ ಮತ್ತು ಅಗತ್ಯವಾದ ಅನುಬಂಧಗಳನ್ನು, ಚಿತ್ರಗಳನ್ನು ಪ್ರಬಂಧದ ಕೊನೆಯಲ್ಲಿ ಕೊಡಲಾಗಿದೆ.

### *ಪ್ರಸ್ತುತ ಅಧ್ಯಯನ ಕಾಲದ ಇತಿಹಾಸ ವಿಷಯದ ಮೇಲೆ ಈವರೆಗೆ ಹೊರಬಂದಿರುವ ಗ್ರಂಥಗಳ ಸಮೀಕ್ಷೆ*

ಜೇಮ್ಸ್ ಮ್ಯಾನೋರ್ ಎಂಬ ಪಾಶ್ಚಿಮಾತ್ಯ ವಿದ್ವಾಂಸರು "ಪೊಲಿಟಿಕಲ್ ಚೇಂಜಸ್ ಇನ್ ಅನ್ ಇಂಡಿಯನ್ ಸ್ಟೇಟ್ - ಮೈಸೂರ್" (1917-1955) ಎಂಬ ವಿಷಯದ ಮೇಲೆ ಬರೆದಿರುವ ಗ್ರಂಥವು 1978ರಲ್ಲಿ ಪ್ರಕಟಗೊಂಡಿದೆ. ಈ ಗ್ರಂಥದ ಬಹುಭಾಗ ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತವನ್ನು ಒಳಗೊಂಡಿರುವುದರಿಂದ ನಮ್ಮ ಪ್ರಸ್ತುತ ಅಧ್ಯಯನಕ್ಕೆ ಅನೇಕ ದೃಷ್ಟಿಕೋನಗಳಿಂದ ಪರಿಶೀಲಿಸಬಹುದಾದ ಗ್ರಂಥವಾಗಿದೆ. ನಾಲ್ವಡಿಯವರು 1902ರಲ್ಲಿ ಅಧಿಕಾರವಹಿಸಿಕೊಂಡು 1940ರವರೆಗೆ ಆಳ್ವಿಕೆ ಮಾಡಿದರು. ಜೇಮ್ಸ್ ಮ್ಯಾನೋರ್‌ರವರ ಗ್ರಂಥವು 1917ರಿಂದ ಆರಂಭಗೊಂಡು 1955ಕ್ಕೆ ಮುಕ್ತಾಯವಾಗುತ್ತದೆ[10]. ಅಂದರೆ ನಾಲ್ವಡಿಯವರ ಮರಣಾನಂತರದ 15 ವರ್ಷಗಳ ರಾಜಕೀಯ ಬದಲಾವಣೆಗಳನ್ನು ಚರ್ಚಿಸುತ್ತದ. ಅಂದರೆ 1902 ರಿಂದ 1917ರ ವರೆಗಿನ ನಾಲ್ವಡಿಯವರ ಆಡಳಿತ ಕಾಲದ ಬಗ್ಗೆ ಹೆಚ್ಚು ಪ್ರಸ್ತಾಪಿಸುವುದಿಲ್ಲ.

ಜೇಮ್ಸ್ ಮ್ಯಾನೋರ್‌ರವರು ರಾಜಕೀಯ ಪರಿವರ್ತನೆಗೆ ಹೆಚ್ಚಿನ ಒತ್ತನ್ನು ಕೊಟ್ಟಿದ್ದರೂ ಅದಕ್ಕೆ ಪೂರಕವಾದ ಅಂಶಗಳನ್ನು ಪರಿಶೀಲಿಸಿದ್ದಾರೆ. ಅವರ ಗ್ರಂಥದಲ್ಲಿ ಪೀಠಿಕೆ ಮತ್ತು ಉಪಸಂಹಾರಗಳನ್ನು ಬಿಟ್ಟು ಒಂಬತ್ತು ಅಧ್ಯಾಯಗಳಿವೆ. ಮೊದಲನೆ ಅಧ್ಯಾಯದಲ್ಲಿ ಅವರು 1917-1935ರ ಅವಧಿಯ ರಾಜ್ಯಮಟ್ಟದ ರಾಜಕೀಯ ವ್ಯವಸ್ಥೆಯನ್ನು ಕುರಿತು ಚರ್ಚಿಸಿದ್ದಾರೆ. ಎರಡನೆಯ ಅಧ್ಯಾಯದಲ್ಲಿ 1917-35ರ ಅವಧಿಯ ಮೈಸೂರು ಸಂಸ್ಥಾನದಲ್ಲಿನ ಸಾಮಾಜಿಕ ರಚನೆ ಹಾಗೂ ವಿವಿಧ ಜಾತಿ ಮತ್ತು ಕೋಮುಗಳ ಪ್ರಸ್ತಾಪವನ್ನು ಮಾಡಿದ್ದಾರೆ. ಅವರ ಅಧ್ಯಯನಕ್ಕೆ ಇದು ಸಾಮಾಜಿಕ ಹಿನ್ನೆಲೆಯನ್ನು ಒದಗಿಸಿದೆ. ಅಧಿಕಾರೇತರ ವರ್ಗಗಳ ರಾಜಕೀಯೇತರ ಚಟುವಟಿಕೆಗಳನ್ನು ಹಿನ್ನೆಲೆಯಾಗಿ ಮೂರನೇ ಅಧ್ಯಾಯದಲ್ಲಿ ಪ್ರಸ್ತಾಪಿಸಿದ್ದಾರೆ. ಪಾಶ್ಚಿಮಾತ್ಯ ಪ್ರಭಾವದಿಂದ ಎಚ್ಚರಗೊಂಡ ವರ್ಗಗಳು ಮೈಸೂರು ರಾಜ್ಯದ ರಾಜಕೀಯ ಅಧಿಕಾರದಲ್ಲಿ ಪಾಲನ್ನು ಪಡೆದುಕೊಳ್ಳಲು ಪ್ರಯತ್ನ ನಡೆಸಲು ಸಿದ್ಧವಾದ ಕೆಲವು ವಿಚಾರಗಳನ್ನು ಈ ಅಧ್ಯಾಯದಲ್ಲಿ ವಿಮರ್ಶಿಸಿದ್ದಾರೆ. 1917-1935ರ ಅವಧಿ ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಒಂದು ವಿಶಿಷ್ಟ

---

*10. ಜೇಮ್ಸ್ ಮ್ಯಾನೋರ್., ಪೊಲಿಟಿಕಲ್ ಛೇಂಜಸ್ ಇನ್ ಅನ್ ಇಂಡಿಯನ್ ಸ್ಟೇಟ್ - ಮೈಸೂರ್, 1917-1955, ನ್ಯೂ ಡೆಲ್ಲಿ, 1977, ಪು. 1*

ಕಾಲಘಟ್ಟ. ಈ ಅವಧಿಯಲ್ಲಿ ಬ್ರಾಹ್ಮಣೇತರ ಜಾತಿಗಳು ಅಥವಾ ವರ್ಗಗಳು, ರಾಜಕೀಯ ಸಂಘಗಳು ತಲೆಎತ್ತಿದವು. ಇದಕ್ಕೆ ಅನೇಕ ಕಾರಣಗಳಿದ್ದವು. ಪ್ರಮುಖ ಜಾತಿಗಳಾದ ಲಿಂಗಾಯತರು ಮತ್ತು ಒಕ್ಕಲಿಗರು ಪಾಶ್ಚಿಮಾತ್ಯ ವಿದ್ಯಾಭ್ಯಾಸವನ್ನು ಪಡೆದುಕೊಂಡಿದ್ದು ಒಂದು ಪ್ರಮುಖ ಅಂಶವೆಂದೇ ಹೇಳಬಹುದು. ರಾಜಕೀಯ ಹೋರಾಟಕ್ಕಾಗಿ ಇಂತಹ ಬ್ರಾಹ್ಮಣೇತರ ರಾಜಕೀಯ ಸಂಘಗಳು ಪ್ರಮುಖವಾದವು. ಈ ವಿಷಯವನ್ನು ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಿದ್ದಾರೆ. 1920-1935ರ ಅವಧಿಯಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಫೂರ್ತಿಯಿಂದ ಅನೇಕ ಕ್ರಿಯಾತ್ಮಕ ಹೋರಾಟಗಳನ್ನು ಅಂದಿನ ರಾಜಕೀಯ ಚೌಕಟ್ಟಿನ ಒಳಗೆ ಹಮ್ಮಿಕೊಳ್ಳಲಾಯಿತು. ಬ್ರಿಟಿಷ್ ಪ್ರಾಂತ್ಯಗಳಲ್ಲಿ ವಸಾಹತು ರಾಜಕೀಯ ವ್ಯವಸ್ಥೆಯ ಒಳಗೆ ವಿಕೇಂದ್ರಿಕರಣ ಕ್ರಿಯೆ ತೀವ್ರಗೊಳ್ಳುತ್ತಾ ಸಾಗಿತು. ಉದಾಹರಣೆಗೆ 1919 ಹಾಗೂ 1935ರ ಶಾಸನಗಳನ್ನು ಹೆಸರಿಸಬಹುದು. ಇದೇ ಅವಧಿಯಲ್ಲಿ ಸ್ವಾತಂತ್ರ್ಯ ಚಳುವಳಿ ಚುರುಕುಗೊಂಡಿತು. ಈ ಎಲ್ಲಾ ಅಂಶಗಳನ್ನು ಜೇಮ್ಸ್ ಮ್ಯಾನೋರ್ ತಮ್ಮ ಐದನೇ ಅಧ್ಯಾಯದಲ್ಲಿ ಸ್ಪಷ್ಟಪಡಿಸಿದ್ದಾರೆ. ಆರನೇ ಅಧ್ಯಾಯದಲ್ಲಿ 1936-37ರ ಅವಧಿಯಲ್ಲಿ ಮೈಸೂರು ಸಂಸ್ಥಾನದಲ್ಲಿ "ದೇಶೀಯ ರಾಜರ ಸರ್ವಾಧಿಕಾರ" (Princely Autocracy)ದ ವಿರುದ್ಧ ಹೇಗೆ ಎಲ್ಲಾ ಜಾತಿ ಜನಾಂಗಗಳನ್ನು ಒಳಗೊಂಡಂತಹ ಒಗ್ಗಟ್ಟಿನ ವಿರೋಧ ಪಕ್ಷವೊಂದು ರೂಪುಗೊಂಡಿತು ಎಂಬುದನ್ನು ಚರ್ಚಿಸಿದ್ದಾರೆ. 1937-42ರ ಅವಧಿಯಲ್ಲಿ ಮೈಸೂರು ಸಂಸ್ಥಾನಕ್ಕೆ ನೇರವಾಗಿ ಸಂಬಂಧಿಸಿದ ಸಮಸ್ಯೆಗಳು ಮತ್ತು ಸಂಪನ್ಮೂಲಗಳ ಆಧಾರದ ಮೇಲೆ ಒಂದು ಪ್ರಾಂತ್ಯ ಮಟ್ಟದ ರಾಜಕೀಯ ಪಕ್ಷ ರೂಪುಗೊಂಡಿತು. ಈ ವಿಷಯವನ್ನು ಮತ್ತು ಅದರ ಅನೇಕ ಆಯಾಮಗಳನ್ನು ತಮ್ಮ ಏಳನೇ ಅಧ್ಯಾಯದಲ್ಲಿ ನಿರೂಪಿಸಿದ್ದಾರೆ. ಈ ಏಳು ಅಧ್ಯಾಯಗಳು ನಮ್ಮ ಪ್ರಸ್ತುತ ಅಧ್ಯಯನದ ಕಾಲಾವಧಿಯ ಒಳಗೆ ಬರುತ್ತವೆ. ಎಂಟು ಮತ್ತು ಒಂಭತ್ತನೇ ಅಧ್ಯಾಯಗಳಲ್ಲಿ ಹೇಗೆ ಮೈಸೂರು ಸಂಸ್ಥಾನದ ಒಳಗೆ ರಾಷ್ಟ್ರಮಟ್ಟದ ಸಮಸ್ಯೆಗಳು ಮತ್ತು ಘಟನೆಗಳು ತಮ್ಮ ಪ್ರಭಾವವನ್ನು ಬೀರಿದವು ಹಾಗೂ ಸಂಸ್ಥಾನದ ಒಳಗೆ ಪ್ರವೇಶ ಮಾಡಿದವು (1940-1942) ಎಂಬುದನ್ನು ವಿಶದಪಡಿಸಿದ್ದಾರೆ. ಶ್ರೀಮಂತ ಮತ್ತು ಮಧ್ಯಮವರ್ಗದ ಪ್ರತ್ಯೇಕತೆ 1947-1955ರ ಅವಧಿಯಲ್ಲಿ ಕೊನೆಗೊಂಡಿತು. ಮೈಸೂರು ಸಮಾಜದ ಕೆಳವರ್ಗದವರು ರಾಜಕೀಯ ಹೋರಾಟಗಳಲ್ಲಿ ಪ್ರವೇಶ ಮಾಡಿದರು ಮತ್ತು ಅಧಿಕಾರದಲ್ಲಿ ತಮ್ಮ ಪಾಲನ್ನು ಪಡೆದುಕೊಳ್ಳಲು ಪ್ರಜಾಪ್ರಭುತ್ವದ ಚೌಕಟ್ಟಿನ ಒಳಗೆ ಪ್ರಯತ್ನಿಸಿದರೆಂಬ ವಿಷಯಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ.

ಜೇಮ್ಸ್ ಮ್ಯಾನೋರ್‌ರವರು ತಮ್ಮ ಗ್ರಂಥದಲ್ಲಿ 1917ರಲ್ಲಿ ಅಸ್ತಿತ್ವದಲ್ಲಿದ್ದ ಸರ್ಕಾರವನ್ನು

"An autocracy a benevolent autocracy, but an autocracy nontheless" (ಪ್ರಜೆಗಳ ಹಿತಕ್ಕಾಗಿಯ ನಿರಂಕುಶಾಧಿಕಾರವೇ ಆಗಿದ್ದರೂ ಸಹ ಅದು ನಿರಂಕುಶಾಧಿಕಾರವೇ) ಎಂದು ವರ್ಣಿಸಿದ್ದಾರೆ. ಈ ಅಭಿಪ್ರಾಯವನ್ನು ಸ್ವಲ್ಪ ವಿಶ್ಲೇಷಿಸಿದಾಗ 'ಸರ್ವಾಧಿಕಾರ' ಮೈಸೂರು ಸಂಸ್ಥಾನದ ರಾಜಕೀಯ ವ್ಯವಸ್ಥೆಯ ಪ್ರಧಾನಲಕ್ಷಣ ಎಂಬುದು ಅವರ ಅಭಿಪ್ರಾಯ. ಮತ್ತೆ ಅವರು ತಮ್ಮ ಅಭಿಪ್ರಾಯವನ್ನು ಉದಾರಗೊಳಿಸುತ್ತಾ ಇಂತಹ ಸರ್ವಾಧಿಕಾರವನ್ನು ಉದಾರ ಮನೋಭಾವದ ಮತ್ತು ಪ್ರಜಾಕ್ಷೇಮ ಗುರಿಯುಳ್ಳ ರಾಜಕೀಯ ವ್ಯವಸ್ಥೆ ಎಂದು ಹೇಳುತ್ತಾರೆ, ಮತ್ತೆ ಹೇಗಿದ್ದರೂ ಅದು ಸರ್ವಾಧಿಕಾರ ವ್ಯವಸ್ಥೆಯೆ ಸರಿ ಎಂದು ವಾದಿಸುತ್ತಾರೆ[11]. ಹೀಗಾಗಿ ಇವರ ಹೇಳಿಕೆಯಲ್ಲಿ ಅಸ್ಪಷ್ಟತೆ ಇರುವುದು ಕಂಡುಬರುತ್ತದೆ. 1917ರಲ್ಲಿ ಮುಂದುವರಿದ ಪಾಶ್ಚಾತ್ಯ ಜಗತ್ತಿನ ಬಹುಭಾಗಗಳಲ್ಲಿ ಸರ್ವಾಧಿಕಾರ ತರಹದ ರಾಜಕೀಯ ವ್ಯವಸ್ಥೆಯೇ ಮೇಲುಗೈಯಾಗಿತ್ತೆಂಬುದನ್ನು ನಾವು ಇಲ್ಲಿ ಸ್ಮರಿಸಬಹುದು. 1917ರಲ್ಲಿ ಇಂಗ್ಲೆಂಡಿನಲ್ಲೇ ಸಂಪೂರ್ಣ ಪ್ರಜಾಪ್ರಭುತ್ವ ಸೃಷ್ಟಿಯಾಗಿರಲಿಲ್ಲ. ಅಲ್ಲಿಯೂ ಸಹ ಸರ್ವಾಧಿಕಾರದ ಪಳೆಯುಳಿಕೆಗಳು ಸಾಕಷ್ಟು ಇದ್ದವು ಎಂಬುದನ್ನು ಗಮನಿಸಬೇಕು. ಜೇಮ್ಸ್ ಮ್ಯಾನೋರ್‌ರವರ ಇಂತಹ ಅಭಿಪ್ರಾಯಗಳು ವಸಾಹತು ದೃಷ್ಟಿಕೋನದಿಂದ ಉಗಮಗೊಂಡಿದ್ದು ಎಂಬುದನ್ನು ನಾವು ಗ್ರಹಿಸಬೇಕಾಗಿದೆ. ಮೈಸೂರಿನ ಮಹಾರಾಜರಾಗಿದ್ದ ನಾಲ್ವಡಿಯವರಿಗೆ ಮಾತ್ರ ಸರ್ಕಾರದ ಅಧಿಕಾರ ವರ್ಗ (Bureaucracy) ಜವಾಬ್ದಾರಿಯುತವಾಗಿತ್ತು ಎಂದು ಇವರು ಅಭಿಪ್ರಾಯಪಡುತ್ತಾರೆ. ಸಂಸ್ಥಾನದ ಅಧಿಕಾರವರ್ಗ ತಮ್ಮ ಅಧಿಕಾರವನ್ನು ಅದರ ವ್ಯಾಪ್ತಿಯ ಹೊರಗಿದ್ದ ಯಾವ ಸಮೂಹಗಳೊಡನೆಯೂ ಹಂಚಿಕೊಳ್ಳುವ ಮನೋಭಾವವನ್ನು ಹೊಂದಿರಲಿಲ್ಲ[12] ಎಂದು ಹೇಳಿರುವುದು ಸಂಪೂರ್ಣ ಸತ್ಯವಲ್ಲ. ಏಕೆಂದರೆ 1881ರಲ್ಲಿ ಇದು ಭಾರತದ ಯಾವುದೇ ದೇಶೀಯ ಸಂಸ್ಥಾನದಲ್ಲಿ ಇಲ್ಲದಿದ್ದ ಪ್ರಜಾಪ್ರತಿನಿಧಿ ಸಭೆಯನ್ನು ಮೈಸೂರು ಸಂಸ್ಥಾನದಲ್ಲಿ ಅಂದು ರಾಜರಾಗಿದ್ದ 10ನೇ ಚಾಮರಾಜ ಒಡೆಯರು ಹಾಗೂ ದಿವಾನರಾಗಿದ್ದ ಸಿ. ರಂಗಾಚಾರ್ಲುರವರು ಸ್ಥಾಪಿಸಿದ್ದರು[13]. ಮೈಸೂರಿನ ಆಧುನಿಕ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು, ಪ್ರಜಾಪ್ರತಿನಿಧಿ ಸಭೆಯ ಅಧಿಕಾರ ಎಷ್ಟೇ ಸಂಕುಚಿತವಾಗಿದ್ದರೂ ಸಹ ತನ್ನ ನಿಲುವುಗಳನ್ನು ಅಧಿಕಾರೇತರ ವರ್ಗಗಳು ಸರ್ಕಾರಕ್ಕೆ ತಿಳಿಸಿಕೊಡುವ ಸಾಧ್ಯತೆಯನ್ನು ಇದು ಕಲ್ಪಿಸಿ, 1917ರ ಹೊತ್ತಿಗೆ ಈ ಸಂಸ್ಥೆ ಸಾಕಷ್ಟು ವಿಕಾಸ ಹೊಂದಿದ್ದಿತು. ಆದುದರಿಂದ 1881-1917ರ ವರೆಗಿನ ದೇಶೀಯ ರಾಜಕೀಯ ವ್ಯವಸ್ಥೆಯ ಮಾರ್ಪಾಡುಗಳನ್ನು ಜೇಮ್ಸ್ ಮ್ಯಾನೋರ್‌ರವರು ಉದಾಸೀನಭಾವದಿಂದ ನೋಡಿರುವುದು ಅವರ ಮೇಲಿನ ಹೇಳಿಕೆಗೆ ಕಾರಣವಾಗಿರಬಹುದು.

ಮೈಸೂರು ಸಂಸ್ಥಾನದ ದೇಶೀಯ ರಾಜ್ಯ ವ್ಯವಸ್ಥೆಯಲ್ಲಿ ಪಟ್ಟಣಗಳು ಮತ್ತು ನಗರಗಳನ್ನು ಹೊರತುಪಡಿಸಿ

---

*11. ಜೇಮ್ಸ್ ಮ್ಯಾನೋರ್., ಪೂರ್ವೋಕ್ತ. ಪು. 1*

*12. ಅದೇ.*

*13. ಹಯವದನ್‌ರಾವ್ ಸಿ., ಮೈಸೂರ್ ಗೆಜೆಟಿಯರ್, ಸಂಪುಟ-4, ಬೆಂಗಳೂರು, 1930, ಪು. 2980-2981*

*14. ಜೇಮ್ಸ್ ಮ್ಯಾನೋರ್., ಪೂರ್ವೋಕ್ತ. ಪು. 1*

ಉಳಿದ ಗ್ರಾಮಾಂತರ ಪ್ರದೇಶಗಳು ಮೇಲೆ ಸೂಚಿಸಿದ ಅಧಿಕಾರಸ್ಥ ವರ್ಗಗಳಿಂದ ಸಂಪೂರ್ಣವಾಗಿ ಬೇರ್ಪಟ್ಟಿದ್ದವು[14] ಎಂಬುದಾಗಿ ಜೇಮ್ಸ್ ಮ್ಯಾನೋರ್‌ರವರು ಅಭಿಪ್ರಾಯಪಟ್ಟಿದ್ದಾರೆ. ಇವರ ಈ ಹೇಳಿಕೆ ಅನೇಕ ಅನುಮಾನಗಳಿಗೆ ಎಡೆಮಾಡಿಕೊಡುತ್ತದೆ. ಉದಾಹರಣೆಗೆ 1757ರಿಂದ 1947ರ ಅವಧಿಯಲ್ಲಿ ಬ್ರಿಟಿಷರು ವಸಾಹತು ವ್ಯವಸ್ಥೆಯ ಆಡಳಿತವನ್ನು ಭಾರತದಲ್ಲಿ ರೂಪಿಸಿದರು. ದೊಡ್ಡ ದೊಡ್ಡ ಪಟ್ಟಣಗಳು ಮತ್ತು ಪ್ರಮುಖ ಬಂದರುಗಳನ್ನು ಹೊರತುಪಡಿಸಿ, ಇಡೀ ಭಾರತದಲ್ಲಿ ಎಷ್ಟು ಜನ ಬ್ರಿಟಿಷ್ ಅಧಿಕಾರಿಗಳು ಗ್ರಾಮಾಂತರ ಪ್ರದೇಶಗಳಲ್ಲಿನ ಜನಸಮೂಹಗಳೊಡನೆ ನೇರವಾಗಿ ಸಂಪರ್ಕವನ್ನು ಇಟ್ಟುಕೊಂಡಿದ್ದರು ಎಂಬುದನ್ನು ನಾವು ಇಲ್ಲಿ ಪ್ರಶ್ನೆಯ ರೂಪದಲ್ಲಿ ಕೇಳಿಕೊಳ್ಳಬೇಕಾಗುತ್ತದೆ. ಯಾವೊಬ್ಬ ಐರೋಪ್ಯನೂ ಗ್ರಾಮಗಳಲ್ಲಿ ವಾಸಿಸಲಿಲ್ಲ. ವಸಾಹತು ವ್ಯವಸ್ಥೆ ಗ್ರಾಮಗಳಿಂದ ಬಹಳ ದೂರವಿದ್ದಿತು. ಭಾರತೀಯ ಗ್ರಾಮಗಳಿಗೂ ಕೇಂದ್ರ ವ್ಯವಸ್ಥೆಗೂ ಬಹುಪ್ರಾಚೀನ ಕಾಲದಿಂದಲೂ ಯಾವುದೇ ನಿಕಟವಾದ ಸಂಬಂಧವಾಗಲಿ, ಆಡಳಿತದಲ್ಲಿ ಪಾಲ್ಗೊಳ್ಳುವ ಆಸೆ-ಆಕಾಂಕ್ಷೆಗಳಾಗಲಿ ಇರಲಿಲ್ಲವೆಂದು ಹೇಳಬಹುದು. ಆದಾಗ್ಯೂ ಪ್ರಾಚೀನ ಕಾಲದಿಂದ ಆರಂಭವಾಗಿ ಬ್ರಿಟಿಷರ ಸಾಮ್ರಾಜ್ಯದವರೆಗೂ ಎಲ್ಲಾ ಸಾಮ್ರಾಜ್ಯಗಳಿಗೆ ಆರ್ಥಿಕ ನೆಲೆಗಟ್ಟನ್ನು ಒದಗಿಸಿಕೊಡುತ್ತಾ ಇದ್ದದ್ದು ಗ್ರಾಮಗಳು ಮತ್ತು ಅಲ್ಲಿನ ದುಡಿಮೆಗಾರರು ಎಂಬುದನ್ನು ಒತ್ತಿ ಹೇಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಜೇಮ್ಸ್ ಮ್ಯಾನೋರ್‌ರವರು 1917-1940ರ ಅವಧಿಯ ಮೈಸೂರಿನ ರಾಜಕೀಯ ವ್ಯವಸ್ಥೆಗೆ ಸಂಬಂಧಿಸಿದಂತೆ ವ್ಯಕ್ತಪಡಿಸಿರುವ ಕೆಲವು ಅಭಿಪ್ರಾಯಗಳನ್ನು ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ. ಮೈಸೂರಿನ ಆಡಳಿತ ವ್ಯವಸ್ಥೆ ಆಧುನಿಕ ಪೂರ್ವ ಕಾಲದಲ್ಲಿ ವಿಕೇಂದ್ರಿಕರಣ ಸೂತ್ರದ ಮೇಲೆ ರೂಪುಗೊಂಡಿದ್ದಿತು. ಮೈಸೂರಿನ ಪ್ರದೇಶದಲ್ಲಿ ಒಡೆಯರ ರಾಜ್ಯ 33 ಹಳ್ಳಿಗಳಿಂದ ಆರಂಭವಾಯಿತು. ಆಧುನಿಕ ಕಾಲದಲ್ಲಿ ಬ್ರಿಟಿಷ್ ವಸಾಹತು ವ್ಯವಸ್ಥೆ ಮೈಸೂರು ಸಂಸ್ಥಾನವನ್ನು ಪುನರ್ರಚಿಸಿತು. ಆದರೆ ಗ್ರಾಮಾಂತರ ಪ್ರದೇಶಗಳ ಮೇಲೆ ಈ ಯಾವ ಘಟನೆಗಳೂ ಪ್ರಭಾವ ಬೀರಲಿಲ್ಲ. ಅಂದ ಮಾತ್ರಕ್ಕೆ ಗ್ರಾಮಗಳು ಮತ್ತು ರಾಜ, ಅವರ ಅಧಿಕಾರಸ್ಥ ವರ್ಗಗಳ ನಡುವೆ ಕಂದಕವಿತ್ತೆಂಬುದನ್ನು ಒಪ್ಪಿಕೊಳ್ಳುವುದಕ್ಕಾಗುವುದಿಲ್ಲ. ಈ ಪ್ರದೇಶದಲ್ಲಿ ದೊರೆತಿರುವ ಕನ್ನಡ ಶಾಸನಗಳು ಹಾಗೂ ಇತರ ಆಧಾರಗಳು ನಮ್ಮ ಹೇಳಿಕೆಯನ್ನು ಪುಷ್ಟೀಕರಿಸುತ್ತವೆ. ಬ್ರಿಟಿಷರು ಅಧಿಕಾರಕ್ಕೆ ಬಂದ ಮೇಲೆ ಭಾರತೀಯ ಗ್ರಾಮಗಳು ರಾಜಕೀಯ ವ್ಯವಸ್ಥೆಯ ದೃಷ್ಟಿಯಿಂದ ಹಾಳುಗೆಟ್ಟವು. ಕನ್ನಡದಲ್ಲಿ ಒಂದು ಗಾದೆ ಇದೆ, 'ಕೆಟ್ಟು ಪಟ್ಟಣ ಸೇರು' ಎಂಬುದು. ಆದರೆ ಬ್ರಿಟಿಷರ ವಸಾಹತು ನೀತಿಯಿಂದ ಪಟ್ಟಣದಲ್ಲಿ ಕೆಟ್ಟವರು ಹಳ್ಳಿಗೆ ಬಂದು ಅಲ್ಲಿನ ಭೂಮಿಗೆ ಭಾರವಾಗಿ ಗ್ರಾಮಾಂತರ ಜೀವನವನ್ನು ಅತ್ಯಂತ ಹೀನಸ್ಥಿತಿಗೆ ಒಯ್ಯುವಂತಾಯಿತು. ವಿಶ್ವೇಶ್ವರಯ್ಯನವರು ತಮ್ಮ

---

*15. ಸರ್ ಎಂ. ವಿಶ್ವೇಶ್ವರಯ್ಯ., ನನ್ನ ವೃತ್ತಿ ಜೀವನದ ನೆನಪುಗಳು, ಕನ್ನಡಕ್ಕೆ: ಗಜಾನನ ಶರ್ಮ, ಬೆಂಗಳೂರು, 2005, ಪು. 70*

ವೃತ್ತಿ ಜೀವನದ ನೆನಪುಗಳಲ್ಲಿ ಬರೆದಿರುವಂತೆ 1881ರಲ್ಲಿ ಶೇಕಡ 13ರಷ್ಟು ಜನಸಂಖ್ಯೆ ಪಟ್ಟಣವಾಸಿಗಳಾಗಿದ್ದರೆ, 1911ರಲ್ಲಿ ಇದು ಶೇಕಡ 11ಕ್ಕೆ ಇಳಿಯಿತು. ಪಟ್ಟಣಗಳಲ್ಲಿ ಉಂಟಾದ ಉದ್ಯೋಗಾವಕಾಶದ ಕೊರತೆ ಇದಕ್ಕೆ ಕಾರಣವಾಗಿರಬೇಕು[15] ಎಂಬ ಮಾಹಿತಿ ನಮ್ಮ ಮೇಲಿನ ಹೇಳಿಕೆಯನ್ನು ಪುಷ್ಟೀಕರಿಸುತ್ತದೆ. ಆದುದರಿಂದ ಆಧುನಿಕ ಕಾಲದಲ್ಲಿ ನಗರ ಮತ್ತು ಗ್ರಾಮಗಳ ನಡುವೆ ಕಂದಕ ಹೆಚ್ಚುವುದರ ಜೊತೆಗೆ ರಾಜಕೀಯ ವ್ಯವಸ್ಥೆಯಲ್ಲಿ ಗ್ರಾಮಸ್ಥರು ಸಂಪೂರ್ಣವಾಗಿ ಮೂಲೆಗುಂಪಾದರು. ಇಂತಹ ಹಿನ್ನೆಲೆಯಲ್ಲಿ ನಾಲ್ವಡಿಯವರ ನೇತೃತ್ವದಲ್ಲಿನ ಆಡಳಿತ ವರ್ಗ ಗ್ರಾಮಾಂತರ ಪ್ರದೇಶಗಳಲ್ಲಿ ಸುಧಾರಣೆಗಳನ್ನು ತರುವ ಪ್ರಯತ್ನವನ್ನು ಮಾಡಿತು. ಆದುದರಿಂದ ಜೇಮ್ಸ್ ಮ್ಯಾನೋರ್‌ರವರ ಮೇಲಿನ ಹೇಳಿಕೆಯನ್ನು ಸಂಪೂರ್ಣವಾಗಿ ಒಪ್ಪಲಾಗುವುದಿಲ್ಲ. ಆದಾಗ್ಯೂ ಇದೊಂದು ಅತ್ಯುತ್ತಮ ಗ್ರಂಥವಾಗಿದ್ದು, ಅವರ ಅಧ್ಯಯನದ ಆಯಾಮಗಳು ನಮ್ಮ ಅಧ್ಯಯನಕ್ಕೆ ಸಹಕಾರಿಯಾಗುವುದರಲ್ಲಿ ಸಂಶಯವಿಲ್ಲ.

ಬಿಜೋರ್ನ್ ಹೆಟ್ನೆ ಸ್ವೀಡನ್ ದೇಶದ ಇತಿಹಾಸ ಸಂಶೋಧಕರು. ಆಧುನಿಕ ಮೈಸೂರಿನ ಇತಿಹಾಸ ಬರವಣಿಗೆಯಲ್ಲಿ ಅವರ "ದಿ ಪೊಲಿಟಿಕಲ್ ಎಕಾನಮಿ ಆಫ್ ಇನ್‌ಡೈರೆಕ್ಟ್ ರೂಲ್-ಮೈಸೂರ್ - 1881-1947" ಎಂಬ ಗ್ರಂಥವು ಒಂದು ಪ್ರಮುಖ ಕೊಡುಗೆಯಾಗಿದೆ. ಹೆಟ್ನೆಯವರೇ ಹೇಳಿಕೊಂಡಿರುವಂತೆ ಈ ಗ್ರಂಥದ ಕೆಲವು ವಿಷಯ ಮೈಸೂರಿನ ಸಮಾಜಕ್ಕೆ ಸಂಬಂಧಿಸಿದ್ದು, ಅದು ಕೇವಲ ಆರ್ಥಿಕ, ರಾಜಕೀಯ ಅಥವಾ ಸಾಮಾಜಿಕ ಅಂಶಗಳಿಗೆ ಮಾತ್ರ ಸೀಮಿತವಾದುದಲ್ಲ[16]. ಈ ಗ್ರಂಥದಲ್ಲಿ ಮೂರು ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯದಲ್ಲೂ ಬೇರೆ ಬೇರೆ ಶೀರ್ಷಿಕೆಗಳಿವೆ. ಮೊದಲನೆ ಅಧ್ಯಾಯದ ಶೀರ್ಷಿಕೆ ರಾಷ್ಟ್ರದ ಒಳಗೆ ಒಂದು ರಾಷ್ಟ್ರ ಎಂಬುದಾಗಿದೆ. (A Nation with in a Nation) ಇದರಲ್ಲಿ ಅವರು ಪ್ರಧಾನವಾಗಿ ಪರೋಕ್ಷ ಆಡಳಿತದಲ್ಲಿ ರಾಜಕೀಯ ವ್ಯವಸ್ಥೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಈ ಅಧ್ಯಾಯದಲ್ಲಿ 3 ವಿಭಾಗಗಳಿವೆ.

i) ರಾಜಕೀಯ ಸ್ವಯಂ ಆಡಳಿತಕ್ಕೆ ನಡೆದ ಹೋರಾಟ

ii) ಕೇಂದ್ರ ಅಧಿಕಾರ ಸಮತೋಲನ

iii) ಜನಪ್ರಿಯ ಅಥವಾ ಜನಪರ ಸಂಸ್ಥೆಗಳ ಸೃಷ್ಟಿ ಅಥವಾ ಉಗಮ.

ಎರಡನೆಯ ಅಧ್ಯಾಯದ ಶೀರ್ಷಿಕೆ ಹೀಗಿದೆ. ಬ್ರಾಹ್ಮಣ, ಬ್ರಾಹ್ಮಣೇತರರು ಮತ್ತು ಕಾಂಗ್ರೆಸ್ಸಿಗರು, ಸಂಘಟನೆ

---

*16. **ಬಿಜೋರ್ನ್ ಹೆಟ್ನೆ.,** ದಿ ಪೊಲಿಟಿಕಲ್ ಎಕಾನಮಿ ಆಫ್ ಇನ್‌ಡೈರೆಕ್ಟ್ ರೂಲ್-ಮೈಸೂರ್, 1881 - 1947, ನ್ಯೂಡೆಲ್ಲಿ, 1978, ಪು. 3*

ಮತ್ತು ರಾಜಕೀಯ ಪರಿವರ್ತನೆ. ಈ ಅಧ್ಯಾಯದಲ್ಲಿ 3 ವಿಭಾಗಗಳಿವೆ;

i) ಕೋಮುವಾದಿ ಚಳವಳಿ

ii) ಕಾರ್ಮಿಕ ಚಳವಳಿ

iii) ರಾಷ್ಟ್ರೀಯ ಚಳವಳಿ

ಮೂರನೆ ಅಧ್ಯಾಯದ ಶೀರ್ಷಿಕೆ ಹೀಗಿದೆ, "ಕೈಗಾರಿಕೀಕರಣ ಇಲ್ಲವೇ ಮರಣ"; ಅಭಿವೃದ್ಧಿ ಯೋಜನೆಯ ಬೆಳವಣಿಗೆ. ಈ ಅಧ್ಯಾಯದಲ್ಲಿಯೂ 3 ವಿಭಾಗಗಳಿವೆ;

i) ಮೈಸೂರು-ಅಭಿವೃದ್ಧಿಗೆ ಮುಕ್ತದ್ವಾರ ಧೋರಣೆ

ii) ಆರ್ಥಿಕ ಸ್ವಾಯತ್ತತೆಗೆ ಹೋರಾಟ

iii) ಸಮ್ಮಿಶ್ರ ಆರ್ಥಿಕ ವ್ಯವಸ್ಥೆಯ ಉಗಮ.

ಈ ಅಧ್ಯಾಯಗಳ ಜೊತೆಗೆ ಹೆಟ್ನೆಯವರು ಪೀಠಿಕೆಯನ್ನು ಗ್ರಂಥದಲ್ಲಿ ಸೇರಿಸುವುದರ ಜೊತೆಗೆ ಅಧ್ಯಯನದ ಹಿನ್ನೆಲೆಯಾಗಿ 1881ರ ಹಿಂದಿನ ಮೈಸೂರು ಇತಿಹಾಸವನ್ನು ಸ್ಥೂಲವಾಗಿ ವಿವೇಚಿಸಿದ್ದಾರೆ.

ಹೆಟ್ನೆಯವರು ಪರೋಕ್ಷ ವಸಾಹತು ಆಡಳಿತ ಸಂದರ್ಭದಲ್ಲಿ ದೇಶೀಯ ಸಂಸ್ಥಾನ ಒಂದು ಹೊಸ ರೂಪವನ್ನು ಪಡೆದುಕೊಂಡ ಪ್ರಕ್ರಿಯೆಯನ್ನು ಚರ್ಚಿಸುವ ಪ್ರಯತ್ನ ಮಾಡಿದ್ದಾರೆ. ಆರ್ಥಿಕ ಧೋರಣೆಗಳ ರೂಪುಗೊಳ್ಳುವಿಕೆಗೆ ಹೆಚ್ಚು ಒತ್ತುಕೊಟ್ಟಿದ್ದಾರೆ. ಇದಲ್ಲದೇ ಅಭಿವೃದ್ಧಿಯ ತಂತ್ರದ ದೃಷ್ಟಿಯಿಂದಲೂ ಈ ವಿಷಯವನ್ನು ಪರಿಶೀಲಿಸಿದ್ದಾರೆ. ಇತರ ಅನೇಕ ಕ್ಷೇತ್ರಗಳಲ್ಲಿ ಆದ ಬದಲಾವಣೆಗಳ ಪರಿಣಾಮವಾಗಿ ಮೈಸೂರಿನ ಆರ್ಥಿಕ ಬೆಳವಣಿಗೆ ಸಾಧ್ಯವಾಯಿತು ಎಂಬುದು ಅವರ ಅಭಿಮತ. ಇಂತಹ ಬದಲಾವಣೆಗಳ ಪೈಕಿ ಸಮಗ್ರ ಸಾಮಾಜಿಕ ರಚನೆಯಲ್ಲಿ ಹಾಗೂ ಮೈಸೂರಿನ ಹೊರಗಡೆ ನಡೆದಂತಹ ಸಂಬಂಧಗಳಲ್ಲಿನ ಬದಲಾವಣೆಗಳನ್ನು ಮತ್ತು ರಾಜಕೀಯ ಬದಲಾವಣೆಗಳನ್ನು ಗಮನಿಸುತ್ತಾ ಅವರು ಅವುಗಳು ಮೈಸೂರಿನ ಆರ್ಥಿಕ ಪರಿವರ್ತನೆಯ ಮೇಲೆ ಬೀರಿದ ಪರಿಣಾಮಗಳನ್ನು ಪರಿಶೀಲಿಸಿದ್ದಾರೆ. ಇವರ ಪ್ರಧಾನಗುರಿ ಆರ್ಥಿಕ ಬೆಳವಣಿಗೆಯನ್ನು ದಾಖಲಿಸುವುದಕ್ಕಿಂತ ಹೆಚ್ಚಾಗಿ ಅಭಿವೃದ್ಧಿಯ ತಂತ್ರಗಳನ್ನು ಪರಿಶೀಲಿಸುವುದೇ ಆಗಿದೆ. ಅಭಿವೃದ್ಧಿಯ ದಾಖಲೆಗಳನ್ನು ಮೌಲ್ಯಮಾಪನ ಮಾಡದೇ ಇಂತಹ ಅಧ್ಯಯನ ಸಾಧ್ಯವಿಲ್ಲವೆಂಬುದು ಅವರ ಭಾವನೆಯಾಗಿದೆ. ಮೈಸೂರಿನಲ್ಲಿ ಸರ್ಕಾರದ ನೇತೃತ್ವದಲ್ಲಿ ಆರ್ಥಿಕ ಬದಲಾವಣೆಗಳಾಗಿದ್ದವು ಎಂಬುದಾಗಿ ಹೆಟ್ನೆ

---

*17. ಬಿಜೋರ್ನ್ ಹೆಟ್ನೆ., ಪೂರ್ವೋಕ್ತ, ಪು. 7*

*18. ಅದೇ., ಪು 8-16*

ಅಭಿಪ್ರಾಯಿಸಿದ್ದಾರೆ[17]. ಇವರು ತಮ್ಮ ಪೀಠಿಕೆಯಲ್ಲಿ ತಾವು ಅನುಸರಿಸಿರುವ ಕೆಲವು ಪರಿಕಲ್ಪನೆಗಳ ಸೈದ್ಧಾಂತಿಕ ನೆಲೆಗಟ್ಟನ್ನು ಹೀಗೆ ಚರ್ಚಿಸಿದ್ದಾರೆ[18].

ತಮ್ಮ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ನಾಲ್ಕು ಐತಿಹಾಸಿಕ ಪ್ರಕ್ರಿಯೆಗಳಿಗೆ ಪ್ರಾಧಾನ್ಯತೆಯನ್ನು ನೀಡಿದ್ದಾರೆ.

i) ರಾಜ್ಯವು ರೂಪುಗೊಳ್ಳುವ ಪ್ರಕ್ರಿಯೆ (The process of state formation).

ii) ಸಾರ್ವಭೌಮತ್ವದ ನಿಯಂತ್ರಣ, ತಂತ್ರಗಳು ಮತ್ತು ಸ್ವಾಯತ್ತತೆಗಾಗಿ ಹೋರಾಟ.

iii) ರಾಜ್ಯದ ಆಡಳಿತ ವ್ಯವಸ್ಥೆಯು ಹರಡಿಕೊಳ್ಳುವ ಪ್ರಕ್ರಿಯೆಗಳು ಮತ್ತು ರಾಜಕೀಯ ಸಂಘಟನೆ.

iv) ಆರ್ಥಿಕ ಯೋಜನೆ ಮತ್ತು ಅಭಿವೃದ್ಧಿ.

ಇದೇ ರೀತಿ ಹೆಟ್ನೆಯವರು ತಮ್ಮ ಅಧ್ಯಯನಕ್ಕೆ ಪೂರಕವಾಗಿ ನಾಲ್ಕು ಸೈದ್ಧಾಂತಿಕ ಆಕರಗಳನ್ನು ಬಳಸಿಕೊಂಡಿದ್ದಾರೆ.

i) ರಾಷ್ಟ್ರೀಯ ನಿರ್ಮಾಣ ಸಿದ್ಧಾಂತ

ii) ಪ್ರಭುತ್ವ ಸಿದ್ಧಾಂತ

iii) ಸಂಘಟನಾ ಸಿದ್ಧಾಂತ

iv) ಅಭಿವೃದ್ಧಿ ಸಿದ್ಧಾಂತ

ಈ ನಾಲ್ಕು ಸಿದ್ಧಾಂತಗಳ ಆಧಾರದ ಮೇಲೆ ಮೈಸೂರಿನ ಆರ್ಥಿಕ ಬೆಳವಣಿಗೆಗಳನ್ನು ಹೆಟ್ನೆಯವರು ಪರಿಶೀಲಿಸಿದ್ದಾರೆ.[19]

ಇವರು ಮೈಸೂರು ದೇಶೀಯ ಸಂಸ್ಥಾನವನ್ನು "ಸಾಮ್ರಾಜ್ಯಶಾಹಿಯ ಶಿಶು" (Child of Imperialism) ಎಂದು ವರ್ಣಿಸಿದ್ದಾರೆ. ಸಾಮ್ರಾಜ್ಯಶಾಹಿಯ ಸಾರ್ವಭೌಮತ್ವದಿಂದ ಸಾಧ್ಯವಾದಷ್ಟು ಸ್ವತಂತ್ರವಾಗಿ ಬೆಳೆಯಬೇಕೆಂಬ ಉದ್ದೇಶದಿಂದ ಕ್ರಿಯಾಶೀಲ ಹೋರಾಟವನ್ನು ಕೈಗೆತ್ತಿಕೊಂಡ ಅಧಿಕಾರವರ್ಗ ಅತ್ಯಂತ ಸೂಕ್ಷ್ಮ ರೀತಿಯಲ್ಲಿ ತಂತ್ರಗಳನ್ನು

---

*19. ಬಿಜೋರ್ನ್ ಹೆಟ್ನೆ., ಪೂರ್ವೋಕ್ತ. ಪು. 16*

ಬಳಸಿಕೊಂಡು, ಬುದ್ಧಿವಂತಿಕೆಯಿಂದ ಪರೋಕ್ಷ ಆಡಳಿತ ವ್ಯವಸ್ಥೆಯ ತಂತ್ರಗಳಲ್ಲಿದ್ದ ದುರ್ಬಲ ಅಂಶಗಳನ್ನು ತಮ್ಮ ಲಾಭಕ್ಕಾಗಿ ಬಳಸಿಕೊಂಡರು ಎಂಬುದಾಗಿ ಹೆಟ್ನೆಯವರು ಅಭಿಪ್ರಾಯಪಡುತ್ತಾರೆ. ಉದಾಹರಣೆಗೆ ಕಾಂಗ್ರೆಸ್ಸಿನ ಉಗಮದ ಪರಿಣಾಮವಾಗಿ ಬ್ರಿಟಿಷರು ದೇಶೀಯ ಸಂಸ್ಥಾನಗಳ ಬೆಂಬಲ ತಮಗೆ ದೊರೆಯುವ ಅವಶ್ಯಕತೆಯನ್ನು ಕಂಡುಕೊಂಡು, ಸಂಸ್ಥಾನಗಳನ್ನು ಉದಾರವಾಗಿ ನಡೆಸಿಕೊಳ್ಳಬೇಕಾಯಿತು. ಆದಾಗ್ಯೂ ಇಂತಹ ಸ್ವಾಯತ್ತತೆಯ ಹೋರಾಟಕ್ಕೆ ಪ್ರತಿಯಾಗಿ ಮತ್ತು ಅದನ್ನು ಹದ್ದುಬಸ್ತಿನಲ್ಲಿಡಲು ಬ್ರಿಟಿಷರು ಕೆಲವು ತಂತ್ರಗಳನ್ನು ಮಾಡಿದರು. ಉದಾಹರಣೆಗೆ ಮೈಸೂರಿನ ಅಧಿಕಾರ ಕೇಂದ್ರದಲ್ಲಿದ್ದ ಬೇರೆಬೇರೆ ಗುಂಪುಗಳ ನಡುವಣ ಪ್ರಬೇಧಗಳನ್ನು ಅವರು ಸ್ವಲಾಭಕ್ಕಾಗಿ ಬಳಸಿಕೊಳ್ಳುವ ಪ್ರಯತ್ನ ಮಾಡಿದರು. ಮೈಸೂರು ಅರಸು ಜನಾಂಗದವರು, ಮಂತ್ರಿಗಳು ಅಧಿಕಾರ ಹೆಚ್ಚಿಸಿಕೊಳ್ಳುವ ತಂತ್ರದ ಬಗೆಗೆ ಮಹಾರಾಜರಿಗೆ ಎಚ್ಚರಿಕೆ ನೀಡುವ ತಂತ್ರವನ್ನು ಬ್ರಿಟಿಷರು ಬಳಸಿಕೊಂಡರು. ಆದುದರಿಂದ ಮೈಸೂರಿನ ರಾಜಕೀಯ ಸ್ವಾಯತ್ತತೆಯ ಬೆಳವಣಿಗೆ ರೇಖಾರೂಪದ ಪ್ರಗತಿಯೇ ಹೊರತು ಊರ್ಧ್ವಮುಖ ಪ್ರಗತಿಯಲ್ಲ ಎಂಬುದಾಗಿ ಹೆಟ್ನೆ ಭಾವಿಸಿದ್ದಾರೆ. ವಸಾಹತು ಆಡಳಿತಕ್ಕೆ ಮೈಸೂರು ನೀಡುತ್ತಿದ್ದ ಪೊಗದಿಹಣ ಎರಡು ಅಂಶಗಳನ್ನು ಸ್ಪಷ್ಟಪಡಿಸುತ್ತದೆ.

i) ವಸಾಹತುಶಾಹಿ ವ್ಯವಸ್ಥೆಗೆ ಮೈಸೂರಿನ ಅಧೀನತೆ.

ii) ಸಾಕಷ್ಟು ಮೊತ್ತದ ಸಂಪನ್ಮೂಲ ಈ ಮೂಲಕ ರಾಜ್ಯದಿಂದ ಹೊರಗಡೆ ಸೋರಿ ಹೋದದ್ದು.[20]

ಮೈಸೂರು ಸಂಸ್ಥಾನದ ಒಳಗೆ ಅನೇಕ ಹಿತಾಸಕ್ತಿ ಗುಂಪುಗಳ ನಡುವಣ ಅಧಿಕಾರಕ್ಕಾಗಿ ನಡೆದ ಹೋರಾಟಕ್ಕೆ ಎರಡು ಪ್ರಭಾವಗಳನ್ನು ಹೆಟ್ನೆ ಗುರುತಿಸಿದ್ದಾರೆ.

i) ಸಾಮ್ರಾಜ್ಯಶಾಹಿಯಲ್ಲಿ ಬದಲಾವಣೆ.

ii) ಕೆಳಗಿನ ಹಂತದಿಂದ ಉದ್ಭವಿಸಿದ ರಾಜಕೀಯ ಒತ್ತಡ.

ಇದಕ್ಕೆ ಉದಾಹರಣೆಗಳೆಂದರೆ :

i) ವಸಾಹತುಶಾಹಿ ಮದ್ರಾಸ್ ಹಾಗೂ ಮೈಸೂರಿನ ರಾಜಪ್ರಭುತ್ವಗಳ ನಡುವಿನ ತಿಕ್ಕಾಟ.

ii) ಮೈಸೂರು ಬ್ರಾಹ್ಮಣರು ಮತ್ತು ಮದ್ರಾಸಿ ಬ್ರಾಹ್ಮಣರ ನಡುವಿನ ಹೋರಾಟ.

iii) ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ನಡುವಣ ಸಂಘರ್ಷ.

---

*20. ಬಿಜೋರ್ನ್ ಹೆಟ್ನೆ, ಪೂರ್ವೋಕ್ತ. ಪು. 17*

*21. ಬಿಜೋರ್ನ್ ಹೆಟ್ನೆ, ಪೂರ್ವೋಕ್ತ. ಪು. 17-18*

ನಾಲ್ವಡಿಯವರ ಧೋರಣೆ ಈ ಸಂದರ್ಭದಲ್ಲಿ ಜನಪರವಾಗಿತ್ತು ಎಂದು ಹೆಟ್ನೆ ಅಭಿಪ್ರಾಯಪಟ್ಟಿದ್ದಾರೆ[21].

ಜೇಮ್ಸ್ ಮ್ಯಾನೋರ್‌ರಂತೆ ಬಿಜೋರ್ನ್ ಹೆಟ್ನೆಯವರು ತಮ್ಮ ಅಧ್ಯಯನ ಕಾಲದ ರಾಜಕೀಯ ಬೆಳವಣಿಗೆಯನ್ನು ವಿಶ್ಲೇಷಿಸುತ್ತಾ ಮೈಸೂರಿನ ಆಧುನಿಕ ರಾಜಕೀಯ ವ್ಯವಸ್ಥೆಯಲ್ಲಿ ಎರಡು ವೈರುಧ್ಯಗಳು ಕಾಣಿಸಿಕೊಂಡವು ಎಂದಿದ್ದಾರೆ. ಅವುಗಳೆಂದರೆ ;

i) ಸಂಪ್ರದಾಯಬದ್ಧವಾದ ಆದರೆ ಸ್ಪಂದನವುಳ್ಳ ಧೋರಣೆ.

ii) ಆಧುನಿಕ ರೀತಿಯ ಪಾಶ್ಚಿಮಾತ್ಯ ಮಾದರಿಯ ಪಾರ್ಲಿಮೆಂಟರಿ ಸಿದ್ಧಾಂತ.

ಹಾಗೆಯೇ ಹೆಟ್ನೆಯವರು ಆಧುನಿಕ ಮೈಸೂರಿನಲ್ಲಿ ಮೂರು, ಅದರಲ್ಲೂ ನಾಲ್ವಡಿಯವರ ಕಾಲದಲ್ಲಿ ಎರಡು ಪ್ರಾತಿನಿಧ್ಯ ಸಂಸ್ಥೆಗಳನ್ನು ಸ್ಥಾಪಿಸಲಾಯಿತು ಎಂದಿದ್ದಾರೆ. ಅವುಗಳೆಂದರೆ ;

i) ಪ್ರಜಾಪ್ರತಿನಿಧಿ ಸಭೆ (1881)

ii) ಲೆಜಿಸ್ಲೇಟಿವ್ ಕೌನ್ಸಿಲ್ (1907)

iii) ಮೈಸೂರು ಆರ್ಥಿಕ ಸಂಸ್ಥೆ (1911)

ಇವುಗಳನ್ನು ಸ್ಥಾಪಿಸುವ ಉದ್ದೇಶಗಳೇನು? ಹೆಟ್ನೆಯವರ ಪ್ರಕಾರ ಅಧಿಕಾರದ ಅಡಿಪಾಯವನ್ನು ವಿಸ್ತರಿಸುವುದು ಮತ್ತು ಮಾಹಿತಿಯ ಜಾಲವನ್ನು ಸೃಷ್ಟಿಸಿ ಆ ಮೂಲಕ ಸಮಾಜವನ್ನು ನಿಯಂತ್ರಿಸುವುದು. ಈ ಕ್ರಿಯೆ ನಾಲ್ವಡಿಯವರ ಕಾಲಕ್ಕೆ ಅತ್ಯಂತ ಅನಿವಾರ್ಯದ ಅವಶ್ಯಕತೆಯಾಗಿತ್ತು. ಈ ಮೂಲಕವೇ ಅವರು ತಮ್ಮ ಸಂಸ್ಥಾನವನ್ನು ಒಂದು ನವೀನ ರೀತಿಯ ಅರೆ-ಸ್ವಾಯತ್ತತೆಯ ಸ್ಥಾನದ ಕಡೆಗೆ ಕೊಂಡು ಹೋಗಬೇಕಾಗಿದ್ದಿತು[22].

ಒಟ್ಟಾರೆ ಈ ಎರಡು ಗ್ರಂಥಗಳು ಪಾಶ್ಚಿಮಾತ್ಯ ದೃಷ್ಟಿಕೋನದ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನದ ಇತಿಹಾಸವನ್ನು ನೋಡುವಂತಹವುಗಳಾಗಿದ್ದು, ಈ ಕುರಿತು ಅಧ್ಯಯನ ನಡೆಸುವ ಪ್ರತಿಯೊಬ್ಬ ಸಂಶೋಧಕರಿಗೂ ಸಹ ಹಲವಾರು ರೀತಿಯಲ್ಲಿ ಸಹಕರಿಸುವುದರ ಜೊತೆಗೆ ಹೊಸ ಹೊಸ ಆಯಾಮಗಳನ್ನು ರೂಪಿಸಿಕೊಳ್ಳಲು ಸಹ ಸಂಶೋಧಕರಿಗೆ ಮಾರ್ಗದರ್ಶಕ ಗ್ರಂಥಗಳಾಗಿವೆ. ನಮ್ಮ ಪ್ರಸಕ್ತ ಅಧ್ಯಯನಕ್ಕೆ ಈ ಗ್ರಂಥಗಳಲ್ಲಿನ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ.

---

*22. ಅದೇ., ಪು. 18*

ಬೆಂಗಳೂರು ವಿಶ್ವವಿದ್ಯಾನಿಲಯದ ಉಪನ್ಯಾಸಕರಾಗಿದ್ದ ಆರ್. ರಾಮಕೃಷ್ಣನ್ ರವರು 1997ರಲ್ಲಿ ಪ್ರಕಟಿಸಿರುವ "ಪ್ರೆಸ್ ಅಂಡ್ ಪಾಲಿಟಿಕ್ಸ್ ಇನ್ ಅನ್ ಇಂಡಿಯನ್ ಸ್ಟೇಟ್-ಮೈಸೂರ್ (1859-1947)" ಎಂಬ ಸಂಶೋಧಿತ ಗ್ರಂಥದಲ್ಲಿ ಮೈಸೂರು ರಾಜ್ಯದಲ್ಲಿ 1859 ರಿಂದ 1947ರ ಅವಧಿಯಲ್ಲಿ ಪತ್ರಿಕೋದ್ಯಮಕ್ಕೂ ಮತ್ತು ರಾಜಕೀಯಕ್ಕೂ ನಡುವೆ ಇದ್ದ ಸಂಬಂಧಗಳನ್ನು ಮುಖ್ಯವಾಗಿ ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. ಆಧುನಿಕ ಮೈಸೂರಿನ ಇತಿಹಾಸದಲ್ಲಿ 19ನೇ ಶತಮಾನದ ಪೂರ್ವಾರ್ಧದಲ್ಲಿ ಪತ್ರಿಕೆಗಳು ಕಾಣಿಸಿಕೊಂಡವು. ಅವುಗಳು ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಪ್ರಕಟಗೊಳ್ಳುತ್ತಿದ್ದವು. ಇಂತಹ ಸುಮಾರು 53 ಪತ್ರಿಕೆಗಳನ್ನು ಗ್ರಂಥಕರ್ತರು ಗುರುತಿಸಿದ್ದಾರೆ. ಮೈಸೂರು ಪ್ರದೇಶದ ಎಲ್ಲಾ ಚಳವಳಿಗಳಲ್ಲೂ ಪತ್ರಿಕೆಗಳು ತಮ್ಮದೇ ಆದ ಪಾತ್ರವನ್ನು ನಿರ್ವಹಿಸಿದವು. ಸಾಮಾಜಿಕ ಪರಿವರ್ತನೆಗಳು ಅವಶ್ಯಕವಾದಾಗ ಇಲ್ಲಿನ ಪತ್ರಿಕೆಗಳು ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿದವು.

ಸಾಮಾಜಿಕ ಸುಧಾರಣೆಗಳ ದೃಷ್ಟಿಯಿಂದ ಪತ್ರಿಕೆಗಳು ನಿರ್ವಹಿಸಿದ ಪಾತ್ರವನ್ನು ಈ ಗ್ರಂಥ ಅತ್ಯಂತ ಸ್ಥೂಲವಾಗಿ ಪ್ರಸ್ತಾಪಿಸುತ್ತದೆ. ಈ ವಿಷಯವನ್ನು ಇಲ್ಲಿ ಸಂಗ್ರಹವಾಗಿ ಪರಿಚಯಿಸಬಹುದು. 19ನೇ ಶತಮಾನದ ಉತ್ತರಾರ್ಧವು ಭಾರತದಲ್ಲಿ ಪ್ರಭಾವ ಪೂರ್ಣ ಸಾಮಾಜಿಕ ಸುಧಾರಣೆಗಳು ನಡೆದ ಕಾಲವೆಂದು ಹೇಳಬಹುದು. ಆದರೆ ಮೈಸೂರು ಸಂಸ್ಥಾನ ಇಂತಹ ಸಾಮಾಜಿಕ ಸುಧಾರಣೆಗಳನ್ನು ಸ್ವಾಗತಿಸಲು ಸ್ವಲ್ಪ ವೇಳೆಯನ್ನು ತೆಗೆದುಕೊಂಡಿತು. ಆರ್. ರಾಮಕೃಷ್ಣನ್ ರವರ ಪ್ರಕಾರ ಮೈಸೂರಿನ ಸಾಮಾಜಿಕ ಸುಧಾರಣೆಗಳಿಗೆ ಬಂಗಾಳ, ಬೊಂಬಾಯಿ ಮತ್ತು ಮದ್ರಾಸ್ ಪ್ರಾಂತ್ಯಗಳು ಮಾದರಿಯಾಗಿದ್ದವು. ಅವುಗಳ ಮಾದರಿಯನ್ನು ಮೈಸೂರು ನಕಲು ಮಾಡಿತು ಎಂಬುದಾಗಿದೆ. ಆದರೆ ಭಾರತದ ಮಟ್ಟದಲ್ಲಿ ಸಂಘಟಿಸುತ್ತಿದ್ದ ಪರಿವರ್ತನಾ ಚಳವಳಿಗಳನ್ನು ಮೈಸೂರು ಸುಮ್ಮನೆ ನೋಡುತ್ತಾ ಕುಳಿತುಕೊಳ್ಳುವುದು ಅಸಾಧ್ಯದ ಮಾತಾಗಿತ್ತು.

ಶಿಕ್ಷಣದ ಹರಡುವಿಕೆಯಿಂದ ಮೈಸೂರಿನ ಹಿಂದೂಗಳು ತಮ್ಮ ಸಮಾಜದಲ್ಲಿ ಸುಧಾರಣೆಯನ್ನು ತರುವ ಅವಶ್ಯಕತೆಯನ್ನು ಕಂಡುಕೊಂಡರು ಎಂಬುದು ಗ್ರಂಥಕರ್ತರ ಮತ್ತೊಂದು ಅಭಿಪ್ರಾಯ. ಇದಲ್ಲದೇ ಕ್ರೈಸ್ತ ಮಿಷನರಿಗಳು ಹಿಂದೂ ಸಮಾಜದ ಅನೇಕ ಕಟ್ಟಳೆಗಳನ್ನು, ಆಚರಣೆಗಳನ್ನು, ಸಂಪ್ರದಾಯಗಳನ್ನು ತೀಕ್ಷ್ಣವಾಗಿ ಟೀಕಿಸಿದ್ದು ಮತ್ತು ಮೌಢ್ಯವನ್ನು ಎತ್ತಿ ತೋರಿಸಿದ್ದೂ ಸಹ ಇಲ್ಲಿನ ಸಾಮಾಜಿಕ ಸುಧಾರಣೆಗೆ ಪ್ರಚೋದನೆ ನೀಡಿತು ಎಂದು ಈ ಹಾದಿಯಲ್ಲಿ ಕರ್ನಾಟಕ ಪ್ರಕಾಶಿಕ ಪತ್ರಿಕೆಯ ನಿಲುವುಗಳನ್ನು ವಿವರಿಸಿದ್ದಾರೆ[23].

---

23. ***ರಾಮಕೃಷ್ಣನ್ ಆರ್.,*** *ಪ್ರೆಸ್ ಅಂಡ್ ಪಾಲಿಟಿಕ್ಸ್ ಇನ್ ಅನ್ ಇಂಡಿಯನ್ ಸ್ಟೇಟ್ - ಮೈಸೂರ್ (1859-1947), ಚನ್ನರಾಯಪಟ್ಟಣ, 1997, ಪು. 35-36*

ಕರ್ನಾಟಕ ಪ್ರಕಾಶಿಕ ಎಂಬ ಆಧುನಿಕ ಮೈಸೂರಿನ ಕನ್ನಡ ಪತ್ರಿಕೆ ಆರಂಭದಲ್ಲೇ ಸುಧಾರಣೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಪ್ರಕಟಿಸುತ್ತಾ ಬಂದಿತು. ಮುಖ್ಯವಾಗಿ ಮದ್ರಾಸ್, ಬೊಂಬಾಯಿ ಮತ್ತು ಬಂಗಾಳ ಪ್ರಾಂತ್ಯಗಳಲ್ಲಿ ಸಾಮಾಜಿಕ ಚಳವಳಿಗಳ ಬಗೆಗೆ ನಡೆಯುತ್ತಿದ್ದ ವಾದ-ವಿವಾದಗಳನ್ನು ಈ ಪತ್ರಿಕೆ ಪ್ರಕಟಿಸುತ್ತಿತ್ತು. ಆದರೆ ತನ್ನ ಅಭಿಪ್ರಾಯವನ್ನು ತಿಳಿಸುವಾಗ ಅದು ಎಚ್ಚರಿಕೆಯ ಹಾದಿಯಲ್ಲಿ ನಡೆಯುತ್ತಿತ್ತು. ಅದರ ಧೋರಣೆ ಹಿಂದೂ ಸಮಾಜವನ್ನು ಸಾರಾಸಗಟಾಗಿ ಸುಧಾರಿಸುವುದಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿತು. ಒಂದೇ ಕಂತಿನಲ್ಲಿ ಮೈಸೂರಿನ ಸಮಾಜವನ್ನು ಪಾಶ್ಚೀಮಾತೀಕರಿಸುವುದನ್ನು ಅದು ಅನುಮೋದಿಸಲಿಲ್ಲ. ಶಾಸ್ತ್ರಗಳ ಚೌಕಟ್ಟಿನ ಒಳಗೆ ಹಿಂದೂ ಸಮಾಜ ಸುಧಾರಿಸಿಕೊಳ್ಳಬೇಕೆನ್ನುವ ಧೋರಣೆಗೆ ಪ್ರಕಾಶಿಕ ಪತ್ರಿಕೆ ಬದ್ಧವಾಗಿದ್ದಿತು. ಪಾಶ್ಚಿಮಾತ್ಯ ವಿದ್ಯಾಭ್ಯಾಸವನ್ನು ಪಡೆದುಕೊಂಡಿದ್ದ ಯುವಕರು ಕುರುಡರಂತೆ ಪಾಶ್ಚಿಮಾತ್ಯರ ಪ್ರತಿಯೊಂದು ಆಚಾರ-ವಿಚಾರಗಳನ್ನು ಅನುಕರಿಸುವುದರ ವಿರುದ್ಧ ಎಚ್ಚರಿಕೆಯನ್ನು ಈ ಪತ್ರಿಕೆ ನೀಡುತ್ತಿತ್ತು. ಪಾಶ್ಚಿಮಾತ್ಯರ ಪ್ರಭಾವದಿಂದ ಮೈಸೂರಿನ ಹಿಂದೂ ಸಮಾಜದಲ್ಲಿದ್ದ ವಾಸ್ತವಿಕವಾದ ಅಮಾನುಷ ಹಾಗೂ ದೋಷಪೂರ್ಣ ಆಚಾರ-ವಿಚಾರಗಳನ್ನು ಮಾರ್ಪಡಿಸುವಂತೆ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆದುಕೊಂಡ ಯುವಕ ವರ್ಗಕ್ಕೆ ಈ ಪತ್ರಿಕೆ ಕರೆಕೊಟ್ಟಿತು. ಹಿಂದೂ ಸಮಾಜದ ವಿಧವೆಯರು ಪುನಃ ವಿವಾಹ ಮಾಡಿಕೊಳ್ಳುವ ಸುಧಾರಣಾ ಮನೋಭಾವವನ್ನು ಪ್ರಕಾಶಿಕ ಪತ್ರಿಕೆ 1877ರಿಂದಲೇ ತನ್ನ ಅನೇಕ ಲೇಖನಗಳಲ್ಲಿ ಪ್ರತಿಪಾದಿಸಿತು. ಈ ಪತ್ರಿಕೆಯು ಪಾಶ್ಚಿಮಾತ್ಯ ರೀತಿಯ ವಿವಾಹ ವಿಚ್ಛೇದನವನ್ನು ವಿರೋಧಿಸಿತು. ಭಾರತೀಯ ನಾರಿಯರು ಪಾಶ್ಚಿಮಾತ್ಯ ಸುಧಾರಕರ ಧೋರಣೆಯಂತೆ ವಿಮೋಚನಾ ಹಾದಿ ಹಿಡಿಯುವುದನ್ನು ಈ ಪತ್ರಿಕೆ ಒಪ್ಪಲಿಲ್ಲ. ಆದರೆ ಹಿಂದೂಗಳು ಹೆಚ್ಚು ಖರ್ಚಿಗೆ ಅವಕಾಶ ಮಾಡಿಕೊಡುವ ಅನಾವಶ್ಯಕವಾದ ಆಚರಣೆಗಳನ್ನು ಕೈಬಿಡಬೇಕೆಂದು ಈ ಪತ್ರಿಕೆ ಸಾರಿತು. ಸಾಮಾಜಿಕ ಸುಧಾರಣೆಯ ವಿಷಯದಲ್ಲಿ ಪ್ರಕಾಶಿಕಾ ಪತ್ರಿಕೆಯ ನಿಲುವು ಈ ರೀತಿ ಇದ್ದಿತು : ಸಾಮಾಜಿಕ ಸುಧಾರಣೆಯು ಸಮಾಜದ ಒಳಗೆ ಪ್ರಯತ್ನಪೂರ್ವಕವಾಗಿ ಒಡಮೂಡಿದಾಗ ಮಾತ್ರ ಅಂತಹ ಸುಧಾರಣೆಗಳನ್ನು ಜಾರಿಗೆ ತರಬೇಕು ಮತ್ತು ಸರ್ಕಾರವು ಅಂತಹ ವಿಷಯಗಳಲ್ಲಿ ಮಧ್ಯ ಪ್ರವೇಶಮಾಡಬಾರದು ಎಂಬುದು ಆ ಪತ್ರಿಕೆಯ ನಿಲುವಾಗಿತ್ತೆಂದು ತಿಳಿಸಿದ್ದಾರೆ[24].

ಮೈಸೂರು ಸರ್ಕಾರ 1894ರಲ್ಲಿ ಬಾಲ್ಯವಿವಾಹ ನಿಷೇಧ ಶಾಸನವನ್ನು ಜಾರಿಗೊಳಿಸಿತು. ಇದು ಸರ್ಕಾರ ಹೊರತಂದ ಬಹುಮುಖ್ಯವಾದ ಸಾಮಾಜಿಕ ಸುಧಾರಣಾ ಶಾಸನ. ಇದಕ್ಕೆ ಮೈಸೂರಿನ ಪ್ರಮುಖ ಪತ್ರಿಕೆಗಳು ಬೆಂಬಲ ನೀಡಿದವು. ಹಾಗೆಯೇ ಈ ಶಾಸನದ ಬಗ್ಗೆ ಸಾಕಷ್ಟು ಸಾರ್ವಜನಿಕ ವಿರೋಧ ವ್ಯಕ್ತಪಟ್ಟಿತು. ಆದಾಗ್ಯೂ ಈ ಶಾಸನವನ್ನು ಜಾರಿಗೊಳಿಸಲಾಯಿತು. ಈ ಶಾಸನವನ್ನು ಕಠಿಣವಾಗಿ ಆಚರಣೆಗೆ ತರದೇ ಇದ್ದರೂ ಸಹ, ಅಂತಹ ಒಂದು

---

*24. ರಾಮಕೃಷ್ಣನ್ ಆರ್., ಪೂರ್ವೋಕ್ತ. ಪು. 36*

*25. ಅದೇ.*

ಬಹುಮುಖ್ಯವಾದ ಶಾಸನವನ್ನು ಮಾಡಿದ್ದೇ ಒಂದು ಪ್ರಮುಖ ಘಟ್ಟವೆನ್ನಬಹುದು. ಇದರಿಂದಾಗಿ ಮೈಸೂರಿನ ಖ್ಯಾತಿ ಎಲ್ಲಾ ಕಡೆ ಹರಡಿತು[25] ಎಂಬುದಾಗಿ ಉಲ್ಲೇಖಿಸಿದ್ದಾರೆ. ಹೀಗೆ ರಾಮಷ್ಣನ್‌ರವರ ಗ್ರಂಥವು ಪತ್ರಿಕೋದ್ಯಮದ ಬೆಳವಣಿಗೆಯ ದೃಷ್ಟಿಯಿಂದ ಒಂದು ಉತ್ತಮವಾದ ಕೃತಿಯಾಗಿದೆ. ಆದರೆ ಮೈಸೂರು ಸಂಸ್ಥಾನದ ಸಾಮಾಜಿಕ ಪರಿವರ್ತನೆಯ ದೃಷ್ಟಿಯಿಂದ ಪತ್ರಿಕೆಗಳು ಬೀರಿದ ಪ್ರಭಾವವನ್ನು ಈ ಗ್ರಂಥದಲ್ಲಿ ಹೆಚ್ಚಾಗಿ ಪ್ರಸ್ತಾಪಿಸಿಲ್ಲ.

ಎಸ್. ಚಂದ್ರಶೇಖರ್ ರವರ "ಡೈಮೆನ್ಷನ್ಸ್ ಆಫ್ ಸೋಷಿಯೋ-ಪೊಲಿಟಿಕಲ್ ಛೇಂಜ್ ಇನ್ ಮೈಸೂರ್ 1918-40" ಎಂಬ ಗ್ರಂಥವು 1985ರಲ್ಲಿ ಪ್ರಕಟಗೊಂಡಿದೆ. ಈ ಗ್ರಂಥವು 13 ಅಧ್ಯಾಯಗಳಿಂದ ಕೂಡಿದೆ. ಈ ಗ್ರಂಥದ ಆರಂಭದಲ್ಲಿನ 'ದಿ ಪರ್ಸ್‌ಪೆಕ್ಟಿವ್' ಎಂಬ ಭಾಗದಲ್ಲಿ ಇಡೀ ಮೈಸೂರಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಿನ್ನೆಲೆಯಲ್ಲಿ ಸಾಮಾಜಿಕ-ರಾಜಕೀಯ ಬದಲಾವಣೆಗಳ ಸ್ಥೂಲ ಚಿತ್ರಣವನ್ನು ಲೇಖಕರು ನೀಡಿದ್ದಾರೆ. ಪಾಶ್ಚಿಮಾತ್ಯ ಪ್ರಭಾವವು ಮೈಸೂರು ಸಮಾಜದ ಎಲ್ಲ ಸ್ತರ ಮತ್ತು ಗುಂಪುಗಳ ಮೇಲೆ ಹಾಗೂ ವಿವಿಧ ಪ್ರದೇಶಗಳ ಮೇಲೆ ಏಕ ಪ್ರಕಾರವಾಗಿ ಪರಿಣಾಮ ಬೀರಲಿಲ್ಲವೆಂದೂ, ಪಾಶ್ಚಿಮಾತ್ಯ ಪ್ರಭಾವದ ಬದಲಾವಣೆಗಳು "ಪ್ರಾರಂಭದಲ್ಲಿ ಸಮಾಜದ ಹೊರ ಪರಿಧಿಯಲ್ಲಿದ್ದ ಚಿಕ್ಕಗುಂಪುಗಳ ಮೇಲಾಯಿತೆಂದು[26] ಉಲ್ಲೇಖಿಸುತ್ತಾ ಕುಲ್ಕೆ ಎಕೆಹಾರ್ಡ್‌ರವರ ಅಭಿಪ್ರಾಯವನ್ನು ಸಮರ್ಥಿಸಿಕೊಂಡಿದ್ದಾರೆ.

ಎಸ್. ಚಂದ್ರಶೇಖರ್ ರವರು ಗ್ರಂಥದ ಮೊದಲ ಅಧ್ಯಾಯದಲ್ಲಿ 1918ಕ್ಕಿಂತ ಹಿಂದಿನ ಮೈಸೂರಿನ ಸ್ಥೂಲ ಚಿತ್ರಣ ಹಾಗೂ ಆಧುನಿಕ ನಿಟ್ಟಿನಲ್ಲಿ ಬೆಳವಣಿಗೆಗೊಂಡ ಸಂಸ್ಥಾನದ ಆಡಳಿತಾತ್ಮಕ ವ್ಯವಸ್ಥೆಯ ಸ್ಥಾಪನೆಯ ಬಗ್ಗೆ ತಿಳಿಸುತ್ತಾ 'ಮದ್ರಾಸಿಗಳು' ಮತ್ತು 'ಮೈಸೂರಿಯನ್ನರು' ಎಂಬ ಪ್ರಾದೇಶಿಕ ಸಂಘರ್ಷದಿಂದ ಹಿಂದುಳಿದ ವರ್ಗಗಳು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹೇಗೆ ಉನ್ನತ ಸ್ಥಾನಕ್ಕೆ ಬಂದವು ಎಂಬುದರ ಬಗ್ಗೆ ತಿಳಿಸಿದ್ದಾರೆ. ಹಾಗೆಯೇ ರಾಜ್ಯ ಬೆಂಬಲಿತ ಸಮಾಜೋ-ರಾಜಕೀಯ ಸುಧಾರಣೆಗಳು ಹಾಗೂ ಅದರಿಂದ ಬಹುಸಂಖ್ಯಾತ ಸಾಮಾಜಿಕ ಗುಂಪುಗಳಲ್ಲಿ ಉಂಟಾದ ಜಾಗೃತಿಯ ಬಗ್ಗೆಯೂ ಚರ್ಚಿಸಿದ್ದಾರೆ.

ಎರಡನೇ ಅಧ್ಯಾಯದಲ್ಲಿ ಬ್ರಾಹ್ಮಣೇತರ ಗುಂಪುಗಳು ತಕ್ಷಣಕ್ಕೆ ಗಳಿಸಿದ ಸವಲತ್ತು ಮತ್ತು ಬೆಳವಣಿಗೆಯ ಬಗ್ಗೆ, ಮೂರನೇ ಅಧ್ಯಾಯವು ಬ್ರಾಹ್ಮಣೇತರ ಚಳವಳಿ ಮತ್ತು ಗುಂಪುಗಳಲ್ಲಿ ಉಂಟಾದ ಸಂಘರ್ಷ, ಬಿರುಕುಗಳು ತದನಂತರ ಅದರ ಅವನತಿ, ರಾಜ್ಯದ ಬದಲಾದ ನೀತಿ, ಬ್ರಾಹ್ಮಣವರ್ಗ ಅನುಸರಿಸಿದ ರಾಜಕೀಯ ಮಾರ್ಗಗಳ ಬಗ್ಗೆ ಚರ್ಚಿಸಿದ್ದಾರೆ. ನಾಲ್ಕನೇ ಅಧ್ಯಾಯವು ದಲಿತವರ್ಗದ ಸಮಸ್ಯೆಗಳು, ವಿವಿಧ ಸಾಮಾಜಿಕ ವರ್ಗಗಳು ಅದರ ಬಗ್ಗೆ

---

*26. ಚಂದ್ರಶೇಖರ್ ಎಸ್., ಡೈಮನ್ಷನ್ಸ್ ಆಫ್ ಸೋಷಿಯೋ-ಪೊಲಿಟಿಕಲ್ ಛೇಂಜ್ ಇನ್ ಮೈಸೂರ್ 1918-40, ನ್ಯೂ ಡೆಲ್ಲಿ, 1985, ಪು. 3*

ಹೊಂದಿದ್ದ ಅಭಿಪ್ರಾಯ, ಆ ಗುಂಪಿಗಾಗಿ ಕೈಗೊಂಡ ರಾಜ್ಯದ ನೀತಿಗಳು, ಕ್ರಮಗಳು ಈ ಬಗ್ಗೆ ತಿಳಿಸುತ್ತಾ ದೇವಸ್ಥಾನ ಪ್ರವೇಶ ಚಳವಳಿ ಮತ್ತು ಅಸ್ಪೃಶ್ಯತಾ ವಿರೋಧಿ ಚಟುವಟಿಕೆಗಳ ಬಗ್ಗೆ ಬೆಳಕನ್ನು ಚೆಲ್ಲುತ್ತದೆ. ನಂತರದ ಅಧ್ಯಾಯದಲ್ಲಿ ಕಾರ್ಮಿಕ ಸಂಘಟನೆಗಳು, ಕಾರ್ಮಿಕ ವರ್ಗದಲ್ಲಿ ಉಂಟಾದ ಜಾಗೃತಿ, ಅವರು ರಾಜಕೀಯ ಪಕ್ಷಗಳೊಂದಿಗೆ ಹೊಂದಿದ್ದ ಸಂಬಂಧ, ಅವರ ಬೇಡಿಕೆ ಹಾಗೂ ಚಳವಳಿಗಳ ಬಗ್ಗೆ ರಾಜ್ಯ ಹೊಂದಿದ್ದ ನಿಲುವುಗಳ ಬಗ್ಗೆ ಚರ್ಚಿಸಲಾಗಿದೆ. ಆರನೇ ಅಧ್ಯಾಯವು ಪತ್ರಿಕೆಗಳ ನಿಲುವು, ಅದರಿಂದ ರಾಜ್ಯದ ಮೇಲಾದ ಪರಿಣಾಮ ಹಾಗೂ ರಾಜ್ಯ ಅನುಸರಿಸಿದ ನೀತಿಗಳ ಬಗ್ಗೆ ಮಾಹಿತಿ ನೀಡುತ್ತದೆ. ಏಳನೇ ಅಧ್ಯಾಯವು ಮೈಸೂರು ರಾಜ್ಯದಲ್ಲಿ ಕೋಮುವಾದದ ಬೆಳವಣಿಗೆ, ಕೋಮುವಾದವು ಕೆಲವು ರಾಜಕೀಯ ಗುಂಪುಗಳಿಂದ ರೂಪುಗೊಂಡಿದ್ದೇ? ಎಂಬ ಪ್ರಶ್ನೆಗಳೊಂದಿಗೆ ಚರ್ಚಿಸುತ್ತದೆ. ಕೋಮುವಾದದ ಪ್ರಭಾವದಿಂದಾಗಿ ರಾಜ್ಯದ ಬದಲಾದ ನೀತಿಗಳ ಬಗ್ಗೆಯೂ ತಿಳಿಸುತ್ತದೆ.

ಎಂಟನೇ ಮತ್ತು ಒಂಭತ್ತನೇ ಅಧ್ಯಾಯಗಳು ರಾಜಕೀಯ ಮತ್ತು ಸಾಂವಿಧಾನಿಕ ಸುಧಾರಣೆಗಳು, ಬೆಳವಣಿಗೆಗಳು ಮತ್ತು ಅದರಿಂದ ವಿವಿಧ ಸಾಮಾಜಿಕ ಗುಂಪುಗಳಲ್ಲಿ ಉಂಟಾದ ಜಾಗೃತಿ ಮತ್ತು ರಾಜಕೀಯ ನಿಲುವುಗಳ ಬಗ್ಗೆಯೂ, ಹತ್ತನೇ ಅಧ್ಯಾಯವು ಸ್ಥಳೀಯ-ಸ್ವ ಸರ್ಕಾರದ ಸ್ಥಾಪನೆ, ರಾಜಕೀಯ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಎಷ್ಟರ ಮಟ್ಟಿಗೆ ಸ್ವಯಂ ಆಡಳಿತವನ್ನು ನೀಡಲಾಯಿತೆಂಬ ಬಗ್ಗೆ ತಿಳಿಸುತ್ತದೆ. ನಂತರದ ಅಧ್ಯಾಯವು ರಾಜ್ಯವು ಅನುಸರಿಸಿದ ಶೈಕ್ಷಣಿಕ ನೀತಿ ಮತ್ತು ವಿವಿಧ ಮಟ್ಟದ ಶಿಕ್ಷಣಕ್ಕೆ ರಾಜ್ಯ ವಿನಿಯೋಗಿಸುವ ವೆಚ್ಚದ ಬದಲಾದ ಪ್ರಮಾಣ ಮತ್ತು ನೀತಿಗಳ ಬಗ್ಗೆ ಮಾಹಿತಿ ನೀಡಿದರೆ ಹನ್ನೆರಡನೇ ಅಧ್ಯಾಯವು ರಾಜ್ಯದ ಆರ್ಥಿಕ ಬೆಳವಣಿಗೆಗಳ ಬಗ್ಗೆ, ರಾಜ್ಯದ ಮುಖ್ಯಸ್ಥರು ಅನುಸರಿಸಿದ, ಬದಲಾಯಿಸಿದ, ವಿರೋಧಿಸಿದ ನೀತಿ ಮತ್ತು ನಿಲುವಿನ ಬಗ್ಗೆ ಹಾಗೂ ರಾಜ್ಯದ ವಿವಿಧ ಕ್ಷೇತ್ರಗಳಲ್ಲಿ ಉಂಟಾದ ಬೆಳವಣಿಗೆಗಳ ಬಗ್ಗೆ ತಿಳಿಸುತ್ತದೆ. ಕೊನೆಯ ಅಧ್ಯಾಯವು ಉಪಸಂಹಾರದೊಂದಿಗೆ ಕೊನೆಗೊಳ್ಳುತ್ತದೆ.

ಹೀಗೆ ಮೇಲ್ಕಂಡಂತೆ ಈ ಗ್ರಂಥವು ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲವನ್ನೇ ಒಳಗೊಂಡಿದ್ದು, ಆ ಕಾಲದ ರಾಜಕೀಯ, ಆರ್ಥಿಕ, ಸಾಮಾಜಿಕ ಬದಲಾವಣೆ, ಬೆಳವಣಿಗೆಗಳ ಬಗ್ಗೆ ಹೊಸ ದೃಷ್ಟಿಕೋನದಲ್ಲಿ ವ್ಯಾಖ್ಯಾನಿಸುತ್ತದ. ಆದರೂ ಇಷ್ಟೆಲ್ಲಾ ಬೆಳವಣಿಗೆಗಳ ಹಿಂದೆ ನಾಲ್ವಡಿ ಕೃಷ್ಣರಾಜ ಒಡೆಯರ ಪಾತ್ರವೇನು? ಎಂಬ ಬಗ್ಗೆ ಈ ಗ್ರಂಥ ಹೆಚ್ಚಾಗಿ ಹೇಳದೆ ದಿವಾನರು ಈ ಎಲ್ಲಾ ಬೆಳವಣಿಗೆಗಳ ಹಿಂದಿನ ಕಾರಣಕರ್ತರು ಎಂಬಂತೆ ಚಿತ್ರಣ ನೀಡುತ್ತದೆ. ಆದರೆ ಅಂದಿನ ಕಾಲದಲ್ಲಿ ಯಾವುದೇ ಕಾರ್ಯಗಳು ಅಸ್ತಿತ್ವಕ್ಕೆ ಬರುವಲ್ಲಿ ರೆಸಿಡೆಂಟ್-ದಿವಾನ-ಮಹಾರಾಜರ

ನಡುವಿನ ಸಲಹೆ, ಸಹಕಾರ ಹಾಗೂ ಒಪ್ಪಿಗೆಗಳು ಬಹಳ ಮುಖ್ಯವಾಗಿದ್ದವೆಂಬುದನ್ನು ಮರೆಯಬಾರದು. ಈ ರೀತಿಯ ಸಹಕಾರ, ಒಪ್ಪಿಗೆಗಳು ಸಿಗದೇ ಎಷ್ಟೋ ಕಾರ್ಯಗಳು ಅನುಷ್ಠಾನಕ್ಕೆ ಬಾರದೆ ಇರುವ, ಆ ಹಿನ್ನೆಲೆಯಲ್ಲೇ ಅಧಿಕಾರಿಗಳ ಬದಲಾವಣೆಯ ಅಂಶಗಳನ್ನು ಸಹ ಗುರುತಿಸಬಹುದಾಗಿದೆ. ಅಂದರೆ ತ್ರಿಶಕ್ತಿ ಕೇಂದ್ರದ ಆಡಳಿತ ವ್ಯವಸ್ಥೆಯು ಮೈಸೂರಿನ ಇತಿಹಾಸದಲ್ಲಿ ದಿವಾನರಿಗೆ ಹೆಚ್ಚಿನ ಮಹತ್ವ ನೀಡುತ್ತಾ ಇಲ್ಲಿ ನಾಲ್ವಡಿಯವರ ಪಾತ್ರವನ್ನು ಕಡೆಗಣಿಸಿರುವುದು ಅಷ್ಟು ಸಮಂಜಸವಲ್ಲವೆಂದು ಕಾಣುತ್ತದೆ ಹಾಗೂ ಇದು ಮೈಸೂರಿನ ಇತಿಹಾಸ ರಚನೆಯಲ್ಲೇ ವ್ಯಕ್ತವಾಗಿರುವ ದೋಷವೂ ಆಗಿದೆ. ಆದರೂ ಈ ಗ್ರಂಥವು ನಮ್ಮ ಅಧ್ಯಯನ ಕಾಲದಲ್ಲಿ ರಾಜ್ಯ ಬೆಂಬಲಿತ ಸಮಾಜೋ ರಾಜಕೀಯ ಸುಧಾರಣೆಗಳು ಹೇಗೆ ಬಹುಸಂಖ್ಯಾತ ಸಾಮಾಜಿಕ ಗುಂಪುಗಳಲ್ಲಿ ಜಾಗೃತಿಯನ್ನು ಮೂಡಿಸಿದವು ಎಂಬ ವಿಚಾರಗಳನ್ನು ತಿಳಿಸುವಲ್ಲಿ ಸಾಕಷ್ಟು ಸಹಕಾರಿಯುತ ಮಾಹಿತಿಯನ್ನು ಹಾಗೂ ಸಂಶೋಧಕರಿಗೆ ವಿವಿಧ ದೃಷ್ಟಿಕೋನವನ್ನು ನೀಡುವ ಸಂಶೋಧನಾ ಗ್ರಂಥವೂ ಆಗಿದ್ದು ನಮ್ಮ ಅಧ್ಯಯನಕ್ಕೆ ಸಹಕಾರಿಯಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಅಧ್ಯಯನ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದು, ನಿವೃತ್ತಿ ಹೊಂದಿರುವ ಮಾದೇಗೌಡರವರ "ಮಾಡರ್ನ್ ಮೈಸೂರ್ ಸ್ಟೇಟ್ - 1881-1902. ಎ ಸ್ಟಡಿ ಆಫ್ ದಿ ಎಲೀಟ್, ಪಾಲಿಟಿ ಆಂಡ್ ಸೊಸೈಟಿ, ಮೈಸೂರು," ಎಂಬ ಪ್ರಕಟಿತ ಮಹಾಪ್ರಬಂಧವು ಕಾಲಮಾನದ ದೃಷ್ಟಿಯಿಂದ ಪ್ರಧಾನವಾಗಿ ನಮ್ಮ ಅಧ್ಯಯನ ಕಾಲದ ಚೌಕಟ್ಟಿಗೆ ಪೂರ್ಣ ಪ್ರಮಾಣದಲ್ಲಿ ಬರುವುದಿಲ್ಲವಾದರೂ ನಾಲ್ವಡಿಯವರು ಅಪ್ರಾಪ್ತ ವಯಸ್ಕರಾಗಿದ್ದ 1894-1902ರ ರೀಜೆಂಟ್ ಕಾಲದ ವಿಷಯಗಳನ್ನು ಈ ಗ್ರಂಥದಲ್ಲಿ ಪ್ರಸ್ತಾಪಿಸಲಾಗಿದೆ. ನಾಲ್ವಡಿಯವರ ಪೂರ್ವಕಾಲದ ಆಧುನಿಕ ಬೆಳವಣಿಗೆಗಳನ್ನು ತಿಳಿದುಕೊಳ್ಳಲು ಮಾದೇಗೌಡರ ಗ್ರಂಥ ಉಪಯುಕ್ತವಾಗಿದೆ. ಸಮಾಜದ ಪರಿವರ್ತನೆಯ ಆಯಾಮಗಳನ್ನು ನೇರವಾಗಿ ವಿಶ್ಲೇಷಣೆ ಮಾಡುವ ಗುರಿ ಈ ಗ್ರಂಥದ್ದಾಗಿಲ್ಲವಾದ ಕಾರಣ ಈ ದೃಷ್ಟಿಯಿಂದ ಇವರ ಅಧ್ಯಯನ ಪ್ರಸ್ತುತ ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗಿಲ್ಲ. ಆದರೆ ಇವರು ಮೂರು ವಿಷಯಗಳನ್ನು ತಮ್ಮ ಗ್ರಂಥದಲ್ಲಿ ಚರ್ಚಿಸಿದ್ದಾರೆ ಮತ್ತು ಅವುಗಳು ಪರೋಕ್ಷವಾಗಿ ಪರಿವರ್ತನೆಯ ಮಾಧ್ಯಮಗಳೂ ಆಗಿದ್ದವು. ಅವುಗಳು ಯಾವುವೆಂದರೆ;

i) ಪ್ರತಿಷ್ಠಿತವರ್ಗ (Elite)

ii) ರಾಜ್ಯವ್ಯವಸ್ಥೆ (Polity)

27. ಮಾದೇಗೌಡ, ಮಾಡರ್ನ್ ಮೈಸೂರ್ ಸ್ಟೇಟ್ - 1881-1902, ಎ ಸ್ಟಡಿ ಆಫ್ ದಿ ಎಲೀಟ್, ಪಾಲಿಟಿ ಆಂಡ್ ಸೊಸೈಟಿ, ಮೈಸೂರ್, 1997. ಪು. 5

iii) ಸಮಾಜ (Society)

ಈ ಮೂರರ ನಡುವಣ ಕ್ರಿಯೆ-ಪ್ರತಿಕ್ರಿಯೆಗಳನ್ನು ಚರ್ಚಿಸುವ ಪ್ರಯತ್ನವನ್ನು ಅವರು ಮಾಡಿದ್ದಾರೆ. ಪ್ರತಿಷ್ಠಿತ ವರ್ಗಗಳನ್ನು ಗುರುತಿಸುವಾಗ ಅಧಿಕಾರವರ್ಗ, ಅಧಿಕಾರೇತರ ವರ್ಗ, ರೈತವರ್ಗ, ಸಾಹುಕಾರವರ್ಗ, ವ್ಯಾಪಾರಿವರ್ಗ, ಬ್ರಾಹ್ಮಣ ವರ್ಗ ಮತ್ತು ಬ್ರಾಹ್ಮಣೇತರ ವರ್ಗ ಎಂದು ಮುಂತಾಗಿ ವಿಂಗಡಿಸಿಕೊಂಡಿದ್ದಾರೆ[27]. ಜನಸಾಮಾನ್ಯರು ಪ್ರತಿಷ್ಠಿತ ವರ್ಗಕ್ಕೆ ಬಾರದೇ ಇರುವುದರಿಂದ ಮತ್ತು ಸಮಾಜದಲ್ಲಿ ಅವರೇ ಬಹುಸಂಖ್ಯಾತರಾಗಿದ್ದುದರಿಂದ ಅವರನ್ನು ಹಿನ್ನೆಲೆಗೆ ಸರಿಸಿದ್ದಾರೆ. ರಾಜ್ಯ ವ್ಯವಸ್ಥೆಯನ್ನು ಚರ್ಚಿಸುವಾಗ ಪ್ರತಿಷ್ಠಿತವೂ, ಪ್ರಭಾವಶಾಲಿಯೂ ಆಗಿದ್ದ ಬ್ರಿಟಿಷ್ ರೆಸಿಡೆಂಟನ ಪಾತ್ರವನ್ನು ಉದಾಸೀನಭಾವದಿಂದ ಪರಿಶೀಲಿಸಿದಂತೆ ಕಾಣುತ್ತದೆ.

ಸಮಾಜದ ಪರಿವರ್ತನೆಯನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡುವಾಗ ಒಂದೆರಡು ಪ್ರಮುಖ ವಿಷಯಗಳು ಸ್ಪಷ್ಟವಾಗುತ್ತವೆ. ರಾಜ್ಯವ್ಯವಸ್ಥೆ ಮತ್ತು ಪ್ರತಿಷ್ಠಿತ ವರ್ಗಗಳು ಸಮಾಜದ ಒಳಗಿನ ಭಾಗಗಳೆಂಬುದನ್ನು ಮರೆಯಬಾರದು. ಸಮಾಜದ ಒಳಗೆ ರಾಜ್ಯ ವ್ಯವಸ್ಥೆ ರೂಪುಗೊಳ್ಳುತ್ತದೆ. ಇತಿಹಾಸದ ಉದ್ದಕ್ಕೂ ನಿಜವಾದ ಅಧಿಕಾರ ಪ್ರತಿಷ್ಠಿತ ಗುಂಪುಗಳ ಕೈಯಲ್ಲೇ ಇದ್ದಿರುವುದನ್ನು ಎಲ್ಲರೂ ಬಲ್ಲರು. ಬ್ರಿಟಿಷ್ ವಸಾಹತು ಕಾಲದಲ್ಲಿ ಅದರಲ್ಲೂ 1920ರ ನಂತರ ಅನೇಕ ಐತಿಹಾಸಿಕ ಒತ್ತಡಗಳ ಪರಿಣಾಮವಾಗಿ ಪ್ರಜಾಪ್ರಭುತ್ವದ ಅಂಶಗಳು ರಾಜ್ಯವ್ಯವಸ್ಥೆಯಲ್ಲಿ ಸೇರ್ಪಡೆಗೊಳ್ಳುತ್ತಾ ಸಾಗಿದಾಗ ಜನಸಾಮಾನ್ಯರು ಇದರ ಭಾಗವಾದರು. ಮಾದೇಗೌಡರ ಅಧ್ಯಯನ ಕಾಲದಲ್ಲಿ ಅಂದರೆ 1881-1902ರ ಕಾಲದಲ್ಲಿ ಪರಿವರ್ತನಾ ದೃಷ್ಟಿಯಿಂದ ಅಂತಹ ವಿಶಿಷ್ಟವಾದ ಸಂಗತಿಗಳು ಹೆಚ್ಚಾಗಿ ಜರುಗಲಿಲ್ಲವಾದರೂ ಈ ಕಾಲ ಆಧುನಿಕ ಮೈಸೂರಿನ ಸಮಾಜದ ಪರಿವರ್ತನೆಯ ದೃಷ್ಟಿಯಿಂದ ಅತ್ಯಂತ ಮಂದವಾದ ಕಾಲವೆಂದು ಹೇಳಬಹುದು.ಆದರೆ ಮೈಸೂರು ಸಂಸ್ಥಾನದಲ್ಲಿ ಬ್ರಿಟಿಷ್ ಪ್ರಭುತ್ವದಡಿಯಲ್ಲಿ ಮಹಿಳೆ ರೀಜೆಂಟಳಾಗಿ ಆಳ್ವಿಕೆ ನಡೆಸಿದ್ದು ಸಹ ಆ ಕಾಲದ ಒಂದು ಪ್ರಮುಖ ಅಂಶವೇ ಆಗಿದೆ. ಒಟ್ಟಿನಲ್ಲಿ ಮಾದೇಗೌಡರ ಗ್ರಂಥವು ಆಧುನಿಕ ಮೈಸೂರಿನ ಚರಿತ್ರೆಯನ್ನು ಅದರಲ್ಲೂ 10ನೇ ಚಾಮರಾಜ ಒಡೆಯರ ಹಾಗೂ ರೀಜೆನ್ಸಿ ಕಾಲದ ಪ್ರಕ್ರಿಯೆಗಳನ್ನು ತಿಳಿದುಕೊಳ್ಳಲು ಸಹಾಯಮಾಡುತ್ತದೆ. ನಿಜವಾದ ಅರ್ಥದಲ್ಲಿ ಮೈಸೂರಿನ ಸಂಪ್ರದಾಯಬದ್ಧ ಪರಿವರ್ತನಾಶೀಲ ಸಮಾಜದಲ್ಲಿ ಪಾಶ್ಚಿಮಾತ್ಯ ಪ್ರಭಾವ ಸುಸ್ಪಷ್ಟವಾಗಿ ಪರಿವರ್ತನೆಯಾದದ್ದು 1902ರ ನಂತರ ಅಂದರೆ ನಾಲ್ವಡಿಯವರು ಅಧಿಕಾರವನ್ನು ವಹಿಸಿಕೊಂಡ ನಂತರ ಎಂದು ಹೇಳಬಹುದು.

ಕೆ. ಸದಾಶಿವರವರ "ಹಿಸ್ಟರಿ ಆಫ್ ಸೋಷಿಯಲ್ ಲೆಜಿಸ್ಲೇಷನ್ ಇನ್ ಮೈಸೂರ್ ಸ್ಟೇಟ್ (1881-1948)" ಎಂಬ ಅಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧದಲ್ಲಿ ಮೈಸೂರು ಸರ್ಕಾರ ಜಾರಿಗೊಳಿಸಿದ ಪ್ರಮುಖ ಸಾಮಾಜಿಕ ಶಾಸನಗಳ ಇತಿಹಾಸವನ್ನೊಳಗೊಂಡ ಒಂಭತ್ತು ಅಧ್ಯಾಯಗಳಿವೆ. ಈ ಅಧ್ಯಾಯಗಳು ಮೈಸೂರಿನ ವಿವಿಧ ಕ್ಷೇತ್ರಗಳ ಮೇಲಾದ ಪಾಶ್ಚಿಮಾತ್ಯ ಪ್ರಭಾವವು ಹಾಗೂ ಸಾಮಾಜಿಕ ಶಾಸನಗಳಿಗೆ ಬೇಡಿಕೆಯನ್ನು ಹೇಗೆ ರೂಪಿಸಿತ್ತೆಂಬ ವಿವರಣೆಯೊಂದಿಗೆ ಆರಂಭಗೊಂಡು ಕೃಷಿ, ಶಿಕ್ಷಣ, ಸ್ತ್ರೀ ಮತ್ತು ದಲಿತರ ಪರ ಕಾಳಜಿ, ಕಾರ್ಮಿಕರ ಕಲ್ಯಾಣ, ಸಾರ್ವಜನಿಕ ಆರೋಗ್ಯ ಹಾಗೂ ನೈರ್ಮಲೀಕರಣ ಮತ್ತು ಸಾಮಾಜಿಕ ಅನಿಷ್ಟಗಳಾದ ದೇವದಾಸಿ, ವೇಶ್ಯಾವೃತ್ತಿ, ಅಸ್ಪೃಶ್ಯತೆ, ಬಿಕ್ಷಾಟನೆಗಳಿಗೆ ಸಂಬಂಧಿಸಿದಂತೆ ಮೈಸೂರು ಸರ್ಕಾರ ಜಾರಿಗೊಳಿಸಿದ ಶಾಸನಗಳು ಮತ್ತು ಯೋಜನೆಗಳ ವಿವರಣೆಯನ್ನು ಒಳಗೊಂಡಿವೆ[28]. ಈ ಸಂಶೋಧನಾ ಪ್ರಬಂಧದಲ್ಲಿ ಮೈಸೂರು ಸರ್ಕಾರವು 1881 ರಿಂದ 1948ರ ವರೆಗೆ ಜಾರಿಗೊಳಿಸಿದ ಸಾಮಾಜಿಕ ಶಾಸನಗಳ ವಿವರಣೆ ಹೆಚ್ಚಾಗಿದ್ದು, ಈ ಸಾಮಾಜಿಕ ಶಾಸನಗಳ ಜಾರಿಯಿಂದ ಸಮಾಜದ ವಿವಿಧ ವರ್ಗಗಳ ಮೇಲಾದ ಪ್ರಭಾವದ ವಿಶ್ಲೇಷಣೆಯನ್ನಾಗಲಿ, ನಾಲ್ವಡಿಯವರ ಪಾತ್ರವನ್ನಾಗಲಿ, ಅಂದಿನ ಸಾಮಾಜಿಕ ಒತ್ತಡಗಳ ಬಗೆಗಿನ ವಿವರಣೆಯನ್ನಾಗಲಿ ಅಷ್ಟಾಗಿ ಮಾಡಿಲ್ಲ ಎಂಬುದನ್ನು ಬಿಟ್ಟರೆ ನಮ್ಮ ಅಧ್ಯಯನ ವ್ಯಾಪ್ತಿಗೆ ಸಾಕಷ್ಟು ನೇರ ಮಾಹಿತಿಯನ್ನು ನೀಡುವ ಸಹಾಯಕ ಮಹಾಪ್ರಬಂಧವಾಗಿದೆ.

ನಾಲ್ವಡಿಯವರ ಕಾಲದ ಬಗೆಗಿನ ಸಂಶೋಧನಾ ಪ್ರಬಂಧಗಳಲ್ಲಿ ಡಿ.ಎಸ್. ಜಯಪ್ಪಗೌಡ ರವರ ಪ್ರಕಟಿತ ಮಹಾಪ್ರಬಂಧವಾದ "ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು (1912-18)" ಮತ್ತು ಡಾ. ಸುಗೀತ ಸುವರ್ಣರವರ ಅಪ್ರಕಟಿತ ಮಹಾಪ್ರಬಂಧ "ದಿವಾನ್‌ಷಿಪ್ ಆಫ್ ಸರ್ ಮಿರ್ಜಾ ಇಸ್ಮಾಯಿಲ್ ಇನ್ ಮೈಸೂರ್ ಸ್ಟೇಟ್ (1926-1940)" ಇವು ಪ್ರಮುಖವಾದವು. ಈ ಎರಡೂ ಮಹಾಪ್ರಬಂಧಗಳು ನಾಲ್ವಡಿಯವರ ಆಳ್ವಿಕೆಯಲ್ಲಿದ್ದ ಇಬ್ಬರು ಪ್ರಮುಖ ದಿವಾನರ ಜೀವನ ಮತ್ತು ಸಾಧನೆಗಳನ್ನು ಕುರಿತದ್ದಾಗಿವೆ. ಡಿ.ಎಸ್. ಜಯಪ್ಪಗೌಡರು ವಿಶ್ವೇಶ್ವರಯ್ಯನವರ ಸಾಧನೆಗಳನ್ನು ಕುರಿತು ಹೋಲಿಕೆ ಮಾಡುತ್ತಾ "ಲೆನಿನ್ ರಷ್ಯಾದಲ್ಲಿ 1917ರ ಕ್ರಾಂತಿಯ ನೇತಾರನಾಗಿ ಹೊಸ ಇತಿಹಾಸ ಸೃಷ್ಟಿಸಿದಾಗ ವಿಶ್ವೇಶ್ವರಯ್ಯನವರು ಮೈಸೂರಿನಲ್ಲಿ ಅಭಿವೃದ್ಧಿ ಯೋಜನೆಗಳಿಗೆ ಅಡಿಪಾಯ ಹಾಕುತ್ತಿದ್ದರೆಂದು" ಹೇಳಿದ್ದಾರೆ[29]. ಆದರೆ ವಿಶ್ವೇಶ್ವರಯ್ಯನವರು 1918ರಲ್ಲಿ ದಿವಾನಗಿರಿಯಿಂದ ನಿವೃತ್ತರಾದರು. ಅಂದರೆ 1917-18ರ ಅಲ್ಪಾವಧಿಯಲ್ಲಿ ಮಾತ್ರ ವಿಶ್ವೇಶ್ವರಯ್ಯನವರು ಲೆನಿನ್‌ಗೆ ಸಮಕಾಲೀನರಾಗಿದ್ದರು. ಆದುದರಿಂದ

---

28. *ಸದಾಶಿವ ಕೆ., ಹಿಸ್ಟರಿ ಆಫ್ ಸೋಷಿಯಲ್ ಲೆಜಿಸ್ಲೇಷನ್ ಇನ್ ಮೈಸೂರ್ ಸ್ಟೇಟ್ (1881-1948 ), ಅಪ್ರಕಟಿತ ಮಹಾಪ್ರಬಂಧ, ಪು. 18-22*

29. *ಜಯಪ್ಪಗೌಡ ಡಿ.ಎಸ್., ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯ ಸಾಧನೆಗಳು, 1912-1918, ಮೈಸೂರು 1994, ಪು. 321*

30. *ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು. 338*

ಇವರಿಬ್ಬರ ನಡುವಿನ ಹೋಲಿಕೆ ಅಷ್ಟು ಸಮಂಜಸವಲ್ಲವೆಂದು ತೋರುತ್ತದೆ. ಏಕೆಂದರೆ ವಿಶ್ವೇಶ್ವರಯ್ಯನವರ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸಿದ್ಧಾಂತಗಳು ಲೆನಿನ್ನನ ಮಾದರಿಯ ಸಮತಾವಾದಕ್ಕೆ ಹೋಲಿಕೆಯಾಗಿರಲಿಲ್ಲ.

ಜಯಪ್ಪಗೌಡರು ನಾಲ್ವಡಿಯವರ ಕಾಲದಲ್ಲಿ ಆಗಿದ್ದ ಪ್ರಗತಿಯನ್ನು ಕುರಿತು ಪ್ರಸ್ತಾಪಿಸುತ್ತಾ "ಅಂದಿನ ಸಾಧನೆಗಳ ಹಿರಿಮೆ ದಿವಾನರಿಗೆ ಹೆಚ್ಚು ಸಲ್ಲಬೇಕು" ಎಂಬುದಾಗಿ ತೀರ್ಮಾನ ಮಾಡಿದ್ದಾರೆ[30]. ಈ ತೀರ್ಮಾನ ಅಷ್ಟೊಂದು ಸಮಂಜಸವಲ್ಲ. ಈ ತೀರ್ಮಾನವನ್ನು ಅಂದಿನ ಮೈಸೂರಿನ ರಾಜ್ಯ ವ್ಯವಸ್ಥೆಗೆ ಒರೆ ಹಚ್ಚಿ ನೋಡಿದಾಗ ಅಧೀನ ಸಂಸ್ಥಾನವಾಗಿ ಮೈಸೂರು ಬ್ರಿಟಿಷ್ ವಸಾಹತು ವ್ಯವಸ್ಥೆಯ ಪರೋಕ್ಷ ಹಿಡಿತದಲ್ಲಿರುವುದು ಕಂಡು ಬರುತ್ತದೆ. ಈ ಶಕ್ತಿಯ ಪ್ರತಿನಿಧಿಯಾಗಿ ರೆಸಿಡೆಂಟ್ ತೆರೆಯ ಮರೆಯಲ್ಲಿ ಬ್ರಿಟಿಷರ ಹಿತಾಸಕ್ತಿಗಳನ್ನು ರಕ್ಷಿಸುತ್ತಿದ್ದನು. ಮಹಾರಾಜರು ಮೈಸೂರು ಸಂಸ್ಥಾನದ ಅಧಿಕಾರಿಗಳ ಮೂಲವಾಗಿ ಕಾಣಿಸಿಕೊಳ್ಳುತ್ತಾರೆ. ನಾಲ್ವಡಿಯವರು ಮೈಸೂರಿನ ಚರಿತ್ರೆಯಲ್ಲಿ ಕಂಡುಬರುವ ಎಲ್ಲಾ ರಾಜರುಗಳಿಗಿಂಥ ಭಿನ್ನವಾಗಿದ್ದು, ಆಡಳಿತ ವಿಷಯಗಳನ್ನು ಆಮೂಲಾಗ್ರವಾಗಿ ತಿಳಿದುಕೊಂಡವರಾಗಿದ್ದರು. ಆಧುನಿಕ ಪೂರ್ವ ಕಾಲದ ಕೆಲವು ಮೈಸೂರಿನ ರಾಜರಂತೆ ದಳವಾಯಿಗಳ ಕೈಗೊಂಬೆಗಳಾಗುವ ಪರಿಸ್ಥಿತಿಯಂತಹ ಸಂದರ್ಭವನ್ನು ನಾಲ್ವಡಿಯವರು ಸೃಷ್ಟಿಸಿಕೊಂಡಿರಲಿಲ್ಲ. ಆದುದರಿಂದ ಬ್ರಿಟಿಷ್ ರೆಸಿಡೆಂಟ್ ನಂತರ ಮಹಾರಾಜರು ಅಧಿಕಾರ ಸ್ಥಾನದ ಬಹುಮುಖ್ಯ ಶಕ್ತಿಯಾಗಿದ್ದರು. ದಿವಾನರು ಮತ್ತು ಕೌನ್ಸಿಲ್ ಮೂರನೇ ಶಕ್ತಿಯಾಗಿ ಅಂದಿನ ರಾಜ್ಯವ್ಯವಸ್ಥೆಯಲ್ಲಿ ಕಾಣಿಸಿಕೊಳ್ಳುವುದರಿಂದ ಜಯಪ್ಪಗೌಡರು ದಿವಾನರನ್ನು ಆ ಕಾಲದ ಎಲ್ಲ ಸಾಧನೆಗಳಿಗೂ ಕಾರಣಕರ್ತರೆಂಬಂತೆ ಚಿತ್ರಿಸಿರುವುದು ವ್ಯಕ್ತಿ ವೈಭವೀಕರಣವೇನೋ ಎಂಬ ಸಂಶಯ ಮೂಡುವಂತೆ ಮಾಡುತ್ತದೆ.

ದಿವಾನರ ಪಾತ್ರವನ್ನು ವೈಭವೀಕರಿಸುವ ಜಯಪ್ಪಗೌಡರು ತಮ್ಮ ಗ್ರಂಥದ ಮತ್ತೊಂದು ಕಡೆ ನಾಲ್ವಡಿಯವರನ್ನು ಕುರಿತಂತೆ ಕೆಲವು ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಮೊದಲನೆಯದಾಗಿ ನಾಲ್ವಡಿಯವರಿಗೆ ಆಧುನಿಕ ಕಾಲದಲ್ಲಿ ಒಬ್ಬ ದಕ್ಷ ಆಡಳಿತಗಾರನಿಗೆ ಇರಬೇಕಾಗಿದ್ದ ಗುಣಗಳು ಅವರಲ್ಲಿ ಇದ್ದವು. ದಿನನಿತ್ಯದ ಆಡಳಿತದಲ್ಲಿ ಅವರು ಹಸ್ತಕ್ಷೇಪ ಮಾಡದೇ ಅಭಿವೃದ್ಧಿ ಯೋಜನೆಗಳಿಗೆ ಸಂಬಂಧಿಸಿದ ವಿಷಯಗಳನ್ನು ಪರಿಶೀಲಿಸಿ ಅನುಮೋದಿಸುತ್ತಿದ್ದರು[31]. ಎರಡನೆಯದಾಗಿ ಮಹಾರಾಜರ ಸ್ಥಾನ ಅತ್ಯಂತ ಸೂಕ್ಷ್ಮವಾದುದಾಗಿದ್ದು, ಬ್ರಿಟಿಷ್ ರೆಸಿಡೆಂಟರನ್ನು ಎದುರು ಹಾಕಿಕೊಳ್ಳದೆ, ದಿವಾರ ಸ್ಥೈರ್ಯ ಕುಂದಿಸದೆ ಆಡಳಿತ ನಿರ್ವಹಿಸುವ ಬಹುಮುಖ್ಯ ಸಮತೋಲನ ಶಕ್ತಿಯಾಗಿದ್ದರು. ಅಲ್ಲದೆ ಜನಾಭಿಪ್ರಾಯ ಅಥವಾ ಜನಾನುಕೂಲ ವಿಷಯ ಬಂದಾಗ ದಿವಾನರ ರಾಜೀನಾಮೆ ಪಡೆದು ಪ್ರಜಾಭಿಪ್ರಾಯಕ್ಕೆ ಮನ್ನಣೆ ನೀಡಿದ ಉದಾಹರಣೆಗಳು ಮಹಾರಾಜನ ಸ್ಥಾನವನ್ನು ವಿಭಿನ್ನವಾಗಿ ನೋಡುವಂತೆ ಮಾಡಿದೆ.

---

*31. ಅದೇ., ಪು. 16*

*32. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ. 17*

ಮೂರನೆಯದಾಗಿ ನಾಲ್ವಡಿಯವರು ಆಡಳಿತವನ್ನು ದಿವಾನರಿಗೆ ಬಿಟ್ಟು ನಿಷ್ಕ್ರಿಯರಾಗಿರಲಿಲ್ಲ. ಪ್ರಜೆಗಳ ಪರವಾದ ತೀರ್ಮಾನಗಳನ್ನು ಅವರು ದಿವಾನರಿಗೆ ಅಪ್ರಿಯವಾದರೂ ತೆಗೆದುಕೊಳ್ಳುವ ಸಾಹಸ ಮಾಡಿದರು. ಜಯಪ್ಪಗೌಡರೇ ಹೇಳುವಂತೆ "ಇತಿಹಾಸದ ಪರ್ವ ಕಾಲದಲ್ಲಿ ಆಳ್ವಿಕೆ ನಡೆಸಿದರೂ ಜನರಿಂದ 'ಆದರ್ಶರಾಜ', 'ರಾಜರ್ಷಿ' ಮೊದಲಾದ ಅಭಿದಾನಗಳನ್ನು ಪಡೆದು ಅಂದಿನ ಭಾರತದ ವಿರಳ ಜನಪ್ರಿಯ ರಾಜರ ಸಾಲಿಗೆ ಸೇರಿದರು.[32] ಮತ್ತೆ ಮುಂದುವರಿದು "ರಾಜ್ಯದ ಶ್ರೇಯಸ್ಸಿಗೆ ಶ್ರಮಿಸಿ ಮೈಸೂರು ಸಂಸ್ಥಾನವು ಆಧುನಿಕ ಭಾರತದ ಮಾದರಿ ಸಂಸ್ಥಾನವೆನಿಸುವಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಮಹತ್ತರ ಪಾತ್ರ ವಹಿಸಿದರು". ಅಂತಿಮವಾಗಿ ಜಯಪ್ಪಗೌಡರು "ಜನಸಾಮಾನ್ಯರಿಗೆ ದಿವಾನರೇ ಪ್ರತ್ಯಕ್ಷ ಪ್ರಭುಗಳಾಗಿದ್ದರು. ಆದುದರಿಂದಲೇ ಈ ಕಾಲವನ್ನು ದಿವಾನರುಗಳ ಆಡಳಿತ ಕಾಲವೆಂದು ಇತಿಹಾಸಕಾರರು ಪರಿಗಣಿಸಿದ್ದಾರೆ[33] ಎಂದು ಉಲ್ಲೇಖಿಸಿದ್ದಾರೆ. ಹೀಗೆ ಜಯಪ್ಪಗೌಡರು ಒಂದು ನಿರ್ಧಿಷ್ಟ ಕಾಲದ ಇತಿಹಾಸದಲ್ಲಿನ ಬೆಳವಣಿಗೆಗಳಿಗೆ 'ವ್ಯಕ್ತಿ ಪ್ರಧಾನ್ಯತೆ, ಸ್ಥಾನ ಪ್ರಾಧ್ಯಾನ್ಯತೆಗಳನ್ನು ಗುರುತಿಸುತ್ತಾ ವ್ಯವಸ್ಥೆಯ ಮತ್ತಿತರ ಶಕ್ತಿಗಳನ್ನು ಗುರುತಿಸುವಲ್ಲಿ ವಿಫಲರಾಗಿದ್ದಾರೆಂದು ಹೇಳಬಹುದು.

ಜಯಪ್ಪಗೌಡರು ವಿಶ್ವೇಶ್ವರಯ್ಯನವರನ್ನು ವಸ್ತುವಾಗಿಟ್ಟುಕೊಂಡರೆ ಸುಗೀತ ಸುವರ್ಣರವರು ನಾಲ್ವಡಿಯವರ ಕಾಲದ ಮತ್ತೋರ್ವ ದಿವಾನರಾದ ಮಿರ್ಜಾ ಇಸ್ಮಾಯಿಲ್‌ರ ಸಾಧನೆಗಳನ್ನು ತಮ್ಮ ಮಹಾಪ್ರಬಂಧದಲ್ಲಿ ಕೇಂದ್ರ ವಿಷಯವನ್ನಾಗಿಟ್ಟುಕೊಂಡಿದ್ದಾರೆ. ಈ ಮಹಾಪ್ರಬಂಧದಲ್ಲಿಯೂ ಮಹಾ ವ್ಯಕ್ತಿಗಳು ಮತ್ತು ಇತಿಹಾಸ ನಿರ್ಮಾಣ ಎಂಬ ವಿಷಯದಲ್ಲಿ ಅನೇಕ ಸಂದೇಹಗಳು ಮೂಡುತ್ತವೆ. ಅಲ್ಲದೆ ಮೈಸೂರಿನ ರಾಜಕೀಯ ಹಾಗೂ ಸಮಾಜದಲ್ಲಿ ಅಲ್ಲಿಯವರೆಗೂ ಮೂರು ಅಧಿಕಾರ ಕೇಂದ್ರಗಳಿದ್ದದ್ದು ಮಿರ್ಜಾರವರ ಕಾಲಕ್ಕೆ "ಮೈಸೂರು ಕಾಂಗ್ರೆಸ್" ನಾಲ್ಕನೆಯ ಶಕ್ತಿಯಾಗಿ ರೂಪುಗೊಂಡು ಸಮಾಜದ ಎಲ್ಲ ಪ್ರಕ್ರಿಯೆಗಳ ಮೇಲೆ ಕಾಂಗ್ರೆಸ್‌ನ ಪ್ರಭಾವ ನಿಚ್ಚಳವಾಗಿ ಕಾಣಿಸಿಕೊಳ್ಳುವಂತೆ ಆಯಿತು. ಸುಗೀತ ಸುವರ್ಣರವರು ತಮ್ಮ ಮಹಾಪ್ರಬಂಧದಲ್ಲಿ "ಮಿರ್ಜಾರವರು ವಿಶ್ವೇಶ್ವರಯ್ಯ ಮತ್ತು ಗಾಂಧೀಜಿಯ ನಡುವಣ ಕೊಂಡಿಯಾಗಿದ್ದು ಒಂದು ರೀತಿಯ ಮಧ್ಯಮ ಮಾರ್ಗವನ್ನು ತಮ್ಮ ಅಧಿಕಾರಾವಧಿಯಲ್ಲಿ ಅನುಷ್ಠಾನಗೊಳಿಸಿದರೆಂದು" ಅಭಿಪ್ರಾಯಪಟ್ಟಿದ್ದಾರೆ[34]. ಗಾಂಧೀಜಿಯವರ ಜೊತೆ ಮಿರ್ಜಾರವರು ಸ್ನೇಹ ಮತ್ತು ವಿಶ್ವಾಸಗಳನ್ನೊಂದಿದ್ದಲ್ಲದೆ ಅವರ ಗ್ರಾಮೋದ್ಯೋಗ, ಖಾದಿ ಮುಂತಾದ ಚಟುವಟಿಕೆಗಳಿಗೆ ಪ್ರೋತ್ಸಾಹಕೊಟ್ಟರು. ಹಾಗೆಯೇ ವಿಶ್ವೇಶ್ವರಯ್ಯನವರ ಕೈಗಾರಿಕಾ ನೀತಿಯನ್ನು ವ್ಯಾಪಕವಾಗಿ ಅನುಷ್ಠಾನಕ್ಕೆ ತಂದರು. ಮಿರ್ಜಾರವರು ಈ ಇಬ್ಬರ ವಿಚಾರಧಾರೆಗಳನ್ನು ಅಳವಡಿಸಿಕೊಳ್ಳುವ ಮೂಲಕ ಮಧ್ಯಮ ಮಾರ್ಗ ಧೋರಣೆ

---

*33. **ಅದೇ.**, ಪು. 19*

*34. **ಸುಗೀತ ಸುವರ್ಣ.**, ದಿವಾನ್ ಷಿಪ್ ಆಫ್ ಸರ್ ಮಿರ್ಜಾ ಇಸ್ಮಾಯಿಲ್ ಇನ್ ಮೈಸೂರ್ ಸ್ಟೇಟ್ (1926-1940), ಅಪ್ರಕಟಿತ ಮಹಾ ಪ್ರಬಂಧ, ಪು. 243*

ಅನುಸರಿಸಲು ಇದ್ದ ಐತಿಹಾಸಿಕ ಒತ್ತಡಗಳು ಯಾವುವು? ಎಂಬುದನ್ನು ಗುರುತಿಸಿಲ್ಲ. ಹಾಗೆಯೇ ಆ ಒತ್ತಡಗಳನ್ನು ನಿವಾರಿಸಲು ಮಹಾರಾಜ ನಾಲ್ವಡಿಯವರು ತಮ್ಮ ಸ್ಥಾನ ಹಾಗೂ ವ್ಯಕ್ತಿತ್ವವನ್ನು ಹೇಗೆ ಬಳಸಿದರೆಂಬುದನ್ನು ಚರ್ಚಿಸಿಲ್ಲ. ಅಲ್ಲದೆ ಈ ಎಲ್ಲ ಬೆಳವಣಿಗೆಗಳ ಪ್ರತಿಫಲವಾಗಿ ಸಮಾಜದ ಮೇಲುಂಟಾದ ಪ್ರಭಾವ ಮತ್ತು ಪರಿಣಾಮಗಳನ್ನು ಗಮನಿಸಿಲ್ಲ. ಇಂತಹ ಸಂದಿಗ್ಧತೆಗಳ ನಡುವೆಯೂ ಈ ಇಬ್ಬರು ವಿದ್ವಾಂಸರ ಮಹಾಪ್ರಬಂಧಗಳು ನಮ್ಮ ಅಧ್ಯಯನ ಕಾಲವನ್ನು ಕುರಿತಂತೆ ಪೂರಕ ಮಾಹಿತಿಯನ್ನು ಒದಗಿಸುವ ಪ್ರಮುಖ ಆಕರಗಳಾಗಿವೆ ಎಂಬುದನ್ನು ಮರೆಯುವಂತಿಲ್ಲ. ಹಾಗಾಗಿ ಈ ಎರಡು ಮಹಾಪ್ರಬಂಧಗಳಲ್ಲಿರುವ ಮಾಹಿತಿಗಳನ್ನು ಬಹಳಷ್ಟು ಕಡೆ ಬಳಸಿಕೊಳ್ಳಲಾಗಿದೆ.

ಹೀಗೆ ಆಧುನಿಕ ಮೈಸೂರಿನ ಇತಿಹಾಸ ವಿದೇಶಿ ಮತ್ತು ದೇಶೀ ವಿದ್ವಾಂಸರನ್ನು ಆಕರ್ಷಿಸಿರುವುದು ಸ್ಪಷ್ಟವಾಗಿದೆ. ಈ ಮೇಲಿನ ಪ್ರಮುಖ ಗ್ರಂಥಗಳ ಪರಿಚಯ ಪರಿಪೂರ್ಣವಾಗಿಲ್ಲ. ಹಾಗೆಯೇ ನಮ್ಮ ಅಧ್ಯಯನದ ವ್ಯಾಪ್ತಿಯಲ್ಲೇ ಸಂಶೋಧಿತಗೊಂಡಿರುವ ಇನ್ನೂ ಹಲವಾರು ಗ್ರಂಥಗಳು ಅಲಭ್ಯವಾಗಿದ್ದು ಅವುಗಳ ಅಧ್ಯಯನ ಸಾಧ್ಯವಾಗಿಲ್ಲ. ನಮ್ಮ ಉದ್ದೇಶ ಆಧುನಿಕ ಮೈಸೂರಿನ ಇತಿಹಾಸಕ್ಕೆ ಸಂಬಂಧಪಟ್ಟಂತೆ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳನ್ನು ಸ್ಥೂಲವಾಗಿ ಪರಿಚಯಿಸುತ್ತಾ, ಅವು ನಮ್ಮ ಪ್ರಸ್ತುತ ಅಧ್ಯಯನದ ಕೇಂದ್ರ ವಿಷಯವಾದ ಮೈಸೂರು ಸಂಸ್ಥಾನದ ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜವು ನಾಲ್ವಡಿಯವರ ನೇತೃತ್ವದಲ್ಲಿ ಹೇಗೆ ಪಾಶ್ಚಿಮಾತ್ಯ ಪ್ರಭಾವಕ್ಕೆ ಆಧುನಿಕ ಕಾಲದಲ್ಲಿ ಒಳಗಾಯಿತೆಂಬ ಬಗೆಗೆ ಹೆಚ್ಚು ಬೆಳಕನ್ನು ಚೆಲ್ಲುವುದಿಲ್ಲ ಎಂಬುದನ್ನು ಸೂಚಿಸುವುದೇ ಆಗಿದೆ. ಆದಾಗ್ಯೂ ಈ ವಿದ್ವಾಂಸರ ಕೃತಿಗಳು ನಮ್ಮ ಪ್ರಸ್ತುತ ಅಧ್ಯಯನಕ್ಕೆ ಹಿನ್ನೆಲೆಯನ್ನು ಒದಗಿಸಿಕೊಟ್ಟಿವೆ ಎಂಬುದರಲ್ಲಿ ಯಾವುದೇ ಅನುಮಾನವೂ ಇಲ್ಲ. ನಾವು ಇಲ್ಲಿಯವರೆಗೆ ಪೀಠಿಕಾ ರೂಪದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಬುನಾದಿಯಾಗಿರುವ ಕೆಲವು ಪರಿಕಲ್ಪನೆಗಳನ್ನು ಹಾಗೂ ಅಧ್ಯಯನದ ವ್ಯಾಪ್ತಿಯನ್ನು ಮತ್ತು ಕೆಲವು ಪ್ರಮುಖ ಗ್ರಂಥಗಳ ಪರಿಚಯವನ್ನು ಸಂಕ್ಷಿಪ್ತವಾಗಿ ಮಾಡಿಕೊಂಡೆವು. ಮುಂದೆ ಅಧ್ಯಯನಕ್ಕೆ ಸಹಕಾರಿಯಾಗುವ ಕೆಲವು ಪ್ರಮುಖ ಆಕರಗಳನ್ನು ಕುರಿತಂತೆ ಪ್ರಸ್ತಾಪಿಸಲಾಗಿದೆ.

**ಆಕರಗಳು**

ಪ್ರಸ್ತುತ ಅಧ್ಯಯನಕ್ಕೆ ಅನೇಕ ರೀತಿಯ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಪ್ರಮುಖವಾದದ್ದು ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತ ಕಾಲಕ್ಕೆ ಸಂಬಂಧಿಸಿದ ದಾಖಲೆಗಳು, ಭಾಷಣಗಳು, ಆಡಳಿತ ವರದಿಗಳು, ಪತ್ರಗಳು, ಮೈಸೂರು ಸರ್ಕಾರದ ಪ್ರಕಟಣೆಗಳು, ಶಾಸಕಾಂಗಗಳ ನಡಾವಳಿಗಳು, ಆರ್ಥಿಕ ಪರಿಷತ್ತಿನ ಕಲಾಪಗಳು,

ಸುದ್ದಿ ಪತ್ರಿಕೆಗಳು, ನಿಯತಕಾಲಿಕಗಳು ಇಂತಹ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಪರಿವರ್ತನೆಗೆ ಪೂರಕವಾದ ಅನೇಕ ಆಕರಗಳನ್ನು ಕರ್ನಾಟಕ ಸರ್ಕಾರದ ಪತ್ರಾಗಾರ ಇಲಾಖೆ, ಬೆಂಗಳೂರು ಮತ್ತು ಮೈಸೂರು, ಲಂಡನ್ನಿನ ಬ್ರಿಟಿಷ್ ಲೈಬ್ರರಿ (2004 ಜುಲೈನಲ್ಲಿ ಭೇಟಿ ನೀಡಿರುತ್ತೇನೆ) ಗಳಿಂದ ಹಾಗೂ ಮಿಥಿಕ್ ಸೊಸೈಟಿಯಿಂದ (ಬೆಂಗಳೂರು) ಪಡೆದು ಬಳಸಿಕೊಳ್ಳಲಾಗಿದೆ. ಅಲ್ಲದೇ ನಾಲ್ವಡಿಯವರನ್ನು ಕುರಿತು ಬರೆದಿರುವಂತಹ ಕೃತಿಗಳು, ಇಂಗ್ಲಿಷ್ ಮತ್ತು ಕನ್ನಡ ಗ್ರಂಥಗಳು, ಅಪ್ರಕಟಿತ ಕೃತಿಗಳು, ಅಂದಿನ ಸಮಾಜದ ಪ್ರಮುಖ ಬುದ್ಧಿಜೀವಿಗಳ ಬರವಣಿಗೆಗಳನ್ನು ಪರಿಶೀಲಿಸಲಾಗಿದೆ. ಇಲ್ಲಿ ಕೆಲವು ಆಕರಗಳನ್ನು ಹೆಸರಿಸಬಹುದು.

1. ಡಿ.ವಿ. ಗುಂಡಪ್ಪನವರ ಬರಹಗಳು

2. ತಾ.ಸು. ಶಾಮರಾಯರ ಬರಹಗಳು

3. ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರ 3 ಸಂಪುಟಗಳಲ್ಲಿ ಪ್ರಕಟಗೊಂಡಿರುವ 'ಭಾವ' ಎಂಬ ಶೀರ್ಷಿಕೆಯ ಆತ್ಮಚರಿತ್ರೆ ಮುಂತಾದವು.

ಮಾಸ್ತಿಯವರು ನಾಲ್ವಡಿಯವರ ಕಾಲದ ಮೈಸೂರು ರಾಜ್ಯದೊಡನೆ ಅನೇಕ ಹಂತಗಳಲ್ಲಿ ಅಧಿಕಾರಿಗಳಾಗಿ ನಿಕಟ ಸಂಬಂಧವನ್ನು ಇಟ್ಟುಕೊಂಡಿದ್ದವರು. ಅವರು ನೀಡುವ ಒಳನೋಟಗಳು ಇತಿಹಾಸಕಾರನಿಗೆ ಅಮೂಲ್ಯವಾದ ದಾಖಲೆಗಳಾಗಿರುತ್ತವೆ. ಅದೇ ರೀತಿ ಡಿ.ವಿ. ಗುಂಡಪ್ಪನವರು ಈ ಕಾಲದ ಅತ್ಯಂತ ಶ್ರೇಷ್ಠ ಬುದ್ಧಿಜೀವಿಗಳಲ್ಲೊಬ್ಬರು. "ಆಡು ಮುಟ್ಟದ ಸೊಪ್ಪಿಲ್ಲ" ಎಂಬ ಗಾದೆಯಂತೆ ಡಿ.ವಿ. ಗುಂಡಪ್ಪನವರು ಕೈಯಾಡಿಸದ ಯಾವ ಪ್ರಾಕಾರವೂ ಇಲ್ಲ. ನಾಲ್ವಡಿಯವರ ಕಾಲದ ರಾಜಕೀಯ, ಸಂಸ್ಕೃತಿ, ಸಮಾಜ, ಅರ್ಥವ್ಯವಸ್ಥೆ ಮತ್ತು ಸಾಹಿತ್ಯಗಳಂತಹ ಕ್ಷೇತ್ರಗಳಲ್ಲಿ ತಮ್ಮ ಬರವಣಿಗೆಗಳನ್ನು ನೀಡಿದ್ದಾರೆ. ತಾ.ಸು. ಶಾಮರಾಯರು ಬರೆದಿರುವ 'ಮೂರು ತಲೆಮಾರು' ಕೃತಿ ನಮ್ಮ ಅಧ್ಯಯನ ಕಾಲದ ಸಮಾಜದಲ್ಲಿ ಇಂಗ್ಲಿಷ್ ಶಿಕ್ಷಣಕ್ಕಿದ್ದ ಮಹತ್ವ, ಉದ್ಯೋಗಾವಕಾಶಗಳ ಬಗೆಗಿನ ಕಾಳಜಿ, ಹೋಟೆಲ್ ಉದ್ಯಮ ಇವೇ ಮೊದಲಾದ ಅಂಶಗಳು ಹೇಗೆ ಸಮಾಜದ ಪರಿವರ್ತನೆಗೆ ಕಾರಣವಾದವು ಎಂಬ ಮಾಹಿತಿಗಳನ್ನೊಳಗೊಂಡಿದ್ದು ನಮ್ಮ ಅಧ್ಯಯನಕ್ಕೆ ಸಾಕಷ್ಟು ಸಹಕಾರಿಯುತವಾಗಿದೆ. ಇಂತಹ ಬರವಣಿಗೆಗಳು ಇತಿಹಾಸಕಾರನಿಗೆ ಅಮೂಲ್ಯವಾದ ದಾಖಲೆಗಳಾಗಿರುತ್ತವೆ. ಹಾಗೆಯೇ ಕುವೆಂಪುರವರ ಕಾನೂರು ಸುಬ್ಬಮ್ಮ ಹೆಗ್ಗಡತಿ ನೆನಪಿನ ದೋಣಿಯಲ್ಲಿ ಕೃತಿಗಳಲ್ಲಿ ಸಹ ಅಂದಿನ ಸಾಮಾಜಿಕ ಜನಜೀವನದ ಚಿತ್ರಣವನ್ನು ಪ್ರತಿಬಿಂಬಿಸುವುದರ ಜೊತೆಗೆ ಸಮಾಜದೊಳಗೆ ಪ್ರವೇಶಿಸಿದ ಹೊಸ ಹೊಸ ವಿಚಾರಗಳಿಗೆ ಜನರು ನೀಡಿದ ಸ್ಪಂದನವನ್ನು ಕುರಿತಾದ ಮಾಹಿತಿಯನ್ನು

ಸಾಕಷ್ಟು ನೀಡಿ ನಮ್ಮ ಅಧ್ಯಯನಕ್ಕೆ ಸಹಕಾರಿಯಾಗಿದೆ. ಇಂತಹ ಬರವಣಿಗೆಗಳು ಸರ್ಕಾರಿ ದಾಖಲೆಗಳು ನೀಡದ ಅನೇಕ ವಾಸ್ತವವಾದ ಚಿತ್ರಗಳನ್ನು ಪ್ರತಿಬಿಂಬಿಸುತ್ತವೆ. ಆದುದರಿಂದ ಇವುಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳಲಾಗಿದೆ. ನಮ್ಮ ಅಧ್ಯಯನ ಕಾಲದ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಅಭ್ಯಾಸ ಮಾಡಲು ಇಂತಹ ಅನೇಕ ಆಧಾರಗಳು ದೊರಕುತ್ತವೆ. ಕನ್ನಡ ಭಾಷೆ ಮತ್ತು ಸಾಹಿತ್ಯ ಇತಿಹಾಸದಲ್ಲಿ ನಾಲ್ವಡಿಯವರ ಕಾಲ ಪುನರುಜ್ಜೀವನದ ಕಾಲವಾಗಿದ್ದು, ಪಾಶ್ಚಿಮಾತ್ಯ ಪ್ರಭಾವದಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ ಹೊಸ ಆಯಾಮಗಳನ್ನು ಪಡೆದುಕೊಂಡಿತು. ಬಿ.ಎಂ. ಶ್ರೀಕಂಠಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಿ.ವಿ. ಗುಂಡಪ್ಪನವರು ಕನ್ನಡ ಭಾಷೆ ಮತ್ತು ಸಾಹಿತ್ಯದ ಪುನರುಜ್ಜೀವನದ ಹರಿಕಾರರಾಗಿದ್ದರು. ಅವರ ಸಾಹಿತ್ಯ ಮತ್ತು ಸಾಹಿತ್ಯೇತರ ಬರವಣಿಗೆಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಹಾಗೆಯೇ ಸಮಕಾಲೀನ ಪ್ರಸಿದ್ಧ ಜನರ ಆತ್ಮಚರಿತ್ರೆಗಳನ್ನು ಬಳಸಿಕೊಳ್ಳಲಾಗಿದೆ.

***ಸಂಶೋಧನಾ ಮಾರ್ಗ :*** ಈ ಅಧ್ಯಯನಕ್ಕೆ ಇತಿಹಾಸ ಸಂಶೋಧನಾ ಮಾರ್ಗದ ಸೂತ್ರಗಳನ್ನು ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಪ್ರಧಾನವಾಗಿ ಆಧಾರಗಳನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಸಹಾಯಕವಾಗುವ ಬಹಿರಂಗ ವಿಮರ್ಶೆ ಮತ್ತು ಆಂತರಿಕ ವಿಮರ್ಶೆಯ ಸೂತ್ರಗಳನ್ನು ಬಳಸಿಕೊಳ್ಳಲಾಗಿದೆ. ಇಂತಹ ಅಧ್ಯಯನಕ್ಕೆ ಅಂತರ್ಶಿಸ್ತಿನ ಸಂಶೋಧನಾ ರೀತಿನೀತಿಗಳು ಅವಶ್ಯಕವಾಗಿರುವುದರಿಂದ ಅವುಗಳನ್ನು ಸೂಕ್ತ ರೀತಿಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ.

***ಆಧುನಿಕ ಪೂರ್ವ ಮೈಸೂರು ಪ್ರದೇಶದ ಸಾಮಾಜಿಕ ಚರಿತ್ರೆಯ ರೂಪುರೇಷೆಗಳು - ಒಂದು ಸಂಕ್ಷಿಪ್ತ ಸಮೀಕ್ಷೆ***

ಭೌಗೋಳಿಕವಾಗಿ ಪ್ರಸ್ತುತ ಅಧ್ಯಯನದಲ್ಲಿ ಮೈಸೂರು ಪ್ರದೇಶ ಎಂದರೆ ಕ್ರಿ.ಶ. 1800ರಲ್ಲಿ ಬ್ರಿಟಿಷರು ರೂಪಿಸಿದ್ದ ತುಂಗಭದ್ರಾ ನದಿಯ ದಕ್ಷಿಣಕ್ಕಿದ್ದ ಇಂದಿನ ಕರ್ನಾಟಕದ ಒಂಭತ್ತು ಜಿಲ್ಲೆಗಳಿಗೆ ಸೀಮಿತಗೊಳಿಸಿದ ಪ್ರದೇಶ. ಈ ಪ್ರದೇಶದ ಸಾಮಾಜಿಕ ಚರಿತ್ರೆಯ ರೂಪುರೇಷೆಗಳನ್ನು ಪ್ರಸ್ತುತ ಅಧ್ಯಯನಕ್ಕೆ ಹಿನ್ನೆಲೆಯಾಗಿ ಇಲ್ಲಿ ಪ್ರಸ್ತಾಪಿಸಲಾಗಿದೆ. ಆಧುನಿಕ ಪೂರ್ವಕಾಲ ಎಂದರೆ ಆರಂಭದಿಂದ ಕ್ರಿ.ಶ. 1800ರವರೆಗೆ ಎಂದು ಇಲ್ಲಿ ಪರಿಕಲ್ಪಿಸಿಕೊಳ್ಳಲಾಗಿದೆ. ಈ ಕಾಲದ ಸಮಾಜ ಸಂಪ್ರದಾಯಬದ್ಧವಾಗಿದ್ದು ನಿಧಾನಗತಿಯ ಪರಿವರ್ತನಾಶೀಲವಾಗಿತ್ತು ಎಂಬುದು ಈ ಭಾಗದ ಅಧ್ಯಯನದ ಪರಿಕಲ್ಪನೆಯಾಗಿದೆ. ಯಾವುದೇ ಪ್ರದೇಶದ ಅಥವಾ ಕಾಲದ ಸಾಮಾಜಿಕ ಚರಿತ್ರೆಯನ್ನು ಪರೀಕ್ಷಿಸಿದರೆ ಒಂದೆರಡು ಮುಖ್ಯಾಂಶಗಳು ಸ್ಪಷ್ಟವಾಗಿ ಗೋಚರವಾಗುತ್ತವೆ. ಮೊದಲನೆಯದಾಗಿ ಸಾಮಾಜಿಕ ವಿಕಾಸದ ಪ್ರಕ್ರಿಯೆ ಸರಳತೆಯಿಂದ ಸಂಕೀರ್ಣತೆಯ ಕಡೆಗೆ ಸಾಗಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಎರಡನೆಯದಾಗಿ

ಸಂಪ್ರದಾಯಬದ್ಧವಾದ ಆಧುನಿಕ ಪೂರ್ವ ಸಮಾಜವು ಸಹ ಪರಿವರ್ತನೆಗೆ ಒಳಗಾಗಿರುವುದನ್ನು ನೋಡಬಹುದು. ಈ ಅಭಿಪ್ರಾಯಗಳಿಗೆ ಆಧುನಿಕಪೂರ್ವ ಮೈಸೂರು ಪ್ರದೇಶದ ಸಮಾಜವು ಹೊರತಾಗಿರಲಿಲ್ಲ. ಈಗ ಈ ಪ್ರಕ್ರಿಯೆಯನ್ನು ಸ್ಥೂಲವಾಗಿ ವಿವೇಚಿಸಬಹುದು.

ಮೈಸೂರು ಪ್ರದೇಶದ ಸಮಾಜವು ಸಾಮಾಜಿಕ ಚರಿತ್ರೆಯ ದೃಷ್ಟಿಯಿಂದ ಅನೇಕ ಹಂತಗಳನ್ನು ಹಾದುಬಂದಿರುವುದು ಸ್ಪಷ್ಟವಾಗಿದೆ. ಸರಳವಾಗಿದ್ದ ಬುಡಕಟ್ಟಿನ ಸಂಸ್ಕೃತಿಯಿಂದ ಕ್ರಿ.ಶ. 1800ರವರೆಗಿನ ಸಮಾಜವು ಆಧುನಿಕ ಸಂಸ್ಕೃತಿಯತ್ತ ಸಾಗಿಬಂದಿರುವುದನ್ನು ಗಮನಿಸಬಹುದಾಗಿದೆ. ಈ ಪ್ರದೇಶವನ್ನು ಭೌಗೋಳಿಕವಾಗಿ 'ಕಾವೇರಿ ನದಿಯ ಜಲಾನಯನ ಪ್ರದೇಶ' ವೆಂದು ಕರೆಯಬಹುದು. ತಿರುಮಕೂಡಲು ನರಸೀಪುರ, ಹೆಮ್ಮಿಗೆ, ತಲಕಾಡು ಮತ್ತು ಕಿಬ್ಬನಹಳ್ಳಿಗಳಲ್ಲಿ ನಡೆಸಿದ ಉತ್ಖನನಗಳಿಂದ ಪ್ರಾಚೀನ ಶಿಲಾಯುಗ ಹಾಗೂ ನವೀನ ಶಿಲಾಯುಗದ ಕಾಲದ ಸಂಸ್ಕೃತಿಯ ಕುರುಹುಗಳು ಪತ್ತೆಯಾಗಿವೆ. ಇಂತಹ ಬುಡಕಟ್ಟಿನ ಸಂಸ್ಕೃತಿಯ ಆಧಾರದ ಮೇಲೆ ಜನಪದ ಸಂಸ್ಕೃತಿಯು ರೂಪುಗೊಂಡಿತ್ತು. ಮೈಸೂರು ಪ್ರದೇಶದ ಜನಪದ ಸಾಹಿತ್ಯ ಇದನ್ನು ಸ್ಪಷ್ಟೀಕರಿಸುತ್ತದೆ. ಈ ಸಾಹಿತ್ಯ ಮೌಖಿಕ ಮಾಧ್ಯಮದ ಮೂಲಕ ತಲೆತಲಾಂತರಗಳಲ್ಲಿ ಉಳಿದುಬಂದಿತು. ಈ ಪ್ರದೇಶದ ಗ್ರಾಮೀಣ ಸಮಾಜದ ಅಧ್ಯಯನಕ್ಕೆ ಇವು ಒಳ್ಳೆಯ ಆಕರಗಳಾಗಿವೆ. ಕನ್ನಡ ಭಾಷೆಯು ಬರವಣಿಗೆಗೆ ಬಳಸುವಂತಾಯಿತು. ಕ್ರಿ.ಶ. 10ನೇ ಶತಮಾನದಿಂದ ಆರಂಭವಾಗಿ 1800ರವರೆಗಿನ ಕನ್ನಡ ಸಾಹಿತ್ಯ, ಜನಪದ ನಂತರದ ಸಮಾಜದ ನಾನಾ ಮುಖಗಳನ್ನು ಪರಿಚಯ ಮಾಡಿಕೊಡುತ್ತದೆ.

ಯಾವುದೇ ಕಾಲದ ಅಥವಾ ಪ್ರದೇಶದ ಸಮಾಜ ಮತ್ತು ಸಂಸ್ಕೃತಿಯ ಇತಿಹಾಸವನ್ನು ಅಧ್ಯಯನ ಮಾಡಬೇಕಾದರೆ ಆ ಪ್ರದೇಶದ ಮತ್ತು ಕಾಲದ ರಾಜಕೀಯ ಚರಿತ್ರೆಯ ಪರಿಚಯ ಅವಶ್ಯಕ. ಏಕೆಂದರೆ ಸಂಸ್ಕೃತಿ ಮತ್ತು ಸಮಾಜಗಳ ರಕ್ಷಣೆ ಹಾಗೂ ಪೋಷಣೆಗಳ ಮಾಧ್ಯಮವೇ ರಾಜಪ್ರಭುತ್ವ. ಆದರೆ ರಾಜಪ್ರಭುತ್ವವೇ ಏಕೈಕವಾಗಿ ಸಮಾಜದ ಪಾಲನೆ ಮತ್ತು ಪೋಷಣೆಗಳನ್ನು ಮಾಡಲಾರದು. ಅದಕ್ಕೆ ಪೂರಕವಾಗಿ ಎಲ್ಲಾ ಸಮಾಜಗಳಲ್ಲೂ ಮತಧರ್ಮ ಪರ್ಯಾಯ ಶಕ್ತಿಯಾಗಿ ಬರುತ್ತವೆ. ರಾಜಪ್ರಭುತ್ವ ದಂಡಶಕ್ತಿಗೆ ಸಂಕೇತ: ಮತಧರ್ಮ ಧರ್ಮಶಕ್ತಿಯ ಸಂಕೇತ. ದಂಡ ಮತ್ತು ಧರ್ಮಗಳು ಯಾವುದೇ ಸಮಾಜದ ಎರಡು ಪ್ರಧಾನ ನಿಯಂತ್ರಣ ಮಾಧ್ಯಮಗಳು. ಇದಕ್ಕೆ ಮೈಸೂರು ಪ್ರದೇಶದ ಆಧುನಿಕ ಪೂರ್ವ ಚರಿತ್ರೆಯೂ ಹೊರತಲ್ಲ. ಈ ದೃಷ್ಟಿಯಿಂದ ಮೈಸೂರು ಪ್ರದೇಶದ ಸಾಮಾಜಿಕ ಚರಿತ್ರೆಯನ್ನು ಪರಿಶೀಲಿಸಬಹುದು.

ಮೈಸೂರು ಪ್ರದೇಶದ ರಾಜಪ್ರಭುತ್ವವು ಆಧುನಿಕ ಪೂರ್ವ ಇತಿಹಾಸದಲ್ಲಿ ಅನೇಕ ರಾಜವಂಶಗಳು, ಸ್ಥಳೀಯ ಪ್ರಭುಗಳು, ನಾಡಪ್ರಭುಗಳು, ಅಮರನಾಯಕರು ಮತ್ತು ಪಾಳೆಯಗಾರರ ಮೂಲಕ ತಮ್ಮದೇ ಆದ ರೀತಿಯಲ್ಲಿ ತನ್ನ ಪಾತ್ರವನ್ನು ನಿರ್ವಹಿಸಿದೆ. ಅವುಗಳಲ್ಲಿ ಪ್ರಧಾನವಾದ ರಾಜವಂಶಗಳು ಇಂತಿವೆ;

i) ಗಂಗ ವಂಶ

ii) ತಮಿಳುನಾಡಿನ ಚೋಳರು

iii) ಹೊಯ್ಸಳರು

iv) ವಿಜಯನಗರದ ಅರಸರು

v) ಬಿದನೂರಿನ ಅಥವಾ ಕೆಳದಿಯ ನಾಯಕರು

vi) ಕ್ರಿ.ಶ. 1800ಕ್ಕೆ ಹಿಂದಿನ ಮೈಸೂರಿನ ಒಡೆಯರು, ದಳವಾಯಿಗಳು ಮತ್ತು ಹೈದರಲಿ ಮತ್ತು ಟಿಪ್ಪುಸುಲ್ತಾನರು.

ಈ ರಾಜವಂಶದ ಪ್ರಭುತ್ವ ಕೇಂದ್ರಗಳು ತಲಕಾಡು, ದೋರಸಮುದ್ರ ಅಥವಾ ಇಂದಿನ ಹಳೇಬೀಡು, ವಿಜಯನಗರ ಅಥವಾ ಹಂಪಿ, ಕೆಳದಿ, ಇಕ್ಕೇರಿ ಮತ್ತು ಬಿದನೂರು, ಶ್ರೀರಂಗಪಟ್ಟಣ ಮತ್ತು ಮೈಸೂರುಗಳಾಗಿದ್ದವು. ಜಿಲ್ಲಾವಾರು ದೃಷ್ಟಿಯಿಂದ ಪರಿಶೀಲಿಸಿದರೆ ಈ ಕೇಂದ್ರಗಳು ಇಂದಿನ ಮೈಸೂರು, ಮಂಡ್ಯ, ಹಾಸನ ತುಮಕೂರು, ಚಿತ್ರದುರ್ಗ ಹಾಗೂ ಶಿವಮೊಗ್ಗ ಜಿಲ್ಲೆಗಳಿಗೆ ಸೀಮಿತಗೊಳ್ಳುತ್ತವೆ. ಮೈಸೂರು ಪ್ರದೇಶ ವಿಜಯನಗರ ಸಾಮ್ರಾಜ್ಯದ ಭಾಗವಾಗಿದ್ದರೂ ಆ ಸಾಮ್ರಾಜ್ಯದ ಪ್ರಭುತ್ವ ಶಕ್ತಿಯ ಕೇಂದ್ರ ಇಂದಿನ ಬಳ್ಳಾರಿ ಜಿಲ್ಲೆಯಲ್ಲಿ ಇದ್ದಿತು. ಮೇಲೆ ಸೂಚಿಸಿರುವ ರಾಜವಂಶಗಳು ಆಧುನಿಕ ಪೂರ್ವ ಕಾಲದಲ್ಲಿ, ನಮ್ಮ ಅಧ್ಯಯನ ಕಾಲದಲ್ಲಿ ಗುರುತಿಸಿಕೊಂಡಿರುವ ಪ್ರದೇಶಗಳನ್ನು ನಿರ್ಮೂಲನ, ಪ್ರತಿಷ್ಠಾಪನಾ ಮತ್ತು ಅನುಗ್ರಹ ಎಂಬ ಮೂರು ಧೋರಣೆಗಳ ಮೂಲಕ ನಿಯಂತ್ರಿಸಿ ಆಳ್ವಿಕೆ ನಡೆಸಿ ತಮ್ಮ ಕಾಣಿಕೆಗಳ ಗುರುತುಗಳನ್ನು ಬಿಟ್ಟು ಹೋಗಿದ್ದಾರೆ. ಈ ಪ್ರದೇಶದ ಸಾಮಾಜಿಕ ಚರಿತ್ರೆಯಲ್ಲಿ ಇವುಗಳ ಪಾತ್ರ ಹಿರಿದಾದದ್ದು.

ಈ ಪ್ರದೇಶದಲ್ಲಿ ದೊರಕುವ ಸಾವಿರಾರು ಶಾಸನಗಳು ಇಲ್ಲಿನ ಸಾಮಾಜಿಕ ವಿಕಾಸವನ್ನು ಮತ್ತು ಪರಿವರ್ತನೆಯನ್ನು ದಾಖಲಿಸುತ್ತವೆ. ಇದಕ್ಕೆ ಪೂರಕವಾಗಿ ಕನ್ನಡ ಮತ್ತು ಇತರ ಭಾಷೆಯ ಸಾಹಿತ್ಯ ಕೃತಿಗಳು, ವಿದೇಶಿ

ಪ್ರವಾಸಿಗರ ಗ್ರಂಥಗಳು, ಧಾರ್ಮಿಕ ಕಟ್ಟಡಗಳು ಮತ್ತು ನಾಣ್ಯಗಳು ನಮ್ಮ ಸಹಾಯಕ್ಕೆ ಒದಗುತ್ತವೆ. ತಲಕಾಡಿನ ಗಂಗರು ಈ ಪ್ರದೇಶದಲ್ಲಿ ಮೊದಲು ರಾಜಪ್ರಭುತ್ವವನ್ನು ಕಾವೇರಿ ನದಿಯ ದಂಡೆಯ ಮೇಲೆ ಕ್ರಿ.ಶ. 4-5ನೇ ಶತಮಾನದಲ್ಲಿ ಸ್ಥಾಪಿಸಿದರು. ಆದರೆ ಗಂಗರಿಗಿಂತ ಪೂರ್ವದಲ್ಲಿ ಮೌರ್ಯ ಸಾಮ್ರಾಜ್ಯದ ಭಾಗವಾಗಿ ಹಾಗೂ ಶಾತವಾಹನರ ಪ್ರಭುತ್ವಕ್ಕೆ ಒಳಗಾಗಿ ಈ ಪ್ರದೇಶವಿದ್ದಿತು. ಮೌರ್ಯರ ಸಂಪರ್ಕದ ಕುರುಹುಗಳು ಚಿತ್ರದುರ್ಗ ಜಿಲ್ಲೆಯಲ್ಲಿ ದೊರಕಿವೆ. ಬೌದ್ಧಧರ್ಮದ ಬೆಳಕಿನಲ್ಲಿ ಇಲ್ಲಿನ ಸಮಾಜ ರೂಪುಗೊಂಡಿದ್ದಿರಬಹುದು. ಆದರೆ ಗಂಗರಾಜ್ಯ ಕನ್ನಡಿಗರ ರಾಜ್ಯ ಮತ್ತು ಈ ಸ್ಥಳದ್ದು. ಒಡೆಯರ ಮೈಸೂರು ರಾಜ್ಯಕ್ಕೆ ಪೂರ್ವದ ಹೆಸರು ಗಂಗವಾಡಿ ಎಂಬುದಾಗಿತ್ತು. 11ನೇ ಶತಮಾನದಲ್ಲಿ ಇದು ಅವನತಿ ಹೊಂದಿತು. ತಮಿಳುನಾಡಿನ ಚೋಳರು ಈ ಪ್ರದೇಶವನ್ನು ಆಕ್ರಮಿಸಿಕೊಂಡು ಒಂದು ಶತಮಾನ ಕಾಲದಷ್ಟು ಆಳ್ವಿಕೆ ನಡೆಸಿದರು. ಆನಂತರ ಈ ಪ್ರದೇಶ 12ನೇ ಶತಮಾನದಲ್ಲಿ ಹೊಯ್ಸಳರ ವಶವಾಯಿತು. 14ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಭಾಗವಾಗಿ ಕ್ರಿ.ಶ. ಸುಮಾರು 1610 ರ ವರೆಗೆ ತನ್ನ ಅಸ್ಥಿತ್ವವನ್ನು ಪಡೆದುಕೊಂಡಿತು. 1610 ರಿಂದ 1800 ರವರೆಗೆ ಆರಂಭ ಕಾಲದ ಮೈಸೂರಿನ ಒಡೆಯರು ಆಳ್ವಿಕೆ ಮಾಡಿದರು. ಇಕ್ಕೇರಿಯ ನಾಯಕರು ಮಲೆನಾಡು ಪ್ರದೇಶದ ಪ್ರಭುಗಳಾಗಿದ್ದರು. ಈ ಎಲ್ಲಾ ರಾಜವಂಶಗಳು ಅನೇಕ ಕಾಲಘಟ್ಟಗಳಲ್ಲಿ ಸಮಾಜವನ್ನು ಪಾಲಿಸಿ ಪೋಷಿಸಿದರು. ಅದರ ಕೆಲವು ರೂಪುರೇಷಗಳನ್ನು ಇಲ್ಲಿ ಪ್ರಸ್ತಾಪಿಸಬಹುದು.

ದಂಡ ಮತ್ತು ಧರ್ಮ ಈ ಪ್ರದೇಶದ ಸಾಮಾಜಿಕ ವಿಕಾಸದಲ್ಲಿ ಮಹತ್ತರ ಪಾತ್ರವಹಿಸಿದವು. ಇಲ್ಲಿನ ರಾಜವಂಶಗಳು ಸಮಾಜವನ್ನು ಪರಿವರ್ತಿಸುವ ಶಾಸನಗಳನ್ನು ಮಾಡಿದ್ದು ಕಂಡು ಬರುವುದಿಲ್ಲ. ಆಧುನಿಕ ಪೂರ್ವ ರಾಜರು ಇಂದಿನ ರಾಜ್ಯಗಳಂತೆ ಸಾಮಾಜಿಕ ಶಾಸನ ಮಾಡುವ ಪ್ರಯತ್ನಗಳನ್ನು ಮಾಡಿದ್ದು ಕಡಿಮೆ. ಇದಕ್ಕೆ ಕಾರಣವೇನು? ಆಧುನಿಕ ಪೂರ್ವರಾಜರು ಸಾಮಾಜಿಕ ಯಥಾಸ್ಥಿತಿಯನ್ನು ಕಾಪಾಡಿಕೊಂಡು ಬರುವುದರಲ್ಲಿ ಮಾತ್ರ ಆಸಕ್ತರಾಗಿದ್ದರು. ರಾಜರು ತೀವ್ರವಾದ ಸಮಾಜ ಪರಿವರ್ತನೆಗೆ ಕೈ ಹಾಕಿದ್ದಿದ್ದರೆ, ಅವರ ಅಧಿಕಾರಕ್ಕೆ ಅಪಾಯ ಬರುವ ಸಾಧ್ಯತೆಗಳಿದ್ದವು. ಆದುದರಿಂದ ರಾಜರನ್ನು ಕುರಿತಂತೆ ಕನ್ನಡ ಶಾಸನಗಳು ಅವರನ್ನು "ಪೂರ್ವ ಮರ್ಯಾದೆ"ಯನ್ನು ಕಾಪಾಡಿಕೊಂಡು ಹೋಗುವವರೆಂದು ವರ್ಣಿಸುತ್ತವೆ. ಹಾಗಾದರೆ ಸಮಾಜದ ಪರಿವರ್ತನೆ ಆಗಿದುದರ ಮೂಲ ಯಾವುದು ? ಸಮಾಜ ಪರಿವರ್ತನೆಯ ಮೂಲ ವಿವಿಧ ಕಾಲಘಟ್ಟಗಳಲ್ಲಿ ಅಸ್ಥಿತ್ವದಲ್ಲಿದ್ದ ವಿವಿಧ ರೀತಿಯ ಸಮೂಹಗಳಿಂದಲೇ ಎಂದು ಹೇಳಬಹುದು. ಸಮೂಹಗಳ ಒತ್ತಡದಿಂದ ಅಥವಾ ಬೇರೆ ಕಾರಣಗಳಿಗಾಗಿ ಜನರ ಸಮ್ಮತಿಯ ಮೇರೆಗೆ ರಾಜರು ಶಾಸನವನ್ನು ಮಾಡಬಹುದಾಗಿತ್ತು. ಆದುದರಿಂದಲೇ ಆಧುನಿಕ ಪೂರ್ವ ರಾಜವಂಶಗಳು ವಿವಿಧ ಸಮೂಹಗಳನ್ನು ಅವರವರ ಧಾರ್ಮಿಕ ಮತ್ತು ಸಾಂಸ್ಕೃತಿಕ ಒಲವುಗಳನ್ನು ಸಮಾನ ದೃಷ್ಟಿಯಲ್ಲಿ ನೋಡುವ ಸಾರ್ವತ್ರಿಕ ನೀತಿಯನ್ನು

ಅನುಸರಿಸಿದವು. ಸಮೂಹಗಳ ನಡುವೆ ಸಂಘರ್ಷದ ಸ್ಥಿತಿ ಏರ್ಪಟ್ಟು, ಕಾನೂನು ಭಂಗವಾಗುವ ಸ್ಥಿತಿಯಲ್ಲಿದ್ದಾಗ ಮಾತ್ರ ರಾಜಪ್ರಭುತ್ವ ಮಧ್ಯ ಪ್ರವೇಶಿಸುತ್ತಿತ್ತು. ಒಟ್ಟಿನಲ್ಲಿ ಸಮಾಜದ ಪರಿವರ್ತನೆಯು ಆಧುನಿಕ ಪೂರ್ವ ಕಾಲದಲ್ಲಿ ಸಮಾಜದ ಒಳಗಿನಿಂದಲೇ ಮೂಡಿಬಂದುದಾಗಿತ್ತು.

ವರ್ಣಾಶ್ರಮ ಧರ್ಮ, ನಾಲ್ಕು ಪುರುಷಾರ್ಥಗಳು ಮತ್ತು ದಾನ ಆಧುನಿಕ ಪೂರ್ವ ಮೈಸೂರು ಪ್ರದೇಶದ ಸಾಮಾಜಿಕ ಜೀವನದ ಆಧಾರಸ್ತಂಭಗಳಾಗಿದ್ದವು. ವರ್ಣಾಶ್ರಮ ಧರ್ಮವೆಂದರೆ ವೈದಿಕ ಸಂಸ್ಕೃತಿಯ ಕಾಲದಿಂದ ವಿಸ್ತಾರಗೊಳ್ಳುತ್ತಾ ಸಾಗಿದ ಜಾತಿವ್ಯವಸ್ಥೆ. ಆಶ್ರಮಧರ್ಮವು ಒಬ್ಬ ವ್ಯಕ್ತಿಯ ಜೀವನವನ್ನು ನಾಲ್ಕು ಹಂತಗಳಾಗಿ ಗುರುತಿಸಿದ್ದನ್ನು ಸೂಚಿಸುತ್ತದೆ. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೇ ನಾಲ್ಕು ಪುರುಷಾರ್ಥಗಳು. ಮೈಸೂರು ಪ್ರದೇಶದ ಶಾಸನಗಳನ್ನು ಗಮನಿಸಿದರೆ ದಾನ ಎಂತಹ ಶಕ್ತಿಯಾಗಿ ಸಾಮಾಜಿಕ ಪ್ರಕ್ರಿಯೆಯಲ್ಲಿ ಪಾಲ್ಗೊಂಡಿತ್ತು ಎಂಬುದನ್ನು ಗ್ರಹಿಸಬಹುದು. ಈ ಮೇಲಿನ ಯಾವ ಆಧಾರಸ್ತಂಭವೂ ಅನುವರ್ತನೆಯಾಗದೇ ಪರಿವರ್ತನಾಶೀಲ ರೂಪವನ್ನು ಪಡೆದುಕೊಳ್ಳುತ್ತಾ ಸಾಗಿತ್ತು. ಉದಾಹರಣೆಗೆ 12ನೇ ಶತಮಾನದ ನಂತರ ಬಸವೇಶ್ವರರು ಉತ್ತರ ಕರ್ನಾಟಕದಲ್ಲಿ ಜಾರಿಗೆ ತರಲು ಪ್ರಯತ್ನಿಸಿದ್ದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿ ದಕ್ಷಿಣ ಕರ್ನಾಟಕದ ಮೈಸೂರಿನ ಪ್ರದೇಶಕ್ಕೂ ಪ್ರಸಾರಗೊಂಡಿತು. ಪ್ರಾಯಶಃ ಮಲೆಮಹದೇಶ್ವರರು ಬಸವೇಶ್ವರರ ಕ್ರಾಂತಿಯ ವಿಚಾರಗಳನ್ನು ಬಸವೋತ್ತರ ಕಾಲದಲ್ಲಿ ಮೈಸೂರು ಪ್ರದೇಶದಲ್ಲಿ ಹರಡಿದರೆಂದು ಕಾಣುತ್ತದೆ. ಆನಂತರ ವೀರಶೈವ ಮಠಗಳು ಇಲ್ಲಿ ಹುಟ್ಟಿಕೊಂಡವು. ಕಪಿಲಾ ನದಿಯ ದಂಡೆಯ ಮೇಲಿರುವ ಸುತ್ತೂರಿನಲ್ಲಿ ಸುತ್ತೂರು ವೀರಶೈವ ಮಠ ಸ್ಥಾಪಿಸಲ್ಪಟ್ಟಿತು. ವೀರಶೈವ ಪಂಥ ಒಂದೆರಡು ಮೂಲಭೂತವಾದ ಸಮಾಜದ ಪರಿವರ್ತನೆಗೆ ಕಾರಣವಾಗಬಹುದಾದ ತತ್ವಗಳನ್ನು ಪ್ರಚಾರ ಮಾಡಿತು;

i) ಅಸ್ತಿತ್ವದಲ್ಲಿದ್ದ ಜಾತಿಪದ್ಧತಿಯನ್ನು ನಿರಾಕರಿಸಿತು.

ii) ವೈಧಿಕ ಪರಂಪರೆಯ ಕರ್ಮಕಾಂಡವನ್ನು ವಿರೋಧಿಸಿತು.

iii) ಲಿಂಗಭೇದವನ್ನು ತೊಡೆದು ಸಮಾನತೆಯ ದೃಷ್ಟಿಕೋನವನ್ನು ಎತ್ತಿ ಹಿಡಿಯಿತು.

iv) ಎಲ್ಲಾ ಕಾಯಕಗಳು ಅಥವಾ ವೃತ್ತಿಗಳು ಸಮಾನವಾದದ್ದು, ಯಾವ ಕಾಯಕವೂ ಮೇಲಲ್ಲ, ಕೀಳಲ್ಲ ಅಂತಿಮವಾಗಿ 'ಕಾಯಕವೇ ಕೈಲಾಸ' ವೆಂಬ ತತ್ವವನ್ನು ಎತ್ತಿ ಹಿಡಿಯಿತು.

v) ಲಿಂಗರೂಪದ ಇಷ್ಟಲಿಂಗದ ಮಾರ್ಗದಲ್ಲಿ ಶಿವನೇ ಏಕೈಕ ದೇವರೆಂದು ಘೋಷಿಸಿತು.

---

*35. ತಿಪ್ಪೇರುದ್ರಸ್ವಾಮಿ ಹೆಚ್., ವಚನಗಳಲ್ಲಿ ವೀರಶೈವ ಧರ್ಮ, ಮೈಸೂರು, 1997, ಪು. 276-288*

vi) ಈ ವೀರಶೈವ ಸಮಾಜವು ಎಲ್ಲಾ ಜಾತಿಗಳು ಪುರುಷರು ಮತ್ತು ಸ್ತ್ರೀಯರು ಹಾಗೂ ಎಲ್ಲಾ ಕಸುಬುಗಳನ್ನು ಅನುಸರಿಸುತ್ತಿದ್ದ ಜನರನ್ನು ಒಳಗೊಂಡಿತು.

vii) ದೇವಾಲಯಗಳ ಸಂಸ್ಕೃತಿಯನ್ನು ಹೆಚ್ಚಾಗಿ ಪ್ರತಿಪಾದಿಸಲಿಲ್ಲ. ಧರ್ಮದ ನೆಲೆಗಟ್ಟು ವೈಯಕ್ತಿಕವಾಯಿತು[35].

ಮೇಲಿನ ಅಂಶಗಳನ್ನು ಪರಿಶೀಲಿಸಿದರೆ 12ನೇ ಶತಮಾನದ ನಂತರ ನಮ್ಮ ಅಧ್ಯಯನದ ಪ್ರದೇಶದಲ್ಲಿನ ಸಮಾಜದ ಪರಿವರ್ತನೆಗೆ ಚಾಲನೆ ಕೊಟ್ಟ ಶಕ್ತಿಯ ಪರಿಚಯವಾಗುತ್ತದೆ. ಆದರೆ ಇದೊಂದೇ ಸಮಾಜದ ಏಕೈಕ ಮಾದರಿಯಾಗಿರಲಿಲ್ಲ.

ಕ್ರಿ.ಶ. 12ನೇ ಶತಮಾನದಲ್ಲಿ ರಾಮಾನುಜರು ಈ ಪ್ರದೇಶಕ್ಕೆ ಆಗಮಿಸಿದರು. ತಾವು ಕಂಡಿದ್ದ ವಿಶಿಷ್ಟಾದ್ವೈತ ದರ್ಶನವನ್ನೂ ಮತ್ತು ಅದಕ್ಕೆ ಪೂರಕವಾಗಿ ಭಕ್ತಿಮಾರ್ಗವನ್ನೂ ಹಾಗೂ ದೇವಾಲಯ ಸಂಸ್ಕೃತಿಯನ್ನು ಪ್ರಚಾರ ಮಾಡಿದರು. ಇದರ ಪರಿಣಾಮವಾಗಿ ಮೇಲುಕೋಟೆ, ತೊಣ್ಣೂರು ಮತ್ತು ಸಾಲಿಗ್ರಾಮ ಮೊದಲಾದ ಸ್ಥಳಗಳು ಅವರ ಭೇಟಿಯಿಂದ ಸಮಾಜದ ಪರಿವರ್ತನೆಯ ಕೇಂದ್ರಗಳಾದವು. ಹೊಯ್ಸಳರಲ್ಲೇ ಅತ್ಯಂತ ಪ್ರಸಿದ್ಧನಾದ ವಿಷ್ಣುವರ್ಧನನು ಜೈನಧರ್ಮವನ್ನು ಬಿಟ್ಟು ರಾಮಾನುಜರ ಶ್ರೀ ವೈಷ್ಣವಧರ್ಮವನ್ನು ಸ್ವೀಕರಿಸಿದನೆಂದು ಅನೇಕ ಶಾಸನಗಳು, ವೈಷ್ಣವ ಸಾಹಿತ್ಯ ಕೃತಿಗಳು ಹಾಗೂ ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ[36]. ರಾಮಾನುಜ ಪಂಥವು ವಿಷ್ಣುವರ್ಧನನಂತಹ ರಾಜನ ಪೋಷಣೆಗೆ ಒಳಪಟ್ಟಾಗ ಅದು ನಾನಾ ರೀತಿಯಲ್ಲಿ ಪ್ರಕಟಗೊಳ್ಳುವಂತಾಯಿತು ಮತ್ತು ಸುಧಾರಣಾ ದೃಷ್ಟಿಯಲ್ಲಿ ಸಾಮಾಜಿಕ ಪರಿವರ್ತನೆಯ ಅಂಶಗಳೂ ಕಾಣಿಸಿಕೊಂಡವು. ಹಾಗಾಗೀ ಮೈಸೂರು ಪ್ರದೇಶದಲ್ಲಿ ದೇವಾಲಯ ಸಂಸ್ಕೃತಿ ದಟ್ಟವಾಗಿ ಪ್ರಕಟಗೊಂಡಿತು. ದೋರಸಮುದ್ರ, ಬೇಲೂರು, ನುಗ್ಗೇಹಳ್ಳಿ, ಸೋಮನಾಥಪುರ ಮೊದಲಾದ ಕಡೆ ದೇವಾಲಯಗಳು ನಿರ್ಮಿಸಲ್ಪಟ್ಟವು. ಮೇಲುಕೋಟೆಯಲ್ಲಿ ವರ್ಷದ ಒಂದು ದಿವಸಕ್ಕಾದರೂ ಅಂತ್ಯಜರನ್ನು (ಅಸ್ಪೃಶ್ಯರನ್ನು) ದೇವಾಲಯದ ಒಳಗಡೆ ಬಿಡುವಂತಾಯಿತು. ರಾಮಾನುಜರು ಈ ವರ್ಗದ ಜನರನ್ನು 'ತಿರುಕುಲತ್ತರ್ ಅಥವಾ ದೇವರ ಕುಲ'ದವರು ಎಂದು ನಾಮಕರಣ ಮಾಡಿದ್ದು ಸಂಪ್ರದಾಯ ರೀತಿಯಲ್ಲಾದರೂ ಒಂದು ಪರಿವರ್ತನೆಯ ಸಂಕೇತವಲ್ಲವೇ![37]

ಈ ಎಲ್ಲಾ ಸಾಮಾಜಿಕ ಚಳವಳಿಗೂ ಹಿನ್ನೆಲೆಯಾಗಿ ಆದಿಶಂಕರಾಚಾರ್ಯರು ಈ ಪ್ರದೇಶದ ಚಿಕ್ಕಮಗಳೂರು

---

*36. ಹಯವದನ್ ರಾವ್ ಸಿ. (ಸಂ); ಮೈಸೂರ್ ಗೆಜೆಟಿಯರ್, ಸಂಪುಟ - II, ಭಾಗ - II, ಬೆಂಗಳೂರು, 1930. ಪು. 1324-1325*

*37. ಗೋಪಾಲ್ ಬಾ.ರಾ., ಕರ್ನಾಟಕದಲ್ಲಿ ಶ್ರೀರಾಮಾನುಜಾಚಾರ್ಯರು, ಮೈಸೂರು, 1984, ಪು. 52~*

ಜಿಲ್ಲೆಯ ಶೃಂಗೇರಿಯಲ್ಲಿ ಅದ್ವೈತ ಪರಂಪರೆಯ ಮಠವನ್ನು ಕ್ರಿ.ಶ. 8ನೇ ಶತಮಾನದಲ್ಲಿ ಸ್ಥಾಪಿಸಿದ್ದು ಒಂದು ಪ್ರಮುಖ ಘಟನೆಯಾಗಿದೆ. ಅವರ ಕಾಲದಲ್ಲಿ ಅವರ ಮೂಲಕ ಸಂಪ್ರದಾಯಬದ್ಧ ಚೌಕಟ್ಟಿನ ಒಳಗೇ ಕೆಲವಾರು ಐಕ್ಯಮತ್ಯದ ಕಡೆಗೆ ಸುಧಾರಣೆಗಳಾದವು. ದರ್ಶನದ ಹಂತದಲ್ಲಿ ಅವರದು ದ್ವೈತ ಸಿದ್ಧಾಂತವಾಗಿದ್ದರೆ ಕೆಳಹಂತದಲ್ಲಿ ಜನಸಾಮಾನ್ಯರು ಅನುಸರಿಸುತ್ತಿದ್ದ ಬಹುದೇವತಾ ಪಂಥಗಳ ಪರಂಪರೆಯಲ್ಲಿ ಅವರು ಅದ್ವೈತ ಸಿದ್ಧಾಂತವನ್ನು ಗೌರವಿಸಿದ್ದು ಒಂದು ಪ್ರಮುಖ ಸಾಮಾಜಿಕ ಕೊಡುಗೆ ಎನ್ನಬಹುದು. ಧರ್ಮಪಂಥಗಳ ಹೆಸರಿನಲ್ಲಿ ಸಿಡಿದು ಹೋಗಿದ್ದ ಸಮಾಜವನ್ನು ಅವರು ಐಕ್ಯತೆಯ ಕಡೆಗೆ ಕೊಂಡೊಯ್ದರು. ಉದಾಹರಣೆಗೆ ಅವರ ಪಾಂಚಾಯತನ ಪೂಜಾವ್ಯವಸ್ಥೆಯನ್ನು ನೀಡಬಹುದು. ಇದರಲ್ಲಿ ಅವರು ಆದಿತ್ಯಂ, ಅಂಬಿಕಾ, ವಿಷ್ಣು, ಗಣನಾಥ, ಮಹೇಶ್ವರ ಸಂಪ್ರದಾಯಗಳನ್ನು ಸಾತ್ವಿಕ ರೀತಿಯಲ್ಲಿ ಸಂಘಟಿಸಿದರು[38]. ಈ ಮಠದ ಪರಂಪರೆಯನ್ನು ವಿಜಯನಗರದ ಅರಸರೂ, ಕೆಳದಿ ನಾಯಕರೂ ಮತ್ತು ಮೈಸೂರಿನ ಒಡೆಯರೂ ಪೋಷಿಸುತ್ತಾ ಬಂದರು.

ಮೈಸೂರು ಪ್ರದೇಶದಲ್ಲಿ ಸಮಾಜದ ಪರಿವರ್ತನೆಯ ಮಾಧ್ಯಮವಾಗಿ ಕ್ರಿ.ಶ. ಪೂರ್ವ 4ನೇ ಶತಮಾನದಿಂದಲೂ ಜೈನಧರ್ಮ ತನ್ನ ಕೊಡುಗೆಯನ್ನು ನೀಡಿತು. ಮೌರ್ಯ ಸಾಮ್ರಾಜ್ಯದ ಚಕ್ರವರ್ತಿ ಚಂದ್ರಗುಪ್ತ ಜೈನರ ಪವಿತ್ರ ಸ್ಥಳವಾದ ಹಾಸನ ಜಿಲ್ಲೆಯಲ್ಲಿರುವ ಶ್ರವಣಬೆಳಗೊಳದಲ್ಲಿ ಸಲ್ಲೇಖನ ಕೈಗೊಂಡು ಮರಣ ಹೊಂದಿದನೆಂದು ಅನೇಕ ದಾಖಲೆಗಳು ತಿಳಿಸುತ್ತವೆ. ಮುಂದೆ ಶ್ರವಣಬೆಳಗೊಳ ಈ ಪ್ರದೇಶದ ಜೈನಧರ್ಮದ ಅತ್ಯಂತ ಪ್ರಸಿದ್ಧ ಪ್ರದೇಶವೆಂದು ಹೆಸರು ಪಡೆಯಿತು. ಅಹಿಂಸೆಯಂತಹ ಮೌಲ್ಯವನ್ನು ಜೈನಮುನಿಗಳು ಪ್ರಚಾರ ಮಾಡಿದರು. ಅನೇಕಾಂತ ಅಥವಾ ಸ್ಯಾದ್ವಾದ ಜೈನಧರ್ಮದ ಬಹುದೊಡ್ಡ ಕೊಡುಗೆ. ಒಂದು ಸತ್ಯಕ್ಕೆ ನಾನಾ ಮುಖಗಳು ಇರುತ್ತವೆ ಎಂಬುದೇ ಈ ದರ್ಶನದ ಮುಖ್ಯ ಸೂತ್ರ. ಇದರಿಂದ ಈ ಪ್ರದೇಶದ ಸಮಾಜದಲ್ಲಿ ಅಹಿಂಸೆ ಮತ್ತು ಧರ್ಮ ಸಹಿಷ್ಣುತೆಗಳಂತಹ ಮೌಲ್ಯಗಳು ಪ್ರಚಾರಕ್ಕೆ ಬರಲು ಸಹಾಯಕವಾದವು. ಒಟ್ಟಿನಲ್ಲಿ ಬ್ರಾಹ್ಮಣ, ಶ್ರಮಣ ಮತ್ತು ಶರಣ ಸಂಸ್ಕೃತಿಗಳೆಂಬ ತ್ರಿವೇಣಿ ಸಂಗಮವು ಈ ಪ್ರದೇಶದಲ್ಲಿ ಉಂಟಾಯಿತು ಮತ್ತು ಸಾಮಾಜಿಕ ಪರಿವರ್ತನೆಯು ನಿಧಾನಗತಿಯಲ್ಲಾದರೂ ಸಂಭವಿಸಿತು[39].

---

38. ***ಶ್ರೀನಿವಾಸ. ವಿ. ಪಡಿಗರ್.***, *ವಿಷ್ಣು ಕಲ್ಟ್ ಇನ್ ಕರ್ನಾಟಕ, ಮೈಸೂರ್, 1996, ಪು. 81*
39. ***ಕಲಘಟಗಿ ಜಿ.ಟಿ. (ಸಂ).***, *ಕರ್ನಾಟಕದಲ್ಲಿ ಜೈನಧರ್ಮ - ಒಂದು ಅಧ್ಯಯನ, 1976, ಪು. 22*
    ***- ನೇಮಿನಾಥದಾದಾ ಭೊಮ್ಮಾಜ ಮತ್ತು ಶ್ರೀ ಅಣ್ಣಾರಾಯ ಅಪ್ಪಣ ಮಿರ್ಜಿ***, *ವಿಶ್ವಧರ್ಮದಲ್ಲಿ ಅನೇಕಾಂತ ಮತ್ತು ಅಹಿಂಸೆ, ಸೇಡಬಾಳ, 1972, ಪು. 18-23*
40. ***ಪ್ರಸನ್ನಕುಮಾರ್ ಎಂ.***, *ಮೈಸೂರಿನ ಇತಿಹಾಸದಲ್ಲಿ 'ದಾನ', ಕ್ರಿ.ಶ. 1600-1881, ಮೈಸೂರು, 2001, ಪು. 405*

'ದಾನವು ಆಧುನಿಕ ಪೂರ್ವ ಮೈಸೂರಿನ ಸಮಾಜದಲ್ಲಿ ಅತ್ಯಂತ ಜನಪ್ರಿಯವಾದ ಮೌಲ್ಯವಾಗಿದ್ದು ಅದರ ಮೂಲಕ ಸಮಾಜದಲ್ಲಿ ಅನೇಕ ಕಾರ್ಯಗಳು ಏರ್ಪಡುವುದಕ್ಕೆ ಪ್ರಚೋದನೆ ಸಿಕ್ಕಿತು. ಅಗ್ರಹಾರ, ದೇವಾಲಯ, ಮಠ ಮತ್ತು ರಾಜರ ಆಸ್ಥಾನಗಳು ದಾನದ ಅಸ್ತಿತ್ವದ ಮೇಲೆ ನಿಂತಿದ್ದವು. ಇವು ಸಂಸ್ಕೃತಿಯ ಪ್ರಚಾರದ ಮಾಧ್ಯಮಗಳಾಗಿದ್ದವು, ಸಂಸ್ಕೃತಿಯ ಸಂರಕ್ಷಣಾ ಕೇಂದ್ರಗಳಾಗಿದ್ದವು[40]. ಇದು ಹಿಂದೂ ಧರ್ಮದ ನೆಲೆಗಟ್ಟಿನಲ್ಲೇ ಸಾಗುತ್ತಿದ್ದ ಮೈಸೂರು ಪ್ರದೇಶದ ಸಾಮಾಜಿಕ ಪರಿವರ್ತನೆಯ ಬೆಳವಣಿಗೆಯಾದರೆ ಮೈಸೂರು ಪ್ರದೇಶವನ್ನು ಹೊಸದಾಗಿ ಪ್ರವೇಶಿಸಿದ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳ ಬೆಳವಣಿಗೆಯ ಕಾಲದಲ್ಲಿ ಕಾಣಿಸಿಕೊಂಡ ಸಾಮಾಜಿಕ ಪರಿವರ್ತನೆಯ ಬಗೆಗಿನ ಪರಿಚಯವನ್ನು ಮುಂದೆ ಪ್ರಸ್ತಾಪಿಸಲಾಗಿದೆ.

14ನೇ ಶತಮಾನದ ನಂತರ ಇಸ್ಲಾಂ ಧರ್ಮವು ಮತ್ತು ಆಧುನಿಕ ಕಾಲದಲ್ಲಿ ಕ್ರೈಸ್ತಧರ್ಮವು ಈ ಪ್ರದೇಶಕ್ಕೆ ಕಾಲಿಟ್ಟು ಸಮಾಜದ ಪರಿವರ್ತನೆಗೆ ಪ್ರಚೋದನೆಯನ್ನು ನೀಡಿದವು. ಮೈಸೂರಿನ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸದಲ್ಲಿ 1761 ರಿಂದ 1799 ರ ವರೆಗಿನ ಕಾಲವು ಬಹುಪ್ರಮುಖವಾದದು. ಈ ಅವಧಿಯಲ್ಲಿ ಇಸ್ಲಾಂ ಧರ್ಮದ ಹಿನ್ನೆಲೆಯಲ್ಲಿ ಹೈದರಲಿ ಮತ್ತು ಟಿಪ್ಪುಸುಲ್ತಾನರು ಮೈಸೂರು ಒಡೆಯರಿಂದ ಅಧಿಕಾರ ಕಿತ್ತುಕೊಂಡು ಇಸ್ಲಾಂ ಹಾಗೂ ಹಿಂದೂ ಧರ್ಮದ ನೆಲೆಗಟ್ಟಿನಲ್ಲಿ ಮೈಸೂರು ಪ್ರದೇಶವನ್ನಾಳಿದರು. ಇಸ್ಲಾಂ ಹಾಗೂ ಹಿಂದೂ ಪದ್ಧತಿಗಳ ಪ್ರಕಾರವಾಗಿ ಆಡಳಿತವನ್ನು ನಡೆಸುವ ಮೂಲಕ ಸ್ವಮತ ಪಕ್ಷಪಾತಿಗಳಾಗದೆ ತಮ್ಮ ಪೂಜೆ ಮತ್ತು ವ್ರತಗಳ ಬಗ್ಗೆ ಸ್ವತಂತ್ರರಾಗಿದ್ದುಕೊಂಡು ಬ್ರಾಹ್ಮಣರಿಗೂ, ದೇವಾಲಯಗಳಿಗೂ ದಾನದತ್ತಿಗಳನ್ನು ಕೊಡುವ ಮೂಲಕ ಸ್ಥಳೀಯ ಸಂಸ್ಕೃತಿಯ ಸಂರಕ್ಷಕರೂ ಆಗಿದ್ದರು. ಈ ಅವಧಿಯಲ್ಲಿ ಮುಸ್ಲಿಂ ನೋಬಲ್‌ವರ್ಗವು ಮಧ್ಯ ಏಷ್ಯಾದ ಭಾಗಗಳಿಂದ ಅವಕಾಶಗಳನ್ನರಿಸಿಕೊಂಡು ಮೈಸೂರು ಪ್ರದೇಶಕ್ಕೆ ಬರಲಾರಂಭಿಸಿದರು. ಇದರಿಂದ ಪರ್ಷಿಯನ್ ಭಾಷೆ ಮತ್ತು ಪಾರಿಭಾಷಿಕ ಶಬ್ದಗಳ ಬಳಕೆ ಮೈಸೂರು ರಾಜ್ಯಾಡಳಿತವನ್ನು, ಸಮಾಜವನ್ನು ವ್ಯಾಪಿಸಲಾರಂಭಿಸಿದವು. ವ್ಯಾಪಾರಸ್ಥ ಮುಸ್ಲಿಮರು ಶಿರಾವನ್ನೊಳಗೊಂಡಂತೆ ದಖ್ಖನ್ನಿನ ಪ್ರಮುಖ ನಗರಗಳಿಂದ ಶ್ರೀರಂಗಪಟ್ಟಣ ಹಾಗೂ ಅದರ ಬಳಿಯಿದ್ದ ಷಹರ್ ಗಂಜಾಂಗೆ ವಲಸೆ ಬಂದು ನೆಲೆಸಿದರು. ಹೀಗೆ ಮೈಸೂರು ಪ್ರದೇಶದಲ್ಲಿ ಮುಸ್ಲಿಂ ಜನಸಮುದಾಯ, ಇಸ್ಲಾಂ ಸಂಸ್ಕೃತಿ, ಇಸ್ಲಾಂ ಧರ್ಮ ಮತ್ತು ಆಡಳಿತ ವ್ಯವಸ್ಥೆ ಪ್ರಮುಖವಾಗಿ ರಾಜಾಸ್ಥಾನವನ್ನು ಪಡೆದವು. ಇದರ ಪರಿಣಾಮವಾಗಿ ಬದಲಾವಣೆಯ ತೀವ್ರತೆ ಕಡಿಮೆ ಇದ್ದ ಸಂಪ್ರದಾಯಬದ್ಧ ಸಾಮಾಜಿಕ ವ್ಯವಸ್ಥೆಯಲ್ಲಿ ತೀವ್ರವಾದ ಬದಲಾವಣೆಗಳು, ಪರಿವರ್ತನೆಗಳು ಕಾಣಿಸಿಕೊಳ್ಳಲಾರಂಭಿಸಿದವು.

ನಂತರ ಟಿಪ್ಪುವಿನ ಆಳ್ವಿಕೆಯ ಕಾಲದಲ್ಲಿ ಬೆಳೆದ ಯೂರೋಪಿಯನ್ನರ (ಫ್ರೆಂಚರ) ಹಾಗೂ ಮಧ್ಯ ಏಷ್ಯಾದ ದೇಶಗಳ ನಡುವಿನ ಸಂಬಂಧವು ಮೈಸೂರು ಪ್ರದೇಶದಲ್ಲಿ ಆಧುನಿಕತೆಯ ವಿಚಾರಧಾರೆಗಳನ್ನು ಹಾಗೂ ವಸ್ತುಗಳ ಪರಿಚಯವನ್ನು ಮಾಡಿಕೊಟ್ಟವು. ರಾಜಕೀಯವಾಗಿ, ಆರ್ಥಿಕವಾಗಿ ಹಾಗೂ ವೈಚಾರಿಕವಾಗಿ ಪರಿವರ್ತನೆಗೆ ಅವು ಅವಕಾಶವನ್ನು ಮಾಡಿಕೊಟ್ಟವು. ಫ್ರಾನ್ಸಿನೊಂದಿಗಿನ ಟಿಪ್ಪುವಿನ ಸಂಪರ್ಕವು ರಾಜಕೀಯ, ಆರ್ಥಿಕಾಭಿವೃದ್ಧಿಯ ಹಾಗೂ ಸೈನಿಕ ಸಹಾಯವನ್ನು ಪಡೆಯುವ ಉದ್ದೇಶವನ್ನು ಹೊಂದಿದ್ದರೂ ಸಹ ಮುಂದೆ ಮೈಸೂರು ಇತಿಹಾಸವನ್ನು ಬ್ರಿಟಿಷರು ಹೊಸದಾಗಿ ರೂಪಿಸಲು ಅನುವು ಮಾಡಿಕೊಟ್ಟಿತು. ಈ ಹಿನ್ನೆಲೆಯಲ್ಲಿ ಮೈಸೂರು ಪ್ರದೇಶವು 18ನೇ ಶತಮಾನದಲ್ಲೇ ಟಿಪ್ಪುವಿನ ನೇತೃತ್ವದಲ್ಲೇ ಆಧುನಿಕತೆಯತ್ತ ಮುನ್ನಡೆಯಲು ಪ್ರಯತ್ನಿಸಿದ್ದನ್ನು ಗುರುತಿಸಬಹುದು[41]. ಹಾಗಾಗಿ ಸಮಗ್ರ ಭಾರತದ ಮಟ್ಟದಲ್ಲಿ ಆಧುನಿಕತೆಯ ಪ್ರಕ್ರಿಯೆಯ ಆರಂಭ ಹತ್ತೊಂಬತ್ತನೆ ಶತಮಾನವಾದರೆ ಮೈಸೂರು ಪ್ರದೇಶದಲ್ಲಿ ಹದಿನೆಂಟನೆ ಶತಮಾನದ ಅಂತ್ಯದಲ್ಲೇ ಕಾಣಿಸಿಕೊಳ್ಳಲು ಆರಂಭಿಸಿತ್ತು.

ಈ ಅಧ್ಯಾಯದ ಆರಂಭದಲ್ಲೇ 'ಆಧುನಿಕತೆ'ಯು ಪಾಶ್ಚಿಮಾತ್ಯ ಸಂಪರ್ಕದೊಂದಿಗೆ ಮಿಳಿತವಾದುದೆಂದು ವ್ಯಾಖ್ಯಾನಿಸಿರುವ ಪರಿಕಲ್ಪನೆಗೆ ಟಿಪ್ಪುವಿನ ಆಲೋಚನೆಗಳು ಮತ್ತು ಕ್ರಮಗಳು ಸ್ಪಷ್ಟತೆಯನ್ನು ನೀಡಿವೆ. ಅದರಂತೆ ಭಾರತದ ಮಟ್ಟದಲ್ಲಿ ಪಾಶ್ಚಿಮಾತ್ಯ ಹಾಗೂ ಆಧುನಿಕತೆ ಎಂಬುದು ಬ್ರಿಟಿಷರ ಸಂಪರ್ಕವನ್ನು ಸೂಚಿಸಿದರೆ ಮೈಸೂರು ಪ್ರದೇಶಕ್ಕೆ ಬ್ರಿಟಿಷರ ಸಂಪರ್ಕಕ್ಕಿಂತ ಹೆಚ್ಚಾಗಿ ಫ್ರೆಂಚರ ಸಂಪರ್ಕದಲ್ಲೇ ಮೊದಲೆನಿಸುತ್ತದೆ. ಆ ಕಾಲಕ್ಕೆ ಬ್ರಿಟನ್ ಸೇರಿದಂತೆ ಇಡೀ ಯೂರೋಪಿನಲ್ಲಾಗಿದ್ದ ಭೌತಿಕ, ವೈಚಾರಿಕ ವಿಚಾರಧಾರೆಗಳು ಫ್ರೆಂಚರ ಮೂಲಕ ಮೈಸೂರು ಪ್ರದೇಶವನ್ನು ಪ್ರವೇಶಿಸಿ ಬ್ರಿಟಿಷರನ್ನು ಎದುರಿಸುವತ್ತ ಮುನ್ನಡೆದಿತ್ತು. ಹಾಗಾಗೀ ಸಮಗ್ರ ಭಾರತದ ಮಟ್ಟದಲ್ಲಿ ಆಧುನಿಕತೆಯ ಪ್ರಕ್ರಿಯೆಯ ಆರಂಭ ಹತ್ತೊಂಬತ್ತನೆ ಶತಮಾನವಾದರೆ, ಮೈಸೂರು ಪ್ರದೇಶದಲ್ಲಿ ಹದಿನೆಂಟನೆ ಶತಮಾನದ ಅಂತ್ಯದಲ್ಲೇ ಎನ್ನಬಹುದು. ಪಾಶ್ಚಿಮಾತ್ಯ ಪ್ರಭಾವವು ಸಮಗ್ರ ಭಾರತಕ್ಕೆ ಬ್ರಿಟಿಷರ ಮೂಲಕವಾದರೆ ಮೈಸೂರು ಪ್ರದೇಶಕ್ಕೆ ಫ್ರೆಂಚರ ಮೂಲಕ. ಭಾರತವು ವಸಾಹತು ವ್ಯವಸ್ಥೆಯ ಮೂಲಕ ಆಧುನಿಕತೆಯ ಪ್ರಕ್ರಿಯೆಗೊಳಗಾದರೆ ಮೈಸೂರು ಸ್ನೇಹ, ಮಿತ್ರತ್ವದಡಿಯ ರಾಯಭಾರದ ಮೂಲಕ ಫ್ರೆಂಚರಿಂದ ಆಧುನಿಕ ಪ್ರಕ್ರಿಯೆಗೆ ಟಿಪ್ಪುವಿನ ಕಾಲದಲ್ಲೇ ಒಳಪಟ್ಟಿತು. ಆದುದರಿಂದ ನಮ್ಮ ಅಧ್ಯಯನದಲ್ಲಿ ಆಧುನಿಕ ಮತ್ತು ಪಾಶ್ಚಿಮಾತ್ಯ ಎಂಬುದರ ನಡುವಣ ಗಡಿಯನ್ನು ಸ್ಪಷ್ಟವಾಗಿ ಗುರುತಿಸಿಲ್ಲ. ನಮ್ಮ ಅಧ್ಯಯನ ಕಾಲದಲ್ಲಿ ಆಧುನಿಕ ಎಂದು ಮೈಸೂರು ವಲಯಕ್ಕೆ ಆಮದಾದುದೆಲ್ಲಾ ಪಾಶ್ಚಾತ್ಯ

---

41. ***ಇರ್ಫಾನ್ ಹಬೀಬ್ (ಸಂ).,*** *ರೆಸಿಸ್ಟೆನ್ಸ್ ಅಂಡ್ ಮಾಡರ್ನೈಸೇಷನ್ ಅಂಡರ್ ಹೈದರಲಿ ಅಂಡ್ ಟಿಪ್ಪುಸುಲ್ತಾನ್, ಟುಲಿಕ, ನವದೆಹಲಿ, 1999, ಪು. 144-166*

*- **ಫ್ರಾನ್ಸಿಸ್ ಬುಕಾನನ್.,** ಎ ಜರ್ನಿ ಫ್ರಮ್ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಅಂಡ್ ಮಲಬಾರ್, ಸಂಪುಟ - 1, ನ್ಯೂಡೆಲ್ಲಿ, 1999, ಪು. 70-73*

*- **ಬಿ. ಷೇಕ್ ಅಲಿ (ಸಂ).,** ಕರ್ನಾಟಕ ಚರಿತ್ರೆ (ಕ್ರಿ.ಶ. 1760-1800), ಸಂಪುಟ 5, ಹಂಪಿ, 1997, ಪು. 539*

ಮೂಲದ್ದೇ. ಇಂತಹ ಬಾಹ್ಯ ಪ್ರಭಾವಗಳನ್ನು ನಾವು ಪಾಶ್ಚಿಮಾತ್ಯ ಅಥವಾ ಆಧುನಿಕ ಎಂಬ ಶಬ್ದದ ಮೂಲಕ ಈ ಮಹಾಪ್ರಬಂಧದುದ್ದಕ್ಕೂ ಬಳಸಿಕೊಂಡಿರುತ್ತೇವೆ.

ಟಿಪ್ಪುವಿನ ಪತನಾ ನಂ ತರದಿಂದ ಹಿಡಿದು 1902ರ ವರೆಗಿನ ಮೈಸೂರು ಪ್ರದೇಶದ ಸಾಮಾಜಿಕ ಚರಿತ್ರೆಯನ್ನು ಸಮೀಕ್ಷಿಸಿದಾಗ ಅದು ವಿಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ಏಕೆಂದರೆ ಬ್ರಿಟಿಷರ ಪ್ರತ್ಯಕ್ಷ ಹಾಗೂ ಪರೋಕ್ಷ ಆಡಳಿತ ಕ್ರಮ, ಪಾಶ್ಚಿಮಾತ್ಯ ಶಿಕ್ಷಣ, ಕ್ರೈಸ್ತಧರ್ಮ ಮೈಸೂರು ಪ್ರದೇಶದ ಸಮಾಜದಲ್ಲಿ ಹೊಸ ಮಧ್ಯಮವರ್ಗ ಹಾಗೂ ಗಣ್ಯ ವರ್ಗದ ಉದಯಕ್ಕೆ ಕಾರಣವಾದವು. ಹತ್ತೊಂಬತ್ತನೆ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಕಾಣಿಸಿಕೊಂಡ ಸಾಮಾಜಿಕ ಸುಧಾರಣೆಗೂ, ಮೈಸೂರು ಪ್ರದೇಶದಲ್ಲಿ ಕಾಣಿಸಿಕೊಂಡ ಸಾಮಾಜಿಕ ಸುಧಾರಣೆಗೂ ವಿಭಿನ್ನತೆ ಇದೆ. ಬ್ರಿಟಿಷ್ ಭಾರತದಲ್ಲಿ ಗಣ್ಯವರ್ಗದವರು ಆರಂಭದಲ್ಲಿ ಸಾಮಾಜಿಕ ಅನಿಷ್ಟಗಳ ವಿರುದ್ಧ ವ್ಯವಸ್ಥಿತ 'ಚಳವಳಿ' ಕೈಗೊಂಡು ಉನ್ನತ ಸಮಾಜೋ-ಧಾರ್ಮಿಕ ಗುರಿಯತ್ತ ಮುನ್ನಡೆಯಲು ಪ್ರಯತ್ನಿಸಿ ನಂತರದಲ್ಲಿ ವಿದೇಶಿ ಸರ್ಕಾರದ ಮೇಲೆ ಒತ್ತಡ ತರಲು, ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸಲು ಸಂಘ ಸಂಸ್ಥೆಗಳ ಮೂಲಕ ನಾಯಕತ್ವ ವಹಿಸಿಕೊಳ್ಳಲು ಮುಂದಾದರು. ಆದರೆ ದೇಶೀಯ ಸಂಸ್ಥಾನವಾದ ಮೈಸೂರಿನಲ್ಲಿ ದೇಶೀಯ ರಾಜರು ಮತ್ತು ಆಡಳಿತ ವ್ಯವಸ್ಥೆಯೇ ಸುಧಾರಣಾ ಪ್ರಕ್ರಿಯೆಯ ನಾಯಕತ್ವ ವಹಿಸಿಕೊಳ್ಳುತ್ತದೆ ಎಂದು ಸಮಾಜದ ಜನತೆ ಭಾವಿಸಿದ್ದರು (ರಾಜಾ ಪ್ರತ್ಯಕ್ಷ ದೇವತಾ : ಪ್ರಜಾರಕ್ಷಕ). ಏಕೆಂದರೆ ಬ್ರಿಟಿಷರ ಅಪರೋಕ್ಷ ಆಡಳಿತದ ಚೌಕಟ್ಟಿನಲ್ಲಿ ಸ್ಥಳೀಯ ಸಂಸ್ಥಾನಗಳು ದೇಶೀಯ ರಾಜರಿಂದ ಪ್ರತ್ಯಕ್ಷವಾಗಿ ಆಳಲ್ಪಡುತ್ತಿದ್ದವು. ಹಾಗಾಗೀ ದೇಶೀಯ ರಾಜರು ದೇಶೀಯತೆಯ ಅಥವಾ ರಾಷ್ಟ್ರೀಯ ಸಂಸ್ಕೃತಿಯ ಸಂಕೇತವಾಗಿದ್ದರು. ಈ ಹಿನ್ನೆಲೆಯಲ್ಲಿ ದೇಶೀಯ ಆಳ್ವಿಕೆಯಲ್ಲಿ ಪಾಶ್ಚಿಮಾತ್ಯ ಪ್ರಭಾವದಿಂದುಂಟಾದ ಪ್ರಗತಿಪರ ಸುಧಾರಣೆಗಳಿಗೆ ರಾಜ ತಾನೇ ಮಾದರಿಯಾಗಿ, ನಾಯಕತ್ವವನ್ನು ವಹಿಸಿಕೊಂಡು ಸಮಾಜವನ್ನು ಮುನ್ನಡೆಸುತ್ತಾನೆಂಬ ಸಾರ್ವಜನಿಕ ಅಭಿಪ್ರಾಯ ಮೂಡಿತು. ಹಾಗಾಗಿ ರಾಜಕೀಯ-ಸಾಮಾಜಿಕ ಬದಲಾವಣೆಗಳ ಬೇಡಿಕೆಗಳನ್ನು ಕುರಿತಂತೆ ಸಾರ್ವಜನಿಕ ಅಭಿಪ್ರಾಯವು ಬ್ರಿಟಿಷ್ ಭಾರತ ಮತ್ತು ದೇಶೀಯ ಸಂಸ್ಥಾನಗಳ ಪ್ರದೇಶಗಳಲ್ಲಿ ವಿಭಿನ್ನವಾಗಿದ್ದಿತು.

ಭಾರತೀಯ ಮಟ್ಟದ ಸಮಾಜ ೋ-ಧಾರ್ಮಿಕ ಸುಧಾರಣೆಯ ನೆಲೆಗಟ್ಟಿನ ಹಿನ್ನೆಲೆಯಲ್ಲೇ ಮೈಸೂರಿನ

*42. ಮಾದೇಗೌಡ, ಪೂರ್ವೋಕ್ತ, ಪು. 128*

ಸಮಾಜದಲ್ಲಿಯೂ ಸ್ಥಾಪನೆಗೊಂಡಿದ್ದ ಬ್ರಹ್ಮಸಮಾಜ, ಆರ್ಯಸಮಾಜ, ರಾಮಕೃಷ್ಣ ಮಿಷನ್, ಥಿಯೋಸಾಫಿಕಲ್ ಸೊಸೈಟಿಯ ತತ್ವಗಳಿಗೆ ಮೈಸೂರು ಪ್ರದೇಶದ ಗಣ್ಯವರ್ಗದವರು ಹೆಚ್ಚಾಗಿ ಸ್ಪಂದಿಸದೇ ನಿರ್ದಿಷ್ಟ ಪಂಥದ, ವರ್ಗಗಳ (ಜಾತಿಯ) ಸುಧಾರಣೆಗೊಳಿಸಲು ಹಾಗೂ ಸರ್ಕಾರದಿಂದ ರಾಜಕೀಯ ಮತ್ತು ಆರ್ಥಿಕ ಸವಲತ್ತುಗಳನ್ನು ಗಳಿಸಲು ಪ್ರಯತ್ನಿಸಿದರು[42].

ಅಂತಹ ಸಂಸ್ಥೆಗಳಲ್ಲಿ ಮೈಸೂರು ನಗರದ ಗೋವಿಂದಾಚಾರ್ಯ ಸ್ವಾಮಿಯವರ ನೇತೃತ್ವದಲ್ಲಿ ಶ್ರೀವೈಷ್ಣವ ಪುನರುಜ್ಜೀವನ ಚಳವಳಿಯು 1898ರ ನಂತರ ಆರಂಭಗೊಂಡು[43], ಮದ್ವಾಚಾರ್ಯರ ಸಾಹಿತ್ಯ ಮತ್ತು ತತ್ವಗಳನ್ನು ವ್ಯವಸ್ಥಿತ ಅಧ್ಯಯನದ ಮೂಲಕ ಮಾಧ್ವಪಂಥವನ್ನು ಬಲಗೊಳಿಸುವ ಉದ್ದೇಶವನ್ನು ಒಳಗೊಂಡಿತ್ತು[44]. ಶ್ರೀ ವೈಷ್ಣವ ಪಂಥದ ಈ ಬೆಳವಣಿಗೆಯನ್ನು ಅರಿತ ವೀರಶೈವರು 'ಲಿಂಗಾಯತ್ ಎಜುಕೇಷನ್ ಅಸೋಸಿಯೇಷನ್' ಅನ್ನು ಸ್ಥಾಪಿಸಿಕೊಂಡು ತಮ್ಮ ಪಂಥದಲ್ಲಿ "ಜೀವನ ಮತ್ತು ಸ್ಥಿರತೆಯ ಮೇಲೆ ಪರಿಣಾಮ ಬೀರುವ ಧಾರ್ಮಿಕ ಹಾಗೂ ಲೌಕಿಕ ಸಮಸ್ಯೆಗಳನ್ನು ಚರ್ಚಿಸುವ" ಉದ್ದೇಶ ಹೊಂದಿ ಮುನ್ನಡೆದರು[45]. ಈ ರೀತಿ ಯಾವುದೇ ಧಾರ್ಮಿಕ ಅಥವಾ ಪಂಥದ ಸಿದ್ಧಾಂತವಿಲ್ಲದೆ ಕೇವಲ ಜಾತಿಯ ವೈಚಾರಿಕತೆಯ ಮೇಲೆ ವಿದ್ಯಾವಂತ ಒಕ್ಕಲಿಗರು 'ಒಕ್ಕಲಿಗರ ಸಂಘ'ವನ್ನು ಕುರುಬರು 'ಕುರುಬರ ಸಂಘ'ವನ್ನು ಸ್ಥಾಪಿಸಿಕೊಂಡರು. ಈ ಸಂಘಗಳು ರಾಜ್ಯದಾದ್ಯಂತ ತಮ್ಮ ತಮ್ಮ ಸಾಮಾಜಿಕ ಗುಂಪುಗಳ ಸಾಮಾನ್ಯ ಬೆಳವಣಿಗೆ, ಪ್ರಮುಖವಾಗಿ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಲು ಸಂಘಟಿತಗೊಂಡವಾಗಿದ್ದವು. ಈ ಸಂಘ ಸಂಸ್ಥೆಗಳೊಂದಿಗೆ ಅನೇಕ ಸಾಹಿತಿಕ ಸಂಘ ಸಂಸ್ಥೆಗಳು, ವಿದ್ಯಾವಂತ ಕುಲೀನ ವರ್ಗದ ಅಧಿಕಾರಿ ಹಾಗೂ ಅಧಿಕಾರೇತರ ವರ್ಗದವರ ಪ್ರಯತ್ನದಿಂದ ಆರಂಭಗೊಂಡು ನಗರ ಪ್ರದೇಶಗಳಲ್ಲಿನ ತಮ್ಮ ತಮ್ಮ ಸಂಸ್ಥೆಗಳ ಸದಸ್ಯರ ಶೈಕ್ಷಣಿಕ, ಸಾಮಾಜಿಕ ಪರಸ್ಪರ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವ ಉದ್ದೇಶವನ್ನು ಹೊಂದಿದ್ದವು[46]. ಇದರೊಂದಿಗೆ ಅನೇಕ "ಸಾಮಾಜಿಕ ಹಿತಾಸಕ್ತಿಗೆಂದು ಪರಿಗಣಿತ"ವಾದ ಸಂಸ್ಥೆಗಳು ಸಹ ಸ್ಥಾಪನೆಗೊಂಡಿದ್ದು, ಮುಖ್ಯವಾಗಿ ಪ್ಲಾಂಟರುಗಳ, ಗಣಿ ಉದ್ಯಮಿಗಳ ಹಾಗೂ ಪೌರಸಭೆಗಳಿಗೆ ತೆರಿಗೆ ಸಲ್ಲಿಸುವವರ ಹಿತಾಸಕ್ತಿಗಳನ್ನು ಪ್ರತಿನಿಧಿಸುತ್ತಿದ್ದವು. ಇವುಗಳಿಗೆ ಸರ್ಕಾರವು ಮಾನ್ಯತೆ ನೀಡಿದುದಲ್ಲದೇ ಪ್ರಜಾಪ್ರತಿನಿಧಿ ಸಭೆಯಲ್ಲಿ ಇವುಗಳಿಗೆ ಪ್ರಾತಿನಿಧ್ಯವನ್ನು ನೀಡಲಾಗಿತ್ತು.

---

43. *ಫರ್ಕುಹರ್ ಜೆ.ಎನ್., ಮಾಡರ್ನ್ ರಿಲಿಜಿಯಸ್ ಮೂವ್‌ಮೆಂಟ್ಸ್ ಇನ್ ಇಂಡಿಯಾ, ಪು. 292*
44. *ಮಾದೇಗೌಡ, ಪೂರ್ವೋಕ್ತ, ಪು. 128*
45. *ಮಜುಂದಾರ್ ಆರ್.ಸಿ. (ಸಂ)., ಹಿಸ್ಟರಿ ಅಂಡ್ ಕಲ್ಚರ್ ಆಫ್ ದಿ ಇಂಡಿಯನ್ ಪೀಪಲ್, ಸಂಪುಟ - 10. ಭಾಗ-II, ದೆಹಲಿ, ಪು. 136*
46. *ಮಾದೇಗೌಡ, ಪೂರ್ವೋಕ್ತ, ಪು. 128-129*
47. *ಪ್ರೊಸಿಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಅಕ್ಟೋಬರ್ 1891 ರಿಂದ 1902*

ದಿವಾನರು ಪ್ರಜಾಪ್ರತಿನಿಧಿ ಸಭೆಯಲ್ಲಿ ಮಾಡಿದ ಭಾಷಣವೊಂದರಲ್ಲಿ ರಾಜ್ಯದ ಮುಂದುವರಿದ ವರ್ಗದ ಪಂಗಡಗಳ ಅಭಿಪ್ರಾಯಗಳನ್ನು ಪಡೆಯಲು 100ಕ್ಕೂ ಹೆಚ್ಚಿನ ಸದಸ್ಯರನ್ನೊಳಗೊಂಡ ಪ್ರಮುಖ ಸಂಘ ಸಂಸ್ಥೆಗಳು ತಮ್ಮ ಒಬ್ಬ ಸದಸ್ಯರನ್ನು ಪ್ರಜಾಪ್ರತಿನಿಧಿ ಸಭೆಗೆ ಕಳುಹಿಸಬಹುದೆಂದು ತಿಳಿಸಿದರು. ಅದರಂತೆ ಮುಂದುವರಿದ ವರ್ಗದ ಸಮಾಜದಿಂದ ಪ್ರಜಾಪ್ರತಿನಿಧಿ ಸಭೆಗೆ 7 ರಿಂದ 8 ಸದಸ್ಯರನ್ನು ಆಯ್ಕೆ ಮಾಡಿ ಕಳುಹಿಸುವಂತಾಯಿತು[47].

ಹೀಗೆ ಮೇಲ್ಕಂಡ ಸಂಘ ಸಂಸ್ಥೆಗಳ ಸಂಖ್ಯೆಗಳನ್ನು ಗಮನಿಸಿದರೆ ಗಣ್ಯವರ್ಗದ ಸಂಸ್ಥೆಗಳ ಸಂಖ್ಯೆಗೆ ರಾಜ್ಯದಲ್ಲಿ ಅಭಾವವಿರಲಿಲ್ಲ. ಆದರೆ ಬ್ರಿಟಿಷ್ ಪ್ರಾಂತ್ಯಗಳಲ್ಲಿದ್ದಂತೆ ಯಾವ ವ್ಯಕ್ತಿ ಅಥವಾ ಸಂಸ್ಥೆಯಾಗಲೀ ಆ ಕಾಲದ ಸಾಮಾಜಿಕ ಅನಿಷ್ಟಗಳ ವಿರುದ್ಧ ವ್ಯವಸ್ಥಿತ 'ಚಳವಳಿ' ಕೈಗೊಂಡು ಸಮಾಜವನ್ನು ಉನ್ನತ ಸಮಾಜೋ-ಧಾರ್ಮಿಕ ಗುರಿಯತ್ತ ಮುನ್ನಡೆಸಲು ಮುಂದಾಗದಿದ್ದುದ್ದು ಆಶ್ಚರ್ಯ ತರುತ್ತದೆ. ಮೈಸೂರಿನ ವಿದ್ಯಾವಂತ ಗಣ್ಯವರ್ಗವೂ 19ನೇ ಶತಮಾನದ ಬ್ರಹ್ಮಸಮಾಜ, ಆರ್ಯಸಮಾಜ, ಪ್ರಾರ್ಥನಾ ಸಮಾಜ ಮುಂತಾದವುಗಳ ಮಾದರಿಯಲ್ಲಾಗಲೀ ಅಥವಾ ಪೂನಾದ ಸಾರ್ವಜನಿಕ ಸಭಾ ಮತ್ತು ಮದ್ರಾಸ್‌ನ ಮಹಾಸಭಾದ ಮಾದರಿಯಲ್ಲಾಗಲೀ ಪ್ರಮುಖ ಸಾಮಾಜಿಕ ಚಳವಳಿಗಳನ್ನು ಕೈಗೊಳ್ಳಲು ಏಕೆ ಮುಂದಾಗಲಿಲ್ಲ ಎಂಬ ಪ್ರಶ್ನೆ ಎದುರಾಗುತ್ತದೆ. ಅದಕ್ಕೆ ಕಾರಣವನ್ನು ಬ್ರಿಟಿಷರ ವಸಾಹತುಶಾಹಿ ಆಳ್ವಿಕೆಯ ವಿಧಾನದಲ್ಲಿ ಗುರುತಿಸಬಹುದು.

ಈ ಮೇಲ್ಕಂಡ ಬೆಳವಣಿಗೆಯನ್ನು ನೋಡಿದಾಗ ಬ್ರಿಟಿಷ್ ಭಾರತದ ಪ್ರದೇಶಗಳಲ್ಲಿ ಬ್ರಿಟಿಷರ ಉಪಸ್ಥಿತಿಯಲ್ಲಿ ಭಾರತೀಯ ಸಮಾಜದ ಬಹುಸಂಖ್ಯಾತ ಧರ್ಮೀಯರಾದ ಹಿಂದೂಗಳು ಸಂಘಟಿತರಾಗಿ ರಾಷ್ಟ್ರಮಟ್ಟದ, ಅಖಂಡ ಜನಸ್ತೋಮದ, ಸಮಾಜದ ಬಹುಮುಖ್ಯ ಸಮಸ್ಯೆಗಳನ್ನು ಸುಧಾರಿಸಲು ಸಾಮಾಜಿಕ ಸುಧಾರಣಾ ಚಳವಳಿಗಳನ್ನು ನಡೆಸುತ್ತಾ ಬಂದಿದ್ದನ್ನು ಕಾಣಬಹುದು. ಆದರೆ ಬ್ರಿಟಿಷರ ಅನುಪಸ್ಥಿತಿಯಲ್ಲಿ, ದೇಶೀಯ ಸಂಸ್ಥಾನಗಳಲ್ಲಿ ಬಹುಸಂಖ್ಯಾತ ಹಿಂದೂಧರ್ಮದಲ್ಲಿ ಐಕ್ಯತೆಗೆ ಬದಲು, ಪಂಥ, ಜಾತಿಗಳ ಆಧಾರದ ಮೇಲೆ ವಿಘಟನೆಗೊಂಡು ತಮ್ಮ ತಮ್ಮ ಜಾತಿ ಪಂಥಗಳ ಹಿತಾಸಕ್ತಿಗಳನ್ನು ಪ್ರಾಮುಖ್ಯವಾಗಿಸಿಕೊಂಡು ಇಡೀ ಸಮಾಜದ ಬೆಳವಣಿಗೆಯನ್ನು ನಿರ್ಲಕ್ಷಿಸಿದರು. ಈ ಪ್ರಕ್ರಿಯೆಯಿಂದಾಗಿ ಸಂಘಟಿತಗೊಂಡ ಪ್ರಬಲ ಮುಂದುವರಿದ ಗಣ್ಯವರ್ಗದ ನಾಯಕತ್ವ ಪಡೆದ ಜಾತಿ ಮತ್ತು ಪಂಥಗಳು ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಯಿಂದುಂಟಾದ ಪ್ರಭಾವಗಳಿಗೆ ಹೆಚ್ಚು ಒಳಗಾದವು. ಸಂಘಟಿತವಾಗದ

ಜಾತಿ ವರ್ಗಗಳು ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಯ ಪ್ರಭಾವ ವಲಯದಿಂದ ಹೊರ ಉಳಿದವು. ಹಾಗಾಗಿ 1902ರಲ್ಲಿ ನಾಲ್ವಡಿಯವರು ಅಧಿಕಾರ ವಹಿಸಿಕೊಂಡಾಗ ಅಸಮತೋಲನವಾದ ಪಾಶ್ಚಿಮಾತ್ಯ ಪ್ರಭಾವದ ಸಮಾಜ ರೂಪುಗೊಂಡಿತ್ತು ಹಾಗೂ ವಿಭಿನ್ನತೆಯಿಂದ ಕೂಡಿದ ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಯು ತೀವ್ರತೆಯನ್ನು ಪಡೆದುಕೊಳ್ಳುವ ಹಾದಿಯತ್ತ ಸಾಗುವ ಹಂತದಲ್ಲಿತ್ತು.

ಹೀಗೆ ಆಧುನಿಕ ಪೂರ್ವಕಾಲದಲ್ಲಿ ಹಾಗೂ ಆಧುನಿಕತೆಯ ಆರಂಭ ಕಾಲದಲ್ಲಿನ ಮೈಸೂರು ಪ್ರದೇಶದ ಸಮಾಜವು ಸಂಪ್ರದಾಯದ ಕಡೆಗೆ ಹೆಚ್ಚಾಗಿ ವಾಲಿತ್ತಾದರೂ ತನ್ನ ಚಲನಶೀಲತೆಯನ್ನಾಗಲಿ ಅಥವಾ ಪರಿವರ್ತನೆಯ ಗುಣವನ್ನಾಗಲಿ ಕಳೆದುಕೊಂಡಿರಲಿಲ್ಲ. ಮೇಲಿನ ಸ್ಥೂಲವಾದ ಚರ್ಚೆಯಲ್ಲಿ ಸಾಕಷ್ಟು ವಿವರಗಳು ಇಲ್ಲದೇ ಇರುವ ಕೊರತೆಯ ಅರಿವು  ನಮಗಿದೆ. ಆದರೆ ವಿವರಣೆಗಳನ್ನು ನೀಡುವುದಕ್ಕೆ ಹೋದರೆ ಈ ಸಂಶೋಧನಾ ವಿಷಯಕ್ಕೆ ಅಪ್ರಾಮುಖ್ಯತೆ ಬರುವ ಸಂಭವವಿರುವುದನ್ನು ಗಮನಿಸಿ ಪ್ರಸ್ತುತ ಅಧ್ಯಯನದ ಪರಿಕಲ್ಪನೆಗೆ ಹಿನ್ನೆಲೆಯಾಗಿ ಮಾತ್ರ ಇದನ್ನು ಸಂಗ್ರಹಿಸಲಾಗಿದೆ. ಇದರ ಉದ್ದೇಶ ಆಧುನಿಕ ಪೂರ್ವ ಮೈಸೂರು ಪ್ರದೇಶದ ಸಾಮಾಜಿಕ ವಿಕಾಸದಲ್ಲಿ ಚಲನೆ ಮತ್ತು ಆಧುನಿಕ ಪರಿಕಲ್ಪನೆಗಳು ಇದ್ದವು ಎಂಬುದನ್ನು ಮತ್ತು ಅವುಗಳನ್ನು ನಿರ್ದೇಶಿಸಿದ ಶಕ್ತಿಗಳನ್ನು ಗುರುತಿಸುವುದೇ ಆಗಿದೆ. ಇಂತಹ ಸಂಪ್ರದಾಯಬದ್ಧ ಚಲನಶೀಲ ಆಧುನಿಕ ಪೂರ್ವ ಮೈಸೂರು ಪ್ರದೇಶದ ಸಮಾಜ 20ನೇ ಶತಮಾನದ ಪ್ರಥಮಾರ್ಧದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ನೇತೃತ್ವದಲ್ಲಿ ವೇಗ ಮತ್ತು ತೀವ್ರತೆಯನ್ನು ಹೇಗೆ ಪಡೆದುಕೊಂಡಿತು ಎಂಬುದನ್ನು ಪ್ರಧಾನವಾಗಿ ಮುಂದಿನ ಅಧ್ಯಾಯಗಳಲ್ಲಿ ಪ್ರಸ್ತಾಪಿಸಲಾಗುವುದು. ಆಧುನಿಕ ಕಾಲದಲ್ಲಿ ಇಂತಹ ಚಲನಶೀಲತೆಯ ಮತ್ತು ಪರಿವರ್ತನೆಯ ರೂವಾರಿ ನಾಲ್ವಡಿಯವರು. ಆದುದರಿಂದ ಅವರು ಇಂತಹ ಪರಿವರ್ತನಶೀಲ ಸಮಾಜಕ್ಕೆ ಹೇಗೆ ಮಾದರಿಯಾಗಿ ರೂಪುಗೊಂಡರು ಎಂಬ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಅಧ್ಯಾಯ - 2

# ಸಂಪ್ರದಾಯ ಹಾಗೂ ಆಧುನಿಕತೆಯ ಸಮನ್ವಯಕರಾಗಿ ನಾಲ್ವಡಿ ಕೃಷ್ಣರಾಜ ಒಡೆಯರ ಜೀವನ ಮತ್ತು ವ್ಯಕ್ತಿತ್ವದ ವಿಕಾಸ

ಚರಿತ್ರೆಯ ಮೂಲಭೂತ ಪರಿಕಲ್ಪನೆಗಳನ್ನು ವಿಶ್ಲೇಷಿಸಿದ ಪ್ರಖ್ಯಾತ ಇತಿಹಾಸಕಾರರು ಒಂದು ಮುಖ್ಯವಾದ ಪ್ರಶ್ನೆಯನ್ನು ತಮ್ಮ ವೃತ್ತಿ ಜೀವನದಲ್ಲಿ ಎದುರಿಸಬೇಕಾಯಿತು. ಒಂದು ಕಾಲದ ಮತ್ತು ಒಂದು ಪ್ರದೇಶದ ಐತಿಹಾಸಿಕ ಪ್ರಕ್ರಿಯೆಗಳನ್ನು ಹಾಗೂ ಘಟನೆಗಳನ್ನು ರೂಪಿಸುವ ಪ್ರಯತ್ನದಲ್ಲಿ ಪ್ರಮುಖ ಪಾತ್ರ ಮಹಾನ್ ವ್ಯಕ್ತಿಯದೋ ಅಥವಾ ಆಯಾಯಾ ಪರಸರದಿಂದ ರೂಪುಗೊಂಡ ಘಟನೆಗಳದೋ ಎಂಬುದೇ ಇತಿಹಾಸಕಾರರನ್ನು ಇಂದಿಗೂ ಕಾಡುತ್ತಿರುವ ಪ್ರಶ್ನೆಯಾಗಿದೆ. ಮಹಾನ್ ವ್ಯಕ್ತಿಗಳು ಇತಿಹಾಸದ ಕಾಲಘಟ್ಟಗಳಲ್ಲಿ ಪರಿವರ್ತನೆಯನ್ನು ತಂದಿರುವ ವಿಷಯ ಸುಸ್ಪಷ್ಟವಾಗಿ ಕಾಣುತ್ತದೆ. ಏಸುಕ್ರಿಸ್ತ, ಮಹಮದ್ ಪೈಗಂಬರ್, ಗಾಂಧೀಜಿ ಮತ್ತು ಅಂಬೇಡ್ಕರ್‌ರಂತಹ ಮಹಾನ್ ವ್ಯಕ್ತಿಗಳು ಸಮಾಜದ ಚಲನೆಗೆ ಹಾಗೂ ಪರಿವರ್ತನೆಗೆ ಉತ್ತಮವಾದ ಕಾಣಿಕೆಗಳನ್ನು ನೀಡಿದ್ದಾರೆ. ಆದರೆ ಮೇಲೆ ಸೂಚಿಸಿರುವ ಮಹಾ ವ್ಯಕ್ತಿಗಳನ್ನು ರೂಪಿಸಿದ ಶಕ್ತಿ, ಪರಿಸರ ಮತ್ತು ಪರಂಪರೆಗಳೆಂದಹದ್ದು ಎಂಬುದನ್ನು ನಾವು ಮರೆಯಬಾರದು. ಈ ದೃಷ್ಟಿಯನ್ನು ಇಟ್ಟುಕೊಂಡು ಮೈಸೂರು ಸಂಸ್ಥಾನದ ಆಧುನಿಕ ಇತಿಹಾಸದಲ್ಲಿ ಮಹತ್ತರ ಪಾತ್ರ ವಹಿಸಿದ ನಾಲ್ವಡಿ ಕೃಷ್ಣರಾಜ ಒಡೆಯರವರ ಜೀವನ ಮತ್ತು ವ್ಯಕ್ತಿತ್ವದ ವಿಕಾಸವನ್ನು ನಿರೂಪಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ನಾಲ್ವಡಿ ಕೃಷ್ಣರಾಜ ಒಡೆಯರು ಬದುಕಿದ್ದ ಕಾಲ ಆಧುನಿಕ ಭಾರತದ ಇತಿಹಾಸದಲ್ಲಿ ನವೋದಯ ಮತ್ತು ಪ್ರಗತಿಶೀಲ ಪ್ರವೃತ್ತಿಯ ಕಾಲವಾಗಿತ್ತೆಂದು ಹೇಳಬಹುದು. ಮೈಸೂರಿನ ಸಂಪ್ರದಾಯಬದ್ಧ ಚಲನಶೀಲ ಸಮಾಜವು ಪಾಶ್ಚಿಮಾತ್ಯ ಪ್ರಭಾವದಿಂದ ಪರಿವರ್ತನೆಯ ಕಡೆಗೆ ನಾಲ್ವಡಿ ಕೃಷ್ಣರಾಜ ಒಡೆಯರ ನೇತೃತ್ವದಲ್ಲಿ ಸಾಗಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರು ಕೇವಲ ಸಂಪ್ರದಾಯವಾದಿಯಾಗಿದ್ದಿದ್ದರೆ ಅಂದಿನ ಸಾಮಾಜಿಕ ಪರಿವರ್ತನೆಯ ತೀವ್ರತೆ ನಮಗೆ ದಟ್ಟವಾಗಿ ತೋರುತ್ತಿರಲಿಲ್ಲ. ಆದುದರಿಂದ ಅವರನ್ನು ನಾವು ಈ ಅಧ್ಯಯನದಲ್ಲಿ ಪರಿವರ್ತನೆಯ ರೂವಾರಿ ಎಂದು ಗುರುತಿಸಿಕೊಂಡಿದ್ದೇವೆ. ವ್ಯಕ್ತಿ ಸಮಷ್ಠಿಯಿಂದ ಬಲವನ್ನು ಪಡೆದುಕೊಳ್ಳುತ್ತಾನೆ ಮತ್ತು ಸಮಷ್ಠಿಗೆ ತನ್ನದೇ ಆದ ಕಾಣಿಕೆಗಳನ್ನು ಕೊಡುತ್ತಾನೆ. ಹಾಗೆಂದ ಮಾತ್ರಕ್ಕೆ ಸಮಾಜದ ಎಲ್ಲಾ ವ್ಯಕ್ತಿಗಳು ವಿಶಿಷ್ಟವಾದ ಕಾಣಿಕೆಗಳನ್ನು ಕೊಡುತ್ತಾರೆ

ಎಂದು ಅರ್ಥವಲ್ಲ. ಪ್ರಖ್ಯಾತ ಇತಿಹಾಸಕಾರರಾದ ಇ.ಹೆಚ್. ಕಾರ್‌ರವರು ಅಭಿಪ್ರಾಯ ಪಡುವಂತೆ ನಾವು ಯಾವುದೇ ದೇಶ ಅಥವಾ ಕಾಲದ ಚರಿತ್ರೆಯಲ್ಲಿ ಗುರುತಿಸಿ ವ್ಯಾಖ್ಯಾನ ಮಾಡುವುದು ವಿಶಿಷ್ಟ ವ್ಯಕ್ತಿಗಳನ್ನು ಮತ್ತು ಘಟನೆಗಳನ್ನು[48] ಎಂಬುದನ್ನು ನಾವು ಇಲ್ಲಿ ಸ್ಮರಿಸಬಹುದು. ಈ ದೃಷ್ಟಿಯಿಂದ ನಾಲ್ವಡಿ ಕೃಷ್ಣರಾಜ ಒಡೆಯರ ಜೀವನ ಮತ್ತು ವ್ಯಕ್ತಿತ್ವದ ವಿಕಾಸವನ್ನು ವಿಶ್ಲೇಷಿಸಲಾಗಿದೆ. ಸಮಾಜದ ಪರಿವರ್ತನೆಯ ನೇತಾರರಾಗಿ ಅವರನ್ನು ರೂಪಿಸಿದ ವ್ಯಕ್ತಿ, ಶಕ್ತಿ ಮತ್ತು ಪ್ರಭಾವಗಳನ್ನು ಇಲ್ಲಿ ಪರಿಶೀಲಿಸಲಾಗುವುದು. ಒಬ್ಬ ಮಹಾನ್ ವ್ಯಕ್ತಿಯ ಜೀವನವನ್ನು ಪರೀಕ್ಷಿಸಿದಾಗ ಅವರ ವ್ಯಕ್ತಿತ್ವದ ಅನೇಕ ಲಕ್ಷಣಗಳಿಗೆ ಎರಡು ಆಕರಗಳನ್ನು ಗುರುತಿಸಬಹುದು.

i) ಪರಂಪರೆಯಿಂದ ಪಡೆದುಕೊಂಡಿದ್ದು.

ii) ತಾನೇ ಸ್ವಪ್ರಯತ್ನದಿಂದ ಗಳಿಸಿಕೊಂಡಿದ್ದು.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಮೂರು ಸ್ಥೂಲವಾದ ಪರಿಕಲ್ಪನೆಗಳನ್ನು ಮಾಡಿಕೊಳ್ಳಲಾಗಿದೆ.

i) ಶಿಕ್ಷಣ

ii) ಪ್ರವಾಸ

iii) ಪ್ರಭಾವ

### *i) ಶಿಕ್ಷಣ*

ಶಿಕ್ಷಣವು ಒಬ್ಬ ವ್ಯಕ್ತಿಯನ್ನು, ತನ್ನ ಸುತ್ತಲಿನ ಸಮಾಜವನ್ನು ಮತ್ತು ಪರಿಸರವನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಇರುವ ಒಂದು ಪ್ರಮುಖ ಮಾಧ್ಯಮವಾಗಿದೆ. ಒಬ್ಬ ವ್ಯಕ್ತಿಗೆ ಸಮಾಜದಲ್ಲಿ ಪ್ರಮುಖವಾಗಿ ಎರಡು ಕಡೆ ಶಿಕ್ಷಣ ದೊರೆಯುತ್ತದೆ.

i) ಕುಟುಂಬದಲ್ಲಿ

ii) ಶಾಲಾ ಕಾಲೇಜುಗಳಲ್ಲಿ

ಇದಲ್ಲದೇ ಶಿಕ್ಷಣವು ಸಾಮಾಜಿಕ ಪರಿವರ್ತನೆಯ ಮಾಧ್ಯಮವೂ ಹೌದು. ನಾಲ್ವಡಿಯವರಿಗೆ ಶಿಕ್ಷಣವು ಅರಮನೆ, ಗುರುಮನೆ ಮತ್ತು ಶಾಲೆಗಳಲ್ಲಿ ದೊರೆಯಿತು. ಪ್ರವಾಸದಿಂದಲೂ ಅವರ ವ್ಯಕ್ತಿತ್ವ ವಿಕಾಸಗೊಂಡಿತು. ತಮ್ಮ ಸುತ್ತಲಿನ ಪ್ರಮುಖ ವ್ಯಕ್ತಿಗಳಿಂದಲೂ ಅವರು ಶಿಕ್ಷಣವನ್ನು ಪಡೆದುಕೊಂಡರು. ಅವರು ಬಾಲ್ಯದಲ್ಲಿ ಪಡೆದುಕೊಂಡ ಶಿಕ್ಷಣ ಕ್ರಮವನ್ನು ಈ ಕೆಳಗೆ ನಿರೂಪಿಸಲಾಗಿದೆ.

---

*48. ಕಾರ್ ಇ.ಹೆಚ್., ವಾಟ್ ಈಸ್ ಹಿಸ್ಟರಿ?, ಪೆಂಗ್ವಿನ್ ಬುಕ್ಸ್, ಲಂಡನ್, 1990, ಪುಟ 31-33*

### *ಬಾಲ್ಯದ ಶಿಕ್ಷಣ*

#### *i) ಅರಮನೆ ಮತ್ತು ಗುರುಮನೆಯಲ್ಲಿ*

ನಾಲ್ವಡಿ ಕೃಷ್ಣರಾಜ ಒಡೆಯರು (ಇನ್ನು ಮುಂದೆ ನಾಲ್ವಡಿಯವರೆಂದು ಗುರುತಿಸಲಾಗಿದೆ) 1884ರ ಜುಲೈ 4 ರಂದು ಬೆಳಿಗ್ಗೆ 11 ಗಂಟೆಗೆ ಜನಿಸಿದರು[49]. ಇವರ ಜನನದ ಕಾಲಕ್ಕೆ ಮೈಸೂರಿನ ಸಮಾಜದಲ್ಲಿ ಪರಿವರ್ತನೆಯ ನವೋದಯ ಆರಂಭವು ಮಂದ ಪ್ರಕಾಶದಲ್ಲಿ ಕಾಣಿಸಿಕೊಂಡಿತು. ಇಂತಹ ಪರಿವರ್ತನೆಯನ್ನು ಸಾರ್ವಭೌಮರಾಗಿದ್ದ ಬ್ರಿಟಿಷ್ ವಸಾಹತು ಸರ್ಕಾರ ಗುರುತಿಸಿತ್ತು. ನಾಲ್ವಡಿಯರ ಜನನಕ್ಕೆ ಇಪ್ಪತ್ತು ದಿನಗಳಿಗೆ ಮುಂಚೆ ಇವರ ತಂದೆಯವರಾಗಿದ್ದ 10ನೇ ಚಾಮರಾಜ ಒಡೆಯರ (1881-1894) ರಾಜ್ಯಭಾರದ ಆಧುನಿಕ ಲಕ್ಷಣಗಳನ್ನು, ವಿಚಕ್ಷಣೆಯನ್ನು ಮೆಚ್ಚಿ ಚಕ್ರವರ್ತಿನಿ ವಿಕ್ಟೋರಿಯಾ ಮಹಾರಾಣಿ ಅವರಿಗೆ "ಜಿ.ಸಿ.ಎಸ್.ಐ." ಎಂಬ ಬಿರುದನ್ನು ಕೊಟ್ಟಿದ್ದರು[50].

ನಾಲ್ವಡಿಯರ ಜನನದ ಸಂತೋಷವನ್ನು ರಾಜಕುಟುಂಬ ಹಾಗೂ ಮನೆತನದವರೂ, ರಾಜಧಾನಿಯ ಪ್ರಜೆಗಳು ಬಹಳ ಸಾಂಪ್ರದಾಯಿಕವಾಗಿ, ವೈಭವಯುತವಾಗಿ ಹೇಗೆ ಆಚರಿಸಿದರು ಎಂಬುದನ್ನು ಇಲ್ಲಿ ವಿವರಿಸುವುದರ ಮೂಲಕ ಮೈಸೂರಿನ ನಿರಂತರ ಪರಂಪರೆಯ ಪರಿಚಯವನ್ನು ಮಾಡಿಕೊಳ್ಳಬಹುದು. ಜನನದ ಸಂತೋಷ ಸೂಚನಾರ್ಥವಾಗಿ ಕುಶಾಲ ತೋಪುಗಳು ಅರಮನೆಯ ಬತ್ತೇರಿಯಿಂದ ಹಾರಿಸಲ್ಪಟ್ಟವು. ರಾಜಧಾನಿಯ ಎಲ್ಲಾ ದೇವಾಲಯಗಳಲ್ಲಿ ವಿಶೇಷ ಪೂಜೆ, ಪ್ರಾರ್ಥನೆ ಹಾಗೂ ಉತ್ಸವಗಳು ನಡೆದವು. ಪುರಜನರು ತಮ್ಮ ತಮ್ಮ ಮನೆಗಳನ್ನು ತಳಿರುತೋರಣಗಳಿಂದ ಶೃಂಗರಿಸಿಕೊಂಡು ಊರಿಗೆ ಊರೇ ಹಬ್ಬದ ದಿನದಂತೆ ಭಾವಿಸಿ ಸಂಭ್ರಮಪಟ್ಟರು. ಅರಮನೆಯ ಸೇವಕರು ಗಾಡಿಗಳಲ್ಲಿ ಸಕ್ಕರೆ ಮತ್ತು ಹಣ್ಣುಗಳನ್ನು ತುಂಬಿಕೊಂಡು ರಾಜಧಾನಿಯ ಬೀದಿ ಬೀದಿಗಳಲ್ಲೂ ಹಂಚಿದರು. ಅರಮನೆಯ ವೈದಿಕರುಗಳಿಗೆಲ್ಲಾ ಭೂರಿದಕ್ಷಿಣೆಯನ್ನು ಕೊಡಲಾಯಿತು. ಮಗುವನ್ನು ಅರಮನೆಯಲ್ಲಿ ನೋಡಲು ಬಂದ ಅರಸು ಪಂಗಡದ ಸ್ತ್ರೀಯರು 'ಮೊರದ ಹೊನ್ನು' ಎಂಬ ಚಿನ್ನದ ನಾಣ್ಯಗಳನ್ನು ನಜರು ಒಪ್ಪಿಸಿದರು. ಕಾರಾಗೃಹದಲ್ಲಿ ಶಿಕ್ಷೆಯನ್ನು ಅನುಭವಿಸುತ್ತಿದ್ದವರಲ್ಲಿ ಅನೇಕರಿಗೆ ಬಂಧನ ವಿಮೋಚನೆಯಾಯಿತು. ದೀನರಿಗೆ, ಅನಾಥರಿಗೆ ಹಣ ಮತ್ತು ವಸ್ತ್ರಗಳನ್ನು ನೀಡಲಾಯಿತು. ಮಗು ಜನನವಾದ ಏಳು ದಿನಗಳವರೆಗೂ ಸಂಸ್ಥಾನದಾದ್ಯಂತ ಎಲ್ಲಾ ದೇವಾಲಯಗಳಲ್ಲೂ ವಿಶೇಷ ಪೂಜೆಗಳು ಮತ್ತು ಉತ್ಸವಗಳು ನಡೆಯುತ್ತಾ ಬಂದವು. ಹನ್ನೊಂದನೆಯ ದಿನದಂದು

---

*49. **ಶ್ರೀ ಕೃಷ್ಣರಾಜ ಮೆಮೋರಿಯಲ್ ನಂಬರ್ ಆಫ್ ದಿ ಕ್ಯೂ. ಜೆ.ಎಂ.ಎಸ್.**, ಸಂಪುಟ-31, ವಿಶೇಷ ಸಂಚಿಕೆ, ಬೆಂಗಳೂರು 1940-41, ಪುಟ. 180*

*50. **ಸಿ.ಕೆ. ವೆಂಕಟರಾಮಯ್ಯ.**, ಆಳಿದ ಮಹಾಸ್ವಾಮಿಯವರು ಶ್ರೀಮನ್ಮ ಮಹಾರಾಜ ಶ್ರೀ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್‌ರವರ ಜೀವನ ಚರಿತ್ರೆ, ಬೆಂಗಳೂರು, 1941, ಪು 19*

ಶ್ರೀ ಪರಕಾಲ ಮಠದ ಸ್ವಾಮಿಗಳ ಅಪ್ಪಣೆಯಂತೆ ಮಗುವಿಗೆ 'ಕೃಷ್ಣರಾಜ ಒಡೆಯರ್' ಎಂದು ನಾಮಕರಣ ಮಾಡಲಾಯಿತು. ನಾಮಕರಣದ ದಿವಸ ಮೈಸೂರಿನಲ್ಲಿ ಅರಮನೆಯ ವತಿಯಿಂದ ದೇವಸ್ಥಾನಗಳಲ್ಲಿ ಸಮಾರಾಧನೆ ನಡೆದು ದಕ್ಷಿಣೆಯನ್ನು ಕೊಡಲಾಯಿತು[51].

ಅರಮನೆಯಲ್ಲಿ ಗಂಡು ಮಗ ಜನಿಸಿದಾಗ 'ಡೋಲೋತ್ಸವ' ಎಂಬ ಧಾರ್ಮಿಕ ವಿಧಿ ನಡೆಸುವ ಸಂಪ್ರದಾಯವಿದ್ದಿತು. ನಾಲ್ವಡಿಯವರಿಗೆ ಈ ಸಂಪ್ರದಾಯಕ್ಕನುಸಾರವಾಗಿ ಡೋಲೋತ್ಸವ ಜರುಗಿತು. ಈ ಸಂಪ್ರದಾಯದ ಪ್ರಕಾರ ನಾಲ್ವಡಿಯರ ತಂದೆ ಮತ್ತು ತಾಯಿ ತಮ್ಮ ಮನೆ ದೇವತೆಯಾಗಿದ್ದ ಚಾಮುಂಡೇಶ್ವರಿಯ ಸನ್ನಿಧಿಯಲ್ಲಿ ಚಾಮುಂಡಿ ಬೆಟ್ಟದ ಮೇಲೆ ಡೋಲೋತ್ಸವವನ್ನು ನಡೆಸಿದ್ದರು. ಈ ಕಾರ್ಯಕ್ರಮಕ್ಕೆ ರಾಜದಂಪತಿಗಳು, ಮಕ್ಕಳು ಹಾಗೂ ಬಂಧು-ಮಿತ್ರರು ಹೋಗಿದ್ದರು. ಮೊದಲು ಚಾಮುಂಡೇಶ್ವರಿ ದೇವಿಗೆ ವಿಶೇಷ ಉತ್ಸವಗಳನ್ನು ಮತ್ತು ಪೂಜೆಗಳನ್ನು ನಡೆಸಲಾಯಿತು. ಆ ಬಳಿಕ ಮಗುವಿಗೆ ಡೋಲೋತ್ಸವವನ್ನು ಮಾಡಿದರು. ಚಾಮುಂಡೇಶ್ವರಿ ದೇವಾಲಯದ ಆವರಣದಲ್ಲಿದ್ದ ಸಂಪಿಗೆಯ ಮರಕ್ಕೆ ಚಿನ್ನದ ಸರಪಳಿಗಳಿಂದ ರತ್ನ ಖಚಿತವಾದ ಚಿನ್ನದ ತೊಟ್ಟಿಲನ್ನು ಕಟ್ಟಿ ಅದರಲ್ಲಿ ಮಗುವನ್ನು ಮಲಗಿಸಿ ತೂಗಿದರು. ಅದೇ ರೀತಿ ನಾಲ್ವಡಿಯವರ ಮೊದಲ ವರ್ಷದ ಹುಟ್ಟುಹಬ್ಬದಂದು ರತ್ನಖಚಿತವಾದ ಪಲ್ಲಕ್ಕಿಯಲ್ಲಿ ಮೈಸೂರು ನಗರದ ಕೋಟೆಯ ನಾಲ್ಕು ಬೀದಿಗಳಲ್ಲೂ ಮಗುವಿನ ಮೆರವಣಿಗೆ ನಡೆಯಿತು. ಇದಲ್ಲದೆ ತ್ರಿನಯನೇಶ್ವರ ಸ್ವಾಮಿ ದೇವಾಲಯ, ವರಾಹಸ್ವಾಮಿ, ಪ್ರಸನ್ನ ಕೃಷ್ಣಸ್ವಾಮಿ ದೇವಾಲಯ, ಲಕ್ಷ್ಮೀರಮಣ ಸ್ವಾಮಿ ದೇವಾಲಯ ಇವೇ ಮೊದಲಾದ ದೇವಾಲಯಗಳಿಗೆಲ್ಲಾ ಮೆರವಣಿಗೆಯು ಹೋಗಿ ಪ್ರಸಾದವನ್ನು ಪಡೆದು ಅರಮನೆಗೆ ಹಿಂತಿರುಗಿತು[52].



ಈ ಮೇಲಿನ ವಿವರಣೆಯು ಮೈಸೂರು ಅರಸು ಮನೆತನದಲ್ಲಿ ಗಂಡು ಮಗುವು ಜನನವಾದಾಗ ಆಚರಿಸುತ್ತಿದ್ದ ಆಚರಣೆಗಳನ್ನು ಧಾರ್ಮಿಕ ವಿಧಿ-ವಿಧಾನಗಳನ್ನು ಪರಿಚಯಿಸುತ್ತದೆ. ಇಲ್ಲಿ ನಾವು ಗಮನಿಸಬಹುದಾದ ಅಂಶವೆಂದರೆ ಧಾರ್ಮಿಕ ವಿಧಿ-ವಿಧಾನಗಳ ಚೌಕಟ್ಟಿನೊಳಗೆ ಸಂಪ್ರದಾಯವು ಹೇಗೆ ಬಾಲ್ಯದಿಂದಲೇ ಬೇರು ಬಿಡುತ್ತಾ ಹೋಗುತ್ತದೆ ಎಂಬುದನ್ನು. ಇದನ್ನೇ ನಾವು ಸಂಪ್ರದಾಯವು ಜನರೂಢಿಯಲ್ಲಿ ಬೆಳೆದು ಬಂದಿರುವ ಆಚರಣೆ, ಅದರ ಬೇರುಗಳು ಜನಾಂಗದ ರಕ್ತರಕ್ತದಲ್ಲೂ ಸೇರಿ ಹೋಗಿರುತ್ತವೆ ಎಂಬ ಅರ್ಥದಲ್ಲಿ ಹಿಂದಿನ ಅಧ್ಯಾಯದಲ್ಲಿ ಉಲ್ಲೇಖಿಸಿರುವುದು. ಹೀಗೆ ಬಾಲ್ಯದಿಂದಲೇ ಆರಂಭಗೊಳ್ಳುವ ಇಂತಹ ಸಂಪ್ರದಾಯದ ಅನೇಕ ಅಂಶಗಳು ಈ ಅಧ್ಯಾಯದ ಅನೇಕ ಕಡೆಗಳಲ್ಲಿ

---

51. **ವೆಂಕಟರಾಮಯ್ಯ ಸಿ.ಕೆ.,** *ಪೂರ್ವೋಕ್ತ, ಪು. 19-20*

- **ನಂಜರಾಜ ಅರಸು ಪಿ.ವಿ. ಮತ್ತು ಚಂದ್ರರಾಜ ಅರಸು ಎಸ್.ಆರ್.(ಸಂ).,** *ನಾಲ್ವಡಿ ಕೃಷ್ಣರಾಜ ಒಡೆಯರ ಒಂದು ದರ್ಶನ, ಮೈಸೂರು, 1996, ಪು. 23*

52. **ವೆಂಕಟರಾಮಯ್ಯ ಸಿ.ಕೆ.,** *ಪೂರ್ವೋಕ್ತ, ಪು. 20-21*

ಮುಂದೆ ಕಾಣಿಸಿಕೊಳ್ಳುತ್ತವೆ. ಹಾಗೆಯೇ ಇದೇ ತಳಹದಿಯ ಮೇಲೆಯೇ ಸ್ಥಳೀಯ ಹಾಗೂ ಪಾಶ್ಚಿಮಾತ್ಯ ಶಿಕ್ಷಣವು ಕೂಡ ನಾಲ್ವಡಿಯರ ವ್ಯಕ್ತಿತ್ವದ ವಿಕಸನದ ಹಿನ್ನೆಲೆಯಲ್ಲಿ ಹೇಗೆ ರೂಪುಗೊಳ್ಳುತ್ತಾ ಬರುತ್ತದೆ ಎಂಬುದನ್ನು ಮುಂದೆ ನೀಡುವ ವಿವರಣೆಗಳಿಂದ ತಿಳಿಯಬಹುದಾಗಿದೆ.

ನಾಲ್ವಡಿಯವರಿಗೆ ಐದು ವರ್ಷ ತುಂಬುವವರೆಗೆ ಅರಮನೆ, ನಗರದ ಪ್ರಮುಖ ಬೀದಿಗಳು, ಪರಿಸರ ಹಾಗೂ ವಸ್ತುಗಳ ಪರಿಚಯವನ್ನು ಮಾಡಿಕೊಡಲಾಯಿತು. ಗಾಳಿ ಸವಾರಿಯ ಸಂದರ್ಭಗಳಲ್ಲಿ ಮರದಲ್ಲಿ ಮಾಡಿದ ಬಣ್ಣದ ಕುದುರೆ ಹಾಗೂ ಕೈಗಾಡಿಯಲ್ಲಿ ಕುಳ್ಳಿರಿಸಿ ಅರಮನೆಯಲ್ಲೆಲ್ಲಾ ಸುತ್ತಾಡಿಸುವುದು, ಬಣ್ಣ ಬಣ್ಣದ ಚಿತ್ರದ ಕಾಗದಗಳನ್ನು, ಪುಸ್ತಕಗಳನ್ನು ತೋರಿಸುವ ಮೂಲಕ ಆ ಮಗುವಿನಲ್ಲಿ ಕುತೂಹಲ, ತೀವ್ರಾಸಕ್ತಿಗಳನ್ನು ಮೂಡಿಸುವಂತಹ ಮೂಲ ಶಿಕ್ಷಣವು ಕುಟುಂಬ ವರ್ಗದವರಿಂದ ಹಾಗೂ ಸೇವಕರಿಂದ ಆರಂಭಗೊಂಡಿತು. ಅರಮನೆಯಲ್ಲಾಗಲೀ, ಅರಮನೆಯಿಂದ ಹೊರಗೆ ಬಂದಾಗಲಾಗಲಿ ಜನರು ಮುಜರೆ ಮಾಡಿದರೆ ಪ್ರತಿಯಾಗಿ ಕೈ ಮುಗಿಯುವ ಪದ್ಧತಿಯನ್ನು ಎರಡು ವರ್ಷದ ಬಾಲಕನಿಂದಲೇ ಅಭ್ಯಾಸ ಮಾಡಿಸಲಾಯಿತು.

ಕವಿತಿಲಕ ಸೋಸಲೆ ಅಯ್ಯಶಾಸ್ತ್ರಿಗಳು ತಾವೇ ರಚಿಸಿದ್ದ ಗಿಳಿಯ ಮೇಲಿನ ಪುಟ್ಟ ಪದ್ಯವನ್ನು ರಾಜಕುಮಾರರಿಗೆ ಹೇಳಿಕೊಡುತ್ತಿದ್ದರು. ಅವರು ತೊದಲು ನುಡಿಯಲ್ಲಿ ಮುದ್ದು ಮುದ್ದಾಗಿ ಹೇಳುತ್ತಿದ್ದುದನ್ನು ಕೇಳಿ ಕುಟುಂಬ ವರ್ಗದವರು ಹರ್ಷಿಸುತ್ತಿದ್ದರು[53]. ಮೂರು ವರ್ಷದ ಬಳಿಕ ಮರದ ಕುದುರೆಗೆ ಬದಲು ನಿಜವಾದ ಕುದುರೆಯ ಮರಿಯ ಮೇಲೆ ಕುಳ್ಳಿರಿಸಿ ಅರಮನೆಯಲ್ಲೆಲ್ಲಾ ಸುತ್ತಾಡಿಸಲಾಗುತ್ತಿತ್ತು[54].

ನಂತರದ ದಿನಗಳಲ್ಲಿ ಕುದುರೆಯ ಮೇಲೆ ಕುಳ್ಳಿರಿಸಿ ಬಲಗೈಯಲ್ಲಿ ಲಗಾಮನ್ನು, ಎಡಗೈಯಲ್ಲಿ ಅವರ ರಟ್ಟೆಯನ್ನು ಹಿಡಿದು ಸ್ವತಃ ತಂದೆಯವರೇ ಕುದುರೆಯನ್ನು ನಡೆಸುತ್ತಿದ್ದರು. ಆ ಸಂದರ್ಭದಲ್ಲಿ ಬಾಲಕ ನಾಲ್ವಡಿ ಕೃಷ್ಣರಾಜರು ತಾವೇ ಸ್ವತಂತ್ರರಾಗಿ ಕುದುರೆ ಸವಾರಿ ಮಾಡುವುದಾಗಿ ಹಠ ಮಾಡುತ್ತಿದ್ದರು. ಇದೇ ರೀತಿಯಲ್ಲಿ ಬೈಸಿಕಲ್ ಸವಾರಿಯನ್ನು ಸಹ ಕಲಿಸಿಕೊಡಲಾಯಿತು[55].

ನಾಲ್ವಡಿಯವರಿಗೆ ಐದು ವರ್ಷಗಳು ತುಂಬುವುದಕ್ಕೆ ಮುಂಚೆ ಅರಸು ಮನೆತನದ ಸಂಪ್ರದಾಯದಂತೆ 1889ರ ಮಾರ್ಚಿಯಲ್ಲಿ ಚೂಡಾಕರ್ಮ ಮತ್ತು ಅಕ್ಷರಾಭ್ಯಾಸವನ್ನು ಮಾಡಿಸಲಾಯಿತು. ಅಕ್ಷರಾಭ್ಯಾಸವು ದೊಡ್ಡ ಬೆಳ್ಳಿಯ ಹಲಗೆಯ ಮೇಲೆ ಬಹಳ ಬೆಲೆ ಬಾಳುತ್ತಿದ್ದ ಆಣಿಮುತ್ತುಗಳನ್ನು ಹರಡಿ ಚಿನ್ನದ ಬಳಪದಿಂದ ಸಂಸ್ಕೃತ ಮತ್ತು ಕನ್ನಡದಲ್ಲಿ

---

*53. **ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ**, ಪು. 21-22*

*54. **ಅದೇ.**, ಪು. 23*

*55. **ಅದೇ.**, ಪು. 24*

'ಶ್ರೀ'ಕಾರವನ್ನು ಬರೆಸುವ ಮೂಲಕ ಆರಂಭಿಸಲಾಯಿತು. ಆ ಬೆಳ್ಳಿಯ ಹಲಗೆ, ಮುತ್ತುಗಳು ಮತ್ತು ಚಿನ್ನದ ಬಳಪವು ಶ್ರೀಕಾರವನ್ನು ಬರೆಸಿದ ಗುರುಗಳಿಗೆ ಖಿಲ್ಲತ್ತುಗಳ ಸಮೇತವಾಗಿ ಸಮರ್ಪಿತವಾದವು[56]. ಈ ಮೇಲಿನ ವಿವರಣೆಯಿಂದ ನಾಲ್ವಡಿಯವರಿಗೆ ಕುಟುಂಬದವರು ಸಾಮಾನ್ಯ ಜ್ಞಾನದ ಶಿಕ್ಷಣವನ್ನು ಬಾಲ್ಯದಿಂದಲೇ ಹೇಗೆ ಪ್ರಾರಂಭಿಸಿದ್ದರು ಎಂಬುದು ಸ್ಪಷ್ಟಗೊಳ್ಳುತ್ತದೆ.

### *ಶಾಲಾ ಕಾಲೇಜುಗಳಲ್ಲಿನ ಶಿಕ್ಷಣ*

ರಾಯಲ್ ಸ್ಕೂಲ್ ಎಂಬ ಪ್ರತ್ಯೇಕ ಶಾಲೆ ಸ್ಥಾಪನೆಗೊಳ್ಳುವವರೆಗೂ ನಾಲ್ವಡಿಯವರು ತಮ್ಮ ಸೋದರಿಯರೊಡನೆ ಓದು-ಬರಹವನ್ನು ಕಲಿಯಲಾರಂಭಿಸಿದರು. 10ನೇ ಚಾಮರಾಜ ಒಡೆಯರು ತಮ್ಮ ಹೆಣ್ಣು ಮಕ್ಕಳಿಗೆಂದೇ ಅರಮನೆಯಲ್ಲಿ ಪ್ರತ್ಯೇಕ ಪಾಠಶಾಲೆಯನ್ನು ಆರಂಭಿಸಿದ್ದರು. ಆ ಶಾಲೆಗೆ ಇತರೆ ಆರು ಮಂದಿ ಹೆಣ್ಣು ಮಕ್ಕಳು (ಅರಮನೆಯ ಅಧಿಕಾರಿಗಳ ಮಕ್ಕಳು) ಕಲಿಯಲು ಬರುತ್ತಿದ್ದರು. ಆ ಪಾಠಶಾಲೆಯು ಅರಮನೆಯ ಕರಿಕಲ್ಲು ತೊಟ್ಟಿಯಲ್ಲಿ ಮಹಾರಾಜರ ಆಫೀಸ್ ಪಕ್ಕದ ಕೊಠಡಿಯಲ್ಲೇ ಏರ್ಪಟ್ಟಿದ್ದಿತು. ಈ ಪಾಠಶಾಲೆಯಲ್ಲಿ ಹಟ್ಟಿ ರಂಗೈಯ್ಯಂಗಾರ್, ಹೆಚ್. ಭೀಮರಾಯರು, ಪೂರ್ಣ ರಾಘವೇಂದ್ರರಾಯರು (ಇಂಗ್ಲಿಷ್ ಭಾಷೆಯನ್ನು), ಸುಬ್ಬಾಶಾಸ್ತ್ರಿಗಳು (ಅಮರಕೋಶ ಮತ್ತು ಶ್ಲೋಕಗಳನ್ನು), ಕವಿ ತಿಲಕ ಸೋಸಲೆ ಅಯ್ಯಶಾಸ್ತ್ರಿಗಳು (ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು), ಶಾಮಣ್ಣನವರು (ಚಿತ್ರಲೇಖನವನ್ನು), ವೀಣೆ ಸುಬ್ಬರಾಯರು (ಸಂಗೀತವನ್ನು), ಗಟ್ಟಿಗರಾದ ಗವಾಯಿಯೊಬ್ಬರು (ಹಿಂದೂಸ್ಥಾನಿ ಸಂಗೀತವನ್ನು) ಹಾಗೂ ಯೂರೋಪಿಯನ್ ಮಹಿಳೆಯೊಬ್ಬರು (ಪಾಶ್ಚಿಮಾತ್ಯ ಸಂಗೀತ ಕ್ರಮದ ಪಿಯಾನೋ ವಾದ್ಯವನ್ನು ಮತ್ತು ಕಸೂತಿ, ಹೊಲಿಗೆ ಕೆಲಸವನ್ನು) ಉಪಾಧ್ಯಾಯರುಗಳಾಗಿದ್ದು ಅನೇಕ ವಿಷಯಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದರು. ಈ ಪಾಠಶಾಲೆಯ ಕೊಠಡಿಯ ಮತ್ತೊಂದು ಪಾರ್ಶ್ವದಲ್ಲಿ "ಫೋಟೋ" ಕೊಠಡಿಯಿದ್ದು ಅಲ್ಲಿ ಛಾಯಾಚಿತ್ರಕಾರರೂ ಇರುತ್ತಿದ್ದು ಛಾಯಾಚಿತ್ರಕಲೆಗೆ ಸಂಬಂಧಪಟ್ಟ ನಾನಾ ವಿಚಾರಗಳನ್ನು ಮಕ್ಕಳಿಗೆ ಮನವರಿಕೆಯಾಗುವಂತೆ ಬೋಧಿಸಿ ಪ್ರದರ್ಶಿಸುತ್ತಿದ್ದರು[57].

ಈ ಶಾಲೆಯ ದಿನಚರಿಯು ಬೆಳಿಗ್ಗೆ ಹೊತ್ತು ಗಾಳಿಸವಾರಿ, ಕುದುರೆ ಸವಾರಿ, ಕುದುರೆಗೆ ಅಲಂಕಾರ ಮತ್ತು ಹಾರ್ಕೈಯ ಪಾಠದೊಡನೆ ಆರಂಭಗೊಳ್ಳುತ್ತಿತ್ತು. ನಂತರ ಬೆಳಿಗ್ಗೆ 11 ಗಂಟೆಗೆ "ಸ್ವಾಮಿ ದೇವನೆ ಲೋಕಪಾಲನೆ ತೇ ನಮೋಸ್ತು ನಮೋಸ್ತುತೇ" ಎಂಬ ಪಲ್ಲವಿಯೊಂದಿಗೆ ಪಾಠ ಪ್ರವಚನಗಳು ವೇಳಾಪಟ್ಟಿಗನುಸಾರವಾಗಿ ನಡೆಯುತ್ತಿದ್ದವು.

---

56. *ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 24-25*

57. *ವೆಂಕಟರಾಮಯ್ಯ ಸಿ.ಕೆ., ದಿವಂಗತ ಶ್ರೀ ಮದ್ಯುವರಾಜರು, ದಿವಗಂತ ಶ್ರೀ ಮದ್ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಜೀವನ ಚರಿತ್ರೆ, ಮೈಸೂರು, 1957, ಪು. 13-14*

ಮಧ್ಯದ ವಿರಾಮಕಾಲದಲ್ಲಿ ಮಕ್ಕಳಿಗೆ ಪುಷ್ಕಳ ಉಪಹಾರ ನೀಡಲಾಗುತ್ತಿತ್ತು[58]. ಪಾಠ ಪ್ರವಚನಗಳ ಜೊತೆಗೆ ದೇಹಶಕ್ತಿಯನ್ನು ಮತ್ತು ಪ್ರಕೃತಿ ಪ್ರೇಮವನ್ನು ಬೆಳೆಸಿಕೊಳ್ಳಲೆಂಬ ಉದ್ದೇಶದಿಂದ ಅವರಿಗೆ ಪ್ರತ್ಯೇಕವಾಗಿ ಪುಷ್ಪವಾಟಿಕೆಗಳನ್ನು ಮಾಡಿಸಿಕೊಡಲಾಗಿತ್ತು. ಆ ಉದ್ಯಾನವನದಲ್ಲಿ ನೆಲವನ್ನು ಅಗೆದು ಗಿಡಗಳನ್ನು ನೆಟ್ಟು, ನೀರು, ಗೊಬ್ಬರವನ್ನು ಹಾಕಿ ತಾವೇ ಪ್ರತ್ಯೇಕವಾಗಿ ಗಿಡಗಳನ್ನು ಬೆಳೆಸಿ ಹಾರೈಕೆ ಮಾಡುವ ಕ್ರಮವನ್ನು ಅಭ್ಯಾಸ ಮಾಡಿಸಲಾಗುತ್ತಿತ್ತು. ಅಲ್ಲದೇ ಸಸ್ಯಾದಿಗಳ ಬೆಳವಣಿಗೆ, ಪ್ರಾಣಿಗಳ ವಾಸಸ್ಥಾನ, ಗ್ರಹಗಳ ವ್ಯೂಹ, ಪ್ರಪಂಚದ ಪ್ರಸಿದ್ಧವಾದ ಕಟ್ಟಡಗಳ ಬಗ್ಗೆ ತಿಳುವಳಿಕೆ ಮೂಡಿಸುತ್ತಾ ಅವುಗಳಿಗೆ ಸಂಬಂಧಿಸಿದ ದೀಪ ಚಿತ್ರಗಳನ್ನು (Magic Lantern) ವಾರಕ್ಕೊಂದು ಸಲ ತೋರಿಸುವ ವ್ಯವಸ್ಥೆಯನ್ನು ಆ ಶಾಲೆಯಲ್ಲಿ ಏರ್ಪಡಿಸಲಾಗಿತ್ತು ಹಾಗೂ ಆ ಶಾಲೆಯಲ್ಲಿ ನಾಲ್ವಡಿಯವರ ಬುದ್ಧಿ ಕೌಶಲ್ಯವು ವೃದ್ಧಿಸಲು ಅನುಕೂಲವಾಗುವಂತೆ 'ಕಿಂಡರ್ ಗಾರ್ಟನ್' ಮಾದರಿಯಲ್ಲಿ ಮರದ ತುಂಡುಗಳಿಂದ ಮನೆ, ದೇವಾಲಯ, ಯಂತ್ರಗಳು ಮುಂತಾದ ಮಾದರಿಗಳನ್ನು ಉತ್ತಮ ರೀತಿಯಲ್ಲಿ ಜೋಡಿಸುವುದನ್ನು ಸಹ ಕಲಿಸಿಕೊಡಲಾಯಿತು[59].

ನಾಲ್ವಡಿಯವರ ಬಾಲ್ಯದ ಶಿಕ್ಷಕರಲ್ಲಿ ಒಬ್ಬರಾದ ಪೂರ್ಣರಾಘುವೇಂದ್ರರಾಯರು ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಬಿ.ಎ. ಪದವಿ ಪಡೆದು 10ನೇ ಚಾಮರಾಜ ಒಡೆಯರ ಮಂತ್ರಾಲೋಚನ ಸಭೆಯ ಪ್ರಥಮ ಸಚಿವರಾಗಿದ್ದರು. ತಮ್ಮ ನಿವೃತ್ತಿಯ ನಂತರ ನಾಲ್ವಡಿಯವರನ್ನೊಳಗೊಂಡ ಅರಮನೆಯ ಮಕ್ಕಳಿಗೆ ಇಂಗ್ಲಿಷ್ ಭಾಷೆಯು ಪ್ರಧಾನವಾಗಿರುವಂತೆ ಶಿಕ್ಷಣವನ್ನು ನೀಡುತ್ತಿದ್ದರು. ಇವರ ಮತ್ತು ನಾಲ್ವಡಿಯವರ ಸಂಬಂಧ ಅತ್ಯಂತ ಪ್ರೀತಿ-ವಿಶ್ವಾಸಗಳಿಂದ ಕೂಡಿತ್ತು. 8ನೆಯ ವಯಸ್ಸಿನಲ್ಲೇ ನಾಲ್ವಡಿಯವರು ಇಂಗ್ಲಿಷ್ ಭಾಷೆಯಲ್ಲಿ ಚೆನ್ನಾಗಿ ಮಾತನಾಡುವುದನ್ನು ಪೂರ್ಣ ರಾಘುವೇಂದ್ರರಾಯರಿಂದ ಕಲಿತಿದ್ದರು[60]. ತಮ್ಮ ಮಕ್ಕಳು ಆಧುನಿಕ ಯುಗಕ್ಕೆ ಅನುಸಾರವಾಗಿ ಇಂಗ್ಲಿಷ್ ಭಾಷೆಯಲ್ಲಿ ತಜ್ಞತೆಯನ್ನು ಹೊಂದಿರಬೇಕಾದ ಅವಶ್ಯಕತೆಯನ್ನು 10ನೇ ಚಾಮರಾಜ ಒಡೆಯರು ತಾವು ಪಡೆದಿದ್ದ ಪಾಶ್ಚಿಮಾತ್ಯ ಶಿಕ್ಷಣದ ಅನುಭವದಿಂದ ಕಂಡುಕೊಂಡವರಾಗಿದ್ದು, ಅದಕ್ಕಾಗಿ ಸೂಕ್ತ ವ್ಯವಸ್ಥೆಯನ್ನು ಕಲ್ಪಿಸಲು ಪ್ರಯತ್ನಿಸುತ್ತಿದ್ದರು. 1892ರಲ್ಲಿ ಜೆ. ವೀರ್ ಸಾಹೇಬ್ ಎಂಬುವವರು ಮೈಸೂರು ನಗರದ ಮಹಾರಾಜ ಕಾಲೇಜಿಗೆ ಅಧ್ಯಾಪಕರಾಗಿ ನೇಮಕಗೊಂಡು ಬಂದಾಗ 8 ವರ್ಷದ ಬಾಲಕ ನಾಲ್ವಡಿಯವರು ಶುದ್ಧವಾದ ಶೈಲಿಯಲ್ಲಿ ಸೊಗಸಾಗಿ ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುತ್ತಿದ್ದ ವೈಖರಿಯನ್ನು ಕಂಡು "ನಾನು ಕಣ್ಣಾರೆ ನೋಡದೆ ಹೋಗಿದ್ದು ಮತ್ತಾರಾದರೂ

---

*58. ಅದೇ., ಪು. 12*

*59 ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 25-26*

*60. ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 180*

*- ವೆಂಕಟರಾಮಯ್ಯ ಸಿ.ಕೆ. , ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 26*

ಈ ಸಂಗತಿಯನ್ನು ನನಗೆ ತಿಳಿಸಿದ್ದ ಪಕ್ಷದಲ್ಲಿ ಇದು ನಿಜವೆಂದಾಗಲಿ ಅಥವಾ ಇದು ಸಾಧ್ಯವೆಂದಾಗಲಿ ನಾನು ಬೇರೆ ನಂಬುತ್ತಿರಲಿಲ್ಲ. ಗುರುಗಳಾದ ರಾಘವೆಂದ್ರರಾಯರ ಸಾಮರ್ಥ್ಯವನ್ನು ಹೆಚ್ಚಾಗಿ ಕೊಂಡಾಡಬೇಕೋ, ಶಿಷ್ಯನ ಪ್ರತಿಭೆಯನ್ನು ಹೆಚ್ಚಾಗಿ ಕೊಂಡಾಡಬೇಕೋ ನನಗಂತೂ ತಿಳಿಯದು" ಎಂದು ಹೇಳಿದರು[61]. ಜೆ. ವೀರ್‌ರವರು (ಮುಂದೆ ಮೈಸೂರು ಶಿಕ್ಷಣ ಇಲಾಖೆಯ ಇನ್‌ಸ್ಪೆಕ್ಟರ್ ಜನರಲ್ ಆದವರು) 1893ರಲ್ಲಿ ನಾಲ್ವಡಿಯವರ ಓದು, ಉಚ್ಚಾರಣೆ, ಉಕ್ತಲೇಖನ ಮತ್ತು ಮೈಸೂರು ರಾಜ್ಯದ ಭೌಗೋಳಿಕ ಜ್ಞಾನವನ್ನು ಕುರಿತಂತೆ ಪರೀಕ್ಷಿಸಿ ಅವರ ಸಾಮರ್ಥ್ಯ ಮತ್ತು ಕಲಿಕೆಯ ಬಗ್ಗೆ ಹರ್ಷ ವ್ಯಕ್ತಪಡಿಸಿದರು[62].

ನಾಲ್ವಡಿಯವರಿಗೆ 8ವರ್ಷ ತುಂಬಿದ ಬಳಿಕ ಉನ್ನತ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯನ್ನು ಮಾಡಲಾಯಿತು. 10ನೇ ಚಾಮರಾಜ ಒಡೆಯರು ನಾಲ್ವಡಿಯವರ ಶಿಕ್ಷಣ ಎರಡು ದೃಷ್ಟಿಗಳಿಂದ ಕೂಡಿರಬೇಕೆಂದು ತೀರ್ಮಾನಿಸಿದ್ದರು. i) ಶಿಕ್ಷಣದಿಂದ ನಾಲ್ವಡಿಯವರಿಗೆ ರಾಜ್ಯಭಾರ ನಿರ್ವಹಣಾ ಸಾಮರ್ಥ್ಯ ಉಂಟಾಗಬೇಕು, ii) ಶಿಕ್ಷಣವು ಶಿಸ್ತಿನಿಂದ ಕೂಡಿರಬೇಕು. ಈ ಎರಡು ಉದ್ದೇಶಗಳ ಈಡೇರಿಕೆಗಾಗಿ ಅವರು 1892ರಲ್ಲಿ ಒಂದು ಪ್ರತ್ಯೇಕ ಪಾಠಶಾಲೆಯನ್ನೇ ಪ್ರಾರಂಭಿಸಿದರು. ಇದು ಮೈಸೂರು ನಗರದಲ್ಲಿದ್ದ ಲೋಕರಂಜನ್ ಮಹಲ್ ಅಥವಾ "ಸಮ್ಮರ್ ಪ್ಯಾಲೇಸ್" ಎಂಬ ಕಟ್ಟಡದಲ್ಲಿ "ರಾಯಲ್ ಸ್ಕೂಲ್" (ರಾಜಾ ಪಾಠಶಾಲೆ) ಎಂಬ ಹೆಸರಿನಿಂದ ಆರಂಭಗೊಂಡಿತು. ನಾಲ್ವಡಿಯವರನ್ನೊಳಗೊಂಡಂತೆ ಅರಸು, ಬ್ರಾಹ್ಮಣ, ಮತ್ತು ಮುಸ್ಲಿಂ ಪಂಗಡದ ಮೇಲ್ವರ್ಗದ ಅಧಿಕಾರಿಗಳ ಒಟ್ಟು 25 ಮಕ್ಕಳು ಈ ಶಾಲೆಯಲ್ಲಿ ತಮ್ಮ ಕಲಿಕೆಯನ್ನಾರಂಭಿಸಿದರು. ಮಿರ್ಜಾ ಇಸ್ಮಾಯಿಲ್ (ಮುಂದೆ ದಿವಾನರಾದವರು), ಟಿ.ಎಸ್. ಅಲೀಖಾನ್ ಮೊದಲಾದವರು ಈ ಶಾಲೆಯಲ್ಲಿ ನಾಲ್ವಡಿಯವರ ಸಹಪಾಠಿಗಳಾಗಿದ್ದರು. ವಿದ್ಯಾರ್ಥಿಗಳು ಪ್ರತಿದಿನವೂ ಶಾಲೆಗೆ ಬಂದು ಹೋಗುವ ಪದ್ಧತಿ ಅಸ್ಥಿತ್ವದಲ್ಲಿತ್ತು. ಈ ಶಾಲೆಯಲ್ಲಿ ಪ್ರಸಿದ್ಧ ದೇಶೀಯ ವಿದ್ವಾಂಸರು ಇಂಗ್ಲಿಷ್, ಕನ್ನಡ, ಸಂಸ್ಕೃತ, ಉರ್ದು, ಗಣಿತ, ಭೂಗೋಳ, ರೇಖಾಚಿತ್ರ ಲೇಖನ ವಿಷಯಗಳನ್ನು ಕಲಿಸಿಕೊಡುತ್ತಿದ್ದರು. ಈ ಪಾಠಶಾಲೆಗೆ ಆಗಿಂದಾಗ್ಗೆ ಮಹಾರಾಜರು, ದಿವಾನರು (ಕೆ. ಶೇಷಾದ್ರಿ ಅಯ್ಯರ್), ಹುಜೂರ್ ಸೆಕ್ರೆಟರಿ (ಟಿ.ಆರ್. ತಂಬೂಚೆಟ್ಟಿ) ಮೊದಲಾದ ಅಧಿಕಾರಿಗಳು ಭೇಟಿ ನೀಡಿ ಅಲ್ಲಿ ನಡೆಯುತ್ತಿದ್ದ ಪಾಠ ಪ್ರವಚನಗಳನ್ನು ಪರಿಶೀಲಿಸಿ ವಿದ್ಯಾರ್ಥಿಗಳಿಗೆ ಪ್ರಶ್ನೆಗಳನ್ನು ಹಾಕಿ ಉತ್ತಮ ಸಲಹೆಗಳನ್ನು ಕೊಡುತ್ತಿದ್ದರು[63].

ಮೊದಲಿನಿಂದಲೂ ನಾಲ್ವಡಿಯವರ ವಿದ್ಯಾಗುರುಗಳಾಗಿದ್ದ ಪೂರ್ಣ ರಾಘವೇಂದ್ರ ರಾಯರು ಈ ಶಾಲೆಯಲ್ಲಿ ಅಸಿಸ್ಟೆಂಟ್ ಟ್ಯೂಟರ್ ಆಗಿ ನಿಯೋಜನೆಗೊಂಡು ಇಂಗ್ಲಿಷ್ ಭಾಷೆ ಮತ್ತು ವಿಜ್ಞಾನ ಶಾಸ್ತ್ರ (ಸೈನ್ಸ್)ವನ್ನು ಕಲಿಸುತ್ತಿದ್ದರು.

---

*61. ಅದೇ., ಪು. 33-34*

*62. ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 181*

*63. ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 34-36*

ವಿಜ್ಞಾನ ಶಾಸ್ತ್ರವನ್ನು ವೈಜ್ಞಾನಿಕ ಪ್ರಯೋಗಗಳ ಮೂಲಕ ವಿದ್ಯಾರ್ಥಿಗಳಿಗೆ ಮನದಟ್ಟಾಗುವಂತೆ ತೋರಿಸಲಾಗುತ್ತಿತ್ತು. ಈ ಕ್ರಮವು ಅಂದಿನ ಸ್ಥಳೀಯ ಶಿಕ್ಷಣ ಕ್ರಮದಲ್ಲಿ ಅತ್ಯಂತ ನವೀನ ಪದ್ಧತಿಯಾಗಿತ್ತು[64]. 10ನೇ ಚಾಮರಾಜ ಒಡೆಯರು ತುಂಬಾ ದೂರದರ್ಶಿಗಳಾಗಿದ್ದು ರಾಯಲ್ ಸ್ಕೂಲಿನಲ್ಲಿ ನಾಲ್ವಡಿಯವರಿಗೆ ಯೂರೋಪಿಯನ್ ಬೋಧಕರಿಂದ ಶಿಕ್ಷಣ ದೊರಕುವಂತೆ ವ್ಯವಸ್ಥೆ ಮಾಡಿದರು. ಆಧುನಿಕ ಕಾಲದಲ್ಲಿ ಅದರಲ್ಲೂ 20ನೇ ಶತಮಾನದ ಆರಂಭದ ಕಾಲದಲ್ಲಿ ನಾಲ್ವಡಿಯವರು ಮುಂದೆ ರಾಜ್ಯಭಾರದ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕಾದ್ದರಿಂದ ಇಂಗ್ಲಿಷ್ ಭಾಷೆಯಲ್ಲಿ ಪೂರ್ಣ ಪಾಂಡಿತ್ಯವುಂಟಾಗಬೇಕೆಂದು ತೀರ್ಮಾನಿಸಿ, ಇಂಗ್ಲಿಷ್ ಭಾಷೆಯು ಮಾತೃಭಾಷೆಯಾಗಿರ ತಕ್ಕವರೇ ರಾಯಲ್ ಸ್ಕೂಲ್‌ನಲ್ಲಿ ಅದನ್ನು ಬೋದಿಸಬೇಕೆಂದು ಶಿಕ್ಷಣತಜ್ಞರ ಸಲಹೆಯ ಮೇರೆಗೆ ತೀರ್ಮಾನಿಸಿದರು. ಅದರಂತೆ ಮದ್ರಾಸ್ ಸರ್ಕಾರದ ಮರಾಮತ್ ಇಲಾಖೆ ಎಕ್ಸಿಕ್ಯೂಟಿವ್ ಆಗಿದ್ದ ಜೆ.ಜೆ. ವೈಟ್ಲೀ ಎಂಬುವವರನ್ನು ಬೋಧಕರಾಗಿ ನೇಮಕ ಮಾಡಿದರು. ವೈಟ್ಲೀಯವರ ಮಾವ ಮೇಜರ್ ಮಾರ್ಟಿನ್ ಎಂಬುವವರು 10ನೇ ಚಾಮರಾಜ ಒಡೆಯರಿಗೆ ಖಾಸಗಿ ಕಾರ್ಯದರ್ಶಿಗಳಾಗಿದ್ದರು. ಇವರು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಸಂಸ್ಥಾನವನ್ನು ಹಿಂದಕ್ಕೆ ಪಡೆಯಲು ಪೂರ್ಣ ಅಧಿಕಾರ ಉಂಟೆಂದು ವಾದಿಸಿ ಅವರ ಪರ ಮುಂದಾಳುಗಳಾಗಿ ಹೋರಾಡಿದ್ದವರಲ್ಲಿ ಒಬ್ಬರು. ಅಂತಹವರ ಅಳಿಯಂದಿರೂ, ಮೈಸೂರು ಸಂಸ್ಥಾನದ ಬಗ್ಗೆ ಅಭಿಮಾನ ಉಳ್ಳವರೂ ಆಗಿದ್ದ ಜೆ.ಜೆ. ವೈಟ್ಲೀಯವರಿಗೆ 1893ರ ನವೆಂಬರ್‌ನಲ್ಲಿ "ರಾಯಲ್ ಸ್ಕೂಲ್"ನ ಆಡಳಿತ ನಿರ್ವಹಣೆಯನ್ನು ವಹಿಸಿಕೊಡಲಾಯಿತು[65]. ವೈಟ್ಲೀಯವರು ಟ್ಯೂಟರ್ ಆಗಿ ಬಂದ ಮೇಲೆ ಪ್ರಾಥಮಿಕ ವಿಜ್ಞಾನ, ದೇಶೀಯ ಭಾಷೆಗಳಾದ ಉರ್ದು ಮತ್ತು ಕನ್ನಡವನ್ನೂ ಒಳಗೊಂಡಂತೆ ಶಿಕ್ಷಣ ಕ್ರಮವನ್ನು ರೂಪಿಸಿದರು. ಹಾಗೆಯೇ ಕ್ರೀಡಾ ಶಿಕ್ಷಣದಲ್ಲಿ ಕುದುರೆ ಸವಾರಿ, ಜಿಮ್ನಾಸ್ಟಿಕ್, ಕವಾಯತ್ತುಗಳನ್ನು ಹೊಸದಾಗಿ ಸೇರ್ಪಡೆ ಮಾಡಿದರು. ವೈಟ್ಲೀಯವರು ಪಾಠಗಳನ್ನು ಕಲಿಸುತ್ತಿದ್ದ ಆಸಕ್ತಿಯಷ್ಟೇ ದೈಹಿಕ ಶಿಕ್ಷಣಕ್ಕೂ ಗಮನ ಹರಿಸುತ್ತಿದ್ದರು. ಹಾಗೆಯೇ ಸ್ಫುಟ ಮತ್ತು ಸುಂದರ ಕೈ ಬರಹಕ್ಕಾಗಿ 'ಕಾಪಿ ಪುಸ್ತಕ' ಬರೆಸುವ ಪದ್ಧತಿ ಅಳವಡಿಸಿದರು. ಚಿತ್ರಲೇಖನವೂ ಇಲ್ಲಿ ಶಿಕ್ಷಣದ ಒಂದು ಭಾಗವಾಗಿತ್ತು. ಮಳೆ ಬಂದು ಬಯಲಲ್ಲಿ ಆಟವಾಡಲು ಸಾಧ್ಯವಾಗದ ದಿನಗಳಲ್ಲಿ ದೇಶೀಯ ಕತೆಗಳನ್ನು ಟಿ. ಗುಂಡಪ್ಪನವರಿಂದ ಹೇಳಿಸಲಾಗುತ್ತಿತ್ತು. ಶಿಕ್ಷಣ ನೀಡುವ ಸ್ಥಳಗಳು ಹವಾಗುಣಕ್ಕೆ ತಕ್ಕಂತೆ ಬದಲಾಗುತ್ತಿದ್ದವು. ಬೇಸಿಗೆಯಲ್ಲಿ ನೀಲಗಿರಿಯ(ಊಟಿ) ಫರ್ನ್‌ಹಿಲ್‌ನಲ್ಲೂ, ಕೆಲವು ತಿಂಗಳು ಬೆಂಗಳೂರಿನ ಅರಮನೆಯಲ್ಲೂ, ಇನ್ನುಳಿದ ಹೆಚ್ಚು ಕಾಲ ಮೈಸೂರಿನ ಲೋಕರಂಜನ್ ಮಹಲ್‌ನಲ್ಲೂ ನಡೆಯುತ್ತಿತ್ತು. ಕುದುರೆ ಸವಾರಿ ಮತ್ತು ಈಜುವುದನ್ನು ಕಲಿಸಲಾಯಿತು. ನಂತರ ಬಂದೂಕ ಹೊಡೆಯುವ ಶಿಕ್ಷಣವನ್ನು

---

*64. ಅದೇ., ಪು. 17*

*- ಶ್ಯಾಮರಾವ್ ಎಲ್., ಶ್ರೀ ಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಚರಿತ್ರೆ, ಬೆಂಗಳೂರು, 1940. ಪು. 8*

*65. ಹಯವದನರಾವ್ ಸಿ. (ಸಂ)., ಮೈಸೂರು ಗೆಜೆಟಿಯರ್, ಸಂಪುಟ - II, ಭಾಗ - IV, ಬೆಂಗಳೂರು, 1930, ಪುಟ. 2997*

ನೀಡಲಾಯಿತು. 10 ವರ್ಷದ ವೇಳೆಗೆ ಬಾಲಕ ನಾಲ್ವಡಿಯವರು ಇಂಗ್ಲಿಷ್ ಭಾಷೆಯಲ್ಲಿ ಅತ್ಯುತ್ತಮವಾಗಿ ಪ್ರಬಂಧ ಬರೆಯುವಷ್ಟು ಪ್ರತಿಭೆಯನ್ನು ರೂಢಿಸಿಕೊಂಡಿದ್ದರು. ಪ್ರತಿ ತಿಂಗಳ ಪರೀಕ್ಷೆಗಳಲ್ಲಿ ನಾಲ್ವಡಿಯರೇ ಮೊದಲನೆಯವರಾಗುತ್ತಿದ್ದರು. 1896ರ ಮಾರ್ಚಿ ತಿಂಗಳ ಪರೀಕ್ಷೆಯಲ್ಲಿ ನಾಲ್ವಡಿಯವರು ಇಂಗ್ಲಿಷ್, ಕನ್ನಡ, ಸಂಸ್ಕೃತದಲ್ಲಿ ವಾಕ್ಯರಚನೆ, ಉರ್ದು, ಚರಿತ್ರೆ, ಭೂಗೋಳ ಈ ವಿಷಯಗಳಲ್ಲಿ ತಮ್ಮೆಲ್ಲ ಸಹಪಾಠಿಗಳನ್ನು ಮೀರಿಸಿದ್ದರು. ಗಣಿತದಲ್ಲಿ ತಮ್ಮ ಸಹಪಾಠಿಗಳಿಗಿಂತ 3ನೇ ಸ್ಥಾನದಲ್ಲೂ, ಮಾತೃಭಾಷೆಯಲ್ಲದ ಉರ್ದುವಿನಲ್ಲಿ ಅತ್ಯಧಿಕ ಅಂಕಗಳನ್ನು ಪಡೆದಿದ್ದರು. ಚಿತ್ರ ಲೇಖನದಲ್ಲಿ ಅಪಾರ ಪ್ರೌಢಿಮೆ ಸಾಧಿಸಿದ್ದ ನಾಲ್ವಡಿಯವರು 10ವರ್ಷದ ವೇಳೆಗೆ ಹೂಜಿಗಳು, ಲೋಟಗಳು, ಸುತ್ತಿಗೆ, ಚೂರಿ, ಕ್ರಿಕೆಟ್ ಆಟದ ಸಾಮಾನುಗಳು, ದೊಡ್ಡ ಕತ್ತರಿ, ಗಿಡಬಳ್ಳಿಗಳ ಚಿತ್ರಗಳನ್ನು ಸೊಗಸಾಗಿ ಚಿತ್ರಿಸುತ್ತಿದ್ದರು. ತಮ್ಮ ರಫ್‌ನೋಟ್‌ನ ಪ್ರತಿ ಹಾಳೆಯಲ್ಲೂ ಪ್ರತಿ ಲೆಕ್ಕದ ಕೆಳಗೂ ಕುದುರೆಯ ಚಿತ್ರಗಳನ್ನು ವಿಧವಿಧವಾಗಿ ಬಿಡಿಸುತ್ತಿದ್ದರು. ಹಾಗೆಯೇ ದೋಣಿ, ಗಂಡಭೇರುಂಡ, ಚಾಮುಂಡಿ ಬೆಟ್ಟ, ದೇವತಾ ವಿಗ್ರಹಗಳು, ಸಮುದ್ರ ಇವೇ ಮೊದಲಾದ ಚಿತ್ರಗಳನ್ನು ಸಹ ಸುಂದರವಾಗಿ ಬರೆದು ಚಿತ್ರದ ಕೊನೆಯಲ್ಲಿ ಅಲಂಕಾರ ಲಿಪಿಗಳಲ್ಲಿ ತಮ್ಮ ಹೆಸರನ್ನು ಬರೆಯುತ್ತಿದ್ದರು. ಒಟ್ಟಾರೆಯಾಗಿ ಪೂರ್ಣರಾಘವೇಂದ್ರರಾಯರು ಮತ್ತು ಜೆ.ಜೆ. ವ್ಹೈಟ್ಲೀಯವರ ನೇತೃತ್ವದಲ್ಲಿ ನಾಲ್ವಡಿಯವರು ಸಾಕಷ್ಟು ವಿಧಾನದಲ್ಲಿ ದೇಶೀಯ ಹಾಗೂ ಪಾಶ್ಚಿಮಾತ್ಯ ಎರಡೂ ಕ್ರಮದ ಶಿಕ್ಷಣವನ್ನು ಪಡೆದರು. 1893ರಿಂದ 1896ರವರೆಗೆ ವ್ಹೈಟ್ಲೀಯವರು ರಾಯಲ್ ಸ್ಕೂಲ್‌ನ ಆಡಳಿತವನ್ನು ನಿರ್ವಹಿಸಿ ವಾಪಸ್ಸು ಹೋದ ನಂತರ ಪೂರ್ಣರಾಘವೇಂದ್ರರಾಯರ ನೇತೃತ್ವದಲ್ಲೇ ಆ ಶಾಲೆಯು 1901ರವರೆಗೂ ನಡೆಯಿತು[66].

ನಾಲ್ವಡಿಯರಿಗೆ ಬುದ್ಧಿಯ ಬೆಳವಣಿಗೆಯ ಶಿಕ್ಷಣದ ಜೊತೆ ಜೊತೆಗೆ ಹೃದಯ ಮತ್ತು ಮನಸ್ಸಿಗೆ ಆನಂದ ನೀಡುವಂತಹ ಕಲಾತ್ಮಕ ವಿಷಯಗಳ ಬಗ್ಗೆಯೂ ಬಾಲ್ಯದಿಂದಲೇ ಶಿಕ್ಷಣವನ್ನು ಕೊಡಿಸಲಾಯಿತು. ಸಂಗೀತ, ಸಾಹಿತ್ಯ ಮತ್ತು ನಾಟಕಗಳಂತಹ ಕ್ಷೇತ್ರಗಳಲ್ಲಿ ನಾಲ್ವಡಿಯವರಿಗೆ ಆರಂಭದಿಂದಲೇ ಅಭಿರುಚಿ ಸಿದ್ಧಿಸಿತ್ತು. ಅದಕ್ಕೆ ಪೂರಕವಾಗಿ ಪ್ರತಿದಿನ ಅರಮನೆಯ ಕರಿಕಲ್ಲು ತೊಟ್ಟಿಯಲ್ಲಿ ವೀಣೆಶೇಷಣ್ಣ, ಸುಬ್ಬಣ್ಣ ಇವರೇ ಮೊದಲಾದ ಕಲಾವಿದರಿಂದ ಕಛೇರಿಗಳನ್ನು ಏರ್ಪಡಿಸಲಾಗುತ್ತಿತ್ತು. ಆಸ್ಥಾನ ವಿದ್ವಾಂಸರಿಂದಲೂ, ಹೊರಗಿನ ವಿದ್ವಾಂಸರಿಂದಲೂ ಪ್ರತಿ ದಿನದ ಪೂಜಾವೇಳೆಯಲ್ಲೂ, ವರ್ಧಂತಿ ಮತ್ತು ನವರಾತ್ರಿಯ ಕಾಲದಲ್ಲೂ ರಾತ್ರಿಯ ವೇಳೆಯಲ್ಲಿ ಸಂಗೀತ ಕಛೇರಿಗಳನ್ನು ಅರಮನೆಯಲ್ಲಿ ಏರ್ಪಡಿಸಲಾಗುತ್ತಿತ್ತು. ಈ ಕಛೇರಿಗಳನ್ನು ಬಾಲ್ಯದಿಂದಲೇ ಆಲಿಸುತ್ತಿದ್ದ ನಾಲ್ವಡಿಯವರನ್ನು ಕಂಡ ರಾಜದಂಪತಿಗಳು ಹರ್ಷಿಸುತ್ತಿದ್ದರು.

---

*66. ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 181*

ನಾಲ್ವಡಿಯವರಿಗೆ ಚಿಕ್ಕಂದಿನಿಂದಲೂ ನಾದ ಸ್ವರವನ್ನು (ಓಲಗ)ಕೇಳುವುದೆಂದರೆ ಬಹಳ ಆಸಕ್ತಿ. ಕಾಗದವನ್ನು ಓಲಗದಂತೆ ಸುತ್ತಿ ತಾವು 'ಲೂ' ಎಂದು ಊದುತ್ತಾ ತಮ್ಮ ಜೊತೆಯವರಿಂದಲೂ ಊದಿಸುತ್ತಾ ಆನಂದ ಪಡುತ್ತಿದ್ದರು. ವೀಣೆ ಶಾಮಣ್ಣನವರು ನಾಲ್ವಡಿಯವರಿಗೆ ಸಂಗೀತದ ಪ್ರಥಮ ಗುರುಗಳಾಗಿದ್ದರು. ಯೂರೋಪಿಯನ್ ಮಹಿಳೆಯೊಬ್ಬರು ನಾಲ್ವಡಿಯವರಿಗೆ ಪಿಯಾನೋ ವಾದ್ಯದ ಶಿಕ್ಷಣವನ್ನು ನೀಡುತ್ತಿದ್ದರು[67]. ಇದು ಮುಂದೆ ನಾಲ್ವಡಿಯವರಲ್ಲಿ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಗೀತದ ಅಭಿರುಚಿಯನ್ನು ಹಿಮ್ಮಡಿಗೊಳಿಸಿತು. ಅವರಲ್ಲಿ ಅಡಕವಾಗಿದ್ದ ಸಂಗೀತ ಜ್ಞಾನವನ್ನು ಕುರಿತು ಸಿ. ಆರ್. ರೆಡ್ಡಿ (ಆಂಧ್ರ ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರ್ ಆಗಿದ್ದ ಮೊದಲ ಮೈಸೂರಿನ ಅಧಿಕಾರಿ)ಯವರು "ನಾಲ್ವಡಿಯವರು ಪಾಶ್ಚಿಮಾತ್ಯ ಹಾಗೂ ಭಾರತೀಯ ಸಂಗೀತದಲ್ಲಿ ಆಗಾಧ ಪರಿಶ್ರಮ ಸಾಧಿಸಿದ್ದರು. ಸಂಗೀತ ಸಂಯೋಜನೆಯಲ್ಲಿನ ಬಹು ಚಿಕ್ಕ ತಪ್ಪನ್ನು ಎತ್ತಿ ತೋರಿಸಬಲ್ಲವರಾಗಿದ್ದರು. ಭಾರತೀಯ ಆರ್ಕೆಸ್ಟ್ರಾವನ್ನು ಶೋಧಿಸಿದವರೆಂಬ ವಿಶೇಷ ಗೌರವಕ್ಕೆ ಪಾತ್ರರಾಗಿದ್ದರು. ಅವರು ಒಮ್ಮೆ ಪ್ರಸಿದ್ಧ ಕಂಪನಿಯ ಗ್ರಾಮೊಫೋನ್ ರೆಕಾರ್ಡ್‌ನಲ್ಲಿದ್ದ ತಪ್ಪೊಂದನ್ನು ಗುರುತಿಸಿ ಹೇಳಿದಾಗ ಆ ಕಂಪನಿ ಮಾರುಕಟ್ಟೆಗೆ ಬಿಟ್ಟಿದ್ದ ಎಲ್ಲ ಸರಕನ್ನು ವಾಪಸ್ಸು ಪಡೆಯಿತು. ಆ ತಪ್ಪನ್ನು ಆ ಕಂಪನಿಯ ವಿಶೇಷ ಸಂಗೀತ ತಜ್ಞರು ಗುರುತಿಸಲಾರದೇ ಹೋಗಿದ್ದರು ಎಂಬುದಾಗಿ" ಬರೆದಿದ್ದಾರೆ. ಈ ವಿಚಾರವನ್ನು ಸಿ.ಆರ್. ರೆಡ್ಡಿಯವರು ಅಂದಿನ ಹುಜೂರ್ ಸೆಕ್ರೆಟರಿಯಾಗಿದ್ದ ಮಿರ್ಜಾ ಇಸ್ಮಾಯಿಲ್‌ರವರಿಂದ ಕೇಳಿ ತಿಳಿದಿದ್ದರು[68]. ನಾಲ್ವಡಿಯವರ ಪ್ರೈವೇಟ್ ಸೆಕ್ರೆಟರಿಯಾಗಿದ್ದ ಇವಾನ್ ಮ್ಯಾಕೋನಾಚೀ ತಮ್ಮ "ಲೈಫ್ ಇನ್ ದಿ ಇಂಡಿಯನ್ ಸಿವಿಲ್ ಸರ್ವೀಸ್" ಎಂಬ ಕೃತಿಯಲ್ಲಿ ನಾಲ್ವಡಿಯವರಿಗೆ ಪಾಶ್ಚಿಮಾತ್ಯ ಹಾಗೂ ದೇಶೀಯ ಸಂಗೀತದ ಬಗ್ಗೆ ಉತ್ತಮ ಜ್ಞಾನ ಮತ್ತು ಒಲವು ಇತ್ತೆಂದು ತಿಳಿಸುತ್ತಾರೆ. ಅವರಿಗಿದ್ದ ಆಸಕ್ತಿಯಿಂದಾಗಿ ಮ್ಯಾಕೋನಾಚೀಯವರೂ ಸಹ ಡಬ್ಬದಲ್ಲಿರಿಸಿದ್ದ ತಮ್ಮ ವೈಯೋಲಿನ್ ಅನ್ನು ಹೊರತೆಗೆದು ಪ್ರತಿಸಂಜೆ ತಮ್ಮ ಮನೆಯಲ್ಲಿ ನಾಲ್ವಡಿಯವರ ಜೊತೆ ಸಂಗೀತ ಸಂಜೆಗಳನ್ನು ನಡೆಸಲಾರಂಭಿಸಿದ್ದರು. ನಾಲ್ವಡಿಯವರೂ ತಮ್ಮ ವೈಯೋಲಿನ್‌ನೊಡನೆ ಸಾಮೂಹಿಕ ಸಂಗೀತದಲ್ಲಿ ಪಾಲ್ಗೊಳ್ಳುತ್ತಿದ್ದರೆಂಬುದಾಗಿ ತಿಳಿಸಿದ್ದಾರೆ[69]. ಈ ಮೇಲಿನ ಹೇಳಿಕೆಗಳು ನಾಲ್ವಡಿಯವರಲ್ಲಿ ಒಡಮೂಡಿದ್ದ ಸಂಗೀತ ಪ್ರೇಮವನ್ನು ವಿವರಿಸಲು ಸಹಕರಿಸಿದರೆ ಬ್ರಿಟನ್ನಿನ ರೈಸ್ ಎಂಬ ಸಾರ್ವಜನಿಕರೊಬ್ಬರು 10ನೇ ಚಾಮರಾಜ ಒಡೆಯರನ್ನು ಕುರಿತು "ಇಂಗ್ಲಿಷ್ ಜಂಟ್ಲಮನ್" ಎಂದು ಉಲ್ಲೇಖಿಸುತ್ತಾ ಅವರು ಯೂರೋಪಿಯನ್ನರು ಮತ್ತು ಭಾರತೀಯರ ನಡುವೆ ಪ್ರಸಿದ್ಧರಾಗಿದ್ದರೆಂದೂ, ಅವರು ತಮ್ಮ ಕುಟುಂಬ ಜೀವನಕ್ಕೆ ಹೆಚ್ಚು ಮಹತ್ವ ನೀಡಿದ್ದಂತೆ, ಹಿಂದೂ ಸಂಪ್ರದಾಯಗಳಿಗೂ ಅಷ್ಟೇ ಗೌರವ ನೀಡುತ್ತಿದ್ದರು ಮತ್ತು

---

67. *ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 41-42*

68. *ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 246*

69. *ಅದೇ., ಪು. 194*

ಯೂರೋಪಿಯನ್ ಸಂಗೀತ ಮತ್ತು ಕಲೆಯ ಬಗ್ಗೆಯೂ ಸಹ ಅಷ್ಟೇ ಅಭಿರುಚಿಯನ್ನು ಹೊಂದಿದ್ದರು[70] ಎಂಬುದಾಗಿ ತಿಳಿಸಿದ್ದಾರೆ. ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಗೀತಗಳನ್ನು ಕಲಿತಿದ್ದ ಅವರು ಪಿಟೀಲು, ಕೊಳಲು, ಮೃದಂಗ, ವೀಣೆಯನ್ನು ನುಡಿಸುತ್ತಿದ್ದರು. ಅವರ ಪತ್ನಿ ಮಹಾರಾಣಿಯವರಿಗೂ ಇವುಗಳಲ್ಲಿ ಪರಿಶ್ರಮವಿದ್ದಿತು. ಆದುದರಿಂದ ನಾಲ್ವಡಿಯವರನ್ನೊಳಗೊಂಡಂತೆ ಅವರ ಐದು ಮಕ್ಕಳಿಗೂ ಸಂಗೀತದಲ್ಲಿ ಅಭಿರುಚಿ ಮೂಡಿತ್ತು ಎಂಬುದರಲ್ಲಿ ಆಶ್ಚರ್ಯವಿಲ್ಲ. ನಾಲ್ವಡಿಯವರ ಕುಟುಂಬದವರಿಗೆ 'ಸಂಗೀತ' ಪರಂಪರೆಯಿಂದಲೇ ಸಿದ್ಧಿಸಿದ ವಿದ್ಯೆಯಾಗಿತ್ತು.

ಅದೇ ರೀತಿ ರಂಗಭೂಮಿಯ ಮೇಲೆ ಸಹ ನಾಲ್ವಡಿಯವರಿಗೆ ಆಳವಾದ ಪ್ರೇಮ ಬೆಳೆಯಿತು. ಯೂರೋಪಿಯನ್ ನಾಟಕ ಕಂಪನಿಯವರು ಮೈಸೂರು ನಗರಕ್ಕೆ ಬಂದಾಗ್ಗೆ ಅರಮನೆಯಲ್ಲಿ "ಬ್ಲೂಬರ್ಡ್" (Blue Bird) ಎಂಬ ನಾಟಕದ ಕೆಲವು ದೃಶ್ಯಗಳನ್ನು ರಾಜಕುಟುಂಬದ ಸಮ್ಮುಖದಲ್ಲಿ ಅಭಿನಯಿಸುತ್ತಿದ್ದರು. 'ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ' ಎಂಬ ನಾಟಕ ಮಂಡಲಿಯವರು ಅಭಿನಯಿಸುತ್ತಿದ್ದ ಕನ್ನಡ ನಾಟಕಗಳು ನಾಲ್ವಡಿಯವರ ಮನಸ್ಸಿನ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದವು. ಈ ನಾಟಕಗಳ ಕೆಲವು ಉಪಭಾಗಗಳನ್ನು ಬಾಲಕ ಬಾಲಕಿಯರೆಲ್ಲರೂ ಸೇರಿ ಅಭಿನಯಿಸುತ್ತಿದ್ದರು. ಅರಮನೆಯ ಪಾಠಶಾಲೆಯಲ್ಲಿನ ಈ ಕಾರ್ಯಕಲಾಪಗಳನ್ನು ಕಂಡು ಬರೋಡಾ ಸಂಸ್ಥಾನದ ಗಾಯಕವಾಡ ಮಹಾರಾಜರೇ ಮುಂತಾದವರು ಮೆಚ್ಚುಗೆ, ಅಚ್ಚರಿಯನ್ನು ವ್ಯಕ್ತಪಡಿಸಿದ್ದರು. ಇಂತಹ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ನಾಟಕಗಳ ಪಾತ್ರಗಳು ನಾಲ್ವಡಿಯವರನ್ನು ಆಕರ್ಷಿಸಿ ಎಳೆಯ ವಯಸ್ಸಿನಲ್ಲೇ ಪಾತ್ರಧಾರಿಗಳಿಗೆ ಮೆಚ್ಚಿಗೆಯಿಂದ ತಮ್ಮ ಕೈ ಬೆರಳಿನಲ್ಲಿನ ವಜ್ರದುಂಗುರಗಳನ್ನು ಪಾರಿತೋಷಕವಾಗಿ ನೀಡುವ ಉದಾರ ಮನಸ್ಸು ಅವರಲ್ಲಿ ರೂಪುಗೊಂಡಿತ್ತು[71]. ಇಂತಹ ಉದಾರ ಮನಸ್ಸಿನ ಭಾವನೆಯ ಬೆಳವಣಿಗೆಯ ಮೂಲ ಪ್ರೇರಣೆಯ ಸ್ಥಳಗಳೇ ಧಾರ್ಮಿಕ ಕೇಂದ್ರಗಳು.

ಮಹಾರಾಜರಾದ 10ನೇ ಚಾಮರಾಜ ಒಡೆಯರು ಕೇವಲ ಪಾಠಶಾಲೆಯಲ್ಲೇ ನಾಲ್ವಡಿಯವರಿಗೆ ಶಿಕ್ಷಣವನ್ನು ಕೊಡಿಸುವಂತಹ ವ್ಯಾಮೋಹವನ್ನು ಹೊಂದಿರಲಿಲ್ಲ. ಇದರ ಜೊತೆಗೆ ಪರಕಾಲ ಮಠದ ಅಂದಿನ ಶ್ರೀಗಳಾಗಿದ್ದ ಶ್ರೀ ಕೃಷ್ಣಬ್ರಹ್ಮತಂತ್ರ ಪರಕಾಲ ಸ್ವಾಮಿಗಳಿಂದ ಅದರ ಸ್ವರಚಿತ ಕೆಲವು ಸಂಸ್ಕೃತ ಶ್ಲೋಕಗಳ ಪಠಣೆ ಮತ್ತು ಅರ್ಥ ವಿವರಣೆಗಳ ಮೂಲಕ ಆ ಶ್ಲೋಕಗಳಲ್ಲಿ ನಿರೂಪಿತವಾಗಿದ್ದ ರಾಜಧರ್ಮ, ರಾಜನೀತಿ, ಪ್ರಜಾಕ್ಷೇಮ ಇವೇ ಮುಂತಾದ ವಿಷಯಗಳನ್ನು ನಾಲ್ವಡಿಯವರು ಮಠಕ್ಕೆ ಹೋಗಿ ತಿಳಿದುಕೊಳ್ಳುವ ವ್ಯವಸ್ಥೆಯನ್ನು ಮಾಡಿದ್ದರು. ಮೈಸೂರು ಅರಸರು ಹೇಗೆ ಪರಂಪರೆಯಾಗಿ ಪ್ರಜಾರಕ್ಷಣೆ, ಪ್ರಜಾಹಿತ ಕಾರ್ಯಗಳನ್ನು, ದಾನ-ಧರ್ಮಗಳನ್ನು ಯಶಸ್ವಿಯಾಗಿ ನಡೆಸಿಕೊಂಡು

70. *ಜೋಶ್ಯೆಯರ್ ಜಿ.ಆರ್., ಹಿಸ್ಟರಿ ಆಫ್ ಮೈಸೂರ್ ಅಂಡ್ ದಿ ಯಾದವ ಡೈನಾಸ್ಟಿ, ಮೈಸೂರು, ಪು. 232*

71. *ವೆಂಕಟರಾಮಯ್ಯ ಸಿ.ಕೆ., ಶ್ರೀ ಮಧ್ಯವರಾಜರು, ಪೂರ್ವೋಕ್ತ, ಪು. 16-19*

ಬರುತ್ತಿದ್ದಾರೆಂಬ ವಿಷಯಗಳನ್ನೂ ಕುರಿತ ಶಿಕ್ಷಣವನ್ನು ಅಲ್ಲಿ ನೀಡಲಾಗುತ್ತಿತ್ತು[72], ಇದು ನಾಲ್ವಡಿಯವರಿಗೆ ತಮ್ಮ ರಾಜಮನೆತನದ ಪೂರ್ವಿಕ ಚರಿತ್ರೆಯ ಅಂಶಗಳನ್ನು ತಿಳಿಸುತ್ತಿತ್ತಲ್ಲದೇ ಸಾಂಪ್ರದಾಯಿಕವಾಗಿ ನಡೆದು ಬಂದಿರುವ ಪರಂಪರೆಗಳನ್ನು ಹೇಗೆ ಮುಂದುವರಿಸಿಕೊಂಡು ಹೋಗಬೇಕೆಂಬ ಶಿಕ್ಷಣವನ್ನು ನೀಡಿತು. ಇಂತಹ ಶಿಕ್ಷಣದಿಂದ ನಾಲ್ವಡಿಯವರ ಮನಸ್ಸಿನಲ್ಲಿ ಸಂಪ್ರದಾಯದ ಬೇರುಗಳು ಗಟ್ಟಿಯಾಗಿ ತಳವೂರಿದವು. ಇದರೊಂದಿಗೆ ನಾಲ್ವಡಿಯವರಲ್ಲಿ ಗುರುಭಕ್ತಿ ಅಪಾರವಾಗಿ ಮನೆಮಾಡಿತ್ತು. ಅವರು 7ವರ್ಷದವರಾಗಿದ್ದಾಗ (1891ರಲ್ಲಿ) ಶೃಂಗೇರಿಯ ಜಗದ್ಗುರುಗಳಾಗಿದ್ದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳು ಅರಮನೆಗೆ ಆಗಮಿಸಿದ್ದರು. ಆ ವೇಳೆಯಲ್ಲಿ ಶ್ರೀಗಳ ಪಾದುಕೆಗಳನ್ನು ನಾಲ್ವಡಿಯವರು ಎದೆಗಪ್ಪಿಗೊಂಡು ಗುರುನಾಮ (ಸಂಸ್ಕೃತ ಭಾಷೆಯಲ್ಲಿ) ಸ್ಮರಣೆ ಮಾಡಿ ದೀರ್ಘದಂಡ ಪ್ರಣಾಮಗಳನ್ನು ಸಲ್ಲಿಸಿದರು. ಇದನ್ನು ಕಂಡ ಸ್ವಾಮಿಗಳು "ನಮ್ಮ ಮಹಾರಾಜ ನಾಲ್ವಡಿ ಕೃಷ್ಣರಾಜ ಪ್ರಭುಗಳಿಗೆ ವೇದಶಾಸ್ತ್ರಗಳ ವಿಷಯದಲ್ಲಿ ಅಸಾಧಾರಣವಾದ ಪ್ರಮಾಣ್ಯಗ್ರಹವು ಸ್ಥಿರವಾಗಿದೆ", "ಇವರದು ಅದ್ಭುತವಾದ ಸಂಸ್ಕಾರ" ಎನ್ನುತ್ತಾ ಆಶೀರ್ವದಿಸಿ ವಯಸ್ಸಿಗೂ ಮೀರಿದ ಸಂಸ್ಕಾರ ಗುಣವನ್ನು ಗುರುತಿಸಿ ಕೊಂಡಾಡಿದರಲ್ಲದೇ ಧರ್ಮ, ಸಂಪ್ರದಾಯಗಳಿಗೆ ಸಂಬಂಧಿಸಿದ ಅನೇಕ ವಿಚಾರಗಳನ್ನೂ ತಿಳಿಸಿದರು[73]. ಇಂತಹ ಘಟನೆಗಳು ಅರಮನೆಯಲ್ಲಿ ಆಗಾಗ್ಗೆ ಸಂಭವಿಸುತ್ತಿದ್ದು ನಾಲ್ವಡಿಯವರ ಮನಸ್ಸಿನಲ್ಲಿ ಸಂಪ್ರದಾಯ ಮತ್ತು ಪರಂಪರೆಯ ಬೇರುಗಳನ್ನು ಗಟ್ಟಿಗೊಳಿಸುತ್ತಾ ಬಂದವು. ಮೇಲಿನ ಸ್ಥೂಲವಾದ ವಿವರಣೆಗಳಿಂದ ನಾಲ್ವಡಿಯವರ ಬಾಲ್ಯ ಹಾಗೂ ಪ್ರಾಥಮಿಕ ಶಿಕ್ಷಣ ಹೇಗೆ ಅರಮನೆ ಮತ್ತು ಗುರುಮನೆಯಲ್ಲಿ ರೂಪುಗೊಂಡಿತ್ತೆಂಬುದು ಸ್ಪಷ್ಟವಾಯಿತು. ಈ ವಿವರಣೆಗಳಿಂದ ಒಡಮೂಡಿದ ಕೆಲವು ಸಾಮಾನ್ಯ ತೀರ್ಮಾನಗಳನ್ನು ಇಲ್ಲಿ ನಿರೂಪಿಸಬಹುದು.

ಮೊದಲನೆಯದಾಗಿ ನಾಲ್ವಡಿಯವರಿಗೆ 20ನೇ ಶತಮಾನದ ಅವಶ್ಯಕತೆ, ಸನ್ನಿವೇಶ ಮತ್ತು ಒತ್ತಡಗಳಿಗನುಗುಣವಾಗಿ ಶಿಕ್ಷಣದ ರೂಪುರೇಷೆಗಳನ್ನು ಅವರ ಮನೆಯ ಹಿರಿಯರು, ಅಂದಿನ ದೇಶೀಯ ವಿದ್ವಾಂಸರು ಮತ್ತು ಯೂರೋಪಿಯನ್ ತಜ್ಞರೂ ಸಿದ್ಧಪಡಿಸಿದರು. ಮೈಸೂರು ಒಡೆಯರ ಆಧುನಿಕ ಚರಿತ್ರೆಯಲ್ಲೇ ನಾಲ್ವಡಿಯವರಿಗೆ ದೊರಕಿದ ಶಿಕ್ಷಣ ಹೆಚ್ಚು ಆಧುನಿಕವೂ ಮತ್ತು ಸಮಗ್ರವೂ ಆಗಿದ್ದು, ಅವರ ವ್ಯಕ್ತಿತ್ವದಲ್ಲಿ ದೇಶೀಯ ಮತ್ತು ವಿದೇಶೀಯ ಸಂಪ್ರದಾಯಗಳ ಸಮತೋಲನವನ್ನು ಅದು ಉಂಟು ಮಾಡಿತು. 1799ರಿಂದ ಮೈಸೂರಿನ ಆಧುನಿಕ ಇತಿಹಾಸ

72. *ಕೃಷ್ಣಯ್ಯಂಗಾರ್ ಡಿ., ಪರಕಾಲ ಮಠದ ವೈಭವ, ಮೈಸೂರು 1973, ಪು. 115-116*

73. *ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 32*

*- ಲಿಂಗಣ್ಣಯ್ಯ ಓ.ಎಸ್., ರಾಜರ್ಷಿ, ಬೆಂಗಳೂರು, 1950, ಪು. 8*

*- ಶ್ರೀಕಂಠಶಾಸ್ತ್ರಿ, ಶ್ರೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರ ದಿವ್ಯ ಚರಿತ್ರೆ, ಬೆಂಗಳೂರು, 1924, ಪು. 72*

ಆರಂಭವಾಗುತ್ತದೆ. ನಾಲ್ವಡಿಯವರ ಕಾಲಕ್ಕೆ ಮುಂಚೆ ಆಧುನಿಕ ಯುಗದಲ್ಲಿ ಮೂರನೆ ಕೃಷ್ಣರಾಜ ಒಡೆಯರೂ ಮತ್ತು 10ನೇ ಚಾಮರಾಜ ಒಡೆಯರೂ ಆಳ್ವಿಕೆ ನಡೆಸಿದರು. ಮುಮ್ಮಡಿಯವರ ಶಿಕ್ಷಣವು ಹೆಚ್ಚು ಸಂಪ್ರದಾಯ ಬದ್ಧವಾಗಿದ್ದರೂ ಆಧುನಿಕತೆಯ ಕೆಲವು ಅಂಶಗಳು ನುಸುಳಿಕೊಂಡಿದ್ದವು. ಅಪ್ರಾಪ್ತ ವಯಸ್ಸಿನಲ್ಲಿ ಸಿಂಹಾಸನವೇರಿದ ಅವರಿಗೆ ಅವರ ಅಜ್ಜಿ ಮಹಾರಾಣಿ ಲಕ್ಷಮ್ಮಣ್ಣಿ ಪ್ರಾಥಮಿಕ ಶಿಕ್ಷಣವನ್ನು ನೀಡುವ ವ್ಯವಸ್ಥೆಗಳನ್ನು ಕಲ್ಪಿಸಿದ್ದರು. ಕ್ಷತ್ರೀಯ ಶಿಕ್ಷಣ, ಕತ್ತಿವರಸೆ, ಧನುರ್ವಿದ್ಯೆ, ಕುದುರೆ ಸವಾರಿ ಮೊದಲಾದವುಗಳಲ್ಲಿ ಅವರಿಗೆ ತರಭೇತಿಯನ್ನು ಕೊಡಲಾಗಿತ್ತು. ಹಿಂದೂಸ್ಥಾನಿ, ಮರಾಠಿ ಭಾಷೆಗಳನ್ನು ಕಲಿಸಲಾಗಿತ್ತು. ಶ್ರೀರಂಗಪಟ್ಟಣದ ಸೆರೆಮನೆಯಲ್ಲಿ ಭೇಟಿ ಮಾಡಿದ್ದ ವ್ಯಾಲಂಟೀನ್ ಎನ್ನುವ ಒಬ್ಬ ಸಮಕಾಲೀನ ಕ್ರೈಸ್ತ ಪಾದ್ರಿಗೆ ಮಹಾರಾಜರಿಗೆ (ಮುಮ್ಮಡಿ ಕೃಷ್ಣರಾಜ ಒಡೆಯರ್) ಇಂಗ್ಲಿಷ್ ಕಲಿಸುವಂತೆ ರೆಸಿಡೆಂಟರು ಒತ್ತಾಯಪಡಿಸಿದುದಾಗಿ ಹೇಳಿಕೊಂಡಿದ್ದಾರೆ. ಕಾಲಕ್ರಮೇಣ ಅವರು ತೆಲುಗು ಮತ್ತು ಇಂಗ್ಲಿಷ್ ಭಾಷೆಗಳನ್ನು ಕಲಿತರು. ಅವರಿಗೆ ಸಾಮಾನ್ಯಜ್ಞಾನದ ಪ್ರಯೋಜನವನ್ನು ತಿಳಿಸಿಕೊಡಲಾಗಿತ್ತು. ಆಡಳಿತದ ವಿವಿಧ ಮುಖಗಳನ್ನು ಮತ್ತು ಕಾರ್ಯವೈಖರಿಯ ಬಗೆಗೂ ಸೂಕ್ತ ಮಾಹಿತಿಗಳನ್ನು ಒದಗಿಸುವಂತಹ ದೇಶೀಯ ಮತ್ತು ಪರಂಪರಾನುಗತ ಔಪಚಾರಿಕ ಶಿಕ್ಷಣ ಪಡೆದವರಾಗಿದ್ದು ಅನೌಪಚಾರಿಕ ಶಿಕ್ಷಣ ವಿಧಾನಗಳಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಪಳಗಿದ್ದರು[74]. "ರಾಜರ ಶಿಕ್ಷಣದ ಜವಾಬ್ದಾರಿಯನ್ನು ಅಂದು ಹೊತ್ತಿದ್ದ ದಿವಾನ್ ಪೂರ್ಣಯ್ಯನವರು ಮಹಾರಾಜರು ತಮ್ಮ ಯೌವನವನ್ನು ದಾಸಿ ವರ್ಗದವರ ಜೊತೆ ಹೆಚ್ಚು ಕಳೆಯಲು ಅನುವು ಮಾಡಿಕೊಟ್ಟರು. ದಖ್ಖನ್ನಿನ ಪ್ರಮುಖ ಭಾಷೆಗಳನ್ನು ಚೆನ್ನಾಗಿ ಕಲಿಸಲು ಆಸ್ಥೆ ತೋರಿಸಲಾಯಿತೇ ವಿನಃ ರಾಜರ ಮನಸ್ಸಿನಲ್ಲಿ ಉತ್ತಮ ತತ್ವಗಳನ್ನು ಅಚ್ಚು ಒತ್ತಿಸುವಲ್ಲಿ ಪ್ರಯತ್ನಿಸಲಿಲ್ಲ. ನಿಜವಾಗಿ ಅವರ ಉತ್ತಮ ಆರಂಭದ ವರ್ಷಗಳ ಜೀವನವನ್ನು ಪೋಲಾಗಲು ಅವಕಾಶ ಮಾಡಿಕೊಟ್ಟರು. ಇದರಿಂದಾಗಿ ಘನವಾದುದನ್ನು ಗಳಿಸಲು ವಿಫಲವಾದುದಲ್ಲದೆ ಅವರ ಆ ಸಹವಾಸಗಳು ಅವರ ಸ್ವಚ್ಛ ಚಾರಿತ್ರ್ಯ ಜೀವನವನ್ನೇ ಹಾಳುಗೆಡವಿದವು"[75] ಎಂಬ ಈ ಅಂಶಗಳನ್ನು ತಿಳಿದಾಗ ನಾಲ್ವಡಿಯವರ ಶಿಕ್ಷಣ ಕ್ರಮಕ್ಕೂ ಮುಮ್ಮಡಿಯವರ ಶಿಕ್ಷಣ ಕ್ರಮಕ್ಕೂ ನಡುವೆ ಇರುವ ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ. ಹಾಗೆಯೇ 10ನೇ ಚಾಮರಾಜ ಒಡೆಯರ ಶಿಕ್ಷಣದಲ್ಲಿ ಸಾಂಪ್ರದಾಯಿಕತೆ ಹಿಂದಿಗಿಂತಲೂ ತೆಳುವಾಗುತ್ತಾ ಬಂದು ಆಧುನಿಕ ಅಂಶಗಳು ಹೆಚ್ಚಾಗುತ್ತಾ ಸಾಗಿತು. ಕರ್ನಲ್ ಮ್ಯಾಲೆಸನ್‌ರವರ ಪೋಷಣೆಯಲ್ಲಿ ರಂಗಾಚಾರ್ಲು ಮತ್ತು ಜಯರಾಂರಾವ್ ಎಂಬ ಅಧಿಕಾರಿಗಳ ಉಸ್ತುವಾರಿಕೆಯಲ್ಲಿ ಅವರಿಗೆ ಶಿಕ್ಷಣ ನೀಡಲಾಗಿತ್ತು. ರಾಜ್ಯದ ಭವಿಷ್ಯವನ್ನು ರೂಪಿಸಬೇಕಾದ

---

74. ***ಗೋಪಾಲ್ ಆರ್. ಮತ್ತು ನರೇಂದ್ರ ಪ್ರಸಾದ್ ಎಸ್.***, *ಮುಮ್ಮಡಿ ಕೃಷ್ಣರಾಜ ಒಡೆಯರು ಒಂದು ಚಾರಿತ್ರಿಕ ಅಧ್ಯಯನ (ಕ್ರಿ.ಶ. 1799 ರಿಂದ 1868ರ ವರೆಗೆ), ಹೊಸಪೇಟೆ, 2004, ಪು. 36*

75. ***ಗೋಪಾಲ್ ಎಂ.ಹೆಚ್. (ಸಂ).***, *ಬ್ರಿಟಿಷ್ ಸೋರ್ಸ್‌ಸ್ ಆಫ್ ದಿ ಎಕಾನಮಿ, ಪೊಲಿಟಿಕಲ್ ಅಂಡ್ ಸೋಷಿಯಲ್ ಹಿಸ್ಟರಿ ಆಫ್ ದಿ ಮೈಸೂರ್ ಸ್ಟೇಟ್ 1831-1832, ಸಂಪುಟ -II, ಬೆಂಗಳೂರು, ಪು. 237*

ರಾಜಕುಮಾರರಿಗೆ ರಾಜಧಾನಿಯ ವಾಸಸ್ಥಾನಕ್ಕಿಂತ ಹೊರಗಡೆ ಶಿಕ್ಷಣ ನೀಡುವುದು ಉತ್ತಮವೆಂದು ಭಾವಿಸಿ ಅಂದಿನ ಸೆಕ್ರೆಟರಿ ಆಫ್ ಸ್ಟೇಟ್ ಹಾಗೂ ಮ್ಯಾಲೆಸನ್ ಒಟ್ಟುಗೂಡಿ ಲೋಕರಂಜನ್ ಮಹಲ್‌ನಲ್ಲಿ ಇಂಗ್ಲೆಂಡಿನ ಪಬ್ಲಿಕ್ ಶಾಲೆಗಳ ಮಾದರಿಯಲ್ಲಿ ವಿಶೇಷ ಶಾಲೆಯನ್ನು ಸ್ಥಾಪಿಸಿ ಅಲ್ಲಿ ವಿಂಚೆಸ್ಟರ್‌ನ ಮಾದರಿಯ ಶಿಕ್ಷಣವನ್ನು ನೀಡಿದ್ದರು. ಅಲ್ಲಿ ಸಂಪೂರ್ಣ ವಿದೇಶೀಕರಣ ಪ್ರಕ್ರಿಯೆಯ ಶಿಕ್ಷಣವನ್ನು ಕೈಗೊಂಡರೆ ದೇಶೀಯರ ಸಹಾನುಭೂತಿಯನ್ನು ಕಳೆದುಕೊಳ್ಳುವಂತಾಗುತ್ತದೆಂದೂ ಸಹ ತೀರ್ಮಾನಿಸಿ ಭಾರತೀಯ ರಾಜಕುಮಾರರಿಗೆ ಯೂರೋಪಿನ ರಾಜತಂತ್ರಜ್ಞರು ಮಾನ್ಯತೆ ನೀಡಿರುವ ತತ್ವಗಳನ್ನು ಮಾತ್ರ ಅಳವಡಿಸಿ, ಪೌರ್ವಾತ್ಯ ಮಾದರಿಗೆ ಘಾಸಿಗೊಳಿಸದಂತಹ ಸಮ್ಮಿಶ್ರಣದ ಶಿಕ್ಷಣ ತತ್ವಗಳನ್ನೂ 10ನೆ ಚಾಮರಾಜ ಒಡೆಯರಿಗೆ ಅಲ್ಲಿ ಬೋಧಿಸಲಾಗಿತ್ತು. ಅಂತಹ ಶಿಕ್ಷಣ ಪಡೆದ ರಾಜನ ಆಡಳಿತದಲ್ಲಿ ಮೈಸೂರಿನ ಪ್ರಜೆಗಳು ಸಂತೋಷದಿಂದಿರಬಹುದು ಮತ್ತು ಭಾರತದಲ್ಲಿ ದೇಶೀಯ ಆಡಳಿತದ ಭವಿಷ್ಯ ಶಾಶ್ವತವಾಗಿ ನಿರ್ಧಾರವಾಗಲೂ ಬಹುದೆಂಬ ಉದ್ದೇಶದಿಂದ ಇಂತಹ ವಿಶೇಷ ಶಿಕ್ಷಣವನ್ನು ರೂಪಿಸಲಾಗಿತ್ತು. ಈ ಮಾದರಿಯ ಶಿಕ್ಷಣವನ್ನು ಪಡೆದಲ್ಲಿ ರಾಜಕುಮಾರನು ಮುಂದೆ ಉತ್ತಮ ಭವಿಷ್ಯವನ್ನು ರೂಪಿಸಿಕೊಳ್ಳುವಂತಾಗಬಹುದೆಂದು ಆಲೋಚಿಸಿ ಭಾರತ ಸರ್ಕಾರದ ಸೆಕ್ರೆಟರಿ ಆಫ್ ಸ್ಟೇಟ್ ಹಾಗೂ ಕರ್ನಲ್ ಮ್ಯಾಲೇಸನ್ ಸೇರಿ 10ನೇ ಚಾಮರಾಜ ಒಡೆಯರ ಶಿಕ್ಷಣದ ಜವಾಬ್ದಾರಿಯನ್ನು ಹೊತ್ತರು. ಆದರೆ ಆ ಶಿಕ್ಷಣ ಕ್ರಮದಲ್ಲಿ ದೇಶೀಯ ಸಂಪ್ರದಾಯದ ಮೂಲ ಶಿಕ್ಷಣದ ವ್ಯವಸ್ಥೆಗಿಂತ ಹೆಚ್ಚಾಗಿ ಪಾಶ್ಚಿಮಾತ್ಯ ಅನುಕರಣೆಯ ಮಾದರಿಯ ಶಿಕ್ಷಣದ ಅಂಶಗಳೇ ಅಧಿಕಗೊಂಡಿದ್ದವು[76]. ಆದರೆ ನಾಲ್ವಡಿಯವರ ಕಾಲಕ್ಕೆ ರಾಜಶಿಕ್ಷಣವು ಒಂದು ರೀತಿಯ ಸಮತೋಲನವನ್ನು ಕಂಡುಕೊಂಡಿತು.

ಎರಡನೆಯದಾಗಿ ನಾಲ್ವಡಿಯವರ ಆಧುನಿಕ ಶಿಕ್ಷಣಕ್ಕೆ ಪ್ರೇರಣೆಯ ಮೂಲ ಅವರ ತಂದೆ-ತಾಯಿಗಳೆಂದರೆ ಉತ್ಪ್ರೇಕ್ಷೆಯಲ್ಲ. 10ನೇ ಚಾಮರಾಜ ಒಡೆಯರು ಅತ್ಯಂತ ದೂರದೃಷ್ಟಿ ಉಳ್ಳವರಾಗಿದ್ದರು. ತಮ್ಮ ಮಗನಿಗೆ ಇಂಗ್ಲಿಷ್ ಭಾಷೆ ಮತ್ತು ಆ ಮೂಲಕ ಇಂಗ್ಲಿಷ್ ವಿದ್ಯಾಭ್ಯಾಸದ ಅವಶ್ಯಕತೆಯನ್ನು ಮನಗಂಡಿದ್ದರು. ಅವರು ಮನಸ್ಸು ಮಾಡಿದ್ದರೆ ಇಂಗ್ಲೆಂಡಿನ ಪ್ರಸಿದ್ಧವಾದ ಲಂಡನ್ನಿನ ಕೇಂಬ್ರಿಡ್ಜ್ ಮತ್ತು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಣವನ್ನು ಕೊಡಿಸಬಹುದಾಗಿತ್ತು. ಉದಾಹರಣೆಗೆ ಹೈದರಾಬಾದಿನ ನಿಜಾಮನ ರೀತಿಯಲ್ಲಿ[77], ಆದರೆ ಪ್ರಾಯಶಃ ಇಂತಹ ಶಿಕ್ಷಣದಿಂದ ದೇಶೀಯ ಸಂಪ್ರದಾಯದ ಬೇರುಗಳು ಅವರ ವ್ಯಕ್ತಿತ್ವವನ್ನು ಸಡಿಲಗೊಳಿಸುವ ಸಾಧ್ಯತೆಗಳಿರಬಹುದು

---

*76. **ಶಾಮರಾವ್ ಎಂ.**, ಮಾಡ್ರನ್ ಮೈಸೂರ್, ಭಾಗ - II, ಬೆಂಗಳೂರು, 1936, ಪು. 29-30.*

*77. **ಫೈಲ್. ನಂ. ; ಆರ್/1(1/201).**, ಎಸ್ಐ, ಮಾರ್ಚ್ 1889, 48-51, ಸೆಲೆಕ್ಷನ್ ಆಫ್ ಆನ್ ಇಂಗ್ಲಿಷ್ ಟ್ಯೂಟರ್ ಆಫ್ ಸೂಪರಿಂಟೆಂಡೆಂಟ್ ದಿ ಎಜುಕೇಷನ್ ಆನ್ ಆಫ್ ದಿ ಎಲ್ಡೆಸ್ಟ್ ಸನ್ ಆಫ್ ಹಿಸ್, ಹೈನೆಸ್ ದಿ ನಿಜಾಮ್ ಆಫ್ ಹೈದರಾಬಾದ್ (1897-98), ಬ್ರಿಟಿಷ್ ಲೈಬ್ರರಿ, ಐ.ಓ.ಎಲ್. ಲಂಡನ್, ಪು. 1-10*

ಎಂಬುದನ್ನು ಅವರು ಗಮನಿಸಿದ್ದಿರಬೇಕು. ಆದುದರಿಂದಲೇ ತಮ್ಮ ಕಣ್ಣೆದುರಿಗೆ ಇದ್ದು ಅವರು ಪಾಶ್ಚಿಮಾತ್ಯ ವಿದ್ಯಾಭ್ಯಾಸದಿಂದಲೂ ವಂಚಿತರಾಗದಂತೆ ನೋಡಿಕೊಳ್ಳುತ್ತಾ ಸಂಪ್ರದಾಯಕ್ಕೆ ಅಂದರೆ ಅಪ್ಪ ಹಾಕಿದ ಆಲದ ಮರ ಎಂದು ನೇತು ಹಾಕಿಕೊಳ್ಳದೇ ಎರಡೂ ಸಂಪ್ರದಾಯಗಳ ಒಳ್ಳೆಯ ಅಂಶಗಳನ್ನು ಅವರ ವ್ಯಕ್ತಿತ್ವದಲ್ಲಿ ರೂಪಿಸುವ ಪ್ರಯತ್ನ ಮಾಡಿದರು.

ಮೂರನೆಯದಾಗಿ ನಾಲ್ವಡಿಯವರಿಗೆ ದೇಶೀಯ ಹಾಗೂ ವಿದೇಶೀಯ ಶಿಕ್ಷಕರಿಂದ ಶಿಕ್ಷಣ ದೊರಕಿಸಿದ್ದು. ಇದು ಮೈಸೂರು ಸಮಾಜದ ಪರಿವರ್ತನೆಗೆ ಅವಶ್ಯಕವಾಗಿತ್ತು.

ನಾಲ್ಕನೆಯದಾಗಿ ನಾಲ್ವಡಿಯವರಿಗೆ ಪ್ರಾರಂಭದಲ್ಲಿ ದೊರೆತ ಶಿಕ್ಷಣದ ಅನೇಕ ಆಯಾಮಗಳನ್ನು ಅಧ್ಯಯನ ಮಾಡಿದ ಮೇಲೆ ನಮಗೆ ಒಂದು ವಿಷಯ ಸ್ಪಷ್ಟವಾಗುತ್ತದೆ. ಅದೇನೆಂದರೆ ಅವರ ಶಿಕ್ಷಣದಲ್ಲಿ ಬುದ್ಧಿ, ಹೃದಯ ಮತ್ತು ಮನಸ್ಸುಗಳ ತ್ರಿವೇಣಿ ಸಂಗಮವಿದ್ದುದು. ಮೈಸೂರು ಸಮಾಜವನ್ನು 20ನೇ ಶತಮಾನದ ಆರಂಭದ ದಶಕಗಳಲ್ಲಿ ಪರಿವರ್ತನೆಯ ಹಾದಿಯಲ್ಲಿ ಕೊಂಡೊಯ್ಯಲೇಬೇಕಾದ ಅನಿವಾರ್ಯತೆ ಇದ್ದುದರ ಹಿನ್ನೆಲೆಯಲ್ಲಿ ಅವರಿಗೆ ದೊರೆತ ಶಿಕ್ಷಣದ ಪ್ರಾಧಾನ್ಯವನ್ನು ನಾವು ಗ್ರಹಿಸಬಹುದಾಗಿದೆ.

ಹೀಗೆ ಮೈಸೂರು ಸಮಾಜದ ಪರಿವರ್ತನೆಯ ಹರಿಕಾರರಾಗಿ ನಾಲ್ವಡಿಯವರನ್ನು ರೂಪಿಸುವಲ್ಲಿ ಹಾಕಿದ ಶಿಕ್ಷಣದ ತಳಹದಿಯ ಪೂರ್ಣಫಲ ಕಾಣುವ ಮೊದಲೇ 10ನೇ ಚಾಮರಾಜ ಒಡೆಯರು 1894 ಡಿಸೆಂಬರ್ 28ರಂದು ಮರಣ ಹೊಂದಿದರು. ಆಗ ನಾಲ್ವಡಿಯವರಿಗೆ ಕೇವಲ 10 ವರ್ಷಗಳು ತುಂಬಿದ್ದವು. ತದನಂತರದಲ್ಲಿ ಅವರ ತಾಯಿ ವಾಣೀವಿಲಾಸ ಸನ್ನಿಧಾನ ಕೆಂಪ ನಂಜಮ್ಮಣ್ಣಿಯವರನ್ನು ಬ್ರಿಟಿಷ್ ಸರ್ಕಾರ ಮೈಸೂರು ಸಂಸ್ಥಾನದ "ರೀಜೆಂಟ್" (ರಾಜಮಾತೆ)ಯರನ್ನಾಗಿಯೂ, ನಾಲ್ವಡಿಯರವನ್ನು ಮೈಸೂರು ಸಂಸ್ಥಾನದ ಮಹಾರಾಜರನ್ನಾಗಿಯೂ ನೇಮಿಸಿ 1894ರ ಡಿಸೆಂಬರ್ 30ರಂದು ತಂತಿ ಸಂದೇಶವೊಂದನ್ನು ಕಳುಹಿಸಿತು. ಆ ಪ್ರಕಾರವಾಗಿ 1895ರ ಫೆಬ್ರವರಿ 1ರಂದು ನಾಲ್ವಡಿಯವರಿಗೆ ಸಿಂಹಾಸನರೋಹಣ ನೆರವೇರಿತು[78]. ಪಟ್ಟಾಭಿಷೇಕ ಮಹೋತ್ಸವವು ಪರಂಪರೆಗೆ ಅನುಗುಣವಾಗಿ ನಡೆಯಿತು. 20ನೇ ಶತಮಾನದ ಆಧುನಿಕ ಕಾಲಕ್ಕೆ ಕಾಲಿಟ್ಟ ಒಂದು ಪ್ರದೇಶದ ರಾಜನಿಗೆ ಸಂಪ್ರದಾಯಬದ್ಧವಾಗಿ ಪಟ್ಟಾಭಿಷೇಕ ನಡೆದದ್ದು ಒಂದು ವಿಶಿಷ್ಟವೆಂದೇ ಹೇಳಬಹುದು. ನಾಲ್ವಡಿಯವರಿಗೆ ಈ ಸಮಾರಂಭ ಸಂಪ್ರದಾಯವನ್ನು ಪರಿಚಯ ಮಾಡಿಕೊಡುವುದರ ಜೊತೆಗೆ ಅವರ ವ್ಯಕ್ತಿತ್ವದ ಬೇರುಗಳನ್ನು ಗುರುತಿಸಿಕೊಳ್ಳುವುದಕ್ಕೂ ಸಹಕಾರವಾಯಿತು. ಈ ಸಂಬಂಧದ ಸಂಕ್ಷಿಪ್ತ ವಿವರಗಳನ್ನು ಅಂದಿನ ಮೈಸೂರಿನ ರೆಸಿಡೆಂಟರಾಗಿದ್ದ ಕರ್ನಲ್ ಪಿ.ಡಿ. ಹೆಂಡರ್‌ಸನ್‌ರವರು

---

*78. ಶಾಮರಾವ್ ಎಂ., ಪೂರ್ವೋಕ್ತ, ಪು. 170-171*

ಭಾರತ ಸರ್ಕಾರದ ವಿದೇಶಾಂಗ ವ್ಯವಹಾರ ವಿಭಾಗದ ಸೆಕ್ರೆಟರಿಯವರಿಗೆ ತಂತಿ ಸಂದೇಶವನ್ನು ಕಳುಹಿಸಿದ್ದರು. ಆ ಸಂದೇಶದಲ್ಲಿ ನಿರೂಪಿತವಾಗಿದ್ದ ಪಟ್ಟಾಭಿಷೇಕ ಸಮಾರಂಭದ ಸಂಕ್ಷಿಪ್ತ ವಿವರಣೆ ಇಂತಿದೆ. ರೀಜೆಂಟ್ ಮಹಾರಾಣಿ ವಾಣಿವಿಲಾಸ ಸನ್ನಿಧಾನರವರು ಈ ಸಮಾರಂಭದ ಎಲ್ಲಾ ಸಿದ್ಧತೆಗಳ ಪರಿವೀಕ್ಷಕರಾಗಿದ್ದು ಈ ಸಮಾರಂಭದ ಆಹ್ವಾನ ಪತ್ರಿಕೆಯು ಸ್ವದೇಶ ಮತ್ತು ಪರದೇಶಗಳಲ್ಲಿದ್ದ ಅನೇಕ ಗಣ್ಯವ್ಯಕ್ತಿಗಳಿಗೆ ಮತ್ತು ವಿವಿಧ ಸಂಸ್ಥಾನದ ರಾಜರುಗಳಿಗೆ ತಲುಪಿಸುವ ವ್ಯವಸ್ಥೆಯನ್ನು ಕೈಗೊಂಡಿದ್ದರು. ಮೈಸೂರು ನಗರವನ್ನು ಅಲಂಕರಿಸಲಾಗಿತ್ತು. ಭಾರತದ ರಾಜ ಮಹಾರಾಜರುಗಳ ಪ್ರತಿನಿಧಿಗಳೂ, ಮಠಾಧಿಪತಿಗಳೂ ಮತ್ತು ಇತರ ಅತಿಥಿಗಳು ಪಟ್ಟಾಭಿಷೇಕ ಸಮಾರಂಭದಲ್ಲಿ ಪಾಲ್ಗೊಂಡಿದ್ದರು. ಅರಮನೆಯ ಬಾಲಾಖಾನೆಯಲ್ಲಿ ಈ ಸಮಾರಂಭ ನಡೆಯಿತು. ನಾಲ್ವಡಿಯವರ ತಂದೆಯವರು ಇಲ್ಲಿ ಸಿಂಹಾಸನದ ಮೇಲೆ ಕುಳಿತು ದರ್ಬಾರು ನಡೆಸುತ್ತಿದ್ದರು. ರತ್ನ ಸಿಂಹಾಸನವನ್ನು ಪೂರ್ವಾಭಿಮುಖವಾಗಿ ಹುಲಿಯ ಚರ್ಮದ ಮೇಲೆ ಇಡಲಾಗಿತ್ತು. ಸಿಂಹಾಸನದ ಬಲಗಡೆ ಯೂರೋಪಿಯನ್ ಅತಿಥಿಗಳೂ, ಸಿಂಹಾಸನದ ಎಡಭಾಗದಲ್ಲಿ ಬಂಧುಗಳೂ, ಭಾರತೀಯ ಅತಿಥಿಗಳೂ, ವೈದಿಕರೂ ಹಾಗೂ ಮುಖ್ಯ ಅಧಿಕಾರಿಗಳು ಕುಳಿತಿದ್ದರು. ಬಾಲಾಖಾನೆಯ ಉತ್ತರ ಭಾಗದಲ್ಲಿ ಬಾರ್ ಸಿಪಾಯಿಗಳು, ಬಾಲೆಯವರು, ಜಿಲ್ಲೋದವರು, ಇಂಗ್ಲಿಷ್ ಬ್ಯಾಂಡ್, ನಾದಸ್ವರ ಮುಂತಾದ ಮಂಗಳ ವಾದ್ಯದವರು ನೆರೆದಿದ್ದರು. ಪಟ್ಟದ ಆನೆ, ಪಟ್ಟದ ಕುದುರೆ, ಪಟ್ಟದ ಹಸುಗಳು ಅಲಂಕರಿಸಿಕೊಂಡು ನಿಂತಿದ್ದವು. ಬ್ರಿಟಿಷ್ ರೆಸಿಡೆಂಟ್ ಕರ್ನಲ್ ಹೆಂಡರ್‌ಸನ್‌ರವರು ಅರಮನೆಗೆ ಬಂದು ರಾಜರಿಗೆ ಹಸ್ತಲಾಘುವವನ್ನಿತ್ತು, ಸಿಂಹಾಸನದ ಮುಂಭಾಗಕ್ಕೆ ಬಂದು ಆಗಿನ ಬ್ರಿಟಿಷ್ ವೈಸ್ರಾಯ್‌ರವರಾಗಿದ್ದ ಎರಡನೇ ಲಾರ್ಡ್ ಎಲ್ಗಿನ್ (1894-1899)ರವರಿಂದ ಬಂದಿದ್ದ 'ಖರೀತಾ ಪತ್ರಿಕೆ'ಯನ್ನು ಓದಿ ರಾಜರಿಗೆ ಒಪ್ಪಿಸಿದರು. ಆ ಖರೀತಾ ಪತ್ರಿಕೆಯಲ್ಲಿ ನಾಲ್ವಡಿಯವರು ಪ್ರಾಪ್ತ ವಯಸ್ಕರಾದ ಮೇಲೆ ರಾಜ್ಯಭಾರವನ್ನು ವಹಿಸಿಕೊಡುವುದಾಗಿಯೂ, ಅಲ್ಲಿಯವರೆಗೆ ಶ್ರೀ ವಾಣಿ ವಿಲಾಸ ಸನ್ನಿಧಾನದವರು "ರೀಜೆಂಟ್" ಪದವಿಯನ್ನು ಅಲಂಕರಿಸಿ ದಿವಾನ್ ಕೆ. ಶೇಷಾದ್ರಿ ಅಯ್ಯರ್‌ರವರ ಅಧಿಕಾರ ಬೆಂಬಲದೊಡನೆ ಬ್ರಿಟಿಷ್ ರೆಸಿಡೆಂಟರ ಸಲಹೆಗಳನ್ನು ಆಲಿಸುತ್ತಾ ರಾಜ್ಯಭಾರವನ್ನು ನಿರ್ವಹಿಸಬೇಕೆಂಬುದು ನಮ್ಮ ಅಭಿಲಾಷೆಯಾಗಿದೆ ಎಂಬುದಾಗಿ ಸೂಚಿಸಲಾಗಿತ್ತು. ಈ ಪತ್ರಿಕೆಯ ವಾಚನ ಮುಗಿದ ಮೇಲೆ ಬ್ರಿಟಿಷ್ ರೆಸಿಡೆಂಟ್ ನಾಲ್ವಡಿಯವರಿಗೆ ಹಸ್ತಲಾಘುವವನ್ನಿತ್ತರು. ನಂತರ 11.30 ಗಂಟೆಯ ವೇಳೆಗೆ ಸಿಂಹಾಸನಾರೋಹಣ ಕಾರ್ಯವು ವೈದಿಕ ಮಂಡಲಿಯವರ ಪೂಜಾವಿಧಾನದಂತೆ ನೆರವೇರಿತು. ಬತೇರಿಯಿಂದ 21 ಕುಶಾಲು ತೋಪುಗಳು ಹಾರಿದವು. ಆ ಬಳಿಕ ದರ್ಬಾರು ಬಕ್ಷಿಯವರಾದ ಅಂಬಿಲ್ ನರಸಿಂಹ ಐಯ್ಯಂಗಾರರರು ರಾಜವಂಶಾವಳಿಯನ್ನು, ಪ್ರಸಿದ್ಧ ಪತ್ರಿಕೆಯನ್ನು ಓದಿದರು.

ಆನಂತರ ಬ್ರಿಟಿಷ್ ರೆಸಿಡೆಂಟರು ವಾಡಿಕೆಯಂತೆ ವೈಸ್ರಾಯಿಯವರಿಂದ ಬಂದಿದ್ದ 21 ತಟ್ಟೆಗಳ ಖಿಲ್ಲತ್ತುಗಳನ್ನು ನಾಲ್ವಡಿಯವರಿಗೆ ಒಪ್ಪಿಸಿ ಭಾರಿ ಮುತ್ತಿನ ಹಾರವನ್ನು ಅವರ ಕಂಠಕ್ಕೆ ಹಾಕಿದರು. ಆ ಬಳಿಕ ಮಹಾರಾಜ ನಾಲ್ವಡಿಯವರು ವೈಸ್ರಾಯಿಯವರಿಗೆ ವಾಡಿಕೆಯಾಗಿ ಕಳುಹಿಸುವಂತೆ 21 ತಟ್ಟೆ ಖಿಲ್ಲತ್ತುಗಳನ್ನೂ, 101 ವೀಳ್ಯಗಳನ್ನು ದಿವಾನರ ಮೂಲಕ ಬ್ರಿಟಿಷ್ ರೆಸಿಡೆಂಟರಿಗೆ ಒಪ್ಪಿಸಿದರು. ಆನಂತರ ರಾಜಬಂಧುಗಳು, ಸರದಾರರು, ಅಧಿಕಾರಿಗಳೂ, ಮಹಾರಾಜರಿಗೆ ನಜರು ಮುಜರೆಗಳಿಂದ ರಾಜಭಕ್ತಿ ವಿಶ್ವಾಸಗಳನ್ನರ್ಪಿಸಿದರು. ದಿವಾನರು ಬ್ರಿಟಿಷ್ ರೆಸಿಡೆಂಟರಿಗೆ ಪುಷ್ಪಹಾರ ತಾಂಬೂಲಗಳನ್ನು ಕೊಟ್ಟು ಗೌರವಿಸಿದರು. ಬಕ್ಷಿ ಬಸವಪ್ಪಾಜಿಯವರು ಇಂಗ್ಲಿಷ್ ಸರದಾರರುಗಳಿಗೆ ತಾಂಬೂಲ ನೀಡಿದರು. ಬಳಿಕ ರೆಸಿಡೆಂಟ್ ಹಾಗೂ ಇತರೆ ಇಂಗ್ಲಿಷ್ ಅಧಿಕಾರಿಗಳು ಮಹಾರಾಜರಿಗೆ ಮುಜರೆ ಮಾಡಿ ಹೊರಟ ಬಳಿಕ ಮಠಾಧಿಪತಿಗಳು, ವೈದಿಕ ಮಂಡಲಿಯವರು ಮಹಾರಾಜರಿಗೆ ವೇದೋಕ್ತಾಶೀರ್ವಾದ ಪೂರ್ವಕವಾಗಿ ಖಿಲ್ಲತ್ತುಗಳನ್ನು ಫಲಮಂತ್ರಾಕ್ಷತೆಗಳನ್ನು ಒಪ್ಪಿಸಿದರು. ಉತ್ಸವಕ್ಕೆ ಬಂದಿದ್ದ ಸಮಸ್ತರಿಗೂ ಪುಷ್ಪಮಾಲಿಕೆಗಳನ್ನು ಹಾಕಿ ತಾಂಬೂಲಗಳನ್ನು ಕೊಟ್ಟ ಬಳಿಕ ದರ್ಬಾರು ಮುಗಿದು ಮಹಾರಾಜರು ಸಿಂಹಾಸನದಿಂದ ಇಳಿದರು. ಈ ಮಹೋತ್ಸವದ ಅಂಗವಾಗಿ ಭೂರಿದಾನ, ಸಂತರ್ಪಣೆಗಳೂ, ಉತ್ಸವ ಪರಂಪರೆಗಳು ವಿಜೃಂಭಣೆಯಿಂದ ನಡೆದವು[79].

ಮೇಲಿನ ಪಟ್ಟಾಭಿಷೇಕದ ಒಂದು ಸ್ಥೂಲ ಚಿತ್ರಣವನ್ನು ಗಮನಿಸಿದರೆ ಕೆಲವು ವಿಶಿಷ್ಟವಾದ ವಿಷಯಗಳು ಗೊತ್ತಾಗುತ್ತವೆ. ಮೊದಲನೆಯದಾಗಿ ಮೈಸೂರು ಅರಮನೆಯ ಸಂಪ್ರದಾಯದಲ್ಲಿ ಸಾಂಪ್ರದಾಯಿಕ ಮತ್ತು ವಿದೇಶಿ ಅಥವಾ ಆಧುನಿಕ ಅಂಶಗಳು ಹಿತಮಿತವಾಗಿ ಒಳಗೊಂಡಿದ್ದನ್ನು ನೋಡಬಹುದು. ಎರಡನೆಯದಾಗಿ ಸಿಂಹಾಸನವನ್ನು ಪೂರ್ವಾಭಿಮುಖವಾಗಿ ಹುಲಿಯ ಚರ್ಮದ ಮೇಲೆ ಇಟ್ಟಿದ್ದು ಸಂಸ್ಕೃತಿಯ ಸಂಕೇತವಾಗಿತ್ತು. ಪೂರ್ವದಿಕ್ಕು ಹಿಂದೂಗಳಿಗೆ ಪವಿತ್ರವಾದದ್ದು. ಅದು ಸೂರ್ಯನು ಉದಯಿಸುವ ದಿಕ್ಕು. ಹುಲಿಯ ಚರ್ಮವು ರಾಜನು ದಂಡಾಧೀಶನೆಂದು ಮತ್ತು ನಿಗ್ರಹ ಶಕ್ತಿಯನ್ನು ಅರ್ಜಿಸಿಕೊಳ್ಳಬೇಕೆಂಬುದನ್ನು ಸೂಚಿಸುತ್ತದೆ. ಮೂರನೆಯದಾಗಿ ವೈದಿಕ ಮಂಡಲಿಯವರು ಮತ್ತು ಪಟ್ಟದ ಹಸು ಮೈಸೂರಿನ ಮಹಾರಾಜರು ಪರಂಪರೆಯ ಭಾವನೆಯಂತೆ ಬ್ರಾಹ್ಮಣರ ಮತ್ತು ಗೋವುಗಳ ರಕ್ಷಕರೆಂದು ಸಂಕೇತಿಸುತ್ತದೆ. ನಾಲ್ಕನೆಯದಾಗಿ ಈ ಸಮಾರಂಭದಲ್ಲಿ ಐರೋಪ್ಯ ಮತ್ತು ಪೌರ್ವಾತ್ಯ ಅತಿಥಿಗಳು ಎರಡು ಪಾರ್ಶ್ವಗಳಲ್ಲಿ ಆಸೀನರೂಢರಾಗಿದ್ದು ಅಂದಿನ ಸಮಾಜದ ಸಮನ್ವಯತೆಯನ್ನು ಸಂಕೇತವಾಗಿ ಪ್ರದರ್ಶಿಸಿತು. ಮೈಸೂರಿನ ಸಮಾಜ ಆಧುನಿಕ ಯುಗದಲ್ಲಿ ಯಾವ ಗುರಿಯತ್ತ ಸಾಗಬೇಕೆಂಬುದನ್ನು ಸೂಚಿಸುವ ಸಂಕೇತ ಅದಾಗಿತ್ತು. ಐದನೆಯದಾಗಿ ಇಂಗ್ಲಿಷ್ ಬ್ಯಾಂಡ್ ಮತ್ತು ದೇಶೀ ನಾದಸ್ವರಗಳು ಮೇಲಿನ ತೀರ್ಮಾನವನ್ನೇ

---

79. ***ಫೈಲ್‌ನಂ. ; ಆರ್/1(1/143),*** *ಸಂಖ್ಯೆ 32, 33, 34, 35, ದಿನಾಂಕ 6-2-1895 ತಂತಿ ಸಂದೇಶ ರವಾನೆ - ಬೆಂಗಳೂರು, ಐ.ಓ.ಎಲ್. ಲಂಡನ್, ಪು. 7*

ಪುಷ್ಟೀಕರಿಸುತ್ತವೆ. ಕೊನೆಯದಾಗಿ ವೈಸ್ರಾಯ್ ಪರವಾಗಿ ಬ್ರಿಟಿಷ್ ರೆಸಿಡೆಂಟರು ಆಗಮಿಸಿ ಪತ್ರವನ್ನು ಓದಿ ಅರ್ಪಿಸಿದ್ದು, ಮೈಸೂರು ಸಮಾಜದ ಮೇಲೆ ಬ್ರಿಟಿಷ್ ಸಾರ್ವಭೌಮತ್ವವನ್ನು ಹೊಂದಿದ್ದ ಭಾವನೆಯನ್ನು ಪ್ರತಿಧ್ವನಿಸುತ್ತಿತ್ತು.

ಪುರೋಹಿತರು ಮತ್ತು ವೈದಿಕ ಮಂಡಲಿಯವರು ಸಂಪ್ರದಾಯದಂತೆ ಪಟ್ಟಾಭಿಷೇಕದ ಶುಭ ಕಾರ್ಯವನ್ನು ನೆರವೇರಿಸಿದ್ದು ಹಿಂದೂ ಸಂಪ್ರದಾಯದ ಪ್ರಧಾನ ಲಕ್ಷಣಗಳಲ್ಲೊಂದಾಗಿತ್ತು. ಬ್ರಿಟಿಷ್ ರೆಸಿಡೆಂಟರು ಮತ್ತು ಮಹಾರಾಜರ ನಡುವೆ ನಡೆದ ಖಿಲ್ಲತ್ತುಗಳ ಬದಲಾವಣೆಗಳು ಹಿಂದೂ ಸಂಪ್ರದಾಯದ ವಾಡಿಕೆಯನ್ನು, ದೇಶೀ ವಿದೇಶಿ ಸಂಸ್ಕೃತಿಗಳ ಸಮನ್ವಯತೆಯನ್ನು ಸಾರುತ್ತವೆ. ಅಂತಿಮವಾಗಿ ದಿವಾನರು ರೆಸಿಡೆಂಟರಿಗೆ ಪುಷ್ಪಹಾರ ತಾಂಬೂಲದ ಮೂಲಕ ಸಮರ್ಪಿಸಿದ ಗೌರವವು ಸಂಪ್ರದಾಯದ ಪ್ರತೀಕವಾಗಿತ್ತು. ಈ ಕ್ರಿಯೆ ಅಂದಿನ ರಾಜ್ಯ ವ್ಯವಸ್ಥೆಯಲ್ಲಿ, ರೆಸಿಡೆಂಟ್, ಮಹಾರಾಜ ಮತ್ತು ದಿವಾನರ ಸ್ಥಾನಮಾನಗಳನ್ನು ಸೂಚಿಸುವುದರ ಜೊತೆಗೆ, ಯಾವುದೇ ಸಮಾಜ ಪರಿವರ್ತನೆಯಾಗಬೇಕಾದರೆ ಈ ಮೂವರ ಪರಸ್ಪರ ಸಹಕಾರ ಅಗತ್ಯವೆಂಬುದನ್ನು ಇದು ಸೂಚಿಸುತ್ತದೆ. ಮೇಲ್ನೋಟಕ್ಕೆ ಮಾಮೂಲಿನ ಸಂಪ್ರದಾಯದಂತೆ ಕಂಡರೂ, ಈ ಕ್ರಿಯೆಯ ಅಂತರ್ಗತವಾದ ಅರ್ಥ ಈ ಮೂವರ ನಡುವೆ ಬಾಂಧವ್ಯದ ಅನಿವಾರ್ಯತೆಯನ್ನು ತೋರ್ಪಡಿಸುವುದು. ಒಟ್ಟಿನಲ್ಲಿ ಮೇಲಿನ ಕೆಲವು ವಿವರಗಳು ಒಡೆಯರ ಕಾಲದ ಇತಿಹಾಸದಲ್ಲಿನ ಒಂದು ಪ್ರಮುಖ ಘಟ್ಟದಲ್ಲಿ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಸಮನ್ವಯತೆಯನ್ನು ಪ್ರಕಟಿಸುತ್ತವೆ. ಇಂತಹ ಸಮನ್ವಯ ದೃಷ್ಟಿಯು ಅವರ ಮುಂದಿನ ಶಿಕ್ಷಣದ ಕ್ರಮದಲ್ಲಿ ನಿರೂಪಿತವಾಗುತ್ತದೆ.

ಪಟ್ಟಾಭಿಷಿಕ್ತರಾದ ನಾಲ್ವಡಿಯವರು ಅಪ್ರಾಪ್ತರಾಗಿದ್ದರಿಂದ ಅವರು ಪ್ರಾಪ್ತ ವಯಸ್ಸಿಗೆ ಬರುವವರೆಗೂ (ಅಂದರೆ 1895ರಿಂದ 1902ರವರೆಗೆ) ಅವರ ತಾಯಿಯವರಾದ ವಾಣಿ ವಿಲಾಸ ಸನ್ನಿಧಾನದವರು ಮೈಸೂರಿನ ರೀಜೆಂಟರಾಗಿ ಸಂಸ್ಥಾನದ ಆಡಳಿತವನ್ನು, ನಾಲ್ವಡಿಯವರ ಮುಂದಿನ ಶಿಕ್ಷಣದ ಜವಾಬ್ದಾರಿಯನ್ನು ಹೊತ್ತರು[80]. ಆ ಸಂಬಂಧವಾಗಿ ಮಹಾರಾಣಿಯವರು ರಾಜಕುಮಾರರ ಶಿಕ್ಷಣ ಮತ್ತು ತರಭೇತಿ ಅತ್ಯುನ್ನತ ಘನತೆವೆತ್ತ ಇಂಗ್ಲಿಷ್ ಪೋಷಕರಿಂದಲೇ ಆಗಬೇಕು, ಗತಿಸಿದ ಮಹಾರಾಜರು ಹೇಗೆ ಮಾದರಿಯ ಪೋಷಣೆ ಮತ್ತು ರಕ್ಷಣೆಯಲ್ಲಿ ಬೆಳೆದು ಉನ್ನತ ವ್ಯಕ್ತಿಯಾದರೋ ಹಾಗೆಯೇ ನನ್ನ ಮಕ್ಕಳೂ ಆಗಬೇಕೆಂದೂ, ಸ್ವತಃ ನಾನೇ ಯುವತಿಯಾಗಿದ್ದಾಗ ಪಡೆದ ಇಂಗ್ಲಿಷ್ ಶಿಕ್ಷಣದಿಂದಾಗಿ ಅನೇಕ ಅನುಕೂಲತೆಗಳನ್ನು ಪಡೆಸಿದ್ದೇನೆಂದು ತಿಳಿಸುತ್ತಾ ಬ್ರಿಟಿಷ್ ಸರಕಾರಕ್ಕೆ 1895ರ

---

*80. ಶಾಮರಾವ್ ಎಂ., ಪೂರ್ವೋಕ್ತ, ಪು. 186*

ಜನವರಿ 5ರಂದು ಮನವಿ ಪತ್ರವೊಂದನ್ನು ರೆಸಿಡೆಂಟ್ ಮೂಲಕ ರವಾನಿಸಿದರು[81]. ನಂತರ ಅದೇ ಜನವರಿ 6ರಂದು ಮಹಾರಾಣಿಯವರು ಕರ್ನಲ್ ಮ್ಯಾಲೆಸನ್ ಅಥವಾ ಮಿ. ಪೋರ್ಟರ್‌ರಂತಹ (10ನೇ ಚಾಮರಾಜ ಒಡೆಯರ್ ಪೋಷಕರಾಗಿದ್ದವರು) ಸತ್ಪ್ರಜೆಗಳಿಗೆ ನಾಲ್ವಡಿಯವರ ಶಿಕ್ಷಣದ ಉಸ್ತುವಾರಿಕೆಯನ್ನು ವಹಿಸಿಕೊಡಬೇಕೆಂಬ ತಮ್ಮ ಸಲಹೆಯನ್ನು ಸೋದರ ಕಾಂತರಾಜ್ ಅರಸಿನವರ ಮೂಲಕ ರೆಸಿಡೆಂಟರ ಗಮನಕ್ಕೂ ತಂದರು[82].

ಮತ್ತೆ 1895ರ ಜನವರಿ 10ರಂದು ತಾವೇ ಖುದ್ದಾಗಿ ರೆಸಿಡೆಂಟರನ್ನು ಭೇಟಿ ಮಾಡಿ ಯುವರಾಜ ಕುಮಾರರಿಗೆ ಶಿಕ್ಷಣ ಮತ್ತು ತರಭೇತಿ ನೀಡಲು ಉನ್ನತ ಮಟ್ಟದ ಇಂಗ್ಲಿಷ್ ಅಧಿರಾರಿಯೊಬ್ಬರನ್ನು ಗಾರ್ಡಿಯನ್ (ಪೋಷಕ) ಆಗಿ ನೇಮಿಸಬೇಕೆಂದು ಕೇಳಿಕೊಂಡಾಗ ರೆಸಿಡೆಂಟರು ದಿವಾನರು ಹಾಗೂ ನಮ್ಮ (ರೆಸಿಡೆಂಟರ) ಸಲಹೆಯ ಮೇರೆಗೆ ಯುವರಾಜಕುಮಾರರಿಗೆ ಶಿಕ್ಷಣ ನೀಡಿದರಾಗುವುದಿಲ್ಲವೇ ಎಂಬುದಾಗಿ ತಿಳಿಸಿದರು. ಆಗ ತಕ್ಷಣ ಪ್ರತಿಕ್ರಿಯಿಸಿದ ಮಹಾರಾಣಿಯವರು ಇಂಗ್ಲಿಷ್ ಪೋಷಾಧಿಕಾರಿಯ ನೇಮಕವೇ ಹೆಚ್ಚು ಸೂಕ್ತವೆಂದರು[83]. ಈ ವಿಚಾರಗಳು ಮಹಾರಾಣಿಯವರಿಗೆ ತಮ್ಮ ಮಕ್ಕಳ ಮುಂದಿನ ಭವಿಷ್ಯದ ರೂಪಿಕೆಯಲ್ಲಿದ್ದ ಕಾಳಜಿಯನ್ನು ಹಾಗೂ ಆ ಕಾಲದ ಒತ್ತಡಗಳಿಗನುಸಾರವಾಗಿ ಅವರಲ್ಲಿದ್ದ ದೂರದೃಷ್ಟಿಯ ದೃಢನಿರ್ಧಾರವನ್ನು ವ್ಯಕ್ತ ಪಡಿಸುತ್ತವೆ. ಅಂತಿಮವಾಗಿ ಬ್ರಿಟಿಷ್ ಸರ್ಕಾರವು ಆ ತಾಯಿಯ ಆಸೆಯಂತೆ ಸ್ಟುಅರ್ಟ್ ಎಂ. ಫ್ರೇಜರ್, ಐ.ಸಿ.ಎಸ್. ಎಂಬ ಅಧಿಕಾರಿಯನ್ನು ರಾಜಕುಮಾರರಿಗೆ ಶಿಕ್ಷಣ ನೀಡುವ ಪೋಷಕರನ್ನಾಗಿ ನೇಮಿಸಿತು. ಎಸ್. ಎಂ. ಫ್ರೇಜರ್ ಆ ಕಾಲಕ್ಕೆ ರಾಜಕುಮಾರರಿಗೆ ಶಿಕ್ಷಣ ನೀಡುವ ಕಲೆಯಲ್ಲಿ ಪ್ರವೀಣರೆಂದು ಪ್ರಖ್ಯಾತರಾಗಿದ್ದವರು. ಆ ವೇಳೆಗಾಗಲೇ ಕೊಲ್ಲಾಪುರ ಮುಂತಾದ ಸಂಸ್ಥಾನಗಳ ರಾಜಕುಮಾರರಿಗೆ ಶಿಕ್ಷಣದ ಪೋಷಕರಾಗಿ ನೇಮಕಗೊಂಡಿದ್ದು, ಅಮೋಘ ಸೇವೆಯನ್ನು ಸಲ್ಲಿಸಿದ್ದರು[84].

ಎಸ್.ಎಂ. ಫ್ರೇಜರ್ 1896ರ ಜೂನ್‌ನಲ್ಲಿ 'ರಾಯಲ್ ಸ್ಕೂಲ್'ನ ಅಧಿಕಾರವನ್ನು ವಹಿಸಿಕೊಂಡು ಶಾಲೆಯಲ್ಲಿ ಶಿಸ್ತನ್ನು ಹೆಚ್ಚಿಸಲು ಕೆಲವು ಮಾರ್ಪಾಡುಗಳನ್ನು ತಂದರು. ಅದರಲ್ಲಿ ಮೊದಲನೆಯದೇ ಪ್ರತಿ ದಿನವೂ ರಾಜಕುಮಾರರು ಅರಮನೆಯಿಂದ ಶಾಲೆಗೆ ಬಂದು ಹೋಗುವ ಪದ್ಧತಿಯನ್ನು ನಿಲ್ಲಿಸಿ ಭೋಜನ ಮತ್ತು ವಸತಿ ವ್ಯವಸ್ಥೆಯನ್ನು ಲೋಕರಂಜನ್ ಮಹಲಿನಲ್ಲೇ ಏರ್ಪಡಿಸಿ 'ರೆಸಿಡೆನ್ಷಿಯಲ್ ಸ್ಕೂಲ್'ನ ಮಾದರಿಯ ಶಿಕ್ಷಣ ಕ್ರಮವನ್ನು

---

81. ***ಫೈಲ್ ನಂ.; ಆರ್1(1/143)***, *ಡೆಮೋ ಆಫೀಸ್ ಫೈಲ್ ದಿನಾಂಕ 5-1-1895, ಮೈಸೂರ್, ಲೆಟರ್ ಫ್ರಮ್ ಕರ್ನಲ್ ಪಿ.ಡಿ. ಹೆಂಡರ್‌ಸನ್ (ರೆಸಿಡೆಂಟ್ ಆಫ್ ಮೈಸೂರ್) ಟು ಡಬ್ಲ್ಯು. ಜೆ. ಕನ್ನಿಂಗ್ ಹ್ಯಾಮ್ (ಫಾರಿನ್ ಸೆಕ್ರೆಟರಿ), ಐ.ಓ.ಎಲ್. ಲಂಡನ್, ಪು. 3*

82. ***ಅದೇ.***, *ಅರೆ ಸರ್ಕಾರಿ ಪತ್ರ, ದಿನಾಂಕ 18957 ರ ಜನವರಿ 6, ಪು. 1*

83. ***ಫೈಲ್ ನಂ.; ಆರ್1(1/143)***, *ಡೆಮೋ ಆಫೀಸ್ ಫೈಲ್, ದಿನಾಂಕ 10-1-1895, ಮೈಸೂರ್, ಲೆಟರ್ ಫ್ರಮ್ ಕರ್ನಲ್ ಪಿ.ಡಿ. ಹೆಂಡರ್‌ಸನ್ (ರೆಸಿಡೆಂಟ್ ಆಫ್ ಮೈಸೂರ್) ಟು ಡಬ್ಲ್ಯು. ಜೆ. ಕನ್ನಿಂಗ್ ಹ್ಯಾಮ್ (ಫಾರಿನ್ ಸೆಕ್ರೆಟರಿ), ಪು. 3*

84. ***ಶಾಮರಾವ್ ಎಂ.***, *ಪೂರ್ವೋಕ್ತ, ಪು. 186*

ರೂಪಿಸಿದ್ದು[85]. ಫ್ರೇಜರ್‌ರವರ ಈ ಕ್ರಮವನ್ನು ಅನೇಕರು ವಿರೋಧಿಸಿ ತಾಯಿ ಮಗುವನ್ನು ಬೇರ್ಪಡಿಸಲೆಂದು ಹೂಡಿರುವ ಒಳಸಂಚೆಂದು ಆರೋಪಿಸಿದರು[86]. ಸ್ವತಃ ಮಹಾರಾಣಿಯವರೇ ಈ ವ್ಯವಸ್ಥೆಯಿಂದ ದಿಗ್ಭ್ರಾಂತರಾಗಿ ಈ ವ್ಯವಸ್ಥೆಯನ್ನು ಬದಲಿಸಬೇಕೆಂದು ಸರ್ಕಾರಕ್ಕೆ ಮನವಿ ಸಲ್ಲಿಸಿದರು. ಇದೇ ಸಂದರ್ಭದಲ್ಲಿ ತಾಯಿ ಮಗನ ನಡುವೆ ಬೆಳೆದಿದ್ದ ನಿಕಟ ಬಾಂಧವ್ಯಕ್ಕೆ ಉತ್ತಮ ಉದಾಹರಣೆಯಾಗಿ ಸಿ. ಆರ್. ರೆಡ್ಡಿಯವರು ಬರೆದಿರುವ ಲೇಕನದ ಒಂದು ಅಂಶವನ್ನು ಇಲ್ಲಿ ನಿರೂಪಿಸಲಾಗಿದೆ. "ಪುತ್ರಧರ್ಮವು ಅವರ ಸ್ವಭಾವತಃ ಗುಣವಾಗಿತ್ತು ಮತ್ತು ಬೆಳಗಿನ ಉಪಾಹಾರವನ್ನು ತಾಯಿಯ ಜೊತೆ ಇಲ್ಲದೆ ಸೇವಿಸುತ್ತಿದ್ದುದು ವಿರಳವಾಗಿತ್ತು"[87] ಎಂಬುದನ್ನು ಸಿ. ಆರ್. ರೆಡ್ಡಿಯವರು ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್‌ರವರಿಂದ ನಾಲ್ವಡಿಯವರ ವೈಯಕ್ತಿಕ ಜೀವನ ಮತ್ತು ದಿನಚರಿಗಳ ಬಗ್ಗೆ ಕೇಳಿ ತಿಳಿದು ಬರೆದವರಾಗಿದ್ದಾರೆ. ಈ ಅಂಶವು ತಾಯಿ-ಮಗನ ನಡುವಿನ ಗಾಢವಾದ ಪ್ರೀತಿ ವಾತ್ಸಲ್ಯದ ಸಂಬಂಧವನ್ನು ಸೂಚಿಸುತ್ತಿದ್ದು, ಫ್ರೇಜರ್‌ರವರು ಕುಟುಂಬದಿಂದ ಹೊರತಾದ ಶಿಕ್ಷಣ ಕ್ರಮವನ್ನು ರೂಪಿಸಿದಾಗ ತಾಯಿ-ಮಗನ ನಡುವೆ ಕಾಣಿಸಿಕೊಳ್ಳಬಹುದಾದ ದುಃಖ, ನೋವನ್ನು ಊಹಿಸಿಕೊಳ್ಳಬಹುದು. ಈ ಅವಧಿಯಲ್ಲಿ ಮಹಾರಾಣಿಯವರಿಗೆ ಧೈರ್ಯ ಮತ್ತು ತಿಳುವಳಿಕೆಯನ್ನು ನೀಡಿದವರೇ ಅಂಬಿಲ್ ನರಸಿಂಹ ಅಯ್ಯಂಗಾರ್ಯರವರು (10ನೇ ಚಾಮರಾಜ ಒಡೆಯರ ವಿದ್ಯಾಗುರುಗಳಾಗಿದ್ದವರು). ವೈಸ್ರಾಯಿ ಪದವಿಗೆ, ಗವರ್ನರ್ ಪದವಿಗೆ ಬರುವವರೆಲ್ಲರೂ ಹೀಗೆ ಶಿಕ್ಷಣ ಪಡೆದವರೇ. ಪಾಶ್ಚಾತ್ಯ ದೇಶಗಳಲ್ಲಿ ರಾಜರಾಗತಕ್ಕವರಿಗೂ ಇದೇ ರೀತಿಯ ಶಿಕ್ಷಣವಾಗುತ್ತದೆ. ತಮ್ಮ ಪತಿಯವರಿಗೂ ಇದೇ ರೀತಿಯ ಶಿಕ್ಷಣ ನೀಡಲಾಗಿತ್ತು. ಇಂತಹ ಶಿಕ್ಷಣದ ಅವಶ್ಯಕತೆ ರಾಜಕುಮಾರರಿಗೆ ಇದೆ ಎಂಬ ಸಮಾಧಾನದ ಮಾತುಗಳ ಮೂಲಕ ಮಹಾರಾಣಿಯವರನ್ನು ಒಪ್ಪಿಸಿದರು[88]. ಆದರೆ ಹಬ್ಬ-ಹರಿದಿನಗಳಲ್ಲಿ, ಅರಮನೆಯಲ್ಲಿ ನಡೆಯುವ ಎಲ್ಲಾ ಸಮಾರಂಭಗಳಲ್ಲಿ, ಅರ್ಧ ತಿಂಗಳಿಗೆ ನಡೆಯುವ ಪಕ್ಷ ಕಾರ್ಯಕ್ರಮಗಳಲ್ಲಿ ರಾಜಕುಮಾರರು ಉಪಸ್ಥಿತರಿರುವುದು ಅವಶ್ಯವೆಂದು ಭಾವಿಸಿ ಮಹಾರಾಣಿಯವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಅಪ್ಪಣೆಯನ್ನು ಪಡೆದರು. ಆದರೆ ಇದರಿಂದ ವೇಳಾಪಟ್ಟಿಯ ಪ್ರಕಾರ ರಾಜಕುಮಾರರಿಗೆ ತರಬೇತಿ ನೀಡಲು ಸಾಧ್ಯವಾಗುತ್ತಿಲ್ಲ, ಮಹಾರಾಣಿಯವರು ರಾಜಕುಮಾರರನ್ನು ಪದೇ ಪದೇ ಭೇಟಿಯಾಗುತ್ತಿರುವುದು, ಆಗಾಗ್ಗೆ ಸಭೆ ಸಮಾರಂಭಗಳೆಂದು ಅರಮನೆಗೆ ಕರೆದೊಯ್ಯುತ್ತಿರುವುದು ರಾಜಕುಮಾರರ ಶಿಕ್ಷಣದ ಅಭಿವೃದ್ಧಿಗೆ ಮಾರಕವಾಗುತ್ತಿದೆ ಎಂಬುದಾಗಿ ಅಸಮಾಧಾನದಿಂದ

---

85. *ಆಯಾ ಇಕೆಗಮಿ., ಡೆಕನ್ ಸ್ಟಡೀಸ್, ಸಂಪುಟ - 6(1), ಬಿಕಮಿಂಗ್ ಜಂಟಲ್‌ಮನ್, ದಿ ಪಾಲಿಟಿಕ್ಸ್ ಆಫ್ ಎಜುಕೇಷನ್ ಅಮಾಂಗ್ ದಿ ರೂಲಿಂಗ್ ಕ್ಲಾಸ್ಸ್ ಇನ್ ದಿ ಪ್ರಿನ್ಸ್ಲಿ ಸ್ಟೇಟ್ ಆಫ್ ಮೈಸೂರ್, ಹೈದರಾಬಾದ್, 2006, ಪು. 30*
86. *ಶಾಮರಾವ್ ಎಂ., ಪೂರ್ವೋಕ್ತ, ಪು. 186*
87. *ರೆಡ್ಡಿ ಸಿ.ಆರ್., ಇಪ್ರೆಷನ್ಸ್ ಆಫ್ ದಿ ಲೇಟ್ ಮಹಾರಾಜ ಕೃಷ್ಣರಾಜ ಒಡೆಯರ್ ಆಫ್ ಮೈಸೂರ್, ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 246*
88. *ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 85-86*

ಫ್ರೇಜರ್‌ರವರು ರೆಸಿಡೆಂಟ್ ಕ್ಯಾಂಪ್‌ಬೆಲ್‌ರವರಿಗೆ ಪತ್ರ ಬರೆದರು. ಆಗ ರಾಜಕುಮಾರರು ಕೇವಲ ಗಣೇಶನ ಹಬ್ಬ, ದಸರಾ ಮತ್ತು ಬೇಸಿಗೆ ರಜಾ ದಿನಗಳಲ್ಲಿ ಮಾತ್ರ ಅರಮನೆಗೆ ಹೋಗತಕ್ಕದ್ದೆಂದು ತೀರ್ಮಾನಿಸಿ ಆ ಪ್ರಕಾರ ವೇಳಾಪಟ್ಟಿಯನ್ನು ಸಿದ್ಧಗೊಳಿಸಲು ಆದೇಶಿಸಲಾಯಿತು[89]. (ಅನುಬಂಧ-1ರಲ್ಲಿ ನಾಲ್ವಡಿಯವರ ಶಿಕ್ಷಣಕ್ಕೆ ಸಂಬಂಧಿಸಿದಂತೆ ತಯಾರಿಸಿದ್ದ ವೇಳಾಪಟ್ಟಿ, ಬೋಧಿಸಲ್ಪಡುತ್ತಿದ್ದ ವಿಷಯಗಳು ಮತ್ತು ಬೋಧಕರ ಹೆಸರುಗಳ ಪಟ್ಟಿಯನ್ನು ನೀಡಲಾಗಿದೆ.)

ಫ್ರೇಜರ್‌ರವರ ಮೇಲ್ವಿಚಾರಣೆಯಲ್ಲಿ ಹಿಂದೆ ಬೋಧಿಸುತ್ತಿದ್ದ ವಿಷಯಗಳ ಜೊತೆಗೆ ಚರಿತ್ರೆ (ಭಾರತದ ಚರಿತ್ರೆ, ಇಂಗ್ಲಿಷ್ ಚರಿತ್ರೆ ಮತ್ತು ಪ್ರಾಚೀನ ಚರಿತ್ರೆ) ಮತ್ತು ರಾಜಕೀಯ, ಅರ್ಥಿಕತೆ, ಇಂಗ್ಲಿಷ್, ವಿಜ್ಞಾನ, ಗಣಿತಶಾಸ್ತ್ರ, ಕನ್ನಡ, ಉರ್ದು ಮತ್ತು ಚಿತ್ರಕಲೆ ವಿಷಯಗಳನ್ನು ಸೇರಿಸಲಾಯಿತು. ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದ ಚರಿತ್ರೆಯ ಪುಸ್ತಕಗಳಲ್ಲಿ ಆರ್.ಸಿ.ದತ್‌ರವರ 'ಪ್ರಾಚೀನ ಭಾರತ' ವನ್ನು ಹೊರತು ಪಡಿಸಿದರೆ ಉಳಿದೆಲ್ಲ ಚರಿತ್ರೆ ಪುಸ್ತಕಗಳು ಬ್ರಿಟಿಷ್ ಲೇಖಕರಿಂದಲೇ ರಚಿತಗೊಂಡ ಇಂಗ್ಲಿಷ್ ಕೃತಿಗಳಾಗಿದ್ದವು[90].

ಸಾಮಾನ್ಯ ಶಿಕ್ಷಣದ ವಿಷಯಗಳ ಜೊತೆಗೆ ಪ್ರತಿದಿನ ಮಹಾರಾಜರಿಗೆ ಎರಡು ಗಂಟೆಗಳ ಕಾಲ 'ವಿಶೇಷ ವಿಷಯಗಳ' ಅಧ್ಯಯನಕ್ಕೆ ಮೀಸಲಿಡಲಾಗಿತ್ತು. ಆ ವಿಷಯಗಳು 'ಆಧುನಿಕ ರಾಜತಾಂತ್ರಿಕ ಕಲೆ'ಯನ್ನು ಕುರಿತವಾಗಿದ್ದವು ಮತ್ತು ಅವುಗಳಡಿಯಲ್ಲಿ ರಾಜ್ಯದ ಆಡಳಿತ, ಶಾಸನಗಳು, ಕಂದಾಯ ವ್ಯವಸ್ಥೆ ಮುಂತಾದವುಗಳ ಬಗ್ಗೆ ಪ್ರಾಥಮಿಕ ಮಾಹಿತಿ ನೀಡುವುದಾಗಿತ್ತು. ಈ ಅಂಶಗಳ ಬಗ್ಗೆ ಮಹಾರಾಜರಿಗೆ ಹೇಗೆ ಮಾಹಿತಿ ನೀಡಲಾಗುತ್ತಿತ್ತೆಂದರೆ ಉದಾಹರಣೆಗೆ ಭೂಕಂದಾಯ ವಿಷಯದ ಬಗ್ಗೆ ತಿಳಿಸಲು ಮೈಸೂರು ವಿಭಾಗದ ಅಸಿಸ್ಟೆಂಟ್ ಕಮಿಷನರ್ ದಾಖಲೆಗಳ ಸಮೇತ ಬಂದು ವಿವರಿಸಬೇಕಾಗಿತ್ತು; ಭೂ ಮಾಪನ ವ್ಯವಸ್ಥೆಯ ಬಗ್ಗೆ ತಿಳಿಸಲು ಜಿಲ್ಲಾ ಸರ್ವೇಯರ್ ಎಂಬ ಅಧಿಕಾರಿಯೇ ಬಂದು ಸರಪಳಿಯಿಂದ ನಿರ್ಧಿಷ್ಟ ಭೂಮಿಯನ್ನು ಅಳೆದು ಪ್ರಾತ್ಯಕ್ಷಿಕವಾಗಿ ವಿವರಿಸುತ್ತಿದ್ದರು. ಅನಂತರ ಸರ್ವೇಯರ್ ಭೂಮಿಯಲ್ಲಿ ಸಣ್ಣ ಗುಣಿಗಳನ್ನು ಅಗೆದು ಭೂಮಿಯ ಮಣ್ಣಿನ ಆಳ ಮತ್ತು ಭೂಮಿಯ ಫಲವತ್ತತೆಗಳ ಆಧಾರದ ಮೇಲೆ ಭೂಮಿಯನ್ನು ಹೇಗೆ ವರ್ಗೀಕರಿಸಲಾಗುವುದೆಂದು ಪ್ರಾತ್ಯಕ್ಷಿಕವಾಗಿ ವಿವರಿಸುತ್ತಿದ್ದರು[91].

---

*89. ಫೈಲ್ ನಂ. ಆರ್/2(8/64), ರಿಪೋರ್ಟ್ಸ್ ಆನ್ ದಿ ಎಜುಕೇಷನ್ ಅಂಡ್ ಟ್ರೆನ್ನಿಂಗ್ ಆಫ್ ಹೆಚ್.ಹೆಚ್.ದಿ. ಮಹಾರಾಜ ಆಫ್ ಮೈಸೂರ್, ಬ್ರಿಟಿಷ್ ಲೈಬ್ರರಿ, ಲಂಡನ್, ಪು. 1-4*

*90. ಅದೇ.,*

*ನೋಡಿ : 1900-1901ರಲ್ಲಿ ಮಹಾರಾಜರಿಗೆ ಬೋಧಿಸುತ್ತಿದ್ದ ಪುಸ್ತಕಗಳೆಂದರೆ; ಜನರಲ್ ಸ್ಕೆಚ್ ಆಫ್ ಯೂರೋಪಿನ್ ಹಿಸ್ಟರಿ ಬೈ ಈ.ಎ. ಫ್ರೀಮನ್, ಹಿಸ್ಟರಿ ಆಫ್ ಇಂಗ್ಲೆಂಡ್ ಬೈ ಆರ್ನಾಲ್ಡ್ ಫಾಸ್ಟರ್, ರೂಲರ್ಸ್ ಆಫ್ ಇಂಡಿಯಾ ಸೀರಿಸ್ (ಕ್ಲೈವ್, ವಾರನ್ ಹೇಸ್ಟಿಂಗ್ಸ್, ಹೈದರಾಲಿ ಅಂಡ್ ಟಿಪ್ಪುಸುಲ್ತಾನ್ ಅಂಡ್ ಮಾರ್ಕ್ವಿಸ್ ಆಫ್ ವೆಲ್ಲಸ್ಲಿ), ಎನ್ಷಿಯಂಟ್ ಇಂಡಿಯಾ ಬೈ ಆರ್.ಸಿ. ದತ್ (ಇಪೋಕ್ಸ್ ಆಫ್ ಇಂಡಿಯನ್ ಹಿಸ್ಟರಿ ಸೀರಿಸ್)*

*91. ಅಯಾ ಇಕೆಗಮಿ., ಪೂರ್ವೋಕ್ತ, ಪು. 32*

ದೈಹಿಕ ಸಾಮರ್ಥ್ಯದ ವೃದ್ಧಿಗಾಗಿ ರೌಂಡ್‌ರೇಸ್, ಕ್ರಿಕೆಟ್, ಫುಟ್‌ಬಾಲ್, ಟೆನ್ನಿಸ್, ರ್‍ಯಾಕೆಟ್ಸ್, ಪೋಲೋ, ಬೈಸಿಕಲ್ ಸವಾರಿ ಮುಂತಾದ ಕ್ರೀಡೆಗಳನ್ನೆಲ್ಲಾ ಶಿಕ್ಷಣದಲ್ಲಿ ಅಳವಡಿಸಲಾಗಿತ್ತು. ರೀಜೆಂಟರಿಗೆ ಖಾಸಗಿ (ಪ್ರೈವೇಟ್) ಕಾರ್ಯದರ್ಶಿಯಾಗಿದ್ದ ಕರ್ನಲ್ ಕ್ಯಾಂಬೆಲ್ ಎಂಬುವವರು ಕುದುರೆಯ ಬಂಡಿಯನ್ನು ಚತುರತೆಯಿಂದ ನಡೆಸುವ ಕಲೆಯನ್ನು ನಾಲ್ವಡಿಯವರಿಗೆ ಬೋಧಿಸಿ ಅದರಲ್ಲಿ ಅವರಿಗೆ ವಿಶೇಷ ತಜ್ಞತೆ ಬರುವಂತೆ ಮಾಡಿದರು. ಇಲವಾಲದ ಬಳಿಯ ಕಾಡುಗಳಲ್ಲಿ ನಾಲ್ವಡಿಯವರು ಗೋಪಾಲರಾಜ ಅರಸ್‌ರವರು ಮತ್ತು ಫ್ರೇಜರ್‌ರವರು ಚಿರತೆ ಬೇಟೆಗಾಗಿ ಹೋಗುತ್ತಿದ್ದರು ಮತ್ತು ಊಟಿ, ಮೈಸೂರು ಮತ್ತು ಬೆಂಗಳೂರು ಅರಮನೆಗಳಲ್ಲಿ ಬೇಟೆಗಾಗಿಯೇ ವಿಶೇಷವಾಗಿ ಈಜಿಪ್ಟಿನಿಂದ ತರಿಸಿದ್ದ ಬೇಟೆ ನಾಯಿಗಳನ್ನು ಅಲ್ಲಿನ ಅರಮನೆಗಳಲ್ಲಿ ಇರಿಸಲಾಗಿತ್ತು[92]. ಹೀಗೆ ಕ್ರೀಡೆ ಮತ್ತು ಬೇಟೆಯಾಡುವುದನ್ನು ಕಲಿಸುವುದು ಸಹ ಅಂದಿನ ಶಿಕ್ಷಣದ ಭಾಗವಾಗಿದ್ದು, ಚಿಕ್ಕವಯಸ್ಸಿನಲ್ಲೇ ನಾಲ್ವಡಿಯವರು ಧೈರ್ಯಸ್ಥೈರ್ಯಗಳನ್ನು ಮತ್ತು ಸಾಹಸ ಪ್ರವೃತ್ತಿಗಳನ್ನು ಬೆಳೆಸಿಕೊಳ್ಳಲು ಸಹಾಯಕವಾಗುವ ಉದ್ದೇಶಗಳನ್ನು ಹೊಂದಿತ್ತು. ವರ್ಷದ ಕೆಲವು ತಿಂಗಳುಗಳ ಕಾಲ ರಾಯಲ್ ಸ್ಕೂಲ್ ಪಾಠಶಾಲೆಯು ಬೆಂಗಳೂರು ಅರಮನೆಯಲ್ಲಿ ನಡೆಯುತ್ತಿದ್ದಿತು. ಇಲ್ಲೂ ಸಹ ಅನೇಕ ಹೊಸ ಆಟಗಳನ್ನು ಕಲಿಸಿ ಕೊಡಲಾಗುತ್ತಿತ್ತು. ಉದಾಹರಣೆಗೆ ಪೇಪರ್ ಚೆಸ್, ಜೋಕರ್ ಎಂಬ ಹೆಸರಿನ ಇಸ್ಪೀಟ್ ಆಟ, ಪ್ರಾಣಿಗಳ ಕೂಗಿನ ಅನುಕರಣೆ, ಆಕ್ಟಿಂಗ್ ಗೇಮ್ ಎಂಬ ಅಭಿನಯ ಕೌಶಲದ ಆಟ ಇವೇ ಮೊದಲಾದವು. ಹಾಗೆಯೇ ನಾಲ್ವಡಿಯವರು ಪ್ರತಿ ದಿನವೂ ತೀರಾಗಂಟು ಗಂಟಾದ ಮರದ ತುಂಡುಗಳನ್ನು ಕೊಡಲಿಯಿಂದ ಸೀಳುತ್ತಿದ್ದರು. ಸೂಕ್ತವಾದ ವ್ಯಾಯಾಮ ದೊರೆಯಲಿ ಜೊತೆಗೆ ಕಷ್ಟ ಸಹಿಷ್ಣತೆ ಮತ್ತು ತಾಳ್ಮೆ ಬೆಳಿಸಿಕೊಳ್ಳಲಿ ಎಂಬುದು ಇದರ ಉದ್ದೇಶವಾಗಿತ್ತು. ಗ್ಲ್ಯಾಡ್‌ಸ್ಟನ್ (ಬ್ರಿಟಿಷ್ ಸಾಮ್ರಾಜ್ಯದ ಪ್ರಧಾನಿಯಾಗಿದ್ದವರು) ಎಂಬುವವರು ಇಂತಹ ಕೆಲಸವನ್ನು ಮಾಡುತ್ತಿದ್ದರಂತೆ. ಅರಮನೆಯ ಆವರಣದಲ್ಲಿ ರಥಗಳನ್ನು ನಾಲ್ವಡಿಯವರೇ ನಡೆಸುತ್ತಿದ್ದರು ಮತ್ತು ರಥದ ಎತ್ತುಗಳ ಮೈ ತೊಳೆದು ತಾವೇ ಹುಲ್ಲನ್ನು ಹಾರಿ ತಿರುವಿದ್ದ ಅವರೇ ಕಾಳು ಮತ್ತು ತೆಂಗಿನ ತುರಿ ಉಂಡೆಗಳನ್ನು ಸಹ ತಿನ್ನಿಸುತ್ತಿದ್ದರು. ಇದನ್ನು ಗಮನಿಸಿದರೆ 'ಆಳಾಗಬಲ್ಲವನು ಅರಸನಾಗಬಲ್ಲ' ಎಂಬ ಕನ್ನಡದ ಗಾದೆಯು ನೆನಪಿಗೆ ಬರುತ್ತದೆ. ಬೇಸಿಗೆ ಕಾಲದಲ್ಲಿ ಊಟಿಯ ಅರಮನೆಯಲ್ಲಿ ಪಾಠಶಾಲೆ ನಡೆಯುತ್ತಿತ್ತು. ಅಂದಿನ ಮೈಸೂರು ಸಮಾಜದ ಶ್ರೇಷ್ಠ ವ್ಯಕ್ತಿಗಳೆಂದು ಪ್ರಖ್ಯಾತರಾದ ಅನೇಕ ಮಹನೀಯರು ನಾಲ್ವಡಿಯವರ ಶಿಕ್ಷಣ ಕಾರ್ಯದಲ್ಲಿ ಸಹಪಾಠಿಗಳಾಗಿ ಅವರ ಮೇಲೆ ಪ್ರಭಾವ ಬೀರಿದರು ಮತ್ತು ಉತ್ತಮ ನಡವಳಿಕೆ ಸಹ ನಾಲ್ವಡಿಯವರ ಮೇಲೆ ಪ್ರಭಾವ ಬೀರಿತ್ತು. ಒಳ್ಳೆಯ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳುವುದಕ್ಕೆ




---

92. *ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 184*

ಇಂತಹ ಶಿಕ್ಷಣ ಸಹಕಾರಿಯಾಯಿತು. ಎಲ್ಲರನ್ನೂ, ತನ್ನ ಸಹಪಾಠಿಗಳನ್ನು ಸರಿಸಮಾನರಂತೆ ಭಾವಿಸಿ ಆದರದಿಂದ ನೋಡಿಕೊಳ್ಳುತ್ತಿದ್ದರು. ಕರುಣೆ, ವಿನೋದ ಪ್ರಿಯತೆ, ನಮ್ರತೆ, ಹಿರಿಯರ ಬಗ್ಗೆ ಗೌರವ ಮೊದಲಾದ ಮೌಲ್ಯಗಳನ್ನು ಅವರು ಶಿಕ್ಷಣದ ಮೂಲಕ ಅಳವಡಿಸಿಕೊಂಡರು. ಎಲ್ಲಕ್ಕಿಂತ ಮಿಗಿಲಾಗಿ ಆ ಕಾಲದ ರಾಜಕುಮಾರರ ಶಿಕ್ಷಣ ಕಲೆಯಲ್ಲಿ ಪ್ರಖ್ಯಾತರಾಗಿದ್ದ ಫ್ರೇಜರ್‌ರ ಪ್ರಶಂಸೆಯನ್ನು ಸಹ ನಾಲ್ವಡಿಯವರು ಗಳಿಸಿಕೊಂಡಿದ್ದರು.

ಫ್ರೇಜರ್‌ರವರ ಕಾಲದಲ್ಲಿ ರಾಯಲ್ ಸ್ಕೂಲ್‌ನ ಶಿಕ್ಷಣದ ದಿನಚರಿ ಹೀಗೆ ಆರಂಭವಾಗುತ್ತಿತ್ತು. ಪ್ರಾತಃ ಕಾಲ ಐದು ಘಂಟೆಗೆ 'ಬ್ಯೂಗಲ್' ಎಂಬ ತುತ್ತೂರಿಯನ್ನೂದಿ ವಿದ್ಯಾರ್ಥಿಗಳನ್ನು ಎಚ್ಚರಗೊಳಿಸಲಾಗುತ್ತಿತ್ತು. ನಂತರ ಪ್ರಾತರ್ವಿಧಿಗಳನ್ನು ಪೂರೈಸಿ (ಸ್ನಾನ, ಸಂಧ್ಯಾವಂದನೆ, ದೇವತಾರ್ಚನೆ) ಸಂಗೀತವನ್ನು ಅಭ್ಯಾಸ ಮಾಡಿಸಲಾಗುತ್ತಿತ್ತು. ಭಾರತೀಯ ಸಂಗೀತ ಮತ್ತು ಕೊಳಲು, ಮೃದಂಗ, ಪಿಟೀಲು, ವೀಣೆ (ಶೇಷಣ್ಣ) ಹಾಗೂ ಪಾಶ್ಚಾತ್ಯ ಸಂಗೀತವನ್ನು (ಬ್ಯಾಂಡ್ ಮಾಸ್ಟರ್ ಡೆಫ್ರೀಸ್‌ರವರಿಂದ) ಹೇಳಿಸಲಾಗುತ್ತಿತ್ತು. ಅನಂತರ ಕುದುರೆ ಸವಾರಿ (ಎಂಟುವರೆವರೆಗೆ) ಪುನಃ ಸ್ನಾನ, ಉಪಾಹಾರ ಮುಗಿಸಿ ವಿಶ್ರಾಂತಿ. ನಂತರ ಹನ್ನೊಂದು ಗಂಟೆಗೆ ಪಾಠಶಾಲೆ ಆರಂಭಗೊಳ್ಳುತ್ತಿತ್ತು. ತರಗತಿಯಲ್ಲಿ ಪಾಠಗಳು ಪ್ರಾರಂಭಗೊಳ್ಳುವುದಕ್ಕೆ ಮುಂಚೆ ಕವಿತಿಲಕ ಸೋಸಲೆ ಅಯ್ಯಶಾಸ್ತ್ರಿಗಳು ಭಗವತ್ಪ್ರಾರ್ಥನೆಯ ಶ್ಲೋಕಗಳನ್ನು ಹೇಳಿಸುತ್ತಿದ್ದರು. (ಶಿವತಾಂಡವ ಸ್ತೋತ್ರ, ಮುಕುಂದ ಮಾಲಾ ಸ್ತೋತ್ರ ಮತ್ತು ಶ್ಯಾಮಲಾ ದಂಡಕ). ಬೆಳಿಗ್ಗೆ ಹನ್ನೊಂದು ಗಂಟೆಯಿಂದ ಸಾಯಂಕಾಲ ಐದು ಗಂಟೆವರೆಗೆ ಪಾಠ ಪ್ರವಚನಗಳು ನಡೆಯುತ್ತಿದ್ದವು. ಎರಡರಿಂದ ಮೂರು ಘಂಟೆವರೆಗೆ ವಿರಾಮ. ಆಗ ಅಲ್ಪ ಆಹಾರ ಸೇವನೆ, ಐದು ಗಂಟೆಯ ನಂತರ ಆಟಪಾಟಗಳು ಆರಂಭಗೊಳ್ಳುತ್ತಿದ್ದವು. ಹಾರಿಸಾಂಟಲ್ ಬಾರ್, ಪ್ಯಾರಲೆಲ್ ಬಾರ್ಸ್ (ಜಿಮ್ನಾಸ್ಟಿಕ್ಸ್‌ನಲ್ಲಿ), ಕವಾಯತ್ತಿನ ಅಂಗಸಾಧನೆ (ಡ್ರಿಲ್)ಗಳು ವಾರದಲ್ಲಿ ಎರಡು ದಿನ ನಡೆಯುತ್ತಿದ್ದವು. ಕ್ರಿಕೆಟ್, ಟೆನ್ನಿಸ್ ಉಳಿದ ದಿನಗಳಲ್ಲಿ. ಹೀಗೆ ಆರೂವರೆ ಘಂಟೆ ತನಕ ಶಾಲೆ ನಡೆದು ಬಳಿಕ ಸ್ವಲ್ಪ ಹೊತ್ತು ವಿಶ್ರಾಂತಿ ಹೊಂದಿ ಅನಂತರ ಎಂಟೂವರೆ ಗಂಟೆವರೆಗೆ ವ್ಯಾಸಂಗದಲ್ಲಿ ತೊಡಗಿಕೊಳ್ಳಬೇಕಿತ್ತು. ಮತ್ತೆ ಸ್ನಾನ ಸಂಧ್ಯಾವಂದನೆ ನೆರವೇರಿಸಿ ಭೋಜನ ಮಾಡಿ, ಸಹಾಧ್ಯಾಯಿಗಳೊಡನೆ ಸ್ವಲ್ಪಕಾಲ ವಿನೋದಗೋಷ್ಠಿಯಲ್ಲಿದ್ದು, ಆ ಬಳಿಕ ನಿದ್ರಿಸುತ್ತಿದ್ದರು[93].

ನಾಲ್ವಡಿಯವರಿಗೆ ಕೊಂಚ ವಯಸ್ಸು ಹೆಚ್ಚಿ ದೇಹಪುಷ್ಟಿಯು ಅಧಿಕವಾದ ಮೇಲೆ ಸೈನಿಕ ಶಿಕ್ಷಣ, ಯುದ್ಧ ಕಲೆಯ ಬೋಧನೆ ಹಾಗೂ ಪೋಲೋ ಎಂಬ ಚೆಂಡಾಟದಲ್ಲಿ ಶಿಕ್ಷಣ ನೀಡಲಾಯಿತು. ಈ ಬಗೆಯ ಸೈನಿಕೋದ್ಯೋಗ ಶಿಕ್ಷಣವು ನಡೆಯುವ ಕಾಲದಲ್ಲಿ ವಾರಕ್ಕೆರಡು ದಿನಗಳು ಸೈನ್ಯದ ಕವಾಯತು (ಮಿಲಿಟರಿ ಡ್ರಿಲ್) ಎಂಬ ಶ್ರಮಸಾಧ್ಯವಾದ

---

*93. **ವೆಂಕಟರಾಮಯ್ಯ ಸಿ.ಕೆ.**, ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 86-92*

ಅಂಗಸಾಧನೆಯು ನಡೆಯುತ್ತಿತ್ತು. ಅದಕ್ಕೆ ತಪ್ಪಿಸಿಕೊಂಡರೆ ಬೆಂಚಿನ ಮೇಲೆ ನಿಲ್ಲಿಸುವ, ಮುಂತಾದ ಶಿಕ್ಷೆಗಳನ್ನು ನೀಡಲಾಗುತ್ತಿತ್ತು. ಯುದ್ಧೋದ್ಯಮದಲ್ಲಿ ಪರಿಶ್ರಮ ಪಡೆದಿದ್ದ ನೂರಾರು ಮಂದಿ ಯೋಧರನ್ನು ಕರೆಯಿಸಿ ಅವರಿಂದ ಸೈನ್ಯದ ಕಾರ್ಯ ಕಲಾಪಗಳ ಬಗ್ಗೆ ಬೋಧಿಸಲಾಗುತ್ತಿತ್ತು[94].

ನಾಲ್ವಡಿಯವರಿಗೆ ಉತ್ತಮ 'ನೈತಿಕ ಶಿಕ್ಷಣ'ವನ್ನು ನೀಡುವುದು ತಮ್ಮ ಶಿಕ್ಷಣ ವ್ಯವಸ್ಥೆಯ ಬಹುಮುಖ್ಯ ಅಂಶವೆಂದು ಫ್ರೇಜರ್‌ರವರು ಭಾವಿಸಿದ್ದರು. ಉತ್ತಮ ರಾಜನನ್ನು ರೂಪಿಸಲು ನೈತಿಕ ಶಿಕ್ಷಣ ಅವಶ್ಯಕವೆಂಬುದು ಫ್ರೇಜರ್ ನಂಬಿಕೆಯಾಗಿತ್ತು. ಆದರೆ ಫ್ರೇಜರ್‌ರವರ ಪಾಶ್ಚಿಮಾತ್ಯ ಅಥವಾ ವಿಕ್ಟೋರಿಯನ್ ವೈಚಾರಿಕತೆ ಹಿನ್ನೆಲೆಯ ನೈತಿಕತೆಗೂ ಹಾಗೂ ಸ್ಥಳೀಯ ಸಾಂಪ್ರದಾಯಿಕ ಮತ್ತು ಸಾಮಾಜಿಕ ಹಾಗೂ ಸಾಂಸ್ಕೃತಿಕ ಆಚರಣೆಗಳ ನಡುವೆ ಸಂಘರ್ಷವೇರ್ಪಡುತ್ತಿತ್ತು. ಉದಾಹರಣೆಗೆ 1898ರ ಜೂನ್ 6ರಂದು ಫ್ರೇಜರ್‌ರವರು ನಾಲ್ವಡಿಯವರ ಹಿರಿಯ ಸೋದರಿಯವರ ಪತಿಯಾದ ಸರ್ದಾರ್ ಕಾಂತರಾಜ ಅರಸ್‌ರವರಿಗೆ ಬರೆದಿರುವ ಪತ್ರದಲ್ಲಿ "ಮಹಾರಾಜರು ಅರಮನೆಯಲ್ಲಿ ನಡೆಯುವ ದೇಶೀಯ ನಾಟಕಗಳನ್ನು ವೀಕ್ಷಿಸುವುದರಿಂದ ಅವರ ವಿದ್ಯಾಭ್ಯಾಸಕ್ಕೆ ತೊಡಕುಂಟಾಗುತ್ತದೆ, ಯುವಕರಿಗೆಂದು ರಚಿಸಲ್ಪಟ್ಟಿರುವ ನಾಟಕಗಳನ್ನು ಹದಿನಾಲ್ಕು ವರ್ಷದ ಮಹಾರಾಜರು ವೀಕ್ಷಿಸುವುದರಿಂದ ಅವರ ಮನಸ್ಸಿನ ಮೇಲೆ ದುಷ್ಪರಿಣಾಮವುಂಟಾಗುವುದು, ಆ ನಾಟಕಗಳಲ್ಲಿನ ನೈತಿಕತೆಯು ಆ ಚಿಕ್ಕ ವಯಸ್ಸಿಗೆ ಒಳ್ಳೆಯದಲ್ಲ ಹಾಗೂ ನಾಟಕವನ್ನು ವೀಕ್ಷಿಸಲು ಬೆಳಗಿನ ಜಾವ ಎರಡು ಗಂಟೆಯವರೆಗೂ ಎಚ್ಚರದಿಂದಿರುವುದು ಮಹಾರಾಜರಿಗೆ ಆರೋಗ್ಯಕರವಲ್ಲ, ಇಂಗ್ಲೆಂಡಿನ ಶಾಲಾ ದಿನಗಳಲ್ಲಿ ಯಾವ ಬಾಲಕನಿಗೂ ನಾಟಕಗಳನ್ನು ವೀಕ್ಷಿಸಲು ಅವಕಾಶ ನೀಡುವುದಿಲ್ಲ"ವೆಂದು ಬರೆಯುತ್ತಾ ಮೇಲ್ಕಂಡ ಅಂಶಗಳನ್ನು ಕುರಿತು ಚರ್ಚಿಸಲು ತಮ್ಮ ಭೇಟಿಗೆ ಬೇಗ ಅವಕಾಶ ನೀಡಬೇಕೆಂದು ಕೇಳಿಕೊಂಡಿದ್ದಾರೆ[95].

ಮೇಲೆ ವಿವರಿಸಿರುವ ಮಾಹಿತಿಯು ಪಾಶ್ಚಿಮಾತ್ಯ ಗುರು ತನ್ನ ವಿದ್ಯಾರ್ಥಿಯ ಹಿತದೃಷ್ಟಿಯಿಂದ ಮಾಡಿರುವ ಆಲೋಚನೆಯನ್ನು ಸ್ಪಷ್ಟಪಡಿಸುತ್ತದೆ. ಆದರೆ ದೇಶೀಯ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಮಹಾರಾಜರನ್ನು ಕಲಾಪೋಷಕ, ಆರಾದಕರೆಂದೂ, ಅದು ರಾಜತ್ವದ ಪ್ರಧಾನ ಲಕ್ಷಣವೆಂದು ಭಾವಿಸಲಾಗಿತ್ತು. ಕಲೆ ಮಹಾರಾಜರ ಪ್ರಶಂಸೆ ಮತ್ತು ಪೋಷಣೆಯನ್ನೇ ಆಧರಿಸಿತ್ತು. ಕಲಾಕಾರರಿಗೆ ತಮ್ಮ ಕಲೆಯನ್ನು ರಾಜರ ಮುಂದೆ ಪ್ರದರ್ಶಿಸುವ ಮೂಲಕ ಅವರ ಪ್ರಶಂಸೆ ಗಳಿಸುವುದು ತಮ್ಮ ಜೀವನದ ಉದ್ದೇಶವೆಂದು ಭಾವಿಸಿದ್ದರು. ಆ ಹಿನ್ನೆಲೆಯಲ್ಲಿ ನಾಟಕ ಮುಂತಾದ ಕಲಾ ಪ್ರದರ್ಶನಗಳು ಅರಮನೆಯಲ್ಲಿ ನಡೆಯುತ್ತಿದ್ದಾಗ ಮಹಾರಾಜರ ಉಪಸ್ಥಿತಿ ಸಾಂಪ್ರದಾಯಿಕ

---

*94. ಅದೇ., ಪು. 89*

*95. ಬಸವರಾಜ ಅರಸು ಕೆ. (ಸಂ)., ಸ್ಪೀಚಸ್ ಆಫ್ ಸರ್ದಾರ್ ಸರ್ ಎಂ. ಕಾಂತರಾಜ ಅರಸ್ (ದಿವಾನ್ ಆಫ್ ಮೈಸೂರು 1919-1922), ಸಂಪುಟ - I, ಮೈಸೂರ್, 1935, ಪು. 335-336*

ಲಕ್ಷಣವೇ ಆಗಿತ್ತು. ಮೈಸೂರಿನ ಸಾಂಪ್ರದಾಯಿಕ ಸಮಾಜದಲ್ಲಿ ಮಹಾರಾಜರು ಇಂತಹ ಸಂದರ್ಭದಲ್ಲಿ ಭಾಗವಹಿಸುವುದು ಸಾಮಾನ್ಯವಾದ ವಿಷಯವಾಗಿತ್ತು. ಮಹಾರಾಜ ಬಾಲಕನೋ ಅಥವಾ ಅಲ್ಲವೋ ಎಂಬುದಕ್ಕಿಂತ ಆ ಪದವಿಯ ಉಪಸ್ಥಿತಿಯೇ ಹೆಚ್ಚಿನ ಮಹತ್ವದಾಗಿತ್ತು. ಒಟ್ಟಾರೆ ಸಾಂಪ್ರದಾಯಿಕ ಮತ್ತು ಸಾಂಸ್ಕೃತಿಕ ಆಚರಣೆಗಳಲ್ಲಿ ಮಹಾರಾಜರು ಉಪಸ್ಥಿತರಿರಬೇಕೆಂಬುದನ್ನು ಅಂದಿನ ಸಮಾಜ ಬಯಸುತ್ತಿತ್ತು. ಹಾಗೆಯೇ ರಾಜಕುಟುಂಬವು ಆಧುನಿಕ ಅಥವಾ ಪಾಶ್ಚಿಮಾತ್ಯ ಶಿಕ್ಷಣವನ್ನು ಮಹಾರಾಜರಿಗೆ (ನಾಲ್ವಡಿಯವರಿಗೆ) ನೀಡುವುದನ್ನೂ ಬೆಂಬಲಿಸುತ್ತಿತ್ತು. ಈ ನಿಟ್ಟಿನಲ್ಲಿ ಇಂಗ್ಲಿಷ್ ಟ್ಯೂಟರ್ ಫ್ರೇಜರ್ ಹಾಗೂ ರಾಜಕುಟುಂಬದ ನಡುವೆ ಮಹಾರಾಜರಿಗೆ ನೀಡುವ ಶಿಕ್ಷಣವು ಹಲವು ಕ್ರಮಗಳ ಬಗ್ಗೆ ಭಿನ್ನಾಭಿಪ್ರಾಯವೂ ಇದ್ದಿತು[96]. ಫ್ರೇಜರ್‌ರವರ ದೂರಿನ ಪತ್ರದ ನಂತರವೂ ನಾಲ್ವಡಿಯವರು ಸಾಂಸ್ಕೃತಿಕ ಸಮಾರಂಭಗಳಿಗೆಂದು ಅರಮನೆಗೆ ಬರುವುದು ನಿಲ್ಲಲಿಲ್ಲ. ರಾಜಕುಟುಂಬವು ಇಂತಹ ಆಚರಣೆಗಳಲ್ಲಿ ನಾಲ್ವಡಿಯವರು ಭಾಗವಹಿಸುವ ಮೂಲಕ ತಮ್ಮ ಸಂಪ್ರದಾಯಗಳನ್ನು ಧೃಡಪಡಿಸಿಕೊಳ್ಳಬೇಕೆಂಬ ಅಭಿಲಾಷೆಯನ್ನು ಹೊಂದಿತ್ತು. ಇಂತಹ ಸಂಧಿಗ್ಧತೆಯಲ್ಲೇ ನಾಲ್ವಡಿಯವರ ಶಿಕ್ಷಣವು ಸಾಗಿತ್ತು.

ನಾಲ್ವಡಿಯವರ ಶಿಕ್ಷಣದ ಪ್ರಗತಿಯ ಬಗ್ಗೆ ಫ್ರೇಜರ್‌ರವರು ಬ್ರಿಟಿಷ್ ರೆಸಿಡೆಂಟರಿಗೆ ಕಾಲಕಾಲಕ್ಕೆ ಅಂಕಪಟ್ಟಿಗಳನ್ನೊಳಗೊಂಡ ವರದಿಗಳನ್ನು ಒಪ್ಪಿಸುತ್ತಿದ್ದರು. ಅಂತಹ ಏಳು ವರದಿಗಳು ದಾಖಲಾಗಿವೆ. ಅವುಗಳಲ್ಲಿನ ಕೆಲವು ಮುಖ್ಯಾಂಶಗಳನ್ನು ಹೀಗೆ ಗುರುತಿಸಬಹುದಾಗಿದೆ.

ಮಹಾರಾಜರವರ ಪ್ರೌಢಿಮೆ ಪರಿಶ್ರಮಗಳ ವಿಷಯವಾಗಿ ಅನೇಕ ಸ್ವಾರಸ್ಯಕರವಾದ ಸಂಗತಿಗಳನ್ನು ಫ್ರೇಜರ್‌ರವರು ತಮ್ಮ ಕಾಲಕಾಲಿಕ ವರದಿಗಳಲ್ಲಿ ಅಂಕಪಟ್ಟಿಗಳನ್ನು ನೀಡುತ್ತಾ ನಾಲ್ವಡಿಯವರ ತರಗತಿಯ ಎಲ್ಲಾ ವಿದ್ಯಾರ್ಥಿಗಳ ಶೈಕ್ಷಣಿಕ ಬೆಳವಣಿಗೆಯನ್ನು ಗುರುತಿಸುತ್ತಾ ಬಂದಿದ್ದರು. ಆ ಅಂಕಪಟ್ಟಿಗಳಲ್ಲಿ ಫ್ರೇಜರ್‌ರವರ ಟೀಕಾ ವರದಿ (Remarks) ಅತ್ಯಂತ ಪ್ರಮುಖವಾದದ್ದು. ಅವರ ನಿಷ್ಠುರತೆ ಹಾಗೂ ಬಿಗಿ ನಿಲುವುಗಳು ಆ ವರದಿಗಳಲ್ಲಿ ವ್ಯಕ್ತಗೊಂಡಿವೆ. ಉದಾಹರಣೆಗೆ 1899ರ ಮಾರ್ಚಿಯ ಅಂಕಪಟ್ಟಿಯಲ್ಲಿ "ಮಹಾರಾಜರು ಈ ತಿಂಗಳು ಉತ್ತಮವಾದ ಕಾರ್ಯ ನಿರ್ವಹಿಸಿಲ್ಲ. ಅವರು ಮಿರ್ಜಾರವರಿಗಿಂತ ಕೆಟ್ಟದಾಗಿ ಮಾಡಿರುವುದು ಅತೃಪ್ತಿದಾಯಕವಾದುದು. ಅದರಲ್ಲೂ ಮಿರ್ಜಾ ಐದು ದಿನ ಗೈರು ಹಾಜರಿದ್ದರೂ. ಚರಿತ್ರೆ ವಿಷಯದಲ್ಲಿ ಮಹಾರಾಜರು ಲಕ್ಷ್ಮೀಕಾಂತ ಅರಸ್‌ರವರಿಂದಲೂ ಸೋಲಿಸಲ್ಪಟ್ಟಿದ್ದಾರೆ" ಎಂದು ಷರಾ ಬರೆದಿದ್ದಾರೆ[97]. (ಅನುಬಂಧ-IIರಲ್ಲಿ ನಾಲ್ವಡಿ ಮತ್ತು ಅವರ ಸಹಪಾಠಿಗಳ ಅಂಕಪಟ್ಟಿಗಳನ್ನು ನೋಡಬಹುದು.)

---

96. *ಅಯ್ಯಾ ಇಕೆಗಮಿ., ಪೂರ್ವೋಕ್ತ, ಪು. 33-35*

97. *ಫೈಲ್ ನಂ.; ಆರ್/2(8/64), ಸ್ಟೇಟ್‌ಮೆಂಟ್ ಆಫ್ ಮಾರ್ಕ್ಸ್ ಫಾರ್ ಮಾರ್ಚ್ 1899; ಹೆಚ್.ಹೆಚ್. ಮಹಾರಾಜಾಸ್ ಕ್ಲಾಸ್, ರಿಪೋರ್ಟ್ ಆನ್ ದಿ ಎಜುಕೇಷನ್ ಅಂಡ್ ಟ್ರೈನಿಂಗ್ ಆಫ್ ಹೆಚ್.ಹೆಚ್. ದಿ ಮಹಾರಾಜ ಆಫ್ ಮೈಸೂರ್, ಐ.ಓ.ಆರ್, ಲಂಡನ್, ಪು. 3*

1899ರ ಏಪ್ರಿಲ್‌ನ ಅಂಕಪಟ್ಟಿಯಲ್ಲಿ "ಮಹಾರಾಜರು ಮೂರು ದಿನ ಗೈರು ಹಾಜರಾಗಿ ಅಂಕಗಳನ್ನು ಕಳೆದುಕೊಂಡಿದ್ದಾರೆಂದೂ ಮತ್ತು ಅವರ ಪ್ರತಿಸ್ಪರ್ಧಿ ಅಲಿಖಾನ್‌ರಿಂದ ಕೆಳಗೆ ತಳ್ಳಲ್ಪಟ್ಟಿದ್ದಾರೆಂದು" ತಿಳಿಸಿದ್ದಾರೆ. 1899ರ ಫೆಬ್ರವರಿ, ಮಾರ್ಚ್ ಮತ್ತು ಏಪ್ರಿಲ್ ತಿಂಗಳ ಪರೀಕ್ಷೆಗಳಲ್ಲಿ ಮಹಾರಾಜರು ಕ್ರಮವಾಗಿ III, III ಮತ್ತು I ರ್‍ಯಾಂಕ್‌ಗಳನ್ನು ಪಡೆದಿದ್ದಾರೆ[98].

1897 ರ ಫೆಬ್ರವರಿಯಲ್ಲಿ ಸಂಭವಿಸಿದ ಅಗ್ನಿದುರಂತದಲ್ಲಿ ಅರ್ಧ ಅರಮನೆ ನಾಶಗೊಂಡಾಗ "ಮಹಾರಾಜರು ಅಗ್ನಿದುರಂತ ಸಂಭವಿಸಿದಾಗ ಹಳೆಯ ಅರಮನೆಯಲ್ಲಿದ್ದರು ಮತ್ತು ಅಂತಹ ಭೀಕರ ಘಟನೆ ನಡೆದಾಗಲು ಹೆಚ್ಚು ಉದ್ರೇಕಕ್ಕೆ ಒಳಗಾಗದೇ, ವಿಚಲಿತರಾಗದೆ ಗಂಭೀರವಾಗಿ ನಡೆದುಕೊಂಡರು. ಆ ಎಳೆಯ ವಯಸ್ಸಿನಲ್ಲಿ ಅವರ ನಡತೆ ವಿಶೇಷವಾದದ್ದು" ಎಂದು 1897ರ ವರದಿಯಲ್ಲಿ ಉಲ್ಲೇಖಿಸಿದ್ದಾರೆ[99]. ಹಾಗೆಯೇ ಮುಂದುವರಿದು ಮಹಾರಾಜರು "ಕಿರಿಯ ಸಂಭಾವಿತ" (Little Gentleman) ಎಂದು ಉಲ್ಲೇಖಿಸುತ್ತಾ ಮಹಾರಾಜರು ಸ್ನೇಹಿತರ ಜೊತೆಯಲ್ಲಿ ವಾಚಾಳಿಯೆಂದೂ ಆದರೆ ಸಾಂಪ್ರದಾಯಿಕ ಆಚರಣೆಗಳಲ್ಲಿ ಪ್ರೌಢರಂತೆ ಮತ್ತು ನೈಸರ್ಗಿಕವಾಗಿ ಸಂಭಾಷಿಸುತ್ತಾರೆಂದೂ ಉಲ್ಲೇಖಿಸಿದ್ದಾರೆ[100].

ಮೂರನೇ ವರದಿಯಲ್ಲಿ "ಮಹಾರಾಜರು ದೇಶೀಯ ಭಾಷೆಗಳಲ್ಲಿ ಬಹುಮಾನ ಗಳಿಸಿದ್ದಾರೆ. ಆದರೆ ಇಡೀ ತರಗತಿಯ ಆರು ವಿದ್ಯಾರ್ಥಿಗಳಲ್ಲಿ ಮೂರನೆಯವರಾಗಿದ್ದಾರೆ. ಅವರು ಇಂಗ್ಲಿಷ್‌ನಲ್ಲಿ ಉತ್ತಮವಾಗಿ ಭಾವನೆಗಳನ್ನು ವ್ಯಕ್ತಪಡಿಸುತ್ತಾರೆ, ಅವರ ಕೈ ಬರಹ ಮತ್ತು ಕಾಗುಣಿತ ಉತ್ತಮವಾಗಿದೆ. ಆದರೆ ವಿಷಯಗಳ ಪತ್ರಿಕೆಗಳಲ್ಲಿ ಅವರ ಪರಿಶ್ರಮ ಅತೃಪ್ತಿದಾಯಕ ಮತ್ತು ಅವರು ಅಧ್ಯಯನ ಮಾಡಿದ್ದನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದರದಲ್ಲಿ ವಿಫಲರಾಗುತ್ತಿದ್ದಾರೆ. ಗಣಿತದಲ್ಲಿ ಅಭಿವೃದ್ಧಿ ಸಾಧಿಸುತ್ತಿದ್ದಾರೆ" ಎಂದು ಬರೆದಿದ್ದಾರೆ[101].

ಇನ್ನುಳಿದಂತೆ ನಾಲ್ಕು, ಐದು ಮತ್ತು ಆರನೇ ವರದಿಗಳಲ್ಲಿ ಮಹಾರಾಜರ ಪ್ರೌಢಿಮೆ, ಪರಿಶ್ರಮಗಳ ವಿಷಯದ ಜೊತೆಗೆ ಅವರು ಅಭ್ಯಸಿಸುತ್ತಿದ್ದ ವಿಷಯಗಳ ಬಗೆಗಿನ ಸೂಕ್ಷ್ಮ ಪರಿಚಯವನ್ನು ನೀಡಿದ್ದಾರೆ. ಭಾಷೆಗಳು, ವಿಜ್ಞಾನ, ಗಣಿತಶಾಸ್ತ್ರ, ಚಿತ್ರಲೇಖನ, ದರ್ಶನಗಳು ಮುಂತಾದ ವಿಷಯಗಳ ಜೊತೆಗೆ ಖಗೋಳಶಾಸ್ತ್ರ, ವ್ಯವಹಾರ ವಿಜ್ಞಾನ, ಅಂತರರಾಷ್ಟ್ರೀಯ ಕಾನೂನು, ಭರತ ಖಂಡದ ರಾಜಕೀಯ ಕಾನೂನು, ರಾಜ್ಯಶಾಸನ ಸಿದ್ಧಾಂತಗಳು, ಮೈಸೂರು ಸಂಸ್ಥಾನದ ಭೂ ಕಂದಾಯದ ಮತ್ತು ಸರ್ವೇ ಶಿಸ್ತಿನ ಇತಿಹಾಸ, ರೆವೆನ್ಯೂ ನಿಬಂಧನೆಗಳು, ಕ್ರಿಮಿನಲ್ ಮತ್ತು ಸಿವಿಲ್

---

*98. ಅದೇ., 1899ರ ಏಪ್ರಿಲ್ ತಿಂಗಳ ಅಂಕಪಟ್ಟಿ, ಪು. 4*

*99. ಅದೇ., ಸೆಕೆಂಡ್ ಆನ್ಯುಯಲ್ ರಿಪೋರ್ಟ್ ಫಾರ್ 1896-97, ಪೂರ್ವೋಕ್ತ, ಪು. 1-2*

*100. ಅದೇ., ಪು. 7*

*101. ಫೈಲ್ ನಂ.; ಆರ್/2(8/64), ಪೂರ್ವೋಕ್ತ, ಥರ್ಡ್ ಆನ್ಯುಯಲ್ ರಿಪೋರ್ಟ್ ಫಾರ್ 1897-98, ಪು. 4*

ಕಾನೂನು, ಇನಾಂ ವ್ಯವಸ್ಥೆ, ಅರಣ್ಯಾಡಳಿತ, ಕ್ಷಾಮನಿವಾರಣಾ ಕಾನೂನು, ಅಬ್ಕಾರಿ ಕಾನೂನು, ತೆರಿಗೆಗಳ ವಿಚಾರ, ಸ್ಟಾಂಪುಗಳ ಕಾನೂನು, ರಿಜಿಸ್ಟ್ರೇಷನ್ ಕಾನೂನು, ಹಿಂದೂ ಧರ್ಮಶಾಸ್ತ್ರ, ಮುಸಲ್ಮಾನರ ಧರ್ಮಶಾಸ್ತ್ರ, ಸರ್ಕಾರದ ನಾನಾ ಇಲಾಖೆಗಳ ಆಡಳಿತ - ಇವೇ ಮುಂತಾದ ವಿಷಯಗಳಲ್ಲಿ ಅತ್ಯಧಿಕ ಪರಿಶ್ರಮವುಂಟಾಗಿದ್ದ ಅಂಶಗಳನ್ನು ಫ್ರೇಜರ್‌ರವರು ವರದಿ ಮಾಡಿದ್ದಾರೆ. ಆರನೆಯ ವರದಿಯಲ್ಲಿ ನಾಲ್ವಡಿಯವರ ಆರೋಗ್ಯವನ್ನು ಕುರಿತು ಪೂರ್ಣ ಮಾಹಿತಿಯನ್ನು ಹಾಗೂ ಸಂಸ್ಥಾನದ ಜವಾಬ್ದಾರಿ ಹೊರುವಲ್ಲಿ ಧೃಡಕಾಯರೂ ಆಗಿದ್ದಾರೆ. ಪೂರ್ಣ ಆಡಳಿತದ ಜವಾಬ್ದಾರಿಯನ್ನು ನಿರ್ವಹಿಸುವ ಹಾದಿಯಲ್ಲಿ ಸಮಗ್ರ ಶಿಕ್ಷಣವನ್ನು ಪಠ್ಯಕ್ರಮಗಳಿಂದಲೂ ಪ್ರವಾಸದಿಂದಲೂ ತಿಳಿದುಕೊಂಡಿದ್ದಾರೆ. ಅವರಿಗೆ ದೊರಕುತ್ತಿರುವಂತಹ ಶಿಕ್ಷಣ ಬಹುಶಃ ಆಗಿನ ಭಾರತೀಯ ಸಂಸ್ಥಾನಗಳ ಯಾವ ದೇಶೀಯ ರಾಜಕುಮಾರರಿಗೂ ಸಿಗುತ್ತಿಲ್ಲವೆಂದು ಸಹ ವರದಿ ಮಾಡಿರುತ್ತಾರೆ[102].

ನಾಲ್ವಡಿಯವರಿಗೆ ಲಭಿಸಿದ್ದ ಶಿಕ್ಷಣ ಸಮಸ್ತ ವಿಚಾರಗಳಲ್ಲಿಯೂ ಅವರ ವಯಸ್ಸಿನವರಿಂದ ನಿರೀಕ್ಷಿಸಲು ಸಾಧ್ಯವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ದೊರೆಕಿತ್ತು. ಅವರ ಜ್ಞಾನಾನುಭವಗಳು ಅತ್ಯಧಿಕವಾಗಿದ್ದು, ಅವರು ರಾಜ್ಯಭಾರ ನಿರ್ವಹೆಯಲ್ಲಿ ತಮಗೆ ಎಂತಹ ಕ್ಲಿಷ್ಟ ಸಮಸ್ಯೆಗಳೊದಗಿದರೂ ಅವುಗಳನ್ನು ಬಗೆಹರಿಸಿಕೊಂಡು ಸಮರ್ಪಕವಾಗಿ ದಕ್ಷತೆಯಿಂದ ಪ್ರಭುತ್ವ ಮಾಡಲು ಸಮರ್ಥರಾಗಿದ್ದಾರೆ. ಅವರ ವಿದ್ಯಾಪ್ರೌಢಿಮೆಯೂ, ಲೋಕಾನುಭವವೂ, ವಿವೇಚನಾಶಕ್ತಿಯೂ, ಸಚ್ಚಾರಿತ್ರ್ಯವೂ ಅವರನ್ನು ಪ್ರಜಾರಂಜಕರನ್ನಾಗಿ ಮಾಡಿದೆ. ಅನನ್ಯ ಸುಲಭವಾದ ರೀತಿಯಲ್ಲಿ, ವಿಚಕ್ಷಣೆಯಿಂದ ಅವರು ಪ್ರಭುತ್ವ ಮಾಡಬಲ್ಲವರಾಗಿದ್ದಾರಂಬುದನ್ನು ನಿಸ್ಸಂದೇಹವಾಗಿ ಹೇಳಬಲ್ಲೆ. ನಾಲ್ವಡಿಯವರ ನಯವಿನಯ, ಸದ್ವರ್ತನೆ, ಗಾಂಭೀರ್ಯ, ಸುಸಂಸ್ಕೃತ ಸ್ವಭಾವ ಯೂರೋಪಿಯನ್ ಜನರೆಲ್ಲರಿಂದಲೂ ಅವರಿಗೆ ಪ್ರೀತಿ-ಗೌರವವನ್ನು ಗಳಿಸಿಕೊಟ್ಟಿತ್ತು. ನಾಲ್ವಡಿಯವರು, ಕೋಪ ಮತ್ತು ಉದ್ರೇಕಗಳಿಗೆ ಒಳಗಾದದ್ದು ನನ್ನ ನೆನಪಿನಲ್ಲಿಲ್ಲ. ಅವರು ಸೇವಕರೊಂದಿಗೆ ಕೋಪಗೊಳ್ಳುತ್ತಿರಲಿಲ್ಲ. ಅವರ ಖಾಸಾ ಸೇವಕರನ್ನು ದೂರವಿಟ್ಟಿರುತ್ತಿದ್ದರು. ಆದರೆ ನಾಲ್ವಡಿಯವರಿಂದ ಸೇವಕರಿಗೆ ಅಪಾಯ ಸಂಭವಿಸಬಹುದೆಂಬ ಭಯವೇ ಇರಲಿಲ್ಲ. ಏಕೆಂದರೆ ಆ ವೇಳೆಯಲ್ಲಿ ಬೇರೆ ಸಂಸ್ಥಾನಗಳ ಯುವ ಮಹಾರಾಜರು ತಮ್ಮ ಊಳಿಗದವರನ್ನು ಬಹು ಕೆಟ್ಟದಾಗಿ ನಡೆಸಿಕೊಳ್ಳುತ್ತಿದ್ದರು (ಹೈದರಾಬಾದ್ ಸಂಸ್ಥಾನದಲ್ಲಿ).

ನಾನು ಹಲವಾರು ಬಾರಿ ಹೇಳಿರುವಂತೆ ನಾಲ್ವಡಿಯವರು ತಮ್ಮ ಕುಟುಂಬಕ್ಕೆ ಹೆಚ್ಚು ಅರ್ಪಿಸಿಕೊಂಡಿದ್ದಾರೆ ಮತ್ತು ಅವರು ತಮ್ಮ ತಂದೆಯವರಂತೆ ಯಾವಾಗಲೂ ಯೂರೋಪಿನ ಸಮಾಜವನ್ನೇ ಹೆಚ್ಚು ಆಶ್ರಯಿಸಿಲ್ಲ. ಅರಮನೆ ಹಾಗೂ ಅಂತಃಪುರದಿಂದ ಹೊರಗಡೆ ನಾಲ್ವಡಿಯವರು ನೆಲಸುವಂತೆ ಮಾಡಿದ ವ್ಯವಸ್ಥೆಯು ಮಹಾರಾಜರಿಗೆ ಅಶುದ್ಧ

---

*102. ಅದೇ., ಫೋರ್ಥ್ ಆನ್ಯೂಯಲ್ ರಿಪೋರ್ಟ್ ಫಾರ್ 1898-99, ಪು. 1-4 ಮತ್ತು ಫಿಫ್ತ್ ಆನ್ಯೂಯಲ್ ರಿಪೋರ್ಟ್ ಫಾರ್ 1899-1900, ಪು. 1-4 ಮತ್ತು ಸಿಕ್ಸ್ತ್ ಆನ್ಯೂಯಲ್ ರಿಪೋರ್ಟ್ ಫಾರ್ 1900-1901, ಪು. 1-15*

ಪ್ರೇರಣೆಗಳಿಗೆ ಒಳಗಾಗುವುದನ್ನು ತಡೆಗಟ್ಟುವಲ್ಲಿ ಸಹಕಾರಿಯಾಯಿತು ಹಾಗೂ ಮಹಾರಾಜರು ಶುದ್ಧ ಭಾವನೆಗಳು ಮತ್ತು ಸ್ವನಿಯಂತ್ರಣ ಬೆಳೆಸಿಕೊಂಡು ನೇರವಾಗಿ ನಿಲ್ಲುವಂತೆ ಹಾಗೂ ನಡೆಯಲು ಸಹಾಯಕವಾಯಿತು. ಇದರಿಂದ ಅವರು ಮುಂದೆ ತಮ್ಮ ಖಾಸಗೀ ಜೀವನದಲ್ಲಿ ಸುಖ-ಸಂತೋಷ ಹೊಂದುತ್ತಾರೆಂದು ನಾನು ಊಹಿಸುತ್ತೇನೆ[103] ಎಂಬುದಾಗಿ ಫ್ರೇಜರ್‌ರವರು ತಮ್ಮ ಅಂತಿಮ ಹಾಗೂ ಏಳನೇ ವರದಿಯಲ್ಲಿ ಮಾಹಿತಿ ನೀಡಿರುತ್ತಾರೆ. ಆ ಮಾಹಿತಿಗಳ ಕೆಲವು ತುಣುಕುಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದ್ದು ಇಂತಹ ಅನೇಕ ವಿಚಾರಗಳು ನಮ್ಮ ಪ್ರಬಂಧದುದ್ದಕ್ಕೂ ಬಳಕೆಯಾಗುತ್ತಾ ನಾಲ್ವಡಿಯವರ ವ್ಯಕ್ತಿತ್ವ ವಿಕಸನಕ್ಕೆ ಹಿನ್ನೆಲೆಯಾಗಿ ಪ್ರತಿಬಿಂಬಿತವಾಗುತ್ತಾ ಹೋಗುತ್ತವೆ.

ಎಸ್. ಎಂ. ಫ್ರೇಜರ್‌ರವರು ನಾಲ್ವಡಿಯವರಿಗೆ ನೀಡಿದ ಉತ್ತಮ ರೀತಿಯ ಶಿಕ್ಷಣ ಕ್ರಮವನ್ನು ಮೆಚ್ಚಿ ಏಳನೇ ಎಡ್ವರ್ಡ್ ಅವರಿಗೆ "ಸಿ.ಐ.ಇ." ಎಂಬ ಘನವಾದ ಬಿರುದನ್ನು ನೀಡಿ ಗೌರವಿಸಿದರು[104].

ವ್ಯಕ್ತಿಯ ವೈಯಕ್ತಿಕ ಬದುಕಿನಲ್ಲಿ ವಿವಾಹವು ಬಹುಮುಖ್ಯವಾದ ಅಂಶ. ವಿವಾಹದ ಮೂಲಕ ವ್ಯಕ್ತಿಯು ಸಾಂಸಾರಿಕ ಜೀವನವನ್ನು ಪ್ರವೇಶಿಸಿ ಬದುಕಿನ ಏರಿಳಿತಗಳ ಬಗ್ಗೆ ಸಾಕಷ್ಟು ಶಿಕ್ಷಿತನಾಗುತ್ತಾನೆ. ಹಾಗಾಗಿ ಇದನ್ನು ಶಿಕ್ಷಣದ ಮತ್ತೊಂದು ಭಾಗವೆಂದೇ ಗುರುತಿಸಬಹುದು. ಈ ನಿಟ್ಟಿನಲ್ಲಿ ನಾಲ್ವಡಿಯವರು 1900ರ ಜೂನ್ 6 ರಂದು ಕಾಥೇವಾಡ ಸಂಸ್ಥಾನಗಳಲ್ಲೊಂದಾದ ವಾಣಾ ರಾಜವಂಶದ ರಘೂಲಾರಾಣಾ ಶ್ರೀ ವಿನಯಸಿಂಹ ಅವರ ಪುತ್ರಿ ಪ್ರತಾಪಕುಮಾರಿ ದೇವಿಯನ್ನು ವಿವಾಹವಾದರು. ವಿವಾಹವು ಜಗನ್ಮೋಹನ ಅರಮನೆಯಲ್ಲಿ ನಡೆಯಿತು. ಹಿಂದಿನ ಸಂಪ್ರದಾಯದಂತೆ ಭಾರತದ ಅನೇಕ ರಾಜಮಹಾರಾಜರುಗಳೂ, ಇತರ ಗಣ್ಯವ್ಯಕ್ತಿಗಳೂ ವಿವಾಹ ಸಮಾರಂಭಕ್ಕೆ ಆಗಮಿಸಿದ್ದರು. ಮದ್ರಾಸ್ ಪ್ರೆಸಿಡೆನ್ಸಿಯ ಗವರ್ನರ್‌ರವರ ಮೂಲಕ ವೈಸ್ರಾಯಿ ಹಾಗೂ ವಿಕ್ಟೋರಿಯಾ ಮಹಾರಾಣಿಯವರ ಪರವಾಗಿ ದಂಪತಿಗಳಿಗೆ ಉಡುಗೊರೆಗಳು ಕೊಡಲ್ಪಟ್ಟವು. ಅನೇಕ ಮಠಾಧಿಪತಿಗಳು ಸಹ ಸಮಾರಂಭದಲ್ಲಿ ಹಾಜರಿದ್ದರು. ಎರಡು ಆನೆಗಳು ಹೊತ್ತ ಅಂಬಾರಿಯಲ್ಲಿ ಕುಳಿತ ರಾಜದಂಪತಿಗಳು ಮೈಸೂರಿನ ಪ್ರಮುಖ ರಾಜಬೀದಿಗಳಲ್ಲಿ ಜೂನ್ 14 ರ ರಾತ್ರಿ 7 ಗಂಟೆಗೆ ಮೆರವಣಿಗೆ ಹೊರಟು ಬೆಳಗಿನ ಜಾವ 5 ಗಂಟೆಗೆ ಜಗನ್ಮೋಹನ ಅರಮನೆಗೆ ಬಂದು ತಲುಪಿದರು. ಈ ವಿವಾಹವು ಅಂದಿನ ರಾಜಕುಟುಂಬದಲ್ಲಿ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಅಂಶಗಳನ್ನು ಸಮನ್ವಯಗೊಳಿಸಿಕೊಂಡಿತ್ತು[105]. (ಅನುಬಂಧ-IIIರಲ್ಲಿ ನಾಲ್ವಡಿಯವರ ವಿವಾಹ ಮಹೋತ್ಸವ ಚಿತ್ರವನ್ನು, ಅದರಲ್ಲಿ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯದ ಸಂಗಮದ ದೃಶ್ಯವನ್ನು ಕಾಣಬಹುದು.)

---

*103. **ಕಾನ್ಫಿಡೆನ್ಷಿಯಲ್ ; ಸೀರಿಯಲ್ ನಂ. 1 ಆಫ್ ಫೈಲ್ ನಂ. 26,** ಆಫ್ 1902. ಫೈನಲ್ ರಿಪೋರ್ಟ್ ಆಫ್ ಮಿ. ಫ್ರೇಜರ್ ಆನ್ ದಿ ಮಹಾರಾಜಾಸ್ ಎಜುಕೇಷನ್ ಆನ್ 13-7-1902, ಐ.ಓ.ಆರ್., ಮತ್ತು ಆರ್/2(31/299), ದಿ ರಿಪೋರ್ಟ್ ಸಬ್‌ಮಿಟೆಡ್ ಟೂ ಡಿ. ರಾಬರ್ಟ್‌ಸನ್, ರೆಸಿಡೆಂಟ್ ಆಫ್ ಮೈಸೂರ್, ಐ.ಓ.ಆರ್., ಲಂಡನ್, ಪು. 1-7*

*104. **ವೆಂಕಟರಾಮಯ್ಯ ಸಿ.ಕೆ.,** ಪೂರ್ವೋಕ್ತ, ಪು. 144*

*105. **ಫೈಲ್ ನಂ. ; ಆರ್/2/(30-279),** ರಿಪೋರ್ಟ್ ಆನ್ ದಿ ಮ್ಯಾರೇಜ್ ಆಫ್ ದಿ ಮಹಾರಾಜಾಸ್, 1900. ಐ.ಓ.ಆರ್., ಲಂಡನ್, ಪು. 1-14*

*- **ವೆಂಕಟರಾಮಯ್ಯ ಸಿ.ಕೆ.,** ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 123-124*

ನಾಲ್ವಡಿಯವರ ವಿವಾಹ ಸಂಬಂಧವಾಗಿ ಮೈಸೂರಿಗೆ ಆಗಮಿಸಿದ್ದ ಚಿನ್ನದ ಗಣಿಯವರು, ಕೊಡಗು ಪ್ರಾಂತದವರು, ಯೂರೋಪಿಯನ್ ಪ್ಲಾಂಟರುಗಳು ಹಾಗೂ ನಾನಾ ಸಂಘಗಳ ಪ್ರತಿನಿಧಿಗಳು ಜೂನ್ 13 ರಂದು ವಿಜ್ಞಾಪನಾ ಪತ್ರಿಕೆಗಳನ್ನೊಪ್ಪಿಸಿದಾಗ ಅವುಗಳಿಗೆ ಪ್ರತ್ಯುತ್ತರವಾಗಿ ನಾಲ್ವಡಿಯವರು ಮಾಡಿದ ಭಾಷಣ ಅಮೋಘವಾದುದಾಗಿದ್ದು, ಅದೇ ಅವರ ಮೊಟ್ಟ ಮೊದಲ ಸಭಾ ಭಾಷಣವಾಗಿತ್ತು. ಸಭಾಕಂಪನವಿಲ್ಲದೇ ಅವರು ಮಾಡಿದ ಆ ಭಾಷಣದ ವೈಖರಿ ರೆಸಿಡೆಂಟರನ್ನು ಮತ್ತು ದಿವಾನರನ್ನು ಅಚ್ಚರಿಗೊಳಿಸಿತು[106]. ಮುಂದೆ ಅಧಿಕಾರದ ಚುಕ್ಕಾಣಿ ಹಿಡಿದು ರಾಜ್ಯವನ್ನು, ಪ್ರಜೆಗಳನ್ನು ಉತ್ತಮ ಮಾರ್ಗದಲ್ಲಿ ಕೊಂಡೊಯ್ಯಬೇಕಾಗಿದ್ದ ನಾಲ್ವಡಿಯವರು ತಮ್ಮ ತರಭೇತಿಯ ಅವಧಿಯಲ್ಲಿ ಪಡೆದುಕೊಂಡಿದ್ದ ಶಿಕ್ಷಣದ ಒಂದು ನಮೂನೆ ಆ ಭಾಷಣವಾಗಿತ್ತು. ಆ ಭಾಷಣದಲ್ಲಿ ಅವರಿಗಿದ್ದ ಸೂಕ್ಷ್ಮ ಅವಲೋಕನ ಮತ್ತು ತಾಳ್ಮೆ ವಿಶೇಷ ಗುಣಗಳೆಂಬಂತೆ ಕಾಣಿಸಿಕೊಂಡಿದ್ದವು. ಅವರಿಗೆ ಸಾರ್ವಜನಿಕ ಭಾಷಣಗಳನ್ನು ಕಲಿಸಲು ವಿಶೇಷ ಗಮನ ಮತ್ತು ತರಭೇತಿ ನೀಡಲಾಗುತ್ತಿತ್ತು. ಹಾಗಾಗಿ ಅವರು ಮಹಾರಾಜರಾದಾಗ ಕನ್ನಡ, ಉರ್ದು ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪ್ರೌಢ ಭಾಷಣಗಳನ್ನು ಮಾಡುತ್ತಿದ್ದರು. ಅವರ ಧ್ವನಿ ಚಿಕ್ಕದಾಗಿದ್ದರೂ ಆಕರ್ಷಣೀಯವೂ, ವಿಶಿಷ್ಟವೂ ಆಗಿರುತ್ತಿತ್ತು. ಎತ್ತರದಲ್ಲಿ ಕಡಿಮೆ ಅಳತೆಯನ್ನೊಂದಿದ್ದರೂ ಅವರ ಭಾಷಣ ಕಲೆ ಅದ್ಭುತವಾಗಿಯೂ ಆಕರ್ಷಣೀಯವೂ ಆಗಿರುತ್ತಿತ್ತು. ಸಣ್ಣ ಧ್ವನಿಯಾದರೂ ಕೇಳಲು ಇಂಪಾಗಿರುತ್ತಿತ್ತು. ಅವರ ವಾಗ್ಝರಿ ಅದ್ಭುತವಾಗಿ ಮೂಡಿಬರುತ್ತಿತ್ತೆಂದು[107] ನಾಲ್ವಡಿಯವರ ಸಮಕಾಲೀನರೂ, ಅವರ ಭಾಷಣಗಳನ್ನು ನೇರವಾಗಿ ಆಲಿಸುತ್ತಿದ್ದಂತಹ ಮೈಸೂರಿನ ಪ್ರಖ್ಯಾತ ಪ್ರಕಾಶಕರಾದ ಡಿ.ವಿ.ಕೆ. ಮೂರ್ತಿಯವರು ಸಂದರ್ಶನದ ಸಂದರ್ಭದಲ್ಲಿ ನುಡಿದ ಮೌಖಿಕ ಇತಿಹಾಸದ ತುಣುಕು ಇದಾಗಿದೆ. ಹಾಗೆಯೇ ಅರಸು ಮನೆತನದ ಮತ್ತೋರ್ವ ಹಿರಿಯರಾದ ನಿರಂಜನರಾಜೇ ಅರಸ್‌ರವರನ್ನು ಸಂದರ್ಶಿಸಿದಾಗ ಅವರು ನಾಲ್ವಡಿಯವರು ಪಾಂಡಿತ್ಯ ಪೂರ್ಣವಾದ ಭಾಷಣಗಳನ್ನು ಮಾಡುತ್ತಿದ್ದರು, ಅವರ ಧ್ವನಿ ಬಹಳ ಆಕರ್ಷಣೀಯವಾಗಿತ್ತೆಂದೂ, ಶುದ್ಧ ಜೀವನ ಕ್ರಮಕ್ಕೆ ಅಂಟಿಕೊಂಡಂತಿದ್ದ ಅವರಲ್ಲಿ ವೇಳೆಯ ಬಗೆಗಿನ ಕಾಳಜಿ ಅಪಾರವಾಗಿತ್ತೆಂಬುದಾಗಿ ತಿಳಿಸಿದರು[108]. ಇವರು ನೀಡಿದ ಈ ಹೇಳಿಕೆಗಳು ಫ್ರೇಜರ್‌ರವರು ನೀಡಿರುವ ವರದಿಯ ಮಾಹಿತಿಗಳು ನಾಲ್ವಡಿಯವರ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಂತಿವೆ.

---

*106. **ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು.** 124*

*107. **ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ವಿಶೇಷ ಸಂಚಿಕೆ, ಪು.** 184*

*108. 2003ರ ಮೇ 7ರಂದು ಮೈಸೂರಿನ ಖ್ಯಾತ ಪ್ರಕಾಶಕರಾದ **ಡಿ.ವಿ.ಕೆ. ಮೂರ್ತಿ** ಯವರೊಡನೆ ನಡೆಸಿದ ಸಂದರ್ಶನದಿಂದ ದೊರೆತ ಮಾಹಿತಿ.*

*- 2003ರ ನವೆಂಬರ್ 14ರಂದು ಅರಸು ಕುಟುಂಬದ ಸದಸ್ಯರಲೊಬ್ಬರಾದ ನಿರಂಜನರಾಜೇ ಅರಸ್‌ರವರೊಡನೆ ನಡೆಸಿದ ಸಂದರ್ಶನದಿಂದ ದೊರೆತ ಮಾಹಿತಿ.*

*- **ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು.** 184*

ವೈಯಕ್ತಿಕ ಜೀವನದಲ್ಲೂ ಸದಾಚಾರ, ನಿಷ್ಠೆಗೆ ಬದ್ಧರಾಗಿದ್ದ ನಾಲ್ವಡಿಯವರು ಪರಂಪರೆಯಿಂದ ಆಚರಿಸಿಕೊಂಡು ಬಂದ ವ್ರತ, ಜಪ, ತಪ, ದೇವತಾರ್ಚನೆ, ಉಪವಾಸ, ಸ್ನಾನ-ಸಂಧ್ಯಾವಂದನೆ ಮೊದಲಾದ ಧಾರ್ಮಿಕ ಕ್ರಿಯೆಗಳನ್ನು ಬಿಡದೆ ಕಟ್ಟುನಿಟ್ಟಾಗಿ ಆಚರಿಸಿಕೊಂಡು ಬರುತ್ತಿದ್ದರು. ಉದಾಹರಣೆಗೆ ಅವರು ಆ ಕಾಲಕ್ಕೆ ಜನಪ್ರಿಯವಾಗಿದ್ದ ಸೋಡಾವಾಟರ್ ಮತ್ತು ಬ್ರೆಡ್ ಮುಂತಾದವುಗಳನ್ನು ಸೇವಿಸುತ್ತಿರಲಿಲ್ಲ[109].

ಹೀಗೆ ಸಮಗ್ರ ಶಿಕ್ಷಣ ಪಡೆದುಕೊಂಡ ನಾಲ್ವಡಿಯವರು 1902ರ ಆಗಸ್ಟ್ 8 ರಂದು ತಮ್ಮ ತಾಯಿ ಮಹಾರಾಣಿ ರೀಜೆಂಟರಿಂದ ರಾಜ್ಯಭಾರ ಸೂತ್ರಗಳನ್ನು ಸ್ವೀಕರಿಸಿದರು. ಆ ಸಂದರ್ಭದಲ್ಲಿ ನಾಲ್ವಡಿಯವರು ಮಾಡಿದ ಭಾಷಣದ ವೈಖರಿ ನಾಲ್ವಡಿಯವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಪ್ರಯತ್ನಿಸಿದ ವ್ಯಕ್ತಿ, ಶಕ್ತಿ ಮತ್ತು ಪ್ರಭಾವಗಳ ಪರಿಶ್ರಮಕ್ಕೆ ಸಿಕ್ಕ ಉತ್ತಮ ಪ್ರತಿಫಲದಂತಿತ್ತು.

ರಾಜ್ಯಭಾರ ಸ್ವೀಕಾರ ಮಹೋತ್ಸವ ಸಮಾರಂಭವು ಕೂಡ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಸಮನ್ವಯದ ನೀತಿಪಾಠದ ಮಾದರಿಯಿಂದಲೇ ಕೂಡಿತ್ತು. ಅಂದಿನ ಬ್ರಿಟಿಷ್ ಭಾರತದ ವೈಸ್ರಾಯಿ ಆಗಿದ್ದ ಲಾರ್ಡ್ ಕರ್ಜನ್‌ರವರು ಆ ಸಮಾರಂಭಕ್ಕೆ ಆಗಮಿಸಿದ್ದರು. ಅವರನ್ನು ಸ್ವತಃ ನಾಲ್ವಡಿಯವರು, ಅವರ ಅಸಿಸ್ಟೆಂಟ್ ರೆಸಿಡೆಂಟರಾಗಿದ್ದ ಸಿ. ಎಲ್. ಎಸ್. ರಸ್ಸಲ್‌ರವರು, ದಿವಾನರಾಗಿದ್ದ ವಿ. ಪಿ. ಮಾಧವರಾಯರು, ಬಕ್ಷಿಬಸವಪ್ಪಾಜಿಯವರು ಸ್ವಾಗತಿಸಿದರು. ಸಮಾರಂಭವು ಜಗನ್ಮೋಹನ ಅರಮನೆಯಲ್ಲಿ ಅದ್ದೂರಿಯಿಂದ ನಡೆಯಿತು. ಉತ್ಸವ ಮಂಟಪವು ಮನೋಹರವಾಗಿ ಅಲಂಕೃತವಾಗಿದ್ದು ವೇದಿಕೆಯಲ್ಲಿ ಎರಡು ದಿವ್ಯಾಸನಗಳು ಸಿದ್ಧವಾಗಿದ್ದವು. ಅವುಗಳಲ್ಲಿ, ಒಂದು ನಾಲ್ವಡಿಯವರಿಗೆ ಮತ್ತೊಂದು ವೈಸ್ರಾಯಿಯವರಿಗೆ. ಅವುಗಳ ಉಭಯ ಪಾರ್ಶ್ವಗಳಲ್ಲಿ ಸಾಲುಸಾಲಾಗಿ ಕುರ್ಚಿಗಳಿದ್ದವು. ಬಲಪಾರ್ಶ್ವದ ಕುರ್ಚಿಗಳಲ್ಲಿ ಬ್ರಿಟಿಷ್ ರೆಸಿಡೆಂಟರು ಮತ್ತು ಅವರ ಪರಿವಾರದವರು, ಬ್ರಿಟಿಷ್ ಸೇನೆಯ ಅಧಿಕಾರಿಗಳು, ಯೂರೋಪಿಯನ್ ದೊಡ್ಡ ಮನುಷ್ಯರು ಆಸೀನರಾಗಿದ್ದರು. ಎಡಗಡೆಯ ಸಾಲಿನ ಕುರ್ಚಿಗಳಲ್ಲಿ ಆಗಿನ ದಿವಾನರು, ಕೌನ್ಸಿಲ್‌ನ ಸದಸ್ಯರು, ಇತರ ದೊಡ್ಡ ದೊಡ್ಡ ಅಧಿಕಾರಿಗಳು ಮತ್ತು ಅತಿಥಿಗಳು ಕುಳಿತಿದ್ದರು. ಮಹಾರಾಣಿಯವರು, ನಾಲ್ವಡಿಯವರ ಸೋದರಿಯರು ಮತ್ತು ಅರಸು ಪಂಗಡದ ಮಹಿಳೆಯರು ಕಿಂಕಾಪಿನ ತೆರೆಯ ಹಿಂದೆ ಕುಳಿತಿದ್ದರು. ಬ್ರಿಟಿಷ್ ಸೈನ್ಯದ ಬ್ಯಾಂಡಿನವರು ವಾದ್ಯಗಳನ್ನು ನುಡಿಸುತ್ತಿದ್ದರು. ಇತರೆ ಸಂಸ್ಥಾನಗಳ ಪ್ರಭುಗಳ ಪ್ರತಿನಿಧಿಗಳಾಗಿ ಬಂದಿದ್ದ ಅತಿಥಿಗಳು, ಸೈನಿಕರು, ವಿವಿಧ ವರ್ಣರಂಜಿತ ಉಡುಪುಗಳಿಂದ ಕಂಗೊಳಿಸುತ್ತಾ ಉತ್ಸವದ ವೈಭವವನ್ನು ಹೆಚ್ಚಿಸಿದ್ದರು. ನಾಲ್ವಡಿ ಮತ್ತು ವೈಸ್ರಾಯಿಯವರು ಮೆಲುನಡಿಗೆಯಲ್ಲಿ ಬಂದು ಒಬ್ಬರ

---

*109. **ವೆಂಕಟರಾಮಯ್ಯ ಸಿ.ಕೆ.,** ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 124-125*

ಪಾರ್ಶ್ವದಲ್ಲಿ ಮತ್ತೊಬ್ಬರಂತೆ ದಿವ್ಯಾಸನಗಳಲ್ಲಿ ಮಂಡಿಸಿದ ಮೇಲೆ ಇತರರೆಲ್ಲರೂ ಯಥಾಕ್ರಮವಾಗಿ ತಮ್ಮ ಆಸನಗಳಲ್ಲಿ ಕುಳಿತರು. ಬ್ರಿಟಿಷ್ ಭಾರತ ಸರ್ಕಾರದ ವಿದೇಶಾಂಗ ಇಲಾಖೆಯ ಅಂಡರ್ ಸೆಕ್ರೆಟರಿಯವರು ಎದ್ದು ನಿಂತು ದರ್ಬಾರು ಉಪಕ್ರಮವಾಯಿತೆಂದು ಸೂಚಿಸಿದ ಕೂಡಲೇ ವೈಸ್ರಾಯಿಯವರು ಎದ್ದು ನಿಂತು ತಮ್ಮ ಭಾಷಣವನ್ನಾರಂಭಿಸಿದರು. ಆ ಭಾಷಣದಲ್ಲಿ ಪಿತೃವಿಯೋಗದ ನಂತರದಲ್ಲಿ ನಾಲ್ವಡಿಯವರು ಫ್ರೇಜರ್‌ರವರ ಪೋಷಣೆಯಲ್ಲಿ ಪಡೆದ ಎಂಟು ವರ್ಷಗಳ ಶಿಕ್ಷಣದ ವಿಷಯವನ್ನು ಪ್ರಸ್ತಾಪಿಸುತ್ತಾ "ಅವುಗಳು ಆಲಸ್ಯತನದಿಂದಾಗಲಿ ಅಥವಾ ಸುಖಪರಾಯಣತೆಯಿಂದಾಗಲಿ ಕಳೆದ ಸಂವತ್ಸರಗಳಲ್ಲ. ಮಹಾರಾಜರು ಗುರುತರವಾದ ಕಾರ್ಯಭಾರವನ್ನು ವಹಿಸುವುದಕ್ಕೆ ತಕ್ಕ ಸಾಮರ್ಥ್ಯ ಉಂಟಾಗಲು ಅನುಕೂಲವಾಗುವಂತಿದ್ದ ವ್ಯಾಸಂಗ ನಿಷ್ಠೆಯ ಸಂವತ್ಸರಗಳು ಅವಾಗಿದ್ದವು. ಮಹತ್ತರವಾದ ಮಹಾರಾಜ ಪದವಿಗೆ ಭೂಷಣಪ್ರಾಯರಾಗಿ ರಾಜ್ಯಭಾರವನ್ನು ನಿರ್ವಹಿಸುವ ಯೋಗ್ಯತೆಯ ಸಿದ್ಧಿಗಾಗಿ ಶ್ರಮವಹಿಸಿದ ಸುಶಿಕ್ಷಣದ ಸಂವತ್ಸರಗಳಾಗಿದ್ದವು. ಐವತ್ತು ಲಕ್ಷ ಪ್ರಜೆಗಳ ಯೋಗಕ್ಷೇಮ, ಸಾಧನೆಯ ಭಾರವನ್ನು ವಹಿಸಿಕೊಂಡು ರಾಜ್ಯಭಾರ ಮಾಡುವುದು ಅಷ್ಟು ಸುಲಭದ ಕಾರ್ಯವಲ್ಲ. ಸತ್ವವಿಹೀನವಾಗಿರುವ ಕೇವಲ ಊನವಾದ ಶಿಕ್ಷಣ ದೊರೆತಲ್ಲಿ ಅದೆಂದಿಗೂ ಸಾಧುವಾಗದು. ಮಹಾರಾಜರಿಗೆ ಶಿಕ್ಷಕರಾಗಿ ಫ್ರೇಜರ್‌ರವರು ದೊರೆತದ್ದು ನಮ್ಮ ಸುಯೋಗ. ಅವರು ಪೂರ್ಣನಿಷ್ಠೆಯ ಕರ್ತವ್ಯ ಬುದ್ಧಿಯುಳ್ಳವರು; ತಮ್ಮ ಶಿಷ್ಯರ ವಿಶ್ವಾಸಕ್ಕೆ ಪಾತ್ರರಾದುದರ ಜೊತೆಗೆ ತಮ್ಮ ಶಿಷ್ಯರ ಅವ್ಯಕ್ತ ಶಕ್ತಿ ಸಾಮರ್ಥ್ಯಗಳನ್ನು ವ್ಯಕ್ತರೂಪಕ್ಕೆ ತಂದು ವಿಕಾಸಗೊಳಿಸಲು ದಕ್ಷರಂತೆ ಕೆಲಸ ಮಾಡಿದರು. ಸಹಾನುಭೂತಿಯುಳ್ಳವರೂ, ವಿವೇಕಶಾಲಿಗಳೂ ಆಗಿದ್ದ ಕರ್ನಲ್ ರಾಬರ್ಟ್ಸನ್‌ರವರು ಬ್ರಿಟಿಷ್ ರೆಸಿಡೆಂಟರಾಗಿದ್ದುಕೊಂಡು ಮಹಾರಾಜರಿಗೆ ಆಪ್ತರಾದ ಮಂತ್ರಾಲೋಚಕರಾಗಿ ಪ್ರೋತ್ಸಾಹಿಸಿದರು. ಶಿಕ್ಷಣ ಸಲಹೆಗಳ ರೂಪದ ಸಹಾಯದ ಜೊತೆಗೆ ನಾಲ್ವಡಿಯವರಿಗೆ ಅರಮನೆಯಲ್ಲಿ ಮಹಾರಾಣಿಯವರ ವಾತ್ಸಲ್ಯಪೂರಿತವಾದ ಶಿಕ್ಷಣವೂ, ಬುದ್ಧಿವಾದವೂ ಲಭಿಸಿದವು. ಇವುಗಳ ಪರಿಣಾಮವಾಗಿ ಮಹಾರಾಜರಲ್ಲಿ ಪ್ರಕೃತಿಸಿದ್ಧವಾದ ವಿವೇಚನೆ, ವಿಚಕ್ಷಣೆಗಳು ಕ್ರಮಕ್ರಮವಾಗಿ ವಿಕಾಸ ಹೊಂದಿ ಅವರೇ ರಾಜ್ಯಭಾರ ಸೂತ್ರಗಳನ್ನು ವಹಿಸಿಕೊಂಡು ಪ್ರಜಾಪರಿಪಾಲನೆ ಮಾಡುವ ಪೂರ್ಣ ಸಾಮರ್ಥ್ಯವನ್ನು ಪಡೆದಿದ್ದಾರೆ ಎಂಬುದನ್ನು ನಾನು ನನ್ನ ಮನಸ್ಸಿಗೆ ಧೃಡಪಡಿಸಿಕೊಂಡಿದ್ದೇನೆ" ಎಂದು ಹೇಳಿ, ಆದೇಶ ಪತ್ರದ ಮೂಲಕ ಅಧಿಕಾರವನ್ನು ಮಹಾರಾಜ ನಾಲ್ವಡಿಯವರಿಗೆ ಹಸ್ತಾಂತರಿಸಿದರು[110].

ಲಾರ್ಡ್ ಕರ್ಜನ್‌ರವರ ಇಂತಹ ಪಾಂಡಿತ್ಯ ಪೂರ್ಣ ಭಾಷಣ ಅಲ್ಲಿ ನೆರೆದಿದ್ದ ಜನಸ್ತೋಮದ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡಿತು. ಪ್ರಚಂಡ ಮೇಧಾವಿಗಳ ಗುಂಪಿಗೆ ಸೇರಿದ್ದ ಕರ್ಜನ್‌ರವರು ಉತ್ತಮ ಪ್ರತಿಭೆ,

---

*110. ಹಯವದನರಾವ್ ಸಿ., ಪೂರ್ವೋಕ್ತ, ಪು. 3011-3012*

ಪಾಂಡಿತ್ಯ, ಅನುಭವ ಉಳ್ಳವರೂ ಆಗಿದ್ದು ಕೆಲವು ವಿಷಯಗಳನ್ನು ಸೂಕ್ಷ್ಮವಾಗಿ ಗುರುತು ಹಾಕಿಕೊಂಡು ಅವುಗಳನ್ನು ಆಗಾಗ್ಗೆ ನೋಡಿಕೊಳ್ಳುತ್ತಾ ಭಾಷಣ ಮಾಡಿದರು[111]. ಅಂತಹ ಅಮೋಘ ಭಾಷಣದಿಂದ ಪ್ರೇರಿತರಾಗಿದ್ದ ಜನರು ಮಹಾರಾಜರು ಮುಂದೆ ಮಾಡಬಹುದಾಗಿದ್ದ ಭಾಷಣದ ಬಗ್ಗೆ ಬಹಳಷ್ಟು ಕುತೂಹಲ ಭರಿತರಾಗಿ ಕಾಯುತ್ತಿದ್ದರು. ಆಗ್ಗೆ ಹದಿನೆಂಟು ವರ್ಷಗಳು ತುಂಬಿದ್ದ ಮಹಾರಾಜರು ಲಾರ್ಡ್ ಕರ್ಜನ್‌ರವರ ಭಾಷಣಕ್ಕೆ ಪ್ರತಿಕ್ರಿಯಿಸುತ್ತಾ "ನನ್ನ ಮೇಲೆ ಎಂತಹ ಜವಾಬ್ದಾರಿಗಳನ್ನು ವಹಿಸಿರುವಿರಿ ಎಂಬುದನ್ನೂ ಪೂರ್ಣವಾಗಿ ಅರಿತಿದ್ದೇನೆ ಮತ್ತು ಅದನ್ನು ಕಾರ್ಯತಃ ರುಜವಾತು ಪಡಿಸಬೇಕೆಂದಿದ್ದೇನೆ ಹೊರತು ಬರೀ ಮಾತುಗಳಿಂದಲ್ಲ. ನಾನು ಉತ್ತರಾಧಿಕಾರಿಯಾಗಿರುವುದು ಸಾಮಾನ್ಯವಾದುದಕ್ಕಲ್ಲ ಹಾಗೂ ಮೈಸೂರು ಹೊಂದಿದ ಶ್ರೇಷ್ಠ ರಾಜತಂತ್ರಜ್ಞರು ಮತ್ತು ಆಡಳಿತದ ಬಗ್ಗೆ ನಮ್ಮ ಗೌರವಾನ್ವಿತ ತಾಯಿಯವರ ರೀಜೆನ್ಸಿ ಆಳ್ವಿಕೆಯ ಕಾಲದಲ್ಲಿ ಬ್ರಿಟಿಷ್ ಸರ್ಕಾರ ತೋರಿದ ಕಾಳಜಿಯ ಬಗ್ಗೆ ಮೆಚ್ಚುತ್ತೇನೆ, ಹಾಗೆಯೇ ಬೇರೆಯವರು ಸಾಧಿಸಿದ ಕೀರ್ತಿಯ ಮೇಲೆ ನಾನು ಆಧಾರ ಪಡಬಾರದೆಂಬುದನ್ನು ನಾನು ಚೆನ್ನಾಗಿ ಬಲ್ಲೆ. ನನ್ನ ಪ್ರಜೆಗಳು ಈಗ ಅನುಭವಿಸುತ್ತಿರುವ ಸೌಖ್ಯಗಳನ್ನು ಮುಂದುವರಿಸುವುದಕ್ಕೂ ಇನ್ನೂ ಹೆಚ್ಚಿನ ಮಟ್ಟದ ದಕ್ಷತೆಯನ್ನು ಸಾಧಿಸಲು ನನ್ನ ಅತ್ಯಂತ ಸಾಹಸದ ಶ್ರಮವು ಬೇಕಾಗಿದೆ ಎಂಬುದನ್ನು ನಾನು ಬಲ್ಲೆ. ನನ್ನ ಮುಂದಿರುವ ಸವಾಲುಗಳನ್ನೆದುರಿಸಲು ನನಗೆ ಎಷ್ಟರ ಮಟ್ಟಿನ ಯೋಗ್ಯತೆ ಇದೆ ಎಂಬುದನ್ನು ಭವಿಷ್ಯತ್ತೇ ನಿರ್ಧರಿಸಬೇಕು. ಅದನ್ನು ಸಾಧಿಸುವೆನೆಂಬ ದೃಢಸಂಕಲ್ಪದ ಭಾವನೆ ನನ್ನಲ್ಲಿದೆ, ಅದರಲ್ಲೂ ನನ್ನ ಮಿತ್ರರಾದ ಹಾಗೂ ನನ್ನ ರಾಜ್ಯದ ರೆಸಿಡೆಂಟರಾದ ಗೌರವಾನ್ವಿತ ಕರ್ನಲ್ ಡೋನಾಲ್ಡ್ ರಾಬರ್ಟ್‌ಸನ್ ಸಹಾಯ, ಸಹಕಾರ ದೊರೆಯುತ್ತಿರುವುದನ್ನು ನೆನೆದು ತೃಪ್ತಿಯಿಂದ ಹೇಳುವುದೇನೆಂದರೆ ನನ್ನ ಕಾರ್ಯವನ್ನು ಅದರ ತೂಕವೆಷ್ಟೆಂಬುದನ್ನು ಅರಿತು ಮೊದಲು ಕಾರ್ಯವನ್ನಾರಂಭಿಸುತ್ತೇನೆ. ಇದಕ್ಕೆ ಕಾರಣಕರ್ತರೆಂದರೆ ನನ್ನ ಪೂಜ್ಯ ಗುರುಗಳಾದ ಮಿ. ಫ್ರೇಜರ್‌ರವರು, ಅವರು ಕಳೆದ 6 ವರ್ಷಗಳಿಂದ ಪಟ್ಟ ಶ್ರಮ ನಿಷ್ಫಲವಾಗುವುದಿಲ್ಲವೆಂಬುದನ್ನು ಸಾಬೀತುಪಡಿಸುತ್ತೇನೆ, ಸಫಲನಾಗಬೇಕೆಂಬ ಬಯಕೆ ಮತ್ತು ಅದಕ್ಕೆ ಬೇಕಾದ ಪ್ರಯತ್ನಗಳಿಗೆ ನನ್ನಿಂದ ಲೋಪವಾಗುವುದಿಲ್ಲವೆಂಬುದನ್ನು ಸಂಪೂರ್ಣ ಆತ್ಮವಿಶ್ವಾಸದಿಂದ ಘೋಷಿಸಬಯಸುತ್ತೇನೆ. ನಾನೀಗ ನನ್ನ ರಾಜ್ಯದ ಬಹುತೇಕ ಭಾಗಗಳನ್ನು ಅದರ ಸುಂದರ ದೃಶ್ಯಗಳನ್ನು ರಾಜನಿಷ್ಠ ಪ್ರಜೆಗಳನ್ನು ನೋಡಿರುವೆನು, ಇಂತಹ ಉತ್ತರಾಧಿಕಾರತ್ವಕ್ಕಾಗಿ ಮನಸ್ಸು ಹೆಮ್ಮೆಯಿಂದ ತುಂಬದೇ ಹೋದರೆ ಅದು ಕ್ಷುಲ್ಲಕ ಮನವಾದೀತು. ಇಂತಹ ಸದವಕಾಶವನ್ನು ಸಂಪೂರ್ಣವಾಗಿ ಮತ್ತು ಚಾಣಾಕ್ಷತನದಿಂದ ಉಪಯೋಗಿಸಿಕೊಳ್ಳಲು ನನ್ನ ಸ್ಥಾನವನ್ನು ಸಂಪೂರ್ಣವಾಗಿ ಬಳಸಿಕೊಂಡು ನನ್ನ ಪ್ರಜೆಗಳ ಸಂಪೂರ್ಣ ಹಾಗೂ ನಿರಂತರ ಸಂತೋಷಕ್ಕಾಗಿ ದುಡಿಯುವಂತೆ ಪ್ರಯತ್ನಿಸಲು ಭಗವಂತನು

---

*111. ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು. 203*

*- 1902 ಆಗಸ್ಟ್ 2ರ ವೆಸ್ಲನ್ ಡೈಲಿ ಮರ್ಕ್ಯೂರಿ ದಿನಪತ್ರಿಕೆ*

ನನಗೆ ಯೋಗ್ಯತೆಯನ್ನು ಕರುಣಿಸಲೆಂದು ಬೇಡಿಕೊಳ್ಳುತ್ತೇನೆ"[112] ಎಂಬ ಸಂಕೀರ್ಣ ಪದ ಜೋಡಣೆಯ ವಾಕ್ಯಗಳೊಂದಿಗೆ ಅದ್ದೂರಿ ಭಾಷಣವನ್ನು ಮುಗಿಸಿ ಸಭಿಕರನ್ನು ಸ್ತಂಭೀಭೂತರನ್ನಾಗಿಸಿದರು.

ಮಹಾರಾಜ ನಾಲ್ವಡಿಯವರ ಭಾಷಣವನ್ನು ಕುರಿತು 1902, ಆಗಸ್ಟ್ 12ರ "ವೆಸ್ಟ್ರನ್ ಡೈರಿ ಮರ್ಕ್ಯೂರಿ" ಎಂಬ ಇಂಗ್ಲಿಷ್ ಪತ್ರಿಕೆ ಮೈಸೂರು ಸಂಸ್ಥಾನದ ತರುಣ ಮಹಾರಾಜರವರು ವಿಷಯಗಳನ್ನು ಗುರುತು ಹಾಕಿದ ಒಂದು ಚೂರು ಕಾಗದವನ್ನು ಕೈಯಲ್ಲಿ ಹಿಡಿಯದೇ ಭಾಷಣ ಮಾಡಿದರು. ಅವರ ಭಾಷಣದ ವೈಖರಿಯು ಉಜ್ವಲ ಶೋಭೆಯಿಂದ ಕೂಡಿದ್ದುದಲ್ಲದೇ, ಇಂಗ್ಲಿಷ್ ಪದಗಳ ಉಚ್ಚಾರಣೆಯು ಅಸಾಧಾರಣ ರೀತಿಯಲ್ಲಿ ಸರಿಯಾಗಿದ್ದಿತು[113] ಎಂಬುದಾಗಿ ಬರೆದು ನಾಲ್ವಡಿಯವರಲ್ಲಿ ವ್ಯಕ್ತಗೊಂಡ ಪ್ರೌಢಿಮೆಯ ಬಗ್ಗೆ ಬೆಳಕನ್ನು ಚೆಲ್ಲಿದೆ. ಇದುವರೆಗಿನ ಸ್ಥೂಲವಾದ ವಿವರಣೆಗಳಿಂದ ನಾಲ್ವಡಿಯವರ ಶಿಕ್ಷಣ ಹೇಗೆ ಮೂಡಿಬಂದಿತ್ತೆಂಬುದನ್ನು ಸ್ಪಷ್ಟಪಡಿಸಿಕೊಂಡ ಮೇಲೆ ಇದರಿಂದ ಒಡಮೂಡುವ ಕೆಲವು ಸಾಮಾನ್ಯ ತೀರ್ಮಾನಗಳನ್ನು ಹೀಗೆ ನಿರೂಪಿಸಬಹುದಾಗಿದೆ.

ಮೊದಲನೆಯದಾಗಿ ತಂದೆಯ ಮರಣಾನಂತರ ಸಂಪೂರ್ಣವಾಗಿ ಮಗನ ಶಿಕ್ಷಣದ ಜವಾಬ್ದಾರಿಯನ್ನೊತ್ತ ಮಹಾರಾಣಿ ವಾಣಿವಿಲಾಸ ಸನ್ನಿಧಾನರವರು ರೆಸಿಡೆಂಟರ ಮೂಲಕ ಬ್ರಿಟಿಷ್ ಸರ್ಕಾರದ ಮೇಲೆ ಒತ್ತಡ ಏರುತ್ತಾ ಬ್ರಿಟಿಷ್ ಪೋಷಕರಿಂದಲೇ ಶಿಕ್ಷಣವನ್ನು ಕೊಡಿಸಿ ನಾಲ್ವಡಿಯವರನ್ನು ಆಧುನಿಕ ಕಾಲದ ಅವಶ್ಯಕತೆ, ಸನ್ನಿವೇಶ ಮತ್ತು ಒತ್ತಡಗಳಿಗೆ ಅನುಗುಣವಾಗಿ ರೂಪಿಸಲು ಸರ್ವಪ್ರಯತ್ನ ನಡೆಸಿದ್ದು. ರೆಸಿಡೆಂಟರು ದಿವಾನರ ನೇತೃತ್ವದಲ್ಲಿ ಶಿಕ್ಷಣದ ತರಬೇತಿಯನ್ನು ಮುಂದುವರಿಸುವುದಾಗಿ ಹೇಳಿದಾಕ್ಷಣದಲ್ಲಿ ಆ ತಾಯಿ ನೀಡಿದ ಪ್ರತಿಕ್ರಿಯೆ ಆಕೆಯಲ್ಲಿದ್ದ ಮುಂದಾಲೋಚನೆ ಹಾಗೂ ಧೃಡಸಂಕಲ್ಪದ ವ್ಯಕ್ತಿತ್ವವನ್ನು ನಿರೂಪಿಸುತ್ತದೆ. ಆಕೆಯ ಶ್ರೇಷ್ಠತೆಯನ್ನು ಕುರಿತು ಲಾರ್ಡ್ ಕರ್ಜನ್‌ರವರು "ನಾಲ್ವಡಿಯವರ ಅಪ್ರಾಪ್ತ ವಯಸ್ಸಿನ ಆಳ್ವಿಕೆಯ ಸಂದರ್ಭದ ಎಲ್ಲಾ ಘಟನೆಗಳೂ ಸುಲಲಿತವಾಗಿ ಮುಂದುವರಿಯಲು ಮಹಾರಾಣಿಯವರ ಸಮಯ ಪ್ರಜ್ಞೆ ಮತ್ತು ಸ್ವವಿವೇಚನೆಗಳೇ ಕಾರಣವೆಂದು ಉಲ್ಲೇಖಿಸಲು ನಾನು ಸಂತೋಷಿಸುತ್ತೇನೆ"[114] ಎಂಬ ನುಡಿಗಳನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ.

---

*112. ಸ್ಪೀಚಸ್ ಬೈ ಹಿಸ್ ಹೈನೆಸ್ ಮಹಾರಾಜ ಶ್ರೀ ಕೃಷ್ಣ ರಾಜ ಒಡೆಯರ್ ಬಹದ್ದೂರ್, ಜಿ.ಸಿ.ಎ.ಐ.ಜಿ.ಬಿ.ಇ., ಮಹಾರಾಜ ಆಫ್ ಮೈಸೂರ್, 1902-1933, ಮೈಸೂರ್, 1934, ಪು. 2-3*

*- ಹಯವದನರಾವ್ ಸಿ., ಪೂರ್ವೋಕ್ತ, ಪು. 3012-3013*

*- ಜೋಸೈಯರ್ ಜಿ.ಆರ್., ಪೂರ್ವೋಕ್ತ, ಪು. 242-243*

*113 1902 ಆಗಸ್ಟ್ 2 ರ ವೆಸ್ಟ್ರನ್ ಡೈಲಿ ಮಕ್ಯೂರಿ, ದಿನಪತ್ರಿಕೆ*

*- ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು. 204*

*114. ಶಾಮರಾವ್ ಎಂ., ಪೂರ್ವೋಕ್ತ, ಪು. 190*

ಎರಡನೆಯದಾಗಿ ರಾಜಕುಮಾರರಿಗೆ ಶಿಕ್ಷಣ ನೀಡುವುದರಲ್ಲೇ ಪರಿಣಿತರಾಗಿದ್ದ ಎಸ್. ಎಂ. ಫ್ರೇಜರ್‌ರವರು ನಾಲ್ವಡಿಯವರಿಗೆ ಪೋಷಕರಾಗಿ, ಗುರುಗಳಾಗಿ ದೊರೆತದ್ದು. ಆಧುನಿಕ ಜಗತ್ತು ಒಡ್ಡುವ ಸವಾಲುಗಳಿಗೆ ತಮ್ಮ ಶಿಷ್ಯನನ್ನು ಬೆಳೆಸುವ ಹಿನ್ನೆಲೆಯಲ್ಲಿ ರಾಜಕುಟುಂಬದವರನ್ನು ಅನೇಕ ವಿಚಾರಗಳಲ್ಲಿ ತೀಕ್ಷ್ಣವಾಗಿ ಖಂಡಿಸುತ್ತಾ ತಮ್ಮ ಯೋಜನಗಳಿಗೆ ಧಕ್ಕೆ ಬಾರದಂತೆ ಶಿಕ್ಷಣದ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ವಿಶೇಷ ಕಾಳಜಿಯಿಂದ ನಾಲ್ವಡಿಯವರನ್ನು ಗಮನಿಸುತ್ತಾ, ಸರಿ-ತಪ್ಪುಗಳನ್ನು ಗುರುತಿಸುತ್ತಾ ಬಂದದ್ದು. ಅಲ್ಲದೆ ವರದಿಗಳ ಮೂಲಕ ಕುಟುಂಬದ ಹಾಗೂ ಆಡಳಿತ ಮಂಡಳಿಯ ಮುಂದೆ ಅಂಕಪಟ್ಟಿಗಳನ್ನು ಇರಿಸುತ್ತಿದ್ದದ್ದು. ಫ್ರೇಜರ್‌ರವರು ತಮ್ಮ ವರದಿಗಳಲ್ಲಿ ನಾಲ್ವಡಿಯವರಲ್ಲಿ ಕಾಣಿಸಿಕೊಳ್ಳುತ್ತಿದ್ದ ನ್ಯೂನತೆಗಳನ್ನು ಹಾಗೂ ಅದಕ್ಕೆ ಕಾರಣಗಳನ್ನು ವಿವರಿಸುತ್ತಾ ಸಕಾಲದಲ್ಲೇ ನಾಲ್ವಡಿಯವರನ್ನು ಹಾಗೂ ಅವರ ಕುಟುಂಬ ವರ್ಗದವರನ್ನು ಎಚ್ಚರಿಸುತ್ತಿದ್ದರು. ಹಾಗೆಯೇ ನಾಲ್ವಡಿಯವರನ್ನು ಸಹಪಾಠಿಗಳೊಡನೆ ಹೋಲಿಕೆ ಮಾಡುತ್ತಾ ಅವರಲ್ಲಿ ಪೈಪೋಟಿ ಮನೋಭಾವನೆಯನ್ನು ಬೆಳೆಸಲು ಪ್ರಯತ್ನಿಸುತ್ತಿದ್ದರು. ನಾಲ್ವಡಿಯವರ ಒಳ್ಳೆಯ ಗುಣಗಳನ್ನು ಹೊಗಳಿ ಪ್ರಶಂಸಿಸುವುದರ ಜೊತೆಗೆ ಅವರಲ್ಲಿ ಮನೆ ಮಾಡಿಕೊಂಡಿದ್ದ ಸಂಪ್ರದಾಯ, ಸಂಸ್ಕಾರಗಳನ್ನು ಗುರುತಿಸಿ ಅವುಗಳಿಗೆ ಧಕ್ಕೆ ಬಾರದ ರೀತಿಯಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಯ ಕೆಲ ಅಂಶಗಳನ್ನೂ ಅವರಲ್ಲಿ ಮೂಡಿಸುವ ಪ್ರಯತ್ನವನ್ನು ಮಾಡಿದರು. ಈ ಹಿನ್ನೆಲೆಯಲ್ಲಿ ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಸಂಸ್ಕೃತಿಗಳ ಸಮನ್ವಯಕರಾಗಿ ಹಾಗೂ ಆಧುನಿಕ ಕಾಲದಲ್ಲಿ ತಮ್ಮ ರಾಜ್ಯವನ್ನು ಮುನ್ನಡೆಸಲು ಬೇಕಾದ ಸಾಮರ್ಥ್ಯವನ್ನು ನಾಲ್ವಡಿಯವರಲ್ಲಿ ಮೂಡಿಸುವಲ್ಲಿ ವಹಿಸಿರುವ ಫ್ರೇಜರ್‌ರವರ ಶ್ರಮದ ನಿಸ್ವಾರ್ಥ ದುಡಿಮೆಯನ್ನು ಇಲ್ಲಿ ಗುರುತಿಸಬಹುದಾಗಿದೆ.

ಮೂರನೆಯದಾಗಿ ದೇಶೀಯ ಸಂಸ್ಥಾನದ ರಾಜರುಗಳನ್ನು ತಮ್ಮ ಹಿತಾಸಕ್ತಿಗೆ, ಕಾಲ ಹಾಗೂ ಸನ್ನಿವೇಶಗಳಿಗೆ ತಕ್ಕ ಹಾಗೆ ರೂಪಿಸುವಲ್ಲಿ ಬ್ರಿಟಿಷ್ ಸಾರ್ವಭೌಮರು ತೋರುತ್ತಿದ್ದ ಆಸಕ್ತಿಯನ್ನು ನಾಲ್ವಡಿಯವರಿಗೆ ನೀಡಿರುವ ಪ್ರೋತ್ಸಾಹದಾಯಕ ಶಿಕ್ಷಣ ಕ್ರಮದಲ್ಲಿ ಗುರುತಿಸಬಹುದಾಗಿದೆ. ದೇಶೀಯ ಆಡಳಿತದ ಕೇಂದ್ರ ಬಿಂದುಗಳಾಗಿರುವ ರಾಜರುಗಳ ನಿಷ್ಠೆ ಬ್ರಿಟಿಷ್ ಸಾರ್ವಭೌಮತ್ವದ ಕಡೆ ಕೇಂದ್ರೀಕೃತವಾಗಿರುವಂತೆಯೂ ಅವರನ್ನು ರೂಪಿಸುವ ಹಿನ್ನೆಲೆಯಲ್ಲಿ ಬ್ರಿಟಿಷ್ ಸಾರ್ವಭೌಮತ್ವದ ಹಾಗೂ ಆಡಳಿತಗಾರರ ಪ್ರಯತ್ನಗಳನ್ನು ಇಲ್ಲಿ ಮನಗಾಣಬಹುದಾಗಿದೆ.

ನಾಲ್ಕನೆಯದಾಗಿ ನಾಲ್ವಡಿಯವರು ಪಡೆದುಕೊಂಡ ಸಮಗ್ರ ಶಿಕ್ಷಣವು ಅವರ ವ್ಯಕ್ತಿತ್ವದ ವಿಕಾಸಕ್ಕೆ ಹಾಗೂ ತಮ್ಮ ಕಾಲದ ಸವಾಲುಗಳನ್ನು ಎದುರಿಸುವುದಕ್ಕೆ ಸರ್ವ ಸಿದ್ಧತೆಯನ್ನು ಮಾಡಿಕೊಟ್ಟಿತು. ಮೈಸೂರು ಸಮಾಜದ

ಪರಿವರ್ತನೆಯ ಹರಿಕಾರರಾಗುವಲ್ಲಿ ನಾಲ್ವಡಿಯವರಿಗೆ ದೊರೆತ ಆ ಶಿಕ್ಷಣ ಅಂದಿನ ಐತಿಹಾಸಿಕ ಸಂದರ್ಭದಲ್ಲಿ ಅತ್ಯಂತ ಅಮೂಲ್ಯವೂ, ವಿಶಿಷ್ಟವೂ ಆಗಿತ್ತೆಂದು ರಾಜ್ಯಭಾರ ಸ್ವೀಕಾರ ಸಮಾರಂಭದ ಸಂದರ್ಭದ ಬಗೆಗೆ ನೀಡಿರುವ ವಿವರಣೆಗಳಿಂದ ತಿಳಿಯಬಹುದಾಗಿದೆ. ಅನುಭವಿ, ಪ್ರತಿಭಾವಂತ ಪಾಶ್ಚಿಮಾತ್ಯ ಆಡಳಿತಗಾರರಾಗಿದ್ದ ಲಾರ್ಡ್ ಕರ್ಜನ್‌ರವರ ಪಾಂಡಿತ್ಯಪೂರ್ಣ ಭಾಷಣಕ್ಕೆ ನಾಲ್ವಡಿಯವರು ನೀಡಿದ ಉತ್ತರವೇ ಅದಕ್ಕೆ ಉತ್ತಮ ಉದಾಹರಣೆ. 18 ವರ್ಷಗಳು ತುಂಬುವವರೆಗೂ ನಾಲ್ವಡಿಯವರು ಶಿಕ್ಷಣದ ಮೂಲಕ ಗಳಿಸಿಕೊಂಡಿದ್ದ, ಬೆಳೆಸಿಕೊಂಡಿದ್ದ ವ್ಯಕ್ತಿತ್ವದ ಪ್ರದರ್ಶನದ ಪರೀಕ್ಷೆ ಜನಸ್ತೋಮದ ಮುಂದೆ ವ್ಯಕ್ತಗೊಂಡಿದ್ದು ಆ ಸಮಾರಂಭದಲ್ಲಿಯೇ. ತಮ್ಮನ್ನಾಳಲು ಸಿದ್ಧಗೊಂಡಿರುವ ನಾಯಕನಲ್ಲಿ ಒಡಮೂಡಿದ್ದ ಪ್ರತಿಭೆ, ಸಾಮರ್ಥ್ಯದ ಪ್ರದರ್ಶನವನ್ನು ಬಹಳ ನಿರೀಕ್ಷೆಯಿಂದ ಕಾಯುತ್ತಿದ್ದ ಮೈಸೂರಿನ ಪ್ರಜೆಗಳಿಗೂ ಹಾಗೂ ಆಡಳಿತಗಾರರಿಗೂ, ಪೋಷಕರಿಗೂ ನಾಲ್ವಡಿಯವರ ಪ್ರಭಾವ ಪೂರಿತ ಮಾತುಗಳು ನಿರಾಸೆಯನ್ನು ಉಂಟುಮಾಡಲಿಲ್ಲ. ಅದಕ್ಕೆ ಬದಲಾಗಿ ಪ್ರಜೆಗಳಿಗೆ ತಾವು ಅನುಭವಿಸುತ್ತಿರುವ ಸೌಖ್ಯಗಳು ಹಾಗೆಯೇ ಮುಂದುವರಿಯುವವು ಎಂಬ ಭರವಸೆಯನ್ನು, ಆಡಳಿತಗಾರರಿಗೆ ಮತ್ತು ಪೋಷಕರಿಗೆ ತಮ್ಮ ಧ್ಯೇಯ, ಗುರಿ ಈಡೇರಿದವೆಂಬ ತೃಪ್ತಿಯನ್ನು ನೀಡುವಂತಹ ರೀತಿಯಲ್ಲಿದ್ದವು. ಆ ಮಾತುಗಳಲ್ಲಿ ನಾಲ್ವಡಿಯವರ, ಅವರ ಪೋಷಕರ, ಗುರುಗಳ, ಹಿತೈಷಿಗಳ ಪರಿಶ್ರಮದ ಯಶಸ್ಸು ವ್ಯಕ್ತಗೊಳ್ಳುತ್ತಿತ್ತು. ಈ ಕುರಿತು ದಿ ಹಿಂದೂ, ದಿ ಮದ್ರಾಸ್ ಮೇಲ್ ಪತ್ರಿಕೆಗಳು ಹೀಗೆ ಬರೆದಿವೆ; ಸಾಮಾನ್ಯವಾದ ಪಠ್ಯವಿಷಯಗಳ ಜೊತೆಗೆ ವ್ಯವಹಾರ ಧರ್ಮಶಾಸ್ತ್ರ, ರೆವೆನ್ಯೂ ನಿಬಂಧನೆಗಳು, ರಾಜ್ಯಾಡಳಿತ ನಿರ್ವಹಣೆ ನಿಯಮಗಳು ಅವರಿಗೆ ಕರತಲಾಮಲಕವಾಗಿದ್ದು, ಅವುಗಳನ್ನು ಕಾರ್ಯರಂಗದಲ್ಲಿ ಅನ್ವಯಿಸಿ ರಾಜ್ಯಭಾರ ಮಾಡುವ ಕೌಶಲ್ಯ ನಾಲ್ವಡಿಯವರ ಮಾತುಗಳಲ್ಲಿದ್ದವು. ಮೈಸೂರು ಸಂಸ್ಥಾನದಲ್ಲಿ, ಭಾರತದ ಇತರ ಪ್ರದೇಶಗಳಲ್ಲಿ ಸಂಚರಿಸಿ ನಡೆಸಿದ್ದ ಪರಿಶೀಲನೆಗಳಿಂದ ಅವರ ಪ್ರತಿಭೆ ಪ್ರೌಢಗೊಂಡಿತ್ತು. ಭರತ ಖಂಡದ ಆಗಿನ ಮತ್ತಾವ ಸಿಂಹಾಸನಾಧಿಕಾರಿಗಳಿಗೂ ಆ ಬಗೆಯ ಉಚ್ಚ ಶಿಕ್ಷಣ ಆ ಕಾಲಕ್ಕೆ ಲಭಿಸಿರಲಿಲ್ಲ[115] ಎಂಬುದಾಗಿ ಪ್ರಶಂಸಿಸಿವೆ. ಹೀಗೆಂದ ಮಾತ್ರಕ್ಕೆ 1902ರ ವೇಳೆಗೆ ಅವರ ಶಿಕ್ಷಣ ಮುಗಿಯಿತೆಂದರ್ಥವಲ್ಲ. 1902 ರಿಂದ 1940 ರವರೆಗೆ ಅವರು ಈ ಹಿಂದೆ ಪಡೆದುಕೊಂಡಿದ್ದ ಶಿಕ್ಷಣದ ಆಧಾರದ ಮೇಲೆ ಮತ್ತಷ್ಟು ಆಳವಾದ ಶಿಕ್ಷಣವನ್ನು ಪಡೆದುಕೊಳ್ಳುತ್ತಾ ಹೋದರು. ಇಂತಹ ಶಿಕ್ಷಣದ ಮತ್ತೊಂದು ಪ್ರಮುಖ ಘಟಕವೆಂದರೆ ಪ್ರವಾಸ. ಇಂಗ್ಲೆಂಡಿನ ಪ್ರಸಿದ್ಧ ಗ್ರಂಥಕರ್ತ ಮತ್ತು ವಿಜ್ಞಾನಿಯಾಗಿದ್ದ ಫ್ರಾನ್ಸಿಸ್ ಬೇಕನ್ ಹೇಳಿರುವಂತೆ "ಪ್ರವಾಸವು ಮನುಷ್ಯನನ್ನು ಪೂರ್ಣ ಪ್ರಮಾಣದ ವ್ಯಕ್ತಿಯನ್ನಾಗಿ ರೂಪಿಸುತ್ತದೆ". ಆದುದರಿಂದ ದೇಶ ವಿದೇಶಗಳ ಪ್ರವಾಸದ ಅನುಭವಗಳಿಂದ

---

*115. **ಪ್ರೆಸ್ ಕಟಿಂಗ್ಸ್** 1(ಎ) ಜುಲೈ, 1902 ಟು ಫೆಬ್ರವರಿ - 1903, 23-7-1902 ಟು 8-2-1902, ಆಗಸ್ಟ್ -11-1902 ರ ದಿ ಹಿಂದೂ, ದಿನಪತ್ರಿಕೆ, ಪು. 13 ಮತ್ತು ಆಗಸ್ಟ್ 8-1902 ಶುಕ್ರವಾರ ದಿ ಮದ್ರಾಸ್ ಮೇಲ್ ದಿನಪತ್ರಿಕೆ, ಪು. 12, ಕರ್ನಾಟಕ ರಾಜ್ಯ ಪ್ರಾಂತೀಯ ಪತ್ರಾಗಾರ ಇಲಾಖೆ, ಮೈಸೂರು.*

ನಾಲ್ವಡಿಯವರು ಹೇಗೆ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು, ಪ್ರತಿಭಾವಿತರಾದರು ಎಂಬುದನ್ನು ಈ ಮುಂದೆ ಪರಿಶೀಲಿಸೋಣ.

### *ii) ಪ್ರವಾಸ*

ನಾಲ್ವಡಿಯವರು ಕೈಗೊಂಡ ಪ್ರವಾಸಗಳನ್ನು ಮೂರು ವರ್ಗಗಳಾಗಿ ವಿಂಗಡಿಸಬಹುದು. ಅವುಗಳೆಂದರೆ;

i) ದೇಶೀಯ ಪ್ರವಾಸಗಳು; ವಿದ್ಯಾರ್ಥಿ ದಿಸೆಯಲ್ಲಿ

ii) ಧಾರ್ಮಿಕ ಪ್ರವಾಸಗಳು ; ರಾಜನಾಗಿ - ಧರ್ಮಾಭಿಮಾನಿಯಾಗಿ

iii) ವಿದೇಶಿ ಪ್ರವಾಸಗಳು; ಮೈಸೂರು ಸಂಸ್ಥಾನದ ಪ್ರತಿನಿಧಿಯಾಗಿ.

***ದೇಶೀಯ ಪ್ರವಾಸಗಳು ; ವಿದ್ಯಾರ್ಥಿ ದೆಸೆಯಲ್ಲಿ:*** ನಾಲ್ವಡಿಯವರ ತಂದೆಯವರಾದ 10ನೇ ಚಾಮರಾಜ ಒಡೆಯರವರು ಬದುಕಿದ್ದಾಗ 1893ರಲ್ಲಿ ಮುಂಬೈ ನಗರಕ್ಕೆ ನಾಲ್ವಡಿಯವರನ್ನೊಳಗೊಂಡಂತೆ ರಾಜ ಪರಿವಾರವೆಲ್ಲಾ ಪ್ರಯಾಣವನ್ನು ಕೈಗೊಂಡಿತು. ಈ ಪ್ರವಾಸದ ಉದ್ದೇಶ ನಾಲ್ವಡಿಯವರಿಗೆ ಹಾಗೂ ಕುಟುಂಬದ ಇತರರಿಗೆ ಮತ್ತು ಅವರ ಸಹಪಾಠಿಗಳಿಗೆ 'ಅನುವವನ್ನು ಹೆಚ್ಚಿಸುವ' ಉದ್ದೇಶವನ್ನು ಹೊಂದಿದ್ದುದಾಗಿತ್ತು[116]. ಆ ಪ್ರಕಾರ ನಾಲ್ವಡಿಯವರ ತಂದೆಯವರು ಎರಡು ತಿಂಗಳ ಕಾಲ ಕುಟುಂಬದೊಡನೆ ಮುಂಬೈ ನಗರದಲ್ಲಿದ್ದರು. ಆಗಿನ ಮುಂಬೈ ನಗರದ ಗವರ್ನರ್ ಉತ್ಸಾಹದಿಂದ ಇವರಿಗೆ ಬೇಕಾದ ಎಲ್ಲಾ ಏರ್ಪಾಡುಗಳನ್ನು ಮಾಡಿದ್ದರು. ಅವರು ಮುಂಬೈನಲ್ಲಿ ಆ ಕಾಲಕ್ಕೆ ನೋಡತಕ್ಕ ಸ್ಥಳಗಳನ್ನೆಲ್ಲಾ ನೋಡಿದರು. ಪ್ರವಾಸದ ಕಾಲದಲ್ಲಿ ಯುವರಾಜರು ನಗರದಲ್ಲಿ ಸಾಮಾನ್ಯರಂತೆ ವರ್ತಿಸಿ, ತಮ್ಮ ಸೌಜನ್ಯ ಮತ್ತು ಸರಳತೆಗಳಿಂದ ಅಲ್ಲಿನ ನಿವಾಸಿಗಳಿಗೆ ಆಶ್ಚರ್ಯವನ್ನುಂಟು ಮಾಡಿದರು[117]. ಈ ಪ್ರವಾಸದಲ್ಲಿ ನಾಲ್ವಡಿಯವರಿಗೆ ಸಮುದ್ರದ ಹಾಗೂ ದೋಣಿಯ ಪರಿಚಯವಾಯಿತು[118].

1894ರ ಡಿಸೆಂಬರ್‌ನಲ್ಲಿ ನಾಲ್ವಡಿಯವರು ತಮ್ಮ ತಂದೆ ಹಾಗೂ ಪರಿವಾರದವರೊಡನೆ ಕಲ್ಕತ್ತಾಕ್ಕೆ ಪ್ರವಾಸ ಮಾಡಿದರು. ಪ್ರವಾಸದಲ್ಲಿ ಅವರ ತಂದೆಯವರು ಮಕ್ಕಳಿಗೆ ದಾರಿಯುದ್ದಕ್ಕೂ ಪ್ರಕೃತಿ ದೃಶ್ಯಗಳ ಸೊಬಗನ್ನು ತೋರಿಸಿ ವಿವರಿಸುತ್ತಿದ್ದರು. ನರ್ಮದಾ ನದಿಯ ತೀರದಲ್ಲಿ ಬಿಡಾರ ಹೂಡಿಸಿ ಅಲ್ಲಿನ ಅಮೃತಶಿಲೆ ಬಂಡೆಗಳ ಮಧ್ಯದಲ್ಲಿ ತೀರಾ ಆಳದಲ್ಲಿ ಕಂಗೊಳಿಸುತ್ತಿದ್ದ ನರ್ಮದಾ ನದಿಯ ಸೊಬಗನ್ನು ಹಾಗೂ ಅಲ್ಲಿರುವ ಸಣ್ಣ ಜಲಪಾತದ

---

*116. **ವೆಂಕಟರಾಮಯ್ಯ ಸಿ.ಕೆ.**, ಪೂರ್ವೋಕ್ತ, ಪು. 39*

*117. **ಲಿಂಗಣ್ಣಯ್ಯ ಓ.ಎನ್.**, ರಾಜರ್ಷಿ, ಬೆಂಗಳೂರು, 1950, ಪು. 12*

*118. **ವೆಂಕಟರಾಮಯ್ಯ ಸಿ.ಕೆ.**, ಪೂರ್ವೋಕ್ತ, ಪು. 110*

ಸೌಂದರ್ಯವನ್ನು, ಸೂರ್ಯಾಸ್ತ ಸಮಯದ ದೃಶ್ಯವನ್ನು ಮಕ್ಕಳಿಗೆ ತೋರಿಸಿ ಅವುಗಳ ಬಗ್ಗೆ ವಿವರಣೆ ನೀಡಿದರು. ಆ ಪ್ರವಾಸದ ಸಂದರ್ಭದಲ್ಲಿ ಪುಣೆ, ಜಬ್ಬಲ್‌ಪುರ, ಪ್ರಯಾಗ ಮೊದಲಾದ ಸ್ಥಳಗಳನ್ನು ನೋಡಿಕೊಂಡು ನಂತರ ಕಲ್ಕತ್ತಾ ನಗರವನ್ನು ತಲುಪಿದರು. ಕಲ್ಕತ್ತಾದಲ್ಲಿ 'ಪಿಯಾಲ್ಡಾ' ಎಂಬ ಹೋಟಲಿನಲ್ಲಿ ಉಳಿದಿದ್ದರು. ಆ ಕಾಲಕ್ಕೆ ಕಲ್ಕತ್ತಾ ಬ್ರಿಟಿಷ್ ವಸಾಹತು ಸಾಮ್ರಾಜ್ಯದ ರಾಜಧಾನಿಯಾಗಿದ್ದು ಅಲ್ಲಿ ಅವರು ವೈಸ್ರಾಯಿ ಲಾರ್ಡ್ ಎಲ್ಗಿನ್‌ರವರನ್ನು ಭೇಟಿ ಮಾಡಿದರು. ಈ ಭೇಟಿ ನಾಲ್ವಡಿಯವರಿಗೆ ಬಹಳ ಪ್ರಮುಖವಾಗಿತ್ತು. ನಂತರ ಅಲ್ಲಿಯ ಅನೇಕ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದರು. ಆ ನಗರದಲ್ಲಿ ನಡೆಯುತ್ತಿದ್ದ ಅಖಿಲ ಭಾರತೀಯ ವೈದ್ಯರ ಸಮ್ಮೇಳನದಲ್ಲಿಯೂ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲೇ ತಂದೆಯವರ ಆರೋಗ್ಯ ಕೆಟ್ಟು ಈ ನಗರದಲ್ಲೇ ಅವರು ಮರಣ ಹೊಂದಿದರು. ನಾಲ್ವಡಿಯವರ ಜೀವನದಲ್ಲಿ ಇದೊಂದು ದುರಂತದ ಘಟನೆಯಾಗಿತ್ತು. ಆದಾಗ್ಯೂ ತಮ್ಮ ಧೈರ್ಯವನ್ನು ಕಳೆದುಕೊಂಡಿರಲಿಲ್ಲವೆಂದು, ಆ ವೇಳೆಗೆ ಕೇವಲ 10 ವರ್ಷ ತುಂಬಿದ್ದ ನಾಲ್ವಡಿಯವರು ಆತ್ಮ ವಿಶ್ವಾಸದ ಮಾತುಗಳನ್ನಾಡಿದರೆಂಬುದಾಗಿ ಅಲ್ಲಿ ಹಾಜರಿದ್ದ ಅನೇಕರು ದಾಖಲಿಸಿದ್ದಾರೆ[119]. ಇವು ನಾಲ್ವಡಿಯವರಿಗೆ ಬಾಲ್ಯಾವಸ್ಥೆಯಲ್ಲಿ ಕುಟುಂಬ ವರ್ಗದವರಿಂದ ಪ್ರವಾಸಗಳ ಅನುಭವದ ಮೂಲಕ ಪರಿಚಯಿಸಲ್ಪಟ್ಟ ವಿಷಯಗಳಾಗಿದ್ದವು.

ತಂದೆಯವರ ಮರಣಾ ನಂತರ ಮೈಸೂರು ಸಂಸ್ಥಾನದ ವಾರಸುದಾರರಾಗಿ ಅಧಿಕಾರವನ್ನು ಸ್ವೀಕರಿಸಿದ ತರುವಾಯ ನಾಲ್ವಡಿಯವರು 1898 ರ ನವೆಂಬರ್‌ನಲ್ಲಿ ಸಂಸ್ಥಾನದ ಕೆಲವು ಕಡೆ ಪ್ರವಾಸ ಮಾಡಿದರು. ಈ ಪ್ರವಾಸದ ಕಾರ್ಯಕ್ರಮಗಳನ್ನು ಅವರ ಯೂರೋಪಿನ ಗುರುಗಳಾಗಿದ್ದ ಎಸ್. ಎಂ. ಫ್ರೇಜರ್‌ರವರು ನಿಯೋಜಿಸಿದ್ದರು ಹಾಗೂ ಪ್ರವಾಸದ ಸಂಪೂರ್ಣ ಖರ್ಚು ವೆಚ್ಚದ ಲೆಕ್ಕಾಚಾರವನ್ನು ತಾವೇ ನಿರ್ವಹಿಸುತ್ತಿದ್ದು ಅದರ ಬಗೆಗಿನ ಪೂರ್ಣ ಮಾಹಿತಿಯನ್ನು ನಾಲ್ವಡಿಯವರಿಗೆ ವಿವರಿಸುತ್ತಿದ್ದರು. ಫ್ರೇಜರ್‌ರವರ ದೃಷ್ಟಿಯಲ್ಲಿ ಈ ಪ್ರವಾಸಕ್ಕೆ ಎರಡು ಉದ್ದೇಶಗಳಿದ್ದವು.

i) ಮೈಸೂರು ಸಂಸ್ಥಾನದ ಪ್ರಕೃತಿ ಸೌಂದರ್ಯವನ್ನು ಪರಿಚಯ ಮಾಡಿಕೊಡುವುದು.

ii) ಮೈಸೂರು ಸಂಸ್ಥಾನದ ಶಿಲ್ಪಕಲೆಗಳ ಸೌಂದರ್ಯವನ್ನು ಅರಿತುಕೊಳ್ಳುವುದು.

ಎಂದಿನಂತೆ ನಾಲ್ವಡಿಯವರು ಈ ಪ್ರವಾಸಕ್ಕೆ ತಮ್ಮ ಸಹಪಾಠಿಗಳೊಡನೆ ಹೋಗಿದ್ದರು. ಶಿವಮೊಗ್ಗ, ಕಡೂರು ಮತ್ತು ಹಾಸನ ಜಿಲ್ಲೆಗಳಿಗೆ ಭೇಟಿ ಕೊಟ್ಟರು. ಶಿವಮೊಗ್ಗ ಜಿಲ್ಲೆಯಲ್ಲಿ ಜೋಗದ ಜಲಪಾತದ ಅದ್ಭುತ

---

*119. ವೆಂಕಟರಾಮಯ್ಯ ಸಿ.ಕೆ., ಶ್ರೀ ಮಮ್ಮಡಿ ಕೃಷ್ಣರಾಜ ಒಡೆಯರವರ ಜೀವನ ಚರಿತ್ರೆ, ಪೂರ್ವೋಕ್ತ, ಪು. 24*

ಸೌಂದರ್ಯವನ್ನು ನೋಡಿ ಹರ್ಷಿಸಿದರು. ಇದರ ಜೊತೆಗೆ ಸಾಗರ, ಕೊಡಚಾದ್ರಿ, ತೀರ್ಥಹಳ್ಳಿ, ಚಿಕ್ಕಮಗಳೂರು, ಬಾಬಾಬುಡನ್‌ಗಿರಿ, ಬೇಲೂರು, ಹಳೇಬೀಡು ಹಾಗೂ ಪೂನಾದ ಮಸ್ಸೂರ್ ಇವೇ ಮುಂತಾದ ಸ್ಥಳಗಳಿಗೆ ಭೇಟಿ ಕೊಟ್ಟರು[120].

ಈ ಪ್ರವಾಸದಲ್ಲಿ ನಾಲ್ವಡಿಯವರು ಆದಿಶಂಕರಾಚಾರ್ಯರು ಎಂಟನೇ ಶತಮಾನದಲ್ಲಿ ಸ್ಥಾಪಿಸಿದ್ದ ಅದ್ವೈತ ಪೀಠ ಕೇಂದ್ರವಾಗಿದ್ದ ಶೃಂಗೇರಿಗೆ ಭೇಟಿ ಕೊಟ್ಟಿದ್ದು, ಅವರ ಧಾರ್ಮಿಕ ಸಾಂಸ್ಕೃತಿಕ ಶಿಕ್ಷಣದ ಇತಿಹಾಸದಲ್ಲಿ ಒಂದು ಪ್ರಮುಖ ಘಟ್ಟವೆಂದೇ ಹೇಳಬಹುದು. 1898ರ ಡಿಸೆಂಬರ್ 7 ರಂದು ನಾಲ್ವಡಿಯವರು ಶೃಂಗೇರಿಗೆ ಬಂದು ತಲುಪಿದರು[121]. ಅಲ್ಲಿನ ದೇವಾಲಯ ಅವರ ಮನಸ್ಸನ್ನು ಮುದಗೊಳಿಸಿತು. ಈ ದೇವಾಲಯವನ್ನು ಮಠದ ಪರಂಪರೆಯಲ್ಲಿ ಬರುವ ವಿದ್ಯಾರಣ್ಯ ಜಗದ್ಗುರುಗಳು ನಿರ್ಮಿಸಿದ್ದರು. ಈ ದೇವಾಲಯದ ಹನ್ನೆರಡು ಶಿಲಾಸ್ತಂಭಗಳಲ್ಲಿ ಒಂದೊಂದರ ಮೇಲೆ ಒಂದೊಂದು ಸಂಕ್ರಮಣ ಕಾಲದಲ್ಲಿ ಸೂರ್ಯನ ಕಿರಣ ಬೀಳುವಂತಿರುವ ಶಿಲ್ಪ ರಚನಾ ಕೌಶಲ್ಯವನ್ನು ನೋಡಿ ನಾಲ್ವಡಿಯವರು ಹರ್ಷಿಸಿದರು[122]. ಶೃಂಗೇರಿ ಮಠದ ಸಂಪ್ರದಾಯಕ್ಕನುಸಾರವಾಗಿ ಮಠದ ಅಧಿಕಾರಿಗಳು ನಾಲ್ವಡಿಯವರಿಗೆ ಮರ್ಯಾದೆಗಳನ್ನು ಮಾಡಿದರು. ತುಂಗಾ ನದಿಯನ್ನು ದಾಟಿ ನರಸಿಂಹ ತಪೋವನಕ್ಕೆ ಭೇಟಿ ಕೊಟ್ಟರು. ಇಲ್ಲಿ ಪೀಠಸ್ಥರಾಗಿದ್ದ ಜಗದ್ಗುರುಗಳನ್ನು ಎಲ್ಲರಿಗೂ ಉಪದೇಶ ಮಾಡಿದರು. ನಾಲ್ವಡಿಯವರು ಶೃಂಗೇರಿ ಪರಿಸರದಿಂದ ಬಿಡಿಸಿಕೊಂಡು ಬರಲುತುಂಬಾ ಕಷ್ಟವಾಗುತ್ತಿದೆ ಎಂದು ಅಭಿಪ್ರಾಯವನ್ನು ಸೂಚಿಸಿದರು[123].

ಶೃಂಗೇರಿಯ ಜಗದ್ಗುರುಗಳು ಎದುರಿನಲ್ಲಿ ನಡೆದ ಒಂದು ಸ್ವಾರಸ್ಯಕರ ಸಂಭಾಷಣೆಯನ್ನು ಇಲ್ಲಿ ದಾಖಲಿಸಬಹುದು. ಅದು ಇಂತಿದೆ;

***ನಾಲ್ವಡಿಯವರು*** : "ಮನಸ್ಸೆಲ್ಲಾ ಇಲ್ಲೇ ಇದೆ. ಇಲ್ಲಿಂದ ಹೋಗಲಾರದೆ ಕಳವಳವಾಗುತ್ತಿದೆ".

***ಜಗದ್ಗುರುಗಳು*** : "ಇಲ್ಲಿಯೇ ಈ ದಿನ ನಿಲ್ಲುವುದಾಗಿ ಫ್ರೇಜರ್ ಸಾಹೇಬರಿಗೆ ಹೇಳಿ ಬಿಡಬಹುದಲ್ಲವೇ?

"ಮಹಾರಾಜರು ಆಜ್ಞೆ ಮಾಡಿದರೆ ಅದೇನು ಅಸಾಧ್ಯವಲ್ಲವಷ್ಟೇ! ಮೇಲಾಗಿ ನಮಗೂ ಅಮಿತವಾದ ಸಂತೋಷ ಉಂಟಾಗುತ್ತದೆ".

---

*120. **ಸೀರಿಯಲ್ ನಂ. 8, ಫೈಲ್ ನಂ. 2 ಆಫ್ 1898, 1899,** ಪ್ರವಿನ್ಷಿಯಲ್ ಟೂರ್ ಆಫ್ ಹೆಚ್.ಹೆಚ್. ದಿ ಮಹಾರಾಜ ಇನ್ 1898-99, ಪ್ರಾಂತೀಯ ಪತ್ರಾಗಾರ ಇಲಾಖೆ, ಮೈಸೂರು, ಪು.1*

*121. **ಶ್ರೀಕಂಠಶಾಸ್ತ್ರಿ,** ಪೂರ್ವೋಕ್ತ, ಪು. 143*

*122. **ಫೈಲ್ ನಂ. ; ಆರ್/2(8/64), ನಂ. 137 ಆಫ್ 1901,** ಪೂರ್ವೋಕ್ತ, ಐ.ಓ.ಎಲ್. ಲಂಡನ್, ಪು. 2.*

*123.. **ಶ್ರೀಕಂಠಶಾಸ್ತ್ರಿ,** ಪೂರ್ವೋಕ್ತ, ಪು. 146-147*

**ನಾಲ್ವಡಿಯವರು** : "ಅವರು (ಫ್ರೇಜರ್‌ರವರು) ನಮ್ಮ ವಿದ್ಯಾಗುರುಗಳು ನಾನು ಈ ದಿನ ಇಲ್ಲಿ ನಿಲ್ಲುವುದಾಗಿ ಹೇಳುವುದು ಧರ್ಮವಲ್ಲ. ಅದನ್ನು ನಾನು ವಿಜ್ಞಾಪಿಸಬೇಕಾದದ್ದೇ ಅಲ್ಲ. ಅವರು ಅನುಜ್ಞೆ ಕೊಟ್ಟರೆ ಆಗಬಹುದೇ ಹೊರತು ಅನ್ಯತಾ ಕೂಡದು".

ಇದನ್ನು ಕೇಳಿ ಶೃಂಗೇರಿ ಜಗದ್ಗುರುಗಳು ಆಶ್ಚರ್ಯಚಕಿತರಾದರು. ತಾವೇ ಫ್ರೇಜರ್‌ರವರಿಗೆ ಹೇಳಿ ಅಂದಿನ ಪ್ರಯಾಣವನ್ನು ನಿಲ್ಲಿಸಿದರು. ಸ್ವಾರಸ್ಯದ ಸಂಗತಿ ಎಂದರೆ ನಾಲ್ವಡಿಯವರು ಈ ಸಂಭಾಷಣೆಯನ್ನು ಜಗದ್ಗುರುಗಳೊಡನೆ ನಡೆಸುತ್ತಿದ್ದ ಸಮಯದಲ್ಲಿ ಗುರುಗಳಾದ ಫ್ರೇಜರ್‌ರವರು ಅಲ್ಲಿರಲಿಲ್ಲವೆಂಬುದು ಗಮನಾರ್ಹವಾದ ಸಂಗತಿ. ಅನಂತರ ಜಗದ್ಗುರುಗಳೇ ಫ್ರೇಜರ್‌ರವರಿಗೆ ಈ ವಿಷಯವನ್ನು ತಿಳಿಸಿದರು[124]. ಇಲ್ಲಿ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಒಂದನೆಯದಾಗಿ 1898ರಲ್ಲಿ ನಾಲ್ವಡಿಯವರು ಕೇವಲ ಹದಿನಾಲ್ಕು ವರ್ಷದವರಾಗಿದ್ದಾಗಿನ ಅವರ ಮನಸ್ಸು ಮತ್ತು ಸಾಂಸ್ಕೃತಿಕ ವೈಶಾಲ್ಯತೆಯನ್ನು ಇದು ತೋರಿಸುತ್ತದೆ. ಇದು ಶಿಕ್ಷಣದಿಂದ, ಸಂಸ್ಕಾರದಿಂದ ಹಾಗೂ ಪ್ರವಾಸದಿಂದ ವಿಕಾಸಗೊಂಡದ್ದು. ಎರಡನೆಯದಾಗಿ ಯೂರೋಪಿಯನ್ ಗುರುಗಳಾಗಿದ್ದ ಫ್ರೇಜರ್‌ರವರು ಪರಿವರ್ತನೆಗೆ ಅಳವಡಿಸಿಕೊಳ್ಳಬೇಕಾದ ಐತಿಹಾಸಿಕವಾದ ಮತ್ತು ಅನಿವಾರ್ಯವಾದ ಒತ್ತಡಗಳನ್ನು ಗ್ರಹಿಸಿ, ಆ ಸಮಾಜದ ಮುಖಂಡರಾಗಿ ಸಾಮಾಜಿಕ ಪರಿವರ್ತನೆಯನ್ನು ಹದವಾಗಿ ಮುನ್ನಡೆಸುವ ಜವಾಬ್ದಾರಿಯನ್ನು ಹೊತ್ತ ಬಾಲಕ ನಾಲ್ವಡಿಯವರಿಗೆ ಸೂಕ್ತವಾದ ಮಾರ್ಗದರ್ಶನವನ್ನು ಹೇಗೆ ನೀಡುತ್ತಿದ್ದರೆಂಬುದು ಈ ಪ್ರವಾಸದ ಅನುಭವದಿಂದ ಗೊತ್ತಾಗುತ್ತದೆ. ಮೂರನೆಯದಾಗಿ ನಾಲ್ವಡಿಯವರು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡಿದ್ದ ಗುರುಭಕ್ತಿ ಈ ಪ್ರವಾಸದಲ್ಲಿ ಪ್ರಕಟವಾಯಿತು. ಇಲ್ಲಿ ನಾವು ಗುರುತಿಸಬೇಕಾದದ್ದು ಅವರ ವಿದ್ಯಾಗುರುಗಳು ಪಾಶ್ಚಿಮಾತ್ಯರು ಎಂಬುದು. ನಾಲ್ಕನೆಯದಾಗಿ ಈ ಪ್ರವಾಸದಲ್ಲಿ ತಮ್ಮ ಆಡಳಿತಕ್ಕೆ ಒಳಪಟ್ಟಿದ್ದ ಮೈಸೂರು ಸಂಸ್ಥಾನದ ಪ್ರಕೃತಿ ಸೌಂದರ್ಯ ಮತ್ತು ಕಲಾ ಭಂಡಾರಗಳ ಪರಿಚಯವನ್ನು ನಾಲ್ವಡಿಯವರು ಮಾಡಿಕೊಂಡರು. ಸೌಂದರ್ಯೋಪಾಸನೆ ಎಲ್ಲರಿಗೂ ಅಗತ್ಯ. ಅದು ಹೃದಯದ ವೈಶಾಲ್ಯತೆಯನ್ನು ಹೆಚ್ಚಿಸುತ್ತದೆ. ಸೌಂದರ್ಯ ಆಸ್ವಾದನೆಯು ಸಂಸ್ಕೃತಿಯ ಒಂದು ಅಂಗ. ಅದರಲ್ಲೂ ಸ್ವದೇಶೀ ಭಾವನೆ, ಪ್ರಕೃತಿ ಮತ್ತು ಶಿಲ್ಪಕಲಾ ಸೌಂದರ್ಯಗಳು ಅವರ ಮನಸ್ಸನ್ನು ಸೆರೆ ಹಿಡಿದು ಮುಂದೆ ಅವರು ಸಾಂಸ್ಕೃತಿಕ ಪೋಷಕರಾಗಿ ಬೆಳೆಯಲು ಸಹಾಯ ಮಾಡಿತು.

---

*124. **ವೆಂಕಟರಾಮಯ್ಯ ಸಿ.ಕೆ.**, ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 121*

ಫ್ರೇಜರ್‌ರವರು 1898ರ ಜನವರಿ 22 ರಂದು ನಾಲ್ವಡಿಯವರನ್ನೊಳಗೊಂಡಂತೆ ಅನೇಕರನ್ನು ಪೂನಾದ ಮಸೂರ್‌ಗೆ ಕರೆದುಕೊಂಡು ಹೋದರು. ಪೂರ್ಣ ಸೂರ್ಯಗ್ರಹಣವನ್ನು ಪ್ರಾತ್ಯಕ್ಷಿಕವಾಗಿ ವೀಕ್ಷಿಸುವುದು ಈ ಪ್ರವಾಸದ ಮೂಲ ಉದ್ದೇಶವಾಗಿತ್ತು[125]. ರಾಹುಕೇತು ಸೂರ್ಯನನ್ನು ನುಂಗುತ್ತವೆಯಾದ್ದರಿಂದ ಸೂರ್ಯಗ್ರಹಣ ಸಂಭವಿಸುತ್ತದೆ ಎಂಬುದು ಅಂದಿನ ಸಾಂಪ್ರದಾಯಿಕ ತಿಳುವಳಿಕೆಯಾಗಿತ್ತು. ಹಾಗಾಗಿ ಗ್ರಹಣವನ್ನು ಕುರಿತಂತೆ ಆಧುನಿಕ ವಿಜ್ಞಾನವು ಸೂರ್ಯಕೇಂದ್ರ ಸಿದ್ಧಾಂತವನ್ನಾಧರಿಸಿ ಗ್ರಹಗಳ, ಉಪಗ್ರಹಗಳ ಚಲನೆ ಮತ್ತು ನಕ್ಷತ್ರದ ಸ್ಥಾನವು ಸೂರ್ಯಗ್ರಹಣಕ್ಕೆ ಕಾರಣವೆಂಬ ಅಂಶವನ್ನು ಪ್ರಾತ್ಯಕ್ಷಿಕವಾಗಿ ತೋರಿಸಿ ವಿವರಿಸಲಾಯಿತು ಎಂಬುದಾಗಿ ಪೂರ್ಣ ಸೂರ್ಯಗ್ರಹಣವನ್ನು ವಿವರಿಸಲು ಹೋಗಿದ್ದ ಸೈನ್ಸ್ ಅಸಿಸ್ಟೆಂಟ್ ವೆಂಕಟನಾರಯಣಪ್ಪ ತಿಳಿಸಿದ್ದಾರೆ. ಅವರು "ಆ ತಂಡದಲ್ಲಿ ನಾನೂ ಒಬ್ಬನಾಗಿದ್ದೆ. ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಭೌತಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಡಾ. ಜೆ. ಕುಕ್‌ರವರ ಅಸಿಸ್ಟೆಂಟ್ ಆಗಿದ್ದೆ. ನಾಲ್ವಡಿ ಮತ್ತು ತಂಡಕ್ಕೆ ಸೂರ್ಯಗ್ರಹಣವನ್ನು ಟೆಲಿಸ್ಕೋಪ್ ಮೂಲಕ ತೋರಿಸಿ, ಅಲ್ಲಿ ನಡೆಯುವ ಬದಲಾವಣೆಗಳನ್ನು ವಿವರಿಸಲು ನನನ್ನು ನಿಯೋಜಿಸಿಕೊಂಡಿದ್ದರು"[126] ಎಂಬುದಾಗಿ "ಎ ಲೋಡೆಸ್ಟಾರ್ ಆಫ್ ದಿ ಫ್ರಿನ್ಸಿಲಿ ಆರ್ಡರ್" ಎಂಬ ಲೇಖನದಲ್ಲಿ ವೆಂಕಟನಾರಾಯಣಪ್ಪ ಬರೆದಿದ್ದಾರೆ. (ಅನುಬಂಧ -IVರಲ್ಲಿ ಸೂರ್ಯಗ್ರಹಣವನ್ನು ವೀಕ್ಷಿಸಲು ಕುಳಿತಿರುವ ನಾಲ್ವಡಿ ಮತ್ತು ತಂಡದವರ ಚಿತ್ರವನ್ನ ನೋಡಬಹುದು) ಇಂತಹ ಪ್ರಾಯೋಗಿಕ ಅಧ್ಯಯನಗಳ ಮೂಲಕ ನಾಲ್ವಡಿಯವರಲ್ಲಿ ಆಧುನಿಕ, ವೈಚಾರಿಕ ಅಂಶಗಳನ್ನು ಬೆಳೆಸಲು ಫ್ರೇಜರ್‌ರವರು ಪ್ರಯತ್ನಿಸುತ್ತಿದ್ದರು. ಆದರೆ ನಾಲ್ವಡಿಯವರು ಆಧುನಿಕ ವಿಚಾರಧಾರೆಗಳನ್ನು ತಿಳಿದುಕೊಳ್ಳುತ್ತಿದ್ದರಾದರೂ ಕೆಲವು ಸಾಂಪ್ರದಾಯಿಕ ಆಚರಣೆಗಳನ್ನು ಬಿಡುತ್ತಿರಲಿಲ್ಲ. ಗ್ರಹಣಗಳಾದ ಸಂದರ್ಭದಲ್ಲಿ ನಡೆಸಬೇಕಾದ ಆಚರಣೆಗಳನ್ನು ಚಾಚೂತಪ್ಪದೇ ಶ್ರದ್ಧಾಪೂರ್ವಕವಾಗಿಯೇ ನಡೆಸುತ್ತಿದ್ದರು. ಹೀಗೆ ಆಧುನಿಕ, ವೈಜ್ಞಾನಿಕ ಜ್ಞಾನವು ಅವರನ್ನು ಪ್ರವೇಶಿಸುತ್ತಿದ್ದರೂ ಸಂಪ್ರದಾಯದ ಆಚರಣೆಗಳು ಅವರಲ್ಲಿ ಉಳಿದುಕೊಂಡೇ ಬರುತ್ತಿದ್ದವು. ಇದರ ಆಧಾರದ ಮೇಲೆಯೇ ನಾವು ಸಂಪ್ರದಾಯವು ಜನರೂಢಿಯಲ್ಲಿರುವ ವಿಶಿಷ್ಟವಾದ ಆಚರಣೆ, ಅದರ ಬೇರುಗಳು ಜನಾಂಗದ ರಕ್ತ ರಕ್ತದಲ್ಲೂ ಸೇರಿ ಹೋಗಿರುತ್ತದೆ, ಜನರು ಧರ್ಮವನ್ನು ಮರೆತರೂ ಸಂಪ್ರದಾಯವನ್ನು ಮರೆಯಲಾರರು ಎಂಬುದಾಗಿ ಮೊದಲ ಅಧ್ಯಾಯದಲ್ಲಿ ವಿವರಿಸಿರುವುದು. ಆಧುನಿಕ ಶಿಕ್ಷಣದ ಅಂಶಗಳನ್ನು ತಿರಸ್ಕರಿಸದೇ, ಸಂಪ್ರದಾಯವನ್ನು ಬಿಡದೇ ನಾಲ್ವಡಿಯವರು ಅವುಗಳ ಸಮನ್ವಯಕರಂತೆ ಕಾಣಿಸಿಕೊಳ್ಳುತ್ತಿದ್ದರು. ಈ ಕುರಿತು ಎಸ್. ಎಂ. ಫ್ರೇಜರ್‌ರವರು ತಮ್ಮ ವರದಿಯಲ್ಲಿ "ಇಡೀ ಕುಟುಂಬದಲ್ಲಿ ಧಾರ್ಮಿಕವಾಗಿ ಅತ್ಯಂತ ಸಂಪ್ರದಾಯವಾದಿಗಳಾಗಿ ಬೆಳೆದಿರುವ

---

*125. ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 184*

*126. ಅದೇ., ಪು. 255*

ನಾಲ್ವಡಿಯವರು ಜಾತಿ ವ್ಯವಸ್ಥೆಯನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದವರಾಗಿದ್ದರು ಮತ್ತು ತಮ್ಮ ವೈಯಕ್ತಿಕ ಅನುಕೂಲಕ್ಕಾಗಿ ಹಿಂದಿನ ನಡಾವಳಿ ಮತ್ತು ಧಾರ್ಮಿಕ ಆಚರಣೆಗಳಿಂದ ಉದ್ಭವಿಸಬಹುದಾದ ಪ್ರಶ್ನೆಗಳಿಗೆ ತಮ್ಮ ಮನಸ್ಸಾಕ್ಷಿಯಂತೆ ನಡೆದುಕೊಳ್ಳುತ್ತಿದ್ದರು. ಅಪರೂಪವಾದ ಇಂತಹ ಸಂಪ್ರದಾಯದ ವ್ಯಕ್ತಿತ್ವವು ಅವರಲ್ಲಿದ್ದು ಆಧುನಿಕ ಶಿಕ್ಷಣವನ್ನು ಉಳಿಸಿಕೊಳ್ಳುವಂತಹ ಮತ್ತು ಸಂಪ್ರದಾಯವನ್ನು (ಹಳೆಯದನ್ನು) ರಕ್ಷಿಸಿಕೊಳ್ಳುವಂತಹ ಬಹುಮುಖ್ಯವಾದ ಗುಣಗಳನ್ನು ಅವರು ಹೊಂದಿದ್ದರು"[127] ಎಂಬುದಾಗಿ ಬರೆದಿದ್ದಾರೆ. ನಾಲ್ವಡಿಯವರ ವ್ಯಕ್ತಿತ್ವವನ್ನು ಕುರಿತಾದ ಈ ಹೇಳಿಕೆಗಳು ನಮ್ಮ ಈ ಅಧ್ಯಾಯದ ಮೂಲ ಪರಿಕಲ್ಪನೆಗೆ ಉತ್ತಮ ಉದಾಹರಣೆಯಾಗಿದೆ.

1900 ರ ಜನವರಿಯಲ್ಲಿ ನಾಲ್ವಡಿಯವರು ತಮ್ಮ ಅಧ್ಯಾಪಕರು ಹಾಗೂ ಸಹಪಾಠಿಗಳೊಂದಿಗೆ ಉತ್ತರ ಭಾರತದಲ್ಲಿ ಪ್ರವಾಸ ಮಾಡಿದರು. ಈ ಪ್ರವಾಸದ ಕಾಲದಲ್ಲಿ ಅವರು ಹಿಂದೂಗಳಿಗೆ ಪವಿತ್ರ ಯಾತ್ರಾಸ್ಥಳವಾದ ಕಾಶಿ ಅಥವಾ ಬನಾರಸ್ ಅಥವಾ ವಾರಣಾಸಿಗೆ ಭೇಟಿಕೊಟ್ಟರು. ಕಲ್ಕತ್ತಾದಿಂದ ಡಾರ್ಜಲಿಂಗ್‌ಗೆ ಹೋಗಿ ಮೊಟ್ಟ ಮೊದಲ ಬಾರಿಗೆ ಹಿಮಾಲಯ ಪರ್ವತ ಶ್ರೇಣಿಯನ್ನು ನೋಡಿದರು. ಆಗ್ರಾದಲ್ಲಿ ತಾಜ್‌ಮಹಲ್ ಕಟ್ಟಡವನ್ನು ಹಾಗೂ ಶ್ರೀಕೃಷ್ಣನ ಬಾಲ್ಯ ಜೀವನದ ಸ್ಥಳವಾದ ಗೋಕುಲ, ಬೃಂದಾವನ, ಲಕ್ನೋ, ಕಾನ್ಪುರ, ದೆಹಲಿ, ಅಮೃತಸರ, ಲಾಹೋರ್ ನಗರಗಳನ್ನು ಸಂದರ್ಶಿಸಿದರು. ಬರೋಡಾ ಸಂಸ್ಥಾನದ ಮಹಾರಾಜರಾಗಿದ್ದ ಸಯ್ಯಾಜಿರಾವ್ ಗಾಯಕ್‌ವಾಡರವರ ಆತಿಥ್ಯವನ್ನು ಸ್ವೀಕರಿಸಿದರು. ಮುಂಬೈ ನಗರದಲ್ಲಿದ್ದಾಗ ಪ್ರಸಿದ್ಧ ಕೈಗಾರಿಕೋದ್ಯಮಿ ಹಾಗೂ ಆಗರ್ಭ ಶ್ರೀಮಂತರಾಗಿದ್ದ ಜೇಮ್‌ಷೆಡ್‌ಜಿ ಟಾಟಾರವರನ್ನು ಭೇಟಿ ಮಾಡಿದರು. ಹಾಗೆಯೇ ಕರ್ನಾಟಕದ ಪ್ರಸಿದ್ಧ ಐತಿಹಾಸಿಕ ಸ್ಥಳಗಳಾದ ಬಿಜಾಪುರ ಮತ್ತು ಹಂಪೆಗಳಲ್ಲಿ ಶಿಲ್ಪಕಲಾ ಸಂಪತ್ತನ್ನು ಅವಲೋಕಿಸಿದರು. ಈ ಪ್ರವಾಸದಲ್ಲಿ ಅವರು ಕಲ್ಕತ್ತಾದಲ್ಲಿ ವೈಸ್ರಾಯಿಯಾಗಿದ್ದ ಲಾರ್ಡ್ ಕರ್ಜನ್‌ರನ್ನು ಭೇಟಿ ಮಾಡಿದರು. ಉತ್ತರ ಭಾರತದ ಪ್ರವಾಸ ಕಾಲದಲ್ಲಿ ನಾಲ್ವಡಿಯವರು ಸೊಗಸಾದ ಉರ್ದು ಭಾಷೆಯಲ್ಲಿ ಸಂವಾದ ನಡೆಸುತ್ತಿದ್ದರು[128].

ಈ ಉತ್ತರ ಭಾರತದ ಸಂಚಾರದಿಂದ ನಾಲ್ವಡಿಯವರ ಮೇಲೆ ಅನೇಕ ರೀತಿಯ ಪ್ರಭಾವಗಳುಂಟಾದವು. ಬ್ರಿಟಿಷ್ ವಸಾಹತು ವ್ಯವಸ್ಥೆಯ ಮುಖಂಡರನ್ನು ಪರಿಚಯ ಮಾಡಿಕೊಳ್ಳುವ ಅವಕಾಶ ಇದರಿಂದ ಸಿಕ್ಕಿತು. ಧಾರ್ಮಿಕ ದೃಷ್ಟಿಯಿಂದ ಅವರಿಗೆ ಈ ಪ್ರವಾಸದಿಂದ ಪ್ರಾಚೀನ ಭಾರತೀಯ ಸಂಸ್ಕೃತಿಯ ವೈವಿಧ್ಯತೆ ಮತ್ತು ಏಕತೆಗಳ

---

*127.* ***ಫೈಲ್ ನಂ. ; ಆರ್/2 ( 31/299), ಕಾನ್‌ಫಿಡೆನ್ಷಿಯಲ್ ಸೀರಿಯಲ್*** *ನಂ. 1 ಆಫ್ ಫೈಲ್ ನಂ. 26 ಆಫ್ 1902, ಫೈನಲ್ ರಿಪೋರ್ಟ್ ಆಫ್ ಮಿ. ಫ್ರೇಜರ್ ಆನ್ ದಿ ಮಹಾರಾಜಾಸ್ ಎಜುಕೇಷನ್, ಐ.ಓ.ಆರ್., ಲಂಡನ್, ಪು. 3.*

*128.* ***ಫೈಲ್ ನಂ. ಆರ್/2 (8/64) ನಂ. 137 ಆಫ್ 1901, ಲೆಟರ್ ಫ್ರಮ್ ಎಸ್.ಎಂ. ಫ್ರೇಜರ್ ಟು ರೆಸಿಡೆಂಟ್ ಆಫ್ ಮೈಸೂರ್, ಪೂರ್ವೋಕ್ತ, ಪು. 5***

*- **ಸಿ.ಕೆ. ವೆಂಕಟರಾಮಯ್ಯ,** ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 122*

ಪರಿಚಯವಾಯಿತು. ಇಂಡೋ-ಇಸ್ಲಾಮಿಕ್ ವಾಸ್ತುಶಿಲ್ಪದ ಭವ್ಯತೆಯನ್ನು ಅವರು ಪರಿಚಯ ಮಾಡಿಕೊಂಡರು. ಆಧುನಿಕ ಭಾರತದ ಆರ್ಥಿಕ ಶಿಲ್ಪಿಗಳಲ್ಲಿ ಪ್ರಸಿದ್ಧರಾದ ಜೆಮ್‌ಷೆಡ್ ಜಿ ಟಾಟಾರವರ ಭೇಟಿ ಮುಂದೆ ಮೈಸೂರು ಸಮಾಜದ ಆರ್ಥಿಕ ಪರಿವರ್ತನೆಗೆ ಬುನಾದಿಯಾಯಿತು. ವಿಜಯನಗರ ಸಾಮ್ರಾಜ್ಯದ ಹಂಪಿಯ ಭೇಟಿ ಕನ್ನಡಿಗರ ರಾಜಕೀಯ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸಿತು. ಹಿಮಾಲಯ ಪರ್ವತ ಭಾರತೀಯರ ಧಾರ್ಮಿಕ ಮನೋರಂಗದಲ್ಲಿ ಒಂದು ಅತ್ಯುನ್ನತ ಮಟ್ಟದ ಸಂಕೇತವನ್ನು ಪಡೆದುಕೊಂಡಿದೆ. ಅದರ ದರ್ಶನದಿಂದಲೂ ಅವರ ಮೇಲೆ ಸಾಕಷ್ಟು ಪರಿಣಾಮವುಂಟಾಯಿತು. ಈ ಭೇಟಿಯ ಸಮಯದಲ್ಲಿ ಕೂಚ್ ಬಿಹಾರ್ ಮತ್ತು ಬರೋಡಾ ಸಂಸ್ಥಾನಗಳ ಮಹಾರಾಜರನ್ನು ಭೇಟಿ ಮಾಡಿದರು ಅದು ಮುಂದೆ ಸ್ನೇಹಕ್ಕೆ ತಿರುಗಿತು. ಬರೋಡಾ ರಾಜರ ಪ್ರಗತಿಪರ ವಿಚಾರಗಳು ನಾಲ್ವಡಿಯವರನ್ನು ಆಕರ್ಷಿಸಿದವು[129].

1900ರ ನವೆಂಬರ್‌ನಲ್ಲಿ ಕೈಗೊಂಡ ಪ್ರವಾಸದಲ್ಲಿ ನಾಲ್ವಡಿ ಹಾಗೂ ಸಹಪಾಠಿಗಳು ಸಂಸ್ಥಾನದ ನಂದಿ ದುರ್ಗ, ಮಧುಗಿರಿ, ದೇವರಾಯನದುರ್ಗ, ತುಮಕೂರು, ಶಿವಗಂಗೆ, ಕುಣಿಗಲು, ಶ್ರವಣಬೆಳಗೊಳ, ಮೇಲುಕೋಟೆ ಮುಂತಾದ ಸ್ಥಳಗಳಿಗೆ ಭೇಟಿ ಕೊಟ್ಟರು. ಎಲ್ಲಾ ಸ್ಥಳಗಳಲ್ಲೂ ದರ್ಬಾರುಗಳನ್ನು ನಡೆಸಿ, ಪ್ರಜೆಗಳಿಗೆ ಸಂತೋಷವನ್ನುಂಟು ಮಾಡಿದರು. ಪಾಠಶಾಲೆಗಳಿಗೆ ಭೇಟಿ ನೀಡಿ ವಿದ್ಯಾರ್ಥಿಗಳಿಗೆ ಲಾಡುಗಳನ್ನು ಹಂಚಿಸಿ, ಬುದ್ಧಿವಂತರಾದ ವಿದ್ಯಾರ್ಥಿಗಳಿಗೆ ಪಾರಿತೋಷಕಗಳನ್ನು ನೀಡಿದರು. ದೇವಾಲಯಗಳಿಗೆ, ಮಸೀದಿಗಳಿಗೆ, ಜೈನ ಬಸದಿಗಳಿಗೆ, ಚರ್ಚುಗಳಿಗೆ ಭೇಟಿ ಕೊಟ್ಟರು. ಉತ್ತರ ಭಾರತದ ಹಾಗೂ ಸಂಸ್ಥಾನದೊಳಗಿನ ಪ್ರವಾಸಗಳಿಂದ ನಾಲ್ವಡಿಯವರಿಗೆ ಪ್ರಾಕೃತಿಕ ಸೌಂದರ್ಯ, ಶಿಲ್ಪಕಲಾ ಕೌಶಲ್ಯಗಳ ಬಗೆಗಿನ ತಿಳುವಳಿಕೆ, ಬ್ರಿಟಿಷ್ ಅಧಿಕಾರಿಗಳ ಪರಿಚಯ, ಶ್ರೀಮಂತರ ಹಾಗೂ ಇತರ ದೇಶೀಯ ಸಂಸ್ಥಾನಗಳ ಮಹಾರಾಜರುಗಳ ಸ್ನೇಹ ದೊರೆತಂತಾಯಿತು. ಇದರೊಂದಿಗೆ ವಿವಿಧ ಧಾರ್ಮಿಕ ಕೇಂದ್ರಗಳಿಗೆ ನೀಡಿದ ಭೇಟಿಯು ನಾಲ್ವಡಿಯವರಲ್ಲಿ ಧಾರ್ಮಿಕ ವೈಚಾರಿಕತೆಯ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿತು. ಶಿಲ್ಪಕಲೆಗಳ ಬಗ್ಗೆ ಪಡೆದ ಜ್ಞಾನವು ಮುಂದೆ ಅವರ ಅರಮನೆಯ ಕಟ್ಟಡದ ವಿನ್ಯಾಸದಲ್ಲಿ ವ್ಯಕ್ತಗೊಂಡಿತು. ಇವೆಲ್ಲಕ್ಕಿಂತ ಮಿಗಿಲಾಗಿ ಸಂಸ್ಥಾನದೊಳಗಿನ ಸಂಚಾರದಿಂದ ನಾಲ್ವಡಿಯವರಿಗೆ ನಗರಗಳಲ್ಲಿನ ಜನಜೀವನಕ್ಕೂ ಮತ್ತು ಗ್ರಾಮಾಂತರಗಳಲ್ಲಿನ ಜನಜೀವನಕ್ಕೂ ಇರುವ ಸಾಮ್ಯ ಮತ್ತು ಭಿನ್ನತೆಗಳನ್ನು ಗ್ರಹಿಸಲು ಅವಕಾಶ ಮಾಡಿಕೊಟ್ಟಿತು. ಹೀಗೆ ಪ್ರತಿಯೊಂದು ಪ್ರವಾಸಗಳು ವಿಭಿನ್ನವಾದ ಜ್ಞಾನವನ್ನು ನಾಲ್ವಡಿಯವರಿಗೆ ನೀಡುತ್ತಾ ಅವರ ವ್ಯಕ್ತಿತ್ವದ ವಿಕಾಸಕ್ಕೆ ಕಾರಣವಾದವು.

---

*129. ಇಯಾನ್ ಕೋಪ್‌ಲ್ಯಾಂಡ್, ದಿ ಪ್ರಿನ್ಸೆಸ್ ಆಫ್ ಇಂಡಿಯಾ ಇನ್ ದಿ ಇಂಗ್ಲೆಂಡ್ ಆಫ್ ಎಂಪೈರ್ 1917-1947, ನ್ಯೂಡೆಲ್ಲಿ, 1999, ಪು. 9*

1901ರ ನವೆಂಬರ್‌ನಿಂದ ಎರಡು ತಿಂಗಳ ಕಾಲ ಸಂಸ್ಥಾನದಾದ್ಯಂತ ನಡೆಸಿದ ಮತ್ತೊಂದು ಪ್ರವಾಸವು ಬಹಳ ವಿಶಿಷ್ಟವಾದುದ್ದಾಗಿತ್ತು. ಈ ಪ್ರವಾಸವು ಶಿಕ್ಷಣ ಸಂಬಂಧಿಯಾಗಿದ್ದು, ಪ್ರಜೆಗಳ ಸ್ಥಿತಿಗತಿಗಳನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿ ಲೋಕಾನುಭವ ಹಾಗೂ ಕಾರ್ಯಾನುಭವಗಳ ಮೂಲಕ ಜ್ಞಾನವನ್ನು ವೃದ್ಧಿಪಡಿಸಿಕೊಳ್ಳುವ ಉದ್ದೇಶವನ್ನು ಹೊಂದಿತ್ತು. ಪುಸ್ತಕದಲ್ಲಿ ವ್ಯಾಸಂಗ ಮಾಡಿದ್ದ ರಾಜ್ಯಶಾಸ್ತ್ರ ಮತ್ತು ರಾಜ್ಯಭಾರ ವಿಜ್ಞಾನಗಳ ನಿಯಮಗಳನ್ನು ಕಾರ್ಯರಂಗದಲ್ಲಿ ಹೇಗೆ ಪ್ರಯೋಗಿಸುವುದು ಎಂಬುದನ್ನು ಕಲಿಯುವುದಾಗಿತ್ತು. ಈ ಪ್ರವಾಸ ಕಾಲದಲ್ಲಿ 1700 ಮೈಲಿಗಳಷ್ಟು ಪ್ರದೇಶಗಳಲ್ಲಿ ಸಂಚಾರ ಮಾಡಿ ಅಲ್ಲಿ ತಮ್ಮ ಪ್ರತಿಭಾ ವಿವೇಕಗಳನ್ನು ಅಧ್ಯಾಪಕರ ನಿರೀಕ್ಷೆಗಿಂತ ಹೆಚ್ಚಿನ ರೀತಿಯಲ್ಲಿ ವ್ಯಕ್ತಪಡಿಸಿದರು[130]. ಇದೇ ಅವಧಿಯಲ್ಲಿ ಪಾಠಶಾಲೆಯೊಂದಕ್ಕೆ ಭೇಟಿ ನೀಡಿ ಅಲ್ಲಿನ ಅಧ್ಯಾಪಕ ಬೋಧನಾ ಕ್ರಮದಲ್ಲಿದ್ದ (ಭೂಪಟದಲ್ಲಿ ಕೆಲವು ನಗರ, ನದಿಗಳನ್ನು ತೋರಿಸುವಲ್ಲಿ ವಿಫಲರಾದ ಅಧ್ಯಾಪಕರನ್ನು ಕುರಿತು "ಹಿಂದಿನ ದಿನವೇ ಮ್ಯಾಪು ನೋಡಿಯಾದರೂ ಮಾರನೇ ದಿನ ಪಾಠ ಹೇಳಬಾರದೆ!") ಕೆಲವು ಲೋಪದೋಷಗಳನ್ನು ಗುರುತಿಸಿ ಖುದ್ದಾಗಿ ತಾವೇ ತಿದ್ದಿ ತೋರಿಸಿಕೊಟ್ಟರು. ಅಲ್ಲದೆ ಅಧ್ಯಾಪಕರು ಪೂರ್ವಸಿದ್ಧತೆಗಳನ್ನು ಮಾಡಿಕೊಂಡು ತರಗತಿಗಳಿಗೆ ಪಾಠ ಹೇಳಲು ಹೋಗಬೇಕೆಂದು ಸೂಚಿಸಿದರು[131].

ನ್ಯಾಯಾಂಗವು ಅಧಿಕಾರದ ಮೂಲವೆಂದು ರಾಜರು ಅಭಿಪ್ರಾಯಪಡುತ್ತಾರೆ. ಆದುದರಿಂದ ರಾಜರಾದವರು ಈ ಅಂಗದ ಸ್ಪಷ್ಟವಾದ ಪರಿಚಯವನ್ನು ಹೊಂದುವುದು ತುಂಬಾ ಅವಶ್ಯಕವಾಗಿತ್ತು. ಮಹಾರಾಜರ ತರಭೇತಿಯು ವ್ಯವಸ್ಥಿತವಾಗಿದ್ದು ಮುಂದೆ ಅವರು ರಾಜ್ಯದ ಆಡಳಿತ ಕಛೇರಿಯ ಎಲ್ಲಾ ಕರ್ತವ್ಯಗಳನ್ನು ನಿರ್ವಹಿಸಲು ಅಗತ್ಯವಾದ ಜ್ಞಾನ ಹಾಗೂ ತರಭೇತಿಯನ್ನು ನೀಡಲಾಯಿತು. ಅವರಿಗೆ ಸರ್ಕಾರದ ಆಡಳಿತವನ್ನು ಕುರಿತಂತೆ ಸೈದ್ಧಾಂತಿಕ ಜ್ಞಾನದ ಜೊತೆಗೆ ಪ್ರಾಯೋಗಿಕ ಶಿಕ್ಷಣವನ್ನು ನೀಡಲಾಗಿತ್ತು. ಆಧುನಿಕ ಇತಿಹಾಸ ಮತ್ತು ವಿಜ್ಞಾನದ ಜೊತೆಗೆ ನ್ಯಾಯಾಧಿಕಾರ ಹಾಗೂ ಕಂದಾಯ ಆಡಳಿತ ವ್ಯವಸ್ಥೆಯ ಬಗ್ಗೆಯೂ ತರಭೇತಿ ಕೊಡಲಾಗಿತ್ತು[132]. ನಾಲ್ವಡಿಯವರಿಗೆ ಇದನ್ನು ಪ್ರವಾಸದ ಕಾಲದಲ್ಲಿ ಖುದ್ದಾಗಿ ವೀಕ್ಷಿಸಲು ಅವಕಾಶ ಮಾಡಿಕೊಡಲಾಯಿತು. ನ್ಯಾಯಾಲಯಗಳಿಗೆ ಭೇಟಿ ನೀಡುವುದರ ಮೂಲಕ ತಮ್ಮ ಪುಸ್ತಕದ ಜ್ಞಾನಕ್ಕೆ ಹೆಚ್ಚಿನ ಮೌಲ್ಯವನ್ನು ಪಡೆದುಕೊಳ್ಳಲೆಂದು ಫ್ರೇಜರ್‌ರವರು 1901 ರಲ್ಲಿ ಬೆಂಗಳೂರಿನ ಸಿಟಿ ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಕರೆದೊಯ್ದರು. ಅಲ್ಲಿ ನಡೆಯುತ್ತಿದ್ದ ದೊಡ್ಡ ಮೊಕದ್ದಮೆಯೊಂದರ ವಾದವಿವಾದಗಳನ್ನು ಆಲಿಸುವಂತೆಯೂ, ಅದರ ಬಗೆಗಿನ ನಾನಾ ಅಂಶಗಳನ್ನು ಗುರುತು ಹಾಕಿಕೊಳ್ಳುವಂತೆಯೂ ಸೂಚಿಸಿದರು. ಆನಂತರ ಆ ಅಂಶಗಳ ಆಧಾರದ ಮೇಲೆ ಒಂದು ತೀರ್ಪನ್ನು ಬರೆಯುವಂತೆ ಹೇಳಿದರು. ನಾಲ್ವಡಿಯವರು ಆ ಪ್ರಕಾರ ತೀರ್ಪನ್ನು ಬರೆದರು. ಅವರು ಬರೆದ ತೀರ್ಪು ಮತ್ತು ಅನುಭವಸ್ಥರಾದ ಸಿಟಿ ಮ್ಯಾಜಿಸ್ಟ್ರೇಟರು ಬರೆದಿದ್ದ

---

*130. ಫೈಲ್ ನಂ. ಆರ್/2 (8/64) ಪೂರ್ವೋಕ್ತ, ಪು. 3-4*

*131. ವೆಂಕಟರಾಮಯ್ಯ ಸಿ.ಕೆ. , ಪೂರ್ವೋಕ್ತ, ಪು. 141*

*132. ಫೈಲ್ ನಂ. ಆರ್/2 (8/64)., ಪೂರ್ವೋಕ್ತ, ಪು. 3-4*

ತೀರ್ಪು ಒಂದೇ ರೀತಿ ಇದ್ದುದ್ದನ್ನು ಕಂಡು ಸ್ವತಃ ಫ್ರೇಜರ್‌ರವರೇ ಆಶ್ಚರ್ಯ ಪಟ್ಟರು[133]. ನ್ಯಾಯಾಂಗವು ಮೈಸೂರಿನ ಸಾಮಾಜಿಕ ಪರಿವರ್ತನೆಯ ಒಂದು ಪ್ರಮುಖ ಮಾಧ್ಯಮವಾಗಿತ್ತು. ಆದುದರಿಂದ ನಾಲ್ವಡಿಯವರು ಈ ಅಂಗದ ಕಾರ್ಯ ವಿಚಕ್ಷಣೆಯನ್ನು ಚಿಕ್ಕ ವಯಸ್ಸಿನಲ್ಲೇ ಪರಿಚಯ ಮಾಡಿಕೊಂಡರು.

ಮೈಸೂರು ಸಂಸ್ಥಾನದ ಸಂಚಾರ ಸಮಯದಲ್ಲಿ ನಾಲ್ವಡಿಯವರು ಪ್ರಜೆಗಳ ಆರೋಗ್ಯ ಸಮಸ್ಯೆ ಬಗೆಗೆ ಪರಿಚಯ ಮಾಡಿಕೊಳ್ಳಲು ಅನೇಕ ಆಸ್ಪತ್ರೆಗಳಿಗೆ ಭೇಟಿ ಕೊಡುತ್ತಿದ್ದರು. ಆಸ್ಪತ್ರೆಗಳಲ್ಲಿನ ವೈದ್ಯರನ್ನು ಭೇಟಿ ಮಾಡಿ ಅಲ್ಲಿರುವ ಸಮಸ್ಯೆಗಳನ್ನು ಚರ್ಚಿಸುತ್ತಿದ್ದರು[134]. ಇವರ ಪ್ರವಾಸಗಳು ಕೇವಲ ಮನರಂಜನೆಗಾಗಿ ಅಲ್ಲದೆ ಸಮಾಜದ ಪರಿವರ್ತನೆಗೆ ಬೇಕಾದ ಬಹುಮುಖ್ಯ ಮಾಹಿತಿಗಳನ್ನು ಅವರು ಕ್ಷೇತ್ರಕಾರ್ಯಗಳ ಮೂಲಕ ತಮ್ಮ ಪ್ರವಾಸ ಕಾಲದಲ್ಲಿ ಸಂಗ್ರಹಿಸುತ್ತಿದ್ದರೇನೋ ಎಂಬ ಭಾವನೆ ಮೂಡುತ್ತದೆ. ಉದಾಹರಣೆಗೆ 1901ರಲ್ಲಿ ಹಾಸನ ಜಿಲ್ಲೆಯೊಂದರ ಆಸ್ಪತ್ರೆಗೆ ಭೇಟಿ ನೀಡಿ "ಇಂಜೆಕ್ಷನ್" ಉಪಕರಣಗಳನ್ನು ತೆಗೆಯಿಸಿ ನೋಡಿ, ಅವುಗಳನ್ನು ತೋರಿಸಿದ ವೈದ್ಯರ ಬಳಿ ಇವುಗಳಿಂದ ಹೇಗೆ ಚಿಕಿತ್ಸೆ ಮಾಡುತ್ತೀರಾ? ಇವು ಚಿಕಿತ್ಸೆ ಮಾಡುವ ಸುಸ್ಥಿತಿಯಲ್ಲಿವೆಯೇ? ಎಂದು ಕೇಳಿದಾಗ, ವೈದ್ಯರು ಅವುಗಳನ್ನು ದೃಷ್ಟಿಸಿ ನೋಡಿ ಸರಿ ಇವೆ ಎಂದು ಕುದಿಯುವ ನೀರಿನಲ್ಲಿ ಅವುಗಳನ್ನು ಇಟ್ಟು ಹೊರತೆಗೆದು ಔಷಧ ದ್ರವವನ್ನು ಸೂಜಿಯ ಮೂಲಕ ಒಳಕ್ಕೆ ಸೆಳೆದುಕೊಂಡು ಸೂಜಿಯ ಮೊನೆಯನ್ನು ತೋಳಿಗೆ ಚುಚ್ಚಿ ಔಷಧಿ ದ್ರವವನ್ನು ರಕ್ತಕ್ಕೆ ಸೇರಿಸಿದರಾಯಿತು. ಔಷಧವು ವ್ಯಾಪಿಸಿ ರೋಗವನ್ನು ಹೊಡೆಯುತ್ತದೆ ಎಂದರು. ಆಗ ನಾಲ್ವಡಿಯವರು "ಔಷಧವು ವ್ಯಾಪಿಸಿ ರೋಗವನ್ನೇನೊ ಹೊಡೆಯುತ್ತದೆ. ಆದರೆ ಅಷ್ಟರೊಳಗೆ ಸೂಜಿಗೆ ಹಿಡಿದಿರುವ ತುಕ್ಕು ರೋಗಿಯ ರಕ್ತದೊಳಕ್ಕೆ ವ್ಯಾಪಿಸಿ ರೋಗಿಯ ಪ್ರಾಣವನ್ನು ಹಾರಿಸುತ್ತದೆ" ಎಂದು ಹೇಳಿ, ತುಕ್ಕು ಹಿಡಿದು ಅಪ್ರಯೋಜಕವಾಗಿದ್ದ ಆ ಸೂಜಿಯನ್ನು ಕಿಟಕಿಯಿಂದಾಚೆಗೆ ಬಿಸಾಡಿದರು. ಆನಂತರ ಚಿಕಿತ್ಸೆಗಾಗಿ ಉಪಯೋಗಿಸುವ ಔಷಧಿಗಳನ್ನಿಟ್ಟು ಬೀಗ ಹಾಕಿದ್ದ ಅಲಮಾರಿನ ಬೀಗದ ಕೀಯನ್ನು ಕೊಡುವಂತೆ ವೈದ್ಯರನ್ನು ಕೇಳಿದರು. ಅದು ವೈದ್ಯರ ಬಳಿಯಲ್ಲಿಯೇ ಇರಬೇಕೆಂಬ ನಿಬಂಧನೆ. ಆದರೆ ಅದು ವೈದ್ಯರ ಬಳಿಯಲ್ಲಿಲ್ಲದೆ ಕಾಂಪೌಂಡರ ಬಳಿಯಲ್ಲಿದ್ದುದ್ದನ್ನು ಕಂಡು, "ಓಹೋ! ಇದೋ ಈ ವೈದ್ಯಶಾಲೆಯ ನಿಬಂಧನೆ!" ಎಂದರು[135].

ನಾಲ್ವಡಿಯವರು ಶಾಲಾ ದಿನಗಳಲ್ಲಿ ತಾಂತ್ರಿಕ ಹಾಗೂ ವೈಜ್ಞಾನಿಕ ಜ್ಞಾನವನ್ನು ತಿಳಿದುಕೊಳ್ಳುವಂತಹ ವಿಶೇಷ ಒಲವನ್ನು ಹೊಂದಿದ್ದರು. ಅವರಿಗಿದ್ದ ಸೂಕ್ಷ್ಮ ಅವಲೋಕನ ಮತ್ತು ತಾಳ್ಮೆ ಅವರ ವಿಶೇಷ ಗುಣಗಳೆನಿಸಿದ್ದವು[136]. 1901ರ ಸೆಪ್ಟೆಂಬರ್ 13 ರಂದು ಶಿವನಸಮುದ್ರದ ವಿದ್ಯುದಾಗಾರಕ್ಕೆ ಭೇಟಿ ನೀಡಿದ್ದಾಗ ಅಲ್ಲಿನ ಮುಖ್ಯಾಧಿಕಾರಿಯಾಗಿದ್ದ

---

133. *ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು. 139*
 *- ಎಂ. ಶಾಮರಾವ್, ಪೂರ್ವೋಕ್ತ, ಪು. 186-187*
134. *ಫೈಲ್ ಸಂ. ಆರ್/2 (8/64)., ಪೂರ್ವೋಕ್ತ, ಪು. 11*
135. *ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು. 140-141*
136. *ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 184*

ಅಮೆರಿಕಾದ ಎಕ್ಸ್‌ಥ್ರೋಮ್ ಎಂಬುವವರ ಜೊತೆ ಸಂಭಾಷಣೆ ಮಾಡುತ್ತಾ ವಿದ್ಯುಚ್ಛಕ್ತಿಯ ಬಗ್ಗೆ ತಾವು ತಿಳಿದುಕೊಂಡಿದ್ದ ಜ್ಞಾನವನ್ನು ಅವರ ಮುಂದೆ ವಿಶದಪಡಿಸಿದರು[137]. ಇದರಿಂದ ಅಮೆರಿಕಾದ ಪ್ರಸಿದ್ಧ ವಿದ್ಯುತ್ ಇಂಜಿನಿಯರ್‌ರವರಿಗೆ ಆಶ್ಚರ್ಯವಾಯಿತು. ಹೀಗೆ ಅವರು ಆಧುನಿಕ ವಿಚಾರಗಳನ್ನು ಅಧ್ಯಯನ ಹಾಗೂ ಚರ್ಚೆಗಳ ಮೂಲಕ ಕರಗತ ಮಾಡಿಕೊಂಡು ಮುಂದೆ ಮಾದರಿ ಮೈಸೂರಿನ ಸ್ಥಾಪನೆಗೆ ಪೂರ್ವಸಿದ್ಧತೆಯಾಗಿ ರೂಪುಗೊಳ್ಳುತ್ತಾ ಬಂದರು.

ನಾಲ್ವಡಿಯವರು ಅಧಿಕಾರಕ್ಕೆ ಬಂದ ಆರಂಭ ಕಾಲದಲ್ಲಿ ಮೈಸೂರು ಸಂಸ್ಥಾನ ಕೃಷಿ ಪ್ರಧಾನವಾದ ಸಮಾಜವಾಗಿತ್ತು. ಭೂಕಂದಾಯ ರಾಜ್ಯದ ಅತಿಮುಖ್ಯವಾದ ಆದಾಯದ ಮೂಲವಾಗಿತ್ತು. ಗ್ರಾಮಗಳು ಮತ್ತು ರೈತರೂ ಅರ್ಥವ್ಯವಸ್ಥೆಯ ಬುನಾದಿಯಾಗಿದ್ದರು. ಆದುದರಿಂದ ನಾಲ್ವಡಿಯವರು ಅವರ ಯೂರೋಪಿಯನ್ ಗುರುಗಳಾದ ಫ್ರೇಜರ್‌ರವರ ಸಲಹೆಯಂತೆ ಗ್ರಾಮಾಂತರ ಪ್ರದೇಶಗಳಿಗೆ 1901ರಲ್ಲಿ ಭೇಟಿ ಕೊಟ್ಟರು ಮತ್ತು ಅಲ್ಲಿನ ವಾಸ್ತವಸ್ಥಿತಿಯನ್ನು ಪರಿಚಯ ಮಾಡಿಕೊಂಡರು. ಗ್ರಾಮಗಳಲ್ಲಿ ರೈತರನ್ನು ಭೇಟಿ ಮಾಡಿ ಅವರ ದೂರುಗಳನ್ನು ಪರಿಶೀಲಿಸಿ ಶಾನುಭೋಗರು ಮತ್ತು ಅಮಲ್ದಾರರು ಕಂದಾಯ ಪಾವತಿಯ ವಿಷಯಗಳಲ್ಲಿ ರೈತರಿಗೆ ಮಾಡಿದ್ದ ಅನ್ಯಾಯಗಳನ್ನು ಸಮಸ್ತ ಲೆಕ್ಕಾಚಾರದ ಪುಸ್ತಕಗಳಾದ ಪಟ್ಟೆ, ಖಾತೆ, ಖಿರ್ದಿಗಳ ಪರಿಶೀಲನೆಯ ಮೂಲಕ ಕಂಡು ಹಿಡಿದು ನ್ಯಾಯದ ತೀರ್ಪುಗಳನ್ನು ನೀಡುವಂತಹ ಪ್ರಾಯೋಗಿಕ ಶಿಕ್ಷಣದ ಕಲೆಯನ್ನು ಅಲ್ಲಿ ಕಲಿತರು[138]. ಹಾಗೆಯೇ ಆಯಾ ಗ್ರಾಮಗಳ ನಕಾಶೆಯನ್ನು ಪರಿಶೀಲಿಸಿ ಕೆಲವು ಹೊಲಗಳು ಎಲ್ಲಿವೆ ತೋರಿಸಿ ಎಂಬುದಾಗಿ ಗ್ರಾಮಾಧಿಕಾರಿಗಳಿಗೆ ಪ್ರಶ್ನೆಗಳನ್ನು ಹಾಕಿ, ಆ ಅಧಿಕಾರಿಗಳು ತೋರಿಸಲಾರದೇ ಪರದಾಟದಲ್ಲಿದ್ದಾಗ ನಾಲ್ವಡಿಯವರೇ ಅವರಿಗೆ ತೋರಿಸುವ ಮೂಲಕ ಗ್ರಾಮಾಡಳಿತಾಧಿಕಾರಿಗಳಲ್ಲಿ ಕಾರ್ಯದಕ್ಷತೆಯನ್ನು ಹೆಚ್ಚಿಸುವಂತೆ ಮಾಡಿದರು. ಇಂತಹ ಪ್ರಾಯೋಗಿಕ ಶಿಕ್ಷಣದ ಅವಧಿಯಲ್ಲಿ ನಾಲ್ವಡಿಯವರು ತಮ್ಮ ಅದ್ಭುತ ಪ್ರತಿಭೆಯನ್ನು ತೋರುತ್ತಿದ್ದರು[139].

ನಾಲ್ವಡಿಯವರು ಪ್ರವಾಸದ ಕಾಲದಲ್ಲಿ ಪ್ರಸಿದ್ಧ ವ್ಯಕ್ತಿಗಳನ್ನು ಭೇಟಿ ಮಾಡಿ ಅನೇಕ ರಾಜಕೀಯ ವಿಚಾರಗಳನ್ನು ತಿಳಿದುಕೊಳ್ಳುತ್ತಿದ್ದರು. ಇಂತಹ ಅನುಭವ ಅವರಿಗೆ ಮುಂದೆ ಸಹಾಯಕ್ಕೆ ಬಂದವು. ರಾಜ್ಯಾಡಳಿತದ ನಿರ್ವಹಣಾ ವಿಚಾರಗಳಲ್ಲಿ ಫ್ರೇಜರ್‌ರವರಿಂದ ಅವರಿಗೆ ಪಠ್ಯ ವಿಷಯಗಳ ಬಗೆಗಿನ ಶಿಕ್ಷಣ ದೊರಕಿದ್ದಿತು. ಬೆಂಗಳೂರು ಮತ್ತು ಊಟಿಗಳಿಗೆ ಪ್ರವಾಸ ಹೋದಾಗಲೆಲ್ಲಾ ಬ್ರಿಟಿಷ್ ರೆಸಿಡೆಂಟ್ ಕರ್ನಲ್ ಡೋನಾಲ್ಡ್ ರಾಬರ್ಟ್‌ಸನ್‌ರವರನ್ನು ಹಾಗೂ ಬ್ರಿಟಿಷ್ ಇಂಡಿಯಾದ ಪ್ರಸಿದ್ಧ ಅಧಿಕಾರಿಗಳನ್ನು ಭೇಟಿ ಮಾಡಿದ ಸಂದರ್ಭಗಳಲ್ಲಿ ರಾಜಕೀಯ ವಿಚಾರಗಳ ಬಗೆಗಿನ ಜ್ಞಾನವನ್ನು ಪಡೆದುಕೊಳ್ಳುತ್ತಿದ್ದರು[140] ಎಂಬುದಾಗಿ ಫ್ರೇಜರ್ ವರದಿ ಮಾಡಿದ್ದಾರೆ.

---

137. *ಫೈಲ್ ನಂ. ಆರ್/2 (8/64)., ಪೂರ್ವೋಕ್ತ, ಪು. 3*
138. *ಅದೇ.*
139. *ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು. 140*
140. *ಫೈಲ್ ನಂ. ಆರ್/2 (8/64)., ಪೂರ್ವೋಕ್ತ, ಪು. 3*

ಮೇಲಿನ ಸ್ಥೂಲ ವಿವರಣೆಗಳಿಂದ ಕೆಲವು ಸಾಮಾನ್ಯ ನಿರ್ಣಯಗಳಿಗೆ ಬರಬಹುದು. ಮೊದಲನೆಯದಾಗಿ ತಂದೆಯವರ ನೇತೃತ್ವದಲ್ಲಿ ಕುಟುಂಬದ ಸದಸ್ಯರು, ಆಡಳಿತ ಮಂಡಲಿಯ ಕೆಲವು ಪ್ರಮುಖರು ಕಲೆತು ನಡೆಸಿದ ಪ್ರವಾಸಗಳಿಂದ ನಾಲ್ವಡಿಯವರಿಗೆ ಮುಂಬೈ ಹಾಗೂ ಕಲ್ಕತ್ತಾ ನಗರಗಳ ನಾಗರಿಕರ ಪರಿಚಯ ಮತ್ತು ಪರಿಸರದ ಅನುಭವ ಹಾಗೂ ಬ್ರಿಟಿಷ್ ವಸಾಹತು ಪ್ರಭುತ್ವಾಧಿಕಾರಿಗಳ ಪರಿಚಯ ಮತ್ತು ಸಂಪರ್ಕಗಳು ಬಾಲ್ಯದಲ್ಲೇ ಆದವು. ಹಾಗೆಯೇ ಸಮುದ್ರ ಹಾಗೂ ನದಿಗಳ ನಡುವಣದ ವ್ಯತ್ಯಾಸ ಹಾಗೂ ದೋಣಿ ಸಂಚಾರದ ಬಗೆಗಿನ ಜ್ಞಾನಾನುಭವ ಮತ್ತು ಪ್ರಕೃತಿ ಸೌಂದರ್ಯದ ತಿಳುವಳಿಕೆಯ ಜ್ಞಾನ ನಾಲ್ವಡಿಯವರಿಗೆ ಲಭಿಸಿತು. ಅದೇ ಸಂದರ್ಭದಲ್ಲಿ ಪರಸ್ಥಳದಲ್ಲಿ ಸಂಭವಿಸಿದ ತಂದೆಯ ಮರಣದ ಆಘಾತವು ನಾಲ್ವಡಿಯವರನ್ನು ಇನ್ನಷ್ಟು ಗಟ್ಟಿಗೊಳ್ಳುವಂತೆ ಮಾಡಿತು.

ಎರಡನೆಯದಾಗಿ ತಮ್ಮ ಪೋಷಕರೂ, ವಿದ್ಯಾಗುರುಗಳು ಆದ ಫ್ರೇಜರ್‌ರವರು ನಿಯೋಜಿಸಿದ ಶೈಕ್ಷಣಿಕ ಪ್ರವಾಸಗಳಿಂದ ನಾಲ್ವಡಿಯವರಿಗೆ ಮೈಸೂರು ಸಂಸ್ಥಾನದ ಪ್ರಕೃತಿ ಹಾಗೂ ಶಿಲ್ಪಕಲೆಗಳ ಸೌಂದರ್ಯದ ಪರಿಚಯವಾಯಿತು. ಇವುಗಳ ಪ್ರಭಾವದಿಂದಲೇ ನಾಲ್ವಡಿಯವರು ಅಧಿಕಾರ ವಹಿಸಿಕೊಂಡಂತಹ ಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿ "ನಾನೀಗ ನನ್ನ ರಾಜ್ಯದ ಬಹುತೇಕ ಭಾಗಗಳನ್ನು, ಅದರ ಸುಂದರ ದೃಶ್ಯಗಳನ್ನು, ರಾಜನಿಷ್ಠ ಪ್ರಜೆಗಳನ್ನು ನೋಡಿರುವೆನು. ಇಂತಹ ಉತ್ತರಾಧಿಕಾರತ್ವಕ್ಕಾಗಿ ನನ್ನ ಮನಸ್ಸು ಹೆಮ್ಮೆಯಿಂದ ತುಂಬದೇ ಹೋದರೆ ಅದು ಕ್ಷುಲಕ ಮನವಾದೀತು"[141] ಎಂಬುದಾಗಿ ನುಡಿದದ್ದು. ಹಾಗೆಯೇ ಪ್ರಾತ್ಯಕ್ಷಿಕ ಪೂರ್ಣ ಸೂರ್ಯ ಗ್ರಹಣದ ವೀಕ್ಷಣೆಯು ನಾಲ್ವಡಿಯವರಲ್ಲಿ ಹೊಸ ವೈಜ್ಞಾನಿಕ ಆಲೋಚನೆಗೆ ದಾರಿ ಮಾಡಿಕೊಟ್ಟಿತು.

ಮೂರನೆಯದಾಗಿ ಸಂಸ್ಥಾನದಾದ್ಯಂತ ನಡೆಸಿದ ಪ್ರವಾಸವು ಶಿಕ್ಷಣ ಸಂಬಂಧಿಯಾಗಿದ್ದು ಪ್ರಜೆಗಳ ಸ್ಥಿತಿಗತಿಗಳನ್ನು ಪ್ರತ್ಯಕ್ಷವಾಗಿ ಪರಿಶೀಲಿಸಿದ ಲೋಕಾನುಭವ ಹಾಗೂ ಕಾರ್ಯಾನುಭವದ ಜ್ಞಾನವು ನಾಲ್ವಡಿಯವರಲ್ಲಿ ವೃದ್ಧಿಯಾಗಲು ಸಹಕರಿಸಿತು. ಇದರಿಂದ ನಾಲ್ವಡಿಯವರು ರಾಜ್ಯದ ಜನರ ಅವಶ್ಯಕತೆಗಳನ್ನು ಅರಿಯುವಂತಾಗಿ ಮುಂದೆ ಅದಕ್ಕನುಗುಣವಾಗಿ ರಾಜ್ಯದ ಬೆಳವಣಿಗೆಯನ್ನು ಸಾಧಿಸಲು ಸರಣಿಯಾಗಿ ಆಡಳಿತಾತ್ಮಕ ಸುಧಾರಣೆಗಳನ್ನು ವಿವಿಧ ಸಾರ್ವಜನಿಕ ಜೀವನಕ್ಕೆ ಸಂಬಂಧಿಸಿದ ಇಲಾಖೆಗಳಲ್ಲಿ ಜಾರಿಗೆ ತಂದರು. ಉದಾಹರಣೆಗೆ : ಶಿಕ್ಷಣ, ಸಾರ್ವಜನಿಕ ಆರೋಗ್ಯ, ಸ್ಥಳೀಯ ಸ್ವಯಮಾಡಳಿತ ಮತ್ತು ನಗರಾಭಿವೃದ್ಧಿ, ವಿದ್ಯುದ್ದೀಕರಣ, ನೀರಾವರಿ, ಸರ್ವೇಕ್ಷಣ, ಕೃಷಿ ಅಭಿವೃದ್ಧಿ, ಕೈಗಾರಿಕಾಭಿವೃದ್ಧಿ ಇವೇ ಮುಂತಾದ ಕ್ಷೇತ್ರಗಳಲ್ಲಿ ಗುರುತಿಸಬಹುದು.

---

*141. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 3*

ಈವರೆಗೆ ನಾಲ್ವಡಿಯವರು ತಮ್ಮ ಸಂಸ್ಥಾನದಲ್ಲಿ ಹಾಗೂ ಭಾರತದ ಬೇರೆ ಬೇರೆ ಪ್ರದೇಶದಲ್ಲಿ ಕೈಗೊಂಡ ಅನೇಕ ಪ್ರವಾಸಗಳನ್ನು ಸಮೀಕ್ಷಿಸಲಾಯಿತು. ಇವು ಅವರ ವ್ಯಕ್ತಿತ್ವ ಮತ್ತು ಬುದ್ಧಿಯ ವಿಕಾಸಕ್ಕೆ ಮಾರ್ಗದರ್ಶಿಯಾದವು ಮತ್ತು ಅವರ ಆಳ್ವಿಕೆಯ ಮುಂದಿನ ದಶಕಗಳಲ್ಲಿ ಆಧುನಿಕ ಮೈಸೂರಿನ ಉದಯದ ನಕಾಶೆಯನ್ನು ತಯಾರಿಸಲು ಸಹಕಾರಿಯಾದವು. ಅಲ್ಲದೇ ಫ್ರೇಜರ್‌ರವರ ನೇತೃತ್ವದಲ್ಲಿ ಕೈಗೊಂಡ ಬರ್ಮಾ ಪ್ರವಾಸವು ಕೂಡ ನಾಲ್ವಡಿಯವರ ಎಳೆಯ ಮನಸ್ಸಿನ ಮೇಲೆ ಸಾಕಷ್ಟು ವಿಭಿನ್ನವಾದ ಪ್ರಭಾವವನ್ನು ಉಂಟು ಮಾಡಿತು. ಬರ್ಮಾ ಪ್ರವಾಸವನ್ನು ಕುರಿತಾದ ವಿವರಣೆಯನ್ನು ಈ ಕೆಳಗೆ ಪರಿಶೀಲಿಸಲಾಗಿದೆ.

### *ಬರ್ಮಾ ಪ್ರವಾಸ*

1901ರಲ್ಲಿ ತಮ್ಮ ಗುರುಗಳು ಮತ್ತು ಸಹಪಾಠಿಗಳೊಂದಿಗೆ ಭಾರತದ ಭಾಗವಾಗಿದ್ದ ಬರ್ಮಾ ದೇಶವನ್ನು ಸಂದರ್ಶಿಸಿದರು. ಈ ಪ್ರವಾಸದಲ್ಲಿ ಬರ್ಮಾದ ಪ್ರಾಕೃತಿಕ ಸಂಪನ್ಮೂಲಗಳನ್ನು ಮತ್ತು ಬರ್ಮಾದ ಭವ್ಯ ಪ್ರಕೃತಿ ಸೌಂದರ್ಯವನ್ನು ಗಮನಿಸಿದ್ದೇ ಅಲ್ಲದೆ ಅಲ್ಲಿಯ ತಮ್ಮ ಕೆಲವು ವಿಶಿಷ್ಟ ಅನುಭವಗಳಿಂದ ಅವರು ಪ್ರಭಾವಿತರಾದರು. ಅವುಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಲಾಗಿದೆ.

1) ಬರ್ಮಾದ ಸಿರಿಯಾ ದ್ವೀಪದಲ್ಲಿ ದೊಡ್ಡ ದೊಡ್ಡ ಯಂತ್ರಗಳಲ್ಲಿ ಪೆಟ್ರೋಲಿಯಂ ಉತ್ಪನ್ನವನ್ನು ಹೇಗೆ ಶುದ್ಧೀಕರಿಸಲಾಗುತ್ತಿತ್ತು ಎಂಬುದನ್ನು ಅತ್ಯಂತ ಕುತೂಹಲದಿಂದ ವೀಕ್ಷಿಸಿದರು. ಸೀಮೆಯೆಣ್ಣೆಯನ್ನು ಶುದ್ಧೀಕರಿಸಿ ಪೆಟ್ರೋಲಿಯಂ, ವ್ಯಾಸಲೀನ್ ಮುಂತಾದವುಗಳನ್ನು ತಯಾರಿಸುತ್ತಿದ್ದ ಯಂತ್ರಾಲಯಗಳನ್ನು ನಾಲ್ವಡಿಯವರು ತೀವ್ರಾಸಕ್ತಿಯಿಂದ ಪರಾಂಬರಿಸಿದ್ದರು.

2) ಬರ್ಮಾದ ಸ್ತ್ರೀಯರು ಸ್ವಚ್ಛಂದವಾಗಿ ಓಡಾಡುತ್ತಿದ್ದರು ಮತ್ತು ಅನೇಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಇದು ನಾಲ್ವಡಿಯವರ ಎಳೆಯ ಮನಸ್ಸಿನ ಮೇಲೆ ಪ್ರಭಾವ ಬೀರಿ ಅವರನ್ನು ಆಶ್ಚರ್ಯಚಕಿತರನ್ನಾಗಿಸಿತು. ಅದು ಆಗಿನ ಮೈಸೂರಿನ ಸ್ತ್ರೀಯರ ಸ್ಥಿತಿಗೆ ತದ್ವಿರುದ್ಧವಾಗಿತ್ತು. ಅಲ್ಲದೇ ಬರ್ಮದ ಮಹಿಳೆಯರು ವ್ಯಾಪಾರ, ವಾಣಿಜ್ಯಗಳಲ್ಲಿ ತೊಡಗಿ ಸ್ವತಂತ್ರವಾಗಿ ತಮ್ಮ ಅಂಗಡಿಗಳನ್ನು ನಡೆಸಿಕೊಂಡು ಹೋಗುತ್ತಿದ್ದುದನ್ನು ಕಂಡರು[142]. ಇದಕ್ಕಿಂತಲೂ ಅವರಿಗೆ ಆಶ್ಚಯವನ್ನುಂಟು ಮಾಡಿದ ಸಂಗತಿ ಎಂದರೆ ಬರ್ಮಾದ ರೈಲುಗಳಲ್ಲಿ ಸ್ತ್ರೀಯರಿಗೆ ಪ್ರತ್ಯೇಕ

---

*142. ಫೈಲ್ ನಂ. ; ಆರ್/2 (8/64), ಪೂರ್ವೋಕ್ತ, ಪು. 5*

ಸ್ಥಾನವನ್ನು ಕಾಯ್ದಿರಿಸದೇ ಇದ್ದುದು. ಬರ್ಮಾದ ಸರ್ಕಾರ ಸ್ತ್ರೀಯರಿಗೆ ಪ್ರತ್ಯೇಕ ರೈಲು ಬೋಗಿಗಳನ್ನು ಕಾಯ್ದಿರಿಸಲು ಪ್ರಯತ್ನಿಸಿದಾಗ ಅಲ್ಲಿಯ ಸ್ತ್ರೀಯರು ಅದನ್ನು ಒಪ್ಪಿಕೊಳ್ಳದೇ ಪ್ರತಿಭಟಿಸಿದರು. ತಮಗೆ ಪುರುಷರ ಜೊತೆ ಸಮಾನವಾಗಿ ಪ್ರಯಾಣ ಮಾಡಲು ಅಧಿಕಾರವಾಗಲಿ, ಯೋಗ್ಯತೆಯಾಗಲಿ ಇಲ್ಲವೇ ಎಂದು ಸರ್ಕಾರವನ್ನು ಪ್ರಶ್ನಿಸಿದರು. ಆದುದರಿಂದ ಆ ಸರ್ಕಾರ ಕಾಯ್ದಿರಿಸುವ ಪ್ರಯತ್ನವನ್ನು ಕೈಬಿಟ್ಟಿತು. ಸ್ತ್ರೀಯರು ಪ್ರತ್ಯೇಕ ಭೋಗಿಗಳಲ್ಲಿ ಪ್ರಯಾಣಿಸುವುದು ಅವರ ರಕ್ಷಣೆಗೆ ಅಪಾಯವನ್ನುಂಟು ಮಾಡಬಹುದೆಂದೂ ಪುರುಷರ ಜೊತೆ ಪ್ರಯಾಣ ಮಾಡುವುದಕ್ಕೆ ತಾವು ಸರ್ವತಾ ಹೆದರುವುದಿಲ್ಲವೆಂದು ಅಲ್ಲಿನ ಸ್ತ್ರೀಯರು ಹೇಳಿದರು[143]. ಇದರಿಂ ದ ನಾಲ್ವಡಿಯವರು ಪ್ರಭಾವಿತರಾದರು, ಮುಂದಿನ ದಿನಗಳಲ್ಲಿ ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರಿಗೆ ಓಟು ಚಲಾಯಿಸುವ ಅಧಿಕಾರವನ್ನು ನೀಡಿದ್ದು ಈ ಪ್ರಭಾವದಿಂದಲೇ ಇದ್ದಿರಬೇಕು.

3) ಮದ್ರಾಸ್‌ನಿಂದ ರಂಗೂನ್‌ಗೆ ಹಡಗಿನಲ್ಲಿ ಪ್ರಯಾಣಿಸಿ ಆಧುನಿಕ ಮತ್ತು ಯಾಂತ್ರಿಕೃತ ಸಂಚಾರ ಮಾಧ್ಯಮಗೆಳ ಪರಿಚಯ ಮಾಡಿಕೊಂಡರು.

4) ಬರ್ಮಾವು ಪ್ರಾಕೃತಿಕ ಸಂಪತ್ತಿನಿಂದ ಕೂಡಿದ್ದು, ಅಲ್ಲಿನ ತೇಗದ ಮರವು ಇಂದಿಗೂ ಪ್ರಸಿದ್ಧಿಯಲ್ಲಿದೆ. ಬಹುದೊಡ್ಡದಾಗಿ ಬೆಳೆಯುವ ಆ ಮರಗಳನ್ನು ಕತ್ತರಿಸಲು ಬಳಸುತ್ತಿದ್ದ ಯಂತ್ರಗಳ ಪರಿಚಯ ಮಾಡಿಕೊಂಡರು. ಅಲ್ಲದೇ ಆ ಮರಗಳನ್ನು ಸಾಗಿಸಲೆಂದೇ ಪಳಗಿಸಿದ್ದ ಆನೆಗಳನ್ನು ಹಾಗೂ ಅವು ಮರದ ದಿಮ್ಮಿಗಳನ್ನು ಸಾಗಿಸುತ್ತಿದ್ದ ರೀತಿಯನ್ನು ಬಹಳ ಕುತೂಹಲದಿಂದ ವೀಕ್ಷಿಸಿದರು. ಇದು ಮುಂದೆ ಅವರ ಆಳ್ವಿಕೆಯ ಕಾಲದಲ್ಲಿ ಖೆಡ್ಡಾ ಕಾರ್ಯ ಯೋಜನೆಯನ್ನು ಬಹಳಷ್ಟು ಯಶಸ್ವಿಯುತವಾಗಿ ರೂಪಿಸಲು, ದೇಶೀಯ ಮತ್ತು ವಿದೇಶಿಯರ ಪ್ರಶಂಸೆಗೆ ಒಳಗಾಗಲು ಆ ಮೂಲಕ ಅನೇಕ ಯೂರೋಪಿಯನ್ ಅಧಿಕಾರಿಗಳನ್ನು ಸಂಸ್ಥಾನದತ್ತ ಆಕರ್ಷಿಸುವಂತೆ ಮಾಡಲು ಸಹಕರಿಸಿತು.

5) ಬರ್ಮಾ ದೇಶಕ್ಕೆ ಭಾರತದ ಯಾವ ಮಹಾರಾಜರೂ ಅಲ್ಲಿಯವರೆಗೆ ಭೇಟಿ ಕೊಟ್ಟಿರಲಿಲ್ಲ. ಹಾಗಾಗಿ ಬರ್ಮಾ ದೇಶದ ಮಹಾಜನರು, ಸರ್ಕಾರಿ ಪ್ರತಿನಿಧಿಗಳು, ಅಧಿಕಾರಿಗಳು, ಬರ್ಮಾ ಪ್ರಾಂತ್ಯದ ಲೆಫ್ಟಿನೆಂಟ್ ಗವರ್ನರರು ಇವರೇ ಮುಂತಾದವರು ನೀಡಿದ ಅದ್ಭುತ ಸ್ವಾಗತವು ನಾಲ್ವಡಿಯವರಲ್ಲಿ ಅಪರಿಮಿತ ಆನಂದವನ್ನುಂಟು ಮಾಡಿತು. ಭಾರತದಿಂದ ಬರ್ಮಾಕ್ಕೆ ಹೋಗಿ ನೆಲೆಸಿದ್ದ ಹಿಂದೂ

---

*143. ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು. 137-138*

ಮುಸಲ್ಮಾನರು, ಚೀನಿಯರು, ಬರ್ಮೀಯರನ್ನು ಈ ಸಂದರ್ಭದಲ್ಲಿ ಭೇಟಿ ಮಾಡಿ ಅವರ ವಿಜ್ಞಾಪನಾ ಪತ್ರಿಕೆಗಳಿಗೆ ಪ್ರತ್ಯುತ್ತರವಾಗಿ ಭಾಷಣ ಮಾಡಿದರು.

6) ಬರ್ಮಾ ಪ್ರವಾಸ ಕಾಲದಲ್ಲಿ ಅಲ್ಲಿಯ ಪ್ರಸಿದ್ಧ ಬೌದ್ಧ ದೇವಾಲಯಗಳನ್ನು, ಸೀಮೆಯೆಣ್ಣೆ ಬುಗ್ಗೆಗಳು ಉಕ್ಕುವ ಪ್ರದೇಶಗಳನ್ನು, ಮನುಷ್ಯ ಪ್ರವೇಶಕ್ಕೆ ಅಸಾಧ್ಯವಾಗಿ ಪ್ರಾಚೀನ ಕಾಲದಿಂದಲೂ ಬೆಳೆದು ನಿಂತಿದ್ದ ಗಗನ ಚುಂಬಿಗಳಾದ ಮಹಾವೃಕ್ಷಗಳಿಂದ ಕೂಡಿದ್ದ ಕಾಡನ್ನು ನೋಡಿ ಮಿಚಿನಾ ನಗರದಿಂದ ಇರವಾಡಿ ನದಿಯ ಮೇಲೆ "ಸ್ಕೀಂ ಲಾಂಚ್" ನೌಕೆಯಿಂದ ಮಾಡಿದ ಪ್ರಯಾಣ ಬಹಳ ಅದ್ಭುತವಾಗಿತ್ತು. ಮಾಂಡಲೆ, ಮಿಚಿನಾ, ಭಾವೋ, ಪ್ರೋಮ್ ಮುಂತಾದ ನಗರಗಳಲ್ಲಿನ ರಸ್ತೆ, ಕಟ್ಟಡಗಳಿಂದ ಸಾಕಷ್ಟು ಆಕರ್ಷಿತರಾದರು.

7) ನಾಲ್ವಡಿಯವರು ಬರ್ಮಾದಲ್ಲಿ ಕಂಡ ಸೋಜಿಗದ ದೃಶ್ಯವೆಂದರೆ ಬಾಲಕರಲ್ಲಿ ಬಹುಮಂದಿ ಮೊಳದುದ್ದದ ಸಿಗಾರ್‌ಗಳನ್ನು ಹಿಡಿದು ಸೇದುತ್ತಿದ್ದುದು.

8) ನಾಲ್ವಡಿಯವರು ಬರ್ಮಾದಲ್ಲಿ ಕಂಡ ವಿಸ್ಮಯಕಾರಿ ವಸ್ತುವೆಂದರೆ ಗೋಟಿಕ್‌ಗಾರ್ಜ್ ರೈಲ್ವೇ ಸೇತುವೆ. ಅಲ್ಲಿ ಸ್ತಂಭಗಳನ್ನು ನಿರ್ಮಿಸುವುದೇ ಸಾಧ್ಯವಿಲ್ಲದ 900 ಅಡಿಗಳ ಆಳದ ಕಮರಿಗೆ ಮೇಲ್ಭಾಗದಲ್ಲಿ ಸ್ತಂಭವೇ ಇಲ್ಲದೇ ಕಟ್ಟಿರುವ ಸೇತುವೆಯ ಶಿಲ್ಪಕಲಾ ಕೌಶಲ್ಯದ ಹಾಗೂ ಅದರ ಮೇಲೆ ರೈಲುಗಳು ಹೋಗುತ್ತಿದ್ದುದ್ದನ್ನು ಕಂಡು ಆಶ್ಚರ್ಯಭರಿತರಾದರು[144].

9) ಬರ್ಮಾದಲ್ಲಿ ನಾಲ್ವಡಿಯವರು ತೋರಿದ ಅನುಕಂಪವೆಂದರೆ ಹಡಗಿನಲ್ಲಿದ್ದ ಕ್ಯಾಪ್ಟನ್‌ಗಳ ಆಹಾರಕ್ಕೆಂದು ತಂದಿದ್ದ ಮೇಕೆಗಳಲ್ಲಿ ಬಿಳಿ ಬಣ್ಣದ ಮೇಕೆಯೊಂದು ನಾಲ್ವಡಿಯವರ ಬಳಿ ಬಂದಾಗ ಅದನ್ನು ಕ್ರಯಕ್ಕೆ ಕೊಂಡು ಜೀವದಾನ ಮಾಡಿದರಲ್ಲದೇ ಮೈಸೂರಿಗೆ ಹಿಂದಿರುಗಿದ ಮೇಲೆ ಅದಕ್ಕೆ ತಾವೇ ಆಹಾರ ನೀಡಿ ನೋಡಿಕೊಳ್ಳುತ್ತಿದ್ದರು[145]. (ಅನುಬಂಧ -Vರಲ್ಲಿ ಬರ್ಮಾ ದೇಶದ ಪ್ರವಾಸ ಕಾಲದಲ್ಲಿ ಪ್ರಾಣದಾನ ಮಾಡಿ ಕ್ರಯಕ್ಕೆ ಕೊಂಡ ಮೇಕೆಯೊಡನೆ ನಾಲ್ವಡಿಯವರು ಕುಳಿತಿರುವ ಭಾವಚಿತ್ರಗಳನ್ನು ಕಾಣಬಹುದು).

ಬರ್ಮಾ ದೇಶದ ಪ್ರವಾಸವು ನಾಲ್ವಡಿಯವರಿಗೆ ಅಲ್ಲಿನ ಸ್ಥಳೀಯ ಜನರ, ಅಧಿಕಾರಿಗಳ, ಸ್ತ್ರೀಯರ, ಆಧುನಿಕ ಯಂತ್ರೋಪಕರಣಗಳ, ಕಟ್ಟಡಗಳ ಶಿಲ್ಪಕಲೆಯ ಬಗೆಗಿನ ಪರಿಚಯಾನುಭವವು ಅವರಲ್ಲಿ ಹೊಸ ರೋಮಾಂಚಕ

*144. ಫೈಲ್ ನಂ. ; ಆರ್/2 (8/64), ಪೂರ್ವೋಕ್ತ, ಪು. 5-10*

*145. ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, 138-139*

ಅನುಭವವನ್ನು ಮಾಡಿಸಿದವು. ಅದರಲ್ಲಿಯೂ ರಸ್ತೆಗಳು, ರೈಲುಗಳು, ನದಿ ಸಂಚಾರ, ಪೆಟ್ರೋಲಿಯಂ ಉತ್ಪಾದನೆ, ಪ್ರಕೃತಿ ಸಂಪತ್ತಿನ ಬಳಕೆಗಳ ಬಗೆಗಿನ ಜ್ಞಾನವು ಅವರಲ್ಲಿ ಅಪಾರ ಪ್ರಭಾವವನ್ನು ಉಂಟು ಮಾಡಿ ತಮ್ಮ ಆಳ್ವಿಕೆಯ ಕಾಲದಲ್ಲಿ ಸಂಸ್ಥಾನದಲ್ಲಿ ಅವುಗಳ ಅನುಕರಣೀಯ ಕಾರ್ಯಗಳು ಸಾಕಷ್ಟು ಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳುವಂತೆ ಮಾಡುವಲ್ಲಿ ಸಹಕಾರಿಯಾದವು.

ಒಟ್ಟಾರೆಯಾಗಿ ನಾಲ್ವಡಿಯವರ ಪ್ರವಾಸಗಳು ವಿಶಿಷ್ಟವೂ, ವಿಭಿನ್ನವೂ ಆಗಿದ್ದು ಅವರಲ್ಲಿ ಜ್ಞಾನಕ್ರಿಯಾಶೀಲತೆ ಬೆಳೆಸಲು ಪೂರಕವಾದವುಗಳಾಗಿದ್ದವು. ಈ ಕುರಿತು ಸ್ವತಃ ಫ್ರೇಜರ್‌ರವರೇ ವರದಿ ಮಾಡಿರುವಂತೆ "ಹೊರ ರಾಜ್ಯ, ಪ್ರದೇಶಗಳ ಪ್ರವಾಸದ ಕಾಲದಲ್ಲಿ ನೋಡಿದ ಅಂಶಗಳಿಂದ ನಾಲ್ವಡಿಯವರು ಸಾಕಷ್ಟು ಪ್ರಭಾವಿತರಾಗಿದ್ದಾರೆ. ಅವರನ್ನು ಹೊರ ರಾಜ್ಯ ಮತ್ತು ದೇಶಗಳಿಗೆ ರೈಲ್ವೆ ಸ್ಟೀಮರ್‌ಗಳ ಮೂಲಕ ಪ್ರವಾಸಕ್ಕೆ ಕರೆದೊಯ್ಯಲಾಗುತ್ತಿತ್ತು. ಹಾಗೆಯೇ ಜ್ಞಾನಾಭಿವೃದ್ಧಿಗಾಗಿ ವಿದೇಶಗಳಿಗೂ ಪ್ರವಾಸವನ್ನ ಕೈಗೊಳ್ಳಲಾಗಿತ್ತು. ಪ್ರಾಂತೀಯ ಪ್ರವಾಸವನ್ನು ಕುದುರೆಯ ಮೇಲೆ ಅಥವಾ ಎತ್ತಿನ ಗಾಡಿಗಳ ಮೇಲೆ ಕೈಗೊಳ್ಳಲಾಗುತ್ತಿತ್ತು. ಇದರ ಉದ್ದೇಶ ರಾಜ್ಯದ ಬಹುಭಾಗ ಮತ್ತು ಜನತೆಯನ್ನು ಸಂದರ್ಶಿಸಿ ಅವರ ಬೇಕು, ಬೇಡಗಳನ್ನು ವೈಯಕ್ತಿಕವಾಗಿ ತಿಳಿದುಕೊಳ್ಳಲಿ ಎಂಬುದೇ ಆಗಿತ್ತು"[146] ಎಂದಿರುವ ಹೇಳಿಕೆಗಳು ಅವರು ಶಿಕ್ಷಣದ ತರಭೇತಿಯ ಕಾಲದಲ್ಲಿ ಮಾಡಿದ ಪ್ರವಾಸಗಳಿಂದ ಪ್ರಾಯೋಗಿಕ ಪ್ರಾತ್ಯಕ್ಷಿಕ ಅನುಭವಗಳನ್ನು ಪಡೆದು ಪರಿಪಕ್ವಗೊಂಡು ಮುಂದಿನ ಉತ್ತರಾಧಿಕಾರಕ್ಕೆ ಅಧಿಪತಿಯಾಗಲು ಅವರು ಸಿದ್ಧರಾಗಿದ್ದರೆಂಬುದನ್ನು ತಿಳಿಸುತ್ತವೆ. ಹೀಗೆ ಇದು ಸ್ಥಳೀಯ ಮತ್ತು ಪಾಶ್ಚಿಮಾತ್ಯ ದೃಷ್ಟಿಕೋನದಿಂದ ಪಡೆದಿದ್ದ ಶಿಕ್ಷಣವಾಗಿತ್ತು. ಬ್ರಿಟಿಷ್ ವಸಾಹತು ಪ್ರಭುತ್ವಕ್ಕೆ ಅಧೀನವಾಗಿದ್ದು, ಆಧುನಿಕ ಸನ್ನಿವೇಶಗಳ ಪರಿಸರಕ್ಕೆ ಹೊಂದಿಕೊಳ್ಳುವ ಹಿನ್ನೆಲೆಗೆ ತಕ್ಕಂತೆ ನಾಲ್ವಡಿಯವರನ್ನು ರೂಪಿಸುವ ಪ್ರಯತ್ನವು ಕೂಡ ಇತ್ತು. ಆದರೆ ನಾಲ್ವಡಿಯವರು ತಾವು ಕಲಿತಿದ್ದ ಪಾಶ್ಚಿಮಾತ್ಯ ಶಿಕ್ಷಣದ ಜ್ಞಾನಾನುಭವದ ಆಡಳಿತವನ್ನು ನಡೆಸಬೇಕಾಗಿದ್ದದ್ದು ಇನ್ನೂ ತನ್ನನ್ನು ಸಂಪೂರ್ಣವಾಗಿ ಪಾಶ್ಚಿಮಾತ್ಯ ಪ್ರಭಾವಕ್ಕೆ ತೆರೆದುಕೊಳ್ಳದೇ ಸಂಪ್ರದಾಯ ಸೋಗಿನಲ್ಲೇ ಸಾಗುತ್ತಿದ್ದ ಮೈಸೂರು ಸಂಸ್ಥಾನದ ಪ್ರದೇಶದಲ್ಲಿ. ಇಂತಹ ಸಂಪ್ರದಾಯಬದ್ಧ ಸಮಾಜದ ನೆಲೆಯಲ್ಲಿ ಆಧುನಿಕ ಅಥವಾ ಪಾಶ್ಚಿಮಾತ್ಯ ವಿಚಾರಧಾರೆಗಳನ್ನು ಆಡಳಿತದಲ್ಲಿ ಅಳವಡಿಸುವಂತಹ ಸಂದರ್ಭದಲ್ಲಿ ರಾಜನಾದವನಿಗೆ ಸಂಪ್ರದಾಯ, ಧರ್ಮಾಚರಣೆಗಳ ಬಗ್ಗೆ ಸಾಕಷ್ಟು ಸೂಕ್ಷ್ಮವಾದ ಹಾಗೂ ಆಳವಾದ ತಿಳುವಳಿಕೆಯ ಅವಶ್ಯಕತೆ ಇರಬೇಕಾಗಿತ್ತು. ಇಂತಹ ಜ್ಞಾನವನ್ನು ಪಡೆಯುವ ನಿಟ್ಟಿನಲ್ಲಿ ನಾಲ್ವಡಿಯವರು ಇಡೀ ಭಾರತದ ಎಲ್ಲಾ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿದರು. ಈ ಹಿನ್ನೆಲೆಯಲ್ಲಿ ನಡೆಸಿದ ಅವರ ಧಾರ್ಮಿಕ ಪ್ರವಾಸಗಳನ್ನು ಈ ಕೆಳಗೆ ಸ್ಥೂಲವಾಗಿ ವಿವೇಚಿಸಲಾಗಿದೆ.

---

*146. ಫೈಲ್ ನಂ. ; ಆರ್/2 (8/64)., ಪೂರ್ವೋಕ್ತ, ಪು. 9-10*

### *ಧಾರ್ಮಿಕ ಪ್ರವಾಸಗಳು ; ಧರ್ಮಾಭಿಮಾನಿಯಾಗಿ*

ನಾಲ್ವಡಿಯವರು ಚಿಕ್ಕಂದಿನಿಂದಲೂ ಸಾಂಪ್ರದಾಯಿಕತೆಯ ಪ್ರಧಾನ ಅಂಶಗಳನ್ನು ಮೈಗೂಡಿಸಿಕೊಂಡು ಬೆಳೆದವರು. ಹಾಗಾಗಿ ಅವರಲ್ಲಿ 'ಧರ್ಮಾಭಿಮಾನ'ವು ಎಲ್ಲಾ ಹಂತಗಳಲ್ಲೂ ಪ್ರಧಾನವಾಗಿ ಗೋಚರಿಸುತ್ತಿದ್ದ ಲಕ್ಷಣವಾಗಿತ್ತು. ಆ 'ಧರ್ಮಾಭಿಮಾನ'ವು 'ಕರ್ಮಾನುಷ್ಠಾನ' ಮತ್ತು ತೀರ್ಥಯಾತ್ರೆಗಳ ಮೂಲಕ ವ್ಯಕ್ತಗೊಂಡಿದೆ. ಇಪ್ಪತ್ತನೇ ಶತಮಾನದ ಆರಂಭ ಕಾಲವು ವಿಜ್ಞಾನದ ಜಯಭೇರಿ, ವಿಚಾರಶೀಲತೆಯ ಪ್ರಗತಿಯುಗದಲ್ಲಿ ಅಂಧಶ್ರದ್ಧೆಯ ಆಗರವಾದ ಪೊಳ್ಳು ಮತಾಚಾರಗಳ ವಿಷಯಕ್ಕೆ ಸ್ಥಾನವೇ ಇಲ್ಲದಂತಹ ಕಾಲದಲ್ಲೂ ನಾಲ್ವಡಿಯವರು ಒಂದು ಭಾಷಣದಲ್ಲಿ "…. ಜ್ಞಾನ ಭಂಡಾರದ ಪರಿಪೂರ್ಣತೆಗೆ ವಿಜ್ಞಾನಶಾಸ್ತ್ರ ಲಬ್ಧವಾದ ಬಾಹ್ಯವಸ್ತು ಪರಿಜ್ಞಾನವೊಂದೇ ಸಾಲದು, ಬಾಹ್ಯ ಜಗತ್ತಿನ ವಿವಿಧ ವ್ಯಾಪಾರಗಳಿಗೂ ಸಾಕ್ಷಿ ಸ್ವರೂಪವಾಗಿರುವ ಅಂತರಾತ್ಮನ ವಿಷಯವನ್ನು ತಿಳಿದುಕೊಳ್ಳುವುದು ಅತ್ಯಾವಶ್ಯಕ" ವೆಂದು ಆತ್ಮವಾದದ ಪ್ರಾಮುಖ್ಯತೆಯನ್ನು ಪ್ರತಿಪಾದಿಸುತ್ತಾ "ಜಗತ್ಕಲ್ಯಾಣ ಸಾಧನೆಯನ್ನು ಗುರಿಯಾಗಿಟ್ಟುಕೊಳ್ಳದೆ ವಿಜ್ಞಾನವನ್ನು ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳುತ್ತಾ ಬಂದಿರುವುದರ ಫಲವೇ ಇಂದಿನ ತೊಂದರೆಗಳು ಉತ್ಕಟಾವಸ್ಥೆಗೆ ತಲುಪಲು ಕಾರಣವಾಗಿರಬಹುದು"[147] ಎಂದಿದ್ದಾರೆ. ನಾಲ್ವಡಿಯವರ ಆತ್ಮಜ್ಞಾನ ಮತ್ತು ಬ್ರಹ್ಮಸಾಕ್ಷಾತ್ಕಾರಗಳಿಂದ ಶಾಂತಿ ಸೌರಭವನ್ನೂ, ಸಮದರ್ಶಿತ್ವವನ್ನೂ ಅನುಸಂಧಾನ ಮಾಡಿಕೊಂಡು ಅದನ್ನು ಜನತೆಯ ನಿತ್ಯಸುಖಕ್ಕೆ ಬಳಸಿಕೊಳ್ಳಬೇಕೆಂದು ವಾದಿಸಿದರು. ಸಾಂಪ್ರದಾಯಿಕ ಸನಾತನ ರಾಜನ ಮೂಲಕ್ಕೆ ಅವರು ಮಾದರಿಯಾಗಿದ್ದರು. ಜ್ಞಾನಯೋಗದಲ್ಲಿ ಆಸಕ್ತಿ ಹೊಂದಿದ್ದರ ಜೊತೆಗೆ ಕರ್ಮಾನುಷ್ಠಾನವನ್ನು ಕೈಗೊಳ್ಳುತ್ತಿದ್ದರು. ತರುಣಾವಸ್ಥೆಯಲ್ಲಿಯೇ ಶೃಂಗೇರಿ ಗುರುಗಳ ಉಪದೇಶದಂತೆ ಒಂದು ಮಂಡಲ ಕಾಲ ಬೆಳಿಗ್ಗೆ ಆರು ಗಂಟೆಯಿಂದ ರಾತ್ರಿಯವರೆಗೂ ನಿರಾಹಾರಿಗಳಾಗಿದ್ದು ಜಪ ಮಾಡಿ ಕನ್ಯಾಪೂಜೆ ಮಾಡಿ ರಾತ್ರಿ ವೇಳೆಯಲ್ಲಿ ಮಾತ್ರ ಊಟ ಮಾಡುತ್ತಿದ್ದರು. ಚಾಮುಂಡಿ ಬೆಟ್ಟದಲ್ಲಿ ಬೇಸಿಗೆಯ ಉರಿಬಿಸಿಲಲ್ಲೂ ಕಾಯ್ದ ಬಂಡೆಯ ಮೇಲೆ ಕುಳಿತು ರಾಜರಾಜೇಶ್ವರಿ ದೇವಿಯ ಧ್ಯಾನ ಮಾಡುತ್ತಿದ್ದರು. ಜ್ವರ ಬಂದಾಗಲೂ ಕೂಡ ಸ್ನಾನ, ಸಂಧ್ಯಾವಂದನೆಗಳನ್ನು ಬಿಡುತ್ತಿರಲಿಲ್ಲ. ಶ್ರಾದ್ಧ ಕಾಲದಲ್ಲೂ ಆಮಂತ್ರಿತ ಪುರೋಹಿತ ಸಮೂಹದ ಪಾದ-ಪ್ರಕ್ಷಾಳನವನ್ನು ಋತ್ವಿಕ್ಕುಗಳ ಕೈಯಿಂದ ಮಾಡಿಸದೇ ತಾವೇ ಮಾಡುತ್ತಿದ್ದರು. ಚಾಮುಂಡೇಶ್ವರಿ ರಥವನ್ನು ಇತರರೊಡನೆ ಸೇರಿ ತಾವೂ ಎಳೆಯುತ್ತಿದ್ದರು[148]. ಹೀಗೆ ಹಲವು ವರ್ಷಗಳ ಕಾಲ ಅವರು ಸಾಧಿಸಿದ ಆಧ್ಯಾತ್ಮಿಕ ಉನ್ನತಿಯು ಅಹಂಕಾರ ಮಮಕಾರಗಳ ಲವಲೇಶವೂ ಇಲ್ಲದ ಸರ್ವಸಮತಾಭಾವದ ಮನೋಧರ್ಮವನ್ನು ಅವರಲ್ಲಿ ರೂಪಿಸಿತು.

---

*147. **ವೆಂಕಟರಾಮಯ್ಯ ಸಿ.ಕೆ.**, ಪೂರ್ವೋಕ್ತ, ಪು. 432-433*

*148. **ಸಿ.ಕೆ. ವೆಂಕಟರಾಮಯ್ಯ**, ಪೂರ್ವೋಕ್ತ, ಪು. 434-436*

ಧರ್ಮಾಭಿಮಾನದ ಎರಡನೇ ಅಂಗವಾದ ತೀರ್ಥಯಾತ್ರೆಯು (ಧಾರ್ಮಿಕ ಪ್ರವಾಸ) ವ್ಯಕ್ತಿಯ ಪರಿಪಕ್ವತೆಯ ವಿಕಾಸವನ್ನು ಕುರಿತು ಅಧ್ಯಯನ ಮಾಡುವಲ್ಲಿ ಪ್ರಮುಖವಾದದ್ದು. ಈ ಹಿನ್ನೆಲೆಯಲ್ಲಿ ನಾಲ್ವಡಿಯವರು ಹಲವಾರು ಪುಣ್ಯ ಸ್ಥಳಗಳನ್ನು ಸಂದರ್ಶಿಸಿದರು. ಆ ಮೂಲಕ ತಮ್ಮ ದೈವಭಕ್ತಿ ಹಾಗೂ ಕರ್ಮಶ್ರದ್ಧೆಗಳನ್ನು ಪ್ರದರ್ಶಿಸಿ ಸಮಸ್ತ ಜನತೆಯನ್ನು ವಿಸ್ಮಿತಗೊಳಿಸುತ್ತಿದ್ದರು. ಧಾರ್ಮಿಕ ಪ್ರವಾಸದ ಅವಧಿಯಲ್ಲಿ ರಾಜಕುಟುಂಬ ಮತ್ತು ಪ್ರಜೆಗಳ ಶ್ರೇಯಸ್ಸಿಗಾಗಿ ವಿಶೇಷ ಪೂಜೆಯನ್ನು ಮಾಡಿಸುತ್ತಿದ್ದರು. 1917 ರ ರಾಮೇಶ್ವರ ಯಾತ್ರೆಯಲ್ಲಿ ನಾಗಪ್ರತಿಷ್ಠೆ ಮಾಡಿಸಿ ಭೂರಿದಕ್ಷಿಣೆ, ಸಂತರ್ಪಣೆ, ಬ್ರಾಹ್ಮಣರಿಗೆ ಖಿಲ್ಲತ್ತುಗಳನ್ನು ಸಮರ್ಪಿಸಿದರು. ಯಾತ್ರೆಯ ವೇಳೆಯಲ್ಲಿ ರಾಮನಾಡಿಯಿಂದ ದರ್ಭಶಯನಕ್ಕೆ 13 ಮೈಲಿಗಳ ದೂರ ಕಾಲ್ನಡಿಗೆಯಲ್ಲೇ ಕೆಸರಿನ ಹಾದಿಯಲ್ಲಿ ಹೋಗಿ ಹಿರಣ್ಯಶ್ರಾದ್ಧಾ ಮಾಡಿ ಮತ್ತೆ ನಡದೇ ವಾಪಸ್ಸಾದರು. 1918ರಲ್ಲಿ ಕಾಶ್ಮೀರ, ಅಮರನಾಥಗಳಿಗೆ ಯಾತ್ರೆ ಕೈಗೊಂಡರು. ಆಗ ಹಿಮಾಲಯ ಪರ್ವತ ಶ್ರೇಣಿಯಲ್ಲಿ 15,000 ಅಡಿಗಳಷ್ಟು ಎತ್ತರದಲ್ಲಿನ ಅಮರನಾಥ ಕ್ಷೇತ್ರಕ್ಕೆ ಕಾಲ್ನಡಿಗೆಯಲ್ಲೇ ಪ್ರಯಾಣ ಮಾಡಿದರು. ಅಮರಗಂಗೆಯ ಹಿಮಜಲದಲ್ಲಿ ಸ್ನಾನ ಮಾಡಿ ಆ ಚಳಿಯಲ್ಲಿ ಒಂದೂವರೆ ಗಂಟೆ ವೇಳೆ ಶಿವಪಂಚಾಕ್ಷರೀ ಜಪ ಹಾಗೂ ರಾಜರಾಜೇಶ್ವರಿ ಜಪಗಳನ್ನು ಮಾಡಿದರು. ನಾಲ್ವಡಿಯವರು ಒಟ್ಟು ಹದಿನಾರು ಬಾರಿ ಕಾಶೀಯಾತ್ರೆ ಕೈಗೊಂಡಿದ್ದರು. 1919ರಲ್ಲಿ ಕೈಗೊಂಡ ಕಾಶೀಯಾತ್ರೆಯಲ್ಲಿ ಗಂಗಾನದಿಯ ತೀರದಲ್ಲಿ ಮೈಸೂರು ಸಂಸ್ಥಾನದ ಹೆಸರಿನಲ್ಲಿ ಸ್ನಾನಘಟ್ಟವನ್ನು ನಿರ್ಮಿಸಲು ಕಾಶೀ ಮಹಾರಾಜರಿಂದ ಒಂದು ಭಾಗ ಭೂಮಿಯನ್ನು 30,000 ರೂಪಾಯಿಗಳಿಗೆ ಖರೀದಿ ಮಾಡಿ ಅಲ್ಲಿ ಸ್ನಾನ ಘಟ್ಟ ನಿರ್ಮಿಸಿದರು[149]. 1925ರಲ್ಲಿ ಬದರೀನಾಥ ಕ್ಷೇತ್ರದವರೆಗೂ ನಾಲ್ವಡಿಯವರು ಕಾಲ್ನಡಿಗೆಯಲ್ಲೇ ಯಾನ ಮಾಡಿದರು. ಆಗಿನ ಕಾಲಕ್ಕೆ ಭಾರತದ ಯಾವ ದೇಶೀಯ ಸಂಸ್ಥಾನಗಳ ಅರಸರೂ ಕೈಗೊಳ್ಳದಿದ್ದ ಕೈಲಾಸಪರ್ವತ, ಮಾನಸ ಸರೋವರಗಳ ಯಾತ್ರೆಯನ್ನು 1931ರಲ್ಲಿ ನಾಲ್ವಡಿಯವರು ಕೈಗೊಂಡದ್ದು ಅವರ ಧರ್ಮಾಭಿಮಾನದ ದ್ಯೋತಕವೇ ಆಗಿದೆ. ನಾಲ್ವಡಿಯವರ ತೀರ್ಥಯಾತ್ರೆಗಳಲ್ಲೆಲ್ಲಾ ಕೈಲಾಸ ಶಿಖರದ ದರ್ಶನ ಯಾತ್ರೆಯು ಅತ್ಯಂತ ಶ್ರೇಷ್ಠವಾದುದೆಂದು ವ್ಯಾಖ್ಯಾನಿಸಲಾಗಿದೆ. ಕಾರಣ ಅಲ್ಲಿನ ವಿಪರೀತ ಚಳಿ ಮತ್ತು ಹಿಮ ಬಂಡೆಗಳು ಉರುಳುತ್ತಾ ಪ್ರಾಣಾಪಾಯವನ್ನು ತರುವಂತಹ ಪ್ರತಿಕೂಲಗಳ ನಡುವೆಯೂ ಈ ಯಾತ್ರೆಯನ್ನು ಕೈಗೊಂಡುದುದು[150]. ಪ್ರಯಾಣದ ನಡುವೆ ಗನಾಯಿ ಗ್ರಾಮದ ಜನ "ಮೈಸೂರ್ ಮಹಾರಾಜ್ ಕು ಜೈ" ಎಂದು ಕೂಗಿದರು. ನಾಲ್ವಡಿಯವರು ಮಾಲ್ಪಾದ ಮೂಲಕ ಸಮುದ್ರಮಟ್ಟದಿಂದ 16,000 ಅಡಿಗಳ ಎತ್ತರದಲ್ಲಿರುವ ಗುರ್ಲಾ ಕಣಿವೆಯ ಮೂಲಕ ಮಾನಸ ಸರೋವರಕ್ಕೆ ತಲುಪಿದರು. ಹಿಮಜಲದಿಂದ ಕೂಡಿದ ಮಾನಸ ಸರೋವರದಲ್ಲಿ ಸ್ನಾನ ಮಾಡಿದರು[151]. ಹೀಗೆ

---

*149. ಸಿ.ಕೆ. ವೆಂಕಟರಾಮಯ್ಯ, ಪೂರ್ವೋಕ್ತ, ಪು. 447*

*150. ಕ್ಯೂ.ಜೆ.ಎಂ.ಎಸ್., ಸಂಪುಟ - XXII, ನಂ. 3, ಜನವರಿ, 1932, ಪು. 349*

*151. ಅದೇ., ಪು. 351*

ನಾಲ್ವಡಿಯವರು ತಮ್ಮ ಎಲ್ಲ ತೀರ್ಥಯಾತ್ರೆಗಳಲ್ಲೂ ನಿಷ್ಠೆ, ನಿಯಮಗಳಿಂದ ಕೂಡಿದ ಕರ್ಮಾಚರಣೆಯನ್ನು ನೆರವೇರಿಸುತ್ತಿದ್ದರು.

ಮೇಲಿನ ಅಂಶಗಳು ಅವರ ಧಾರ್ಮಿಕ ಶ್ರದ್ಧೆಯನ್ನು ಪ್ರತಿಬಿಂಬಿಸುತ್ತವೆ. ಅವರಿಗೆ ಸನಾತನ ಹಿಂದೂಧರ್ಮದ ಬಗ್ಗೆ ಅಸಾಧಾರಣ ಶ್ರದ್ಧೆಯಿದ್ದಂತೆ ಬೇರೆ ಧರ್ಮ, ಮತಗಳ ಬಗ್ಗೆಯೂ ಸಹಿಷ್ಣುತೆ ಇದ್ದಿತು. ಅವರ ಕೈಲಾಸ ಶಿಖರ ಯಾತ್ರೆಯ ಸಂದರ್ಭದಲ್ಲಿ ಅನೇಕ ಬೌದ್ಧ ವಿಹಾರಗಳಿಗೆ ಭೇಟಿಕೊಟ್ಟು ಕಾಣಿಕೆಗಳನ್ನು ನೀಡಿದರು. ಹಾಗೆಯೇ ವಿವಿಧ ಧರ್ಮಗಳ ಸಾರವನ್ನು ಗ್ರಹಿಸಲು ಕಾಣಿಕೆಗಳನ್ನು ನೀಡಿ ಆಗಾಗ್ಗೆ ನಾನಾ ಧರ್ಮಗಳ ವಿದ್ವಾಂಸರಿಂದ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಮೈಸೂರು ಸಂಸ್ಥಾನ ಹಾಗೂ ಹೊರ ರಾಜ್ಯಗಳಲ್ಲಿದ್ದ ದೇವಾಲಯಗಳಿಗೂ, ಮಸೀದಿಯನ್ನು ಹಾಗೂ ಚರ್ಚುಗಳಿಗೂ ಧನ ಸಹಾಯ ಮಾಡುತ್ತಿದ್ದರು[152]. ತಮ್ಮ 'ಬಾಡಿಗಾರ್ಡ್' ಸಿಬ್ಬಂದಿಗಳಿಗೆ ಮಸೀದಿಗಳನ್ನು ನಿರ್ಮಿಸಿಕೊಟ್ಟಿದ್ದರು. ತಮ್ಮ ಭಾಷಣಗಳಲ್ಲಿ ನಾಲ್ವಡಿಯವರು ಧಾರ್ಮಿಕ ಸಿದ್ಧಾಂತ, ವಿಚಾರಗಳಲ್ಲಿ, ದೇವರನ್ನು ಆರಾಧಿಸುವ ವಿಧಾನಗಳಲ್ಲಿ ಭೇದಗಳಿವೆಯೇ ಹೊರತು ವಿವಿಧ ನಾಮರೂಪಗಳಲ್ಲಿ ಆರಾಧಿಸುವ ಸರ್ವೇಶ್ವರನಲ್ಲಲ್ಲ. ಅವನೊಬ್ಬನೇ ಎಂದು ಹೇಳುತ್ತಿದ್ದರು. ನಾಲ್ವಡಿ ಅಜ್ಮೀರಕ್ಕೆ ಹೋದಾಗ ಖ್ವಾಜಾ ಕಮಾಲುದ್ದೀನ್ ಚಿಸ್ತಿಯವರ ಸಮಾಧಿಗೆ ಹೋಗಿ ಭಕ್ತಿ ತೋರಿಸಿದ್ದರು. ಮಹಾಮಸ್ತಕಾಭಿಷೇಕದ ವೇಳೆ ಜೈನ ಧಾರ್ಮಿಕ ಕೇಂದ್ರವಾದ ಶ್ರವಣಬೆಳಗೊಳಕ್ಕೂ ಹೋಗಿ ಗೊಮ್ಮಟೇಶ್ವರ ಮೂರ್ತಿಗೂ ನಮಸ್ಕರಿಸುತ್ತಿದ್ದರು[153]. ಹೀಗೆ ನಾಲ್ವಡಿಯವರ ಧರ್ಮಾಭಿಮಾನ ಹಾಗೂ ಧಾರ್ಮಿಕ ನಿಷ್ಠೆಯು ವಿಶಾಲವಾದ ಅರ್ಥದಲ್ಲಿ ಸರ್ವಪ್ರಜೆಗಳನ್ನು, ವಿಶ್ವವನ್ನೂ ಪ್ರೀತಿಸುವ, ಗೌರವಿಸುವ ಹಿನ್ನೆಲೆಯುಳ್ಳದಾಗಿತ್ತು. ಈ ಪಾರಮಾರ್ಥಿಕತೆ ಅವರ ವ್ಯಕ್ತಿತ್ವಕ್ಕೆ, ಕಾರ್ಯಚಟುವಟಿಕೆಗಳಿಗೆ ವಿಶೇಷ ಮೆರುಗನ್ನು ನೀಡಿತ್ತೆಂದೇಳಬಹುದು. (ಅನುಬಂಧ IVರಲ್ಲಿ ನಾಲ್ವಡಿಯವರ ಧಾರ್ಮಿಕ ಪ್ರವಾಸಕ್ಕೆ ಸಂಬಂಧಿಸಿದ ಚಿತ್ರಗಳು ಹಾಗೂ ಮಾರ್ಗಸೂಚಿಗಳನ್ನು ಕಾಣಬಹುದು.)

ಇದುವರೆವಿಗೂ ಸಂಪ್ರದಾಯಬದ್ಧ ಸಾಮಾಜವನ್ನು ಸರಿಯಾಗಿ ಅರ್ಥಮಾಡಿಕೊಂಡು ರಾಜ್ಯವನ್ನು ಮುನ್ನಡೆಸುವಲ್ಲಿ ಅವಶ್ಯಕವಾಗಿದ್ದ ವಿಚಾರಗಳನ್ನು ತಿಳಿಯುವ ದೃಷ್ಟಿಯಿಂದ ಹಾಗೂ ಆ ಸಮಾಜದಲ್ಲಿ ಒಬ್ಬ ಧರ್ಮಾಭಿಮಾನಿ ರಾಜನಾಗಿ ತನ್ನ ಕರ್ಮಾಚರಣೆಗಳನ್ನು ಜಾರಿಗೊಳಿಸುವ ನಿಟ್ಟಿನಲ್ಲಿ ಬೇಕಾದ ಜ್ಞಾನವನ್ನು ನಾಲ್ವಡಿಯವರು ತಾವು ಕೈಗೊಂಡ ಧಾರ್ಮಿಕ ಪ್ರವಾಸಗಳಿಂದ ದೊರೆತ ಅನುಭವಗಳಿಂದ ಹಾಗೂ ಆಲೋಚನೆಗಳಿಂದ ಪಡೆದುಕೊಂಡಿದ್ದನ್ನು ಕಾಣಬಹುದು. ಆದರೆ ನಾಲ್ವಡಿಯವರು ಆಡಳಿತ ನಡೆಸುತ್ತಿದ್ದ ಕಾಲ ಆಧುನಿಕ ಭಾರತದ ಇತಿಹಾಸದಲ್ಲಿ ನವೋದಯ

---

*152. ಜಿ.ಆರ್. ಜೋಸ್ಯೆಯರ್, ಪೂರ್ವೋಕ್ತ, ಪು. 286*

*153. ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು. 464-466*

ಮತ್ತು ಪ್ರಗತಿಶೀಲ ಪ್ರವೃತ್ತಿಯ ಕಾಲವಾಗಿತ್ತು. ಆ ಕಾಲಕ್ಕೆ ನಾಲ್ವಡಿಯವರು ಪರಿಷ್ಕರಿಸಿದ ಆಧುನೀಕರಣ ಆಡಳಿತಗಾರರಾಗಿಯೂ ಸಹ ರೂಪುಗೊಳ್ಳಬೇಕಾಗಿತ್ತು. ಅದಕ್ಕಾಗಿ ನೆರೆಯ ಹಾಗೂ ಹೊರ ದೇಶಗಳೊಡನೆಯ ಸಂಬಂಧವನ್ನು ಬೆಳೆಸಿಕೊಳ್ಳುವುದು ನಾಲ್ವಡಿಯವರಿಗೆ ಅವಶ್ಯಕವಾಗಿತ್ತು. ಈ ಹಿನ್ನೆಲೆಯಲ್ಲಿ ಹಾಗೂ ಮೈಸೂರು ಸಂಸ್ಥಾನದ ಕೀರ್ತಿಯನ್ನು ನೆರೆ ಸಂಸ್ಥಾನಗಳಲ್ಲಿ, ಪ್ರಾಂತ್ಯಗಳಲ್ಲಿ ಹಾಗೂ ಹೊರ ದೇಶಗಳಲ್ಲಿ ಹರಡುವ ದೃಷ್ಟಿಕೋನದಿಂದ ಮತ್ತು ಹೊರ ದೇಶಗಳಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು, ಬೆಳವಣಿಗೆಗಳನ್ನು ಕಣ್ಣಾರೆ ಕಂಡು ಅವುಗಳ ಅನುಕರಣೆಗಳನ್ನು ಮೈಸೂರು ಸಂಸ್ಥಾನದಲ್ಲೂ ಚಾಲ್ತಿಗೊಳಿಸುವ ಮೂಲಕ ವಿಜ್ಞಾನ ಹಿನ್ನೆಲೆಯ ಪ್ರಗತಿಪರ ವಿಚಾರಗಳಿಗೆ ಸ್ಪಂದಿಸುವ ಆಲೋಚನೆಯಲ್ಲೇ ನಾಲ್ವಡಿಯವರು ಮದ್ರಾಸ್, ದೆಹಲಿ ಹಾಗೂ ಯೂರೋಪಿನ ಅನೇಕ ದೇಶಗಳಿಗೆ ಪ್ರವಾಸ ಕೈಗೊಂಡರು. ಅಂತಹ ಪ್ರವಾಸಗಳನ್ನು ಕುರಿತಂತಹ ಕೆಲವು ವಿವರಣೆಗಳನ್ನು ಈ ಕೆಳಗೆ ವಿವರಿಸಿ ವಿಶ್ಲೇಷಿಸಲಾಗಿದೆ.

ನಾಲ್ವಡಿಯವರು 1904-05ರಲ್ಲಿ ಮೈಸೂರು ಸಂಸ್ಥಾನದ ಪಕ್ಕದಲ್ಲೇ ಇದ್ದ ಮದ್ರಾಸ್ ಪ್ರೆಸಿಡೆನ್ಸಿಯ ರಾಜಧಾನಿ ಮದ್ರಾಸ್ ಹಾಗೂ ಅಲ್ಲಿನ ಸುತ್ತಮುತ್ತಲಿನ ಸ್ಥಳಗಳಿಗೂ ಪ್ರವಾಸ ಕೈಗೊಂಡರು. ಈ ಪ್ರವಾಸದಿಂದ ಅವರು ತಮ್ಮ ಸಂಸ್ಥಾನದ ಬಗೆಗೆ ಆ ಪ್ರದೇಶಧ ಜನರಲ್ಲಿ ಸದಭಿಪ್ರಾಯವನ್ನು ಉಂಟುಮಾಡಿದರು. ಮದ್ರಾಸ್ ಪ್ರೆಸಿಡೆನ್ಸಿಯಿಂದ ಅನೇಕ ಮಂದಿ ತಮಿಳು ಮೂಲದ ಅಧಿಕಾರಿಗಳು ಮೈಸೂರು ಸಂಸ್ಥಾನದಲ್ಲಿ ಕೆಲಸ ಮಾಡುತ್ತಿದ್ದರು[154]. ಇಂತಹ ಪ್ರವಾಸ ದಕ್ಷಿಣ ಭಾರತದ ಎರಡು ಪ್ರದೇಶಗಳ ನಡುವೆ ಬಾಂಧವ್ಯವನ್ನು ಕುದುರಿಸುವುದಕ್ಕೆ ಸಹಾಯ ಮಾಡಿತು. ಹಾಗೆಯೇ ಆಧುನಿಕ ಜಗತ್ತಿನ ಕೆಲ ಮಹತ್ವದ ಘಟನೆಗಳಿಗೆ ಸಮಕಾಲೀನರಾಗಿದ್ದ ನಾಲ್ವಡಿಯವರು ತಮ್ಮನ್ನು ಕಾಲ ಕಾಲಕ್ಕೆ ಹೇಗೆ ಪರಿಷ್ಕರಿಸಿಕೊಳ್ಳುತ್ತಿದ್ದರೆಂಬುದನ್ನು ಅವರು ಕೈಗೊಂಡಿದ್ದ ವಿದೇಶಿ ಪ್ರವಾಸಗಳ ಬಗೆಗಿನ ವಿಷಯಗಳ ವಿಶ್ಲೇಷಣೆಯಿಂದ ತಿಳಿಯಬಹುದಾಗಿದೆ.

### *ವಿದೇಶಿ ಪ್ರವಾಸಗಳು : ಮೈಸೂರು ಸಂಸ್ಥಾನದ ಪ್ರತಿನಿಧಿಯಾಗಿ*

***1. ಜಪಾನ್ ಪ್ರವಾಸಕ್ಕೆ ಪ್ರಯತ್ನ :*** ಅಧ್ಯಯನ ಮತ್ತು ಪ್ರವಾಸಗಳು ನಾಲ್ವಡಿಯವರ ಮನಸ್ಸನ್ನು ಹೇಗೆ ರೂಪಿಸಿದವೆಂದು ಗ್ರಹಿಸಲು ಆಗಿನ ಸಮಕಾಲೀನ ಜಗತ್ತಿನಲ್ಲಿ ಘಟಿಸುತ್ತಿದ್ದ ಕೆಲ ಸಂಗತಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ನಾಲ್ವಡಿಯವರು ಆಧುನಿಕ ಜಗತ್ತಿನ ಕೆಲ ಮಹತ್ತರ ಘಟನೆಗಳ ಸಮಕಾಲೀನರಾಗಿದ್ದರು ಹಾಗೂ ಅವರು ಆಧುನಿಕ ಜಪಾನಿನ ಉದಯದ ಸಮಕಾಲೀನರೂ ಆಗಿದ್ದರು. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಜಪಾನಿನಲ್ಲಿ 1862ರಿಂದ1912ರ ಅವಧಿಯ ಮಿಜಿಕ್ರಾಂತಿ ಎಂಬ ಹೆಸರಿನಲ್ಲಿ ಆ ದೇಶದಲ್ಲಿ ನಡೆಯುತ್ತಿದ್ದ ಆಧುನೀಕರಣ

*154. ಸ್ಪೀಚಸ್ ಆಫ್ ಹಿಸ್ ಹೈನೆಸ್., ಪೂರ್ವೋಕ್ತ, ಪು. 25-27*

ಮತ್ತು ಪಾಶ್ಚಾತ್ಯೀಕರಣಗಳು ತರಂಗವಾಗಿ ಗ್ರಾಮೀಣ ಜಪಾನನ್ನು ಪರಿವರ್ತನೆಗೊಳಿಸುತ್ತಿದ್ದ ಕಾಲದ ಸಮಕಾಲೀನರಾಗಿದ್ದರು. ಆ ಬೆಳವಣಿಗೆಯ ರೀತಿಯನ್ನು ಗಮನಿಸಿದ ನಾಲ್ವಡಿಯವರು ಅದನ್ನು ಬಹಳಷ್ಟೇ ಮೆಚ್ಚಿಕೊಂಡಿದ್ದರು. ಎಲ್ಲರೂ ಹೇಳುವಂತೆ ಜಪಾನ್ ದೇಶವು ಹಳೆಯದನ್ನು ಕಿತ್ತೊಗೆದು ಹೊಸತನ್ನು ಸ್ಥಾಪಿಸದೆ ಹಳೆಯದರ ಮೇಲೆ ಹೊಸತನ್ನು ಕಸಿ ಮಾಡುತ್ತಿದ್ದ ಕಾಲ ಅದಾಗಿತ್ತು. ಮೈಸೂರು ರಾಜಮನೆತನದ ಸಂಪ್ರದಾಯ ಮತ್ತು ಸಂಸ್ಕೃತಿಗಳು ಕೂಡ ಇದೇ ರೀತಿಯಲ್ಲಿ ಕೆಲಸವನ್ನು ಮಾಡುತ್ತಿದ್ದವು. ಪ್ರಾಯಶಃ 1904-1905ರ ರಷ್ಯಾ ಮತ್ತು ಜಪಾನಿನ ನಡುವಣ ಯುದ್ಧವು ಆಧುನಿಕ ಏಷ್ಯಾದ ಇತಿಹಾಸದಲ್ಲಿಯೇ ಅತ್ಯಂತ ಮಹತ್ತರ ಘಟನೆಯಾಗಿದ್ದಿತು. ಈ ಯುದ್ಧದಲ್ಲಿ ಪುಟಾಣಿ ಜಪಾನ್ ದೈತ್ಯ ರಷ್ಯಾವನ್ನು ಸೋಲಿಸಿದ್ದಿತು. ವಸಾಹತು ಏಷ್ಯಾ ಮತ್ತು ಅದರ ರಾಷ್ಟ್ರೀಯ ಧುರೀಣರು ಎಲ್ಲೆಡೆಗಳಲ್ಲಿಯೂ ಜಪಾನಿನ ಈ ವಿಜಯದಿಂದ ಪ್ರೇರಣೆ ಪಡೆದರು. ಅದು ಒಂದು ದೇಶವು ಇನ್ನೊಂದು ದೇಶದ ಮೇಲೆ ಸಾಧಿಸಿದ ವಿಜಯ ಮಾತ್ರವಾಗಿರಲಿಲ್ಲ. ಮೈಸೂರು ರಾಜ್ಯವನ್ನೊಳಗೊಂಡಂತೆ ತುಳಿತಕ್ಕೊಳಗಾದ ಏಷ್ಯಾದ ದೇಶಗಳಿಗೆ ಅದು ಅತ್ಯಂತ ಅರ್ಥಪೂರ್ಣವೂ, ಸಂಕೇತವೂ ಆಗಿದ್ದಿತು. ಅದು ಬಿಳಿಯರ ಮೇಲೆ ಅಶ್ವೇತವರ್ಣಿಯರು ಸಾಧಿಸಿದ ವಿಜಯವಾಗಿದ್ದಿತು; ಅದು ಪೌರ್ವಾತ್ಯ ಜಗತ್ತು ಪಾಶ್ಚಿಮಾತ್ಯ ಜಗತ್ತಿನ ಮೇಲೆ ಸಾಧಿಸಿದ ವಿಜಯವಾಗಿದ್ದಿತು ಹಾಗೂ ಏಷ್ಯಾದ ಜನತೆ ಯೂರೋಪಿನ ಜನತೆಯ ಮೇಲೆ ಸಾಧಿಸಿದ ವಿಜಯವಾಗಿದ್ದಿತು.ಈ ವಿಜಯದಿಂದ ಜಪಾನ್ ದೇಶವು ಒಂದು ವಿಶ್ವಶಕ್ತಿಯಾಗಿ ಬೆಳೆಯುವ ಹಾದಿಯನ್ನು ಹಿಡಿಯಿತು ಮತ್ತು ಉದಯತಾರೆ ಜಪಾನ್ ಏಷ್ಯಾದ ಜನತೆಯ ಮನಗಳಲ್ಲಿ ಆಶಾಕಿರಣವನ್ನು ಹೊತ್ತಿಸಿ ಆಶಾವಾದವನ್ನು ಧೃಢತೆ ಹಾಗೂ ಮನಸ್ಥೈರ್ಯಗಳನ್ನು ಹುಟ್ಟಿಸಿತು. ಇಂಗ್ಲೆಂಡ್ ಜಪಾನಿನ ಸಮಾನ ಸ್ಕಂದ ದೇಶವಾಯಿತು. ಎಲ್ಲದಕ್ಕಿಂತ ಮಿಗಿಲಾಗಿ ಜಪಾನಿನ ಕೈಗಾರಿಕಾ ಮತ್ತು ಸಾಮಾಜಿಕ ಕ್ರಾಂತಿಗಳು ಏಷ್ಯಾ ದೇಶದ ರಾಜ್ಯಗಳಿಗೆ ಆಕರ್ಷಕ ಮಾದರಿಯಾದವು. ಈ ಹಿನ್ನೆಲೆಯಲ್ಲಿ 1908ರಲ್ಲಿ ಜಪಾನಿನ ಪ್ರವಾಸವನ್ನು ಏರ್ಪಡಿಸಲಾಯಿತು. ಆ ವರ್ಷ ನಾಲ್ವಡಿಯವರು ಮತ್ತು ಅವರ ಸಹೋದರ ಕಂಠೀರವ ನರಸಿಂಹರಾಜ ಒಡೆಯರವರು ಜಪಾನಿಗೆ ಪ್ರಯಾಣ ಬೆಳೆಸುವುದಾಗಿ ತೀರ್ಮಾನಿಸಲಾಯಿತು. ಆದರೆ ಮುಂಗಾರು ಮಳೆಯ ವೈಫಲ್ಯದಿಂದ ಅಭಾವ ಪರಿಸ್ಥಿತಿ ಉಂಟಾಗಿ ರಾಜ್ಯದ ಕೆಲ ಭಾಗಗಳಲ್ಲಿ ಕ್ಷಾಮವೇ ತಲೆದೋರಿ ನಾಲ್ವಡಿಯವರು ತಮ್ಮ ಜಪಾನಿನ ಪ್ರವಾಸವನ್ನು ಕೈ ಬಿಡಬೇಕಾಯಿತು[155].ಇದು ಮೈಸೂರು ರಾಜ್ಯದ ಪ್ರಗತಿಪರ ಆಳರಸನಿಗೆ ತನ್ನ ಪ್ರಜೆಗಳ ಬಗ್ಗೆ ಇದ್ದ ಅತ್ಯಂತ ಪ್ರಬಲ ಜವಾಬ್ದಾರಿಯ ಭಾವನೆಯನ್ನು, ಅದರ ಬಗ್ಗೆ ಆತನಿಗಿದ್ದ ಅರಿವನ್ನು ತೋರಿಸುತ್ತದೆ. ಆದರೆ ಜಪಾನಿನ ಪ್ರವಾಸವನ್ನು ಸಂಪೂರ್ಣವಾಗಿ ಕೈ ಬಿಡಲಿಲ್ಲ. ಏಕೆಂದರೆ ಅದು ಮೈಸೂರು ಸಂಸ್ಥಾನದ ಮುಂದಿನ ಹಿತಾಸಕ್ತಿಯ ದೃಷ್ಟಿಯಿಂದ ರೂಪಿಸಲಾಗಿದ್ದ ಪ್ರವಾಸವಾಗಿತ್ತು. ರಾಜ ಸಹೋದರರ ಮನಸ್ಸಿನಲ್ಲಿ

---

*155. **ವೆಂಕಟರಾಮಯ್ಯ ಸಿ.ಕೆ.,** ಆಳಿದ ಮಹಾಸ್ವಾಮಿಗಳು, **ಪೂರ್ವೋಕ್ತ,** ಪು. 235*

ಜಪಾನ್ ಮೈಸೂರಿನ ಭವಿಷ್ಯಕ್ಕೆ ಮಾದರಿಯಾಗಿ ಬಿಟ್ಟಿತು. ಆದ್ದರಿಂದ ನಾಲ್ವಡಿಯವರು 1908 ರಲ್ಲಿ ತಮ್ಮ ಸೋದರನನ್ನು ಜಪಾನಿಗೆ ಕಳುಹಿಸಿದರು. ಆತನು ಹಿಂದುರುಗಿದ ಮೇಲೆ ಆತನೊಡನೆ ಆಧುನಿಕ ಜಪಾನಿನ ಬಗ್ಗೆಯೂ ಅಲ್ಲಿನ ಪರಂಪರೆಗೆ ಧಕ್ಕೆ ಬರದಂತೆ ನಡೆಯುತ್ತಿದ್ದ ಕ್ರಾಂತಿಯ ವೇಗದ ಆಧುನೀಕರಣ ಬಗ್ಗೆಯೂ ದೀರ್ಘವಾಗಿ ಚರ್ಚಿಸಿದರು[156].

ಆಧುನಿಕ ಮೈಸೂರು ಸಂಸ್ಥಾನದ ನವೀಕರಣಕ್ಕಾಗಿ ಜಪಾನಿನೊಂದಿಗೆ ಮೈಸೂರು ಸಂಸ್ಥಾನದ ಸಂಪರ್ಕವನ್ನು ಭದ್ರಬುನಾದಿಯ ಮೇಲೆ ನಿಲ್ಲಿಸಿದ ಕೀರ್ತಿ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಸಲ್ಲುತ್ತದೆ ಎಂದರೆ ಅದು ಉತ್ಪ್ರೇಕ್ಷೆಯಲ್ಲ. ಸಮಕಾಲೀನ ಮೈಸೂರಿನವರ ಮನಗಳಲ್ಲಿ ಜಪಾನಿನ ಬಗ್ಗೆ ಇದ್ದ ಪರಿಕಲ್ಪನೆಯನ್ನು 'ಮೈಸೂರ್ ಮೇಲ್' ಪತ್ರಿಕೆಯು ತನ್ನ 1908 ಡಿಸೆಂಬರ್ 3ರ ಸಂಚಿಕೆಯಲ್ಲಿ ರಮ್ಯವಾಗಿ ಹೀಗೆ ವರ್ಣಿಸುತ್ತದೆ.

"ಅನುಕರಣೀಯ ಮೇಲ್ಪಂಕ್ತಿಯಾಗಲು ಜಪಾನ್ ದೇಶಕ್ಕಿಂತ ಉತ್ತಮವಾದ ದೇಶ ಬೇರೊಂದಿಲ್ಲ. ಅದರಲ್ಲೂ ನೈಸರ್ಗಿಕ ಸಂಪನ್ಮೂಲಗಳು ಎರಡೂ ದೇಶಗಳಲ್ಲಿ ಹೆಚ್ಚು ಕಡಿಮೆ ಒಂದೇ ಆಗಿವೆ. ಬೇರೆ ದೇಶಗಳು ಶತಶತಮಾನಗಳ ಕಾಲ ಸಾಧಿಸಿದ ಉನ್ನತಿಯನ್ನು ಜಪಾನ್ ದೇಶವು ಅರ್ಧ ಶತಮಾನದಲ್ಲೇ ಸಾಧಿಸಿದ ಆಶ್ಚರ್ಯಕರ ಪ್ರಗತಿಯನ್ನು ವಿವರಿಸುವುದಕ್ಕಿಂತ ಮನದಲ್ಲೇ ಅನುಭವಿಸುವುದು ಲೇಸು. ಒಂದು ದೇಶದ ಹಿರಿಮೆಯ ಒರೆಗಲ್ಲು ಆ ದೇಶವು ತನ್ನ ನೈಸರ್ಗಿಕ ಸಂಪನ್ಮೂಲಗಳನ್ನು ಹೇಗೆ ವೃದ್ಧಿಪಡಿಸಿತು ಎಂಬುದಾಗಿದ್ದು ಈ ವಿಚಾರದಲ್ಲಿ ಜಪಾನನ್ನು ಯಾವ ದೇಶವೂ ಹಿಮ್ಮೆಟ್ಟಿಸಿಲ್ಲ. ರಷ್ಯಾದೊಡನೆಯ ಯುದ್ಧಾನಂತರದ ಕಳೆದ ಹನ್ನೆರಡು ವರ್ಷಗಳಲ್ಲಿ ಜಪಾನಿನ ಸರ್ಕಾರಿ ಆದಾಯವು ಆರು ಪಟ್ಟು ಹೆಚ್ಚಿ ಹತ್ತು ಕೋಟಿ ಯೆನ್‌ಗಳಿಂದ ಅರವತ್ತು ಕೋಟಿ ಯೆನ್‌ಗಳಿಗೇರಿದೆ....... ಜಪಾನ್‌ನ ಕೆಲ ಆಡಳಿತ ಇಲಾಖೆಗಳು ಪ್ರಪಂಚದ ಬೇರೆಲ್ಲ ದೇಶಗಳನ್ನು ಹಿಮ್ಮೆಟಿಸಿವೆ"[157].

***ii ಯೂರೋಪ್ ಪ್ರವಾಸ :*** ಸಾಮಾನ್ಯವಾಗಿ ಯೂರೋಪಿನಲ್ಲಿ ಮತ್ತು ಇಂಗ್ಲೆಂಡ್, ಫ್ರಾನ್ಸ್ ಹಾಗೂ ಜರ್ಮನಿಗಳಲ್ಲಿ ಪ್ರಮುಖವಾಗಿ ಆದ ವೈಜ್ಞಾನಿಕ, ತಾಂತ್ರಿಕ ಮತ್ತು ವೈಚಾರಿಕತೆಗಳಲ್ಲಿ ಉಂಟಾದ ಕ್ರಾಂತಿಯೇ ಪಶ್ಚಿಮದ ಪ್ರಗತಿಪರ ಬೆಳವಣಿಗೆಗೆ ಕಾರಣವಾಯಿತು. ಈ ಪಾಶ್ಚಿಮಾತ್ಯ ದೇಶಗಳಲ್ಲಾದ ಈ ಬೆಳವಣಿಗೆಗಳಿಂದಾಗಿ ಆಧುನಿಕ ವಿಚಾರಗಳು, ಆಧುನಿಕ ಮಾನವ, ಆಧುನಿಕ ಸಂಸ್ಥೆಗಳ ಬೆಳವಣಿಗೆಗೆ ಕಾರಣವಾಯಿತೆಂದು ಸಾಮಾನ್ಯವಾಗಿ ನಂಬಲಾಗಿದೆ.

ಸ್ಥಳೀಯ ಸಂಸ್ಥಾನವಾದ ಮೈಸೂರು ವಸಾಹತುಶಾಹಿಯ ವ್ಯವಸ್ಥೆಯ ಮೂಲಕ ಪಾಶ್ಚಿಮಾತ್ಯ ಸಮಾಜದೊಂದಿಗೆ ಅಪರೋಕ್ಷವಾದ ಸಂಬಂಧವನ್ನು ಹಾಗೂ ಪ್ರಭಾವವನ್ನು ಹೊಂದಿದ್ದತ್ತೆಂದೇಳಬಹುದು. 20ನೇ

---

*156. **ವೆಂಕಟರಾಮಯ್ಯ ಸಿ.ಕೆ.,** ಶ್ರೀ ಮದ್ದುವರಾಜ ಕಂಠೀರವರ ಜೀವನ ಚರಿತ್ರೆ, ಪೂರ್ವೋಕ್ತ, ಪು. 82*

*157. 1908 ಡಿಸೆಂಬರ್ 3ರ '**ಮೈಸೂರ್ ಮೇಲ್**' ದಿನಪತ್ರಿಕೆ, ಪ್ರೆಸ್‌ಕಟಿಂಗ್ಸ್, ಪೂರ್ವೋಕ್ತ, ಪು. 14*

ಶತಮಾನದ ಆರಂಭದಿಂದಿಡಿದು 1947 ರ ರವರೆಗೆ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಹತೋಟಿಯಲ್ಲಿದ್ದ ಯಾವುದೇ ದೇಶೀಯ ಸಂಸ್ಥಾನವಾಗಲಿ ಅಥವಾ ಆಳರಸರಾಗಲಿ ಸಾಮಾನ್ಯವಾಗಿ ಪಾಶ್ಚಿಮಾತ್ಯ ಯೂರೋಪಿನ ಮಾದರಿ ಅಥವಾ ಪ್ರಮುಖವಾಗಿ ಬ್ರಿಟನ್ನಿನ ಮಾದರಿಯ ಜೀವನ ವಿಧಾನ ಮತ್ತು ಸಾಂಸ್ಥಿಕ ವ್ಯವಸ್ಥೆಯನ್ನು ತಮ್ಮ ಆಳ್ವಿಕೆಯ ಪ್ರದೇಶಗಳಲ್ಲಿ ಅಳವಡಿಸಿಕೊಳ್ಳುವ ಅಥವಾ ಅನುಸರಿಸಲೇ ಬೇಕಾದ ಅನಿವಾರ್ಯತೆ ಇದ್ದಿತು. ಈ ಹಿನ್ನೆಲೆಯಲ್ಲಿ ನಾವು ಮೈಸೂರಿನ ಆಳರಸರ ಯೂರೋಪ್ ಪ್ರವಾಸವನ್ನು ವಿಶ್ಲೇಷಿಸಬೇಕು. ಯೂರೋಪ್‌ನ ಈ ಪ್ರವಾಸಗಳು ಆಳುವ ಪ್ರತಿನಿಧಿಗಳ ಮನಸ್ಸನ್ನು ರೂಪಿಸಲು ಹೇಗೆ ನೆರವಾದವು ಎಂಬುದನ್ನು ಗುರುತಿಸುವಾಗ ಅವು ಬಹು ವಿಶಿಷ್ಟವಾದ ಪ್ರಭಾವವಾಗಿ ಕಂಡುಬರುತ್ತವೆ. 1931ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಪ್ರೀತಿಯ ಸೋದರ ಕಂಠೀರವ ನರಸಿಂಹರಾಜ ಒಡೆಯರರನ್ನು ನಿರ್ಧಿಷ್ಟವಾದ ಉದ್ದೇಶಗಳ ಮೇಲೆ ಯೂರೋಪಿಗೆ ಪ್ರವಾಸ ಕಳುಹಿಸಿದರು[158]. ಆ ನಿರ್ಧಿಷ್ಟ ಉದ್ದೇಶಗಳಲ್ಲಿ ಮೊದಲನೆಯದಾಗಿ ಮಹಾರಾಜರು ಇಂಗ್ಲೆಂಡ್, ಫ್ರಾನ್ಸ್ ಮತ್ತು ಜರ್ಮನಿಗಳಲ್ಲಿನ ಆಧುನಿಕ ಸರ್ಕಾರಗಳು ತಮ್ಮ ಜನತೆಯ ಕಲ್ಯಾಣಕ್ಕಾಗಿ ಯಾವ ಕ್ರಮಗಳನ್ನು ಕೈಗೊಂಡಿದ್ದಾರೆಂದು ತಿಳಿಯುವುದು. ಎರಡನೆಯದಾಗಿ ತಮ್ಮ ಸೋದರ ನೋಡಿದ ಕೆಲ ಪಾಶ್ಚಿಮಾತ್ಯ ಕಾರ್ಯಕ್ರಮಗಳನ್ನು ತಮ್ಮ ಶಕ್ತ್ಯಾನುಸಾರ ತಮ್ಮ ರಾಜ್ಯದಲ್ಲೂ ಅಳವಡಿಸಲು ಪ್ರಯತ್ನಿಸುವುದು. ನಾಲ್ವಡಿಯವರ ಆಳ್ವಿಕೆಯ ಅವಧಿಯಲ್ಲಿ ಸೋದರರಾದ ಕಂಠೀರವರು ಮಹಾರಾಜರ ಬಲಗೈಯಂತಿದ್ದರೆಂಬುದನ್ನು ಗಮನದಲ್ಲಿಟ್ಟುಕೊಂಡಿರಬೇಕು[159]. ಮಹಾರಾಜರ ಇಚ್ಛೆಯ ಮೇರೆಗೆ 1913ರಲ್ಲಿ ಯೂರೋಪ್ ಪ್ರವಾಸ ಕೈಗೊಂಡ ಕಂಠೀರವ ನರಸಿಂಹರಾಜ ಒಡೆಯರು ಪ್ರವಾಸದಿಂದ ರಾಜಧಾನಿ ನಗರ ಮೈಸೂರು ಹಾಗೂ ಕೈಗಾರಿಕಾ ಮತ್ತು ವಾಣಿಜ್ಯ ನಗರವಾಗಿ ಬೆಳೆಯುತ್ತಿದ್ದ ಬೆಂಗಳೂರುಗಳ ನಗರಾಭಿವೃದ್ಧಿ ಯೋಜನೆಗಳಲ್ಲಿ ವ್ಯಕ್ತಗೊಂಡಿತು[160].

ಈ ಪ್ರವಾಸವು ನಮ್ಮ ಈ ಅಧ್ಯಾಯದ ವ್ಯಾಪ್ತಿಯಲ್ಲಿ ಬರುವುದಿಲ್ಲವಾದರೂ ಆಗಲೇ ಸರಿಯಾದ ಹಾದಿಯಲ್ಲಿ ರೂಪುಗೊಂಡಿದ್ದ ನಾಲ್ವಡಿಯವರ ಮನಸ್ಥಿತಿಯನ್ನು ಅರಿಯಲು ನೆರವಾಗುತ್ತದೆ. ನಾಲ್ವಡಿಯವರು 1936ರಲ್ಲಿ ತಮ್ಮ 52ನೇ ವಯಸ್ಸಿನಲ್ಲಿ ಪ್ರಥಮ ಯೂರೋಪ್ ಪ್ರವಾಸವನ್ನು ಕೈಗೊಂಡರು[161]. ಇವರ ಈ ಪ್ರವಾಸದ ವೇಳೆಗಾಗಲೇ ಎರಡನೇ ಮಹಾಯುದ್ಧದ ಕಾರ್ಮೋಡಗಳು ಯೂರೋಪನ್ನು ಆವರಿಸಿದ್ದವು. ನಾಲ್ವಡಿಯವರ ಸೋದರ ಕಂಠೀರವರು 1913ರಲ್ಲಿ ನೀಡಿದ ಭೇಟಿಯ ಕಾಲಕ್ಕಿಂತ 1936ರ ನಾಲ್ವಡಿಯವರ ಪ್ರವಾಸದ ವೇಳೆಗೆ ಇಡೀ ಯೂರೋಪ್ ವಿಜ್ಞಾನ ಮತ್ತು ತಂತ್ರಗಾರಿಕೆಯಲ್ಲಿ ಹೋಲಿಕೆಯಿಲ್ಲದ ಮಟ್ಟಕ್ಕೆ ಬೆಳೆದಿದ್ದನ್ನು ಕಂಡಿದ್ದರು. ಅನೇಕ ಪ್ರವಾಸಗಳ ಮೂಲಕ

---

*158. ಎಂ. ಶಾಮರಾವ್, ಪೂರ್ವೋಕ್ತ (ಅನುಬಂಧ), ಪು. 493*

*159. ವೆಂಕಟರಾಮಯ್ಯ ಸಿ.ಕೆ., ಶ್ರೀ ಮದ್ಯುವರಾಜ ಕಂಠೀರವರ ಜೀವನ ಚರಿತ್ರೆ, ಪೂರ್ವೋಕ್ತ, (ಪೀಠಿಕೆ). ಪು. vii*

*160. ಅದೇ., ಪು. 105-106*

*161. ಶಾಮರಾವ್ ಎಂ., ಪೂರ್ವೋಕ್ತ (ಅನುಬಂಧ), ಪು. 493*

ತಾವು ಕಣ್ಣಾರೆ ಕಂಡದ್ದನ್ನು ನಾಲ್ವಡಿಯವರ ಬಳಿ ಸಾಕಷ್ಟು ಸಂದರ್ಭಗಳಲ್ಲಿ ಚರ್ಚಿಸಿದ್ದರು. ಹಾಗೆಯೇ ಮೈಸೂರಿನಲ್ಲಿ ತಾವು ಯೂರೋಪಿನಲ್ಲಿ ಕಂಡಂತಹ ನಗರಗಳ ಮಾದರಿಯಲ್ಲೇ ಅನೇಕ ಬಡಾವಣೆಗಳನ್ನು ಹಾಗೂ ಭವನಗಳನ್ನು ನಿರ್ಮಿಸಲು ಸೋದರನ ಬಳಿ ಚರ್ಚಿಸಿದ್ದರು. ಈ ಹಿನ್ನೆಲೆಯಲ್ಲಿ ಸಾಕಷ್ಟು ಪ್ರಭಾವಿತರಾಗಿದ್ದ ನಾಲ್ವಡಿಯವರು 1936ರಲ್ಲಿ ಬೊಂಬಾಯಿಯಿಂದ ರಾನ್‌ಪುರಾ ಎಂಬ ಹೆಸರಿನ ಹಡಗಿನಲ್ಲಿ ಕುಳಿತು ತಮ್ಮ ಪ್ರಯಾಣವನ್ನಾರಂಭಿಸಿದರು. ಅವರು ಸೂಯಜ್‌ಕಾಲುವೆ ಮಾರ್ಗವಾಗಿ ಸಾಗಿ ಮೆಡಿಟರೇನಿಯನ್ ಸಮುದ್ರದ ಮೂಲಕ ಮಾರ್ಸೆಲ್ಸ್‌ನ್ನು ತಲುಪಿದರು. ಅಲ್ಲಿಂದ ಫ್ರಾನ್ಸಿನ ಪ್ಯಾರಿಸ್‌ಗೆ ಹೋಗಿ ಅಲ್ಲಿ ನಾಲ್ಕು ದಿನಗಳಿದ್ದು, ಅಲ್ಲಿಂದ ಬ್ರಿಟಿಷ್ ಕಡಲ್ಗಾಲುವೆ ದಾಟಿ ಲಂಡನ್ ನಗರವನ್ನು ತಲುಪಿದರು. ಲಂಡನ್ನಿನಲ್ಲಿ ಲಾರ್ಡ್ ಮತ್ತು ಲೇಡಿ ಗೋಷನ್ ಮುತಾದ ಗಣ್ಯರಿಂದ ಸ್ವಾಗತ ಪಡೆದು ಲಂಡನ್ನಿನ ಡಾರ್ಚೆಸ್ಟರ್ ಹೋಟೆಲ್ ಒಂದರಲ್ಲಿ ಉಳಿದುಕೊಂಡರು[162]. ನಾಲ್ವಡಿಯವರು ಇಂಗ್ಲೆಂಡಿನಲ್ಲಿದ್ದಾಗ ಅಲ್ಲಿನ ಗ್ರಾಮಾಂತರ ಪ್ರದೇಶಗಳನ್ನು, ಅಲ್ಲಿಯ ಕೃಷಿ ವಿಧಾನಗಳನ್ನು ನೋಡಿ ಬಂದರು. ಅವರಿಗೆ ಸ್ಕಾಟ್ಲೆಂಡ್ ಪ್ರವಾಸಕ್ಕಾಗಿ "ಮೈಸೂರು ಸ್ಪೆಷಲ್" ಎಂಬ ವಿಶೇಷ ರೈಲನ್ನು ಒದಗಿಸಿ ಕೊಡಲಾಗಿತ್ತು. ಆ ರೈಲಿನಲ್ಲಿ ಸದಾ ಇರಲು ಎಲ್ಲಾ ರೀತಿಯ ಸೌಕರ್ಯಗಳೂ ಇದ್ದವು. ಸ್ಕಾಟ್‌ಲೆಂಡಿನ ಉದ್ಯಾನವನಗಳು, ಪ್ರಾಣಿ ಸಂಗ್ರಹಾಲಯ, ವಸ್ತು ಸಂಗ್ರಹಾಲಯಗಳನ್ನು ನಾಲ್ವಡಿಯವರು ವೀಕ್ಷಿಸಿದರು. ನಂತರ ಇಂಗ್ಲೆಂಡಿನ ಸಬ್‌ಮೆರಿನ್‌ನಲ್ಲಿ ಕುಳಿತು ಸಮುದ್ರದಾಳದಲ್ಲಿ ಪ್ರಯಾಣಿಸಿ ಅನುಭವ ಗಳಿಸಿದರು.

ಲಂಡನ್ನಿನಲ್ಲಿದ್ದಾಗ ನಾಲ್ವಡಿಯವರ ಶ್ರೀಮಂತಿಕೆಯ ಸಜ್ಜನಿಕೆ, ಸರಳತೆ, ಬುದ್ಧಿವಂತಿಕೆ, ಸೌಜನ್ಯತೆ ಅಲ್ಲಿನ ಜನತೆಯಿಂದ ಪ್ರಶಂಸಿಸಲ್ಪಟ್ಟಿತು. ಅವರನ್ನು ಹೊಗಳಿ ಅನೇಕ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡವು. ಡೈಲಿಸ್ಕೆಚ್ ಎಂಬ ಪತ್ರಿಕೆ "ಪ್ರಪಂಚದ ಕೋಟ್ಯಾಧೀಶ್ವರರಲ್ಲಿ ಒಬ್ಬರು" ಎಂಬುದಾಗಿ ಬರೆದಿತ್ತು.

ಲಂಡನ್ ನಗರದಿಂದ ಜರ್ಮನಿಯ ಬರ್ಲಿನ್ ನಗರಕ್ಕೆ ಸ್ಪೆಕ್‌ಸ್ಕೈ ಎಂಬ ವಿಮಾನದಲ್ಲಿ ಪ್ರಯಾಣಿಸಿದ ನಾಲ್ವಡಿಯವರು ಜರ್ಮನಿಯಲ್ಲಿ ಕೈಗಾರಿಕಾ ಪ್ರದೇಶಗಳನ್ನು, ವೈಜ್ಞಾನಿಕ ಪ್ರಗತಿಯನ್ನು, ಜರ್ಮನ್ನರ ಶ್ರದ್ಧೆಯನ್ನು, ವೈಜ್ಞಾನಿಕ ಮನೋಭಾವವನ್ನು, ಉತ್ಸಾಹ ಹಾಗೂ ದೇಶಭಕ್ತಿಯನ್ನು ಕಂಡು ಮೆಚ್ಚಿಗೆ ವ್ಯಕ್ತಪಡಿಸಿದರು. ಜರ್ಮನಿಯ ಜಿಪ್ಸಿ ಸಂಗೀತ ನಾಲ್ವಡಿಯವರಿಗೆ ತುಂಬಾ ಮೆಚ್ಚುಗೆಯಾಯಿತು.

ಯೂರೋಪಿನ ಹಲವಾರು ದೇಶಗಳನ್ನು ಸಂದರ್ಶಿಸಿ, ಆ ದೇಶಗಳ ಸಾಧನೆ, ದೇಶಭಕ್ತಿ ಕಂಡು ಸಂತೋಷಗೊಂಡ ನಾಲ್ವಡಿಯವರು ನಂತರ ಆಸ್ಟ್ರೀಯಾದ ಪರ್ವತ ಪ್ರದೇಶದಲ್ಲೂ, ಆಲ್ಪ್ಸ್ ಪರ್ವತ ಶ್ರೇಣಿಯಲ್ಲೂ

---

*162. ಸೇವಂತಿ ಡಿ. ರೈ., ರಾಜರ್ಷಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು, ಮೈಸೂರು, 1996, ಪು. 69*

ಸಂಚರಿಸಿ ಆಹ್ಲಾದಿಸಿದರು. ವಿದೇಶಿ ಪ್ರವಾಸ ಮುಗಿಸಿ ಮೈಸೂರಿಗೆ ಹಿಂದಿರುಗುವಾಗ ಮೊರ್ಸೆಲ್ಸ್‌ನಲ್ಲಿ 1936ರ ಸೆಪ್ಟೆಂಬರ್‌ನಲ್ಲಿ ಗಣೇಶ ಹಬ್ಬವನ್ನು ಆಚರಿಸಿ ಎಸ್.ಎಸ್.ಸ್ಟ್ರಾತ್‌ಮೋರ್ ಎಂಬ ಹಡಗಿನಲ್ಲಿ ವಾಪಾಸ್ಸಾದರು. ವಿದೇಶದಿಂದ ಬರುವಾಗ ನಾಲ್ವಡಿಯವರು ತಂದ ಕೆಲವು ವಸ್ತುಗಳಲ್ಲಿ ಕುರುಡರ ಕೈ ಗಡಿಯಾರವೂ ಒಂದಾಗಿತ್ತು. ಅದನ್ನು ಕುರುಡು ಪಿಟೀಲು ವಾದಕ ಶಿವರುದ್ರಪ್ಪನಿಗಾಗಿ ತಂದಿದ್ದರು. ಆ ಗಡಿಯಾರದಿಂದ ಗಂಟೆಯನ್ನು ತಿಳಿಯುವುದು ಹೇಗೆಂದು ಸಹ ತಾವೇ ಆತನಿಗೆ ಹೇಳಿಕೊಟ್ಟರು[163].

ಮೇಲಿನ ನಾಲ್ವಡಿಯವರ ಯೂರೋಪ್ ಪ್ರವಾಸದ ವಿವರಣೆಯ ಜೊತೆಯಲ್ಲಿಯೇ ಇನ್ನೂ ಕೆಲವು ಅಂಶಗಳನ್ನು ಗುರುತಿಸಬಹುದಾಗಿದೆ. ಮೊದಲನೆಯದಾಗಿ ನಾಲ್ವಡಿಯವರು ತಮ್ಮ ಇಡೀ ಯೂರೋಪ್ ಪ್ರವಾಸದಲ್ಲಿ ಭಾರತದ ಯಾವುದೇ ಒಂದು ದೇಶೀಯ ಸಂಸ್ಥಾನದ ಮಹಾರಾಜ ಎಂಬುದಕ್ಕಿಂತ ಇಡೀ ಭಾರತದ ಸಾಂಸ್ಕೃತಿಕ ರಾಯಭಾರಿಯಂತೆ ಯೂರೋಪ್ ಅವರನ್ನು ಗುರುತಿಸಿತು. ಎರಡನೆಯದಾಗಿ ಅವರು ತಮ್ಮ ಪ್ರವಾಸದ ಅನೇಕ ಸಂದರ್ಭಗಳಲ್ಲಿ ಕುಡಿಯಲು ಮತ್ತು ಸಾಂಪ್ರದಾಯಿಕ ಆಚರಣೆಗಳನ್ನು ಕೈಗೊಳ್ಳಲು ಗಂಗಾಜಲ ಅಥವಾ ಗಂಗಾನದಿಯ ನೀರನ್ನು ತಮ್ಮ ಜೊತೆಯಲ್ಲಿ ಕೊಂಡೊಯ್ದಿದ್ದರು[164]. ಮೂರನೆಯದಾಗಿ ಹಿಂದೂ ಪಂಚಾಂಗದಂತೆ ಲಂಡನ್ನಿನಲ್ಲಿದ್ದಾಗಲೇ ಮೇಡನ್ ಹೆಡ್ ಎಂಬಲ್ಲಿ ಥೇಮ್ಸ್ ನಂದಿ ದಂಡೆಯಲ್ಲಿ ಉಪಕರ್ಮ ಆಚರಣೆಗಳನ್ನು ನಡೆಸಿ ಪವಿತ್ರ ಜನಿವಾರವನ್ನು ಬದಲಾಯಿಸಿಕೊಂಡರು[165]. ನಾಲ್ಕನೆಯದಾಗಿ ಒಡೆಯರ ಮನೆ ದೇವತೆಯಾದ ಚಾಮುಂಡೇಶ್ವರಿಯ ಮೂರ್ತಿಯನ್ನು ತಮ್ಮ ಜೊತೆ ಯೂರೋಪಿಗೆ ಕೊಂಡೊಯ್ದುದ್ದು. ನಾಲ್ವಡಿಯವರ ಸಂಪ್ರದಾಯ ಮನಸ್ಸು ಚಾಮುಂಡೇಶ್ವರಿ ದೇವಿಯ ಮೂರ್ತಿಯನ್ನು ತಾವು ಉಳಿದುಕೊಂಡಿದ್ದ ಕೊಠಡಿಯಲ್ಲಿಟ್ಟುಕೊಂಡು ಪೂಜಿಸಲು ಒಪ್ಪದೇ ದೇವಿಯ ಮೂರ್ತಿಯನ್ನಿಡಲು ಡಾರ್ಚೆಸ್ಟರ್ ಹೋಟೆಲಿನ ವ್ಯವಸ್ಥಾಪಕರಿಂದ ಪ್ರತ್ಯೇಕ ಕೊಠಡಿಯನ್ನು ಪಡೆದು ಅದರಲ್ಲಿರಿಸಿ ತಮ್ಮ ಸಮಸ್ಯೆಯನ್ನು ಬಗೆಹರಿಸಿಕೊಂಡರು[166].

ಹೀಗೆ ನಾಲ್ವಡಿಯವರು ತಮ್ಮ 52ನೇ ಪ್ರಬುದ್ಧ ವಯಸ್ಸಿನಲ್ಲೂ ತಮ್ಮ ರಾಜ್ಯದಿಂದ ಬಹುದೂರದ ಯೂರೋಪಿಗೆ ಪ್ರವಾಸ ಕೈಗೊಂಡಾಗಲೂ ತಮ್ಮ ಬಾಲ್ಯಾವ್ಯವಸ್ಥೆಯಲ್ಲಿ ರೂಪುಗೊಂಡಿದ್ದ ಮಾನಸಿಕ ಸ್ಥಿತಿಯನ್ನಾಗಲಿ ಅಥವಾ ಸಾಂಪ್ರದಾಯಿಕತೆಯನ್ನಾಗಲೀ ಬಿಟ್ಟುಕೊಡದೆ ಆಧುನಿಕತೆಯ ತವರೂರಾದ ಯೂರೋಪನ್ನು ದರ್ಶಿಸಿ ಬಂದುದು ಅವರಲ್ಲಿ ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಅಥವಾ ಸಂಪ್ರದಾಯಿಕತೆ ಮತ್ತು ಆಧುನಿಕತೆಯ ಮೌಲ್ಯಗಳು ಹೇಗೆ ಪರಸ್ಪರ ವೈರುದ್ಯವಿಲ್ಲದೆ ಸಮರಸದಿಂದ ಮಿಳಿತಗೊಂಡಿದ್ದವೆಂಬುದಕ್ಕೆ ಸಾಕ್ಷೀಭೂತವಾಗಿದೆ.

---

*163. ಅದೇ., ಪು. 66-68*

*164. ಸಿ.ಕೆ. ವೆಂಕಟರಾಮಯ್ಯ, ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 42*

*165. ಎಂ. ಶಾಮರಾವ್, ಪೂರ್ವೋಕ್ತ, ಪು. 494*

*166. ಓ. ಲಿಂಗಣ್ಣಯ್ಯ, ಪೂರ್ವೋಕ್ತ, ಪು. 92-93*

*- ಸಿ.ಕೆ. ವೆಂಕಟರಾಮಯ್ಯ, ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 474*

## *iii) ಪ್ರಭಾವ*

***ಧಾರ್ಮಿಕ ಗುರುಗಳು :*** ನಾವು ಇಲ್ಲಿಯವರೆಗೂ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ ಮಾನಸಿಕ ಸ್ಥಿತಿಯನ್ನು ರೂಪಿಸಲು ಕಾರಣವಾದ ಎರಡು ಪ್ರಮುಖ ಅಂಶಗಳ ಬಗೆಗೆ ಪರೀಕ್ಷಿಸಿದೆವು. ಹಾಗೆಯೇ ಅವರು 1902 ರಿಂದ 1940ರ ವರೆಗೂ ಆಳ್ವಿಕೆ ನಡೆಸಿದ ಸಂದರ್ಭದಲ್ಲಿ ಅವರ ಮೇಲೆ ಹಾಗೂ ಅವರ ಚಿಂತನಾ ಪ್ರಕ್ರಿಯೆಯ ಮೇಲೆ ಪ್ರಭಾವ ಬೀರಿದ ಮೂರನೇ ಪ್ರಮುಖ ಅಂಶಗಳೆಂದರೆ ಧಾರ್ಮಿಕ, ರಾಜಕೀಯ, ಬೌದ್ಧಿಕ ಮತ್ತು ಅಧಿಕಾರಶಾಹಿ ವ್ಯಕ್ತಿಗಳು. ಅವರ ಮೇಲೆ ಅಗಾಧ ಪ್ರಭಾವ ಬೀರಿದ್ದು ಇಬ್ಬರು ಧಾರ್ಮಿಕ ಗುರುಗಳು ಮತ್ತು ಮಠಗಳು. ಮೊದಲನೆಯದಾಗಿ ಆದಿಶಂಕರಾಚಾರ್ಯರಿಂದ ಸ್ಥಾಪಿತವಾದ ಅದ್ವೈತ ಸಿದ್ಧಾಂತ ಪ್ರತಿಪಾದಕ ಕೇಂದ್ರವಾದ ಶೃಂಗೇರಿ ಮಠ ಮತ್ತು ಅಲ್ಲಿ ಗುರುಪರಂಪರೆ ಪ್ರಮುಖವಾದುದು. ಎರಡನೆಯದು ಮೈಸೂರು ನಗರದಲ್ಲಿ ನೆಲೆಗೊಂಡಿದ್ದ ಪರಕಾಲ ಮಠ ಮತ್ತು ಅಲ್ಲಿನ ಗುರುಪರಂಪರೆ. ನಾಲ್ವಡಿಯವರು ತಮ್ಮ ಪೂರ್ವಜರಂತೆ ತಾವೂ ಸಹ ಈ ಎರಡೂ ಮಠಗಳೊಂದಿಗೆ ಬಹುನಿಕಟವಾದ ಸಂಬಂಧ ಹಾಗೂ ಗೌರವ ಭಾವವನ್ನು ಹೊಂದಿದ್ದರು. ಮೇಲ್ನೋಟಕ್ಕೆ ನಾಲ್ವಡಿಯವರು ಶ್ರೀವೈಷ್ಣವ ಪಂಥದ ಪರಕಾಲ ಮಠಕ್ಕೆ ಹೆಚ್ಚು ಒಲುವನ್ನು ಹೊಂದಿದ್ದರೆಂದು ಗೋಚರಿಸುತ್ತದೆ.

***ರಾಜಕಾರಣಿಗಳು, ರಾಜನೀತಿಜ್ಞರು, ಆಪ್ತರು, ಆಡಳಿತಗಾರರು:*** ನಾಲ್ವಡಿಯವರ ಮೇಲೆ ಪ್ರಭಾವ ಬೀರಿದ ಬಹುಮುಖ್ಯ ರಾಜಕಾರಣಿಗಳು ಮತ್ತು ರಾಜನೀತಿಜ್ಞರೆಂದರೆ ಲಾರ್ಡ್‌ಎಲ್ಗಿನ್, ಲಾರ್ಡ್‌ಕರ್ಜನ್, ಲಾರ್ಡ್ ಮಿಂಟೋ, ಲಾರ್ಡ್ ಹಾರ್ಡಿಂಜ್, ಲಾರ್ಡ್‌ರೀಡಿಂಗ್ ಮತ್ತು ಲಾರ್ಡ್ ಇರ್ವಿನ್. ಫ್ರೇಜರ್‌ರವರು ತಮ್ಮ ಅಂತಿಮ ವರದಿಯಲ್ಲಿ ನಾಲ್ವಡಿಯವರ ಮೇಲೆ ಪ್ರಭಾವ ಬೀರಿದ ಅಂಶವನ್ನು ಕುರಿತು ಈ ರೀತಿ ಉಲ್ಲೇಖಿಸಿದ್ದಾರೆ. "ಮೈಸೂರಿನ ಮಹಾರಾಜರ ಮೇಲೆ ವೈಸ್ರಾಯ್ ಹಾಗೂ ಅವರ ಪ್ರತಿನಿಧಿಗಳ ಪ್ರಭಾವವು ಸದಾಕಾಲ ಸಾಮಾನ್ಯವಾಗಿರುತ್ತಿತ್ತು. ಆದರೆ ಅವರಿಗೆ (ಮಹಾರಾಜರಿಗೆ) ಬೇರೆಯವರಿಗಿಂತ ಹೆಚ್ಚಿನ ಅದೃಷ್ಟವೆಂದರೆ ಅವರಿಗೆ ಚಿಕ್ಕ ಅಥವಾ ದೊಡ್ಡ ವಿಷಯಗಳ ಬಗ್ಗೆ ಆಸಕ್ತಿ ಮೂಡುವಂತೆ ಮಾಡಿ ಸಹಾಯ ಮಾಡಿದ್ದರಲ್ಲಿ ಅವರ ರಾಜ್ಯದಲ್ಲಿದ್ದ ಅಗಾಧ ಸಂಖ್ಯೆಯ ಯೂರೋಪಿಯನ್ ಅಧಿಕಾರಿಗಳ ಸಮೂಹವು ಪ್ರಮುಖವಾದುದು. ಅವರು ಮಹಾರಾಜರಿಗೆ ಸಹಾಯ ಮಾಡಲು ಅನೇಕ ತೊಂದರೆಗಳನ್ನು ತೆಗೆದುಕೊಂಡರು"[167].

---

*167. ಫೈಲ್ ನಂ. ; ಸೀರಿಯಲ್ ನಂ. 1 ಆಫ್ ನಂ. 26 ಆಫ್ 1902, ಆರ್/2 (31/299), ಪೂರ್ವೋಕ್ತ, ಪು. 4*

ಲಾರ್ಡ್‌ಎಲ್ಗಿನ್‌ರವರು 1895ರಲ್ಲಿ ಮೈಸೂರಿಗೆ ಭೇಟಿ ಕೊಟ್ಟಾಗ ನಾಲ್ವಡಿಯವರು ನಡೆದುಕೊಂಡ ರೀತಿಯನ್ನು ಪ್ರಶಂಸಿಸಿ "ಅವರಿಗೆ ಉಜ್ವಲ ಭವಿಷ್ಯವಿದೆ. ಆದರೆ ಅವರಿಗೆ ಸ್ನೇಹಿತನಾಗಿ ಕೆಲವು ಹಿತವಚನಗಳನ್ನು ಹೇಳುತ್ತೇನೆ ಅದೇನೆಂದರೆ "ಬೆಳೆಯುವುದರ ಬಗ್ಗೆ ಅತ್ಯಾತುರವಾಗಲಿ, "ವೇಗವಾಗಲಿ ಸಲ್ಲದು"...... ಮಹಾರಾಜರ ಅತ್ಯುತ್ತಮ ಸ್ನೇಹಿತನಾಗಿ ನನ್ನ ಇಚ್ಛೆಯಂತೆ ಅವರು ಮುಂದಿನ ಕೆಲ ವರ್ಷಗಳನ್ನು ಜೀವನ ರೂಪಿಸಿಕೊಳ್ಳಲು ಕಷ್ಟಪಟ್ಟು ದುಡಿಯಲು ಬಳಸಿಕೊಳ್ಳಬೇಕೆಂದು" ನುಡಿದರು[168]. ಅಲ್ಲದೇ ನಾಲ್ವಡಿಯವರಿಗೆ ಆಧುನಿಕ ಸನ್ನಿವೇಶಕ್ಕೆ ತಕ್ಕನಾದ ಶಿಕ್ಷಣ ನೀಡಲು ಫ್ರೇಜರ್‌ರಂತಹ ಮೇಧಾವಿಯನ್ನು ಪೋಷಕರನ್ನಾಗಿ ನೇಮಕ ಮಾಡಿದ್ದೇ ಲಾರ್ಡ್ ಎಲ್ಗಿನ್. ಇದು ನಾಲ್ವಡಿಯವರ ಬಗ್ಗೆ ಎಲ್ಗಿನ್‌ರವರಲ್ಲಿದ್ದ ಕಾಳಜಿಯನ್ನು ತಿಳಿಸುತ್ತದೆ.

ನಾಲ್ವಡಿಯವರಿಗೆ ರಾಜ್ಯಭಾರ ಸೂತ್ರವನ್ನು ಒಪ್ಪಿಸುವ ಉತ್ಸವದಲ್ಲಿ ಖುದ್ದಾಗಿ ಭಾಗವಹಿಸಿದ್ದ ಅಂದಿನ ವೈಸ್ರಾಯಿ ಲಾರ್ಡ್ ಕರ್ಜನ್‌ರವರು ತಮ್ಮ ಭಾಷಣದಲ್ಲಿ "ಮೈಸೂರು ಸಂಸ್ಥಾನದ ವಿಷಯದಲ್ಲಿಯೂ ಮತ್ತು ಮಹಾರಾಜ ಶ್ರೀಕೃಷ್ಣರಾಜ ಒಡೆಯರ ವಿಷಯದಲ್ಲಿಯೂ ತಮಗೆ ತೀವ್ರಾಸಕ್ತಿಯಲ್ಲದೆ ಹೋಗಿದ್ದರೆ ತಾವು ಈ ಸಮಯದಲ್ಲಿ ಸಿಮ್ಲಾ ನಗರದಿಂದ ಮೈಸೂರು ನಗರಕ್ಕೆ ಬರುತ್ತಿರಲಿಲ್ಲ"ವೆಂದು ಹೇಳಿದರು. ಹಾಗೆಯೇ ಮುಂದುವರಿದು "ತಾವು ವೈಸ್ರಾಯಿ ಹುದ್ದೆಯಲ್ಲಿರುವವರೆಗೂ ಆಪ್ತರಾಗಿದ್ದುಕೊಂಡು ಒತ್ತಾಸೆ ಕೊಡುವ ವಿಷಯದಲ್ಲಿ ಮಹಾರಾಜರು ಭರವಸೆಯನ್ನಿಟ್ಟುಕೊಳ್ಳಬಹುದು"[169] ಎಂದರು. ಲಾರ್ಡ್ ಕರ್ಜನ್‌ರವರು ಮೈಸೂರಿನ ಬಗೆಗೆ ಹಾಗೂ ನಾಲ್ವಡಿಯವರ ಬಗೆಗೆ ಹೊಂದಿದ್ದ ಕಾಳಜಿಯನ್ನು ಕುರಿತು ಲಾರ್ಡ್ ರೋನಾಲ್ಡ್ ಷೇ ಈ ರೀತಿ ಬರೆದಿದ್ದಾರೆ "ಲಾರ್ಡ್ ಕರ್ಜನ್‌ರವರು ತಮ್ಮ ಹಿಂದಿನ ವೈಸ್ರಾಯಿಗಳಲ್ಲಿ ಯಾರೂ ಹೋಗದಿದ್ದ ಭಾರತೀಯ ಸಂಸ್ಥಾನಗಳಿಗೂ ಭೇಟಿ ನೀಡಿದರು. ಅವರು ಹೋದೆಡೆಗಳಲ್ಲೆಲ್ಲ ಅವರ ಭಾಷಣಗಳನ್ನು ಕೇಳುವುದರಲ್ಲಿ ಜನರಿಗೆ ಅಸಾಧಾರಣವಾದ ಕುತೂಹಲ. ಏಕೆಂದರೆ, ಸಂಪ್ರದಾಯನುಸಾರವಾದ ಉಪಚಾರ ವಚನಗಳನ್ನಾಡುವುದಕ್ಕೆ ಪ್ರತಿಯಾಗಿ ಅವರು ತಮ್ಮ ಮನಸ್ಸಿನಲ್ಲಿದ್ದುದನ್ನು ಯಾವ ರಹಸ್ಯವೂ ಇಲ್ಲದೆ ಸ್ಪಷ್ಟವಾಗಿ ಹೇಳಿಬಿಡುತ್ತಿದ್ದರು"[170] ಎಂಬ ಹೇಳಿಕೆಗಳು ನಾಲ್ವಡಿಯವರ ಮತ್ತು ಲಾರ್ಡ್ ಕರ್ಜನ್‌ರವರ ನಡುವಿನ ಸಂಬಂಧವನ್ನೂ, ಪ್ರಭಾವವನ್ನೂ ಸ್ಪಷ್ಟಪಡಿಸುತ್ತವೆ. ಕರ್ಜನ್‌ರವರ ನೆನಪನ್ನು ಶಾಶ್ವತಗೊಳಿಸಲು ನಾಲ್ವಡಿಯವರು ಬೆಂಗಳೂರಿನಲ್ಲಿ ಅವರ ಹೆಸರಿನಲ್ಲಿ "ಕರ್ಜನ್ ಪಾರ್ಕ್"ನ್ನು ನಿರ್ಮಿಸಿರುವುದು ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಹಾಗೆಯೇ ಲಾರ್ಡ್ ಮಿಂಟೋರವರು ನಾಲ್ವಡಿಯವರ ಮೇಲೆ ಬೀರಿದ್ದ ಪ್ರಭಾವದ ನೆನಪಾಗಿ ಬೆಂಗಳೂರಿನ ಮಿಂಟೋ ಕಣ್ಣಾಸ್ಪತ್ರೆ ಇಂದಿಗೂ ಶಾಶ್ವತವಾಗಿದೆ.

---

*168. ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 183*

*169. ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 193*

*170. ಲಾರ್ಡ್ ರೋನಾಲ್ಡ್ ಷೇ, ದಿ ಲೈಫ್ ಆಫ್ ಲಾರ್ಡ್ ಕರ್ಜನ್, ಸಂಪುಟ-II, ಪು. 144-145*

ಮೈಸೂರು ರಾಜ್ಯದ ಸಂವಿಧಾನದಲ್ಲಿ ಆಗಬೇಕಾದ ಬದಲಾವಣೆಗಳನ್ನು ಕುರಿತು ಮಾತುಕತೆ ನಡೆಸಲು ವೈಸ್ರಾಯಿ ಹಾಗೂ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಹಾರ್ಡಿಂಜ್ ಮತ್ತು ಲೇಡಿ ಹಾರ್ಡಿಂಜ್ ಮೈಸೂರು ಸಂಸ್ಥಾನಕ್ಕೆ 1913 ರಲ್ಲಿ ಭೇಟಿ ನೀಡಿದ್ದರು. ಈ ದಂಪತಿಗಳು ಖೆಡ್ಡಾ ಕಾರ್ಯಾಚರಣೆ, ಜೋಗ ಜಲಪಾತ ಮತ್ತು ಕೋಲಾರದ ಚಿನ್ನದ ಗಣಿಯನ್ನು ಸಂದರ್ಶಿಸಿದರು. ಈ ಪ್ರವಾಸ ಕಾಲದಲ್ಲಿ ನಾಲ್ವಡಿ ಮತ್ತು ವೈಸ್ರಾಯಿ ನಡುವೆ ಒಪ್ಪಂದದ ಬಗ್ಗೆ ಮಾತುಕತೆ ನಡೆಯಿತು. ಲಾರ್ಡ್ ಹಾರ್ಡಿಂಜ್‌ರವರು ಈ ಒಪ್ಪಂದ ಅಂತಿಮಗೊಂಡ ವಿಷಯವನ್ನು ಸಾರ್ವಜನಿಕ ಸಭೆಯಲ್ಲಿ ಪ್ರಕಟಿಸುತ್ತಾ ಈ ಕೆಳಕಂಡಂತೆ ಮಾತನಾಡಿದರು. "ಇದು ಭಾರತದ ಸಾಮಂತರಾಜರ ನಡುವೆ ನಿಮ್ಮ ಮಹಾರಾಜರು ಹೊಂದಿರುವ ಸಮಾನಸ್ಥಾನಮಾನಕ್ಕೆ ಅನುಗುಣವಾಗಿ ನಮ್ಮ ಸಂಬಂಧಗಳನ್ನು ನಿರ್ಧಿಷ್ಟ ಪಡಿಸುತ್ತದೆಂದು"[171] ಹೇಳಿದರು. ಈ ಒಪ್ಪಂದಕ್ಕೆ ಮಹಾರಾಜರು ಮತ್ತು ರೆಸಿಡೆಂಟ್ 1913ರ ನವೆಂಬರ್ 26ರಂದು ಸಹಿ ಹಾಕಿದರು. ಅದೇ ವರ್ಷ ವೈಸ್ರಾಯರಿಂದ ಈ ಒಪ್ಪಂದವೂ ಅಂಗೀಕೃತವಾಯಿತು. ಈ 1913ರ ಒಪ್ಪಂದವು 1881 ರ ಒಪ್ಪಂದದ ಅನೇಕ ಷರತ್ತುಗಳಿಂದ ರಿಯಾಯ್ತಿ ಪಡೆದಿತ್ತು. ಈ ಒಪ್ಪಂದದ ಪ್ರಕಾರ ಮೈಸೂರಿನ ಮಹಾರಾಜರಿಗೆ ಆಂತರಿಕ ಆಡಳಿತದಲ್ಲಿ ಸ್ವಾತಂತ್ರ್ಯ ನೀಡುವ ಮತ್ತು ಬ್ರಿಟಿಷ್ ಪ್ರಭುತ್ವವು ಅದರಲ್ಲಿ ಮಧ್ಯೆ ಪ್ರವೇಶಿಸುವುದಿಲ್ಲ ಎಂಬ ಭರವಸೆಯನ್ನು ನೀಡಿತು. ಹಾಗೆಯೇ 1881 ರ ಒಪ್ಪಂದದಲ್ಲಿದ್ದ ಮೈಸೂರಿನ ರಾಜ್ಯಾಧಿಕಾರವನ್ನು ಬ್ರಿಟಿಷ್ ಪ್ರಭುತ್ವವು ಹಿಂದಕ್ಕೆ ಪಡೆಯುವ ಅವಕಾಶವನ್ನು ಬಿಟ್ಟುಕೊಟ್ಟಿತು[172]. ಹೀಗೆ ಮೈಸೂರು ಸಂಸ್ಥಾನವು ಬ್ರಿಟಿಷ್ ಪ್ರಭುತ್ವದ ಹಿಡಿತದಿಂದ ಸಡಿಲತೆಯನ್ನು ಪಡೆಯುವಲ್ಲಿ ನಾಲ್ವಡಿಯವರ ಸಮರ್ಪಕ ಆಳ್ವಿಕೆಯು ಬ್ರಿಟಿಷ್ ಸರ್ಕಾರ ಮತ್ತು ಹಾರ್ಡಿಂಜ್‌ರ ಮೇಲೆ ಪ್ರಭಾವ ಬೀರಿ ಇಂತಹ ಬದಲಾವಣೆಗೆ ಎಡೆಮಾಡಿಕೊಟ್ಟಿತು. ಹಾಗೆಯೇ ಲಾರ್ಡ್ ಹಾರ್ಡಿಂಜ್‌ರ ಮೇಲೆ ಇರಿಸಿದ್ದ ಗೌರವದ ನೆನಪಾಗಿ ನಾಲ್ವಡಿಯವರು ಮೈಸೂರು ನಗರದ ಪ್ರಮುಖ ವೃತ್ತಕ್ಕೆ 'ಹಾರ್ಡಿಂಜ್ ವೃತ್ತ'ವೆಂದು ಹೆಸರಿಸಿದರು.

ನಾಲ್ವಡಿಯವರು ಅಧಿಕಾರಕ್ಕೆ ಬಂದು 25 ವರ್ಷಗಳು ತುಂಬಿದ ನೆನಪಿಗಾಗಿ 1927ರಲ್ಲಿ ಆಚರಿಸಿದ ಬೆಳ್ಳಿ ಹಬ್ಬ ಸಮಾರಂಭಕ್ಕೆ ಆಗಮಿಸಿದ ಅಂದಿನ ವೈಸ್ರಾಯ್ ಲಾರ್ಡ್ ಇರ್ವಿನ್‌ರವರು ಮೈಸೂರು ರಾಜ್ಯಕ್ಕೆ ಕಾಣಿಕೆಯಾಗಿ ಇದುವರೆವಿಗೂ ಮೈಸೂರು ಸರ್ಕಾರವು ಬ್ರಿಟಿಷ್ ಸರ್ಕಾರಕ್ಕೆ ಸಲ್ಲಿಸುತ್ತಿದ್ದ ಸಬ್ಸಿಡಿ ಮೊತ್ತದಲ್ಲಿ 10 ½ ಲಕ್ಷ ರೂ. ಗಳನ್ನು ಕಡಿತಗೊಳಿದರು. ಇದರಿಂದ ಮೈಸೂರು ರಾಜ್ಯಕ್ಕೆ ಶಾಶ್ವತ ಹೊರೆ ತಗ್ಗಿದಂತಾಯಿತು[173]. ಅವರ ಗೌರವಾರ್ಥ ನಾಲ್ವಡಿಯವರು ಕೃಷ್ಣರಾಜ ಸಾಗರದ ಪ್ರಮುಖ ನಾಲೆಯೊಂದಕ್ಕೆ 'ಇರ್ವಿನ್ ನಾಲಾ' ಎಂದು ಹೆಸರಿಟ್ಟರು. ಹೀಗೆ ನಾಲ್ವಡಿಯವರ ಮೇಲೆ ಪ್ರಭಾವ ಬೀರಿದವರಲ್ಲಿ ಪ್ರಿನ್ಸ್ ಆಫ್ ವೇಲ್ಸ್, ಲಾರ್ಡ್ ವೆಲ್ಲಿಂಗ್‌ಟನ್, ಲಾರ್ಡ್

---

*171. **ಹಯವದನರಾವ್ ಸಿ.,** ಪೂರ್ವೋಕ್ತ, ಪು. 3027*

*172. ಅದೇ., ಪು. 3089-3090*

*173. **ಅದೇ.,** ಪು. 3066-3067*

ರೀಡಿಂಗ್‌ರವರುಗಳು ಸಹ ಪ್ರಮುಖರು. ಇಂತಹ ಅಧಿಕಾರಿಗಳ ಭೇಟಿಯ ಅವಧಿಯಲ್ಲಿ ನಾಲ್ವಡಿಯವರು ತೋರುತ್ತಿದ್ದ ಸೌಜನ್ಯವು ಎಲ್ಲರಿಂದಲೂ ಪ್ರಶಂಶಿಸಲ್ಪಟ್ಟಿದೆ. ಸರಳತೆ ಹಾಗೂ ಗಾಂಭೀರ್ಯದಿಂದ ಅವರ ಮನಸ್ಸನ್ನು ಗೆಲ್ಲುವಲ್ಲಿ ನಾಲ್ವಡಿಯವರು ಯಶಸ್ವಿಯಾಗುತ್ತಿದ್ದರು. ಬ್ರಿಟಿಷ್ ಭಾರತದ ಮೇಲ್ವರ್ಗದ ಗಣ್ಯ ಅಧಿಕಾರಿಗಳಲ್ಲದೇ ಬೆಂಗಳೂರಿನಲ್ಲಿದ್ದ ರೆಸಿಡೆಂಟರೊಡನೆಯು ನಾಲ್ವಡಿಯವರು ಬಹುನಿಕಟವಾದ ಸಂಬಂಧವನ್ನು ಹೊಂದಿದ್ದರು ಹಾಗೂ ಅವರಿಂದಲೂ ಸಹ ಹಲವು ವಿಧದಲ್ಲಿ ಪ್ರಭಾವಿತರಾಗಿದ್ದರು.

1894ರ ಡಿಸೆಂಬರ್‌ನಲ್ಲಿ ನಾಲ್ವಡಿಯವರ ತಂದೆ ಮರಣ ಹೊಂದಿದಾಗ ಮೈಸೂರು ಸಂಸ್ಥಾನದ ಬ್ರಿಟಿಷ್ ರೆಸಿಡೆಂಟರಾಗಿದ್ದ ಕರ್ನಲ್ ಹೆಂಡರಸನ್‌ರವರು ತೋರಿದ ವಿಶ್ವಾಸ, ಭರವಸೆಗಳು ನಾಲ್ವಡಿಯವರ ಮೇಲೆ ಸಾಕಷ್ಟು ಪ್ರಭಾವ ಬೀರಿದವು. ತಂದೆಯ ನಂತರದ ಅಧಿಕಾರವನ್ನು ಪಡೆಯುವಲ್ಲಿ, ಸ್ವೀಕರಿಸುವಲ್ಲಿ ಅವರು ನೀಡಿದ ಸಹಕಾರ ಸ್ಮರಣೀಯವಾದದ್ದು. ಶಿಕ್ಷಣದ ವ್ಯವಸ್ಥೆಯ ಹಿನ್ನೆಲೆಯಲ್ಲಿ ಸಾಕಷ್ಟು ಶ್ರಮಿಸಿದ ರೆಸಿಡೆಂಟ್ ಹೆಂಡರ್‌ಸನ್‌ರವರು ನಾಲ್ವಡಿಯವರೆ ಕುಟುಂಬ ವರ್ಗದ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದರು. ಹಾಗೆಯೇ ಮತ್ತೊಬ್ಬ ರೆಸಿಡೆಂಟರಾದ ಕರ್ನಲ್ ಡೋನಾಲ್ಡ್ ರಾಬರ್ಟ್‌ಸನ್‌ರವರ ಪ್ರಭಾವವು ನಾಲ್ವಡಿಯವರ ಮೇಲೆ ಸಾಕಷ್ಟಿತ್ತು. ನಾಲ್ವಡಿಯವರು ರಾಜ್ಯಭಾರವನ್ನು ಸ್ವೀಕರಿಸಿದ ಸಂದರ್ಭದಲ್ಲಿ ಭಾಷಣದಲ್ಲೇ ಅದನ್ನು ಸ್ಪಷ್ಟಪಡಿಸಿದ್ದಾರೆ. "ನಮ್ಮ ಸನ್ಮಿತ್ರರೂ, ಮೈಸೂರು ಸಂಸ್ಥಾನದ ಬ್ರಿಟಿಷ್ ರೆಸಿಡೆಂಟರೂ ಆದ ಕರ್ನಲ್ ರಾರ್ಬಟ್‌ಸನ್‌ರವರ ಸಹಾಯವು ನಮಗೆ ಇನ್ನೂ ಸ್ವಲ್ಪ ಕಾಲದವರೆಗೆ ಲಭಿಸುವುದೆಂಬ ಆಸೆಯು ನಮ್ಮ ಮನಸ್ಸಿಗೆ ಸಮಾಧಾನ ತಂದಿದೆ[174]. ಈ ಹೇಳಿಕೆಯು ಅವರಿಬ್ಬರ ನಡುವಿನ ಭಾಂದವ್ಯವನ್ನು ವ್ಯಕ್ತಪಡಿಸುತ್ತದೆ.

ಮೈಸೂರಿನಲ್ಲಿ 1910 ರಿಂದ 1916 ರವರೆಗೆ ರೆಸಿಡೆಂಟರಾಗಿದ್ದ ಸರ್ ಹ್ಯೂಡ್ಯಾಲಿಯವರ ಜೊತೆ ನಾಲ್ವಡಿಯವರು ಅತ್ಯುತ್ತಮ ಸಂಬಂಧ ಹೊಂದಿದ್ದರು. ಹಾಗಾಗಿ ರೆಸಿಡೆಂಟ್ ಹಾಗೂ ದಿವಾನರು ಒಗ್ಗೂಡಿ 1913ರ ಒಪ್ಪಂದಕ್ಕೆ ವೈಸ್ರಾಯ್ ಹಾರ್ಡಿಂಜ್‌ರವರು ಒಪ್ಪುವಂತೆ ಮಾಡಿದರು. 1913ರ ಒಪ್ಪಂದಿಂದ ಮೈಸೂರು ರಾಜ್ಯವು ಶಾಸನಬದ್ಧ ಅಸ್ಥಿತ್ವವನ್ನು ತಂದುಕೊಟ್ಟಿತು. ಈ ಒಪ್ಪಂದಕ್ಕೆ ಕಾರಣರಾದ ರೆಸಿಡೆಂಟ್ ಡ್ಯಾಲಿಯವರನ್ನು ನಾಲ್ವಡಿಯವರು ಅಭಿನಂದಿಸಿದರು ಹಾಗೂ ಅವರನ್ನು ಸದಾ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇವೆಂದು ಪತ್ರ ಬರೆದರು. ಹೀಗೆ ರಾಜ್ಯದ ಉತ್ತಮ ಹಿತೈಷಿಯಾಗಿದ್ದ ಡ್ಯಾಲಿಯವರು 1916ರಲ್ಲಿ ನಿವೃತ್ತರಾದಾಗ ಮಹಾರಾಜ ನಾಲ್ವಡಿಯವರು ಅವರ ಗೌರವಾರ್ಥ ಬೆಂಗಳೂರಿನಲ್ಲಿ 'ಡ್ಯಾಲಿ ಮೆಮೋರಿಯಲ್ ಹಾಲ್' ಎಂಬ ಕಟ್ಟಡವನ್ನು ನಿರ್ಮಿಸಿ ಅದನ್ನು ದಿ ಮಿಥಿಕ್ ಸೊಸೈಟಿಯ ಕೇಂದ್ರವನ್ನಾಗಿಸಿದರು[175].

---

*174. **ಜೊಸ್ಸೆಯರ್ ಜಿ.ಆರ್.**, ಪೂರ್ವೋಕ್ತ, ಪು. 242*

*175. **ಜಯಪ್ಪಗೌಡ ಡಿ.ಎಸ್.**, ಪೂರ್ವೋಕ್ತ, ಪು. 37-39*

ನಾಲ್ವಡಿಯವರು ಬ್ರಿಟಿಷ್ ಉನ್ನತಾಧಿಕಾರಿಗಳನ್ನು ಸಂತೋಷಪಡಿಸಲು ಮತ್ತು ಆ ಮೂಲಕ ಬಾಂಧವ್ಯ ವೃದ್ಧಿಸಿಕೊಳ್ಳಲು ಕಾಡಾನೆಗಳನ್ನು ಬಂಧಿಸುವ 'ಖೆಡ್ಡಾ ಕಾರ್ಯಾಚರಣೆ' ಎಂಬ ವಿಶೇಷ ಆಕರ್ಷಕ ಯೋಜನೆಯನ್ನು ರೂಪಿಸಿ ಅದನ್ನು ವೀಕ್ಷಿಸಲು ಆಹ್ವಾನಿಸುತ್ತಿದ್ದರು. ಇದೊಂದು ಆಕರ್ಷಣೀಯ ಕಾರ್ಯವಾಗಿದ್ದು, ಮೈಸೂರು ಸಂಸ್ಥಾನಕ್ಕೆ ಬರುತ್ತಿದ್ದ ಎಲ್ಲಾ ಅಧಿಕಾರಿಗಳೂ ಕೂಡ ಇದನ್ನು ನೋಡಿಯೇ ಹೋಗುತ್ತಿದ್ದರು. ನಾಲ್ವಡಿ ಮತ್ತು ಆ ಅಧಿಕಾರಿಗಳ ನಡುವೆ ಉತ್ತಮ ಬಾಂಧವ್ಯವನ್ನು ಬೆಸೆಯುವಲ್ಲಿ ಖೆಡ್ಡಾ ಕಾರ್ಯಾಚರಣೆಯು ಸಹ ಒಂದು ಪ್ರಮುಖ ಮಾಧ್ಯಮವಾಗಿತ್ತು.

ನಾಲ್ವಡಿಯವರ ಮೇಲೆ ಪ್ರಭಾವ ಬೀರಿದ ಪ್ರಮುಖ ದೇಶೀಯ ರಾಜನೀತಿಜ್ಞರಲ್ಲಿ ಸರ್.ಎಂ. ವಿಶ್ವೇಶ್ವರಯ್ಯನವರು ಮತ್ತು ಮಿರ್ಜಾ ಇಸ್ಮಾಯಿಲ್‌ರವರು ಪ್ರಮುಖರು. ವಿಶ್ವೇಶ್ವರಯ್ಯನವರ ಬುದ್ಧಿವಂತಿಕೆ, ಕಾರ್ಯದಕ್ಷತೆ ಹಾಗೂ ದೇಶಾಭಿಮಾನದ ಅಂಶಗಳು ನಾಲ್ವಡಿಯವರ ಮೇಲೆ ಬಹಳಷ್ಟು ಪ್ರಭಾವವನ್ನುಂಟು ಮಾಡಿದ್ದವು. ಆದುದರಿಂದಲೇ ಹೈದರಾಬಾದ್ ಸಂಸ್ಥಾನದಲ್ಲಿ ಕಾರ್ಯಭಾರ ನಿರ್ವಹಿಸುತ್ತಿದ್ದ ವಿಶ್ವೇಶ್ವರಯ್ಯನವರನ್ನು ಮೈಸೂರು ಸಂಸ್ಥಾನದ ದಿವಾನರನ್ನಾಗಿ ಆಯ್ಕೆ ಮಾಡಿದರು. ಅಲ್ಲದೇ ಅವರ ಸೇವಾ ಅವಧಿಯ ಅವರ ಒಡನಾಟದಲ್ಲಿ ನಾಲ್ವಡಿಯವರು ವಿಶ್ವೇಶ್ವರಯ್ಯನವರಿಂದ ಸಾಕಷ್ಟು ಪ್ರಭಾವಿತರಾಗಿದ್ದರು.

ನಾಲ್ವಡಿಯವರು ಆಪ್ತ ಮಿತ್ರರೂ, ಸಹಪಾಠಿಗಳೂ, ದಿವಾನರೂ ಆಗಿದ್ದ ಸರ್ ಮಿರ್ಜಾ ಇಸ್ಮಾಯಿಲ್‌ರವರ ಪ್ರಭಾವವನ್ನು ಕುರಿತಂತೆ ಎಷ್ಟು ಹೇಳಿದರೂ ಅದು ಮುಗಿಯದು. ಬಾಲ್ಯದಿಂದ ಅವರೊಡನೆ ಸಾಕಷ್ಟು ಹತ್ತಿರದಲ್ಲಿದ್ದುಕೊಂಡು ಅವರ ಬುದ್ಧಿಶಕ್ತಿ ಹಾಗೂ ಸ್ನೇಹಕ್ಕೆ ಒಳಗಾಗಿದ್ದ ನಾಲ್ವಡಿಯವರು ಜೀವನದುದ್ದಕ್ಕೂ ಮಿರ್ಜಾರವರ ಪ್ರಭಾವಕ್ಕೆ ಸಾಕಷ್ಟು ಒಳಗಾಗುತ್ತಲೇ ಬಂದಿದ್ದರು. ಇವರಿಬ್ಬರ ನಡುವೆ ಪರಸ್ಪರ ಪ್ರೀತಿ, ವಿಶ್ವಾಸಗಳಿಗೆ ಉತ್ತಮ ಸಾಕ್ಷಿಯೆಂದರೆ ನಾಲ್ವಡಿಯವರು ಮರಣಿಸುವವರೆಗೂ ಮಿರ್ಜಾರವರನ್ನು ತಮ್ಮ ಜೊತೆಯಲ್ಲೇ ಇರುವಂತೆ ದಿವಾನ್ ಹುದ್ದೆಯಲ್ಲಿ ನೇಮಿಸಿಕೊಂಡಿದ್ದು ಹಾಗೂ ಅವರ ದೀರ್ಘಕಾಲದ ಸೇವಾ ಅವಧಿಗೆ ಅವಕಾಶ ಮಾಡಿಕೊಟ್ಟಿದ್ದು. ಏಕೆಂದರೆ ನಾಲ್ವಡಿಯವರು ಅಧಿಕಾರಕ್ಕೆ ಬಂದಾಗಿನಿಂದ ಅಂದರೆ 1902ರಿಂದ 1926ರ ಅವಧಿಯವರೆಗೆ ಅನೇಕ ದಿವಾನರು ನೇಮಕಗೊಂಡಿರುವುದನ್ನು ಕಾಣಬಹುದು. ಆದರೆ 1926ರಲ್ಲಿ ದಿವಾನರಾಗಿ ನೇಮಕಗೊಂಡ ಮಿರ್ಜಾ ಇಸ್ಮಾಯಿಲ್‌ರವರು ಮಹಾರಾಜ ನಾಲ್ವಡಿಯವರು ಬದುಕಿರುವವರೆಗೂ ಅದೇ ಹುದ್ದೆಯಲ್ಲಿ ಮುಂದುವರಿದರು. ಆದರೆ ಅವರ ಸಾವಿನ ನಂತರ ಅವರು ಸಂಸ್ಥಾನದ ದಿವಾನರಾಗಿ ಹೆಚ್ಚುಕಾಲ ಉಳಿಯಲಾಗಲಿಲ್ಲ. ಇಂತಹ ಅನೇಕ ಅಂಶಗಳು ನಾಲ್ವಡಿ ಮತ್ತು ಮಿರ್ಜಾರವರ ನಡುವಿನ ಸಂಬಂಧದ ಗಾಢತೆ ನಿರೂಪಿಸುತ್ತವೆ.

ನಾಲ್ವಡಿಯವರ ಮೇಲೆ ಗಾಢವಾದ ಪ್ರಭಾವ ಬೀರಿದ ರಾಜಕೀಯ ಗಣ್ಯರಲ್ಲಿ ಪ್ರಮುಖರಾದವರೆಂದರೆ; ಮಹಾತ್ಮ ಗಾಂಧೀಜಿ ಮತ್ತು ಮದನಮೋಹನ ಮಾಳವೀಯರು. ಆಶ್ಚರ್ಯವೆಂದರೆ ರಾಷ್ಟ್ರೀಯ ಚಳವಳಿ ಬಿರುಸಾಗಿದ್ದ ಕಾಲದಲ್ಲಿ ದೇಶೀಯ ಸಂಸ್ಥಾನದ ಮಹಾರಾಜರು ಗಾಂಧೀಜಿಯವರ ಜೊತೆ ಮಾತನಾಡಲು ಗುರುತಿಸಿಕೊಳ್ಳಲು ಹಿಂಜರಿಯುತ್ತಿದ್ದ ಕಾಲ ಅದಾಗಿತ್ತು. ಎಲ್ಲಿ ಬ್ರಿಟಿಷರ ಕೋಪಕ್ಕೆ ತುತ್ತಾಗಬಹುದೆಂಬ ಭಯವಿತ್ತು[176]. ಆದರೆ ನಾಲ್ವಡಿ ಮತ್ತು ಗಾಂಧೀಜಿಯವರ ನಡುವೆ ಉತ್ತಮ ಸಂಬಂಧವಿದ್ದು ಪರಸ್ಪರ ಪ್ರಭಾವಕ್ಕೂ ಅವರು ಒಳಗಾಗಿದ್ದರು. ನಾಲ್ವಡಿಯವರು ತಮ್ಮ ಪ್ರಜಾಹಿತ ಆಡಳಿತದ ಮೂಲಕ ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ್ದರು. ಗಾಂಧೀಜಿಯವರಿಗೆ ಆರೋಗ್ಯ ಹದಗೆಟ್ಟಾಗ 1923 ಮತ್ತು 1927ರಲ್ಲಿ ಅವರನ್ನು ರಾಜ್ಯದ ಅತಿಥಿಯಾಗಿ ನಂದಿಬೆಟ್ಟದಲ್ಲಿ ಕೆಲಕಾಲ ತಂಗಲು ವ್ಯವಸ್ಥೆ ಮಾಡಿದ್ದರು. ಗಾಂಧೀಜಿ ತಮ್ಮ 'ನವ ಜೀವನ ಪತ್ರಿಕೆ'ಯಲ್ಲಿ 1925ರ ಫೆಬ್ರವರಿ 8ರಂದು ನಾಲ್ವಡಿಯವರನ್ನು ಕುರಿತು " ಮೈಸೂರಿನ ಮಹಾರಾಜರು ನೂಲುವುದನ್ನು ಕೈಗೊಂಡಿದ್ದಾರೆ. ಈ ಸುದ್ದಿ ಏನೂ ಅಲ್ಲ ಆದರೆ ಅದನ್ನು ಪವಿತ್ರ ಕರ್ತವ್ಯವೆಂದು ಭಾವಿಸಿರುವವರ ಹೃದಯಕ್ಕೆ ಸಂತಸ ತರುತ್ತದೆ..... ನಾನು ಮಹಾರಾಜರನ್ನು ಅಭಿನಂದಿಸುತ್ತೇನೆ ಮತ್ತು ಅವರು ತಮ್ಮ ಜೀವಿತಾಧಿಯ ಕೊನೆಯವರೆಗೂ ತಾವು ಕೈಗೊಂಡಿರುವ ಕಾರ್ಯವನ್ನು ಬಿಡುವುದಿಲ್ಲವೆಂದು ನಂಬಿರುತ್ತೇನೆ, ಇದು ಅವರಿಗೆ ಮತ್ತು ಅವರ ಪ್ರಜೆಗಳಿಗೆ ಒಳ್ಳೆಯದನ್ನು ಮಾಡುತ್ತದೆ"[177] ಎಂದು ಬರೆದರು. ನಾಲ್ವಡಿಯವರು ಸ್ವತಃ ನೂಲುವ ಮೂಲಕ ಗಾಂಧೀಜಿಯವರ ಖಾದಿ ಮತ್ತು ಸ್ವದೇಶ ಆಂದೋಲನಕ್ಕೆ ಬೆಂಬಲ ನೀಡಿದರು. ಅಲ್ಲದೆ ಅವರನ್ನು ಸರ್ಕಾರದ ಅತಿಥಿಯಾಗಿ ಮೈಸೂರಿಗೆ ಆಹ್ವಾನಿಸಿ ಅವರ ರಚನಾತ್ಮಕ ಕಾರ್ಯಕ್ರಮಗಳನ್ನು ಪ್ರಚಾರ ಮಾಡಲು ಮತ್ತು ಸಂಘಟಿಸಲು ಅವಕಾಶ ಮಾಡಿಕೊಟ್ಟರು. ಅಂತಿಮವಾಗಿ ಸರ್ಕಾರದ ವತಿಯಿಂದಲೇ ಬದನವಾಳಿನಲ್ಲಿ ಖಾದಿಗ್ರಾಮೋದ್ಯೋಗ ಕೇಂದ್ರ ಸ್ಥಾಪಿಸಲು ಭೂಮಿ ಹಾಗೂ ಮತ್ತಿತರ ನೆರವನ್ನು ನೀಡಿದರು. ನಾಲ್ವಡಿಯವರು ಅಧಿಕಾರಕ್ಕೆ ಬಂದು 25ವರ್ಷಗಳಾದ ನೆನಪಿಗೆ ಸರ್ಕಾರ ಬೆಳ್ಳಿಹಬ್ಬವನ್ನು ಆಚರಿಸಲು ಮುಂದಾಗಿ ಆ ಸಮಾರಂಭಕ್ಕೆ ಗಾಂಧೀಜಿಯವರನ್ನು ಆಹ್ವಾನಿಸಿತು. ಆ ಸಂದರ್ಭದಲ್ಲಿ ಗಾಂಧೀಜಿಯವರು 1927ರ ಆಗಸ್ಟ್ 5ರಂದು ಮಹಾರಾಜರಿಗೆ ಪತ್ರ ಬರೆದು ಈ ಕೆಳಕಂಡಂತೆ ತಿಳಿಸಿದರು : " ಆತ್ಮೀಯ ಮಿತ್ರರೇ ಇದೊಂದು ಸಂತೋಷದಾಯಕ ವಿಷಯ, ನಾನೆಲ್ಲಿ ಹೋದರೂ ನಿಮ್ಮ ದಯಾಪರತೆ ಮತ್ತು ಪರಿಶುದ್ಧತೆಗಳ ಬಗ್ಗೆ ಹೊಗಳಿಕೆಯಲ್ಲದೆ ಮತ್ತೇನೂ ಕೇಳಿಲ್ಲ. ನಾನು ನಿಮ್ಮ ಉದಾತ್ತ ಆಶೋತ್ತರಗಳು ಕೈಗೂಡಲೆಂದು ಸೋಮವಾರ ಪ್ರಾರ್ಥಿಸುತ್ತೇನೆ:"[178].

---

*176. **ಡೆಕ್ಕನ್ ಹೆರಾಲ್ಡ್.,** ದಿನಪತ್ರಿಕೆ - ದಿನಾಂಕ : 2-10-2005ರ ಲೇಖನ, 'ಎ ಮಹಾರಾಜಾಸ್' ಪು. 4*

*177. **ಡೆಕ್ಕನ್ ಹೆರಾಲ್ಡ್.,** ದಿನಪತ್ರಿಕೆ - ದಿನಾಂಕ : 2-5-2006, ನಾಸ್ಟಿಲ್ಜಿಕ್ ಅಬೌಟ್ ಮೈಸೂರ್' ಎಂಬ ಲೇಖನದಲ್ಲಿ, ಪು. II*

*178. **ಅದೇ.***

ಹೀಗೆ ನಾಲ್ವಡಿಯವರು ಹಾಗೂ ಗಾಂಧೀಜಿಯವರು ಪರಸ್ಪರ ಪ್ರಭಾವಕ್ಕೆ ಒಳಗಾಗಿದ್ದರು. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಿಗೆ ಪೋಷಣೆ ನೀಡುತ್ತಾ ತಮ್ಮ ಜೀವನ ಶೈಲಿಯನ್ನು ರಾಜರಂತೆಯೂ, ಜನಸಾಮಾನ್ಯರಂತೆಯೂ ರೂಪಿಸಿಕೊಂಡು ಬದುಕುವ ನಿಟ್ಟಿನಲ್ಲಿ ಮತ್ತೆ ಸಾಂಪ್ರದಾಯಿಕ ರಾಜತ್ವವನ್ನು ಮಾದರಿಯಾಗಿ ಗೌರವಿಸುವಂತೆಯೂ ನಾಲ್ವಡಿಯವರು ಬೆಳಸಿಕೊಂಡಿದ್ದರು. ಈ ನಿಕಟ ಸಂಬಂಧದ ಹಿನ್ನೆಲೆಯಲ್ಲಿ ಗಾಂಧೀಜಿ ನಾಲ್ವಡಿಯವರನ್ನು "ರಾಜರ್ಷಿ"ಯೆಂದೂ, ಮೈಸೂರು ರಾಜ್ಯವನ್ನು "ರಾಮರಾಜ್ಯ" ವೆಂದು ಕರೆದದ್ದು [179]. ಹಾಗೆಯೇ ಮದನ ಮೋಹನ ಮಾಳವೀಯರವರು ನಾಲ್ವಡಿಯವರ ವಿಶೇಷ ಗುಣಗಳನ್ನಾಧರಿಸಿ, ಅವರು ಸ್ಥಾಪಿಸಿದ ಬನಾರಸ್ ಹಿಂದೂ ವಿಶ್ವವಿದ್ಯಾನಿಲಯಕ್ಕೆ ನಾಲ್ವಡಿಯವರನ್ನು ಕುಲಪತಿ ಅಥವಾ ಛಾನ್ಸಲರ್ ಆಗಿ ನೇಮಿಸಿದರು [180].

ಮೇಲಿನ ಸ್ಥೂಲ ವಿವರಣೆಯಿಂದ ನಾವು ಗಮನಿಸಿದ ಅಂಶಗಳೆಂದರೆ, ನಾಲ್ವಡಿಯವರು ಆಧುನಿಕ ಭಾರತದ ಇತಿಹಾಸದಲ್ಲಿ ನವೋದಯ ಮತ್ತು ಪ್ರಗತಿಶೀಲ ಪ್ರವೃತ್ತಿಯ ಕಾಲದಲ್ಲಿ ಬದುಕಿದ್ದವರಾಗಿದ್ದು ಮೈಸೂರಿನ ಸಂಪ್ರದಾಯಬದ್ಧ ಚಲನಶೀಲ ಸಮಾಜದೊಳಗೆ ಪರಿವರ್ತನೆಯ ರೂವಾರಿಯಾಗಿ ಕಾರ್ಯನಿರ್ವಹಿಸಬೇಕಾಗಿತ್ತು. ಇಂತಹ ಸಾಮಾಜಿಕ ಪರಿವರ್ತನೆಯ ನೇತಾರರಾದ ನಾಲ್ವಡಿಯವರ ವ್ಯಕ್ತಿತ್ವದ ವಿಕಾಸದಲ್ಲಿ ಶಿಕ್ಷಣ ಮಹತ್ವದ ಪಾತ್ರವಹಿಸಿತು. ಅವರ ಕುಟುಂಬ ವರ್ಗದವರು ಅವರ ಜನನ ಕಾಲದಿಂದ ಆರಂಭಿಸಿದ ಸಾಂಪ್ರದಾಯಿಕ ಆಚರಣೆಗಳನ್ನೊಳಗೊಂಡಂತೆ ಸಾಂಪ್ರದಾಯಿಕ ಹಾಗೂ ಆಧುನಿಕ ಶಿಕ್ಷಣದ (ಪಾಶ್ಚಿಮಾತ್ಯ) ವಿಚಾರಗಳನ್ನು ಅವರಲ್ಲಿ ತುಂಬುತ್ತಲೇ ಬಂದರು. ಆ ವಿಚಾರಗಳನ್ನು ತನ್ನದಾಗಿಸಿಕೊಳ್ಳುವಂತಹ ಪ್ರವೃತ್ತಿಯನ್ನು ನಾಲ್ವಡಿಯವರು ಬೆಳೆಸಿಕೊಂಡು ಕಾಲಕಾಲಕ್ಕೆ ವ್ಯವಸ್ಥಿತವಾಗಿ ದೊರಕುತ್ತಾ ಬಂದ ಶಿಕ್ಷಣವನ್ನು ಬಹಳ ಶ್ರದ್ಧೆಯಿಂದ ಮೈಗೂಡಿಸಿಕೊಂಡು ತಮ್ಮನ್ನು ಪರಿಷ್ಕರಿಸಿಕೊಳ್ಳಲಾರಂಭಿಸಿದರು. ಇದರಿಂದ ಇಪ್ಪತ್ತನೇ ಶತಮಾನದ ಅವಶ್ಯಕತೆ, ಸನ್ನಿವೇಶ ಮತ್ತು ಒತ್ತಡಗಳಿಗನುಗುಣವಾಗಿ ಶಿಕ್ಷಣದ ರೂಪುರೇಷೆಗಳು ಮನೆಯ ಹಿರಿಯರಿಂದಲೂ, ದೇಶೀಯ ಮತ್ತು ಯೂರೋಪ್ ತಜ್ಞರಿಂದಲೂ, ಬ್ರಿಟಿಷ್ ಅಧಿಕಾರಿಗಳಿಂದಲೂ, ದಿವಾನರಿಂದಲೂ ಹಾಗೂ ನಾಡಿನ ಗಣ್ಯರಿಂದಲೂ ಸ್ಥಿರಗೊಳ್ಳುತ್ತಾ ಬಂದಿತು. ತಾತ ಮುಮ್ಮಡಿ ಕೃಷ್ಣರಾಜ ಒಡೆಯರಂತೆ ಹೆಚ್ಚು ಸಂಪ್ರದಾಯಬದ್ಧ ಶಿಕ್ಷಣವನ್ನು ಪಡೆಯದೇ, ತಂದೆ 10ನೇ ಚಾಮರಾಜ ಒಡೆಯರಂತೆ ಹೆಚ್ಚು ಪಾಶ್ಚಿಮಾತ್ಯ ಶಿಕ್ಷಣಕ್ಕೆ ಒಲಿಯದೇ ದೇಶೀಯ ಸಂಪ್ರದಾಯದ ಬೇರುಗಳು ಸಡಿಲಗೊಳ್ಳದೆ, ಆಧುನಿಕ ಶಿಕ್ಷಣದಿಂದ ವಂಚಿತರಾಗದ ರೀತಿಯ ಸಮಗ್ರ ಶಿಕ್ಷಣವನ್ನು ಪಡೆಯುವಲ್ಲಿ ನಾಲ್ವಡಿಯವರು ಯಶಸ್ವಿಯಾದರು. ಇದರಿಂದ ಅವರ ಬುದ್ಧಿ, ಹೃದಯ ಮತ್ತು ಮನಸ್ಸುಗಳು ಒಂದಾಗಿ ಬೆರೆತು ಅವರಲ್ಲಿ ತಾಳ್ಮೆ,

---

*179. ದಿ ಹಿಂದೂ ದಿನಪತ್ರಿಕೆ, 1ನೇ ಜೂನ್ 1936, ಗಾಂಧೀ ವಿಸಿಟ್ಸ್ ಇನ್ ಮೈಸೂರ್ ಆ್ಯಸ್ ಎ ಸ್ಟೇಟ್ ಗೆಸ್ಟ್ ಇನ್ 1927, 1934 ಅಂಡ್ 1936. ಆನ್ ದಿ ವಿಸ್ಟಿಟ್ ಗಾಂಧೀ ರಿಮಾರ್ಕ್ಸ್ ಮೈಸೂರ್ ಆ್ಯಸ್ 'ರಾಮರಾಜ್ಯ'.*

*- **ಜೇಮ್ಸ್ ಮೇನೋರ್, ಪೊಲಿಟಿಕಲ್ ಛೇಂಜ್ ಇನ್ ಎನ್ ಇಂಡಿಯನ್ ಸ್ಟೇಟ್, ಮೈಸೂರ್,** 1917-1955, ನ್ಯೂಡೆಲ್ಲಿ, 1978, **ಪು.** 13*

*180. **ವೆಂಕಟರಾಮಯ್ಯ ಸಿ.ಕೆ.,** ಆಳಿದ ಮಹಾಸ್ವಾಮಿಯವರು, **ಪೂರ್ವೋಕ್ತ, ಪು.** 273*

ಆಲೋಚನೆ, ವಿಚಾರವಂತಿಕೆ, ಧರ್ಮಾಭಿಮಾನಗಳು ಬೆಳೆದವು. ಕುಟುಂಬದಿಂದ ಹೊರತಾದ ಶಿಕ್ಷಣವು ಅವರಲ್ಲಿ ಶಿಸ್ತು, ಸಮಯಪ್ರಜ್ಞೆ, ಜಾಗೃತಿಯನ್ನು ಮೂಡಿಸಿತು. "ವಿದ್ಯಾಪ್ರೌಢಿಮೆ, ಲೋಕಾನುಭವ, ವಿವೇಚನಾಶಕ್ತಿ, ಸಚ್ಚಾರಿತ್ರ್ಯ, ಕಾರ್ಯಶ್ರದ್ಧೆ, ಸಂಯಮ ಸೌಶೀಲ್ಯಗುಣಗಳು ಅವರಲ್ಲಿ ಅಸಾಧಾರಣವಾಗಿರುವ ಕಾರಣ ಅವರು ಪ್ರಜಾರಕ್ಷಕರಾಗಿ ಸುಲಭವಾದ ರೀತಿಯಲ್ಲಿ ವಿಚಕ್ಷಣೆಯಿಂದ ಆಡಳಿತ ನಡೆಸಬಲ್ಲರು. ಅವರ ನಯವಿನಯ, ಸದ್ವರ್ತನೆ, ಗಾಂಭೀರ್ಯ, ಸುಸಂಸ್ಕೃತ ಸ್ವಭಾವ ಯೂರೋಪಿಯನ್ ಜನರೆಲ್ಲರಿಂದಲೂ ಮೆಚ್ಚುಗೆಗೊಂಡಿದ್ದು ಅವರಿಗೆ ಪ್ರೀತಿ ಗೌರವಗಳನ್ನು ಗಳಿಸಿಕೊಟ್ಟಿವೆ"[181] ಎಂಬುದಾಗಿ ನಾಲ್ವಡಿಯವರ ಬಗ್ಗೆ ಬರೆದಿರುವ ಫ್ರೇಜರ್‌ರವರ ಹೇಳಿಕೆಗಳು ನಾಲ್ವಡಿಯವರು ದೇಶೀಯ ಹಾಗೂ ವಿದೇಶೀಯ ಅಥವಾ ಸಾಂಪ್ರದಾಯಿಕ ಹಾಗೂ ಆಧುನಿಕತೆಯ ನಡುವಿನ ಮಧ್ಯೆ ಕೊಂಡಿಯಾಗಿದ್ದುಕೊಂಡು ಬಹಳ ಸುಲಭವಾಗಿ ಹೇಗೆ ರಾಜ್ಯಭಾರವನ್ನು ನಿರ್ವಹಿಸಬಲ್ಲರು ಎಂಬುದರ ಬಗೆಗಿನ ದೃಢವಿಶ್ವಾಸವನ್ನು ವ್ಯಕ್ತಪಡಿಸುವಂತಿದೆ. ಹಾಗೆಯೇ ಲಾರ್ಡ್ ಕರ್ಜನ್‌ರವರು ರಾಜ್ಯಭಾರ ಸೂತ್ರವನ್ನು ನಾಲ್ವಡಿಯವರಿಗೆ ವಹಿಸಿಕೊಡುವ ಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿ "ಮಹಾರಾಜರಲ್ಲಿ ಪ್ರಕೃತಿ ಸಿದ್ಧವಾದ ವಿವೇಚನೆ, ವಿಚಕ್ಷಣೆಗಳು ಕ್ರಮಕ್ರಮವಾಗಿ ವಿಕಾಸಹೊಂದಿ, ಅವರೇ ರಾಜ್ಯಭಾರ ಸೂತ್ರಗಳನ್ನು ವಹಿಸಿ ಪ್ರಜಾಪರಿಪಾಲನೆ ಮಾಡುವ ಪೂರ್ಣ ಸಾಮರ್ಥ್ಯವನ್ನು ಪಡೆದಿದ್ದಾರೆಂಬ ನಂಬಿಕೆ ನನ್ನ ಮನಸ್ಸಿನಲ್ಲಿ ಧೃಡವಾಗಿದೆ. ಅವರು ಸಂಸ್ಥಾನದ ನಾನಾ ಪ್ರದೇಶಗಳಲ್ಲಿ ಅನೇಕ ಬಾರಿ ಸಂಚರಿಸಿ ಪ್ರಜೆಗಳ ಸ್ಥಿತಿಯನ್ನು ಕಣ್ಣಾರೆ ನೋಡಿ, ಅನುಭವಿಸಿರುವುದರಿಂದ ಹಾಗೂ ಅವರ ಕುಂದುಕೊರತೆಗಳನ್ನು ಪ್ರತ್ಯಕ್ಷವಾಗಿ ಮನದಟ್ಟು ಮಾಡಿಕೊಂಡಿರುವುದರಿಂದ ಅವರಿಗೆ ಉಂಟಾಗಿರುವ ತಿಳುವಳಿಕೆ ಎಂತಹ ಕ್ಲಿಷ್ಟ ವಿಚಾರಗಳನ್ನೂ ಸುಲಭವಾಗಿ ಇತ್ಯರ್ಥಪಡಿಸಲು ಅನುಕೂಲ ಮಾಡುತ್ತದೆ. ಇಂತಹ ತಿಳುವಳಿಕೆ, ಆತ್ಮ ಭರವಸೆಯ ಸಹಾಯದಿಂದ ಅವರು ವಿಚಕ್ಷಣತೆಯಿಂದ ರಾಜ್ಯವನ್ನಾಳಲು ಸಾಧ್ಯವಾಗುತ್ತದೆ"[182] ಎಂದು ಆಡಿದ ಮಾತುಗಳು ನಾಲ್ವಡಿಯವರ ವ್ಯಕ್ತಿತ್ವ ವಿಕಾಸದ ಬೆಳವಣಿಗೆಯನ್ನು ನಿರ್ಧಿಷ್ಟಪಡಿಸುತ್ತದೆ. ಇಷ್ಟಿದ್ದರೂ ಸಾಕೆನ್ನದ ನಾಲ್ವಡಿಯವರು ತಮ್ಮ ಸಾವಿನ ಸನಿಹದವರೆಗೂ ಹೊಸ ಹೊಸ ವಿಚಾರಗಳ ಬಗ್ಗೆ ಆಸಕ್ತಿ, ಕುತೂಹಲ ಹೊಂದಿದವರಾಗಿದ್ದರು ಎನ್ನುವುದಕ್ಕೆ ಅದರ ವಿದೇಶಿ ಪ್ರವಾಸವಾಗಿರಬಹುದು ಅಥವಾ ಅವರಿಗಿದ್ದ ವಿಜ್ಞಾನ ಮತ್ತು ತಂತ್ರಜ್ಞಾನದ ಬಗೆಗಿನ ಒಲವನ್ನು ಗುರುತಿಸಬಹುದು. ನಾಲ್ವಡಿಯವರು ಕೇವಲ ರಾಜ್ಯಾಡಳಿತ, ಸಂಪ್ರದಾಯ ಪರಿಪಾಲನೆಗೆಷ್ಟೇ ತಮ್ಮನ್ನು ಸೀಮಿತಗೊಳಿಸಿಕೊಳ್ಳದೇ ಆಧುನಿಕ ಪ್ರಪಂಚದ ಸವಾಲುಗಳಿಗೆ ಸದಾ ತೆರೆದುಕೊಂಡವರಾಗಿದ್ದರು. ಆಧುನಿಕ ಪ್ರಪಂಚವು ಒಡ್ಡುವ ಸವಾಲುಗಳಿಗೆ ರಾಜ್ಯವನ್ನು, ಜನತೆಯನ್ನು ಕೊಂಡೊಯ್ಯಲು ಬೇಕಾದ ವಿಜ್ಞಾನ, ತಂತ್ರಜ್ಞಾನಗಳ ಆವಿಷ್ಕಾರಗಳಿಗೆ

---

*181. ಫೈಲ್ ನಂ. ; ಆರ್/2 (31/299)., ಪೂರ್ವೋಕ್ತ, ಪು. 4*

*182. ಜೋಸ್ಯೆಯರ್ ಜಿ.ಆರ್., ಪೂರ್ವೋಕ್ತ, ಪು. 241*

*- ದಿ ಹಿಂದೂ ದಿನಪತ್ರಿಕೆ, ದಿನಾಂಕ 11-8-1902 ಮತ್ತು ದಿ ಮದ್ರಾಸ್ ಮೇಲ್ ದಿನಪತ್ರಿಕೆ ದಿನಾಂಕ 8-8-1902, ಪ್ರೆಸ್‌ಕಟಿಂಗ್ಸ್, ಪೂರ್ವೋಕ್ತ.*

ಸಂಬಂಧಿಸಿದ ವಿಚಾರಗಳ ಬಗ್ಗೆ ಸದಾ ಆಸಕ್ತಿ ಹೊಂದಿದವರಾಗಿದ್ದರು. ಆದುದರಿಂದಲೇ ಇವರ ಕಾಲದಲ್ಲಿ ಮೈಸೂರು ರಾಜ್ಯದ ಜನತೆಗೆ ಸೈಕಲ್, ಕಾರು, ವಿಮಾನ, ವಿದ್ಯುಚ್ಛಕ್ತಿ ಇವೇ ಮೊದಲಾದ ಹೊಸ ಆವಿಷ್ಕಾರಗಳ ಪರಿಚಯವಾದದ್ದು. ಇಂತಹ ಹೊಸ ತಂತ್ರಜ್ಞಾನಗಳ ಅರಿವನ್ನು ಜನತೆಯಲ್ಲಿ ಮೂಡಿಸಲು ನಡೆಸುತ್ತಿದ್ದ ಪ್ರದರ್ಶನಗಳೇ ಇದಕ್ಕೆ ಸಾಕ್ಷಿ. ಹೀಗೆ ಸಾಮಾಜಿಕ ಪರಿವರ್ತನೆಯ ರೂವಾರಿಯಾಗಿ ಕಾಣಿಸಿಕೊಳ್ಳುವ ನಾಲ್ವಡಿಯವರು ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದಾಗಲೂ ಅಂದರೆ 1940ರ ಜುಲೈ 19ರ ಮೊದಲೂ ಟೆಲಿವಿಷನ್ (ದೂರದರ್ಶನ)ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಕುತೂಹಲ ತೋರಿಸಿದ್ದು ಅವರಿಗಿದ್ದ ವೈಜ್ಞಾನಿಕ ಹಾಗೂ ತಾಂತ್ರಿಕ ಜ್ಞಾನದ ಅಥವಾ ಆಧುನಿಕ ವಿಚಾರಧಾರೆಗಳ ಬಗೆಗಿನ ಆಸಕ್ತಿ, ಕುತೂಹಲ, ಕಲಿಕಾ ಪ್ರವೃತ್ತಿ ಸಾವಿನ ಸನಿಹದವರೆಗೂ ಬೆಳೆದುಬಂದದ್ದನ್ನು ತೋರಿಸುತ್ತದೆ[183].

ಹೀಗೆ ನಾಲ್ವಡಿಯವರು ಕೇವಲ ಒಂದೇ ಕ್ಷೇತ್ರಕ್ಕೆ ತಮ್ಮನ್ನು ಮೀಸಲಿರಿಸಿಕೊಳ್ಳದೇ ಸಂಪ್ರದಾಯದ ಮತ್ತು ಆಧುನಿಕತೆಯ ಎಲ್ಲ ಸ್ತರಗಳಲ್ಲೂ ತಮ್ಮನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಅವರು ಪಡೆದ ಶಿಕ್ಷಣ, ಮಾಡಿದ ಪ್ರವಾಸ, ಗಣ್ಯರ ಒಡನಾಟದ ಪ್ರಭಾವದ ಅಂಶಗಳು ಅವರನ್ನು ಸಂಪ್ರದಾಯ ಹಾಗೂ ಆಧುನಿಕತೆಯ ಸಮನ್ವಯಕರನ್ನಾಗಿ ರೂಪಿಸುವಲ್ಲಿ ಸಹಕರಿಸಿದವು. ಇಂತಹ ಅಗಾಧ ಶಿಕ್ಷಣದಿಂದ ಎರಕಗೊಂಡ ನಾಲ್ವಡಿಯವರು ಮುಂದೆ ತಮ್ಮ ಆಡಳಿತಾವಧಿಯಲ್ಲಿ ರಾಜ್ಯದ ಸಮಗ್ರ ಆರ್ಥಿಕಾಭಿವೃದ್ಧಿಯ ಬೆಳವಣಿಗೆಯ ಹಿನ್ನೆಲೆಯಲ್ಲಿ ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಅಥವಾ ಸಂಪ್ರದಾಯ ಮತ್ತು ಆಧುನಿಕತೆಯನ್ನು ಅಳವಡಿಸುವಲ್ಲಿ ಹೇಗೆ ಕಾರ್ಯನಿರ್ವಹಿಸಿ ಮೈಸೂರು ಸಂಸ್ಥಾನವನ್ನು ಇಡೀ ಭಾರತದ ಮಟ್ಟದಲ್ಲೇ 'ಮಾದರಿ ರಾಜ್ಯ' ವಾಗಿ ರೂಪಿಸುವ ನಾಯಕರಾಗಿ ಕಾಣಿಸಿಕೊಂಡರು ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ಪರಿಶೀಲಿಸಲಾಗುವುದು.

---

*183. ಕ್ಯೂ.ಜೆ.ಎಂ.ಎಸ್., ಪೂರ್ವೋಕ್ತ, ಪು. 186*

## ಅಧ್ಯಾಯ - 3

# *ನಾಲ್ವಡಿ ಕೃಷ್ಣ ರಾಜ ಒಡೆಯರು ಮತ್ತು ಆರ್ಥಿಕತೆಯಲ್ಲಿ ಆಧುನಿಕತೆ*

ನಾಲ್ವಡಿಯವರು ಆಧುನಿಕ ಭಾರತದ ಇತಿಹಾಸದಲ್ಲಿ ನವೋದಯ ಮತ್ತು ಪ್ರಗತಿಶೀಲ ಪ್ರವೃತ್ತಿಯ ಕಾಲದಲ್ಲಿ ಆಡಳಿತಗಾರರಾಗಿದ್ದವರು ಹಾಗೂ ಅವರ ಜೀವನ ದೃಷ್ಟಿ ಮತ್ತು ವ್ಯಕ್ತಿತ್ವಗಳು ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದಿಂದ ರೂಪುಗೊಂಡವಾಗಿದ್ದವು. ನಾಲ್ವಡಿಯವರು ಬಾಲ್ಯದಿಂದಲೇ ತಾಂತ್ರಿಕ, ವೈಜ್ಞಾನಿಕ ಹಾಗೂ ಆರ್ಥಿಕ ಕ್ಷೇತ್ರಗಳ ಬಗ್ಗೆ ಅಪಾರ ಆಸಕ್ತಿಯನ್ನು ಹೊಂದಿದ್ದರು ಹಾಗೆಯೇ ಅವುಗಳಿಗೆ ಪೂರಕವಾದ ಶಿಕ್ಷಣವನ್ನು ಪಡೆದಿದ್ದರು. ಅವರು ಶಿಕ್ಷಣದಿಂದ ಪಡೆದಿದ್ದ ಅಗಾಧ ಜ್ಞಾನದ ಜೊತೆಗೆ ಕಾಲಕಾಲಕ್ಕೆ ಅದನ್ನು ಪರಿಷ್ಕರಿಸುತ್ತಾ, ದೇಶೀಯವಾಗಿ ಅವುಗಳನ್ನು ಅಳವಡಿಸಿಕೊಳ್ಳುವ ಸಾಧ್ಯಾಸಾದ್ಯತೆಗಳನ್ನು, ಸಾಧಕ ಬಾಧಕಗಳನ್ನು ಕುರಿತು ಚಿಂತಿಸಿ ರಾಜ್ಯದ ಮುಖಂಡರಾಗಿ ಆ ಜ್ಞಾನವನ್ನು ತಮ್ಮ ರಾಜ್ಯದ ವಿವಿಧ ಕ್ಷೇತ್ರಗಳಲ್ಲಿ ಪ್ರಾಯೋಗಿಕವಾಗಿ ಬಳಸುವ ಮಾರ್ಗಗಳನ್ನು ಹುಡುಕಿ ಅವುಗಳನ್ನು ಯಶಸ್ವಿಯಾಗಿ ಆಚರಣೆಗೆ ತಂದರು. ನಾಲ್ವಡಿಯವರು ತಮ್ಮ ಜೀವಿತಾವಧಿಯಲ್ಲಿ ಹಲವು ಪ್ರಮುಖ ಸಮಾರಂಭಗಳಲ್ಲಿ, ರಾಜ್ಯದ ಪ್ರವಾಸದ ಸಂದರ್ಭದಲ್ಲಿ ಜನತೆಯನ್ನುದ್ದೇಶಿಸಿ ಮಾಡಿದ ಪ್ರಭಾವಶಾಲಿ ಭಾಷಣಗಳಲ್ಲಿ ಆಧುನಿಕತೆಯ ಅಂಶಗಳಾದ ತಾಂತ್ರಿಕತೆ, ವೈಜ್ಞಾನಿಕತೆ ಮತ್ತು ಆರ್ಥಿಕ ಅಂಶಗಳನ್ನು ಪ್ರಚುರಿಸುತ್ತಾ, ಮನವರಿಕೆಮಾಡಿಕೊಡುತ್ತಾ, ತಮ್ಮ ತಮ್ಮ ಕ್ಷೇತ್ರಗಳಲ್ಲಿ ಅಳವಡಿಸಿಕೊಳ್ಳಬೇಕೆಂದು ನೀಡಿದ ಸಲಹೆ ಮತ್ತು ಮನವಿಗಳು ಜನತೆಯ ಮನೋವೃತ್ತಿಯನ್ನು ಮಾರ್ಪಾಡುಗೊಳಿಸಿ ಆಧುನಿಕತೆಯನ್ನು ಒಪ್ಪಿ ಅಳವಡಿಸಿಕೊಳ್ಳುವಂತೆ ಮಾಡಿ ಆ ಮೂಲಕ ಸಂಸ್ಥಾನದ ಸಂಪತ್ಸಮೃದ್ಧಿಗೆ ಕಾರಣಕರ್ತರಾದರು.

'ಆದರ್ಶ' ಗುರಿಯತ್ತ ಸಾಗುವಲ್ಲಿ ನಾಲ್ವಡಿಯವರು ಪಾಶ್ಚಿಮಾತ್ಯ ಮೂಲದ ಆಧುನಿಕ ವಿಚಾರಧಾರೆಗಳು, ಸಂಸ್ಥೆಗಳು ಮತ್ತು ಬೆಳವಣಿಗೆಗಳನ್ನು ತಮ್ಮ ಚಿಂತನೆಗಳಲ್ಲಿ, ಭಾಷಣಗಳಲ್ಲಿ ಬೆಂಬಲಿಸಿದರು ಹಾಗೂ ತಮ್ಮ ರಾಜ್ಯದಲ್ಲಿ ಅಳವಡಿಸಲು ಪ್ರಯತ್ನಿಸಿದರು. ನಾಲ್ವಡಿಯವರು ತಮ್ಮ ಕೆಲವು ಭಾಷಣಗಳಲ್ಲಿ ದೇಶೀಯ ಆರ್ಥಿಕ ವ್ಯವಸ್ಥೆ ಹಾಗೂ ಪಾಶ್ಚಿಮಾತ್ಯ ದೇಶಗಳ ಆರ್ಥಿಕ ವ್ಯವಸ್ಥೆಗಳ ಬಗ್ಗೆ ಹೇಗೆ ಹೋಲಿಕೆಯ ಅಂಕಿ ಅಂಶಗಳನ್ನು ನೀಡುತ್ತಾ ದೇಶೀಯ ಆರ್ಥಿಕ ವ್ಯವಸ್ಥೆಗಿಂತ ಪಾಶ್ಚಿಮಾತ್ಯ ಆರ್ಥಿಕ ವ್ಯವಸ್ಥೆಯು ಆಧುನಿಕವಾದ, ಬೆಳವಣಿಗೆಗೊಂಡ ವ್ಯವಸ್ಥೆಯೆಂದು ಹಾಗೂ ಅಂತಹ ವ್ಯವಸ್ಥೆಯನ್ನು ತಾವೂ ಮುಟ್ಟಬೇಕೆಂದು ತಮ್ಮ ಇಚ್ಛಾಶಕ್ತಿಯನ್ನು ಪ್ರಕಟಿಸುತ್ತಾರೆ. ಅದಕ್ಕೆ ಪೂರಕವಾದ

ಯೋಜನೆಗಳು, ಶಾಸನಗಳು, ಸೌಲಭ್ಯಗಳನ್ನು ರೂಪಿಸುತ್ತಾ 'ಆದರ್ಶ' ಗುರಿಯನ್ನು ತಲುಪಲು ತಮ್ಮನ್ನು ಹಾಗೂ ತಮ್ಮ ಸರ್ಕಾರಿ ಯಂತ್ರವನ್ನು ಬಳಸಿಕೊಳ್ಳುವುದನ್ನು ಇಡೀ ಈ ಅಧ್ಯಾಯದಲ್ಲಿ ಕಾಣಬಹುದು.

ನಾಲ್ವಡಿಯವರು ತಾವು ಪಡೆದ ಶಿಕ್ಷಣ, ಮಾಡಿದ ಪ್ರವಾಸ ಮತ್ತು ನೋಡಿದ, ಕೇಳಿದ ಘಟನೆಗಳಿಂದ ಹಾಗೂ ಜನಪರ ಸಂಪರ್ಕದ ಪ್ರಭಾವಗಳಿಂದ ಎರಕಗೊಂಡ ನಾಯಕರಾಗಿದ್ದು ಆ ಕಾಲದ ಪ್ರಸ್ತುತ ಜಗತ್ತಿನ ಆರ್ಥಿಕ ಸ್ಥಿತಿಯ ಬಗ್ಗೆ ಪೂರ್ಣ ಜ್ಞಾನ ಉಳ್ಳವರಾಗಿದ್ದರೆಂಬುದಕ್ಕೆ ಅವರ ಈ ನುಡಿಗಳೇ ಸಾಕ್ಷಿ.

"ನಮ್ಮ ಜನರ ಆರ್ಥಿಕ ಅಸಮರ್ಥತೆಯನ್ನು ಕುರಿತು ತಿರಸ್ಕಾರದಿಂದ ನೋಡುವ ಯಾರಾದರೂ ಮೊದಲು ಅದಕ್ಕೆ ಕಾರಣೀಭೂತವಾದ ಅಂಶಗಳತ್ತ ನೋಡಬೇಕು. ರಾಜನೀತಿಜ್ಞರು ಮತ್ತು ಆರ್ಥಿಕತಜ್ಞರು ಹೇಳುವಂತೆ ಯೂರೋಪಿನ ಅತ್ಯಂತ ಅಭಿವೃದ್ಧಿಗೊಂಡ ರಾಷ್ಟ್ರಗಳ ಜನರು ಗಳಿಸುವ ತಲಾವಾರು ಶಕ್ತಿ ವಾರ್ಷಿಕವಾಗಿ ಸರಾಸರಿ 400 ರೂಪಾಯಿಗಳು. ಅದು ಇಂಗ್ಲೆಂಡಿನಲ್ಲಿ 600 ರಿಂದ 700 ರೂಪಾಯಿಗಳು. ಅಧಿಕೃತ ದಾಖಲೆಗಳು ಹೇಳುವಂತೆ ಭಾರತದ ವಾರ್ಷಿಕ ತಲಾವಾರು ಆದಾಯ 30 ರೂಪಾಯಿಗಳನ್ನು ಮೀರುವುದಿಲ್ಲ. ಶಿಕ್ಷಿತ ಸಮೂಹವು ಯುನೈಟೆಡ್ ಕಿಂಗ್‌ಡಮ್ ಮತ್ತು ಜರ್ಮನಿಯಲ್ಲಿ ಶೇಕಡಾ 90 ಇದ್ದರೆ ಜಪಾನಿನಲ್ಲಿ 80 ರಷ್ಟಿದೆ. ಮೈಸೂರಿನಲ್ಲಿ ಅದರ ಪ್ರಮಾಣ ಶೇಕಡಾ 5 ಮಾತ್ರ.

ಮರಣದ ಅಂಕಿ ಅಂಶಗಳು ಭಯ ಹುಟ್ಟಿಸುತ್ತವೆ, ಅದರ ಬಗ್ಗೆ ನಿಖರ ದಾಖಲೆಗಳಿಲ್ಲವಾದರೂ ಮೈಸೂರು ಮತ್ತು ಅದರ ಗಡಿಯಲ್ಲಿನ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಸಾವಿನ ಪ್ರಮಾಣ 1000 ಜನಸಂಖ್ಯೆಗೆ 30. ಅದೇ ಇಂಗ್ಲೆಂಡ್ ಮತ್ತು ಜರ್ಮನಿಗಳಲ್ಲಿ ಸಾವಿನ ಪ್ರಮಾಣ 1000ಕ್ಕೆ 15 ರಿಂದ 18 ಅಥವಾ ಅದಕ್ಕೂ ಕಡಿಮೆ ಇದೆ.

ಮೇಲಿನ ಮೂರು ಅಂಶಗಳ ತುಲನೆಯಿಂದ ನಮಗೆ ತಿಳಿದು ಬರುವುದೇನೆಂದರೆ ನಮ್ಮ ನಡುವೆ ಬಡತನ, ಅಜ್ಞಾನ ಮತ್ತು ಕಡಿಮೆ ಜೀವಿಸುವ ಶಕ್ತಿ (ಸಾವಿನ ಪ್ರಮಾಣ ಹೆಚ್ಚು) ಮನೆಮಾಡಿವೆ ಮತ್ತು ಅವುಗಳೇ ನಮ್ಮ ಜನರ ಆರ್ಥಿಕ ಅಸಮರ್ಥತೆಗೆ ಪ್ರಮುಖಾಂಶಗಳಾಗಿವೆ.

ನಿವಾರಣೋಪಾಯಗಳು ಸಹ ಅಷ್ಟೇ ಸ್ಪಷ್ಟವಾಗಿವೆ ಅದೆಂದರೆ ನಾವು ಈ ಕ್ಷೇತ್ರಗಳಲ್ಲಿ ಬಹಳ ಹಿಂದೆ ಬಿದ್ದಿದ್ದೇವೆ ಮತ್ತು ತಡವಾಗಿ ಈ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದೇವೆ ಎನ್ನುವುದು. ಉನ್ನತ ಆರ್ಥಿಕ ಸಾಮರ್ಥ್ಯ ಸಾಧಿಸಲು ಆ ಜನ ಅನುಸರಿಸಿದ ವಿಧಾನಗಳು ಮತ್ತು ಉದಾಹರಣೆಗಳನ್ನು ನಾವೂ ಅನುಸರಿಸಲೇ ಬೇಕು. ನಾನು ತಿಳಿದಂತೆ ಯೂರೋಪಿನಲ್ಲಿ

ಒಂದು ಸಾಮಾನ್ಯ ಮಾತಿದೆ. ಅದೆಂದರೆ "ಯಾವ ದೇಶದಲ್ಲಿ ಅನುಪಯುಕ್ತ ಅಥವಾ ನಿರುದ್ಯೋಗಿ ಜನರ ಸಂಖ್ಯೆ ಅತ್ಯಂತ ಕಡಿಮೆಯಿರುತ್ತದೋ ಆ ದೇಶವೇ ಅತ್ಯಂತ ಸಂಪದ್ಭರಿತವಾದುದು". ಕಾರ್ಮಿಕ ವರ್ಗದ ಸಂಖ್ಯೆಯನ್ನು ಅದರಲ್ಲೂ ಕುಶಲ ಕೆಲಸಗಾರರ ಸಂಖ್ಯೆಯನ್ನು ಮತ್ತು ಅವರ ಉದ್ಯೋಗಗಳನ್ನು ಕಡ್ಡಾಯವಾಗಿ ಹೆಚ್ಚಿಸಬೇಕು.

ನಮ್ಮ ಇಂದಿನ ಪ್ರಧಾನ ಕಸುಬಾದ ಕೃಷಿಯನ್ನು ಹೆಚ್ಚಿನ ವೈಜ್ಞಾನಿಕ ವಿಧಾನಗಳ ಮೂಲಕ ಕೈಗೊಳ್ಳಬೇಕು. ಸಾಗುವಳಿದಾರರಿಗೆ ಉತ್ಪಾದನಾ ವೆಚ್ಚದ ಅಂದಾಜು ಮಾಡುವುದನ್ನು ಕಲಿಸಬೇಕು ಮತ್ತು ಕೃಷಿಗೆ ಸಂಬಂಧಿಸಿದ ಪ್ರಾಥಮಿಕ ಯಾಂತ್ರಿಕ ಕಸುಬುಗಳ ಬಗ್ಗೆ ಬೋಧಿಸಬೇಕು. ಸಂಪತ್ತನ್ನು ಹೆಚ್ಚಿಸುವ ಪ್ರಧಾನ ಸಾಧನಗಳಾದ ಉತ್ಪಾದನೋದ್ಯಮ ಮತ್ತು ವಾಣಿಜ್ಯಗಳನ್ನು ವಿಶೇಷವಾಗಿ ಪ್ರೋತ್ಸಾಹಿಸಬೇಕು. ಮರ, ಕಬ್ಬಿಣ, ಜೇಡಿ, ಚರ್ಮ ಮತ್ತು ನೇಯ್ಗೆಗಳಲ್ಲಿ ದುಡಿಯುವ ಕುಶಲ ಕರ್ಮಿಗಳಿಗೆ ತರಭೇತಿ ಕೊಡಬೇಕು ಮತ್ತು ಆ ಮೂಲಕ ನಮ್ಮ ದಿನನಿತ್ಯದ ಪ್ರಧಾನ ಬೇಡಿಕೆಗಳನ್ನು ಪಡೆಯುವಂತಾಗಬೇಕು. ಎಲ್ಲ ಆರ್ಥಿಕ ಅನಿಷ್ಟಗಳಿಗೂ ಶಿಕ್ಷಣವೇ ಪರಮೋನ್ನತ ನಿವಾರಣೋಪಾಯ"[184] ಎಂಬ ನಾಲ್ವಡಿಯವರ ಮೇಲಿನ ನುಡಿಗಳು ಈ ಅಧ್ಯಾಯದ ನಮ್ಮ ಮೂಲ ಪರಿಕಲ್ಪನೆಗೆ ಸ್ಪಷ್ಟ ಚಿತ್ರಣವನ್ನು ನೀಡುತ್ತವೆ. ಈ ನುಡಿಗಳು ದೇಶದ ಆರ್ಥಿಕ ಸ್ಥಿತಿಯನ್ನು ಹಾಗೂ ಜನಸಾಮಾನ್ಯರ ಬೆಳವಣಿಗೆಯನ್ನು ಹೇಗೆ ಸಾಧಿಸಬಹುದೆಂಬ ದೃಷ್ಟಿಯಲ್ಲಿ ನಾಲ್ವಡಿಯವರ ಚಿಂತನೆಯ ಹಿಂದಿನ ನುಡಿಗಳಾಗಿದ್ದವು. ಹಿಂದಿನ ಅಧ್ಯಾಯದಲ್ಲಿ ತಿಳಿಸಿರುವಂತೆ ನಾಲ್ವಡಿಯವರ ಆಧುನಿಕ ಚಿಂತನೆಗಳು ಪಾಶ್ಚಿಮಾತ್ಯ ಮಾದರಿಯ ಶಿಕ್ಷಣದ ಪ್ರಭಾವದಿಂದ ರೂಪುಗೊಂಡವಾಗಿದ್ದು ಅವು ಪಾಶ್ಚಿಮಾತ್ಯ ರೀತಿಯ ಲೌಕಿಕ ಬೆಳವಣಿಗೆಯನ್ನು ತಮ್ಮ ರಾಜ್ಯದಲ್ಲೂ ಕಾಣಬೇಕೆಂಬ ಇಚ್ಛೆಯನ್ನು ಹೊಂದಿದ್ದವಾಗಿದ್ದವು. ಆ ದಿಸೆಯಲ್ಲಿ ಪಾಶ್ಚಿಮಾತ್ಯ ಮೂಲದ ಆಧುನಿಕಾಂಶಗಳನ್ನು ಸಂಸ್ಥಾನದಾದ್ಯಂತ ಜಾರಿಗೊಳಿಸಿ ಪಾಶ್ಚಿಮಾತ್ಯ ದೇಶಗಳ ಮಟ್ಟಕ್ಕೆ ಸಂಸ್ಥಾನವನ್ನು ಬೆಳೆಸಬೇಕೆಂಬ ಮಹತ್ವಾಕಾಂಕ್ಷೆಯನ್ನು ನಾಲ್ವಡಿಯವರು ಹೊಂದಿದ್ದರು. ಈ ಹಿನ್ನೆಲೆಯ ಬೆಳವಣಿಗೆಗೆ ಅಡಚಣೆಯಾಗಿರುವ ಸಮಸ್ಯೆಗಳನ್ನು ಗುರುತಿಸಿ, ಅವುಗಳಿಗೆ ಆಧುನಿಕ ಆರ್ಥಿಕಾಂಶಗಳ ಮೂಲಕ ನಿವಾರಣೋಪಾಯಗಳನ್ನು ಜಾರಿಗೆ ತಂದು ಸಂಪ್ರದಾಯಬದ್ಧವಾಗಿರುವ ಮೈಸೂರು ಸಂಸ್ಥಾನದ ಆರ್ಥಿಕ ಸಮಾಜವನ್ನು ಪರಿವರ್ತನೆಯ ಹಾದಿಯತ್ತ ಕೊಂಡೊಯ್ಯುವಲ್ಲಿ ನಾಲ್ವಡಿಯವರು ಕೈಗೊಂಡ ಕಾರ್ಯಯೋಜನೆಗಳನ್ನು ಪರಿಶೀಲಿಸುವುದೇ ಈ ಅಧ್ಯಾಯದ ಅಧ್ಯಯನದ ಮೂಲ ಉದ್ದೇಶವಾಗಿದೆ.

ನಾಲ್ವಡಿಯವರ ವೈಶಿಷ್ಟ್ಯವೆಂದರೆ ಅವರು ಆಶಾವಾದಿಯಾಗಿ ಆದರ್ಶದತ್ತ ಮುನ್ನುಗ್ಗುತ್ತಲೇ ಆಶಾವಾದಿಯಾಗಿಯೇ ವಾಸ್ತವ ಸ್ಥಿತಿಯ ಬಗ್ಗೆಯೂ ಅರಿವನ್ನು ಹೊಂದಿದ್ದದ್ದು. ಪಾಶ್ಚಿಮಾತ್ಯ ದೇಶಗಳ ಮಟ್ಟಕ್ಕೆ

---

*184. ಸ್ಪೀಚಸ್ ಬೈ ಹಿಸ್ ಹೈನೆಸ್., ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್, ಮಹಾರಾಜ ಆಫ್ ಮೈಸೂರ್, 1902-1933, ಸಂಪುಟ - 1, ಮೈಸೂರು. 1934. ಪು. 87-89*

ಮೈಸೂರು ಸಂಸ್ಥಾನವನ್ನು ಕೊಂಡೊಯ್ಯುವಲ್ಲಿ ಅಡಚಣೆಯಾಗಿರುವ ಸಮಸ್ಯೆಗಳಿಗೆ ನಿವಾರಣೋಪಾಯಗಳನ್ನು ರೂಪಿಸುವಲ್ಲಿ ನಾಲ್ವಡಿಯವರ ದೃಷ್ಟಿಕೋನ ವಿಭಿನ್ನವಾಗಿತ್ತು. ಅಂದರೆ ನಾಲ್ವಡಿಯವರ ದೃಷ್ಟಿಯಲ್ಲಿ ಆರ್ಥಿಕತೆಯ ಅಭಿವೃದ್ಧಿಯು ಆಧುನಿಕವಾದ ಅಂಶಗಳ ಅಳವಡಿಕೆಯಿಂದ ರೂಪುಗೊಳ್ಳಬೇಕು ಮತ್ತು ಅಭಿವೃದ್ಧಿಯು 'ಸಮಗ್ರ ಅಭಿವೃದ್ಧಿ'ಯಾಗಿರಬೇಕು ಎಂಬುದಾಗಿತ್ತು. ಸಮಗ್ರ ಅಭಿವೃದ್ಧಿ ಸಾಧಿಸುವುದೆಂದರೆ ಆಧುನಿಕತೆಯನ್ನು ಸಾಧಿಸಿದಂತೆ ಎಂಬುದಾಗಿತ್ತು. ಮೊದಲೇ ತಿಳಿಸಿರುವಂತೆ ಆಧುನಿಕತೆ ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿನ ಬೆಳವಣಿಗೆ ಒಂದೇ ಎಂಬ ಅರ್ಥದಲ್ಲಿ ನೋಡುವುದಾದರೆ ನಮ್ಮ ಅಧ್ಯಯನ ಕಾಲವಾದ 20ನೇ ಶತಮಾನದ ಆರಂಭದಲ್ಲಿ ವಸಾಹತುಶಾಹಿ ಆಳ್ವಿಕೆ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದಿಂದಾಗಿ ಪೌರ್ವಾತ್ಯ ದೇಶಗಳ ಅಳರಸರೂ, ಜನರೂ ತಮ್ಮನ್ನಾಳುತ್ತಿದ್ದ ದೇಶಗಳ ಆರ್ಥಿಕ, ರಾಜಕೀಯ, ಕ್ಷೇತ್ರಗಳ ಸಾಧನೆಯನ್ನು 'ಅಭಿವೃದ್ಧಿಗೊಂಡ', 'ಆಧುನಿಕವಾದ', 'ಮಾದರಿಯಾದ' ವ್ಯವಸ್ಥೆಗಳೆಂದು ಅಂಗೀಕರಿಸಿದ್ದರು. ಅಲ್ಲದೆ ಆ 'ವ್ಯವಸ್ಥೆ'ಯನ್ನು ಆದರ್ಶ ಆಧುನಿಕ ಸ್ಥಿತಿಯೆಂದು ಭಾವಿಸಿ ಅದನ್ನು ಸಾಧಿಸುವುದೇ ತಮ್ಮ ಹಾಗೂ ತಮ್ಮ ಅಧೀನ ರಾಜ್ಯಗಳ ಹೆಗ್ಗುರಿಯೆಂದು ನಿರ್ಧರಿಸಿದ್ದರು. ಇಂತಹ ಒಟ್ಟಾರೆ ಭಾವನೆಯು ನಾಲ್ವಡಿ ಕೃಷ್ಣರಾಜ ಒಡೆಯರಲ್ಲಿ ಚಿಂತನೆಯಾಗಿ ಮೂಡಿ ತಾವು ಆದರ್ಶವೆಂದುಕೊಂಡಿದ್ದ ಪಾಶ್ಚಿಮಾತ್ಯ ದೇಶಗಳಲ್ಲಿನ ಆಧುನಿಕ ವ್ಯವಸ್ಥೆಯ ಹಂತಕ್ಕೆ ತಮ್ಮ ರಾಜ್ಯ ಮತ್ತು ಪ್ರಜೆಗಳನ್ನು ಕೊಂಡೊಯ್ಯಲು ಪ್ರತ್ಯಕ್ಷವಾಗಿ ತಮ್ಮ ಭಾಷಣಗಳ ಮೂಲಕ ಹಾಗೂ ಪರೋಕ್ಷವಾಗಿ ತಮ್ಮ ಆಡಳಿತ ವ್ಯವಸ್ಥೆಯಲ್ಲಿ ರೂಪಿಸಿದ ಹೊಸ ಕಾನೂನುಗಳು, ನಿಯಮಗಳು, ಯೋಜನೆಗಳನ್ನು ವಿವಿಧ ಇಲಾಖೆಗಳ, ಸಂಸ್ಥೆಗಳ, ಅಧಿಕಾರಿಗಳ ಮೂಲಕ ಪ್ರಚುರಿಸಿ ಸಾಕಾರಗೊಳಿಸಲು ಪ್ರಯತ್ನಿಸಿದರು. ಅವರ ಈ ಚಿಂತನೆಗಳು ಪ್ರಮುಖವಾಗಿ ಅವರ ಭಾಷಣಗಳಲ್ಲಿ, ಕ್ರಿಯಾಶೀಲ ಯೋಜನೆಗಳಲ್ಲಿ ಹಾಗೂ ಆಡಳಿತದ ಎಲ್ಲಾ ಹಂತಗಳಲ್ಲೂ ಹೇಗೆ ಪ್ರಕಟಗೊಳ್ಳುತ್ತಿದ್ದವೆಂಬುದನ್ನು ಹಾಗೂ ಎರಡನೇ ಅಧ್ಯಾಯದಲ್ಲಿ ಅವರ ವ್ಯಕ್ತಿತ್ವವು ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಗಮದಿಂದ ಕೂಡಿತ್ತು ಎಂಬ ಹಿನ್ನಲೆಯಲ್ಲೇ ಅವರು ದೇಶೀ ಆರ್ಥಿಕ ಕಸುಬುಗಳನ್ನು, ಕುಶಲಕಲೆಗಳನ್ನು ಹೇಗೆ ಆಧುನಿಕ ಅಂಶಗಳಿಂದ ಸದೃಢಗೊಳಿಸುತ್ತಾ ಸಂರಕ್ಷಿಸಿಕೊಂಡು ಬರುವಂತೆಯೂ ಕಾರ್ಯಯೋಜನೆಗಳನ್ನು ನಿರೂಪಿಸುತ್ತಾ ಬಂದರೆಂಬುದನ್ನು ಗುರುತಿಸುವುದು ಈ ಅಧ್ಯಾಯದ ಮತ್ತೊಂದು ಉದ್ದೇಶವಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಆರು ಸ್ಥೂಲವಾದ ಪರಿಕಲ್ಪನೆಗಳನ್ನು ಮಾಡಿಕೊಂಡಿದ್ದು ಆ ಪರಿಕಲ್ಪನೆಗಳ ಮೂಲಕ ಮೇಲಿನ ಉದ್ದೇಶಗಳನ್ನು ವಿವರಿಸಲಾಗುವುದು.

*i)* ಆರ್ಥಿಕತೆಯ ಆಧುನಿಕತೆಯಲ್ಲಿ ಆರ್ಥಿಕ ಪರಿಷತ್ತಿನ ಪಾತ್ರ (ಎಕನಾಮಿಕ್ ಕಾನ್ಫರೆನ್ಸ್)

*ii)* ಕೃಷಿಯಲ್ಲಿ ಆಧುನಿಕತೆ

*iii)* ಕೈಗಾರಿಕೆಯಲ್ಲಿ ಆಧುನಿಕ ತಾಂತ್ರಿಕತೆ ಮತ್ತು ವೈಜ್ಞಾನಿಕತೆ

*iv)* ಆರ್ಥಿಕ ಚಟುವಟಿಕೆಗಳಲ್ಲಿ ಆಧುನಿಕತೆ-ಹಣಕಾಸಿನ ಸೌಲಭ್ಯ

*v)* ಸಾರಿಗೆ ಸಂಪರ್ಕ ವ್ಯವಸ್ಥೆಯಲ್ಲಿ ಆಧುನಿಕತೆ

*vi)* ವ್ಯಾಪಾರ-ವಾಣಿಜ್ಯ ಕ್ಷೇತ್ರಗಳಲ್ಲಿ ಆಧುನಿಕತೆ

## *i) ಆರ್ಥಿಕತೆಯ ಆಧುನಿಕತೆಯಲ್ಲಿ ಆರ್ಥಿಕ ಪರಿಷತ್ತಿನ ಪಾತ್ರ(ಎಕನಾಮಿಕ್ ಕಾನ್ಫರೆನ್ಸ್)*

ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲ ಆಧುನಿಕ ಆರ್ಥಿಕ ಕ್ರಾಂತಿಯ ದೃಷ್ಟಿಯಿಂದ ಮೈಸೂರಿನ ಇತಿಹಾಸದಲ್ಲಿ ಒಂದು ವಿಶಿಷ್ಟ ಘಟ್ಟವಾಗಿ ಕಾಣಿಸಿಕೊಳ್ಳುತ್ತದೆ. ಆಧುನಿಕ ಆರ್ಥಿಕಾಂಶಗಳು ಮೈಸೂರಿನ ಸಮಾಜದ ಮೇಲೆ ಬೀರಿದ ಪ್ರಭಾವದಿಂದಾಗಿ ಸಂಪ್ರಾದಾಯಿಕ ಆರ್ಥಿಕ ವ್ಯವಸ್ಥೆಯೊಳಗೆ ಹೊಸ ಹೊಸ ಬದಲಾವಣೆಗಳು, ಮಾರ್ಪಾಡುಗಳುಂಟಾಗಿ ಒಟ್ಟಾರೆ ಸಮಾಜ ಪರಿವರ್ತನೆಯತ್ತ ಸಾಗುವಂತಾಯಿತು. ಇಂತಹ ಪಾಶ್ಚಿಮಾತ್ಯ ಅಥವಾ ಆಧುನಿಕತೆಯ ಪ್ರಭಾವದಿಂದ ರೂಪುಗೊಂಡ ಆಧುನಿಕ ಆರ್ಥಿಕ ಚಿಂತನೆಗಳನ್ನು ನಾಲ್ವಡಿಯವರು ತಾವು ಸ್ಥಾಪಿಸಿದ, ರೂಪಿಸಿದ ಹೊಸ ಇಲಾಖೆಗಳು, ಸಂಸ್ಥೆಗಳಲ್ಲಿ, ಕಾನೂನುಗಳು, ನಿಯಮಗಳು, ಯೋಜನೆಗಳ ಮೂಲಕ ಅಳವಡಿಸಲು ಪ್ರಯತ್ನಿಸಿ ಆ ಮೂಲಕ ಮೈಸೂರನ್ನು ಮಾದರಿ ಮೈಸೂರಿನತ್ತಲೂ, ಮೈಸೂರಿನ ಆರ್ಥಿಕತೆಯನ್ನು ಆಧುನಿಕತೆಯತ್ತಲೂ ಕೊಂಡೊಯ್ಯಲು ಪ್ರಯತ್ನಿಸಿದರು. ಅವರ ಸಮಗ್ರ ಆರ್ಥಿಕ ಆಧುನಿಕತೆಯ ಪ್ರಕ್ರಿಯೆಗಳಿಗೆಲ್ಲ ಅಸ್ತಿಭಾರದಂತೆ ಹಾಗೂ ಚಾಲಕಶಕ್ತಿಯಂತೆ ಕಾರ್ಯನಿರ್ವಹಿಸಿದ ಅನೇಕ ಇಲಾಖೆ, ಸಂಸ್ಥೆ, ಸಮಿತಿಗಳಲ್ಲಿ 'ಆರ್ಥಿಕ ಪರಿಷತ್ತು' (ಎಕನಾಮಿಕ್ ಕಾನ್ಫರೆನ್ಸ್) ಬಹು ಪ್ರಮುಖವಾದುದು. ಏಕಕಾಲದಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಅಭಿವೃದ್ಧಿ ಸಾಧಿಸುತ್ತಾ ಸಮಗ್ರ ಅಭಿವೃದ್ಧಿಯತ್ತ ಮೈಸೂರು ಸಂಸ್ಥಾನವನ್ನು ಕೊಂಡೊಯ್ಯುವಲ್ಲಿ ನಾಲ್ವಡಿಯವರು ಆರ್ಥಿಕ ಪರಿಷತ್ತನ್ನು ಪೂರ್ಣವಾಗಿ ಅವಲಂಬಿಸಿದ್ದರು ಮತ್ತು ಆ ದಿಸೆಯತ್ತ ಅವರು ಅದನ್ನು ಹೇಗೆ ಬಳಸಿಕೊಂಡರು ಎಂಬುದನ್ನು ಈ ಕೆಳಗೆ ಪರಿಶೀಲಿಸಲಾಗಿದೆ.

ಮಹಾರಾಜ ನಾಲ್ವಡಿಯವರು ರಾಜ್ಯದ ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ, ಶಿಕ್ಷಣ ಮುಂತಾದ ಕ್ಷೇತ್ರಗಳ ಸಮಸ್ಯೆಗಳಿಗೆ ಸಂಬಂಧಿಸಿದ ಹಲವು ಮಹತ್ವದ ವಿಷಯಗಳನ್ನು ಚರ್ಚಿಸಿ ಕೈಗೊಳ್ಳಬೇಕಾದ ನಿವಾರಣ ಕ್ರಮಗಳನ್ನು ನಿರ್ಧರಿಸಲು ಈ ಆರ್ಥಿಕ ಪರಿಷತ್ತನ್ನು 1911 ರಲ್ಲಿ ಸ್ಥಾಪಿಸಿದರು.[185]

ಆರ್ಥಿಕ ಪರಿಷತ್ತಿನ ವೈಶಿಷ್ಟ್ಯವೆಂದರೆ ಇದರಲ್ಲಿ ರಾಜ್ಯದ ಉನ್ನತ ಅಧಿಕಾರಿಗಳು ಮತ್ತು ಅಧಿಕಾರೇತರ ಪ್ರಮುಖರು ಸದಸ್ಯರಾಗಿದ್ದುಕೊಂಡು ಈ ಪರಿಷತ್ತಿನ ಮೂಲಕ ಸಂಸ್ಥಾನವು ಕೈಗೊಳ್ಳುವ ಎಲ್ಲ ಅಭಿವೃದ್ಧಿ ಯೋಜನೆಗಳಲ್ಲಿ ಸರ್ಕಾರಿ ಅಧಿಕಾರಿಗಳು ಮತ್ತು ಸಾರ್ವಜನಿಕರು ನೇರವಾಗಿ ಭಾಗವಹಿಸುವುದಾಗಿತ್ತು. ಆ ಮೂಲಕ ಸರ್ಕಾರ ಮತ್ತು ಸಾರ್ವಜನಿಕರ ನಡುವೆ ಸಂಪರ್ಕ ಸೇತುವೆ ರೂಪುಗೊಂಡಿತು. ಇದರಿಂದಾಗಿ ಜನರು ಸರ್ಕಾರ ಕೈಗೊಳ್ಳುತ್ತಿದ್ದ ಯೋಜನೆಗಳನ್ನು 'ಜನತೆಯ ಯೋಜನೆ' ಗಳೆಂದೇ ಭಾವಿಸಿ ಪ್ರೀತಿಪೂರ್ವಕವಾಗಿ ಪಾಲ್ಗೊಳ್ಳುವಂತಾಯಿತು. ಈ ಕುರಿತು ನಾಲ್ವಡಿಯವರು "ನಮ್ಮ ರಾಜ್ಯದಲ್ಲಿ ನಮ್ಮದೇ ಆದ ಸಮಸ್ಯೆಗಳನ್ನು ನಿವಾರಿಸಲು ಸರ್ಕಾರವು ಇಂತಹ ಸರಿಯಾದ ಸಂಸ್ಥೆಗಳನ್ನು ಒದಗಿಸಲು ನಿರ್ಧರಿಸಿದೆ. ಈಗ ಅಧಿಕಾರಿಗಳು ಮತ್ತು ಸಾರ್ವಜನಿಕರು ಒಗ್ಗೂಡಿ ಅಂತಹ ಪ್ರಶ್ನೆಗಳ ಬಗ್ಗೆ ಹೆಚ್ಚು ಗಮನಹರಿಸಲು ಸಾಧ್ಯವಾಗುತ್ತದೆ"[186] ಎಂಬುದಾಗಿ ಮೊದಲ ಆರ್ಥಿಕ ಸಮ್ಮೇಳನದ ಉದ್ಘಾಟನಾ ಭಾಷಣದಲ್ಲಿ ಈ ಸಂಸ್ಥೆಯ ಉದ್ದೇಶದಂತೆ ಸರ್ಕಾರಿ ಅಧಿಕಾರಿಗಳು ಮತ್ತು ಸಾರ್ವಜನಿಕರು ಒಗ್ಗೂಡಿ ಸಮಸ್ಯೆಗಳನ್ನು ಪರಿಹರಿಸಲು ದುಡಿಯುವಂತಾಗಬೇಕೆಂದು ಕರೆ ನೀಡಿದರು.

***ಸದಸ್ಯರ ಮಂಡಳಿ:*** ಆರ್ಥಿಕ ಪರಿಷತ್ತು ಸರ್ಕಾರಿ ಅಧಿಕಾರಿಗಳು ಮತ್ತು ಜನಪ್ರತಿನಿಧಿಗಳಿಂದ ರೂಪುಗೊಂಡಿದ್ದು ಇದಕ್ಕೆ ದಿವಾನರು ಅಧ್ಯಕ್ಷರಾಗಿಯೂ, ಕೌನ್ಸಿಲ್ ಸದಸ್ಯರು ಉಪಾಧ್ಯಕ್ಷರಾಗಿಯೂ ಇದ್ದರು. ಸರ್ಕಾರದ ವಿವಿಧ ಕಾರ್ಯದರ್ಶಿಗಳು, ಇಲಾಖಾ ಮುಖ್ಯಸ್ಥರು, ಜಿಲ್ಲಾಧಿಕಾರಿಗಳು ಇದರ ಸರ್ಕಾರಿ ಸದಸ್ಯರಾಗಿದ್ದರು. ಅಲ್ಲದೆ ಸರ್ಕಾರೇತರ ಸದಸ್ಯರಾಗಿ ಪ್ರಜಾಪ್ರತಿನಿಧಿ ಸಭೆ ಮತ್ತು ಜಿಲ್ಲಾ ಸಮಿತಿಗಳಿಂದ ಸದಸ್ಯರು ನಾಮಕರಣಗೊಳ್ಳುತ್ತಿದ್ದರು. ಒಟ್ಟು ಸದಸ್ಯರ ಸಂಖ್ಯೆ 100 ನ್ನು ಮೀರುವಂತಿರಲಿಲ್ಲ[187].

***ಸಮಿತಿಗಳು :*** ಆರ್ಥಿಕ ಪರಿಷತ್ತಿನಲ್ಲಿ ಮೂರು ಕೇಂದ್ರ ಸಮಿತಿಗಳು (ಸೆಂಟ್ರಲ್ ಬೋರ್ಡ್‌ಗಳು) ಇದ್ದವು. ಅವುಗಳೆಂದರೆ;

---

*185. **ಆರ್.ಎ.ಎಂ. 1913-14.**, ಪು. 10 (ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್)*
*-**ಹಯವದನ ರಾವ್ ಸಿ.** (ಸಂ)., ಮೈಸೂರ್ ಗೆಜೆಟಿಯರ್, ಸಂಪುಟ - II, ಭಾಗ - IV, ಬೆಂಗಳೂರು, 1929. ಪು. 3030*

*186. **ಸ್ಪೀಚಸ್ ಬೈ ಹಿಸ್ ಹೈನೆಸ್.**, ಪೂರ್ವೋಕ್ತ, ಪು. 87*

*187. **ಹಯವದನ ರಾವ್ ಸಿ. (ಸಂ).**, ಮೈಸೂರ್ ಗೆಜೆಟಿಯರ್, ಸಂಪುಟ - III, ಎಕಾನಮಿ, ನ್ಯೂ ಎಡಿಷನ್, ಬೆಂಗಳೂರು, 1929, ಪು. 3*

(i) ಶಿಕ್ಷಣ ಸಮಿತಿ (ಬೋರ್ಡ್ ಆಫ್ ಎಜುಕೇಷನ್)

(ii) ಕೃಷಿ ಸಮಿತಿ (ಬೋರ್ಡ್ ಆಫ್ ಅಗ್ರಿಕಲ್ಚರ್)

(iii) ಕೈಗಾರಿಕಾ ಮತ್ತು ವಾಣಿಜ್ಯ ಸಮಿತಿ (ಬೋರ್ಡ್ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್)

ಪ್ರತಿ ಸಮಿತಿಯಲ್ಲೂ ಆಯಾ ಸಮಿತಿಗಳಿಗೆ ಸಂಬಂಧಿಸಿದ ಇಲಾಖಾ ಮುಖ್ಯಸ್ಥರು, ಪ್ರಮುಖ ಅಧಿಕಾರಿಗಳು ಇರುತ್ತಿದ್ದರು, ಜೊತೆಗೆ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯ ವಿಧಾಯಕ ಸಭೆಗಳಿಂದ ತಲಾ ಇಬ್ಬರು ಸದಸ್ಯರು ಚುನಾಯಿತಗೊಳ್ಳುತ್ತಿದ್ದರು. ಅಲ್ಲದೆ ಸಮಾಜದ ವಿವಿಧ ವಿಶೇಷ ಜನವರ್ಗ ಹಾಗೂ ಸಂಸ್ಥೆಗಳ ಪ್ರತಿನಿಧಿಗಳಾಗಿ ಸದಸ್ಯರು ಸಮಿತಿಗಳಿಗೆ ಸರ್ಕಾರದಿಂದ ನಾಮಕರಣಗೊಳ್ಳುತ್ತಿದ್ದರು.

ಆರ್ಥಿಕ ಪರಿಷತ್ತಿನ ಮೂಲಕ ಸರ್ಕಾರದ ಯೋಜನೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳನ್ನು ಮೇಲ್ಮಟ್ಟದಿಂದ ಕೆಳಹಂತದವರೆಗೆ ಕೊಂಡೊಯ್ಯಲು ಮೂರು ಕೇಂದ್ರೀಯ ಸಮಿತಿಗಳ ಜೊತೆಗೆ ಜಿಲ್ಲಾ ಸಮಿತಿ, ಪಟ್ಟಣ ಸಮಿತಿ, ತಾಲ್ಲೂಕು ಸಮಿತಿ ಮತ್ತು ಗ್ರಾಮ ಸಮಿತಿಗಳನ್ನು ರೂಪಿಸಲಾಗಿತ್ತು. ಕೆಲವು ಉಪ-ಸಮಿತಿಗಳನ್ನು ಕಾಲಕಾಲಕ್ಕೆ ರೂಪಿಸಲು ಅನುಕೂಲ ಒದಗಿಸಿತ್ತು. ಅದರಂತೆ ವೈಜ್ಞಾನಿಕ ಸಲಹಾ ಸಮಿತಿ (ಬೋರ್ಡ್ ಆಫ್ ಸೈಂಟಿಫಿಕ್ ಅಡ್ವೈಸ್) ಗಳನ್ನು ಸ್ಥಾಪಿಸಿ ಅದರಲ್ಲಿ ಕೈಗಾರಿಕಾ ಮತ್ತು ವಾಣಿಜ್ಯ ಸಮಿತಿಯ ಸದಸ್ಯರ ಜೊತೆಗೆ ವೈಜ್ಞಾನಿಕತೆಯಲ್ಲಿ ಪ್ರಸಿದ್ಧರಾದ ಹೊರಗಿನವರನ್ನು ಸಮಿತಿಯಲ್ಲಿ ಸೇರಿಸಿಕೊಳ್ಳಲಾಗಿತ್ತು.[188]

***ಉದ್ದೇಶಗಳು :*** ಆರ್ಥಿಕ ಪರಿಷತ್ತು ಬಹುಮುಖ ಉದ್ದೇಶಗಳನ್ನು ಹೊಂದಿತ್ತು. ಅವುಗಳೆಂದರೆ;

(i) ಮೈಸೂರು ರಾಜ್ಯದಲ್ಲಿ ನಡೆಯಬೇಕಾದ ಆರ್ಥಿಕ ಪ್ರಗತಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ತಿಳುವಳಿಕೆಯುಳ್ಳ, ಸಾರ್ವಜನಿಕ ಸ್ಫೂರ್ತಿ ಇರುವ ಜನ ಪ್ರಮುಖರಾದ ಕೃಷಿಕರು, ವರ್ತಕರು ಮತ್ತು ಸರ್ಕಾರಿ ಅಧಿಕಾರಿಗಳು ಒಗ್ಗೂಡಿ ಚರ್ಚಿಸಲು ಅವಕಾಶ ಕಲ್ಪಿಸುವುದು.

(ii) ಹಲವು ಸಮಸ್ಯೆಗಳನ್ನು ಕುರಿತಂತೆ ಸಾರ್ವಜನಿಕರಲ್ಲಿ ಆಸಕ್ತಿ ಮೂಡಿಸುವುದು ಮತ್ತು ಅವುಗಳ ಬಗ್ಗೆ ಚರ್ಚಿಸಲು ಸಮರ್ಥರಿರುವವರ ನಡುವೆ ಸಂವಾದ ಏರ್ಪಡುವಂತೆ ಮಾಡುವುದು.

(iii) ಸರಣಿ ಸಮ್ಮೇಳನಗಳನ್ನು ಏರ್ಪಡಿಸುವ ಮೂಲಕ ಜನರಲ್ಲಿ ಪ್ರಯತ್ನಶೀಲತೆಯ ಶಕ್ತಿಯನ್ನು

---

*188. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 4-6.*
*- ಹ್ಯಾಂಡ್ ಬುಕ್ ಆಫ್ ದಿ ಮೈಸೂರ್ ಎಕನಾಮಿಕ್ ಕಾನ್ಫರೆನ್ಸ್ - 1914*

ಉದ್ದೀಪನಗೊಳಿಸುವುದು ಮತ್ತು ಸರ್ಕಾರವು ಎಲ್ಲೆಲ್ಲಿ ಪ್ರಾಯೋಗಿಕ ಕ್ರಮಗಳನ್ನು ಕೈಗೊಳ್ಳಬಹುದೆಂದು ಸಲಹೆ ನೀಡುವುದು.

(iv) ರಾಜ್ಯದ ಸಂಪದಭಿವೃದ್ಧಿಯ ಮೇಲೆ ಪ್ರಭಾವ ಬೀರಬಹುದಾದ ಪ್ರಮುಖ ಪ್ರಶ್ನೆಗಳನ್ನು ಚರ್ಚಿಸಲು ವಾರ್ಷಿಕ ಸಮ್ಮೇಳನಗಳನ್ನು ಏರ್ಪಡಿಸುವುದು[189].

***ಕಾರ್ಯ ಚಟುವಟಿಕೆಗಳು :*** ಆರ್ಥಿಕ ಪರಿಷತ್ತಿನ ಕೇಂದ್ರೀಯ ಸಮಿತಿಗಳ ಕಾರ್ಯ ಚಟುವಟಿಕೆಗಳು ಬಹುವಾಗಿದ್ದವು. ಅವು ತಮ್ಮ ತಮ್ಮ ಸಮಿತಿಗಳ ವ್ಯಾಪ್ತಿಗೆ ಸಂಬಂಧಿಸಿದ ಪ್ರಮುಖ ಆರ್ಥಿಕ ಹಿತಾಸಕ್ತಿಯ ಬಗೆಗಿನ ಪ್ರಶ್ನೆಗಳನ್ನು ಪರೀಕ್ಷಿಸುವುದು, ಆ ಪ್ರಶ್ನೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸಿ ಸಮಿತಿಯು ವರದಿ ತಯಾರಿಸಲು ನೆರವಾಗುತ್ತಿದ್ದವು. ವಿಶೇಷ ಕ್ಷೇತ್ರಗಳಲ್ಲಿ ಸಂಶೋಧನೆ ಮಾಡಲು ಪ್ರೋತ್ಸಾಹ ಮತ್ತು ಸಂಶೋಧಿತ ಫಲಿತಗಳ ಆಧಾರದ ಮೇಲೆ ಪ್ರಾಯೋಗಿಕ ಅಭಿವೃದ್ಧಿ ನೀತಿಗಳನ್ನು ರೂಪಿಸಿ ಅವುಗಳನ್ನು ಕರಪತ್ರ ಮುಂತಾದವುಗಳ ಮೂಲಕ ಜನರಲ್ಲಿ ಪ್ರಚಾರ ಮಾಡಲು ಕ್ರಮಕೈಗೊಳ್ಳುತ್ತಿದ್ದವು. ಇಂತಹ ಪ್ರಚಾರಕ್ಕೆ ಜನರು ಪ್ರಾದೇಶಿಕವಾದ ಸಂಘ ಸಂಸ್ಥೆಗಳನ್ನು ಸ್ಥಾಪಿಸಲು ಪ್ರೋತ್ಸಾಹಿಸುವುದು ಹಾಗೂ ಆ ಮೂಲಕ ಸಹಕಾರದಿಂದ ಅಥವಾ ಖಾಸಗಿಯಾಗಿ ಪ್ರಯತ್ನಿಸುವವರಿಗೆ ನೆರವು ನೀಡುವುದಾಗಿತ್ತು[190].

ಆರ್ಥಿಕ ಪರಿಷತ್ತಿನ ಜಿಲ್ಲಾ ಸಮಿತಿಗಳು ಸರ್ಕಾರದ ಯೋಜನೆಗಳ ಮತ್ತು ಜನರ ನಡುವಿನ ಪ್ರಮುಖ ಕೊಂಡಿಗಳಾಗಿದ್ದರಿಂದ ಜಿಲ್ಲೆಯ ಎಲ್ಲ ಆರ್ಥಿಕ ಕಾರ್ಯಗಳನ್ನು ಅವುಗಳಿಗೆ ವಹಿಸಲಾಗಿತ್ತು. ಜಿಲ್ಲಾ ಸಮಿತಿಗಳು ಸ್ಥಳೀಯ ಸಮಸ್ಯೆಗಳನ್ನು, ಅಸಮರ್ಪಕತೆಗಳನ್ನು ಅಧ್ಯಯನ ಮಾಡಿ ಕೇಂದ್ರ ಸಮಿತಿಗೆ ಮಾಹಿತಿ ಒದಗಿಸುವುದು, ಕೇಂದ್ರ ಸಮಿತಿ ನೀಡಿದ ಮಾಹಿತಿಗಳನ್ನು, ಕೈಗೊಂಡ ಯೋಜನೆಗಳ ಮುಖ್ಯಾಂಶಗಳನ್ನು ಜನರಲ್ಲಿ ಪ್ರಚುರಿಸುತ್ತಿತ್ತು. ಜನರಿಂದ ನಿಧಿ ಸಂಗ್ರಹಣೆ ಮತ್ತು ಜಿಲ್ಲಾ ಸಮ್ಮೇಳನಗಳನ್ನು ವ್ಯವಸ್ಥೆಗೊಳಿಸುತ್ತಿತ್ತು[191]. ಈ ಜಿಲ್ಲಾ ಸಮ್ಮೇಳನಗಳಲ್ಲಿ ಕೃಷಿ ಮತ್ತು ಕೈಗಾರಿಕೆಗಳಿಗೆ ಸಂಬಂಧಿಸಿದ ವಿವಿಧ ವಿಷಯಗಳನ್ನು ಕುರಿತು ತಜ್ಞರಿಂದ ಮತ್ತು ಆಯಾಯ ಇಲಾಖಾ ಅಧಿಕಾರಿಗಳಿಂದ ಉಪನ್ಯಾಸಗಳನ್ನು, ಪ್ರಾತ್ಯಕ್ಷಿಕ ಪ್ರದರ್ಶನಗಳನ್ನು ಏರ್ಪಡಿಸಲಾಗುತ್ತಿತ್ತು. ಈ ಸಭೆಗಳಲ್ಲಿ ಜಿಲ್ಲಾ ವ್ಯಾಪ್ತಿಯ ಸ್ಥಳೀಯ ನಾಯಕರು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಈ ಚಟುವಟಿಕೆಗಳು ಕೆಳಮುಖವಾಗಿ ತಾಲ್ಲೂಕು, ಹೋಬಳಿ ಮತ್ತು ಗ್ರಾಮ ಮಟ್ಟಗಳಲ್ಲೂ ನಡೆಯುತ್ತಿದ್ದವು. ಜಿಲ್ಲಾ ಸಮಿತಿಗಳು ತಮ್ಮ ವ್ಯಾಪ್ತಿಯಲ್ಲಿ ಕೃಷಿ, ಕೈಗಾರಿಕೆ

---

*189. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು - 1*

*190. ಅದೇ., ಪು. 6*

*191. ಅದೇ., ಪು. 7*

ಮತ್ತು ವಾಣಿಜ್ಯಗಳಲ್ಲಿ ಹೊಸ ಕ್ರಮಗಳನ್ನು ಅನುಸರಿಸಲು ಯಾರು ಸಿದ್ಧರಿರುತ್ತಾರೆ ಮತ್ತು ಅವುಗಳಿಗೆ ಬಂಡವಾಳವನ್ನು ತೊಡಗಿಸಲು ಯಾರು ಉದ್ದೇಶ ಹೊಂದಿರುತ್ತಾರೆ ಅಂತಹವರ ಪಟ್ಟಿಯೊಂದನ್ನು ಸಿದ್ಧಪಡಿಸಿಕೊಂಡು ಅವರಿಗೆ ಅವಶ್ಯಕವಾದ ತಜ್ಞರ ಸಲಹೆಗಳನ್ನು ಒದಗಿಸಲು ವ್ಯವಸ್ಥೆ ಮಾಡುತ್ತಿತ್ತು[192]. ಹೀಗೆ ಆರ್ಥಿಕ ಪರಿಷತ್ತು ಸಲಹಾ ಸಮಿತಿಯಂತೆ ಕಾರ್ಯ ನಿರ್ವಹಿಸುತ್ತಿದ್ದರೂ ಸಹ ಅದು ಕೈಗೊಂಡ ನಿರ್ಣಯಗಳನ್ನು ಸರ್ಕಾರ ಅಂತಿಮವಾಗಿ ಅಂಗೀಕರಿಸಿ ಆದೇಶಗಳನ್ನು ಹೊರಡಿಸುತ್ತಿತ್ತೆಂಬ ಅಂಶವು ಅದರ ಪ್ರಭಾವವನ್ನು ಮತ್ತು ಸರ್ಕಾರ ಅದಕ್ಕೆ ನೀಡಿದ್ದ ಮಹತ್ವವನ್ನು ಸೂಚಿಸುತ್ತದೆ.

ಆರ್ಥಿಕ ಪರಿಷತ್ತನ್ನು ಕುರಿತಂತೆ ಈ ಮೇಲೆ ನೀಡಿರುವ ಸಂಕ್ಷಿಪ್ತ ವಿವರಣೆಯಿಂದಲೇ ಕೆಲವು ಸಾಮಾನ್ಯ ನಿರ್ಣಯಕ್ಕೆ ಬರಬಹುದು. ಮೊದಲನೆಯದಾಗಿ ಇಂಗ್ಲೆಂಡಿನ ಪ್ರಸಿದ್ಧ ಮನುಕುಲದ ಇತಿಹಾಸಕಾರರಾದ ಆರ್ನಾಲ್ಡ್ ಟಾಯ್ನಬೀ ರವರ "ಸವಾಲು ಮತ್ತು ಜವಾಬು" ಎಂಬ ಸಿದ್ಧಾಂತವನ್ನು ನಾವು ಇಲ್ಲಿ ಪ್ರತಿಪಾದಿಸಬಹುದಾಗಿದೆ. ಯಾವುದೇ ಸಮಾಜ ಎಲ್ಲಿಯವರೆಗೆ ತನಗೆ ಬಂದ ಸವಾಲುಗಳನ್ನು ಸೃಜನಶೀಲ ರೀತಿಯಲ್ಲಿ ಎದುರಿಸುವ ಸಾಮರ್ಥ್ಯವನ್ನು ಪಡೆದುಕೊಂಡಿರುತ್ತದೆಯೋ ಅಲ್ಲಿಯವರೆಗೆ ಅದು ತನ್ನ ಅಸ್ಥಿತ್ವವನ್ನು ಉಳಿಸಿಕೊಂಡಿರುತ್ತದೆ. ಸಾಮಾಜಿಕ ಪರಿವರ್ತನೆಯಲ್ಲಿ ಅಥವಾ ಒಂದು ಪರ್ವಕಾಲದಲ್ಲಿ ಒಂದು ಸಮಾಜದ ಒಳಗೆ ಸೃಜನಶೀಲ ಅಲ್ಪಸಂಖ್ಯಾತರ ಪಾತ್ರವನ್ನು ಟಾಯ್ನಬಿಯವರು ಗುರುತಿಸಿದ್ದಾರೆ. ಒಂದು ಸಮಾಜವು ಎದುರಿಸುವ ಸವಾಲುಗಳನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಎಲ್ಲರಿಗೂ ಇರುವುದಿಲ್ಲ. ಕ್ರಿಯಾಶೀಲ ಅಲ್ಪಸಂಖ್ಯಾತರು ಮಾತ್ರ ಸವಾಲುಗಳನ್ನು ಗ್ರಹಿಸಬಲ್ಲರು ಮತ್ತು ಅವುಗಳಿಗೆ ಉಚಿತವಾದ ಪ್ರತಿಕ್ರಿಯೆಗಳನ್ನು ನೀಡಬಲ್ಲರು[193]. ನಮ್ಮ ಅಧ್ಯಯನದ ವಿಷಯಕ್ಕೆ ಇದನ್ನು ಅನ್ವಯಿಸಿ ಹೇಳುವುದಾದರೆ, ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರು ಸಮಾಜದ ವಿವಿಧ ಸ್ತರಗಳಲ್ಲಿ, ಕ್ಷೇತ್ರಗಳಲ್ಲಿ ಪರಿಣಿತರಾಗಿದ್ದ ಕ್ರಿಯಾಶೀಲ ವ್ಯಕ್ತಿಗಳಾಗಿದ್ದು ಸಾಮಾಜಿಕ ಪರಿವರ್ತನೆಯಲ್ಲಿ ಅಥವಾ ಸಮಾಜವನ್ನು ಪರಿವರ್ತನೆಯ ಹಾದಿಯತ್ತ ಚಲಿಸುವಲ್ಲಿ ಸೃಜನಶೀಲ ಅಲ್ಪಸಂಖ್ಯಾತ ಸಮೂಹದ ಸದಸ್ಯರಾಗಿ, ನಾಯಕರಾಗಿ ಕಾಣಿಸಿಕೊಂಡು ತಮ್ಮ ಕಾರ್ಯಯೋಜನೆಗಳ ಮೂಲಕ ಆರ್ಥಿಕ ಪರಿಷತ್ತಿನಂತಹ ಸಂಸ್ಥೆಗಳನ್ನು ಸ್ಥಾಪಿಸಿ ಆ ಮೂಲಕ ಆರ್ಥಿಕ ಸಮ್ಮೇಳನಗಳನ್ನು ನಡೆಸುತ್ತಾ ತಮ್ಮ ಸಂಸ್ಥಾನದ ಪ್ರಜೆಗಳನ್ನು ಆಧುನಿಕ ವಿಚಾರಧಾರೆಗಳು ಒಡ್ಡುವ ಸವಾಲುಗಳಿಗೆ ಜವಾಬುಗಳನ್ನು ನೀಡುವಂತಹ ಶಕ್ತಿ ಸಾಮರ್ಥ್ಯವನ್ನು ಅವರಲ್ಲಿ ಬೆಳೆಸುವಂತಹ ಕಾರ್ಯಯೋಜನೆಗಳನ್ನು ಹೇಗೆ ರೂಪಿಸಿದ್ದರು ಎಂಬುದನ್ನು ಗುರುತಿಸಿದ್ದು. ಅದಕ್ಕೆ ಉತ್ತಮ ಉದಾಹರಣೆಯಾಗಿ ಆರ್ಥಿಕ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ

---

*192. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು - 8*

*193. ಷೇಕ್ ಆಲಿ ಬಿ., ಹಿಸ್ಟರಿ ಇಟ್ಸ್ ಥಿಯೋರಿ ಅಂಡ್ ಮೆಥೆಡ್, ಎರಡನೇ ಆವೃತ್ತಿ, ಮದ್ರಾಸ್, 1981. ಪು. 249*

ನಾಲ್ವಡಿಯವರು ಮಾಡಿರುವ ಭಾಷಣದ ಮಾತುಗಳನ್ನು ಇಲ್ಲಿ ನೀಡಲಾಗಿದೆ. "ನಮ್ಮ ದೃಷ್ಟಿಯಲ್ಲಿರುವ ಗುರಿಯೆಂದರೆ ಜನರಿಗೆ ಆರ್ಥಿಕ ಭದ್ರತೆ ಮತ್ತು ಅವಶ್ಯಕವಾದ ಸಾಮರ್ಥ್ಯವನ್ನು ದೊರಕಿಸುವುದು. ಅದಕ್ಕಾಗಿ ದುಡಿಯಬೇಕೆಂದು ಎಲ್ಲ ಸತ್‌ಚಿಂತನೆಯ ಜನರಿಗೆ ಮನವಿ ಮಾಡಿಕೊಳ್ಳುತ್ತಿದ್ದೇನೆ. ನಮಗೆ ಅಲಂಕಾರಿಕ ಸದಸ್ಯರು ಬೇಡ. ನಿಮ್ಮೊಂದಿಗೆ ಸೇರಿರುವ ಪ್ರತಿಯೊಬ್ಬರೂ ಶ್ರದ್ಧೆಯಿಂದ ಮತ್ತು ಧೃಢತೆಯಿಂದ ಕಾರ್ಯ ಮಾಡುತ್ತಾರೆಂದು ನಂಬಿದ್ದೇನೆ ಮತ್ತು ನಿಮ್ಮೆಲ್ಲರ ಒಗ್ಗೂಡಿದ ಪ್ರಯತ್ನಗಳು ದೇಶಕ್ಕೆ ಶಾಶ್ವತವಾದ ಒಳ್ಳೆಯದನ್ನು ಸಾಧಿಸಲು ಬೆಳವಣಿಗೆಗೆ ಕ್ರಮಗಳಾಗುತ್ತವೆ. ಈ ಚಳುವಳಿಯು ನಿಮ್ಮ ಚಟುವಟಿಕೆಗಳು ಮತ್ತು ಬುದ್ಧಿವಂತಿಕೆಯ ಮೇಲೆ ಆಧರಿಸಿರುತ್ತದೆ. ಈ ಮೂಲಕ ನಾನು ನಿಮಗೆ ಮತ್ತು ನಿಮ್ಮ ಮೂಲಕ ರಾಜ್ಯದ ಎಲ್ಲ ಪ್ರಜೆಗಳಿಗೆ ಮನವಿ ಮಾಡಿಕೊಳ್ಳುವುದೇನೆಂದರೆ ನೀವು ಕುಶಲಿಗಳಾಗಿ ಮತ್ತು ಸಮರ್ಥರಾಗಿ ಹಾಗೂ ನಿಮ್ಮ ಮಕ್ಕಳಿಗೆ ತರಭೇತಿ ಕೊಡಿ ಮತ್ತು ಮೊಮ್ಮಕ್ಕಳಿಗೂ ಯಾವುದಾದರೂ ಒಂದು ಕೌಶಲ್ಯವನ್ನು ಕಲಿಸಿ. ಯಶಸ್ಸಿಗೆ ಯಾವುದೇ ರಾಜಮಾರ್ಗ ಇಲ್ಲ. ನಾನು ಪ್ರತಿಯೊಬ್ಬರನ್ನೂ, ಅಂದರೆ ಅವರು ಅಧಿಕಾರಿ ಅಥವಾ ಖಾಸಗಿ ಪ್ರಜೆಯಾಗಲಿ ಈ ಚಳುವಳಿಯ ಉದ್ದೇಶಗಳ ಸಾಧನೆಗೆ ದುಡಿಯಿರೆಂದು ಮನವಿ ಮಾಡಿಕೊಂಡರೆ ಅದು ನಿಷ್ಫಲವಾಗುವುದಿಲ್ಲವೆಂದು ನಂಬಿದ್ದೇನೆ[194] ಎಂಬ ಶಿಕ್ಷಣಾಧರಿತ ಮಾತುಗಳು ನಾಲ್ವಡಿಯವರು ಪ್ರಜೆಗಳನ್ನು ಕ್ರಿಯಾಶೀಲ ಅಲ್ಪಸಂಖ್ಯಾತರ ಗುಂಪಿನತ್ತ ಕೊಂಡೊಯ್ಯುವಲ್ಲಿ ಆರ್ಥಿಕ ಪರಿಷತ್ತಿನಂತಹ ಅವಶ್ಯಕ ಕಾರ್ಯ ಯೋಜನೆಗಳನ್ನು ರೂಪಿಸಿ, ಹುರಿದುಂಬಿಸುವಂತಹ ಪ್ರಧಾನ ಪಾತ್ರವನ್ನು ವಹಿಸಿದ್ದರು ಎಂಬುದನ್ನು ಇಲ್ಲಿ ನಿರೂಪಿಸಬಹುದು. ಉದಾಹರಣೆಗೆ ಸರ್ಕಾರವು ಸಾರ್ವಜನಿಕ ಕ್ಷೇತ್ರದಲ್ಲಿ ಉತ್ತಮ ಸೇವೆ ಸಲ್ಲಿಸಿದ ಅಧಿಕಾರೇತರರು ಮತ್ತು ಅಧಿಕಾರಿಗಳಿಗೆ ಬಿರುದುಗಳನ್ನು ಮತ್ತು ಪ್ರಶಸ್ತಿ ಪತ್ರಗಳನ್ನು ನೀಡಿ ಗೌರವಿಸುವ ಪದ್ಧತಿಯನ್ನು ವ್ಯಾಪಕ ರೀತಿಯಲ್ಲಿ ಜಾರಿಗೆ ತಂದಿತು[195]. ಇವುಗಳಲ್ಲಿ ಹಿಂದೆ ಇದ್ದಂತೆ ಕೆಲವರಿಗೆ ಅರಮನೆಯ ದರ್ಬಾರು ಸಮಾರಂಭಗಳಲ್ಲಿ ಖಿಲ್ಲತ್ತುಗಳನ್ನು ನೀಡಿದರೆ ಹಲವರಿಗೆ ದಿವಾನರು ಮೆಚ್ಚುಗೆಯ ಪ್ರಮಾಣ ಪತ್ರಗಳನ್ನು ನೀಡುತ್ತಿದ್ದರು[196]. ಉಳಿದ ಸಾಮಾನ್ಯರಿಗೆ ಜಿಲ್ಲಾಧಿಕಾರಿಗಳು ಪ್ರಮಾಣ ಪತ್ರಗಳನ್ನು ನೀಡುತ್ತಿದ್ದರು[197]. ಈ ಮೂಲಕ ಪ್ರಜೆಗಳಲ್ಲಿ ಕರ್ತವ್ಯನಿಷ್ಠೆ, ಆಸಕ್ತಿಯನ್ನು ಬೆಳೆಸುವಂತಹ ಪ್ರಯತ್ನವನ್ನು ಕೈಗೊಳ್ಳಲಾಯಿತು.

---

*194. **ಸ್ಪೀಚಸ್ ಬೈ ಹಿಸ್ ಹೈನೆಸ್.**, ಪೂರ್ವೋಕ್ತ, ಪು. 92-93*

*195. **ಸರ್ಕಾರದ ಆದೇಶ ಸಂಖ್ಯೆ. 955-68 - ಎ ಅಂಡ್ ಐ, 26-15-2** ದಿನಾಂಕ : 27-8-1915, ಕರ್ನಾಟಕ ಪ್ರಾಂತೀಯ ಪತ್ರಾಗಾರ ಇಲಾಖೆ, ಬೆಂಗಳೂರು*

*196. **ಹಯವದನ ರಾವ್ ಸಿ. (ಸಂ).**, ಪೂರ್ವೋಕ್ತ, ಸಂಪುಟ - III, ಪು. 8*

*197. **ಸರ್ಕಾರದ ಆದೇಶ ಸಂಖ್ಯೆ. 958-68 - ಎ ಅಂಡ್ ಐ 26-15-2,** ದಿನಾಂಕ : 27-8-1915*

ಎರಡನೆಯದಾಗಿ ಆರ್ಥಿಕ ಪರಿಷತ್ತಿನ ಗುರಿಗಳನ್ನು ಮತ್ತು ಉದ್ದೇಶಗಳನ್ನು ಕುರಿತಂತೆ ಹೇಳುವಾಗ ಅದರ ಸ್ಥಾಪನೆ ಮತ್ತು ಅದರ ಚಟುವಟಿಕೆಗಳಲ್ಲಿ ಪ್ರಧಾನ ಪಾತ್ರವಹಿಸಿದ ಅಂದಿನ ದಿವಾನರು, ಈ ಪರಿಷತ್ತಿನ ಕೌನ್ಸಿಲ್‌ನ ಸದಸ್ಯರೂ ಆಗಿದ್ದ ಸರ್.ಎಂ.ವಿಶ್ವೇಶ್ವರಯ್ಯನವರು ಹೇಳಿರುವ ಅಭಿಪ್ರಾಯವೂ ಸಹ ಇಲ್ಲಿ ಬಹು ಮಹತ್ವವಾದುದು. "ಇಲ್ಲಿಯವರೆಗೂ ಆಲೋಚಿಸುವ ಕಾರ್ಯವನ್ನು ಮುಖ್ಯವಾಗಿ ಸರ್ಕಾರಿ ಅಧಿಕಾರಿಗಳಿಗೆ ಬಿಡಲಾಗಿತ್ತು. ಇನ್ನು ಮುಂದೆ ಅಧಿಕಾರಿಗಳು ಮತ್ತು ಅಧಿಕಾರೇತರರಿಬ್ಬರೂ ಈ ಕೆಲಸದಲ್ಲಿ ಪಾಲ್ಗೊಳ್ಳುತ್ತಾರೆ. ಅಂತಿಮವಾಗಿ ಈ ಕಾರ್ಯ ಅಧಿಕಾರೇತರರಿಗೇ ಬಹುತೇಕ ವರ್ಗಾವಾಗುತ್ತದೆ"[198]. ಎಂಬ ಹೇಳಿಕೆಗಳು ಇಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತವೆ. ಅಂದರೆ ಈ ಆರ್ಥಿಕ ಪರಿಷತ್ತು ಪಾಶ್ಚಿಮಾತ್ಯ ವಿಚಾರಧಾರೆಗಳ ಪ್ರಭಾವ ಮತ್ತು ಒತ್ತಡಗಳಿಂದ ಉಂಟಾಗಬಹುದಾದ ಪರಿಣಾಮಗಳನ್ನು ಎದುರಿಸಬೇಕಾಗಿದ್ದ ಮೈಸೂರು ಸಂಸ್ಥಾನದ ಸಂಪ್ರದಾಯಬದ್ಧ ಸಮಾಜದ ಪ್ರಜೆಗಳನ್ನು ಬದಲಾಗುತ್ತಿದ್ದ ಪರಿಸರಕ್ಕೆ ಹೊಂದಿಸಲು ಆವಶ್ಯಕವಾದ ಶಿಕ್ಷಣ ಹಾಗೂ ಮಾರ್ಗೋಪಾಯಗಳನ್ನು ನೀಡುವ ದೃಷ್ಟಿಯಿಂದ ಸ್ಥಾಪಿಸಲಾಗಿತ್ತು. ಹಾಗೆಯೇ ಅಧಿಕಾರಿಗಳು ಮತ್ತು ಜನರ ನಡುವೆ ಬಾಂದವ್ಯವನ್ನು ವೃದ್ಧಿಸುವ ಉದ್ದೇಶವು ಇದರಲ್ಲಿ ಅಡಕಗೊಂಡಿತ್ತು. ಈ ಪರಿಷತ್ತಿನ ಅಂಗ ಸಂಸ್ಥೆಗಳು ರಾಜ್ಯಮಟ್ಟದಿಂದ ಹಿಡಿದು ಜಿಲ್ಲೆ ಮತ್ತು ತಾಲ್ಲೂಕು ಮಟ್ಟಗಳವರೆಗೂ ವ್ಯಾಪಿಸಿದ್ದು ಸರ್ಕಾರ ಮತ್ತು ಸಾರ್ವಜನಿಕರ ನಡುವೆ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಿದ್ದವು. ಈ ಪರಿಷತ್ತಿನ ವಾರ್ಷಿಕ ಸಭೆ ಅಂದರೆ ಸರ್ವಸದಸ್ಯರ ಸಭೆ ಮೈಸೂರಿನಲ್ಲಿ ಮಹಾರಾಜರ ಹುಟ್ಟುಹಬ್ಬದ ದಿನ ಸೇರುತ್ತಿದ್ದು ವ್ಯವಸಾಯ, ಕೈಗಾರಿಕೆ, ವಾಣಿಜ್ಯ, ಹಣಕಾಸು, ಶಿಕ್ಷಣ, ಆರೋಗ್ಯ ಇವೇ ಮೊದಲಾದ ವಿವಿಧ ವಿಷಯಗಳ ಬಗ್ಗೆ ಅಧಿಕಾರಿಗಳು ಮತ್ತು ತಜ್ಞರು, ಸಭೆಯಲ್ಲಿ ಪಾಲ್ಗೊಳ್ಳುತ್ತಿದ್ದ ಸದಸ್ಯರು ಹಾಗೂ ಸಾಮಾನ್ಯ ಜನರಿಗೆ ಉಪನ್ಯಾಸಗಳನ್ನು, ಪ್ರತ್ಯಕ್ಷ ಪ್ರದರ್ಶನಗಳನ್ನು ನೀಡುವ ಮೂಲಕ ಹೊಸ ಹೊಸ ಆಧುನಿಕ ಮಾಹಿತಿಗಳನ್ನು ನೀಡುವ ಪ್ರಧಾನ ಪೋಷಕರ ಪಾತ್ರ ನಿರ್ವಹಿಸುತ್ತಿದ್ದರು. ಹಾಗೆಯೇ ಚರ್ಚೆ ಮತ್ತು ಸಂವಾದಗಳಿಗೂ ಎಡೆ ಮಾಡಿಕೊಟ್ಟು ಆ ಮೂಲಕ ಜನರು ಈ ಸಭೆಗಳಲ್ಲಿ ತಮ್ಮ ಕುಂದುಕೊರತೆಗಳನ್ನು ನಿವಾರಿಸಿಕೊಳ್ಳಲು, ಸಕ್ರಿಯವಾಗಿ ಭಾಗವಹಿಸಲು ಅವಕಾಶ ಮಾಡಿಕೊಡಲಾಗುತ್ತಿತ್ತು. ಇದರಿಂದ ಅಧಿಕಾರಗಳ ಬಗ್ಗೆ ಜನರಿಗಿದ್ದ ಅಳುಕು ಕಡಿಮೆಯಾಗುತ್ತಾ ಬಂದಿತು. ತಾಲ್ಲೂಕು, ಹೋಬಳಿ ಹಾಗೂ ಗ್ರಾಮಗಳ ಮಟ್ಟಗಳಲ್ಲೂ ಇಂತಹ ಸಮ್ಮೇಳನಗಳನ್ನು ನಡೆಸಲಾಗುತ್ತಿತ್ತು[199]. ಇದರಿಂದ ಜನರು ತಮ್ಮ ಕುಂದುಕೊರತೆಗಳನ್ನು ಸಾರ್ವಜನಿಕವಾಗಿ ಅಧಿಕಾರಿಗಳೊಂದಿಗೆ ಚರ್ಚಿಸಿ ಪರಿಹಾರ ಕಂಡುಕೊಳ್ಳುವ ಅವಕಾಶ ಲಭ್ಯವಾದಂತಾಯಿತು. ಈ ಸಮ್ಮೇಳನಗಳಲ್ಲಿ ಸರ್ಕಾರ, ಸ್ಥಳೀಯ ಸಂಸ್ಥೆಗಳು ಮತ್ತು ಸಾರ್ವಜನಿಕರು

---

*198. ವಿಶ್ವೇಶ್ವರಯ್ಯ ಎಂ., ಸ್ಪೀಚಸ್ ಬೈ ಸರ್ ಎಂ. ವಿಶ್ವೇಶ್ವರಯ್ಯ (ದಿವಾನ್ ಆಫ್ ಮೈಸೂರ್ 1910-17) ಸಂಪುಟ - I, ಬೆಂಗಳೂರು, 1917, ಪು. 147*

*199. ದಿ ಮೈಸೂರ್ ವಿಲೇಜ್ ಇಂಪ್ರೂವ್ ಮ್ಯಾನ್ಯುಯಲ್ 1917, ಪು. 27*

ಕೂಡಿ ಕೆಲಸ ಮಾಡಬೇಕಾಗಿದ್ದರಿಂದ ಇವು ಅಪೂರ್ವ ಸಮಾವೇಶಗಳಂತಿರುತ್ತಿದ್ದವು. ಹಾಲಿ ಇದ್ದ ಸ್ಥಳೀಯ ಸಂಸ್ಥೆಗಳು ಅಥವಾ ಪುರಸಭೆಗಳಂತೆ ಇದು ಕೇವಲ ತೆರಿಗೆ ಸಂಗ್ರಹಿಸುವ ಮತ್ತು ನಾಗರಿಕ ಸೌಲಭ್ಯಗಳ ಉಸ್ತುವಾರಿ ನೋಡುವ ಸಂಸ್ಥೆಯಾಗಿರದೆ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವ ಮತ್ತು ಜನಪರ ಕಾರ್ಯಕ್ರಮಗಳನ್ನು ಪ್ರಚುರಪಡಿಸುವ ಸಂಸ್ಥೆಯಾಗಿದ್ದುದ್ದು ಈ ಪರಿಷತ್ತಿನ ವೈಶಿಷ್ಟ್ಯವಾಗಿತ್ತು. ಯುವ ವಿದ್ಯಾವಂತರು, ವಕೀಲರು ಮೊದಲಾದವರು ಈ ಸಂಸ್ಥೆಯ ಅಂಗಗಳಲ್ಲಿ ಸೇರಿಕೊಂಡಿದ್ದು ಹೊಸ ವಿಚಾರಗಳ ಚರ್ಚೆ ಮತ್ತು ತಿಳುವಳಿಕೆಗಳ ಮೂಲಕ ಕಾಲ ಮತ್ತು ಸನ್ನಿವೇಶಗಳಿಗೆ ತಕ್ಕಂತೆ ತಮ್ಮನ್ನು ಪರಿಷ್ಕರಿಸಿಕೊಳ್ಳಲು ಈ ಪರಿಷತ್ತು ಪೂರಕವಾಯಿತು. ಅಧಿಕಾರಿಗಳು ಮತ್ತು ಜನರು ಒಟ್ಟೊಟ್ಟಿಗೆ ಸಮ್ಮೇಳನ ಮತ್ತು ಪ್ರದರ್ಶನಾ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದುರಿಂದ ಜನರಿಗೆ ಮೊದಲಬಾರಿಗೆ ಸರ್ಕಾರ ತಮಗಾಗಿ ಇದೆ ಮತ್ತು ಅಧಿಕಾರಿಗಳು ಕೇವಲ ಆಳುವವರಾಗದೆ ತಮ್ಮ ಕುಂದುಕೊರತೆಗಳನ್ನು ಪರಿಹರಿಸಲು ಹಿತ ಚಿಂತಕರಾಗಿದ್ದಾರೆ ಎಂಬ ಆತ್ಮೀಯ ಭಾವನೆ ಬೆಳೆಯತೊಡಗಿತು. ಅದೇ ರೀತಿಯಲ್ಲಿ ಅಧಿಕಾರಿಗಳಲ್ಲೂ ಅಧಿಕಾರ ಚಲಾವಣೆ ಮಾತ್ರ ತಮ್ಮ ಕರ್ತವ್ಯವಲ್ಲ ಜನರ ಜೀವನ ಸ್ಥಿತಿಯನ್ನು ಉತ್ತಮ ಪಡಿಸುವಲ್ಲಿಯೂ ತಮ್ಮ ಪಾತ್ರ ಬಹಳ ಪವಿತ್ರವಾದುದು ಎಂಬ ಅರಿವನ್ನು ಮೂಡಿಸಿತು. ಇಂತಹ ಮಾನಸಿಕ ಪರಿವರ್ತನೆಗಿಂತ ಉತ್ತಮ ಉದಾಹರಣೆ ಬೇಕೇ? ಇದು ವಸಾಹತು ಪ್ರಭುತ್ವದಡಿಯ ಮೈಸೂರು ಸಂಸ್ಥಾನದಲ್ಲಿ ನಾಲ್ವಡಿಯವರ ನೇತೃತ್ವದ ರಾಜಪ್ರಭುತ್ವದೊಳಗೆ ಪ್ರಜಾತಂತ್ರ ವ್ಯವಸ್ಥೆ ರೂಪುಗೊಂಡ ಮಾದರಿಗೆ ಸಾಕ್ಷಿಯಾಗಿದ್ದು ಯೂರೋಪಿನ ವಿಚಾರಶೀಲ ಯುಗದ ಸ್ವಾತಂತ್ರ್ಯ, ಸಮಾನತೆ ಭ್ರಾತೃತ್ವದ ಭಾವನೆಯ ಅಂಶಗಳಿಗೆ ಎಡೆ ಮಾಡಿಕೊಟ್ಟ ಇಂತಹ ಅನೇಕ ಕುರುಹುಗಳನ್ನು ಈ ಹಾದಿಯಲ್ಲಿ ಗುರುತಿಸಬಹುದಾಗಿದೆ.

ಮೂರನೆಯದಾಗಿ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಹಿಡಿದು ಸಾಮಾಜಿಕ ಜಾಗೃತಿಯನ್ನು ಜನರಲ್ಲಿ ಮೂಡಿಸುವಲ್ಲಿ ಈ ಆರ್ಥಿಕ ಪರಿಷತ್ತು ನಿರ್ವಹಿಸಿರುವ ಪ್ರಧಾನ ಪಾತ್ರವನ್ನು ಗುರುತಿಸುವುದು. ಸಾಮಾಜಿಕ ಅನಿಷ್ಟಗಳನ್ನು ತೊಡೆಯಲು ಮತ್ತು ಹೊಸ ಶಿಕ್ಷಣದ ಮೂಲಕ ಸಾಮಾಜಿಕ ಜಾಗೃತಿಯನ್ನುಂಟುಮಾಡುವ ಹಿನ್ನೆಲೆಯಲ್ಲಿ ಆರ್ಥಿಕ ಪರಿಷತ್ತು ಪ್ರಮುಖ ಪಾತ್ರವಹಿಸಿದೆ. 1911 ರಿಂದ 1918 ರ ವರೆಗೂ ಮಲೆನಾಡಿನ ಒಕ್ಕಲಿಗ ಸಮುದಾಯ ತನ್ನ ಕುಂದುಕೊರತೆಗಳ ನಿವಾರಣೆಗಾಗಿ ಒಂದು ಆಂದೋಲನವನ್ನು ನಡೆಸಿತು. ತೀರ್ಥಹಳ್ಳಿ ಮತ್ತು ಮೂಡಿಗೆರೆಗಳು ಈ ಕಾರ್ಯಚಟುವಟಿಕೆಗಳ ಕೇಂದ್ರವಾಗಿದ್ದುಕೊಂಡು ಅಲ್ಲಿ ಕೆಲವು ಸುಧಾರಣಾ ಚಟುವಟಿಕೆಗಳು ನಡೆದವು[200]. 1914 ರಲ್ಲಿ ಮೂಡಿಗೆರೆ ಕೇಂದ್ರದಲ್ಲಿ ಈ ಚಳುವಳಿ ಪ್ರಾರಂಭವಾಯಿತು. ಗ್ರಾಮಗಳ ಮುಖಂಡರು ಹಾಗೂ ಸುತ್ತಮುತ್ತಲಿನ

---

*200. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು. 82*

ಗ್ರಾಮಸ್ಥರು ಸಭೆ ಸೇರಿ ತಮ್ಮ ಜನಾಂಗದ ಮಕ್ಕಳ ವಿದ್ಯಾಭ್ಯಾಸದತ್ತ ಗಮಹರಿಸಲು, ಮದ್ಯಪಾನವನ್ನು ತ್ಯಜಿಸಲು, ವಿವಾಹ ಸಮಾರಂಭಗಳನ್ನು ಸರಳಗೊಳಿಸಲು, ಕನ್ಯಾಶುಲ್ಕವನ್ನು ಮಿತಗೊಳಿಸಲು, ಹೆಣ್ಣುಮಕ್ಕಳಲ್ಲಿ ಬಾಲ್ಯವಿವಾಹ ಪದ್ಧತಿಯನ್ನು ಕೈ ಬಿಡಲು ಜನರಿಗೆ ಕರೆ ನೀಡಿದರು. ಈ ಕಾರ್ಯಕ್ರಮಗಳಿಗೆ ಸರ್ಕಾರಿ ಅಧಿಕಾರಿಗಳನ್ನು ಮತ್ತು ಆರ್ಥಿಕ ಪರಿಷತ್ತಿನ ಉಪನ್ಯಾಸಕರನ್ನು ಕರೆಸಿ ಜನರಿಗೆ ಬೋಧಿಸುವ ವ್ಯವಸ್ಥೆ ಮಾಡಲಾಯಿತು. ಜಿಲ್ಲೆಯಿಂದ ಹಿಡಿದು ತಾಲ್ಲೂಕು ಮಟ್ಟದವರೆಗೂ ಸಮ್ಮೇಳನಗಳನ್ನು ನಡೆಸಿ ಉಪನ್ಯಾಸಗಳನ್ನು ನಡೆಸಲಾಯಿತು. ಅಂದಿನ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದ ಮತ್ತು ಈ ಸುಧಾರಣೆಯ ನೇತೃತ್ವ ವಹಿಸಿದ್ದ ನಂದೀಪುರದ ಕಲ್ಲೇಗೌಡರು ಅಂದಿನ ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರಿಗೆ ಬರೆದುಕೊಂಡಿರುವ ವಿಜ್ಞಾಪನಾ ಪತ್ರವನ್ನು ಇಲ್ಲಿ ನಿರೂಪಿಸುತ್ತಾ ಸಮಾಜದ ಜನತೆಯನ್ನು ತಿದ್ದುವಲ್ಲಿ, ಪರಿವರ್ತನೆಗೊಳಿಸುವಲ್ಲಿ ಆರ್ಥಿಕ ಪರಿಷತ್ತು ವಹಿಸಿದ್ದ ಪ್ರಧಾನ ಪಾತ್ರವನ್ನು ಈ ಪತ್ರದ ಒಕ್ಕಣಿಯ ಮೂಲಕ ಸ್ಪಷ್ಟೀಕರಿಸಬಹುದು. "ನಮ್ಮ ಒಕ್ಕಲಿಗ ಜನಾಂಗವನ್ನು ಏಳಿಗೆಗೆ ತರಬೇಕೆಂಬ ಸದುದ್ದೇಶದಿಂದ ನಮ್ಮ ಮಲೆನಾಡಿನ ಅಭಿವೃದ್ಧಿಗಾಗಿ 'ಸಂಪದಭಿವೃದ್ಧಿ ಸಮಾಜ' 'ಮಲೆನಾಡು ಇಂಪ್ರೂಮೆಂಟ್ ಸಂಘ'ವೆಂಬ ಮುಖ್ಯವಾದ ಎರಡು ಏರ್ಪಾಡುಗಳಲ್ಲಿ ಎಕನಾಮಿಕ್ ಕಾನ್ಫ್‌ರೆನ್ಸ್ ಎಂಬ ಸಂಘದ ಏರ್ಪಾಡು ಪ್ರಾಮುಖ್ಯವಾದುದೆಂದೂ ಅದರಲ್ಲೂ ಲೆಕ್ಚರ್‌ಗಳ ಏರ್ಪಾಡು ಸರ್ವಶ್ಲಾಘ್ಯವಾದುದೆಂದು ಮಹಾಸನ್ನಿಧಾನದಲ್ಲಿ ಅರಿಕೆಮಾಡಿಕೊಳ್ಳಲು ಬಹಳ ಸಂತೋಷವುಳ್ಳವನೂ ಅದಕ್ಕಾಗಿ ಕೃತಜ್ಞತೆಯುಳ್ಳವನೂ ಆಗಿರುತ್ತೇನೆ...... ಈ ವಕ್ಕಲಿಗ ಜನಾಂಗದಲ್ಲಿರುವ ದೋಷಗಳನ್ನೆಲ್ಲಾ ಸಾಮೋಪಾಯದಿಂದ ತಿದ್ದಿ ಆ ಜನಾಂಗವನ್ನು ಉಜ್ಜೀವಿಸುವಂತೆ ಮಾಡಬೇಕೆಂಬ ಸದುದ್ದೇಶದಿಂದ ಒಂದು ಸಂಘವನ್ನು 1915 ನೇ ಏಪ್ರಿಲ್ 4 ರಲ್ಲಿ ಪ್ರಾರಂಭಿಸಿ ಮಹಾಜನ ಸಮ್ಮತಿಯಂತೆ ಪ್ರತಿ ಗ್ರಾಮದಲ್ಲೂ ಮೀಟಿಂಗ್ ನಡೆಸಬೇಕೆಂದು ಅಪೇಕ್ಷಿಸಿದ ಮಹಾಜನಗಳ ಕೋರಿಕೆಯಂತೆ ಆಯಾ ಡಿಸ್ಟ್ರಿಕ್ಟು ಲೆಕ್ಚರರ ಮೂಲಕ ಪ್ರತಿಗ್ರಾಮದಲ್ಲೂ ಬೋಧಿಸುವಂತೆ ಏರ್ಪಡಿಸುತ್ತಾ ಬಂದುದರಿಂದಲೂ ಅವರ ಮುಂದಿರಿಸಿಕೊಂಡು ಈ ಎರಡು ವರ್ಷಗಳಲ್ಲಿ 22 ಮೀಟಿಂಗುಗಳನ್ನು ನಡೆಸಿ ಈ ಎರಡು ಡಿಸ್ಟ್ರಿಕ್ಟಿನಿಂದ ಸುಮಾರು ಒಂದೂವರೆ ಲಕ್ಷಕ್ಕೂ ಮೀರಿದ ನಮ್ಮ ಜನಾಂಗವು ನಮ್ಮ ಸಂಘೋದ್ದೇಶವನ್ನು ಅಂಗೀಕರಿಸಿ ಪ್ರಚಾರ ಪಡಿಸುತ್ತಿರುವುದನ್ನು ಈ ಮಹಾಸನ್ನಿಧಾನದಲ್ಲಿ ವಿಜ್ಞಾಪಿಸಿಕೊಳ್ಳಲು ಬಹಳ ಸಂತೋಷವುಳ್ಳವನಾಗಿರುವೆನು"[201]. ಹೀಗೆ ಆರ್ಥಿಕ ಪರಿಷತ್ತು ಸಮಾಜಕ್ಕೆ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಮೌಲ್ಯವುಳ್ಳ ಸಂಸ್ಥೆಯಾಗಿ ಪರಿಣಮಿಸಿ ಬಹುಶಃ ಅದರ ಕೊಡುಗೆಯಾಗಿ ಮುಂದಿನ ತಲೆಮಾರಿನಲ್ಲಿ ಮಲೆನಾಡಿನ ಪ್ರಾಂತ್ಯದಿಂದ ಶಾಂತವೇರಿ ಗೋಪಾಲಗೌಡರು, ಕುವೆಂಪುರವರಂತಹ ಅನೇಕ ಕ್ರಿಯಾಶೀಲ

---

*201. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು. 88-89*

ಅಲ್ಪಸಂಖ್ಯಾತರು ನಾಯಕರಾಗಿ ಬೆಳೆದು ಈ ಮೈಸೂರು ರಾಜ್ಯದಲ್ಲಿ ಗುರುತಿಸಿಕೊಳ್ಳುವಂತಾಗುವಲ್ಲಿ ಈ ಆರ್ಥಿಕ ಪರಿಷತ್ತು ಪ್ರಧಾನ ಪಾತ್ರವನ್ನು ನಿರ್ವಹಿಸಿದೆ ಎಂಬುದಾಗಿ ಹೇಳಬಹುದಾಗಿದೆ.

ನಾಲ್ಕನೆಯಾದಾಗಿ ಆರ್ಥಿಕ ಪರಿಷತ್ತಿನ ವಿವಿಧ ಸಮಿತಿಗಳಲ್ಲಿದ್ದುಕೊಂಡು ತಮ್ಮ ಸೇವೆಯ ಮೂಲಕ ಆಗಿನ ಮೈಸೂರು ಸಂಸ್ಥಾನದ ಬೆಳವಣಿಗೆಯಲ್ಲಿ ನಾಲ್ವಡಿಯವರೊಡನೆ ಸಹಕರಿಸಿದ ಮಹಾ ಮೇಧಾವಿಗಳಾದ ದಿವಾನ್ ಸರ್.ಎಂ. ವಿಶ್ವೇಶ್ವರಯ್ಯ, ಸಿ. ಆರ್. ರೆಡ್ಡಿ, ಕೆ.ವಿ.ಪುಟ್ಟಣ್ಣಚೆಟ್ಟಿ, ಎಚ್.ವಿ.ನಂಜುಂಡಯ್ಯ, ಎಂ. ವೆಂಕಟಕೃಷ್ಣಯ್ಯ, ಎಂ. ಶಾಮರಾವ್ ಮೊದಲಾದವರ ಸೇವೆಯನ್ನು ಶ್ಲಾಘಿಸುವುದು ಹಾಗೂ ಅವರು ಈ ಮಟ್ಟದಲ್ಲಿ ಗುರುತಿಸಿಕೊಳ್ಳುವುದಕ್ಕೆ ಮತ್ತು ಅವರುಗಳು ಕ್ರಿಯಾಶೀಲ ಅಲ್ಪಸಂಖ್ಯಾತರ ಗುಂಪಿಗೆ ಅವರು ಸೇರುವಂತೆ ಮಾಡುವಲ್ಲಿ ಸಹಕಾರಿಯಾದ ಆರ್ಥಿಕ ಪರಿಷತ್ತಿನ ಪಾತ್ರವನ್ನು ಇಲ್ಲಿ ಹೀಗೆ ಗುರುತಿಸಬಹುದಾಗಿದೆ.

ಐದನೆಯದಾಗಿ ಆಧುನಿಕ ವಿಚಾರಗಳು, ವೈಜ್ಞಾನಿಕ ಮತ್ತು ತಾಂತ್ರಿಕ ಆವಿಷ್ಕಾರಗಳು, ಆರ್ಥಿಕ ಚಿಂತನೆಗಳನ್ನು ಜನರಿಗೆ ಪ್ರಚುರಿಸುವಲ್ಲಿ ಪ್ರಧಾನ ಪಾತ್ರ ವಹಿಸಿದ ಪತ್ರಿಕೆಗಳ ಮಹತ್ವವನ್ನು ನಿರೂಪಿಸುವುದು. 'ಮೈಸೂರು ಎಕನಾಮಿಕ್ ಜರ್ನಲ್' ಎಂಬ ಇಂಗ್ಲಿಷ್ ನಿಯತಕಾಲಿಕ ಪತ್ರಿಕೆ ಮತ್ತು 'ಅರ್ಥ ಸಾಧಕ ಪತ್ರಿಕೆ' ಎಂಬ ಕನ್ನಡ ನಿಯತಕಾಲಿಕ ಪತ್ರಿಕೆಗಳು ಅಂದಿನ ಜನರಲ್ಲಿ ಜಾಗೃತಿಯನ್ನುಂಟು ಮಾಡುವಲ್ಲಿ ಬಹು ಪ್ರಮುಖವಾದವುಗಳಾಗಿದ್ದವು. ಹಾಗೆಯೇ ಈ ಸಂಸ್ಥೆಯ ಮೂಲಕ ರೂಪುಗೊಂಡು ಜಾರಿಗೆ ಬಂದ ಪ್ರಮುಖ ಯೋಜನೆಗಳೆಂದರೆ, ಮೈಸೂರು ಬ್ಯಾಂಕ್ ಸ್ಥಾಪನೆ, ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿ, ಗ್ರಾಮೀಣಾಭಿವೃದ್ಧಿ ಯೋಜನೆ, ಮಲೆನಾಡು ಅಭಿವೃದ್ಧಿಯೋಜನೆ, ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪನೆ, ವಯಸ್ಕರ ಶಿಕ್ಷಣ ಜಾರಿ, ಕನ್ನಡ ಸಾಹಿತ್ಯ ಪರಿಷತ್ತು ಮುಂತಾದವು. ಇವುಗಳು ಪರಿಷತ್ತಿನ ಕಾರ್ಯಕ್ರಮಗಳ ಬಗ್ಗೆ ಜನರಿಗೆ ತಿಳಿವಳಿಕೆ ನೀಡುತ್ತಿದ್ದವು ಹಾಗೂ ಈ ಸಂಸ್ಥೆಯ ಮೂಲಕವೇ ಜಿಲ್ಲೆ ಮತ್ತು ತಾಲ್ಲೋಕು ಮಟ್ಟದಲ್ಲಿ ರಚಿತವಾಗಿದ್ದ ಸಮಿತಿಗಳು ಆಯಾ ಪ್ರದೇಶದ ಆರ್ಥಿಕ ಸಮಸ್ಯೆಗಳನ್ನು ಅಭ್ಯಸಿಸಿ ಸರ್ಕಾರದ ಗಮನಕ್ಕೆ ತರುವಲ್ಲಿ ಪ್ರಧಾನ ಪಾತ್ರವನ್ನು ವಹಿಸಿದವು. ಅಲ್ಲದೇ ಪರಿಷತ್ತಿನ ಸಾಧನೆಗಳನ್ನು ಕುರಿತು ಬ್ರಿಟಿಷ್ ಭಾರತದ ಪತ್ರಿಕೆಗಳು ಹೆಚ್ಚಾಗಿ ಆರ್ಥಿಕ ಪರಿಷತ್ತಿನ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದವು[202] ಎಂಬುದು ಮೈಸೂರು ಸಂಸ್ಥಾನದ ಸಂಪ್ರದಾಯಬದ್ಧ ಸಮಾಜದ ಆರ್ಥಿಕತೆಯಲ್ಲಿ ಆಧುನಿಕತೆಯ ಅಂಶಗಳು ಒಳನುಸುಳುತ್ತಾ ಪರಿವರ್ತನೆಯ ಹಾದಿಯತ್ತ ಚಲಿಸಲು ಈ ಆರ್ಥಿಕ ಪರಿಷತ್ತು ಹೇಗೆ ಸಹಾಯಕವಾಗಿತ್ತು ಎಂಬುದನ್ನು ಸ್ಪಷ್ಟಗೊಳಿಸುತ್ತದೆ.

---

202. *ವೀರತ್ತಪ್ಪ ಕೆ. (ಸಂ)*, *ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್, ಸಂಪುಟ - 1, ಕರ್ನಾಟಕ ಹಿಸ್ಟರಿ ಕಾಂಗ್ರೆಸ್‌ನ ಸಂಚಿಕೆ, 1985, ಪು. 129*

*- 'ದ ಮದ್ರಾಸ್ ಮೈಲ್' ದಿನಪತ್ರಿಕೆ, ದಿನಾಂಕ : 5-1-1915, ಪ್ಯಾಲೆಸ್ ಪ್ರೆಸ್ ಕಟಿಂಗ್ಸ್ 2 (ಬಿ), ಕರ್ನಾಟಕ ರಾಜ್ಯ ಪ್ರಾಂತೀಯ ಪತ್ರಾಗಾರ ಇಲಾಖೆ, ಮೈಸೂರು*

ಕೊನೆಯದಾಗಿ ನಾಲ್ವಡಿ ಕೃಷ್ಣರಾಜ ಒಡೆಯರು ಆಧುನಿಕ ಮೈಸೂರಿನ ಸ್ಥಾಪನೆಯ ಕನಸನ್ನು ಹೊತ್ತವರಾಗಿದ್ದರು ಹಾಗೂ ಅವರ ಗುರಿ ಸಾಧನೆಯಲ್ಲಿ ಈ ಆರ್ಥಿಕ ಪರಿಷತ್ತು ಪ್ರಮುಖ ಪಾತ್ರವನ್ನು ವಹಿಸಿತು. ಜನಮಾನಸದಲ್ಲಿ ಅದು 'ಸಂಪದಭ್ಯುದಯ ಸಂಘ'ವೆಂದು ಕರೆಯಲ್ಪಟ್ಟಿತ್ತು. ಭಾರತಕ್ಕೆ ಹೊಸದಾಗಿ ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿ ರೂಪುಗೊಂಡಿದ್ದ ಇಂತಹ ಸಮಿತಿಗಳೆಂಬ ತಜ್ಞರ ಸಲಹಾ ಮಂಡಳಿಯ ಅನುಭವ ಸೆಲೆಯಿಂದ ಯೋಜನಾಬದ್ಧ ಅಭಿವೃದ್ಧಿ ಯೋಜನೆಗಳನ್ನು ಕೈಗೊಳ್ಳುವ ಮೂಲಕ ನಾಲ್ವಡಿಯವರು ಮೈಸೂರಿನ ಸಂಪ್ರದಾಯಬದ್ಧ ಸಮಾಜದಲ್ಲಿ ಆಧುನಿಕತೆಯನ್ನು ಸ್ಥಾಪಿಸಲು ಮುಂದಾದರು. ಇಂತಹ ಆಧುನಿಕ ಅಂಶಗಳನ್ನು ಮುಂದೆ ನಾಲ್ವಡಿಯವರು ಕೃಷಿ ಕ್ಷೇತ್ರದಲ್ಲಿಯೂ ಅಳವಡಿಸುವಂತಹ ಕಾರ್ಯಯೋಜನೆಗಳನ್ನು ರೂಪಿಸುತ್ತಾ, ಜನರನ್ನು ಪ್ರೋತ್ಸಾಹಿಸಿ ಹುರಿದುಂಬಿಸುತ್ತಾ ಮೈಸೂರನ್ನು ಮಾದರಿಯತ್ತ ಕೊಂಡೊಯ್ಯಲು ಹೇಗೆ ಪ್ರಯತ್ನಿಸಿದರು ಎಂಬುದನ್ನು ಕೃಷಿಯಲ್ಲಿ ಆಧುನಿಕತೆ ಎಂಬ ಮತ್ತೊಂದು ಪರಿಕಲ್ಪನೆಯಲ್ಲಿ ನೀಡಿರುವ ವಿವರಣೆಗಳಿಂದ ತಿಳಿಯಬಹುದಾಗಿದೆ.

### *ii) ಕೃಷಿಯಲ್ಲಿ ಆಧುನಿಕತೆ.*

ಪ್ರಾಚೀನ ಕಾಲದಿಂದಲೂ ಭಾರತ ಮತ್ತು ಅದರ ಪ್ರಾದೇಶಿಕ ಭಾಗವಾದ ಮೈಸೂರು ಪ್ರದೇಶವು ಕೃಷಿ ಪ್ರಾಧಾನ್ಯತೆಗೆ ಹೆಸರಾಗಿವೆ. ಪ್ರಾಚೀನ ಕಾಲದಿಂದ ಈ ಭಾಗದ ಜನತೆಗೆ ಕೃಷಿಯ ಬಗ್ಗೆ ಅರಿವು ಇದ್ದುದಲ್ಲದೆ ಪ್ರಧಾನ ಉದ್ಯೋಗ ಕ್ಷೇತ್ರವೂ ಆಗಿತ್ತು. "ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಲೇಸು" ಎಂಬ ಸರ್ವಜ್ಞರ ಮಾತುಗಳೇ ಈ ಪ್ರದೇಶದ ಜನರು ಕೃಷಿಗೆ ನೀಡಿದ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ. ಪ್ರಾಚೀನ ಕಾಲದ ಶಾಸನಗಳು, ಸಾಹಿತ್ಯ ಕೃತಿಗಳು, ವಿದೇಶಿ ಪ್ರವಾಸಿಗರ ಬರಹಗಳಿಂದಿಡಿದು 19ನೇ ಶತಮಾನದವರೆಗಿನ ಫ್ರಾನ್ಸಿಸ್ ಬುಕನನ್ ವರದಿಯವರೆಗಿನ ಆಧಾರಗಳು ಈ ಪ್ರದೇಶದಲ್ಲಿ ಕೃಷಿಯು ವಿಸ್ತೃತವಾಗಿ ಬೆಳೆದುದನ್ನು ತಿಳಿಸುತ್ತವೆ. ಆದರೆ ಇಲ್ಲಿನ ಸಾಂಪ್ರದಾಯಿಕ ವ್ಯವಸ್ಥೆ ಮತ್ತು ಹೊರ ದೇಶಗಳೊಂದಿಗಿನ ಸಂಪರ್ಕ ವಂಚನೆಯಿಂದಾಗಿ ಕೆಲಕಾಲ ಕೃಷಿ ಕ್ಷೇತ್ರದಲ್ಲಿ ನವೀನ ರೀತಿಯ ವಿಧಾನಗಳನ್ನು ಅಳವಡಿಸಿಕೊಳ್ಳಲಾಗದೆ ಈ ಕ್ಷೇತ್ರವು ಹಿಂದುಳಿದಿತ್ತು. ಇದರಿಂದ ಸಾಂಪ್ರದಾಯಿಕ ಕೃಷಿ ವಿಧಾನದಲ್ಲಿ ಹೆಚ್ಚಾಗಿ ಮಾರ್ಪಾಡುಗಳಾಗಿರಲಿಲ್ಲ. ಅಂತಹ ಸ್ಥಿತಿಯಲ್ಲಿ 20ನೇ ಶತಮಾನದ ಆರಂಭದಲ್ಲಿ ನಾಲ್ವಡಿಯವರು ಅಧಿಕಾರಕ್ಕೆ ಬಂದರು ಮತ್ತು ರಾಜ್ಯದ ಪ್ರಮುಖ ಆದಾಯದ ಮೂಲ ಮತ್ತು ಉದ್ಯೋಗ ಕ್ಷೇತ್ರವಾಗಿದ್ದ ಕೃಷಿ ಕ್ಷೇತ್ರದಲ್ಲಿ ನವೀನ ಮಾದರಿಯ ಕೃಷಿ ಉಪಕರಣಗಳು, ವೈಜ್ಞಾನಿಕ ಮತ್ತು ತಾಂತ್ರಿಕ ಅಂಶಗಳನ್ನು ಅಳವಡಿಸುವ ಮೂಲಕ ಆಧುನೀಕರಣಗೊಳಿಸಲು ಮುಂದಾದರು. ಈ ಆಧುನಿಕ ಅಂಶಗಳು ಪಾಶ್ಚಿಮಾತ್ಯ ಅಭಿವೃದ್ಧಿಶೀಲ ದೇಶಗಳಲ್ಲಿ

ರೂಪುಗೊಂಡವಾಗಿದ್ದವು. ನಾಲ್ವಡಿಯವರು ಕೃಷಿಯ ಮಹತ್ವವನ್ನು ಕುರಿತು ಬೆಂಗಳೂರಿನಲ್ಲಿ ನಡೆದ ಬೋರ್ಡ್ ಆಫ್ ಅಗ್ರಿಕಲ್ಚರ್ ಇನ್ ಇಂಡಿಯಾದ ಸಮಾವೇಶ ಸಮಾರಂಭದ ಉದ್ಘಾಟನಾ ಭಾಷಣದಲ್ಲಿ ಈ ರೀತಿ ಹೇಳಿದ್ದಾರೆ. "ಭಾರತದ ಏಳ್ಗೆಯಲ್ಲಿ ಕೃಷಿಯ ಮಹತ್ವವನ್ನು ಮತ್ತೆ ಮತ್ತೆ ಒತ್ತಿ ಹೇಳಬೇಕಾಗಿಲ್ಲ. ಈ ಉದ್ಯಮವನ್ನು 3/4 ಭಾಗದ ಜನ ತಮ್ಮ ಜೀವನೋಪಾಯಕ್ಕೆ ಆಶ್ರಯಿಸಿದ್ದಾರೆ. ಅದಕ್ಕಿಂತ ಹೆಚ್ಚಾಗಿ ಇದು ನಮ್ಮ ಇತರ ಕೈಗಾರಿಕೆಗಳ ನಿರ್ಮಾಣದಲ್ಲಿ ಅಸ್ತಿಭಾರದಂತಿದೆ[203] ಎಂಬ ಮಾತುಗಳು ಅಂದಿನ ಜನರ ಜೀವನೋಪಾಯ ಉದ್ಯಮದ ಬಗೆಗಿನ ಸ್ಪಷ್ಟತೆಯನ್ನು ನೀಡುತ್ತದೆ. ಇಂತಹ ಕೃಷಿ ಉದ್ಯಮ ಕ್ಷೇತ್ರದಲ್ಲಿ ನಾಲ್ವಡಿಯವರು ಹಲವಾರು ಯೋಜನೆಗಳನ್ನು ರೂಪಿಸಿ ಪ್ರತ್ಯಕ್ಷದರ್ಶಿ ಪ್ರಯೋಗಗಳ ಮೂಲಕ ಸಾಂಪ್ರದಾಯಿಕತೆಯ ಕೃಷಿಯ ನೆಲೆಯಲ್ಲಿ ಆಧುನಿಕಾಂಶಗಳನ್ನು ಅಳವಡಿಸಿ ಹೇಗೆ ಪರಿವರ್ತನೆಯತ್ತ ಆ ಕ್ಷೇತ್ರವನ್ನು ಕೊಂಡೊಯ್ದರು ಹಾಗೂ ಕೃಷಿಯ ಬಗ್ಗೆ ಜನರಲ್ಲಿ ಅಪಾರ ಒಲವನ್ನು ಮೂಡಿಸಲು ಹೇಗೆ ಪ್ರಯತ್ನಿಸಿದರು ಎಂಬುದನ್ನು ಪರಿಶೀಲಿಸುವ ಪ್ರಯತ್ನವನ್ನು ಮುಂದೆ ಮಾಡಲಾಗಿದೆ.

ಅಂದು ಕೃಷಿ ಆಧರಿತ ಕೈಗಾರಿಕೆಗಳೇ ಹೆಚ್ಚಿದ್ದರಿಂದ ಕೃಷಿ ಅಭಿವೃದ್ಧಿಯೆಂದರೆ ಕೈಗಾರಿಕಾ ಅಭಿವೃದ್ಧಿಗೂ ಚಾಲನೆ ಸಿಕ್ಕಂತಾಗುತ್ತಿತ್ತು. ಹಾಗಾಗೀ ನಾಲ್ವಡಿಯವರು ಕೃಷಿ ಆಧುನಿಕರಣ ಪ್ರಕ್ರಿಯೆಯನ್ನು ಪ್ರಮುಖವಾಗಿ ಕೃಷಿ ಇಲಾಖೆ ಹಾಗೂ ಆರ್ಥಿಕ ಪರಿಷತ್ತಿನ ಕೃಷಿ ಸಮಿತಿ (ಬೋರ್ಡ್ ಆಫ್ ಅಗ್ರಿಕಲ್ಚರ್) ಗಳ ಮೂಲಕ ಕೃಷಿ ಸಲಕರಣೆಗಳಲ್ಲಿ ಸುಧಾರಣೆ, ಆಧುನಿಕ ರಸಗೊಬ್ಬರ ಮತ್ತು ಸುಧಾರಿತ ಬಿತ್ತನೆ ಬೀಜಗಳ ಬಳಕೆಗೆ ಪ್ರೋತ್ಸಾಹ, ಕಬ್ಬು, ಹತ್ತಿ ಮತ್ತು ರೇಷ್ಮೆ ಬೆಳೆಗಳಿಗೆ ಸಂಬಂಧಿಸಿದಂತೆ ನೂತನ ವಿಧಾನದ ಅಳವಡಿಕೆ, ಹಣ್ಣು, ತರಕಾರಿ ಬೆಳೆಗಳಲ್ಲಿ ನವೀನತೆ, ಪಶುಸಂಗೋಪನೆ ಇವೆ ಮೊದಲಾದ ಕೃಷಿ ಸಂಬಂಧಿ ಚಟುವಟಿಕೆಗಳಲ್ಲಿ ಆಧುನಿಕಾಂಶಗಳನ್ನು ಅಳವಡಿಸಿದರಲ್ಲದೆ ಕೃಷಿ ಶಿಕ್ಷಣ ಹಾಗೂ ಪ್ರಚಾರ ಕಾರ್ಯದ ಮೂಲಕ ಜನಜಾಗೃತಿಯನ್ನು, ಆ ಮೂಲಕ ಗ್ರಾಮಾಭಿವೃದ್ಧಿ ಯೋಜನೆಗಳನ್ನು ಯಶಸ್ವಿಯುತವಾಗಿ ಕೈಗೊಳ್ಳುತ್ತಾ ಮೈಸೂರನ್ನು ಮಾದರಿ ಸಂಸ್ಥಾನದತ್ತ ಹೇಗೆ ಕೊಂಡೊಯ್ದರು ಎಂಬುದರ ಬಗೆಗಿನ ವಿವರಣೆಯನ್ನು ಕೆಲವು ಶೀರ್ಷಿಕೆಗಳೊಡನೆ ಈ ಕೆಳಗೆ ನೀಡಲಾಗಿದೆ.

### *ಎ) ಕೃಷಿ ಇಲಾಖೆಯ ಸಂಘಟನೆ ಮತ್ತು ಆಧುನೀಕರಣ*

ಮಹಾರಾಜ ನಾಲ್ವಡಿಯವರು ರಾಜ್ಯದ ಕೈಗಾರಿಕೆಗಳು ಮತ್ತು ಆರ್ಥಿಕ ಮೌಲ್ಯದ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಮಹತ್ವದ ವಿಷಯಗಳ ಬಗ್ಗೆ ಚರ್ಚಿಸಿ ಕೈಗೊಳ್ಳಬೇಕಾದ ಕ್ರಮಗಳನ್ನು ನಿರ್ಧರಿಸಲೆಂದೇ ಸ್ಥಾಪಿಸಿದ ಆರ್ಥಿಕ ಪರಿಷತ್ತಿನ ಕೃಷಿ ಸಮಿತಿಯು ಮೈಸೂರು ರಾಜ್ಯದ ಕೃಷಿ ಅಭಿವೃದ್ಧಿಗೆ ಪ್ರತ್ಯೇಕ ಕೃಷಿ ಇಲಾಖೆಯ ಅವಶ್ಯಕತೆ ಇದೆ ಎಂದು ಸಲಹೆ

---

203. *ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 223*

ನೀಡಿತು. ಆಗ ಸರ್ಕಾರವು ಆ ಸಲಹೆಯನ್ನು ಅಂಗೀಕರಿಸಿ 1912 ರಲ್ಲಿ ಪ್ರತ್ಯೇಕವಾದ ಕೃಷಿ ಇಲಾಖೆಯನ್ನು ರೂಪಿಸಿತು. ಆಗ್ಗೆ ಮೈಸೂರು ರಾಜ್ಯದಲ್ಲಿ 1908ರಿಂದಲೂ ಶಿಲೀಂದ್ರ ತಜ್ಞರಾಗಿ ಕೆಲಸ ಮಾಡುತ್ತಿದ್ದ ಮತ್ತು ಕಾರ್ಯತಃ ವಿಜ್ಞಾನಿಯಾಗಿದ್ದ ಡಾ. ಲೆಸ್ಲಿ ಕೋಲ್‌ಮನ್‌ರನ್ನು 1913ರಲ್ಲಿ ಕೃಷಿ ಇಲಾಖೆಯ ನಿರ್ದೇಶಕರನ್ನಾಗಿ ನೇಮಿಸಲಾಯಿತು[204]. ಆ ಮೂಲಕ ಕೃಷಿ ಇಲಾಖೆ ವೈಜ್ಞಾನಿಕ ತಜ್ಞರ ಹಿನ್ನೆಲೆಯಲ್ಲಿ ಮುನ್ನಡೆಯಿತು. ಇಡೀ ರಾಜ್ಯದ ಸಮಗ್ರ ಕೃಷಿ ಅಭಿವೃದ್ಧಿಯ ಬಗ್ಗೆ ಒಂದು ವರದಿಯನ್ನು ಕೋಲ್‌ಮನ್ ರೂಪಿಸಿದರು. ಅದರಂತೆ ಕೃಷಿ ಇಲಾಖೆ ಕೃಷಿಗೆ ಸಂಬಂಧಿಸಿದ ಅಂಕಿ ಅಂಶಗಳನ್ನು ಸಂಗ್ರಹಿಸುವುದು ಮತ್ತು ಜನತೆಗೆ ಮಾರ್ಗದರ್ಶನ ನೀಡುವುದು, ಪ್ರಾಯೋಗಿಕ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಮತ್ತು ಕೃಷಿ ಶಿಕ್ಷಣದ ಅಭಿವೃದ್ಧಿಗೆ ಕ್ರಮ ಕೈಗೊಳ್ಳುವಂತಹ ಮುಖ್ಯ ಕಾರ್ಯಗಳನ್ನು ವಹಿಸಿಕೊಂಡಿತು. ಕೃಷಿ ಇಲಾಖೆಯು ಇನ್ನೂ ಕೆಲವು ವಿಶೇಷ ತಜ್ಞರನ್ನು ಹೊಂದುವ ಮೂಲಕ 1914ರಲ್ಲಿ ವಿಸ್ತರಣೆಗೊಂಡಿತು. ಅದರಂತೆ ಕೀಟ ವಿಜ್ಞಾನತಜ್ಞ, ಸಸ್ಯವಿಜ್ಞಾನತಜ್ಞ, ವ್ಯವಸಾಯ ಎಂಜಿನಿಯರ್, ಶಿಲೀಂದ್ರತಜ್ಞ, ರಸಾಯನತಜ್ಞ ಇವರೇ ಮುಂತಾದ ವೈಜ್ಞಾನಿಕ ತಜ್ಞರನ್ನು ನೇಮಿಸಲಾಯಿತು[205]. ಆ ಮೂಲಕ ವೈಜ್ಞಾನಿಕ ವಿಧಾನವನ್ನು ಕಾರ್ಯತಃ ಬಳಸಿಕೊಂಡು ಕೃಷಿ ಅಭಿವೃದ್ಧಿಗೆ ನಾಲ್ವಡಿಯವರು ಮುಂದಾದರು. ಇಲಾಖೆಯು ಕೈಗೊಳ್ಳುವ ಹೊಸ ಯೋಜನೆಗಳು ಮತ್ತು ನವೀನ ವಿಧಾನಗಳನ್ನು ಪ್ರಚಾರ ಮಾಡಲು ಮತ್ತು ಪ್ರಾಯೋಗಿಕ ಪ್ರದರ್ಶನಗಳನ್ನು ಕೈಗೊಳ್ಳಲು ಅಗ್ರಿಕಲ್ಚರಲ್ ಇನ್ಸ್‌ಪೆಕ್ಟರುಗಳನ್ನು ಮತ್ತು ಕ್ಷೇತ್ರ ಮೇಲ್ವಿಚಾರಕರನ್ನು ನೇಮಿಸಿಕೊಳ್ಳಲಾಯಿತು. ನಾಲ್ವಡಿಯವರು ಕೃಷಿ ಬೆಳವಣಿಗೆಗೆ ವಿಜ್ಞಾನವು ಅವಶ್ಯಕವೆಂದು ನಂಬಿದ್ದು ಬೆಂಗಳೂರಿನಲ್ಲಿ ನಡೆದ ಇಂಡಿಯನ್ ಸೈನ್ಸ್ ಕಾಂಗ್ರೆಸ್ಸಿನ ಸಮಾವೇಶದಲ್ಲಿ ಮಾತನಾಡುತ್ತಾ "ಕೃಷಿ ಮತ್ತು ಕೈಗಾರಿಕೆಗಳ ಪೋಷಣೆಗೆ ವಿಜ್ಞಾನವು ಧಾವಿಸಿ ಬಂದು ಇಲ್ಲಿನ ಜನತೆಯನ್ನು ಪೋಷಿಸುತ್ತದೆ"[206] ಎಂದರು. ಅದೇ ವೇಳೆಗೆ ಬೆಂಗಳೂರಿನಲ್ಲಿದ್ದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಸಂಸ್ಥೆಯ ಕಾರ್ಯಗಳು ಜನಮುಖಿಯಾಗಿರಬೇಕೆಂಬುದನ್ನು ಸೂಚಿಸುತ್ತಾ 'ಸಂಸ್ಥೆಯು ವೈಜ್ಞಾನಿಕ ಸಂಶೋಧನೆಗೆ ಸೀಮಿತಗೊಳ್ಳುವುದಕ್ಕಿಂತ ಸಂಶೋಧಿತ ವೈಜ್ಞಾನಿಕ ಆವಿಷ್ಕಾರಗಳನ್ನು ದೇಶದ ಅವಶ್ಯಕತೆಗೆ ಅನುಗುಣವಾಗಿ ಪ್ರಾತ್ಯಕ್ಷಿಕವಾಗಿ ಬಳಸುವುದು ಹೇಗೆ ಎಂಬುದರ ಬಗ್ಗೆ ಚಿಂತಿಸಬೇಕೆಂದು ಸಲಹೆ ನೀಡಿದರು[207]. ಹಾಗೆಯೇ ಕೃಷಿ ಅಭಿವೃದ್ಧಿಗೆ ವಿಜ್ಞಾನಿಗಳು 'ಬೋರ್ಡ್ ಆಫ್ ಅಗ್ರಿಕಲ್ಚರ್ ಇನ್ ಇಂಡಿಯಾ' ಎಂಬ ಸಂಸ್ಥೆ ಬೆಂಗಳೂರಿನಲ್ಲಿ ಸಮಾವೇಶಗೊಂಡಾಗ ವಿಜ್ಞಾನಿಗಳು ಸಂಶೋಧನೆಗಳನ್ನು ಚರ್ಚೆಯ ಹಂತಕ್ಕೆ ನಿಲ್ಲಿಸದೆ ಆ ಸಂಶೋಧಿತ ಜ್ಞಾನವನ್ನು ಕಾರ್ಯತಃ ಕೃಷಿ ಅಭಿವೃದ್ಧಿಗೆ ಹೇಗೆ

---

204. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್ - ಅಗ್ರಿಕಲ್ಚರಲ್ ಡಿಪಾರ್ಟ್‌ಮೆಂಟ್, ಸೀರಿಸ್ - 2, ಪು. 1, ಕರ್ನಾಟಕ ರಾಜ್ಯ ಪ್ರಾಂತೀಯ ಪತ್ರಾಗಾರ ಇಲಾಖೆ, ಮೈಸೂರು.*

205. ***ಹ್ಯಾಂಡ್ ಬುಕ್ ಆಫ್ ಮೈಸೂರ್ ಅಡ್ಮಿನಿಸ್ಟ್ರೇಷನ್**, ಬೆಂಗಳೂರು, 1917, ಪು. 149*

206. ***ಸ್ಪೀಚಸ್ ಬೈ ಹಿಸ್ ಹೈನೆಸ್.**, ಪೂರ್ವೋಕ್ತ, ಪು. 145*

207. ***ಅದೇ.**, ಪು. 146*

ಬಳಸುವುದು ಎಂಬುದನ್ನು ಕುರಿತು ಹೀಗೆ ನುಡಿದಿದ್ದಾರೆ. "ಮುಂದಿನ ಕೆಲವು ದಿನಗಳಲ್ಲಿ ನೀವು ಚರ್ಚಿಸಲಿರುವ ಸಮಸ್ಯೆಗಳು ಬಹಳಷ್ಟಿವೆ ಮತ್ತು ಸಂಕೀರ್ಣವಾಗಿವೆ. ಇಲ್ಲಿನ ಮಣ್ಣು, ಹವಾಗುಣ, ಬೆಳೆಗಳು ಮತ್ತು ಜಾನುವಾರುಗಳು ಜಗತ್ತಿನ ಎಲ್ಲೆಡೆ ಕಂಡು ಬರುವ ವಿಧಗಳಿಗಿಂತ ಹೆಚ್ಚಾಗಿವೆ. ನೀವು ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ಮಾತ್ರ ವಿಚಾರಣೆ ಮಾಡುವಂತಿಲ್ಲ ಜೊತೆಗೆ ಆರ್ಥಿಕ ಪರಿಸ್ಥಿತಿಯ ಬಗೆಗಿನ ನಿಮ್ಮ ತೀರ್ಮಾನಗಳನ್ನು ಅದರಲ್ಲಿಯೂ ಕಡಿಮೆ ವೆಚ್ಚದಾಯಕವಾದ ಕೃಷಿ ಆಚರಣೆಯ ಆವಿಷ್ಕಾರಗಳನ್ನು ಹೊರಹಾಕಬೇಕು. ನೀವು ಪ್ರದರ್ಶನದಂತಹ ಶಿಕ್ಷಣವನ್ನು ವಿಸ್ತೃತ ರೀತಿಯಲ್ಲಿ ಕೈಗೊಳ್ಳಬೇಕು, ಅನೇಕ ವೇಳೆ ಅಭಿವೃದ್ಧಿಗೊಂಡ ಗೊಬ್ಬರಗಳು, ಬೀಜಗಳು, ಜಾನುವಾರು ತಳಿಗಳು ಮತ್ತು ಉಪಕರಣಗಳನ್ನು ದೊಡ್ಡ ಪ್ರಮಾಣದಲ್ಲಿ ಸ್ವತಃ ಸಾಗುವಳಿದಾರರಿಗೆ ಒದಗಿಸುವಂತಾಗಬೇಕು"[208] ಎಂದಿದ್ದಾರೆ. ನಾಲ್ವಡಿಯವರು ಕೇವಲ ಮಾತುಗಳಿಗಷ್ಟೇ ಆ ವಿಚಾರವನ್ನು ಸೀಮಿತಗೊಳಿಸದೆ ಕಾರ್ಯತಃ ಯೋಜನೆಗಳನ್ನು ಸಹ ರೂಪಿಸಿದರು. ಈ ನಿಟ್ಟಿನಲ್ಲಿ ಕೈಗೊಂಡ ಹಲವಾರು ಕ್ರಮಗಳಲ್ಲಿ ಸುಧಾರಿತ ನೇಗಿಲುಗಳ ಬಳಕೆಗೆ ಪ್ರೋತ್ಸಾಹ, ರಾಸಾಯನಿಕ ಗೊಬ್ಬರಗಳು, ಸುಧಾರಿತ ಬಿತ್ತನೆ ಬೀಜಗಳು, ಕಬ್ಬಿನ ಬೆಳೆಯಲ್ಲಿ ಆಧುನೀಕರಣ ನೀತಿ, ಕಾಫಿ ಬೆಳೆಯಲ್ಲಿ ಸುಧಾರಿತ ಕ್ರಮದ ಅಳವಡಿಕೆ, ರೇಷ್ಮೆ ಕೃಷಿಯಲ್ಲಿ ಆಧುನಿಕತೆ, ತೋಟಗಾರಿಕೆ ಮತ್ತು ಪಶುಸಂಗೋಪನೆಗಳಲ್ಲಿ ಸುಧಾರಿತ ಕ್ರಮ, ಇವುಗಳಿಗೆ ಸಂಬಂಧಿಸಿದ ಕೃಷಿ ಶಿಕ್ಷಣ ಮತ್ತು ಪ್ರಚಾರ ಕಾರ್ಯನೀತಿ ಹಾಗೂ ಗ್ರಾಮಾಭಿವೃದ್ಧಿ ಯೋಜನೆ ಇವೆ ಮೊದಲಾದ ಕಾರ್ಯಯೋಜನೆಗಳು ಪ್ರಮುಖವಾದವು. ಇವುಗಳ ಮೂಲಕ ಮೈಸೂರು ಸಂಸ್ಥಾನವನ್ನು ಆಧುನಿಕತೆಯತ್ತ, ಹಾಗೂ ಮಾದರಿಯತ್ತ ಕೊಂಡೊಯ್ಯುವ ಪ್ರಯತ್ನಗಳು ನಡೆದವು. ಅವುಗಳಲ್ಲಿ ಮೊದಲನೆಯದಾಗಿ ಸುಧಾರಿತ ನೇಗಿಲಿನ ಬಳಕೆಗೆ ನೀಡಿದ ಉತ್ತೇಜನವನ್ನು ಈ ಕೆಳಗೆ ವಿವರಿಸಲಾಗಿದೆ.

***ಸುಧಾರಿತ ನೇಗಿಲಿನ ಬಳಕೆ :*** ನಾಲ್ವಡಿಯವರು ಕೃಷಿ ಆಧುನೀಕರಣಗೊಳ್ಳುವುದೆಂದರೆ ಗ್ರಾಮೀಣ ಪುನರ್ ನಿರ್ಮಾಣವೆಂದೇ ನಂಬಿದ್ದವರು. ಈ ಅಂಶವನ್ನು ನಾಲ್ವಡಿಯವರು ಈ ರೀತಿ ಸ್ಪಷ್ಟಪಡಿಸಿದ್ದಾರೆ. "ಕೃಷಿಯ ಬೆಳವಣಿಗೆಯಲ್ಲಿ ಕೈಗೊಳ್ಳಬೇಕಾದ ಮೊದಲ ಮೆಟ್ಟಿಲೆಂದರೆ ಆಯ್ಕೆಯ ಪಾಠವನ್ನು ಕಲಿಯುವುದು. ಯಾವಾಗ ರೈತನು ಬಡಕಲಾದ ಎರಡು ಹಸುಗಳಿಗೆ ಮೇವುಣಿಸುವ ಬದಲು ಉತ್ತಮವಾದ ಒಂದೇ ಹಸುವಿಗೆ ಮೇವುಣಿಸುವುದು ಒಳ್ಳೆಯದು ಎಂದು ಕಲಿಯುತ್ತಾನೋ ಆಗ ಅವನು ತನ್ನ ಬಿತ್ತನೆ ಬೀಜ, ಕೋಳಿಗಳು, ಹಣ್ಣಿನ ಗಿಡಗಳ ಮತ್ತು ಅವನ ಉಪಕರಣಗಳನ್ನು ಆಯ್ಕೆ ಮಾಡಲು ಕಲಿಯುತ್ತಾನೆ ಆಗ ಗ್ರಾಮಿಣ ಪುನರ್ ನಿರ್ಮಾಣ ದ ದಾರಿಯಲ್ಲಿ ಒಂದು ದೊಡ್ಡ ಹೆಜ್ಜೆಯನ್ನಿಟ್ಟಂತಾಗುತ್ತದೆ"[209] ಎಂಬುದಾಗಿ ಮೈಸೂರು ದಸರಾ ವಸ್ತುಪ್ರದರ್ಶನ ಬಹುಮಾನ ವಿತರಣಾ ಸಮಾರಂಭದ

---

*208. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು - 224*

ಸಂದರ್ಭದಲ್ಲಿ ನೆರೆದಿದ್ದ ಅಗಾಧ ಸಂಖ್ಯೆಯ ಜನರನ್ನು ಕುರಿತು ಹೇಳಿದರು. ಆಧುನಿಕ ವಾದವನ್ನು ಒಪ್ಪಿಕೊಂಡು ದೇಶದ ಅಭಿವೃದ್ಧಿಗೆ ಮುಂದಾಗಬೇಕೆಂಬ ಕರೆಯನ್ನು ಈ ಮೂಲಕ ನೀಡಿದರು. ಅಲ್ಲದೆ ಸರ್ಕಾರದ ಮೂಲಕ ಆ ದಿಸೆಯತ್ತ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡರು. ಅವುಗಳಲ್ಲಿ ಸುಧಾರಿತ ನೇಗಿಲುಗಳ ಬಳಕೆಗೆ ನೀಡಿದ ಪ್ರೋತ್ಸಾಹ ಕೂಡ ಒಂದಾಗಿದೆ.

ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಮಾರ್ಪಡಿಸುವಲ್ಲಿ ಉಳುಮೆಯ ಕಾರ್ಯ ಪ್ರಧಾನವಾದದ್ದು. ಉಳುಮೆಗೆ ನೇಗಿಲು ಬಹು ಅವಶ್ಯಕ. ಸಾಂಪ್ರದಾಯಿಕವಾಗಿ ಇದುವರೆವಿಗೂ ಬಳಸುತ್ತಿದ್ದ ನೇಗಿಲನ್ನು ಆಧುನಿಕ ಕಾಲದ ಸನ್ನಿವೇಶಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳುವಂತೆ ರೈತರಿಗೆ ಉತ್ತೇಜನ ನೀಡಲಾಯಿತು. ಕೃಷಿ ಇಲಾಖೆಯ ಮೂಲಕ ಕೃಷಿ ಆಧುನೀಕರಣಕ್ಕೆ ಹೆಚ್ಚು ಆಸ್ಥೆತೋರಿ ಕೃಷಿ ಚಟುವಟಿಕೆಯ ಮುಖ್ಯ ಸಾಧನವಾದ ನೇಗಿಲನ್ನು ಆಧುನೀಕರಣಗೊಳಿಸುವಲ್ಲಿ ಮುಂದಾದರು. ಈ ಕುರಿತು ಮೈಸೂರು ಗೆಸೆಟಿಯರ್ ತಿಳಿಸುವಂತೆ "ಅವು (ನೇಗಿಲುಗಳು)ಸುಲಭ ಯಾಂತ್ರಿಕ ತತ್ವಗಳ ಆಧಾರದ ಮೇಲೆ ನಿರ್ಮಿಸಿದವಾಗಿದ್ದು ಪ್ರಾಥಮಿಕ ಹಂತವಾಗಿದ್ದವು ಮತ್ತು ಅವು ಕೆಲವೇ ಬಯಕೆಗಳನ್ನೊಂದಿದ ಹಾಗೂ ಸುಲಭವಾಗಿ ತೃಪ್ತಿಪಡುತ್ತಿದ್ದ ಪರಿಸ್ಥಿತಿಯ ಸಮಾಜಕ್ಕಾಗಿ ಅಳವಡಿಸಿದವಾಗಿದ್ದವು. ಅವು ಕಡಿಮೆ ಜನಸಂಖ್ಯೆಯನ್ನು ಪೋಷಿಸುತ್ತಿದ್ದ ಕಾಲಕ್ಕೆ ಸರಿಯಾಗಿದ್ದವು. ಈಗ ಕಾಲ ಬಹಳ ಬದಲಾಗಿದೆ. ಹಾಗಾಗಿ ಅವುಗಳಲ್ಲಿ ಹೆಚ್ಚಿನವನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ಅಭಿವೃದ್ಧಿಪಡಿಸಬೇಕಿದೆ ಅಥವಾ ಉತ್ತಮ ವಿಧಗಳಿಗೆ ಬದಲಾಯಿಸಬೇಕಿದೆ"[210] ಎಂಬ ಉಲ್ಲೇಖವು ಅಂದು ಬೆಳೆಯುತ್ತಿದ್ದ ಜನಸಂಖ್ಯೆ, ಸಾಗುವಳಿ ವಿಸ್ತರಣೆಗೆ ತಕ್ಕ ಸಾಮರ್ಥ್ಯದ ನೇಗಿಲುಗಳು ಅಸ್ತಿತ್ವದಲ್ಲಿರಲಿಲ್ಲ ಮತ್ತು ಆಧುನೀಕರಣದ ಅವಶ್ಯಕತೆಯಿತ್ತೆಂಬುದನ್ನು ತೋರಿಸುತ್ತದೆ. ಆಗಿನ ಸಾಂಪ್ರದಾಯಿಕ ನೇಗಿಲಿನ ಭೂಮಿಯನ್ನು ಉಳುವ ಕೆಳಭಾಗವು ಇಂಗ್ಲಿಷ್ ಅಕ್ಷರದ 'V' ಆಕಾರದ ಮರದಿಂದ ರೂಪಿಸಿದ್ದಾಗಿತ್ತು. ಈ ನೇಗಿಲಿನಲ್ಲಿ ಆಳವಾಗಿ ಉಳುಮೆ ಮಾಡಲಾಗುತ್ತಿರಲಿಲ್ಲ ಹಾಗೂ ಭೂಮಿಯ ಮಣ್ಣನ್ನು ಕಲಸುವಂತೆ ಮಾಡಲು ಹಲವು ಬಾರಿ ಉಳುಮೆ ಮಾಡಬೇಕಿತ್ತು. ಅದಕ್ಕಾಗಿ ಸುಧಾರಿತ ಹಲಗೆಯಿಂದ ಕೂಡಿದ ನೇಗಿಲುಗಳನ್ನು (Mould board) ಪರಿಚಯಿಸಲಾಯಿತು. ಇವು ಆಯಾಕಾರದಲ್ಲಿ ಉಳುಮೆ ಮಾಡುತ್ತಿದ್ದರಿಂದ ಒಂದೇ ಉಳುಮೆಯಲ್ಲಿ ಭೂಮಿಯ ಮಣ್ಣು ಕಲಸುತ್ತಿತ್ತು.[211] ಹಾಗಾಗಿ ಹೊಸ ನೇಗಿಲುಗಳು ಶ್ರಮ ಮತ್ತು ವೆಚ್ಚವನ್ನು ತಗ್ಗಿಸಿದವು.

ಈ ಕೃಷಿ ಇಲಾಖೆಯು ಜನರಿಗೆ ಸುಧಾರಿತ ನೇಗಿಲುಗಳ ಬಗ್ಗೆ ಪ್ರಚಾರ ಮಾಡಲು ಅನೇಕ ಪ್ರಾಯೋಗಿಕ

---

*209. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 274*

*210. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 26-27*

*211 ಅದೇ., ಪು. 27*

ಕಾರ್ಯಕ್ರಮಗಳನ್ನು ಕೈಗೊಂಡಿತು. ಡಾ. ಕೋಲ್‌ಮನ್‌ರವರು ಕೃಷಿ ಉಪಕರಣಗಳನ್ನು ಮಾರಾಟ ಮಾಡಲೆಂದು (ಇಂಪ್ಲಿಮೆಂಟ್ ಡಿಪೋ) ಕೃಷಿ ಸಲಕರಣೆ ಮಾರಾಟ ಕೇಂದ್ರಗಳನ್ನು ಸ್ಥಾಪಿಸುವ ಯೋಜನೆಯೊಂದನ್ನು ಸರ್ಕಾರಕ್ಕೆ ಸಲ್ಲಿಸಿದರು. ಈ ಮಾರಾಟ ಕೇಂದ್ರಗಳ ಸ್ಥಾಪನೆಯ ಉದ್ದೇಶ ಸುಧಾರಿತ ಸಲಕರಣೆಗಳನ್ನು ರೈತರಿಗೆ ಪೂರೈಸುವ ಮತ್ತು ಬಳಕೆಯ ಬಗ್ಗೆ ಪ್ರೇರೇಪಣೆ ನೀಡುವುದಾಗಿತ್ತು. ಸರ್ಕಾರವು ಕೋಲ್‌ಮನ್‌ರ ಸಲಹೆಯನ್ನು ಒಪ್ಪಿಕೊಂಡು 1910ರಲ್ಲಿ ಕೃಷಿ ಸಲಕರಣೆ ಮಾರಾಟ ಕೇಂದ್ರಗಳನ್ನು ಆರಂಭಿಸಿತು. ಕೋಲ್‌ಮನ್‌ರವರು ರೆವಿನ್ಯೂ ಕಮಿಷನರೊಂದಿಗೆ ಜೊತೆಗೂಡಿ ಜಿಲ್ಲಾಧಿಕಾರಿಗಳ ಮೂಲಕ ರೈತರಲ್ಲಿ ವ್ಯಾಪಕ ಪ್ರಚಾರ ನಡೆಸಿದರು. ವಿಶೇಷ ಸಂದರ್ಭಗಳಲ್ಲಿ ಇಂತಹ ಸುಧಾರಿತ ಕೃಷಿ ಸಲಕರಣೆಗಳನ್ನು ಬಳಸುವುದು ಹೇಗೆಂಬುದನ್ನು ಸಹ ಪ್ರಾಯೋಗಿಕವಾಗಿ ಪ್ರದರ್ಶಿಸಲಾಯಿತು. ಅಲ್ಲದೇ ಕೃಷಿ ಸಲಕರಣೆಗಳನ್ನು ಖರೀದಿಸಲು ರೈತರಿಗೆ ಸಾಲವನ್ನು ನೀಡಲಾಯಿತು[212].

ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಪ್ರತಿ ತಾಲ್ಲೂಕಿನಲ್ಲೂ 'ಇಂಗ್ಲಿಷ್ ನೇಗಿಲು'ಗಳನ್ನು ಮತ್ತು ಇತರ ಸುಧಾರಿತ ಕೃಷಿ ಉಪಕರಣಗಳ 'ಮಾದರಿ'ಗಳನ್ನು ಇಡುವಂತೆಯೂ ಹಾಗೂ ಅವುಗಳ ನೈಜ ಬೆಲೆಗೆ ರೈತರಿಗೆ ಮಾರಬೇಕೆಂದೂ ಮತ್ತು ವಾರಕ್ಕೊಮ್ಮೆ ರೈತವರ್ಗದವರಿಗೆ ಸುಧಾರಿತ ಉಪಕರಣಗಳನ್ನು ಬಳಸುವ ಬಗೆಯನ್ನು ಕಲಿಸಬೇಕೆಂದೂ, ಅದಕ್ಕಾಗಿ ಪ್ರಾಯೋಗಿಕ ಫಾರಂಗಳನ್ನು ಸ್ಥಾಪಿಸಬೇಕೆಂದು ಬೇಡಿಕೆ ಸಲ್ಲಿಸಿದರು[213]. ಬೇಡಿಕೆಯನ್ನು ಅಂಗೀಕರಿಸಿದ ಸರ್ಕಾರವು 1910-13ರಲ್ಲಿ 18,000 ರೂಪಾಯಿಗಳ ಮೌಲ್ಯದ ನೇಗಿಲುಗಳನ್ನು ಮಾರಾಟ ಕೇಂದ್ರಗಳ ಮೂಲಕ ಮಾರಾಟ ಮಾಡಿತು. ನಂತರ ಸರ್ಕಾರವು ವಿದೇಶಿ ನೇಗಿಲುಗಳನ್ನು ಸ್ಥಳೀಯ ಅನುಕೂಲಕ್ಕೆ ತಕ್ಕಂತೆ ರೂಪಿಸುವ ಹಾಗೂ ಬಿಡಿ ಭಾಗಗಳನ್ನು ಸ್ಥಳೀಯವಾಗಿ ಉತ್ಪಾದಿಸುವ ಕಡೆ ಗಮನಹರಿಸಿತು[214].

ಸುಧಾರಿತ ಉಪಕರಣಗಳ ಉಪಯುಕ್ತತೆಯನ್ನು ಹಾಗೂ ಅವುಗಳ ಬಗ್ಗೆ ಜನರಲ್ಲಿ ಆಸಕ್ತಿ ಇರುವುದನ್ನು ಗಮನಿಸಿದ ಸರ್ಕಾರ ಸಾಲ ನೀಡಿ ಅವುಗಳನ್ನು ಕೊಳ್ಳಲು ರೈತರಿಗೆ ನೆರವು ನೀಡಿತು. ಅದಕ್ಕಾಗಿ ತಕಾವಿ ಸಾಲಗಳನ್ನು ಒದಗಿಸಿತು. ಅವುಗಳನ್ನು ಇನ್ನೂ ಹೆಚ್ಚು ಪ್ರಚಾರ ಮಾಡಲು ಸರ್ಕಾರವು ಮಾರಾಟ ಕೇಂದ್ರಗಳ ಮೂಲಕ ಕಂತುಗಳಲ್ಲಿ ಹಣಕೊಡುವ ಆಧಾರದ ಮೇಲೆ ಉಪಕರಣಗಳನ್ನು ಪೂರೈಸಿತು[215]. 1910 ರಿಂದ 1937ರವರೆಗೆ 30,789 ಕೃಷಿ ಉಪಕರಣಗಳನ್ನು ಮಾರಾಟ ಕೇಂದ್ರಗಳ ಮೂಲಕ ಮಾರಾಟ ಮಾಡಲಾಯಿತು.[216]. ಅಂದು ಜನರಲ್ಲಿ ಬಹಳ ಪ್ರಸಿದ್ಧಿಯಾಗಿದ್ದ ನೇಗಿಲೆಂದರೆ

---

212. ***ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್*** - *ಸೀರಿಸ್ ನಂ. 2, ನಂ. ಆರ್. 6055-66, ಅಗ್ರಿಕಲ್ಚರ್, 62-09-2, ದಿನಾಂಕ : 8-3-1910, ಬೆಂಗಳೂರು*
213. ***ಹನುಮಂತಪ್ಪ ಎಚ್.***, *ಹಿಸ್ಟರಿ ಆಫ್ ಲೆಜಿಸ್ಲೇಚರ್, ಸಂಪುಟ - II, ಪು. 874*
214. ***ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್***, *ಸೀರಿಸ್ ನಂ. -2, ನಂ. ಆರ್. 1261-73, ಅಗ್ರಿಕಲ್ಚರ್, 133-12-2, 1917, ಪು. 56*
215. ***ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್***, *ಜಿ. ಓ. ನಂ. 5809 ಎ ಮತ್ತು ಐ 43-15-24, ದಿನಾಂಕ : 12-4-1916, ಪು. 59-60*

"ಕೋಲಾರ್ ಮಿಷನ್ ನೇಗಿಲು". ಇದನ್ನು ಕೋಲಾರದ ಅಮೇರಿಕನ್ ಮಿಷನ್ ಸಂಸ್ಥೆ ಅಮೇರಿಕಾದಿಂದ ಆಮದು ಮಾಡಿಕೊಂಡು ಸರ್ಕಾರದ ಮೂಲಕ ಮಾರಾಟ ಮಾಡುತ್ತಿತ್ತು. ಇದರ ಜೊತೆಗೆ ಕೋಲಾರ್ ಮಿಷನ್ ಅಭಿವೃದ್ಧಿಗೊಳಿಸಿದ 'ಯುರೇಕಾ' ಎಂಬ ಮತ್ತೊಂದು ನೇಗಿಲು, ಕಲ್ಕತ್ತಾದ ಬರ್ನ್ ಅಂಡ್ ಕಂಪನಿ ರೂಪಿಸಿದ ಮೆಸ್ಟನ್ ಎಂಬ ನೇಗಿಲು ಮತ್ತು ಕೆನಡಾದ ಟೊರಾಂಟೋದ ಮ್ಯಾಸ್ಸೇ ಹ್ಯಾರಿಸ್ ಕಂಪನಿ, ನಿರ್ಮಿಸಿದ 'ವೆರಿಟಿ' ಎಂಬ ಹೆಸರಿನ ನೇಗಿಲುಗಳು ಮೈಸೂರಿನಲ್ಲಿ ಬಳಕೆಗೆ ಬಂದವು. ಆಗ ಮೈಸೂರಿನಲ್ಲಿ ಪ್ರಸಿದ್ಧಿಗೊಂಡಿದ್ದ 'ಕೋಲಾರ್ ಮಿಷನ್ ನೇಗಿಲು' ಮಾದರಿಯನ್ನು ಬೆಂಗಳೂರು ಜಿಲ್ಲೆಯ ಕಮ್ಮಾರರು ಅನುಸರಿಸಿ ಸ್ಥಳೀಯವಾಗಿ ತಾವೇ ತಯಾರಿಸಿ ಪ್ರತಿವರ್ಷ ಹೆಚ್ಚಿನ ಸಂಖ್ಯೆಯ ನೇಗಿಲುಗಳನ್ನು ಮಾರಲಾರಂಭಿಸಿದರು. ನೇಗಿಲಿನ ಬಿಡಿಭಾಗಗಳನ್ನು ಕಮ್ಮಾರರು ಮಾಡಿ ಮಾರಾಟ ಮಾಡುತ್ತಿದ್ದರು. ಇದರೊಂದಿಗೆ ಸುಧಾರಿತ ದೊಡ್ಡಕುಂಟೆ ಮತ್ತು ಕೂರಿಗೆಗಳನ್ನು ಸಹ ಪ್ರಚುರಪಡಿಸಲಾಯಿತು[217].

ನಾಲ್ವಡಿಯವರ ಸರ್ಕಾರವು ಆರಂಭದಲ್ಲಿ ಪಾಶ್ಚಿಮಾತ್ಯ ದೇಶಗಳ ಕೃಷಿ ಉಪಕರಣಗಳನ್ನು ಆಮದು ಮಾಡಿಕೊಂಡು ರೈತರಲ್ಲಿ ಅದನ್ನು ಪ್ರಚಾರ ಮಾಡಲು ಆರ್ಥಿಕ ಸಮ್ಮೇಳನಗಳನ್ನು ನಡೆಸುತ್ತಿತ್ತು. ಅಂತಹ ಒಂದು ಸಮ್ಮೇಳನವು 1917 ರ ಫೆಬ್ರವರಿ 13, 14 ಮತ್ತು 15 ರಂದು ಕಡೂರು ಜಿಲ್ಲೆಯ ಮೂರನೆಯ ಸಮ್ಮೇಳನವಾಗಿ ಜಿಲ್ಲಾ ಕೇಂದ್ರವಾದ ಚಿಕ್ಕಮಗಳೂರಿನಲ್ಲಿ ನಡೆಯಿತು. ಅಲ್ಲಿ ಆಧುನಿಕ ಕೃಷಿ ಉಪಕರಣಗಳ ಪ್ರಾಯೋಗಿಕ ಪ್ರದರ್ಶನಗಳನ್ನು ನಡೆಸಲಾಯಿತು. ಅಲ್ಲಿ ವ್ಯವಸಾಯ ಇಲಾಖೆ ಶಿಫಾರಸ್ಸು ಮಾಡಿದ್ದ ವಿವಿಧ ಸುಧಾರಿತ ವ್ಯವಸಾಯೋಪಕರಣಗಳನ್ನು ಪ್ರಯೋಗಮಾಡಿ ತೋರಿಸಲಾಯಿತು. ಇದರ ಪರಿಣಾಮವಾಗಿ 20 ಸುಧಾರಿತ ನೇಗಿಲುಗಳಿಗೆ ಸ್ಥಳದಲ್ಲಿಯೇ ಬೇಡಿಕೆ ಬಂದಿತು[218]. ಇಂತಹ ಪ್ರಯೋಗಗಳೊಂದಿಗೆ ಸ್ಥಳೀಯ ಕಮ್ಮಾರರು ಆ ಸುಧಾರಿತ ಉಪಕರಣಗಳ ತಾಂತ್ರಿಕತೆಯನ್ನು ಕರಗತ ಮಾಡಿಕೊಂಡು ತಾವೇ ಉತ್ಪಾದಿಸಿ ಮಾರುವಂತಾದರು. ಹೀಗೆ ಪಾಶ್ಚಿಮಾತ್ಯ ತಾಂತ್ರಿಕತೆ ಸ್ಥಳೀಯದ್ದಾಗಿ ಮಾರ್ಪಟ್ಟು ದೇಶೀಯ ಕೃಷಿ ಚಟುವಟಿಕೆಗಳೊಡನೆ ಬೆರೆಯುವಂತಾಯಿತು. ಇಲ್ಲಿ ಆರ್ಥಿಕ ಸಮ್ಮೇಳನಗಳು ಸರ್ಕಾರ ಮತ್ತು ಸಾರ್ವಜನಿಕರ ನಡುವೆ ಹಾಗೂ ಜನಸಾಮಾನ್ಯರು ಮತ್ತು ತಜ್ಞರ ನಡುವೆ ವಿಚಾರ ವಿನಿಮಯ ಮಾಡುವ ಮತ್ತು ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ವೇದಿಕೆಯಾಗಿ ಪರಿಣಮಿಸಿತು.

ವ್ಯವಸಾಯಿಕ ಭೂಮಿಯನ್ನು ಉಳುವೆ ಮಾಡುವಲ್ಲಿ ಪ್ರಧಾನವಾಗಿ ಅವಶ್ಯಕವಾಗಿದ್ದ ನೇಗಿಲುಗಳ ಬಳಕೆಯಲ್ಲಿ

---

*216. ಆಗ್ರಿಕಲ್ಚರ್ ಇನ್ ಮೈಸೂರ್, ಎರಡನೆ ಮತ್ತು ಪರಿಷ್ಕೃತ ಆವೃತ್ತಿ, 1939. ಮೈಸೂರು ಸರ್ಕಾರದ ಪ್ರಕಟಣೆ, ಪು. 122-123*

*217. ಹಯವದನರಾವ್ ಸಿ. ( ಸಂ)., ಪೂರ್ವೋಕ್ತ. ಪು. 29-30*

*218. ಸರ್ಕಾರಿ ಆದೇಶ ಸಂಖ್ಯೆ ; ಆರ್. 10822-5 ಎಲ್. ಆರ್. 12-16-143, ದಿನಾಂಕ 5-5-1917*

ಜನಸಂಖ್ಯೆ ಹೆಚ್ಚಿದಂತೆಲ್ಲಾ ಹೆಚ್ಚಾದ ಬೇಡಿಕೆಯನ್ನು ಪೂರೈಸುವ ನಿಟ್ಟಿನಲ್ಲಿ ಹಾಗೂ ಸಾಗುವಳಿ ವಿಸ್ತರಣೆಗೆ ತಕ್ಕ ಸಾಮರ್ಥ್ಯದ ನೇಗಿಲುಗಳನ್ನು ಕಾಲಕ್ಕೆ ಸರಿಯಾಗಿ ಹೊಂದಿಸಿಕೊಳ್ಳುವ ಆಲೋಚನೆಯಲ್ಲಿ ನಾಲ್ವಡಿಯವರು ಮತ್ತು ಅವರ ಸರ್ಕಾರ ಪಾಶ್ಚಿಮಾತ್ಯ ಮಾದರಿಯ ಹೊಸ ಸುಧಾರಿತ ನೇಗಿಲುಗಳನ್ನು ಪರಿಚಯಿಸಿದರು, ಸಾಂಪ್ರದಾಯಿಕತೆಯೊಡನೆ ಆಧುನಿಕತೆಯ ಅಂಶಗಳನ್ನು ಬೆರೆಸುತ್ತಾ ರೈತ ಸಮೂಹವನ್ನು ಪರಿವರ್ತನೆಯ ಹಾದಿಯತ್ತ ಕೊಂಡೊಯ್ದರು. ಇಂತಹ ಪ್ರಯತ್ನಗಳು ಮೈಸೂರಿನ ಸಾಮಾಜಿಕ ವ್ಯವಸ್ಥೆಯೊಳಗೆ ಸಾಕಷ್ಟು ಬದಲಾವಣೆಗಳಿಗೆ, ಬೆಳವಣಿಗೆಗೆ ದಾರಿಮಾಡಿಕೊಟ್ಟವು. ಹಾಗೆಯೇ ಕೃಷಿಯ ಅಭಿವೃದ್ಧಿಯಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸಿರುವ ಮತ್ತೊಂದು ಅಂಶವೆಂದರೆ ರಸಗೊಬ್ಬರ. ಈ ರಸಗೊಬ್ಬರಗಳ ಬಳಕೆಯಲ್ಲಿ ತಂದ ನವೀನತೆಯ ಬಗ್ಗೆ ಮುಂದೆ ವಿವರಿಸಲಾಗಿದೆ.

### *ಆಧುನಿಕ ರಸಗೊಬ್ಬರಗಳ ಬಳಕೆಗೆ ಪ್ರೋತ್ಸಾಹ*

ಕೃಷಿ ಬೆಳೆಗಳು ಹುಲುಸಾಗಿ ಬೆಳೆಯಲು ಮತ್ತು ಉತ್ತಮ ಇಳುವರಿ ಕೊಡಲು ರಸಗೊಬ್ಬರಗಳ ಅವಶ್ಯಕತೆ ಇರುತ್ತದೆ. ಅಂದು ಮೈಸೂರು ಸಂಸ್ಥಾನದ ರೈತರು ಸಗಣಿ, ಕುರಿಗೊಬ್ಬರ, ಹೊಂಗೆಸೊಪ್ಪು, ಕೆರೆಯ ಹೂಳು ಮಣ್ಣು ಮುಂತಾದ ಸಾಂಪ್ರದಾಯಿಕ ಗೊಬ್ಬರಗಳನ್ನು ಮಾತ್ರ ಬಳಸುತ್ತಿದ್ದರು. ಕೃತಕ ಗೊಬ್ಬರಗಳ ಬಳಕೆ ತುಂಬಾ ಕಡಿಮೆಯಿದ್ದಿತು. ಮೊದಲ ಬಾರಿಗೆ ಎಣ್ಣೆ ಕಾಳುಗಳಿಂದ ಎಣ್ಣೆ ತೆಗೆದ ಮೇಲೆ ಉಳಿದ ಎಣ್ಣೆ ಹಿಪ್ಪೆ (oil-cakes)ಯನ್ನು ಕೃಷಿ ಇಲಾಖೆಯು ರಾಜ್ಯದಾದ್ಯಂತ ರೈತರು ಬಳಸುವಂತೆ ಪ್ರಚಾರ ಮಾಡಿತು. ಎಣ್ಣೆ ಹಿಪ್ಪೆಯಲ್ಲಿ ಹೆಚ್ಚಿನ ಪ್ರಮಾಣದ ಸಾರಜನಕವಿದ್ದು ಬೆಳೆಯ ಬೆಳವಣಿಗೆಗೆ ಸಹಾಯ ಮಾಡುತ್ತಿತ್ತು. ಕೃಷಿ ಇಲಾಖೆ ಮತ್ತು ಖಾಸಗಿ ವರ್ತಕರ ಮೂಲಕ ಅಪಾರ ಪ್ರಮಾಣದ ಎಣ್ಣೆ ಹಿಂಡಿಯನ್ನು ಮಾರಾಟ ಮಾಡಲಾಯಿತು. ಅದರಲ್ಲೂ ಕಬ್ಬಿನ ಬೆಳೆಗೆ ಅದು ಬಹು ಉಪಯುಕ್ತವಾಗಿದ್ದರಿಂದ ಕಬ್ಬಿನ ಬೆಳೆಗಾರರಿಗೆ 12 ರಿಂದ 14 ತಿಂಗಳವರೆಗೆ ಸಾಲದ ಮೇಲೆ ಗೊಬ್ಬರ ಪೂರೈಸಿ ಬೆಳೆ ಬಂದ ನಂತರ ಸಾಲವನ್ನು ವಾಪಸ್ಸು ಪಡೆಯಲಾಗುತ್ತಿತ್ತು[219].

ಮೊದಲು ಎಣ್ಣೆ ಕಾಳುಗಳನ್ನು ಕುಟ್ಟಿ ನೀರಿನಲ್ಲಿ ಕುದಿಸಿದಾಗ ಮೇಲ್ಪದರದಲ್ಲಿ ಬಂದು ನಿಲ್ಲುತ್ತಿದ್ದ ಎಣ್ಣೆಯ ಅಂಶವನ್ನು ಎತ್ತಿಕೊಂಡು ಉಳಿಕೆ ಅರೆ ದ್ರವದ ರೂಪದಲ್ಲಿ ಉಳಿಯುತ್ತಿದ್ದ ಅಂಶವನ್ನು ಗೊಬ್ಬರದ ರಾಶಿಯಲ್ಲಿ ಸೇರಿಸಲಾಗುತ್ತಿತ್ತು. ನಂತರದ ಕಾಲದಲ್ಲಿ ಬೆಂಗಳೂರು ನಗರದಲ್ಲಿ ಮೊದಲ ಬಾರಿಗೆ ಎಣ್ಣೆ ಉತ್ಪಾದಿಸಲು ಯಾಂತ್ರೀಕೃತ

---

*219. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 48-49*

ತಿರುಗಾಣಗಳನ್ನು ಅಳವಡಿಸಲಾಯಿತು. ಈ ತಿರುಗಾಣಗಳಲ್ಲಿ ಕಾಳುಗಳಿಂದ ಎಣ್ಣೆ ಅಂಶ ಹೊರ ಬಂದ ಮೇಲೆ ಉಳಿಕೆ ಅಂಶವು ಘನರೂಪದಲ್ಲಿ ದೊರೆಯುತ್ತಿತ್ತು. ಅದನ್ನು ಚಿಕ್ಕ ಚಿಕ್ಕ ತುಂಡುಗಳನ್ನಾಗಿ ಮಾಡಿ ರೈತರಿಗೆ ಮಾರಲಾಗುತ್ತಿತ್ತು. ಬೆಂಗಳೂರಿನಲ್ಲಿ ಆಂಡರ್‌ಸನ್ ಆಯಿಲ್ ಎಕ್ಸ್‌ಪೆಲ್ಲರ್ ಸ್ಥಾಪನೆಯಾದ ನಂತರ ತೆಳುವಾದ ಚಕ್ಕೆಯ ರೂಪದ ಎಣ್ಣೆ ಹಿಪ್ಪೇ(ಹಿಂಡಿ)ಯನ್ನು ತಯಾರಿಸುವಂತಾಗಿ ರಾಜ್ಯದ ಎಲ್ಲ ಕಡೆ ಮಾರಾಟ ಮಾಡಲು ಅನುಕೂಲವಾಯಿತು. ಬೆಂಗಳೂರಿನಲ್ಲಿ ಒದಗಿಸಿದ ವಿದ್ಯುತ್‌ನಿಂದಾಗಿ ಅನೇಕ ರೋಟರಿ ವಿಧದ ಚಿಕ್ಕ ಮಿಲ್ಲುಗಳು ಸ್ಥಾಪನೆಯಾದವು. ಪ್ರಮುಖವಾಗಿ ಹರಳು, ಹೊಂಗೆ ಮುಂತಾದ ಎಣ್ಣೆಕಾಳುಗಳಿಂದ ಇಂತಹ ಎಣ್ಣೆ ಹಿಪ್ಪೆಯನ್ನು ತಯಾರಿಸಲಾಗುತ್ತಿತ್ತು. ಕಾಫಿ ಎಸ್ಟೇಟ್‌ಗಳಲ್ಲಿ ಇಂತಹ ಪುಡಿಯಾದ ಎಣ್ಣೆ ಹಿಪ್ಪೆಯನ್ನು ಗೊಬ್ಬರವಾಗಿ ಬಳಸುತ್ತಿದ್ದರು. ಇಂತಹ ಪುಡಿ ಗೊಬ್ಬರವನ್ನು ಉತ್ಪಾದಿಸುವ ಉದ್ಯಮಗಳು ಹುಣಸೂರು ಮತ್ತು ಬೆಂಗಳೂರುಗಳಲ್ಲಿ ಸ್ಥಾಪನೆಯಾಗಿದ್ದವು. ಇವುಗಳಿಗೆ ಇನ್ನೂ ಬೇಡಿಕೆ ಹೆಚ್ಚಿದಂತೆ ಮದ್ರಾಸ್ ಬಳಿಯ ರಾಣಿಪೇಟ್, ಕೊಯಮತ್ತೂರು ಮುಂತಾದೆಡೆಯಿಂದ ಆಮದು ಮಾಡಿಕೊಳ್ಳಲಾಯಿತು. ಮತ್ತೊಂದು ಗೊಬ್ಬರವಾದ ಮೂಳೆಗೊಬ್ಬರವನ್ನು ಬೆಂಗಳೂರು ಮತ್ತು ಹುಣಸೂರುಗಳಲ್ಲಿ ತಯಾರಿಸಲಾಗುತ್ತಿತ್ತು ಅದನ್ನು ಪ್ರಧಾನವಾಗಿ ಕಾಫಿ ಎಸ್ಟೇಟ್‌ಗಳಲ್ಲಿ ಬಳಸಲಾಗುತ್ತಿತ್ತು. ಎಣ್ಣೆಹಿಪ್ಪೆ ಮತ್ತು ಮೂಳೆ ಗೊಬ್ಬರವನ್ನು ರೈತರು ಬಳಸಲು ಆರಂಭದಲ್ಲಿ ಹಿಂಜರಿದರೂ ಸಹ ಉತ್ತಮ ಬೆಳೆಯ ಭರವಸೆಯಿಂದ ಬಳಸಲಾರಂಭಿಸಿದರು[220].

ಮೈಸೂರು ರಾಜ್ಯದ ಕೃಷಿ ಇಲಾಖೆಯು ಕೃತಕ ಅಥವಾ ರಾಸಾಯನಿಕ ಗೊಬ್ಬರಗಳಾದ ಅಮ್ಮೋನಿಯ ಸಲ್ಫೇಟ್, ಸೂಪರ್ ಫಾಸ್ಫೇಟ್ ಮುಂತಾದ ರಾಸಾಯನಿಕ ಗೊಬ್ಬರಗಳ ಮಹತ್ವವನ್ನು ಆರ್ಥಿಕ ಸಮ್ಮೇಳನಗಳ ಕಾಲದಲ್ಲಿ ಹಾಗೂ ದಸರಾ ವಸ್ತು ಪ್ರದರ್ಶನದ ವೇಳೆಯಲ್ಲಿ ಪ್ರಾಯೋಗಿಕವಾಗಿ ರೈತರಿಗೆ ಪ್ರದರ್ಶಿಸುತ್ತಿತ್ತು. ಭತ್ತದ ಗದ್ದೆ, ತೆಂಗಿನ ತೋಟ, ಆಲೂಗೆಡ್ಡೆಯಂತಹ ವಿಶೇಷ ಬೆಳೆಗಳಿಗೆ ಮಿಶ್ರಿತ ರಾಸಾಯನಿಕ ಗೊಬ್ಬರಗಳನ್ನು ರೈತರಿಗೆ ಮಾರಾಟ ಮಾಡಿತು. ಇಂತಹ ಗೊಬ್ಬರಗಳನ್ನು ಮೈಸೂರಿನ ಎಡತೊರೆ ತಾಲ್ಲೂಕು, ಹಾಸನದ ಹೊಳೆನರಸೀಪುರ, ಬೆಂಗಳೂರಿನ ಹೊಸಕೋಟೆ ತಾಲ್ಲೂಕುಗಳಲ್ಲಿನ ರೈತರು ತಮ್ಮ ಭತ್ತದ ಗದ್ದೆಗಳಿಗೆ ಹೆಚ್ಚಾಗಿ ಬಳಸುತ್ತಿದ್ದರು. ರಾಸಾಯನಿಕ ಗೊಬ್ಬರದ ಮಹತ್ವವನ್ನು ರೈತರು ಹೀಗೆ ಕಾಲಕ್ರಮೇಣ ಮನಗೊಳ್ಳುತ್ತಾ ಬಂದರು. ಉನ್ನತ ಜಾತಿಯ ರೈತ ಜನರು ಇದರ ಬಳಕೆಯನ್ನು ಧಾರ್ಮಿಕ ಕಾರಣಕ್ಕಾಗಿ ವಿರೋಧಿಸುತ್ತಿದ್ದವರು ಕೊನೆಗೆ ಅದರಿಂದ ಬಂದ ಉತ್ತಮ ಬೆಳೆ ಮತ್ತು ಲಾಭದಿಂದ ಪ್ರೇರೇಪಿತರಾಗಿ ತಾವು ಬಳಸಲಾರಂಭಿಸಿದರು. ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಿಂದ ಬಂದ ಉಪ ಉತ್ಪನ್ನವಾದ

---

*220. ಹಯವದನ ರಾವ್ ಸಿ. (ಸಂ)., ಪು. 50-51*

ಅಮ್ಮೋನಿಯಂ ಸಲ್ಫೇಟ್ ಅನ್ನು ಬೆಳೆಗಳಿಗೆ ಬಳಸಲಾರಂಭಿಸಿದರು. ಒಟ್ಟಾರೆ ಹೊಸ ಗೊಬ್ಬರಗಳ ಬಳಕೆಯು ಕೃಷಿ ಬೆಳೆಗಳ ಹೆಚ್ಚು ಉತ್ಪಾದನೆಗೆ ಮತ್ತು ರಾಜ್ಯದ ಕೃಷಿ ಬೆಳವಣಿಗೆಗೆ ಪ್ರಮುಖ ಸಾಧನಗಳಾದವು[221] ಮತ್ತು ರೈತ ಜನಾಂಗವನ್ನು ಸಾಂಪ್ರದಾಯಿಕತೆಯಿಂದ ಆಧುನಿಕತೆಯತ್ತ ಕೊಂಡೊಯ್ಯುವಲ್ಲಿ ಸಹಕರಿಸಿದವು.

### *ಸುಧಾರಿತ ಬಿತ್ತನೆ ಬೀಜಗಳ ಬಳಕೆಗೆ ಪ್ರೋತ್ಸಾಹ*

ನಾಲ್ವಡಿಯವರ ಸರ್ಕಾರವು ಆಧುನಿಕ ಕೃಷಿ ಉಪಕರಣಗಳನ್ನು, ರಾಸಾಯನಿಕ ಗೊಬ್ಬರಗಳನ್ನು ಕೃಷಿಕರು ಬಳಸುವಂತೆ ಮಾಡಿದುದರ ಜೊತೆಗೆ ಸುಧಾರಿತ ಉತ್ತಮ ತಳಿಯ ಬಿತ್ತನೆ ಬೀಜಗಳನ್ನು ಅಭಿವೃದ್ಧಗೊಳಿಸಲು ಕೃಷಿ ತಜ್ಞರು ಮತ್ತು ಸಂಶೋಧನಾ ಫಾರಂಗಳನ್ನು ಬಳಸಿಕೊಂಡಿತು. ಇದರಿಂದಾಗಿ ಅನೇಕ ಸುಧಾರಿತ ಹೆಚ್ಚು ಇಳುವರಿ ತರುವ ಬಿತ್ತನೆ ಬೀಜಗಳು ಮೈಸೂರಿನ ಕೃಷಿಯಲ್ಲಿ ಬಳಸಲ್ಪಟ್ಟವು. ಹೆಬ್ಬಾಳದ ಪ್ರಾಯೋಗಿಕ ಫಾರಂನಲ್ಲಿ H22 ಮುಂತಾದ ಸುಧಾರಿತ ಹೆಚ್ಚು ಇಳುವರಿ ತರುವ ರಾಗಿ ತಳಿಯನ್ನು ಅಭಿವೃದ್ಧಿಪಡಿಸಿ ಬಿತ್ತನೆ ಬೀಜಗಳನ್ನು ಆಯ್ದ ರೈತರ ಕೃಷಿ ಭೂಮಿಯಲ್ಲಿ ಅವುಗಳನ್ನು ಬೆಳೆದು ರೈತರಿಗೆ ಅವುಗಳನ್ನು ಪೂರೈಸಿ ಬೆಳೆಸಲು ಪ್ರೋತ್ಸಾಹಿಸಿದರು. ಕಾರ್ ರಾಗಿಯ ತಳಿ ಅಭಿವೃದ್ಧಿಗೆ ಹುಣಸೂರು ತಾಲ್ಲೂಕಿನಲ್ಲಿ ಒಂದು ಪ್ರಾಯೋಗಿಕ ಕ್ಷೇತ್ರವನ್ನು ಸ್ಥಾಪಿಸಲಾಯಿತು.[222] ಹಾಗೆಯೇ ಮೈಸೂರು ಪ್ರದೇಶಕ್ಕೆ ಹೊಸ ಬೆಳೆಯಾದ ನೆಲಗಡಲೆಯನ್ನು ಬೆಳೆಯಲು ಪ್ರೋತ್ಸಾಹ ನೀಡಲಾಯಿತು.

***ನೆಲಗಡಲೆ ;*** ಮೈಸೂರು ರಾಜ್ಯದಲ್ಲಿ ಮೌರಿಷಿಯಸ್ ಮತ್ತು ವರ್ಜೀನಿಯಾ ಮೂಲದ ವಿಶಾಲವಾಗಿ ಹರಡಿಕೊಂಡು ಬೆಳೆಯುತ್ತಿದ್ದ ನೆಲಗಡಲೆ ತಳಿ ಹೆಚ್ಚು ಪ್ರಸಿದ್ಧಿಯಾಗಿದ್ದು ಬೆಳೆ ಕಟಾವಿಗೆ ಬರಲು ಐದು ತಿಂಗಳು ಹಿಡಿಯುತ್ತಿತ್ತು. ಅದಕ್ಕಾಗಿ ಕೃಷಿ ಇಲಾಖೆಯು ಸ್ಪಾನಿಷ್ ಮತ್ತು ಜಪಾನ್ ಮೂಲದ ಕೆಲವು ತಳಿಗಳನ್ನು ಆಮದು ಮಾಡಿಕೊಂಡು ರೈತರಿಗೆ ಪೂರೈಸಿತು. ಅಲ್ಲದೆ ಸೀಮೆಕಾಯಿ ಅಥವಾ ಬಾದಾಮಿ ಎಂಬ ಹೊಸ ತಳಿಯ ನೆಲಗಡಲೆಯನ್ನು ಪರಿಚಯಿಸಲಾಯಿತು. ಈ ಹೊಸ ತಳಿಗಳು ಅಷ್ಟು ವಿಶಾಲವಾಗಿ ಹರಡುತ್ತಿರಲಿಲ್ಲ ಹಾಗೂ ನೇರವಾಗಿ ನಿಂತು ಬೆಳೆದು ಮೂರೂವರೆ ತಿಂಗಳಲ್ಲಿ ಕಟಾವಿಗೆ ಬರುತ್ತಿದ್ದವು. ಎಣ್ಣೆಯ ಅಂಶವು ಮೊದಲ ತಳಿಗಿಂಥ ಹೆಚ್ಚಿರುತ್ತಿತ್ತು. ಈ ಹೊಸ ತಳಿಯ ನೆಲಗಡಲೆ ಬೆಳೆ ಬೆಳೆಯುತ್ತಿದ್ದ ಎಣ್ಣೆ ಕೈಗಾರಿಕೋದ್ಯಮಗಳಿಗೆ ಕಚ್ಚಾ ವಸ್ತುವನ್ನು, ಜನಸಂಖ್ಯೆಗೆ ಎಣ್ಣೆಯನ್ನು ಮತ್ತುರೈತರ ಭೂಮಿಗೆ ಬೇಡಿಕೆ ಹೆಚ್ಚುತ್ತಿದ್ದ ಎಣ್ಣೆ ಹಿಪ್ಪೆಯನ್ನು ಒದಗಿಸಲು ನೆರವಾಯಿತು[223]. ನೆಲಗಡಲೆಯ ಬೆಳೆಯ ಹಾಗೆಯೇ ಹತ್ತಿಯ ಬೆಳೆಯಲ್ಲೂ ನವೀನತೆಯನ್ನು ತಂದು ಹೆಚ್ಚು ಇಳುವರಿ ಪಡೆಯುವಂತೆ ಪ್ರೋತ್ಸಾಹಿಸಲಾಯಿತು.



---

*221 ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 51-52*

*222. ಅಗ್ರಿಕಲ್ಚರ್ ಇನ್ ಮೈಸೂರ್., ಪೂರ್ವೋಕ್ತ, ಪು. 28*

*223. ಹಯವದನ ರಾವ್ ಸಿ.(ಸಂ)., ಪೂರ್ವೋಕ್ತ, ಪು. 85-87*

**ಹತ್ತಿ**

ದೇಶೀಯ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಬೇಡಿಕೆ ಹೆಚ್ಚುತ್ತಿದ್ದ ಹತ್ತಿ ಬೆಳೆ ಬೆಳೆಯುವುದನ್ನು ರಾಜ್ಯದಲ್ಲಿ ವಿಸ್ತೃತಗೊಳಿಸಲಾಯಿತು. ಮೊದಲು ಕೇವಲ ಕಪ್ಪುಮಣ್ಣಿನ ಭೂಮಿಯಿದ್ದ ಚಿತ್ರದುರ್ಗ, ತುಮಕೂರು, ಶಿವಮೊಗ್ಗ, ಕಡೂರು ಮುಂತಾದ ಕೆಲ ಭಾಗಗಳಲ್ಲಿ ಮಾತ್ರ ದೇಶೀಯ ಹತ್ತಿ ತಳಿಯನ್ನು ಬೆಳೆಯುತ್ತಿದ್ದರು. ಆ ತಳಿ ಕೆಂಪುಮಣ್ಣಿನ ಭೂಮಿಗಳಲ್ಲಿ ಮಾತ್ರ ಬೆಳೆಯುತ್ತಿತ್ತು. ಆದರೆ ಅಮೇರಿಕನ್ ಅಪ್‌ಲ್ಯಾಂಡ್ ಎಂಬ ತಳಿಯನ್ನು ಮೈಸೂರು ರಾಜ್ಯದಲ್ಲಿ ಪರಿಚಯಿಸಲಾಗಿ ಕೆಂಪು ಮಣ್ಣಿನ ಭೂಮಿಗಳಲ್ಲಿಯೂ ಅದನ್ನು ಬೆಳೆಯಲು ಸಾಧ್ಯವಾಯಿತು. ನಂತರ ಕಾಂಬೋಡಿಯನ್ ಕಾಟನ್ ಎಂಬ ತಳಿಯನ್ನು ಪರಿಚಯಿಸಲಾಯಿತು. ಈ ಹೊಸ ತಳಿಗಳು ರಂಬೆಗಳನ್ನು ಹೊಂದಿದ್ದು ಪೊದೆಯಿಂದ ಕೂಡಿದವಾಗಿದ್ದವು, ಎಲೆಗಳು ಮತ್ತು ಹಣ್ಣುಗಳು ದೊಡ್ಡದಾಗಿದ್ದು ಉತ್ತಮ ಇಳುವರಿ ನೀಡುತ್ತಿದ್ದವು. ಬೇಗ ಕೊಯ್ಲಿಗೆ ಬರುತ್ತಿದ್ದುದಲ್ಲದೆ ಹತ್ತಿಯ ಎಳೆಗಳ ಪ್ರಮಾಣ ಹೆಚ್ಚಿರುತ್ತಿತ್ತು. ಕೃಷಿ ಇಲಾಖೆಯು ತನ್ನ ಮಾರಾಟ ಕೇಂದ್ರಗಳ ಮೂಲಕ ಈ ಉತ್ತಮ ತಳಿಯ ಬಿತ್ತನೆ ಬೀಜಗಳನ್ನು ರೈತರಿಗೆ ಪೂರೈಸುತ್ತಿತ್ತು. ಅದಕ್ಕೆ ಮೊದಲು ಹಿರಿಯೂರು ತಾಲ್ಲೂಕಿನ ಬಬ್ಬೂರು ಫಾರಂನಲ್ಲಿ ಈ ತಳಿಯ ಪ್ರಾಯೋಗಿಕ ಬೆಳೆಗಳನ್ನು ಬೆಳೆದು ರುಜುವಾತಾದ ನಂತರ ರೈತರಿಗೆ ಪೂರೈಸುತ್ತಿತ್ತು[224]. ಮೊದಲಿನ ಸ್ಥಳೀಯ ಹತ್ತಿ ಎಕರೆಗೆ 30 ಮಣದವರೆಗೆ ಇಳುವರಿ ಕೊಟ್ಟರೆ ಹೊಸ ತಳಿ ಕಾಂಬೋಡಿಯನ್ ಕಾಟನ್ ಎಕರೆಗೆ 40 ಮಣದಷ್ಟು ಹತ್ತಿಯ ಇಳುವರಿ ಕೊಡಲಾರಂಭಿಸಿತು. ಅಂದರೆ ಎಕರೆಗೆ ರೈತ 10 ಮಣದಷ್ಟು ಅಂದರೆ ಶೇ 25 ರಷ್ಟು ಹೆಚ್ಚು ಇಳುವರಿ ಗಳಿಸುವಂತಾದನು[225].

ನೆಲಗಡಲೆ ಮತ್ತು ಹತ್ತಿಗಳಂತೆ ಮೈಸೂರು ಸರ್ಕಾರವು ಕಬ್ಬಿನ ಬೆಳೆಯಲ್ಲೂ ಹೊಸ ತಳಿಗಳ ಪ್ರಯೋಗವನ್ನು ನಡೆಸಿ ಹೆಚ್ಚು ಇಳುವರಿಯನ್ನು, ಆದಾ ಯವನ್ನು ಪಡೆದುಕೊಳ್ಳುವಂತೆ ರೈತರಿಗೆ ಮಾರ್ಗದರ್ಶನ ನೀಡಿತು.

***ಕಬ್ಬಿನ ಬೆಳೆಯಲ್ಲಿ ಆಧುನೀಕರಣ***

ಮೈಸೂರು ರಾಜ್ಯದ ಮತ್ತೊಂದು ಪ್ರಮುಖ ವಾಣಿಜ್ಯ ಬೆಳೆಯೆಂದರೆ ಕಬ್ಬು. ದೇಶೀಯವಾಗಿ ಪ್ರಾಚೀನ ಕಾಲದಿಂದ ಕಬ್ಬನ್ನು ಬೆಳೆಯುತ್ತಿದ್ದ ಬಗ್ಗೆ ಆಧಾರಗಳು ತಿಳಿಸುತ್ತವೆ. ಇಲ್ಲಿನ ಪ್ರಮುಖ ತಳಿಗಳೆಂದರೆ ಚೇಣಿ ಅಥವಾ ಮರಕಬ್ಬು, ಪಟ್ಟಾಪಟ್ಟಿ ಮತ್ತು ರಸ್ದಾಲಿ. ಸರ್ಕಾರವು 1909 ರ ನಂತರ ಹೊಸ ತಳಿಗಳನ್ನು ಪರಿಚಯಿಸುವ ಬಗ್ಗೆ ಚಿಂತಿಸಿತು. ಆರಂಭದಲ್ಲಿ ಹೆಬ್ಬಾಳದ ಫಾರಂನಲ್ಲಿ ಅವುಗಳನ್ನು ಪ್ರಯೋಗಾತ್ಮಕವಾಗಿ ಬೆಳೆದು ನಂತರ ಆಯ್ದ ರೈತರ ಭೂಮಿಗಳಲ್ಲಿ

---

*224. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 87-89*

*225. ಅದೇ., ಪು. 90*

ಬೆಳೆಸಲಾಯಿತು. ಇದರಿಂದಾಗಿ ಹೊಸದಾಗಿ ಬಳಕೆಗೆ ಬಂದ ತಳಿಗಳೆಂದರೆ: ರೆಡ್ ಮೌರೀಷಿಯಸ್, ಜಾವಾ, ಬಿ.208, ಆಷಿ ಮೌರೀಷಿಯಸ್, ಎಲಿಫೆಂಟ್ ಕೇನ್, ಎಚ್.ಎಂ.544 ಮುಂತಾದವು. ಅವುಗಳಲ್ಲಿ ರೆಡ್ ಮೌರೀಷಿಯಸ್ ತಳಿಯನ್ನು ಮೈಸೂರಿನಲ್ಲಿ ಹೆಚ್ಚು ಪ್ರಮಾಣದಲ್ಲಿ ಬೆಳೆಯಲಾಯಿತು. ಈ ಕಬ್ಬಿನ ವೈಶಿಷ್ಟ್ಯವೆಂದರೆ ಹೆಚ್ಚು ಎತ್ತರ ಬೆಳೆಯುತ್ತಿತ್ತು ಹಾಗಾಗಿ ಎಕರೆವಾರು ಇಳುವರಿ ಹೆಚ್ಚು ಬರುತ್ತಿತ್ತು. ಕಬ್ಬಿನ ಸಿಪ್ಪೆ ಗಟ್ಟಿಯಾಗಿದ್ದು ಸಕ್ಕರೆಯ ಅಂಶ ಅತಿ ಹೆಚ್ಚಿರುತ್ತಿತ್ತು[226]. ಕಬ್ಬಿನ ಬೆಳೆಯಲ್ಲಿ ಬಳಸಿದ ಹೊಸ ತಳಿಗಳ ಪ್ರಯೋಗದಂತೆ ಸಕ್ಕರೆ ಉತ್ಪಾದನೆಯಲ್ಲೂ ಆಧುನಿಕ ತಾಂತ್ರಿಕತೆಯ ಯಂತ್ರಗಳನ್ನು ಅಳವಡಿಸಲು ಪ್ರೋತ್ಸಾಹಿಸಲಾಯಿತು.

ಕಬ್ಬಿನ ರಸವನ್ನು ಹಿಂಡಲು ಮೊದಲು ಮರದ ಗಾಣವನ್ನು ಬಳಸುತ್ತಿದ್ದರು. ಆದರೆ ಅದರಲ್ಲಿ ರಸವು ಬಹಳ ಉಳಿದು ಹೋಗುತ್ತಿತ್ತು. ಆದ್ದರಿಂದ ಕಬ್ಬನ್ನು ಅರೆಯಲು ಕಬ್ಬಿಣದ ಮಿಲ್ಲುಗಳನ್ನು ಜಾರಿಗೆ ತರಲಾಯಿತು. ಮೂರು ಪ್ರಮುಖ ರೋಲರ್ ಮಿಲ್ಲುಗಳು ಬಳಕೆಗೆ ಬಂದವು. ಅವುಗಳಲ್ಲಿ ಬೆಂಗಳೂರಿನ ಮೆಸರ್ಸ್; ರಿಕೀ ಅಂಡ್ ಕಂಪನಿ ನಿರ್ಮಿಸಿದ 'ರಿಕಿಮಿಲ್' ಬಹಳ ಕಾಲ ಪ್ರಸಿದ್ಧಿಯಾಗಿದ್ದು ವ್ಯಾಪಕವಾಗಿ ಬಳಕೆಯಲ್ಲಿತ್ತು. ಮತ್ತೊಂದು ಮದ್ರಾಸ್‌ನ ಮೆಸರ್ಸ್; ಗೋಪಾಲ್ ನಾಯಕರ್ ಅಂಡ್ ಸನ್ಸ್‌ರವರ ಮಿಲ್. ಈ ಕಂಪನಿಯ ಕಬ್ಬಿಣದ ಮಿಲ್‌ಗಳನ್ನು ಚಿಕ್ಕಬಳ್ಳಾಪುರ ಹಾಗೂ ಚನ್ನರಾಯಪಟ್ಟಣ, ಶ್ರೀರಂಗಪಟ್ಟಣದ ಬಳಿಯ ಕಿರಂಗೂರು ಮತ್ತು ಕುಣಿಗಲ್‌ಗಳ ಸ್ಥಳೀಯರೇ ಬಳಸುತ್ತಿದ್ದರು ಹಾಗೂ ಈ ಚರಕಿ ಯಂತ್ರಗಳು ಹಾಳಾದಲ್ಲಿ ಅವುಗಳ ಹಾಳಾದ ಅಂತಹ ರೋಲರ್‌ಗಳನ್ನು ರಿಪೇರಿ ಮಾಡುವ, ಮುಂತಾದ ಸಣ್ಣಪುಟ್ಟ ತೊಂದರೆಗಳನ್ನು ಸ್ಥಳೀಯರು ತಾವೇ ಸರಿಪಡಿಸಿಕೊಳ್ಳುತ್ತಿದ್ದರು. ಕೃಷಿ ಇಲಾಖೆಯು ಪಂಜಾಬಿನಲ್ಲಿ ರೂಪುಗೊಂಡ 'ನಹನ್' ಎಂಬ ಕಬ್ಬಿಣದಿಂದ ಮಾಡಿದ ಎತ್ತಿನಿಂದ ಎಳೆಯಲ್ಪಡುವ ಪವರ್ ಮಿಲ್ ಅನ್ನು ಜನರಲ್ಲಿ ಹೆಚ್ಚು ಪ್ರಚಾರ ಮಾಡಿತು. ಏಕೆಂದರೆ ಈ ಮಿಲ್ ಪೂರ್ಣವಾಗಿ ಕಬ್ಬಿನ ರಸವನ್ನು ಹಿಂಡುತ್ತಿತ್ತು[227].

ಕಬ್ಬಿನ ಬೆಳೆಯ ಆಧುನೀಕರಣದಲ್ಲಿ ಸರ್ಕಾರಿ ಫಾರಂಗಳು ಪ್ರಮುಖ ಪಾತ್ರ ವಹಿಸಿದವು. ಹೆಬ್ಬಾಳದ ಫಾರಂನಲ್ಲಿ ಹೊಸ ತಳಿಗಳನ್ನು ಬೆಳೆಯುವ, ಪರೀಕ್ಷಿಸುವ, ಅದಕ್ಕೆ ಬೇಕಾದ ಗೊಬ್ಬರ, ಔಷಧಿಗಳ ಬಳಕೆ, ಮಿಲ್‌ಗಳ ಸುಧಾರಣೆ, ಕಾಯಿಸುವ ವಿಧಾನಗಳಲ್ಲೂ ಸುಧಾರಣೆಗೊಳಿಸಲಾಯಿತು. ಬಬ್ಬೂರು ಫಾರಂನಲ್ಲಿ ವಿಸ್ತೃತ ಜಾಗದಲ್ಲಿ ವಾಣಿಜ್ಯ ಬೆಳೆಯಾಗಿ ಕಬ್ಬನ್ನು ಬೆಳೆಯುವುದು ಹೇಗೆ ಎಂಬ ಬಗ್ಗೆ ಸಂಶೋಧನೆ ನಡೆಸಲಾಗುತ್ತಿತ್ತು. ನಾಗೇನಹಳ್ಳಿ ಫಾರಂನಲ್ಲಿ ಕಬ್ಬಿನ ಬಿತ್ತನೆಯನ್ನು ವೃದ್ಧಿಸುವ, ಜನರಿಗೆ ಪೂರೈಸುವಂತಹ ಹೊಸ ಕಾರ್ಯಯೋಜನೆಯನ್ನು ಹಾಗೂ ಹೊಸ

---

*226. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 107*

*227. ಅದೇ., ಪು. 109-110*

ಮಿಲ್‌ಗಳನ್ನು ಮಾರಾಟ ಮಾಡುವುದು, ಹೊಸ ಗೊಬ್ಬರಗಳ ಬಗ್ಗೆ ಜನರಿಗೆ ಮನವರಿಕೆ ಮಾಡುವುದು ಇವೇ ಮುಂತಾದ ಚಟುವಟಿಕೆಗಳನ್ನು ಕೈಗೊಳ್ಳಲಾಗಿತ್ತು. ಒಟ್ಟಾರೆ ಸರ್ಕಾರ ಮತ್ತು ಅದರ ಪ್ರಾಯೋಗಿಕ ಫಾರಂಗಳು ಕಬ್ಬಿನ ಬೆಳೆಯ ಆಧುನೀಕರಣಕ್ಕೆ ಹೆಚ್ಚು ಶ್ರಮಿಸಿ ಯಶಸ್ವಿಯಾದವು[228].

**ಆಲೂಗೆಡ್ಡೆ**

ಮೈಸೂರು ರಾಜ್ಯದಲ್ಲಿ ಕೆಲವು ಹೊಸ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸಲಾಯಿತು. ಅವುಗಳಲ್ಲಿ ಆಲೂಗೆಡ್ಡೆಯೂ ಒಂದು. ಇದನ್ನು ಬೆಂಗಳೂರಿನ ಸುತ್ತಮುತ್ತ ಹೆಚ್ಚು ಬೆಳೆಯಲಾಗುತ್ತಿತ್ತು. ಅದಕ್ಕೆ ಕಾರಣ ಬೆಂಗಳೂರು ನಗರದ ಪಾಶ್ಚಿಮಾತ್ಯ ಮೂಲದ ಜನರು ಮತ್ತು ನಗರದಲ್ಲಿ ಹೆಚ್ಚುತ್ತಿದ್ದ ಜನಸಂಖ್ಯೆ. ಇಲ್ಲಿ ಬೆಳೆಯುತ್ತಿದ್ದ ಪ್ರಮುಖ ತಳಿಗಳೆಂದರೆ 'ಕಂಟ್ರಿ' ಮತ್ತು 'ರಿಕೆಟ್ಸ್'. ಕಂಟ್ರಿ ತಳಿಯು ಗುಂಡಗಿದ್ದು ಒಳಗೆ ಹಳದಿ ಗೆಡ್ಡೆಯನ್ನು ಹೊಂದಿರುತ್ತಿತ್ತು. ರಿಕೆಟ್ಸ್ ತಳಿ ಅಂಡಾಕಾರದಲ್ಲಿದ್ದು ಒಳಗೆ ಬಿಳಿ ಗೆಡ್ಡೆಯನ್ನು ಹೊಂದಿರುತ್ತಿತ್ತು. ಆಲೂಗೆಡ್ಡೆಯ ಬಿತ್ತನೆ ಬೀಜವನ್ನು ಇಟಲಿಯಿಂದ ಮೊದಲು ಬೊಂಬಾಯಿಗೆ ತರಿಸಿ ಪೂನಾ ಭಾಗದಲ್ಲಿ ಮೊದಲ ಬೆಳೆಯಾಗಿ ಬೆಳೆದು ನಂತರ ಬೆಳಗಾಂ ಮತ್ತು ಧಾರವಾಡ ಭಾಗದಲ್ಲಿ ಎರಡನೇ ಬೆಳೆಯಾಗಿ ಬೆಳೆದು ನಂತರ ಮೂರನೇ ಬೆಳೆಯಾಗಿ ಮೈಸೂರು ಪ್ರದೇಶದಲ್ಲಿ ಬೆಳೆಯಲಾಗುತ್ತಿತ್ತು. ಮೈಸೂರಿನ ಕೆಲಭಾಗಗಳಲ್ಲಿ ನೇರವಾಗಿ ಇಟಲಿಯಿಂದಲೇ ಆಲೂಗೆಡ್ಡೆಯ ಬಿತ್ತನೆಯನ್ನು ತರಿಸಿ ಬೆಳೆಯಲಾಗುತ್ತಿತ್ತು. ಎಕರೆಗೆ 300 ರಿಂದ 400 ಮಣ ಆಲೂಗೆಡ್ಡೆ ಬೆಳೆಯಲಾಗುತ್ತಿತ್ತು. ಮೈಸೂರಿನ ಬಹುಪಾಲು ಆಲೂಗೆಡ್ಡೆಯನ್ನು ಮದ್ರಾಸ್ ಮತ್ತು ಸಿಲೋನ್‌ಗಳಿಗೆ ರಫ್ತು ಮಾಡಲಾಗುತ್ತಿತ್ತು[229].

***ಕಾಫಿ ಬೆಳೆಯಲ್ಲಿ ಸುಧಾರಣೆ***

ಮೈಸೂರು ರಾಜ್ಯವು ಕಾಫಿ ಉತ್ಪಾದನೆಯಲ್ಲಿ 19ನೇ ಶತಮಾನದಿಂದಲೇ ತೊಡಗಿಸಿಕೊಂಡಿತ್ತು. ಮೈಸೂರಿನ ಕಾಫಿ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಉತ್ತಮ ದರ್ಜೆಯದೆಂಬ ಸ್ಥಾನವನ್ನು ಗಳಿಸಿತ್ತು. ಭಾರತದ ಒಟ್ಟು ಕಾಫಿ ಉತ್ಪಾದನೆಯಲ್ಲಿ ಮೈಸೂರು ಅರ್ಧದಷ್ಟು ಉತ್ಪಾದಿಸುತ್ತಿತ್ತು. ಕಾಫಿ ಪ್ಲಾಂಟೇಷನ್ ಚಟುವಟಿಕೆಗಳಲ್ಲಿ ಹೆಚ್ಚಾಗಿ ಯೂರೋಪಿಯನ್ನರೇ ತೊಡಗಿಕೊಂಡಿದ್ದರು. 1920 ರ ದಶಕದ ನಂತರ ಮೈಸೂರಿನ ಕಾಫಿಗೆ ಜಾವಾದ ಕಾಫಿ ಅಂತರ್‌ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪ್ರತಿಸ್ಪರ್ಧಿಯಾಗತೊಡಗಿತು. ನಾಲ್ವಡಿಯವರು ಅಂತಹ ಸಂದರ್ಭವನ್ನು ಬಳಸಿಕೊಂಡು ಜಾವಾ ಕಾಫಿ ಬೆಳೆಯಲ್ಲಿ ಅಭಿವೃದ್ಧಿಗೊಳ್ಳಲು ಅದು ಅಳವಡಿಸಿಕೊಂಡ ಆಧುನಿಕ ವಿಧಾನಗಳು ಹಾಗೂ

---

*228. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 112*

*229. ಅದೇ., ಪು. 129-130*

ನಡೆಸಿದ ಪ್ರಯೋಗಗಳೇ ಕಾರಣವೆಂದೂ ಹಾಗೆಯೇ ಮೈಸೂರಿನ ಕಾಫಿ ಹಿಂದುಳಿಯಲು ಅದು ಇನ್ನೂ ಹಳೆಯ ಸಾಂಪ್ರದಾಯಿಕ ವಿಧಾನಗಳನ್ನು ಅನುಸರಿಸುತ್ತಿರುವುದೇ ಕಾರಣ ಎಂಬುದಾಗಿ ಯುರೋಪಿಯನ್ ಪ್ಲಾಂಟರುಗಳಿಗೆ ಬಾಳೆಹೊನ್ನೂರು ಪ್ರಯೋಗಾತ್ಮಕ ಕೇಂದ್ರದ ಪ್ರಯೋಗಾಲಯವನ್ನು ಉದ್ಘಾಟಿಸುತ್ತಾ ಹೇಳಿದರು. ಈ ಮಾತುಗಳು ಅವರು ಆಧುನಿಕತೆಗೆ, ಪ್ರಯೋಗಶೀಲತೆಗೆ ಕೊಡುತ್ತಿದ್ದ ಪ್ರಾಧಾನ್ಯತೆಯನ್ನು ಸೂಚಿಸುತ್ತವೆ. "ಮೈಸೂರು ಕಾಫಿಯು ಅತ್ಯುತ್ತಮ ದರ್ಜೆಯ ವಸ್ತುವೆಂಬ ಸತ್ಯ ನಮ್ಮೆಲ್ಲರ ಅದೃಷ್ಟ. ನಿಕೃಷ್ಟ ದರ್ಜೆಯವು ತಮ್ಮ ಸ್ಥಾನವನ್ನು ಕಳೆದುಕೊಳ್ಳುತ್ತಿರುವಾಗ ಮೈಸೂರು ಕಾಫಿ ಮಾರುಕಟ್ಟೆಯಲ್ಲಿ ಭದ್ರವಾದ ಸ್ಥಾನದಲ್ಲಿ ಮುಂದುವರಿಯುತ್ತಿದೆ. ಆದರೆ ಎಂದಿಗಿಂಥ ಇಂದು ಪೈಪೋಟಿ ಎಲ್ಲೆಡೆ ಇದೆ. ಡಾ. ಕೋಲ್‌ಮನ್ ವರದಿಯಲ್ಲಿ ನಮ್ಮ ಪ್ರಧಾನ ಪ್ರತಿಸ್ಪರ್ಧಿ ದೇಶವಾದ ಜಾವಾದ ಪರಿಸ್ಥಿತಿಯ ಬಗ್ಗೆ ನೀಡಿರುವ ಅಂಶಗಳು ನಮ್ಮಲ್ಲಿ ಅದರ ಬಗ್ಗೆ ಅಭಿಮಾನ ಮೂಡಿಸಿವೆ. ಅವರು ಉಲ್ಲೇಖಿಸಿರುವಂತೆ ಆ ದೇಶದ ಪ್ಲಾಂಟರುಗಳು ವರ್ಷಕ್ಕೆ 30 ಲಕ್ಷ ರೂಪಾಯಿಗಳಿಗೆ ಕಡಿಮೆಯಿಲ್ಲದಷ್ಟು ಹಣವನ್ನು ಸಂಗ್ರಹಿಸಿ ಅವರ ಉತ್ಪಾದನೆಯ ಹಲವು ಅಭಿವೃದ್ಧಿ ವಿಧಾನಗಳ ಬಗ್ಗೆ ಪ್ರಯೋಗಕ್ಕಾಗಿ ಖರ್ಚು ಮಾಡುತ್ತಾರೆ, ಈ ಅಂಶದಿಂದ ತಿಳಿದು ಬರುವುದೆಂದರೆ ನಮ್ಮ ಪರಂಪರಾನುಗತವಾದ ಹಳೆಯ ವಿಧಾನಗಳಲ್ಲಿ ಕ್ರಾಂತಿಕಾರಕವಾದ ಬದಲಾವಣೆಗಳನ್ನು ತರಲು ಸಿದ್ಧರಾಗಬೇಕು ಮತ್ತು ನಿಸರ್ಗವೇ ನೀಡಿರುವ ಮುನ್ನಡೆಯನ್ನು ಮುಂದುವರೆಸಿಕೊಂಡು ಹೋಗಬೇಕು"[230] ಎಂದರಲ್ಲದೆ ಆ ನಿಟ್ಟಿನಲ್ಲಿ ಅನೇಕ ಕ್ರಮಗಳನ್ನು ಕೈಗೊಂಡರು. ಹೀಗೆ ನಾಲ್ವಡಿಯವರ ಸರ್ಕಾರ ಕೈಗೊಂಡ ಕಾಫಿ ಬೆಳೆಯ ರೋಗಗಳ ಬಗೆಗಿನ ಸಂಶೋಧನೆ ಮತ್ತು ಪ್ರೋತ್ಸಾಹಕಾರಿ ಕ್ರಮಗಳಿಂದಾಗಿ ಕಾಫಿ ಉದ್ಯಮ ಮೈಸೂರಿನಲ್ಲಿ ಮತ್ತೆ ದೃಢವಾಗಿ ಬೆಳೆಯಲು, ಅಂತರ್ ರಾಷ್ಟ್ರೀಯ ಸ್ಪರ್ಧೆಯನ್ನು ಎದುರಿಸಿ ನಿಲ್ಲಲು ಸಾಧ್ಯವಾಯಿತು.

### *ರೇಷ್ಮೆ ಕೃಷಿಯಲ್ಲಿ ಆಧುನಿಕತೆ*

ರೇಷ್ಮೆ ಬೆಳೆಯು ಮೈಸೂರಿನ ಒಂದು ಪ್ರಮುಖ ವಾಣಿಜ್ಯ ಬೆಳೆ ಮತ್ತು ರೇಷ್ಮೆ ಕೈಗಾರಿಕೆಯ ಮೂಲ ಕಚ್ಚಾವಸ್ತು. ಈ ಬೆಳೆಗೆ ಟಿಪ್ಪುವಿನ ಕಾಲದಲ್ಲಿ ಅತೀವ ಪ್ರೋತ್ಸಾಹ ದೊರೆತು ಮೈಸೂರು ರೇಷ್ಮೆಯು ಪ್ರಪಂಚದಲ್ಲೇ ಹೆಸರಾಗಿತ್ತು. ಚೀನಾ, ಫಿಲಿಫೈನ್ಸ್, ಸೇಯಿಂಟ್ ಹೆಲೆನಾ, ಕಿಷಮ್ ದ್ವೀಪ ಮುಂತಾದೆಡೆಗಳಿಂದ ಬಂದ ವಿವಿಧ ತಳಿಗಳನ್ನು ಬಳಸಿ ಅಭಿವೃದ್ಧಿಗೊಳಿಸಲಾಯಿತು. ಆದರೆ 1900 ರ ನಂತರ ರೋಗಪೀಡಿತ ಮೊಟ್ಟೆಗಳಿಂದಾಗಿ ರೇಷ್ಮೆ ಕೃಷಿ ಇಳಿಮುಖಗೊಂಡಿತು. ಇದರಿಂದ ರಾಜ್ಯಕ್ಕೆ ವಿದೇಶಿ ವಿನಿಮಯದ ಮೂಲಕ ಬರುತ್ತಿದ್ದ ಆದಾಯ ತಪ್ಪಿದಂತಾಗಿ

---

*230. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 319-320*

ಅದನ್ನಾಶ್ರಯಿಕೊಂಡಿದ್ದವರು ನಿರುದ್ಯೋಗಿಗಳಾದರು. ಈ ನಿಟ್ಟಿನಲ್ಲಿ ಕೃಷಿ ಇಲಾಖೆಯ ಮೂಲಕ ರೇಷ್ಮೆ ಬೆಳೆಯ ಅಭಿವೃದ್ಧಿಗೆ ಕ್ರಮಗಳನ್ನು ಕೈಗೊಳ್ಳಲಾಯಿತು. ರೇಷ್ಮೆ ಕೃಷಿ ತಜ್ಞರಾದ ಸೀನ್ಯರ್ ವಾಷಿಂಗ್‌ಟನ್ ಮರೀ ಎಂಬ ಇಟಲಿಯ ತಜ್ಞರನ್ನು ರಾಜ್ಯಕ್ಕೆ ಕರೆಸಲಾಯಿತು[231]. ಅವರು ಚನ್ನಪಟ್ಟಣದ ರೇಷ್ಮೆ ಹುಳು ಸಾಕಣೆ ತರಭೇತಿ ಸಂಸ್ಥೆಯ ನೇತೃತ್ವವನ್ನು ವಹಿಸಿಕೊಂಡು ವೈಜ್ಞಾನಿಕವಾಗಿ ರೇಷ್ಮೆ ಬೆಳೆಯನ್ನು ಅಭಿವೃದ್ಧಿಗೊಳಿಸಲು ಕ್ರಮ ಕೈಗೊಂಡರು. ಮೊದಲನೆಯದಾಗಿ ರೋಗಪೀಡಿತ ಮೊಟ್ಟೆಗಳ ನಿವಾರಣೆಗಾಗಿ ಸುಧಾರಿತ ತಳಿಗಳನ್ನು ಅಭಿವೃದ್ಧಿಗೊಳಿಸಿ ರೋಗಗಳ ಸೋಂಕು ತಗಲುವುದನ್ನು ಮಿತಗೊಳಿಸಿದರು[232]. ಹೊಸ ತಳಿಗಳನ್ನು ಬೆಳೆಯಲು ರೈತರಿಗೆ ಉತ್ತೇಜನ ನೀಡಲಾಯಿತು. ಜನರಿಗೆ ರೇಷ್ಮೆ ಬೆಳೆ ಬಗ್ಗೆ ತಿಳುವಳಿಕೆ ನೀಡಲು ಜಪಾನಿನಿಂದ ಇಬ್ಬರು ತಜ್ಞರನ್ನು ಕರೆಸಲಾಯಿತು. ಅವರಲ್ಲಿ ಒಬ್ಬಳು ಮಹಿಳೆಯಾಗಿದ್ದು ಪರ್ದಾ ಧರಿಸುತ್ತಿದ್ದ ಮತ್ತು ರೇಷ್ಮೆ ಚಟುವಟಿಕೆಯಲ್ಲಿ ನಿರತರಾಗಿದ್ದ ಮಹಿಳೆಯರಿಗೆ ತರಭೇತಿ ನೀಡಿದಳು[233]. ನಾಲ್ವಡಿ ಸರ್ಕಾರವು 1916 ರಲ್ಲಿ ಪ್ರತ್ಯೇಕ ರೇಷ್ಮೆ ಇಲಾಖೆಯನ್ನು ರಚಿಸಿ ರೇಷ್ಮೆ ಕೃಷಿಯ ಬೆಳವಣಿಗೆಗೆ ಗಮನ ನೀಡಿತು. ಈ ಇಲಾಖೆಯು ರೇಷ್ಮೆ ಹುಳು ಸಾಕಣೆ ಮತ್ತು ನೂಲು ಸುತ್ತುವುದರಲ್ಲಿ ಸುಧಾರಣೆ ತಂದಿತು. 1914 ರಿಂದಲೇ ಚನ್ನಪಟ್ಟಣದಲ್ಲಿ ರೇಷ್ಮೆ ನೂಲು ಸುತ್ತುವ ಕೇಂದ್ರವನ್ನು ಆರಂಭಿಸಲಾಯಿತು. ರೇಷ್ಮೆಯ ಬಗ್ಗೆ ಪ್ರಯೋಗ ಮತ್ತು ರಾಜ್ಯಾದಾದ್ಯಂತ ಪ್ರದರ್ಶನಗಳನ್ನು ಇಲಾಖೆ ನಡೆಸುವಂತಾಯಿತು. ರೇಷ್ಮೆ ಹುಳು ಸಾಕಣೆಯಲ್ಲಿ ತೊಡಗುವವರಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ ಸೌಲಭ್ಯ, ಭೂಮಿ ನೀಡುವುದು, ರೇಷ್ಮೆ ಕೃಷಿ ಶಾಲೆಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ ಮಾಸಿಕ 10 ರಿಂದ 20 ರೂಪಾಯಿಗಳ ವಿದ್ಯಾರ್ಥಿ ವೇತನ ನೀಡುವ ಮುಂತಾದ ಪ್ರೋತ್ಸಾಹಕಾರಿ ಕ್ರಮಗಳನ್ನು ಸರ್ಕಾರ ಕೈಗೊಂಡಿತು. ರೇಷ್ಮೆಬೆಳೆಯನ್ನು ರಾಜ್ಯದಾದ್ಯಂತ ವಿಸ್ತರಿಸಲು ಬೆಂಗಳೂರು, ಮೈಸೂರು, ಕೋಲಾರ, ಮದ್ದೂರು, ತಿರುಮಕೂಡಲು, ಕುಣಿಗಲ್, ಮದ್ದೂರು, ದೇವನಹಳ್ಳಿ, ಹಾಸನ, ಚಿಕ್ಕಮಗಳೂರು ಮುಂತಾದೆಡೆ ಪ್ರಾಯೋಗಿಕ ರೇಷ್ಮೆ ಕೃಷಿ ಫಾರ್ಮ್‌ಗಳನ್ನು ಸ್ಥಾಪಿಸಲಾಯಿತು[234]. ಚನ್ನಪಟ್ಟಣದಲ್ಲಿ ರೇಷ್ಮೆ ಹುಳು ಸಾಕಣೆಶಾಲೆ ಮತ್ತು ಮೈಸೂರಿನಲ್ಲಿ ಕೇಂದ್ರೀಯ ರೇಷ್ಮೆ ಕೃಷಿ ಶಾಲೆಗಳನ್ನು ತೆರೆಯಲಾಯಿತು. ಸ್ಥಳೀಯರು ರೇಷ್ಮೆ ಕೃಷಿ ಹಾಗೂ ರೇಷ್ಮೆ ನೂಲು ಸುತ್ತುವುದರಲ್ಲಿ ಪ್ರಾವೀಣ್ಯತೆ ಪಡೆಯುವಂತೆ ವಿದೇಶಿ ತಜ್ಞರಿಂದ ತರಭೇತಿಯನ್ನು ನೀಡಿಸಲಾಯಿತು. ಆದರೂ 1930 ರ ದಶಕದಲ್ಲಿ ಜಪಾನ್ ಮುಂತಾದ ದೇಶಗಳಿಂದ ಬಂದ ಮಿತಿಮೀರಿದ ಪೈಪೋಟಿಯನ್ನು ಎದುರಿಸಲಾರದೆ ಮೈಸೂರಿನ ರೇಷ್ಮೆ ಉದ್ಯಮ ಜರ್ಝರಿತವಾದಾಗ ಸರ್ಕಾರವು ಹಿಪ್ಪುನೇರಳೆ ವ್ಯವಸಾಯಕ್ಕೆ ಭೂಮಿ ನೀಡುವುದು, ಕಡಿಮೆ ಬಡ್ಡಿಯಲ್ಲಿ, ಸಾಲ ಕೊಡುವುದು, ಉತ್ತಮ ತಳಿಯ ರೇಷ್ಮೆ ಕಡ್ಡಿಗಳನ್ನು ರೈತರಿಗೆ ಉಚಿತವಾಗಿ ಪೂರೈಸುವುದು, ರೇಷ್ಮೆ ಕೋಠಿಗಳಲ್ಲಿ

231. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್ - ಅಗ್ರಿಕಲ್ಚರ್ ಡಿಪಾರ್ಟ್‌ಮೆಂಟ್ ಪು. 168.*

232. *ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ - 1913-14, ಪು. 21*

233. *ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 153*

234. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್ - ಅಗ್ರಿಕಲ್ಚರ್ ಡಿಪಾರ್ಟ್‌ಮೆಂಟ್, ಪು. 183*

ಆಧುನಿಕ ರೀತಿಯ ಯಂತ್ರ ಸಲಕರಣೆಗಳ ಸಹಾಯದಿಂದ ಮಿಶ್ರ ತಳಿಯ ಮತ್ತು ರೋಗ ರಹಿತವಾದ ರೇಷ್ಮೆ ಹುಳುಗಳ ಮೊಟ್ಟೆಗಳನ್ನು ಉತ್ಪಾದಿಸಿ ರೈತರಿಗೆ ಒದಗಿಸುವುದು ಮುಂತಾದ ಸೌಕರ್ಯಗಳನ್ನು ಒದಗಿಸಿದುದರ ಪರಿಣಾಮವಾಗಿ ರೇಷ್ಮೆ ಉದ್ಯಮ ಚೇತರಿಸಿಕೊಂಡಿತು[235]. ಈ ಉದ್ಯಮವು ಎರಡು ಲಕ್ಷ ಕುಟುಂಬಗಳಿಗೆ ಉದ್ಯೋಗ ಒದಗಿಸಿತು. ರೇಷ್ಮೆ ಗೂಡುಗಳ ನೂಲನ್ನು ಚರಕವೆಂಬ ರಾಟೆಯಿಂದ ಬಿಚ್ಚುವ ವಿಧಾನಕ್ಕೆ ಬದಲಾಗಿ ಫಿಲೇಚರ್ ಎಂಬ ಯಂತ್ರಸಾಧನದಿಂದ ಉತ್ತಮ ರೇಷ್ಮೆ ನೂಲನ್ನು ತೆಗೆಯುವ ವಿಧಾನವನ್ನು ಪ್ರಚಾರಕ್ಕೆ ತರಲಾಯಿತು. ಮೈಸೂರಿನ ರೇಷ್ಮೆ ಕಾರ್ಖಾನೆಯಲ್ಲಿ ನೇಯ್ಗೆಯಾಗಿ ಸಿದ್ಧಗೊಂಡ ಸನಗುಗಳು ಫ್ರಾನ್ಸ್ ಮುಂತಾದ ದೇಶಗಳಿಂದ ಆಮದಾಗಿ ಬರುತ್ತಿದ್ದ ರೇಷ್ಮೆ ಸನಗುಗಳಿಗಿಂತ ಶ್ರೇಷ್ಠ ದರ್ಜೆಯದೆಂಬ ಹೆಗ್ಗಳಿಕೆ ಹೊಂದಿತು. ಮೈಸೂರಿನ ತಿರುಮಕೊಡಲು ನರಸೀಪುರದಲ್ಲಿನ ಫಿಲೇಚರ್ ಕಾರ್ಖಾನೆಯಿಂದ ತಯಾರಾದ ರೇಷ್ಮೆಯ ನೂಲನ್ನು ಆ ಕಾಲದಲ್ಲಿ ಶುದ್ಧ ರೇಷ್ಮೆಯನ್ನು ಮಾತ್ರವೇ ಕೊಳ್ಳುತ್ತಿದ್ದ ಆಸ್ಟ್ರೇಲಿಯಾ ಖಂಡವೂ ಸಹ ಒಪ್ಪಿಕೊಳ್ಳುತ್ತಿತ್ತೆಂಬುದು ಮೈಸೂರಿನ ರೇಷ್ಮೆಯ ನೂಲಿನ ಶ್ರೇಷ್ಠತೆಯನ್ನು ಸಾರುತ್ತದೆ[236]. ಹೀಗೆ ನಾಲ್ವಡಿಯವರು ಆಧುನಿಕವಾದ ತಾಂತ್ರಿಕತೆಯನ್ನು, ವೈಜ್ಞಾನಿಕತೆಯನ್ನು ರೇಷ್ಮೆ ಉದ್ಯಮದಲ್ಲಿ ಅಳವಡಿಸುವ ಮೂಲಕ ಕುಂಠಿತಗೊಂಡಿದ್ದ ಉದ್ಯಮವನ್ನು ಸದೃಢಗೊಳಿಸಿದ್ದಲ್ಲದೆ ಪ್ರಪಂಚದ ಮಟ್ಟದಲ್ಲೇ ಮೈಸೂರಿನ ರೇಷ್ಮೆಗೆ ಹೆಸರೂ ಮತ್ತು ಮಾರುಕಟ್ಟೆಯನ್ನು ರೂಪಿಸಿದರು. ಇದರಿಂದ ಮೈಸೂರು ರೇಷ್ಮೆಯು ವಿಶ್ವದಾದ್ಯಂತ ತನ್ನದೇ ಪ್ರಖ್ಯಾತಿಯನ್ನು ಪಡೆದು ಭಾರತೀಯರನ್ನು, ವಿದೇಶಿಯರನ್ನು ಆಕರ್ಷಿಸುತ್ತಾ ಬಂದಿರುವುದನ್ನು ಮನಗಾಣಬಹುದು.

***ತರಕಾರಿ, ಹಣ್ಣು, ಹೂ ಕೃಷಿಯಲ್ಲಿ ಆಧುನಿಕತೆ***

ನಾಲ್ವಡಿಯವರು ಹೊಸ ತರಕಾರಿ, ಹಣ್ಣುಗಳು ಮತ್ತು ಹೂಗಳನ್ನು ಬೆಳೆಯುವಂತೆ, ಕೊಳ್ಳುವಂತೆ ತಮ್ಮ ಭಾಷಣಗಳ ಮೂಲಕ ಪ್ರೋತ್ಸಾಹಿಸಿದರು. ಮೈಸೂರಿನಲ್ಲಿ ನಡೆದ ಪುಷ್ಪಪ್ರದರ್ಶನದಲ್ಲಿ ಮಾತನಾಡುತ್ತಾ "ಈ ಪುಷ್ಪಪ್ರದರ್ಶನ ಕಾರ್ಯಕ್ರಮದಿಂದ ಸ್ಫೂರ್ತಿಯಾಗಿ ಇಲ್ಲಿನ ಮನೆಯ ಮಾಲೀಕರು ತಮ್ಮ ತಮ್ಮ ಮನೆಗಳನ್ನು ಸುಂದರಗೊಳಿಸಲಿ, ಖಾಸಗಿ ಉದ್ಯಾನವನಗಳನ್ನು ರೂಪಿಸುವಂತಾಗಲಿ. ವಿಷಾದದ ಸಂಗತಿಯೆಂದರೆ ಈ ಮಾರುಕಟ್ಟೆಯಲ್ಲಿ ಯಾರೊಬ್ಬರೂ ಇಂಗ್ಲಿಷ್ ತರಕಾರಿಗಳನ್ನು ಖರೀದಿಸದಿದ್ದುದು, ಆದರೆ ಬೆಂಗಳೂರಿನಲ್ಲಿ ಬಹು ಸಂಖ್ಯೆಯ ಜನರು ಅಂತಹ ತರಕಾರಿಗಳನ್ನು ಬೆಳೆದು, ಮಾರಿ ನಿಗಧಿಯುತವಾಗಿ ಲಾಭ ಮಾಡಿಕೊಳ್ಳುತ್ತಿದ್ದಾರೆ. ಈ ನಗರದ ಜನತೆ ಬೆಂಗಳೂರಿನಂತಾಗಲು ಅಥವಾ ಅದನ್ನು ಮೀರಿಸುವಂತಾಗಲೆಂದು ಮತ್ತು ಮೈಸೂರನ್ನು ಉದ್ಯಾನವನ ನಗರಿಯನ್ನಾಗಿ

---

235. *ವೆಂಕಟರಾಮಯ್ಯ ಸಿ. ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು.* 323

236. *ಅದೇ., ಪು.* 324

ಪರಿವರ್ತಿಸಲೆಂದು ಮನವಿ ಮಾಡಿಕೊಳ್ಳುತ್ತೇನೆ"[237] ಎಂದರು. ಸರ್ಕಾರ ಮತ್ತು ಅದರ ಇಲಾಖೆಗಳು ಎಷ್ಟೇ ಪ್ರಗತಿಪರವಾಗಿದ್ದು ಕೃಷಿ ಸುಧಾರಣಾ ಕ್ರಮಗಳನ್ನು ಕೈಗೊಂಡು ಬೆಳೆಸಲು ಪ್ರಯತ್ನಿಸಿದರೂ ಸಹ ಜನತೆ ಅದನ್ನು ಅಳವಡಿಸಲು ಒಪ್ಪದಿದ್ದರೆ ಅದು ವೈಫಲ್ಯತೆಯಲ್ಲಿ ಕೊನೆಗೊಳ್ಳುತ್ತದೆ. ಒಂದು ಆಧುನಿಕ ಯೋಜನೆ ಅಥವಾ ವಿಧಾನವನ್ನು ಸಮಾಜವು ಸ್ವೀಕರಿಸುವಂತೆ ಮಾಡುವ ಶಕ್ತಿ ಆ ರಾಜ್ಯದ ರಾಜಕೀಯ ನಾಯಕನಿಗೆ ಇರುತ್ತದೆ. ಅಂದರೆ ಪ್ರಾಚೀನ ಸೂಕ್ತಿಯಂತೆ 'ಯಥಾರಾಜ ತಥಾ ಪ್ರಜಾ', ರಾಜನಂತೆ ಪ್ರಜೆಗಳು. ರಾಜನು ಆ ಪ್ರದೇಶದ ಜನರಿಗೆ ರಾಜಕೀಯ ನಾಯಕ ಮಾತ್ರವಲ್ಲ ಅವರ ಸಂಸ್ಕೃತಿಯ ಸಂಕೇತವಾಗಿರುತ್ತಾನೆ. ಆಧುನಿಕ ಅಂಶಗಳನ್ನು ನಿರಾಕರಿಸುವ ಸಂಪ್ರದಾಯ ಸಮಾಜವು ಸಾಂಸ್ಕೃತಿಕ ಹಿನ್ನಲೆಯಲ್ಲಿ ಅದನ್ನು ಚಿಂತಿಸಿರುತ್ತದೆ. ಆದರೆ ತಮ್ಮ ಸಾಂಸ್ಕೃತಿಕ ಸಂಕೇತವಾದ ವ್ಯಕ್ತಿ ನಾಲ್ವಡಿಯವರು ಅದನ್ನು ಒಪ್ಪಿಕೊಳ್ಳುವಂತೆ ಮನವಿ ಮಾಡಿದಾಗ ಅದನ್ನು ಒಪ್ಪಿಕೊಳ್ಳುವುದನ್ನು ಆ ಮೂಲಕ ಎಲ್ಲ ಕ್ಷೇತ್ರಗಳಲ್ಲೂ ಆಧುನಿಕತೆಗೆ ತೆರೆದುಕೊಳ್ಳುವುದನ್ನು ಕಾಣಬಹುದು. ಹೀಗೆ ನಾಲ್ವಡಿಯವರು ರೂಪಿಸಿಕೊಂಡಿದ್ದ ಪ್ರಭಾವಶಾಲಿ ವ್ಯಕ್ತಿತ್ವವು ಜನರನ್ನು ಪರಿವರ್ತಿಸುವ, ಆಧುನಿಕ ದಾರಿಯಲ್ಲಿ ಕೊಂಡೊಯ್ಯುವ ಆಕರ್ಷಣೀಯ ಶಕ್ತಿ ಹೊಂದಿತ್ತು. ಹಾಗಾಗಿ ಅವರ ಭಾಷಣಗಳೆಂದರೆ ಸಮಾಜವನ್ನು ಹೊಸ ಪರಿಸ್ಥಿತಿಗೆ ಕೊಂಡೊಯ್ಯುವ ಮಾರ್ಗದರ್ಶಿ ಸೂಚಿಗಳಂತೆಯೂ ಕೆಲಸ ಮಾಡಿದವೆಂದು ಹೇಳಬಹುದು. ನಾಲ್ವಡಿಯವರ ಕಾಲದಲ್ಲಿ ತೋಟಗಾರಿಕೆ ಮತ್ತು ಉದ್ಯಾನವನಗಳ ನಿರ್ವಹಣೆಗೆಂದು ಒಂದು ಪ್ರತ್ಯೇಕ ನಿರ್ದೇಶನ ವಿಭಾಗವು ಸ್ಥಾಪನೆಗೊಂಡಿತು. ಈ ವಿಭಾಗವು ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಳ್ಳುತ್ತಾ ಬಂದು ಕಾಲಕ್ರಮೇಣ ತೋಟಗಾರಿಕೆ ಒಂದು ವೃತ್ತಿಯಾಗಿ ಬೆಳೆಯಲು ಸಾಧ್ಯವಾಯಿತು. 1914ರಲ್ಲಿ ಈ ಇಲಾಖೆಯನ್ನು "ಅರಮನೆ ತೋಟಗಳು ಮತ್ತು ಉದ್ಯಾನಗಳು" ಎಂದು ಕರೆಯಲಾಯಿತು. ಅದರ ಮುಖ್ಯನನ್ನು 'ಮೊಖ್ತೇಸರ' ಎನ್ನುತ್ತಿದ್ದರು. ಆಗ ಮೈಸೂರು, ಶ್ರೀರಂಗಪಟ್ಟಣ, ನಂಜನಗೂಡು, ಚಾಮರಾಜನಗರ, ಎಚ್.ಡಿ.ಕೋಟೆ, ಹುಣಸೂರು, ಮಳವಳ್ಳಿ, ಕೆ.ಆರ್.ಪೇಟೆ, ಹೊಳೆನರಸೀಪುರ ಮತ್ತು ಅರಕಲಗೂಡು ಮುಂತಾದ ಕಡೆ ಈ ಇಲಾಖೆ ವಿಸ್ತರಣೆ ಪಡೆಯಿತು. ಈ ವಿಸ್ತರಣೆಯ ಹಿನ್ನೆಲೆಯಲ್ಲಿ ನಾಲ್ವಡಿಯವರ ಪಾತ್ರವನ್ನು ಪ್ರಧಾನವಾಗಿ ಗುರುತಿಸಬಹುದು. ಇವರ ಪ್ರಯತ್ನಗಳ ಪರಿಣಾಮವಾಗಿ ಒಂದೇ ದಶಕದಲ್ಲಿ ಅಂದರೆ 1924ರ ವೇಳೆಗೆ ಸೋಯಾ ಅವರೆ, ಟೊಮೊಟೊ, ಗೆಡ್ಡೆಕೋಸು, ಹೂಕೋಸು, ಕ್ನಾಲ್-ಖೋಲ್, ಸಿಹಿ ಆಲೂಗೆಡ್ಡೆ, ಚೌಚೌ ಮುಂತಾದ ಇಂಗ್ಲಿಷ್ ಮತ್ತು ಭಾರತದ ತರಕಾರಿಗಳು ಮೈಸೂರು ಮತ್ತು ಬೆಂಗಳೂರು ನಗರಗಳ ಸುತ್ತ ಜನರು ಬೆಳೆಯಲು ಮತ್ತು ಬಳಸಲು ಪ್ರಾರಂಭಿಸಿದ'ರು[238]. ಮೈಸೂರು ಮತ್ತು ಬೆಂಗಳೂರಿನ ಅರಮನೆಯ

---

*237. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 118-119*

*238. ಹಯವದನ ರಾವ್ ಸಿ. (ಸಂ)., ಮೈಸೂರ್ ಗೆಜೆಟಿಯರ್, ಸಂಪುಟ - 1. ಡಿಸ್ಕ್ರಿಪ್ಟಿವ್, ಬೆಂಗಳೂರು, 1927. ಪು. 70*

ತೋಟಗಳಲ್ಲಿ, ನಂದಿಬೆಟ್ಟ ಮತ್ತು ಶ್ರೀರಂಗಪಟ್ಟಣದ ರಾಜ್ಯದ ತೋಟಗಳಲ್ಲಿ ತೋಟಗಾರಿಕಾ ಬೆಳೆಗಳನ್ನು ಪ್ರಾಯೋಗಿಕವಾಗಿ ಬೆಳೆದು ಪರಿಚಯಿಸಲಾಯಿತು. ನಂತರ ಅವುಗಳ ಸಸಿ ಮತ್ತು ಬಿತ್ತನೆಯನ್ನು ತೋಟಗಾರಿಕಾ ಇಲಾಖೆಯು ಆಸಕ್ತರಿಗೆ ಪೂರೈಸಿ ಅವುಗಳ ಬೆಳೆಗೆ ಪ್ರೋತ್ಸಾಹಿಸಲಾಯಿತು. ಇದರಿಂದಾಗಿ ಅಗಾಧ ಪ್ರಮಾಣದ ಟೊಮೊಟೊ, ಗೆಡ್ಡೆಕೋಸು, ಆಲೂಗೆಡ್ಡೆ, ಹೂಕೋಸು ಮುಂತಾದ ತರಕಾರಿಗಳು ಬೆಂಗಳೂರಿನಿಂದ ಬ್ರಿಟಿಷ್ ಪ್ರಾಂತ್ಯಗಳಿಗೆ ರಫ್ತಾಗತೊಡಗಿದವು[239]. ಬೆಂಗಳೂರಿನ ಸಮೀಪದ ಸುಣಕಲ್ ಫಾರಂನಲ್ಲಿ ತರಕಾರಿ ಮತ್ತು ಹುಲ್ಲು ಬೆಳೆಗಳ ಅಭಿವೃದ್ಧಿಗಾಗಿ ಒಂದು ಯೋಜನೆಯನ್ನು ಕೈಗೊಳ್ಳಲಾಯಿತು. ಉದ್ಯಮಶೀಲ ರೈತರಿಗೆ ತರಕಾರಿ ಬೆಳೆಯನ್ನು ಪಾಶ್ಚಿಮಾತ್ಯ ದೇಶಗಳ ಮಾದರಿಯಲ್ಲಿ ವೈಜ್ಞಾನಿಕವಾಗಿ ಬೆಳೆಯುವಂತೆ ಅರಿವು ಮೂಡಿಸಲಾಯಿತು. ಸುಣಕಲ್ ಫಾರಂನಲ್ಲಿ ಬ್ರಾಡ್‌ಬೀನ್ಸ್, ಅರ್ತಿಚೋಕ್, ಇಂಗ್ಲಿಷ್ ಮಾರ್ರ್ರೋ-ಫ್ಯಾಟ್‌ಪೀಸ್, ರನ್ನರ್‌ಬೀನ್ಸ್, ಬಟ್ಟರ್ ವ್ಯಾಕ್ಸ್ ಪಾಡ್, ಫ್ರೆಂಚ್ ಬೀನ್ಸ್, ಷುಗರ್‌ಕಾರ್ನ್ ಮುಂತಾದ ವಿದೇಶಿ ತಳಿಗಳನ್ನು ಪ್ರಾಯೋಗಿಕವಾಗಿ ಬೆಳೆದು ಪ್ರಚಾರ ಮಾಡಿ, ಉತ್ತಮ ತಳಿಗಳನ್ನು ಪೂರೈಸಿ, ರೈತರು ಬೆಳೆಯುವಂತೆ ಮಾಡಲಾಯಿತು.

ರಾಜ್ಯದ ರೈತರಿಗೆ ತಿಳಿಯದೇ ಇದ್ದ ತರಕಾರಿಗಳನ್ನು ಶೀಥಲೀಕರಣ ಘಟಕದಲ್ಲಿ ಸಂರಕ್ಷಿಸುವ, ರಫ್ತು ಮಾಡಲು ವೈಜ್ಞಾನಿಕವಾಗಿ ಪೊಟ್ಟಣ ಮಾಡುವ ವಿಧಾನ, ಒಣಗಿಸಿಡುವ, ಬಾಟಲ್‌ಗಳಲ್ಲಿ ಸಂರಕ್ಷಿಸುವ ವಿಧಾನಗಳನ್ನು ರೈತರಿಗೆ ಪರಿಚಯಿಸಲಾಯಿತು[240]. ಕಡಿಮೆ ಬೀಜ ಹೊಂದಿರುವ ಹಾಗೂ ಒಂದೊಂದು 3 ರಿಂದ 4 ಎಲ್ ಬಿ ಗಳಷ್ಟು ತೂಗುವ ಬದನೆಕಾಯಿಯ ತಳಿಗಳನ್ನು ಅಮೆರಿಕಾ ಮತ್ತು ಜರ್ಮನಿಗಳಿಂದ ತರಿಸಲಾಯಿತು. ಮಾವಿನ ಸುವಾಸನೆ ಹೊಂದಿದ ಶುಂಠಿಯ ತಳಿಯನ್ನು ಕಲ್ಕತ್ತಾದಿಂದ ತರಿಸಲಾಯಿತು. ಮೆಣಸಿನಕಾಯಿಯ ಪ್ರಮುಖ ತಳಿಗಳೆಂದರೆ; ಚೈನೀಸ್ ಜೈಂಟ್, ಟೊಬಾಸ್ಕೊ, ರೂಬಿಕಿಂಗ್, ನ್ಯೂ ಸ್ವೀಟ್‌ಮೀಟ್ ಗ್ಲೋರಿ, ಚೆರ್ರಿರೆಡ್, ಎಲಿಫೆಂಟ್ಸ್ ಟ್ರಂಕ್ ಮುಂತಾದವು. ಟೊಮೊಟೊ ತಳಿಗಳಾದ ಪೊಂಡೆರೊಸ, ಜೂನ್ ಪಿಂಕ್, ಗೋಲ್ಡನ್ ಕ್ವೀನ್, ಯೆಲ್ಲೊಪ್ಲಮ್, ಪೀಚ್ ಬೋ ಮುಂತಾದ ತಳಿಗಳನ್ನು ಯೂರೋಪ್ ಮತ್ತು ಅಮೇರಿಕಾಗಳಿಂದ ತರಿಸಲಾಯಿತು[241].

1914ರಲ್ಲಿ "ಅರಮನೆ ತೋಟಗಳು" ಮತ್ತು " ಉದ್ಯಾನವನಗಳು" ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದ ಇಲಾಖೆಯು ಸ್ಥಾಪನೆಗೊಂಡಿತ್ತು. ಈ ಇಲಾಖೆಯು ಮೈಸೂರು, ಶ್ರೀರಂಗಪಟ್ಟಣ, ನಂಜನಗೂಡು, ಚಾಮರಾಜನಗರ, ಎಚ್.ಡಿ.ಕೋಟೆ, ಹುಣಸೂರು, ಮಳವಳ್ಳಿ, ಕೆ.ಆರ್.ಪೇಟೆ, ಹೊಳೆನರಸೀಪುರ ಮತ್ತು ಅರಕಲುಗೂಡುಗಳಲ್ಲಿ

---

*239. **ಹಯವದನ ರಾವ್ ಸಿ. (ಸಂ).**, ಮೈಸೂರ್ ಗೆಸೆಟಿಯರ್, ಸಂಪುಟ - III, ಎಕಾನಮಿ, ಪೂರ್ವೋಕ್ತ, ಪು. 133*

*240. **ಹಯವದನ ರಾವ್ ಸಿ. (ಸಂ).**, ಮೈಸೂರ್ ಗೆಸೆಟಿಯರ್, ಸಂಪುಟ - IV, ಅಡ್ಮಿನಿಸ್ಟ್ರೇಟಿವ್, ಬೆಂಗಳೂರು, 1929, ಪು. 702-703*

*241. **ಅದೇ.**, ಪು. 704-710*

ತೋಟಗಳನ್ನು ಬೆಳೆಸುತ್ತಿತ್ತು. ಈ ತಾಲ್ಲೋಕುಗಳಲ್ಲಿ ಒಟ್ಟು 45 ಕಾವಲುಗಳು ಹಂಚಿಹೋಗಿದ್ದವು. ಈ ಇಲಾಖೆ ಅನೇಕ ಸಸಿತೋಪು, ಹಣ್ಣಿನ ತೋಟಗಳನ್ನು ಬೆಳೆಸುತ್ತಿತ್ತು. ಅವುಗಳಲ್ಲಿ 'ಮಧುವನ' ಕೂಡ ಒಂದಾಗಿತ್ತು. ಅದರಲ್ಲಿ ಕಿತ್ತಲೆ, ನಿಂಬೆ, ಸೇಬು, ಅಂಜೂರ, ದ್ರಾಕ್ಷಿ ಮುಂತಾದ ಹಣ್ಣುಗಳನ್ನು ಬೆಳೆಯಲಾಗುತ್ತಿತ್ತು. ಪಾಶ್ಚಾತ್ಯ ಮತ್ತು ಸ್ಥಳೀಯ ತರಕಾರಿಗಳನ್ನು ಅರಮನೆಯ ಉಪಯೋಗಕ್ಕಾಗಿ ಇಲ್ಲಿ ಬೆಳೆಯುತ್ತಿದ್ದರು. ಅರಮನೆಯ ತೋಟಗಾರಿಕೆ ಇಲಾಖೆ 1928 ರಲ್ಲಿ ಅಸ್ತಿತ್ವಕ್ಕೆ ಬಂದಿತು[242]. ತೋಟಗಾರಿಕಾ ಇಲಾಖೆಯು ಆಸ್ಟ್ರೇಲಿಯಾದ ವಾಷಿಂಗ್‌ಟನ್ ನ್ಯಾವೆಲ್ ಎಂಬ ಕಿತ್ತಳೆ ತಳಿಯನ್ನು ಪರಿಚಯಿಸಿತು. ಈ ತಳಿ ಮೈಸೂರು ರಾಜ್ಯದ ತೋಟಗಳಲ್ಲಿ ಹೆಚ್ಚು ಬೆಳೆಯಲ್ಪಟ್ಟಿತು[243]. ಆಸ್ಟ್ರೇಲಿಯಾದ ದ್ರಾಕ್ಷಿ ಮತ್ತು ನಿಂಬೆ ಗಿಡಗಳ ತಳಿಗಳನ್ನು ತಂದು ಬೆಳೆಸಲಾಯಿತು. ಬೆಂಗಳೂರಿನ ಬಳಿಯ ಸುಣಕಲ್ ಫಾರಂನಲ್ಲಿ ಪ್ರಾಯೋಗಿಕವಾಗಿ ಇವುಗಳನ್ನು ಬೆಳೆದು ನಂತರ ಗ್ರಾಮ ಪಂಚಾಯ್ತಿಗಳ ಮೂಲಕ ರೈತರಿಗೆ ವಿತರಿಸಲಾಗುತ್ತಿತ್ತು. ಅಲಂಕಾರಿಕ ಹೂವು ಮತ್ತು ಹಣ್ಣಿನ ಗಿಡಗಳನ್ನು ಚಾಮುಂಡಿಬೆಟ್ಟ ಮತ್ತು ಗೋಪಾಲಸ್ವಾಮಿ ಬೆಟ್ಟಗಳಲ್ಲಿ ಬೆಳೆಸಲಾಯಿತು. ಹೂವು ಮತ್ತು ಹಣ್ಣುಗಳ ಬಗ್ಗೆ ಜನರಿಗೆ ಆಸಕ್ತಿ ಮೂಡಿಸಲು ಸರ್ಕಾರದ ವತಿಯಿಂದ ಸಸ್ಯ ಮತ್ತು ಪುಷ್ಪ ಪ್ರದರ್ಶನಗಳನ್ನು ನಡೆಸಲಾರಂಭಿಸಲಾಯಿತು[244].

ಅರಮನೆಯ ಉದ್ಯಾನಗಳು ಅಥವಾ ತೋಟಗಳು ಕೂಡ 1928 ರಲ್ಲೇ ಅರಮನೆಯ ತೋಟಗಾರಿಕಾ ಇಲಾಖೆಯಿಂದ ಬೇರ್ಪಟ್ಟು ಸ್ವತಂತ್ರ ವಿಭಾಗವಾಗಿ ಮಾರ್ಪಟ್ಟಿತು. ಇದನ್ನೂ ಕೂಡ ಮೊಖ್ತೇಸರ ನೋಡಿಕೊಳ್ಳುತ್ತಿದ್ದ. ತೋಟಗಾರಿಕೆ ಇಲಾಖೆಯೂ, ಅರಮನೆ, ಮೃಗಾಲಯವೂ ಸೇರಿದಂತೆ ಅನೇಕ ಕಡೆಗಳಲ್ಲಿ ಉದ್ಯಾನವನಗಳನ್ನು ನಿರ್ಮಿಸಿತು. ಅವುಗಳಲ್ಲಿ ಮೃಗಾಲಯ, ಬೌ ಲ್‌ವಾರ್ಡ್, ಡಾಲಿ ಅವೆನ್ಯು, ಸ್ಪ್ರಿಟ್ವರೀಸ್, ಕಾರಂಜಿಕೆರೆ ಮತ್ತು ನಿಷದ್ ಭಾಗ್ ಮುಖ್ಯವಾದವು. ವಾರದಲ್ಲೊಂದು ದಿನ ಅರಮನೆಯ ಬ್ಯಾಂಡನ್ನು ಇಲ್ಲಿ ಬಾರಿಸಲಾಗುತ್ತಿತ್ತು. ಆಗ ನಿಷದ್‌ಭಾಗ್ ಉದ್ಯಾನವನ ಸಾರ್ವಜನಿಕರಿಗೆ ತೆರೆದಿರುತ್ತಿತ್ತು. ನಾಡಿನ ಇಂತಹ ಬೆಳವಣಿಗೆಗೆ ಕಾರಣ ಕರ್ತರಾದ ನಾಲ್ವಡಿಯವರಿಗೆ ಗುಲಾಬಿ ಹೂಗಳೆಂದರೆ ಅಪಾರ ಪ್ರೇಮ. ಅವರು ಉದ್ಯಾನವನದಲ್ಲಿ ಯಾರಾದರೂ ಹೂ ಕಿತ್ತರೆ ಅವರಿಗೆ ಎಲ್ಲಿಲ್ಲದ ಅಸಮಧಾನ. ಸ್ನೇಹಿತರು, ಸಹೋದ್ಯೋಗಿಗಳು ಕೂಡ ಹೂ ಕಿತ್ತರೆ ತಮ್ಮ ಅಸಮಧಾನವನ್ನು ವ್ಯಕ್ತಪಡಿಸುತ್ತಿದ್ದರಲ್ಲದೇ ಪೊಲೀಸಿನರಿಗೆ ಹಿಡಿಸಿ ಕೊಟ್ಟು ಬಿಡುತ್ತೇನೆಂದು ಹೇಳುತ್ತಿದ್ದರು. ಪೂಜೆಗೆಂದು ಹೂಕಿತ್ತೆನೆಂದು ಹೇಳಿದರೆ "ಪೂಜೆಗೆ ಬೇರೆ ಹೂಗಳನ್ನು ತರಿಸಬೇಕೇ ಹೊರತು, ಉದ್ಯಾನದ ಹೂಗಳನ್ನು ಕಿತ್ತು ಉದ್ಯಾನವನದ ಸೊಬಗನ್ನು ಹಾಳು ಮಾಡಬಾರದು. ಉದ್ಯಾನದ ಸೌಂದರ್ಯವನ್ನು ಕಾಪಾಡುವುದು ದೇವರಿಗೆ ಇಷ್ಟವೇ, ಆದಕಾರಣ, ಅದು ದೇವರ

---

242. *ಮಂಜಪ್ಪ ಶೆಟ್ಟಿ ಮಸಗಲಿ ಎಂ. ಪಿ., ಮೈಸೂರು ಅರಮನೆ, ಮೈಸೂರು, 2003. ಪು. 179*

243. *ಅಗ್ರಿಕಲ್ಚರ್ ಇನ್ ಮೈಸೂರ್; ಗವರ್ನಮೆಂಟ್ ಆಫ್ ಮೈಸೂರ್, ಪು. 28*

244. *ದಿ ಮೈಸೂರ್ ಬ್ಲೂ ಬುಕ್ ಜರ್ನಲ್ (1918-19)., ಸಂಪುಟ - 3, ಸಂಖ್ಯೆ -2, ಬೆಂಗಳೂರು, ಪು. 54*

ಪೂಜೆಯೇ"[245] ಎನ್ನುತ್ತಿದ್ದರು. ಇದು ನಾಲ್ವಡಿಯವರು ಬಾಲ್ಯದಿಂದಲೂ ಉದ್ಯಾನವನಗಳ ಬಗ್ಗೆ ಬೆಳಸಿಕೊಂಡಿದ್ದ ಆಸಕ್ತಿ ಮತ್ತು ಪ್ರೇಮವನ್ನು ಸೂಚಿಸುತ್ತದೆ.

ತೋಟಗಾರಿಕೆಯನ್ನು ವಿಸ್ತೃತವಾಗಿ ಬೆಳೆಸಲು ಸರ್ಕಾರವು ಸಾರ್ವಜನಿಕ ವ್ಯಕ್ತಿಗಳಿಗೆ ಸಾಲ ಸೌಲಭ್ಯ ನೀಡಿತು. ಅದರಂತೆ ಒಂದು ಎಕರೆಗಿಂಥ ಹೆಚ್ಚಿನ ಭೂಮಿಯಲ್ಲಿ ಹಣ್ಣಿನ ಗಿಡಗಳನ್ನು ಬೆಳೆಯುವವರಿಗೆ ಶೇ 5ರ ಬಡ್ಡಿಯಂತೆ 3000 ರೂಪಾಯಿಗಳ ವರೆಗೆ ಸಾಲ ನೀಡಲಾಯಿತು. ಮಲೆನಾಡಿನಲ್ಲಿ ಕಾಫಿ ಬೆಳೆ ಹಾನಿಗೀಡಾದಾಗ ಕಿತ್ತಳೆ ಮುಂತಾದ ಹಣ್ಣಿನ ಗಿಡಗಳನ್ನು ಬೆಳೆದು ಹಾನಿ ಭರಿಸುವಂತೆ ಕೆಲ ಕ್ರಮಗಳನ್ನು ಕೈಗೊಂಡಿತು. ಸರ್ಕಾರದ ಈ ಆಜ್ಞೆಯನ್ನು ಹಾಸನ, ಶಿವಮೊಗ್ಗ ಮತ್ತು ಕಡೂರು ಜಿಲ್ಲೆಗಳ ಜಿಲ್ಲಾಧಿಕಾರಿಗಳು ಎಲ್ಲೆಡೆ ಪ್ರಚಾರ ಮಾಡಿದರು[246]. ಇಂತಹ ಪ್ರೋತ್ಸಾಹದಾಯಕ ಕ್ರಮಗಳಿಂದ ತೋಟಗಾರಿಕೆಗೆ ಹೊಸ ಚೈತನ್ಯ ಬಂದಂತಾಗಿ ತೋಟಗಾರಿಕೆಯನ್ನು ಒಂದು ವ್ಯವಸ್ಥಿತ ಕೃಷಿಯನ್ನಾಗಿ ಮತ್ತು ಲಾಭದಾಯಕ ವೃತ್ತಿಯಾಗಿಯೂ ಬೆಳೆಸಲಾಯಿತು. ಪ್ರಪಂಚದ ವಿವಿಧೆಡೆಗಳಲ್ಲಿ ಬೆಳೆಯುತ್ತಿದ್ದ ಮತ್ತು ಇಲ್ಲಿನ ಹವಾಗುಣಕ್ಕೆ ಸೂಕ್ತವಾದ ಹಣ್ಣಿನ ಮತ್ತು ಹೂವಿನ ಗಿಡಗಳನ್ನು ಹೊರಗಿನಿಂದ ತಂದುದರಿಂದ ಹೊಸ ಬಗೆಯ ತಳಿಗಳು ಮೈಸೂರು ಸಂಸ್ಥಾನದಲ್ಲಿ ಬೇರೂರುವಂತಾದವು. ಇದರಿಂದಾಗಿ ಬೆಂಗಳೂರಿನಲ್ಲಿ ಲಾಲ್‌ಬಾಗ್ ಮತ್ತು ಕಬ್ಬನ್ ಪಾರ್ಕ್‌ಗಳಂತಹ ದೊಡ್ಡ ಉದ್ಯಾನವನಗಳು ಬೆಳವಣಿಗೆ ಹೊಂದಿ ಉದ್ಯಾನನಗರ ಎಂದು ಕರೆಸಿಕೊಳ್ಳುವಂತಾಗಿದೆ. ಹೀಗೆ ನಗರಗಳ ಬೆಳವಣಿಗೆಯ ಹಿನ್ನೆಲೆಯಲ್ಲಿ ಅವಶ್ಯಕವಾಗಿ ಬೇಕಾದ ತರಕಾರಿ, ಹಣ್ಣುಗಳ ಉತ್ಪಾದನೆಯಲ್ಲಿ ಆಧುನಿಕತೆಯನ್ನಳವಡಿಸುತ್ತಾ ಜನರ ಬೇಡಿಕೆಗಳನ್ನು ಪೂರೈಸುವಲ್ಲಿ ಮತ್ತು ಲಾಭದಾಯಕ ವೃತ್ತಿಯನ್ನಾಗಿ ಅಳಪಡಿಸಿಕೊಳ್ಳುವಲ್ಲಿ ಹಾಗೂ ನಗರಗಳ ಸೌಂದರ್ಯವನ್ನು ವೃದ್ಧಿಸಿಕೊಳ್ಳುವಂತಹ ಪ್ರೋತ್ಸಾಹದಾಯಕ ಕಾರ್ಯಗಳು ನಡೆದವು.

ಹಾಗೆಯೇ ಜನರ ಅವಶ್ಯಕ ಪೋಷಕಾಂಶ ವಸ್ತುಗಳಾದ ಹಾಲು, ಮಾಂಸ, ಮೊಟ್ಟೆಗಳ ಉತ್ಪಾದನೆಯನ್ನು ಹೆಚ್ಚಿಸುವ ದೃಷ್ಟಿಯಿಂದಲೂ ನಾಲ್ವಡಿಯವರು ತಮ್ಮ ಆಳ್ವಿಕೆಯ ಕಾಲದಲ್ಲಿ ಪಶುಸಂಗೋಪನೆ ಹಾಗೂ ಹೈನುಗಾರಿಕೆಯಲ್ಲಿ ಹೊಸ ಹೊಸ ವಿಧಾನಗಳನ್ನು ಅಳವಡಿಸಲು ಮುಂದಾದರು.

---

*245. **ವೆಂಕಟರಾಮಯ್ಯ ಸಿ. ಕೆ.,** ಪೂರ್ವೋಕ್ತ, ಪು. 96*

*246. **ಹ್ಯಾಂಡ್ ಬುಕ್ ಆಫ್ ಮೈಸೂರ್ ಅಡ್ಮಿನಿಸ್ಟ್ರೇಷನ್,** ಬೆಂಗಳೂರು, 1917, ಪು. 165*

***ಪಶುಸಂಗೋಪನೆ ಹಾಗೂ ಹೈನುಗಾರಿಕೆಯಲ್ಲಿ ಆಧುನಿಕತೆ.***

ನಾಲ್ವಡಿಯವರ ಕಾಲದಲ್ಲಿ ಪಶುಸಂಗೋಪನೆಯನ್ನು ಆಧುನಿಕ ವಿಧಾನಗಳ ಮೂಲಕ ಅಭಿವೃದ್ಧಿಗೊಳಿಸುವ ಕಾರ್ಯಕ್ರಮಗಳು ರೂಪುಗೊಂಡವು. ಮೈಸೂರು ಪ್ರದೇಶವು ಪ್ರಾಚೀನ ಕಾಲದಿಂದಲೂ ಉತ್ತಮ ತಳಿಯ ರಾಸುಗಳಿಗೆ ಹೆಸರುವಾಸಿಯಾಗಿತ್ತು. ಕನಕಹಳ್ಳಿ ಮತ್ತು ಮಹದೇಶ್ವರ ಬೆಟ್ಟದ ಪ್ರದೇಶದಲ್ಲಿನ ತಳಿಯ ಹೋರಿಗಳು ಅಥವಾ ಎತ್ತುಗಳು ಕೃಷಿ ಚಟುವಟಿಕೆ ಮತ್ತು ಸಾರಿಗೆಗೆ ಹೆಸರುವಾಸಿಯಾಗಿದ್ದವು. ಆದರೆ ಇಲ್ಲಿನ ಹಸುವಿನ ತಳಿಗಳು ಕಡಿಮೆ ಹಾಲನ್ನು ಪೂರೈಸುತ್ತಿದ್ದವು. ಆ ನಿಟ್ಟಿನಲ್ಲಿ ಪಶುಸಂಗೋಪನೆಯಲ್ಲಿ ರೈತ ಹೇಗೆ ಬದಲಾಗಬೇಕೆಂಬುದನ್ನು ಕುರಿತು 1927ರ ಮೈಸೂರು ದಸರಾ ಕೈಗಾರಿಕಾ ಮತ್ತು ಕೃಷಿ ವಸ್ತುಪ್ರದರ್ಶನದ ಬಹುಮಾನ ವಿತರಣಾ ಸಂದರ್ಭದಲ್ಲಿ ನಾಲ್ವಡಿಯವರು ಹೇಳಿದ್ದರು. "ಕೃಷಿಯ ಬೆಳವಣಿಗೆಯಲ್ಲಿ ಕೈಗೊಳ್ಳಬೇಕಾದ ಮೊದಲ ಮೆಟ್ಟಿಲೆಂದರೆ ಆಯ್ಕೆಯ ಪಾಠವನ್ನು ಕಲಿಯುವುದು. ಯಾವಾಗ ರೈತನು ಬಡಕಲಾದ ಎರಡು ಹಸುಗಳಿಗೆ ಮೇವುಣಿಸುವ ಬದಲು ಉತ್ತಮವಾದ ಒಂದೇ ಹಸುವಿಗೆ ಮೇವುಣಿಸುವುದು ಒಳ್ಳೆಯದು ಎಂದು ಕಲಿಯುತ್ತಾನೋ ........ಆಗ ಗ್ರಾಮೀಣ ಪುನರ್ ನಿರ್ಮಾಣದ ದಾರಿಯಲ್ಲಿ ಒಂದು ದೊಡ್ಡ ಹೆಜ್ಜೆಯನ್ನಿಟ್ಟಂತಾಗುತ್ತದೆ."[247] ನಾಲ್ವಡಿಯವರು ಕೃಷಿ ಮತ್ತು ಪಶುಸಂಗೋಪನೆ ಪರಸ್ಪರ ಪೂರಕ ಉದ್ಯೋಗಗಳೆಂದು ತಿಳಿದಿದ್ದರು. ರೈತರು ಉತ್ತಮ ಹಾಲು ಕೊಡುವ ಹಸುಗಳನ್ನು ಸಾಕುವುದರಿಂದ ಅವರ ಆರ್ಥಿಕಶಕ್ತಿ ವೃದ್ಧಿಸುತ್ತದೆ ಹಾಗೂ ಬೆಳೆಯುತ್ತಿದ್ದ ನಗರಗಳ ಜನಸಂಖ್ಯೆಗೆ ತಕ್ಕಂತೆ ಹಾಲು ಪೂರೈಸಲು ಸಾಧ್ಯವಾಗುತ್ತದೆ ಎಂಬ ಹಿನ್ನಲೆಯಲ್ಲಿ ಹೊಸ ತಳಿಯ ಹಸುಗಳ ಅವಶ್ಯಕತೆಯರಿತು ಈ ಮಾತುಗಳನ್ನು ಉಲ್ಲೇಖಿಸಿದ್ದಾರೆ. ನಾಲ್ವಡಿಯವರು ಪಶುಸಂಗೋಪನೆಯಲ್ಲಿ ವೈಜ್ಞಾನಿಕ ವಿಧಾನಗಳನ್ನು ಅಳವಡಿಸುವ ಒಲವನ್ನು ಹೊಂದಿದ್ದು 1924ರಲ್ಲಿ ಬೋರ್ಡ್ ಆಫ್ ಅಗ್ರಿಕಲ್ಚರ್ ಇನ್ ಇಂಡಿಯಾದ ಸಮಾವೇಶ ಸಮಾರಂಭದಲ್ಲಿ ಈ ಕೆಳಕಂಡಂತೆ ಹೇಳಿದ್ದಾರೆ "ಭಾರತದಲ್ಲಿ ಜಾನುವಾರುಗಳ ಬೆಳವಣಿಗೆಯಲ್ಲಿ ವೈಜ್ಞಾನಿಕ ವಿಧಾನಗಳನ್ನು ಬಳಸಿಕೊಳ್ಳುವ ಕ್ರಮ ಆರಂಭಗೊಂಡೇ ಇಲ್ಲ. ಈಗ ನೀವು ಅದನ್ನು ಆರಂಭಿಸುವ ಅವಶ್ಯಕತೆಯಿದೆ" ಎಂದು ವಿಜ್ಞಾನಿಗಳಿಗೆ ಸಂದೇಶ ನೀಡಿದ್ದರು[248].

ಮಹಾರಾಜರ ಅರಮನೆಯ ಜಾನುವಾರು ಪೋಷಣೆ ಶಾಖೆಯು ಆರಂಭದಲ್ಲಿ ಕೆಲವು ಅತ್ಯುತ್ತಮ ತಳಿಯ ಹಸುಗಳನ್ನು ಸಾಕಿತು. ಅವುಗಳಲ್ಲಿ ಪ್ರಮುಖವಾದ ತಳಿಗಳೆಂದರೆ ಸಿಂಧಿ ಹಸುಗಳು, ಡೆಲ್ಲಿ, ಅಜ್ಮೀರ್, ಬರೋಡ, ಇಂಗ್ಲಿಷ್, ಅಂಗೋಲ, ಹಳ್ಳಿಕಾರ್, ಜೆಣ್ಯ, ಗೌಜ್ರಿ ಅಥವಾ ಗುಜರಾತ್ ತಳಿಗಳು ಪ್ರಮುಖವಾದವು. ಈ ತಳಿಯ

---

*247. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 274*

*248. ಅದೇ., ಪು. 225*

ಹಸುಗಳು ಸ್ಥಳೀಯ ಹಸುಗಳಿಗಿಂತ ಹೆಚ್ಚು ಕಾಲ ಹಾಲನ್ನು ಕರೆಯುತ್ತಿದ್ದವು. ಇದೇ ಉದ್ದೇಶಕ್ಕಾಗಿ ಬೆಂಗಳೂರಿನ ಹಾಲು ಉತ್ಪಾದಕರು ದೆಹಲಿ ಮತ್ತು ಜಫರ್‌ಬಾದಿ ತಳಿಯ ಎಮ್ಮೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಆಮದು ಮಾಡಿಕೊಳ್ಳ ತೊಡಗಿದರು[249].

ಮೈಸೂರು ಸರ್ಕಾರವು ಪಶುಸಂಗೋಪನೆಯನ್ನು ವ್ಯವಸ್ಥಿತವಾಗಿ ಕೈಗೊಳ್ಳಲು 1907ರಲ್ಲಿ ಪಶುಸಂಗೋಪನ ಇಲಾಖೆಯನ್ನು ಸ್ಥಾಪಿಸಿತು. ಹೆಬ್ಬಾಳ್ ಫಾರಂನಲ್ಲಿ ಹೈನುಗಾರಿಕೆ ಕೇಂದ್ರವನ್ನು ಸ್ಥಾಪಿಸಿ ವಿವಿಧ ತಳಿಯ ಹಸು ಮತ್ತು ಎಮ್ಮೆಗಳ ಬಗ್ಗೆ ಅಧ್ಯಯನ ಆರಂಭಿಸಲಾಯಿತು. ಬೆಂಗಳೂರಿನ ಬಳಿಯ ಹೊಟ್ಟಿಗೆರೆ ಎಂಬಲ್ಲಿ ಕುರಿ ತಳಿ ಅಭಿವೃದ್ಧಿ ಕೇಂದ್ರವನ್ನು ಆರಂಭಿಸಿ 'ಮೆರಿನ್ ಡೂಮ್ರಾ' ಮುಂತಾದ ವಿದೇಶಿ ತಳಿಯ ಟಗರುಗಳನ್ನು ತರಿಸಲಾಯಿತು[250]. 1926 ರಿಂದೀಚೆಗೆ ಹೆಬ್ಬಾಳ, ಅಜ್ಜಂಪುರ, ಯೆಲಚಿಹಳ್ಳಿ, ಕೋಲಾರ ಮುಂತಾದ ಸ್ಥಳಗಳಲ್ಲಿ ಕುರಿಗಳನ್ನು ಉತ್ತಮ ರೀತಿಯಲ್ಲಿ ಸಾಕಿ ತಳಿಯನ್ನು ಮೇಲುಪಡಿಸುವ ಕ್ಷೇತ್ರಗಳನ್ನು ಅಭಿವೃದ್ಧಿಗೊಳಿಸಲಾಯಿತು. ಬಹಳ ಬೆಲೆಯನ್ನು ಕೊಟ್ಟು ವಿದೇಶದಿಂದ ತರಿಸಿದ ಮೆರಿನೊ ಕುರಿಗಳ ಮತ್ತು ಮೆರಿನೊ ಟಗರುಗಳ ಸಹಾಯದಿಂದ ಮಿಶ್ರ ಜಾತಿಯ ಮರಿಗಳನ್ನಿಳಿಸಿ ಕುರಿಗಳ ತಳಿಯನ್ನು ಉತ್ತಮಪಡಿಸುವ ವ್ಯವಸ್ಥೆಯನ್ನು ಏರ್ಪಡಿಸಲಾಯಿತು. ಕುರಿಗಳನ್ನು ಸಾಕಲು ಇಷ್ಟಪಡುವವರೆಲ್ಲರೂ ಮಿಶ್ರಜಾತಿಯ ಆ ಮರಿಗಳನ್ನು ಕೊಂಡು ಪ್ರಯೋಜನ ಪಡೆಯಲಾರಂಭಿಸಿದರು. ಮೆರಿನೊ ಮಿಶ್ರ ತಳಿಯ ಕುರಿಗಳು ಬೇಕೆಂದು ಜನರು ಬಹಳವಾಗಿ ಕೇಳುತ್ತಿರುವ ಕಾರಣ, ಸರ್ಕಾರದವರು ಆರು ಸಾವಿರ ರೂಪಾಯಿಗಳನ್ನು ಕೊಟ್ಟು ದಕ್ಷಿಣ ಆಫ್ರಿಕಾದಿಂದ ಇಪ್ಪತ್ತೇಳು ಮೆರಿನೊ ಕುರಿಗಳನ್ನು ತರಿಸಿತು. ಇಷ್ಟು ಸಂಖ್ಯೆಯ ಮೆರಿನೊ ಕುರಿಗಳು ಭಾರತಕ್ಕೆ ಮತ್ತಾವಾಗಲೂ ಅಲ್ಲಿಂದ ಬಂದಿರಲಿಲ್ಲ[251]. ಇಂತಹ ಬೇಡಿಕೆಯ ಹೆಚ್ಚಳಕ್ಕೆ ಕಾರಣ ಈ ಕುರಿಗಳು ಉತ್ತಮ ಮತ್ತು ಹೆಚ್ಚಿನ ತುಪ್ಪಟವನ್ನು ಒದಗಿಸುತ್ತಿದ್ದವು. ಒಂದು ಕುರಿ ಮೂರು ಪೌಂಡ್‌ನಷ್ಟು ಉಣ್ಣೆಯನ್ನು ನೀಡುತ್ತಿತ್ತು. ಇದರಿಂದಾಗಿ ಕುರಿಗಳಿಂದ ಮಾಂಸವಲ್ಲದೆ ಹೆಚ್ಚಿನ ಉಣ್ಣೆಯನ್ನು ಉತ್ಪಾದಿಸುವ ಮೂಲಕ ಜನರ ಆದಾಯ ಹೆಚ್ಚಿತು. ಮೈಸೂರಿನ ಉಣ್ಣೆಗೆ ಲಂಡನ್‌ನ ಮಾರುಕಟ್ಟೆಯಲ್ಲಿ ಒಳ್ಳೆಯ ಬೆಲೆ ಸಿಗುತ್ತಿತ್ತು[252]. ಅನಂತರ ಅಭಿವೃದ್ಧಿಗೊಂಡ ತಳಿಗಳನ್ನು ನಾಲ್ವಡಿ ಸರ್ಕಾರವು ಗ್ರಾಮ ಪಂಚಾಯಿತಿಗಳ ಮೂಲಕ ಜನತೆಗೆ ಒದಗಿಸುತ್ತಿತ್ತು. ಸಂಸ್ಥಾನದಾದ್ಯಂತ ಜನತೆಯಲ್ಲಿ ಇವುಗಳ ಬಗ್ಗೆ ಅರಿವು ಮೂಡಿಸಲು 'ಷೀಪ್‌ಬ್ರೀಡರ್ಸ್ ಅಸೋಸಿಯೇಷನ್' ಅನ್ನು ಸ್ಥಾಪಿಸಲಾಯಿತು. ಈ ಸಂಸ್ಥೆ ಜನರಿಗೆ ಮೇಕೆ ಮತ್ತು ಕುರಿಗಳಿಂದ ದೊರಕುವ ಹೆಚ್ಚಿನ ಆರ್ಥಿಕ ಸೌಕರ್ಯವನ್ನು ಕುರಿತು ಪ್ರಚಾರ ಮಾಡುತ್ತಿತ್ತು.

---

*249. **ಹಯವದನ ರಾವ್. ಸಿ. (ಸಂ).,** ಮೈಸೂರ್ ಗೆಜೆಟಿಯರ್, ಸಂಪುಟ - III, ಪು. 136 - 140*

*250. **ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ).,** ಸರ್ ಎಂ. ವಿಶ್ವೇಶ್ವರಯ್ಯ (ನೂರನೆಯ ವರ್ಧಂತಿಯ ಪೂಜನ ಗ್ರಂಥ), ಜೀವನ ಕಾರ್ಯಾಲಯ, ಬೆಂಗಳೂರು, 1960, ಪು. 184*

*251. **ವೆಂಕಟರಾಮಯ್ಯ ಸಿ.ಕೆ.,** ಆಳಿದ ಮಹಾಸ್ವಾಮಿಯವರು ಪೂರ್ವೋಕ್ತ ಪು. 324*

ನಾಲ್ವಡಿಯವರು ತಮ್ಮ ಭಾಷಣಗಳಲ್ಲಿ ಕೋಳಿ ಸಾಕಾಣಿಕೆಯನ್ನು ಆಧುನಿಕ ವಿಧಾನದಲ್ಲಿ ಕೈಗೊಳ್ಳಬೇಕೆಂದು ಪ್ರತಿಪಾದಿಸಿದ್ದರು. ಅಲ್ಲದೆ ಸರ್ಕಾರದ ಮೂಲಕ ಕೋಳಿ ಸಾಕಾಣಿಕೆಯ ಆಧುನಿಕರಣಕ್ಕೂ ಕ್ರಮ ಕೈಗೊಂಡರು. ಪಶುಸಂಗೋಪನಾ ಇಲಾಖೆಯ ಸಂಶೋಧನಾ ಕೇಂದ್ರಗಳಲ್ಲಿ ಲೆಗ್‌ಹಾರ್ನ್ ಅಥವಾ ರೋಡ್ ಐಲ್ಯಾಂಡ್, ಮಿನಾರ್ಕಸ್, ಸಸೆಕ್ಸ್, ಮಿಯಂಡೋಟ್ ಮುಂತಾದ ಉತ್ತಮ ತಳಿಯ ಕೋಳಿಗಳನ್ನು ವಿದೇಶಗಳಿಂದ ತರಿಸಿ ಅವುಗಳ ತಳಿ ಅಭಿವೃದ್ಧಿಗೆ ಕ್ರಮ ಕೈಗೊಂಡಿತು. ಹೊಸ ತಳಿಯ ಕೋಳಿಗಳು ಹೆಚ್ಚು ದಪ್ಪದ ಮೊಟ್ಟೆ ಹಾಗೂ ಮಾಂಸವನ್ನು ಕಡಿಮೆ ಅವಧಿಯಲ್ಲೇ ಕೊಡುತ್ತಿದ್ದವು. ಸರ್ಕಾರವು ಸಂಶೋಧನೆ ನಡೆಸಲೆಂದು ಕೋಳಿ ಸಾಕಾಣಿಕಾ ಕೇಂದ್ರಗಳನ್ನು ಹೆಬ್ಬಾಳ್, ಅಜ್ಜಂಪುರ, ಹುಣಸೂರು, ಶ್ರೀನಿವಾಸಪುರ, ಮೂಡಿಗೆರೆಗಳಲ್ಲಿ ಸ್ಥಾಪಿಸಿತು. ಈ ಕೇಂದ್ರಗಳಲ್ಲಿ ಗ್ರಾಮೀಣ ಅಧಿಕಾರಿಗಳಿಗೆ ಹಾಗೂ ಕೃಷಿಕರಿಗೆ ಕೋಳಿ ಸಾಕಾಣಿಕೆಯ ನವೀನ ವಿಧಾನಗಳ ಬಗ್ಗೆ ತರಭೇತಿ ನೀಡಲಾಗುತ್ತಿತ್ತು. ಅಭಿವೃದ್ಧಿಗೊಂಡ ತಳಿಯ ಹುಂಜಗಳನ್ನು ಸುಲಭ ಬೆಲೆಯಲ್ಲಿ ಗ್ರಾಮ ಪಂಚಾಯಿತಿಗಳ ಮೂಲಕ ಮಾರಾಟ ಮಾಡಿ ಆ ಮೂಲಕ ರಾಜ್ಯದಾದ್ಯಂತ ಕೋಳಿ ತಳಿಯ ಅಭಿವೃದ್ಧಿಗೆ ಕ್ರಮಕೈಗೊಳ್ಳಲಾಯಿತು.

ಜಾನುವಾರುಗಳಿಗೆ ಬರುತ್ತಿದ್ದ ರೋಗಗಳಾದ ರಿಂಡಿರ್‌ಪೆಸ್ಟ್, ಬ್ಲಾಕ್-ಕಾರ್ಟರ್, ಅಂತ್ರಾಕ್ಸ್ ಮತ್ತು ಬಾಯಿ ಹಾಗೂ ಕಾಲಿನ ಹುಣ್ಣಿನ ರೋಗ ಮುಂತಾದವನ್ನು ತಡೆಯಲು ಮತ್ತು ಚಿಕಿತ್ಸೆ ನೀಡಲು ಅನೇಕ ಪಶುಚಿಕಿತ್ಸಾ ಆಸ್ಪತ್ರೆಗಳನ್ನು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸಲಾಯಿತು. ಯಾವುದೇ ಗ್ರಾಮದಲ್ಲಿ ಅಂಟುಜಾಡ್ಯಗಳು ಕಾಣಿಸಿಕೊಂಡಾಗ ಪಶುಚಿಕಿತ್ಸಾ ಅಧಿಕಾರಿಗಳು ಭೇಟಿ ನೀಡಿ ಚಿಕಿತ್ಸೆ ನೀಡುತ್ತಿದ್ದರು. ಅದಕ್ಕಾಗಿ ಚುಚ್ಚುಮದ್ದು ನೀಡಲು ಸಂಚಾರಿ ಚಿಕಿತ್ಸಾಲಯಗಳನ್ನು ಅಸ್ಥಿತ್ವಕ್ಕೆ ತರಲಾಯಿತು[253]. ಹೈನುಗಾರಿಕೆ ಫಾರಂಗಳನ್ನು ಸ್ಥಾಪಿಸಲು ಖಾಸಗಿ ಜನರಿಗೆ ಸಾಲದ ಯೋಜನೆಯನ್ನು ಕೂಡ ಜಾರಿಗೊಳಿಸಲಾಯಿತು. ಗಂಡು ಜಾನುವಾರುಗಳಿಗೆ ಸುಮಾರು ಐದು ವರ್ಷಗಳಾದಾಗ ತಳಿ ಅಭಿವೃದ್ಧಿಯ ಹೋರಿಗಳನ್ನು ಹೊರತು ಪಡಿಸಿ ಇನ್ನುಳಿದವನ್ನು ವೀರ್ಯಗುಂದಿಸಲಾಗುತ್ತಿತ್ತು. ಇದು ಕೃಷಿ ಚಟುವಟಿಕೆಯ ಎತ್ತುಗಳಿಗೆ ಅವಶ್ಯವೆಂದು ನಂಬಲಾಗಿತ್ತು. ಆದರೆ ವೀರ್ಯಗುಂದಿಸುವ ವಿಧಾನವು ಮೈಸೂರಿನಲ್ಲಿ ಬಹಳ ಹಳೆಯ ವಿಧಾನವಾಗಿದ್ದು ಅದರಿಂದ ಜಾನುವಾರುಗಳು ಬಹಳ ಕಾಲ ಹಿಂಸೆಪಡುತ್ತಿದ್ದವು. ಆದ್ದರಿಂದ ಪಶುಸಂಗೋಪನಾ ಇಲಾಖೆಯು ಶೀಘ್ರವಾಗಿ ಮತ್ತು ಆಧುನಿಕ ಕ್ರಮದ ಶಸ್ತ್ರ ಚಿಕಿತ್ಸೆಯ ಮೂಲಕ ವೀರ್ಯಗುಂದಿಸುವ ವಿಧಾನವನ್ನು

---

*253. ಹ್ಯಾಂಡ್ ಬುಕ್ ಆಫ್ ಮೈಸೂರ್ ಅಡ್ಮಿನಿಸ್ಟ್ರೇಷನ್, ಪು. 48*

ಅನುಸರಿಸಿದರು. ಈ ಆಧುನಿಕ ವೈಜ್ಞಾನಿಕ ವಿಧಾನವನ್ನು ರೈತರು ಮೆಚ್ಚಿಕೊಂಡರು. ಪಶುಸಂಗೋಪನಾ ಅಸ್ಪತ್ರೆಗೆ ಅಥವಾ ಅಧಿಕಾರಿಗಳ ಬಳಿ ತಮ್ಮ ಪ್ರಾಣಿಗಳ ವೀರ್ಯಗುಂದಿಸುವ ಶಸ್ತ್ರ ಚಿಕಿತ್ಸೆ ಮಾಡಿಸುತ್ತಿದ್ದರು[254]. ಇಂತಹ ಪ್ರಯತ್ನಗಳ ಮುಂದುವರಿಕೆಯಲ್ಲಿ ಪ್ರಯೋಗಾತ್ಮಕ ಫಾರ್ಮಗಳ ಪಾತ್ರ ಬಹಳ ಪ್ರಮುಖವಾಗಿ ಕಾಣಿಸಿಕೊಳ್ಳುತ್ತದೆ.

*ಆಧುನಿಕತೆಯ ಅಳವಡಿಕೆಯಲ್ಲಿ ಪ್ರಯೋಗಾತ್ಮಕ ಫಾರ್ಮ್‌ಗಳ ಪಾತ್ರ*

ಮೈಸೂರು ರಾಜ್ಯದ ಕೃಷಿ, ಪಶುಸಂಗೋಪನೆ ಮತ್ತು ರೇಷ್ಮೆ ಇಲಾಖೆಗಳು ಸಂಶೋಧನೆಗೆ ಹೆಚ್ಚು ಆದ್ಯತೆ ನೀಡಿ ವಿಜ್ಞಾನವನ್ನು ಜನಸಾಮಾನ್ಯರಲ್ಲಿ ಮತ್ತು ಆರ್ಥಿಕ ಬೆಳವಣಿಗೆಯಲ್ಲಿ ಅಳವಡಿಸಲು ಪ್ರಯತ್ನಿಸಿದವು. ಈ ಇಲಾಖೆಗಳ ಪ್ರಯೋಗಗಳನ್ನು ಪ್ರಮುಖವಾಗಿ ಸರ್ಕಾರಿ ಫಾರ್ಮ್‌ಗಳಲ್ಲಿ ಕೈಗೊಳ್ಳಲಾಗಿತ್ತು. ಈ ಫಾರ್ಮ್‌ಗಳಲ್ಲಿ ಒಂದೊಂದು ನಿರ್ದಿಷ್ಟ ಕ್ಷೇತ್ರದ ಬಗ್ಗೆ ಸಂಶೋಧನೆ ಮಾಡಲು ಪ್ರತ್ಯೇಕ ವಿಭಾಗಗಳನ್ನು ಸ್ಥಾಪಿಸಲಾಯಿತು. ಅವುಗಳೆಂದರೆ ರಾಸಾಯನಿಕ ವಿಭಾಗ, ಕೀಟಶಾಸ್ತ್ರ ವಿಭಾಗ, ಶಿಲೀಂದ್ರಶಾಸ್ತ್ರವಿಭಾಗ, ಸಸ್ಯಶಾಸ್ತ್ರ ವಿಭಾಗ ಮತ್ತು ಎಂಜನಿಯರಿಂಗ್ ವಿಭಾಗ.

ರಾಸಾಯನಿಕ ವಿಭಾಗದಲ್ಲಿ ಮಣ್ಣು ಮತ್ತು ಅದಕ್ಕೆ ಹೊಂದುವ ಗೊಬ್ಬರಗಳು, ಬೆಳೆಗಳು ಮುಂತಾದವನ್ನು ಒಂದು ಪುಟ್ಟ ಕುಂಭದಲ್ಲಿ ಪ್ರಾಯೋಗಿಕವಾಗಿ ಬೆಳೆಸಿ ನಂತರ ಪ್ರಾಯೋಗಿಕ ತಾಕುಗಳಲ್ಲಿ ಅವುಗಳನ್ನು ಬೆಳೆಯಲಾಗುತ್ತಿತ್ತು. ಬೆಲ್ಲ, ಸಕ್ಕರೆ ಮುಂತಾದವನ್ನು ತಯಾರಿಸುವ ವಿಧಾನಗಳನ್ನು ಅಭಿವೃದ್ಧಿಪಡಿಸಲಾಗುತ್ತಿತ್ತು[255]. ಕೀಟಶಾಸ್ತ್ರ ವಿಭಾಗವು ರಾಜ್ಯದಾದ್ಯಂತ ಬೆಳೆಗೆ ತೊಂದರೆಗೊಳಪಡಿಸುವ ಕೀಟಗಳು ಮತ್ತು ಅವುಗಳ ನಿವಾರಣೋಪಾಯ ಕ್ರಮಗಳ ಬಗ್ಗೆ ಸಂಶೋಧನೆ ನಡೆಸುತ್ತಿತ್ತು. ಕಂಬಳಿ ಹುಳು, ಕೊಕ್ಕೆಹುಳು, ಮುಂತಾದ ಧಾನ್ಯ ಸಂಗ್ರಹದಲ್ಲಿ ಬರುವ ಹುಳುಗಳಿಗೆ ಔಷಧಿಯ ಸಿಂಪಡಣೆಗಳನ್ನು ಅಭಿವೃದ್ಧಿಪಡಿಸಿತು[256].

ಶಿಲೀಂದ್ರಶಾಸ್ತ್ರ ವಿಭಾಗವು ಪರೋಪಕಾರಿ ಜೀವಿಗಳಿಂದ ಬರುವ ಬೆಳೆಗಳ ರೋಗಗಳ ಬಗ್ಗೆ ಸಂಶೋಧನೆ ನಡೆಸುತ್ತಿತ್ತು. ಆ ರೋಗಗಳಿಗೆ ಅವಶ್ಯವಾದ ಸಿಂಪಡಣೆ ಮತ್ತಿತ್ತರ ಕ್ರಮಗಳನ್ನು ಕೈಗೊಳ್ಳುತ್ತಿತ್ತು. ಪ್ರಮುಖವಾಗಿ ಅಡಿಕೆ ಬೆಳೆಗೆ ಬರುವ ಕೊಳೆ ರೋಗ, ಆಲೂಗೆಡ್ಡೆಗೆ ಬರುವ ರಿಂಗ್ ಡಿಸೀಸ್, ಶ್ರೀಗಂಧದ ಮರಕ್ಕೆ ಬರುತ್ತಿದ್ದ ಸ್ಪೈಕ್ ರೋಗಗಳ ಬಗ್ಗೆ ಸಂಶೋಧನೆ ಕೈಗೊಂಡಿತು. ಸಸ್ಯಶಾಸ್ತ್ರ ವಿಭಾಗವು ಸಸ್ಯ ತಳಿ ಅಭಿವೃದ್ಧಿಯ ಬಗ್ಗೆ ಶೋಧನೆ ನಡೆಸಿ ರಾಜ್ಯದಾದ್ಯಂತ ಬೆಳೆಯುತ್ತಿದ್ದ ಭೂಮಿಗಳಿಗೆ ಹೋಗಿ ಬೆಳೆಗಳನ್ನು ಪರೀಕ್ಷಿಸುವ ಕಾರ್ಯವನ್ನು ಕೈಗೊಂಡಿತು. ಈ ವಿಭಾಗವು ರಾಗಿಯಲ್ಲಿ H 22 ಮತ್ತು ಕಬ್ಬಿನಲ್ಲಿ H M 544 ಎಂಬ ತಳಿಗಳನ್ನು ಅಭಿವೃದ್ಧಿಪಡಿಸಿತು. ಎಂಜಿನಿಯರಿಂಗ್

---

*254. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 139*

*255. ಅದೇ., ಪು. 149*

*256. ದಿ ಮೈಸೂರ್ ಬ್ಲ್ಯೂ ಬುಕ್ ಜರ್ನಲ್ (1918-19), ಸಂಪುಟ - 3, ಸಂಖ್ಯೆ - 2, ಬೆಂಗಳೂರು, ಪು. 152*

ವಿಭಾಗವು ಸುಧಾರಿತ ದೇಶಿ ಅಥವಾ ವಿದೇಶಿ ಉಪಕರಣಗಳನ್ನು ದೇಶೀಯವಾಗಿ ಅಳವಡಿಸುವ, ಅಭಿವೃದ್ಧಿಪಡಿಸುವ ಕೆಲಸ ಮಾಡುತ್ತಿತ್ತು. ಇದು ಕಬ್ಬಿನ ಹೊಸ ಯಂತ್ರಗಳು, ಸುಧಾರಿತ ನೇಗಿಲುಗಳ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿತು[257].

ಪ್ರಯೋಗಾತ್ಮಕ ಫಾರ್ಮಗಳು ಸಂಶೋಧನೆಗಳನ್ನು ಕೈಗೊಳ್ಳುತ್ತಿದ್ದುದ್ದು ಮಾತ್ರವಲ್ಲದೆ ಬೆಳೆಗಳನ್ನು ಪ್ರಾತ್ಯಕ್ಷಿಕ ತಾಕುಗಳಲ್ಲಿ ಬೆಳೆದು ಹಾಗೂ ಅಥವಾ ಯಾಂತ್ರಿಕ ಉಪಕರಣಗಳು ಹೇಗೆ ಕೆಲಸ ನಿರ್ವಹಿಸುತ್ತವೆ ಎಂಬುದನ್ನು ಮತ್ತು ಬೆಲ್ಲ ತಯಾರಿಸುವ ಸುಧಾರಿತ ವಿಧಾನಗಳನ್ನು ರೈತರು ಪ್ರತ್ಯಕ್ಷವಾಗಿ ನೋಡಿ ಅರ್ಥಮಾಡಿಕೊಳ್ಳುವಂತಹ ಯೋಜನೆಗಳನ್ನು ರೂಪಿಸುತ್ತಿದ್ದವು. ಹೀಗೆ ಆಧುನಿಕತೆಯ ಅಂಶಗಳನ್ನು ನೇರವಾಗಿ ರೈತರಿಗೆ ತಲುಪಿಸುವಲ್ಲಿ ಪ್ರಾಯೋಗಿಕ ಫಾರ್ಮ್‌ಗಳ ಪಾತ್ರ ಮಹತ್ವದ್ದಾಗಿತ್ತು. 1924ರಲ್ಲಿ ಬೋರ್ಡ್ ಆಫ್ ಅಗ್ರಿಕಲ್ಚರ್ ಇನ್ ಇಂಡಿಯಾದ ಬೆಂಗಳೂರಿನ ಸಮಾವೇಶದಲ್ಲಿ ನಾಲ್ವಡಿಯವರು ಪ್ರಾಯೋಗಿಕ ಫಾರ್ಮ್‌ಗಳ ಮಹತ್ವವನ್ನು ಕುರಿತು ಈ ರೀತಿ ಹೇಳಿದ್ದಾರೆ "ಪ್ರಯೋಗಾತ್ಮಕ ಫಾರ್ಮ್‌ಗಳನ್ನು ಮೂಲತಃ ಬಾಹ್ಯ ಪ್ರಯೋಗಶಾಲೆಗಳೆಂದು ನೋಡಬೇಕು. ಅವುಗಳಿಂದ ನಿರ್ದಿಷ್ಟ ಪ್ರದೇಶದಲ್ಲಿ ಬೆಳೆ ಮತ್ತು ಜಾನುವಾರಗಳನ್ನು ಉತ್ತಮ ವಿಧಾನಗಳ ಮೂಲಕ ಹೇಗೆ ಬೆಳೆಸಬಹುದೆಂಬ ಬಗ್ಗೆ ಸ್ಪಷ್ಟ ವಿಷಯಗಳನ್ನು ತಿಳಿಯಬಹುದು. ಬೃಹತ್ ಉತ್ಪಾದನೋದ್ಯಮಗಳು ತಮ್ಮವೇ ಆದ ಒಂದು ಅಥವಾ ಹೆಚ್ಚು ಪ್ರಯೋಗ ಶಾಲೆಗಳನ್ನು ಸ್ಥಾಪಿಸಿ ಅಲ್ಲಿ ವೈಜ್ಞಾನಿಕ ಸಿಬ್ಬಂದಿಯನ್ನಿರಿಸಿ ತಮ್ಮ ಉತ್ಪಾದನೆ ಮತ್ತಿತರ ಸಮಸ್ಯೆಗಳನ್ನು ನಿವಾರಿಸಿಕೊಳ್ಳುತ್ತಾರೆ ಹಾಗೆಯೇ ನಮ್ಮ ರಾಜ್ಯವೂ ಸಹ ತನ್ನದೇ ಆದ ಪ್ರಾಯೋಗಿಕ ಫಾರ್ಮ್‌ಗಳನ್ನು ಸ್ಥಾಪಿಸಿ ತನ್ನ ಪ್ರಮುಖ ಉದ್ಯಮವಾದ ಕೃಷಿಯ ಸಮಸ್ಯೆಗಳನ್ನು ಪರೀಕ್ಷೆಗೊಳಪಡಿಸುತ್ತದೆ. ಯಾವ ಉತ್ಪಾದನಾ ಸಂಸ್ಥೆಯೂ ಸಹ ತಮ್ಮ ವೈಜ್ಞಾನಿಕ ಪ್ರಯೋಗಾಲಯಗಳು ತಮ್ಮ ಸ್ವಂತ ಬಲದ ಮೇಲೆ ನಿಂತಿರಲಿ ಎಂದು ಬಯಸುವುದಿಲ್ಲವಾದರೂ ಪ್ರಯೋಗಾಲಯಗಳಲ್ಲಿನ ಕೆಲವು ಉತ್ಪನ್ನಗಳು ಬಹು ಮೌಲ್ಯವಾದುದಾಗಿರುತ್ತವೆ. ಆದರೂ ನನಗನ್ನಿಸುವಂತೆ ಪ್ರಯೋಗಾತ್ಮಕ ಫಾರ್ಮ್‌ಗಳನ್ನು ಹಣ ಮಾಡುವ ವಿಭಾಗಕ್ಕೆ ಹೆಚ್ಚು ಒತ್ತು ಕೊಡುವುದು ವಿಪರೀತವಾದ ಅವಿವೇಕ ಮತ್ತು ಸಂಕುಚಿತ-ದೃಷ್ಟಿ ಎನಿಸುತ್ತದೆ. ಅದೇ ವೇಳೆ ಉತ್ತಮ ಕಾರ್ಯಗಳಿಗೆ ಹಣವು ಖರ್ಚಾಗುತ್ತದೆಯೇ ಎಂಬ ಬಗ್ಗೆ ಹೆಚ್ಚು ನಿಗಾ ವಹಿಸಬೇಕು. ಕೃಷಿ ವಿಭಾಗದ ಯಶಸ್ಸನ್ನು ತೀರ್ಮಾನಿಸಲು ಅದು ತನ್ನ ಅಧೀನದ ಫಾರ್ಮ್‌ಗಳ ಮೂಲಕ ಎಷ್ಟು ಹಣದ ಲಾಭ ತಂದಿತು ಎಂಬುದಕ್ಕಿಂತ ಅದು ರಾಜ್ಯದ ಕೃಷಿ ಕ್ಷೇತ್ರದಲ್ಲಿ ಎಷ್ಟು ಪ್ರಯೋಗಗಳನ್ನು ನಡೆಸಿ ಕೃಷಿಯ ಮೇಲೆ ಪ್ರಭಾವ ಬೀರಿದೆ ಎಂಬುದನ್ನು ಪರಿಗಣಿಸಬೇಕು[258].

---

*257. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 149-150*

*258. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 226*

ನಾಲ್ವಡಿಯವರ ಮೇಲಿನ ಮಾತುಗಳು ಆ ಕಾಲಕ್ಕೆ ಮೈಸೂರು ಪ್ರದೇಶಕ್ಕೆ ಏಕೆ ಇಡೀ ಪೂರ್ವ ದೇಶಗಳಲ್ಲೇ ಕಂಡುಬರುವ ಅಪರೂಪದ ರಾಜತಾಂತ್ರಿಕನ ಮುಂದಾಲೋಚನೆಯ ಮಾತುಗಳು. ಸಂಶೋಧನೆಯ ಮೇಲೆ ತೊಡಗಿಸುವ ಹಣ ದೂರಗಾಮಿ ನೆಲೆಯಲ್ಲಿ ಶಕ್ತ ರಾಷ್ಟ್ರವನ್ನಾಗಿ ರೂಪಿಸುವ ನೀತಿಯೆಂದು ಪಾಶ್ಚಿಮಾತ್ಯ ದೇಶಗಳಲ್ಲಿದ್ದ ಆಚರಣೆಯನ್ನು ನಾಲ್ವಡಿಯವರು ಮೈಸೂರಿನಲ್ಲಿ ಅನುಷ್ಠಾನಕ್ಕೆ ತಂದರು. ನಾಲ್ವಡಿಯಂತಹ ದೂರ ದೃಷ್ಟಿ ಹೊಂದಿದ ರಾಜರ ಆಡಳಿತಾವಧಿಯುದ್ದಕ್ಕೂ ಪ್ರಾಯೋಗಿಕ ಫಾರ್ಮ್‌ಗಳು ರಾಜ್ಯದಾದ್ಯಂತ ಹರಡಿ ಆಧುನಿಕ ವಿಧಿ ವಿಧಾನಗಳನ್ನು ಕೃಷಿ ಮತ್ತಿತರ ಕ್ಷೇತ್ರಗಳಲ್ಲಿ ಅಳವಡಿಸಿದರು.

ಈ ನಿಟ್ಟಿನಲ್ಲಿ ನಾಲ್ವಡಿಯವರ ಆಡಳಿತದ ಆರಂಭದಲ್ಲೇ ಅಂದರೆ 1905ರ ಮೇ 6 ರಂದೇ ಬೆಂಗಳೂರು ಬಳಿಯ ಹೆಬ್ಬಾಳದಲ್ಲಿ ಒಂದು ಪ್ರಾಯೋಗಿಕ ಫಾರ್ಮ್ ಆರಂಭಗೊಂಡಿತು. ಈ ಫಾರ್ಮ್ 31 ಎಕರೆ ವಿಸ್ತೀರ್ಣದಲ್ಲಿ ಆರಂಭಗೊಂಡಿದ್ದು ನಂತರ ವಿಸ್ತೃತಗೊಳ್ಳುತ್ತಾ ಹೋಯಿತು. ಇಲ್ಲಿ ಪ್ರಮುಖವಾಗಿ ಕಬ್ಬು, ರಾಗಿ, ಭತ್ತದ ಬೆಳೆಗಳ ಬಗ್ಗೆ ಸಂಶೋಧನೆ ಮತ್ತು ತಳಿ ಅಭಿವೃದ್ಧಿ ಮಾಡಲು ಕ್ರಮಕೈಗೊಳ್ಳಲಾಗಿತ್ತು. ಹಾಗೆಯೇ ವ್ಯವಸಾಯ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ನೀಡಿ ವ್ಯವಸ್ಥಿತವಾಗಿ ವಿದ್ಯಾವಂತ ವರ್ಗದ ಮೂಲಕ ಕೃಷಿ ಆಧುನೀಕರಣಕ್ಕಾಗಿ ಕೃಷಿ ಶಾಲೆಯೊಂದನ್ನು ಸ್ಥಾಪಿಸಲಾಯಿತು[259]. ಶಿವಮೊಗ್ಗ ಜಿಲ್ಲೆಯ ಮಥೂರ್ ಎಂಬಲ್ಲಿ ಅಡಿಕೆ ಬೆಳೆಗೆ ಬರುತ್ತಿದ್ದ ಕೊಳೆ ರೋಗದ ಬಗ್ಗೆ ಸಂಶೋಧನೆ ನಡೆಸಲು ಮತ್ತೊಂದು ಪ್ರಾಯೋಗಿಕ ಫಾರ್ಮ್ ಅನ್ನು ಸ್ಥಾಪಿಸಲಾಯಿತು[260]. ಈ ಫಾರ್ಮ್‌ನ ಖರ್ಚುವೆಚ್ಚಗಳನ್ನು ಸುಪಾರಿ ಸೆಸ್ ಫಂಡ್ ಮೂಲಕ ಭರಿಸುವಂತೆ ಆಜ್ಞೆ ಮಾಡಲಾಯಿತು[261].

ಹಿರಿಯೂರು ಬಳಿ ವಾಣಿವಿಲಾಸ ಸಾಗರ ಅಥವಾ ಮಾರಿಕಣಿವೆ ಅಚ್ಚುಕಟ್ಟು ಪ್ರದೇಶದ ಬೆಳೆಗಳಾದ ಹತ್ತಿ, ಜೋಳ ಮತ್ತು ಕಬ್ಬುಗಳ ಬಗ್ಗೆ ಪ್ರಯೋಗ ನಡೆಸಲು ಬಬ್ಬೂರು ಎಂಬಲ್ಲಿ 1916ರಲ್ಲಿ ಒಂದು ಪ್ರಾಯೋಗಿಕ ಫಾರ್ಮ್ ಅನ್ನು ಸ್ಥಾಪಿಸಲಾಯಿತು[262]. ಈ ಫಾರ್ಮ್‌ನಲ್ಲಿ ಕಬ್ಬು ಮತ್ತು ಜೋಳದ ಉತ್ತಮ ತಳಿಯ ಬಿತ್ತನೆ ಬೀಜಗಳನ್ನು ವೃದ್ಧಿಪಡಿಸಲಾಯಿತು. ಹಾಗೆಯೇ ನವೀನ ಮಾದರಿಯ ಕಬ್ಬಿನ ಮಿಲ್‌ಗಳನ್ನು ಮತ್ತು ಕಾಟನ್ ಜಿನ್‌ಗಳನ್ನು ಸ್ಥಾಪಿಸಿ ಆಸುಪಾಸಿನ ರೈತರಿಗೆ ಅವುಗಳ ಉಪಯೋಗದ ಬಗ್ಗೆ ಪ್ರಾತ್ಯಕ್ಷಿಕವಾಗಿ ತಿಳಿಸಲಾಯಿತು[263]. 1917ರಲ್ಲಿ ನಾಗೇನಹಳ್ಳಿ ಎಂಬಲ್ಲಿ ಒಂದು ಫಾರ್ಮ್ ಅನ್ನು ಪ್ರಾರಂಭಿಸಲಾಯಿತು. ಇದು ಕನ್ನಂಬಾಡಿ ಜಲಾಶಯದ ವ್ಯಾಪ್ತಿಯಲ್ಲಿ ಬೆಳೆಯುತ್ತಿದ್ದ ವಿಶೇಷವಾಗಿ ಕಬ್ಬಿನ ಬೆಳೆಯ ಬಗ್ಗೆ ಸಂಶೋಧನೆ ಮಾಡುವ ಉದ್ದೇಶ ಹೊಂದಿತ್ತು. ಇಲ್ಲಿ ವಿವಿಧ ಕಬ್ಬಿನ ತಳಿಗಳ ಬಗ್ಗೆ

---

259. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್, ಅಗ್ರಿಕಲ್ಚರ್ ಡಿಪಾರ್ಟ್‌ಮೆಂಟ್ ಪು. 23*
260. *ಹ್ಯಾಂಡ್ ಬುಕ್ ಆಫ್ ಮೈಸೂರ್ ಅಡ್ಮಿನಿಸ್ಟ್ರೇಸ್, ಪು. 165*
261. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್, 1910, ಪು. 16*
262. *ಗವರ್ನಮೆಂಟ್ ಆಫ್ ಮೈಸೂರ್; ಅಗ್ರಿಕಲ್ಚರ್ ಇನ್ ಮೈಸೂರ್, ಪು. 28*
263. *ಹಯವದನ ರಾವ್. ಸಿ. (ಸಂ)., ಪೂರ್ವೋಕ್ತ, ಪು. 150*

ಸಂಶೋಧನೆ ಮತ್ತು ತಳಿ ಅಭಿವೃದ್ಧಿ ಮಾಡಿ ಬಿತ್ತನೆಯ ಬೀಜವನ್ನು ವಿಸ್ತೃತ ಪ್ರಮಾಣದಲ್ಲಿ ರೈತರಿಗೆ ಒದಗಿಸಲಾಯಿತು[264]. ಹಾಗೆಯೇ ಹುಣಸೂರು ಬಳಿ ಒಂದು ಪ್ರಾಯೋಗಿಕ ಫಾರ್ಮ್ ಸ್ಥಾಪಿಸಿ ಅಲ್ಲಿ ಕಾರ್ ರಾಗಿಯ ತಳಿ ಅಭಿವೃದ್ಧಿ ಬಗ್ಗೆ ಕ್ರಮ ಕೈಗೊಳ್ಳಲಾಯಿತು. ಬೆಂಗಳೂರು ನಗರದ ಜನಸಂಖ್ಯೆ ಹೆಚ್ಚಿದಂತೆ ತರಕಾರಿ, ಹಣ್ಣು, ಹಾಲಿನ ಬೇಡಿಕೆ ಹೆಚ್ಚಿತು. ಹಾಗಾಗಿ ಬೆಂಗಳೂರಿನ ಬಳಿಯ ಸುಣಕಲ್ ಎಂಬಲ್ಲಿ ತರಕಾರಿ ಮತ್ತು ಹುಲ್ಲು ಬೆಳೆಗಳ ಅಭಿವೃದ್ಧಿಗಾಗಿ ಒಂದು ಯೋಜನೆಯನ್ನು ರೂಪಿಸಲಾಯಿತು. ಪಶುಸಂಗೋಪನೆಗೆ ಅನುಕೂಲವಾಗುವಂತೆ ಮಾಡಲು ವಿದೇಶಗಳಿಂದ ಸುಧಾರಿತ ಹುಲ್ಲಿನ ತಳಿಗಳನ್ನು ಆಮದು ಮಾಡಿಕೊಳ್ಳಲಾಯಿತು. ಅವುಗಳಲ್ಲಿ ಪ್ರಮುಖವಾದವೆಂದರೆ ಲುಸರ್ನ್, ಗೀನಿಯಾ ಗ್ರಾಸ್ ಮತ್ತು ರ್ಹೋಡ್ಸ್ ಗ್ರಾಸ್. ಇವು ಜಾನುವಾರುಗಳಿಗೆ ಹೆಚ್ಚಿನ ಮತ್ತು ವರ್ಷಪೂರ್ತಿ ಮೇವನ್ನು ಒದಗಿಸುತ್ತಿದ್ದವು[265]. ನಾಲ್ವಡಿಯವರ ಪ್ರಯೋಗಾತ್ಮಕ ಫಾರ್ಮ್‌ಗಳ ಉದ್ದೇಶ ಮತ್ತು ಕನಸು ಹಿಡೇರಿದುದನ್ನು ಕುರಿತು ಅವರು ಬಾಳೆಹೊನ್ನೂರು ಪ್ರಯೋಗಾತ್ಮಕ ಫಾರ್ಮ್‌ನಲ್ಲಿ ಪ್ರಯೋಗಾಲಯವನ್ನು ಉದ್ಘಾಟಿಸುತ್ತಾ ಈ ರೀತಿ ಹೇಳಿದರು "…..ಪ್ರತಿ ಪ್ರಯೋಗಾತ್ಮಕ ಫಾರ್ಮ್‌ಗಳು ಪ್ರಯೋಗಾಲಯಗಳಿದ್ದಂತೆ ಎಂದು ಹೇಳಿದೆ. ಇಲ್ಲಿ ಒಂದು ನಿಜವಾಗಿ ಕಾರ್ಯನಿರತವಾಗಿರುವುದನ್ನು ನೀವು ಹೊಂದಿದ್ದೀರಿ, ಇಲ್ಲಿ ಸೂಕ್ಷ್ಮದರ್ಶಕದಡಿಯಲ್ಲಿ 20,000 ಸಸಿಗಳಿವೆ; 20 ಅಥವಾ 30 ವಿವಿಧ ತಾಕುಗಳಲ್ಲಿ ವಿವಿಧ ಗೊಬ್ಬರಗಳನ್ನು ಬಳಸಲಾಗುತ್ತಿದೆ; ತಿಳಿದಿರುವ ಎಲ್ಲಾ ವಿಧವಾದ ಸಿಂಪಡಣೆಗಳನ್ನು ಪರೀಕ್ಷೆಗೊಳಪಡಿಸಲಾಗಿದೆ ಮತ್ತು ಈ ಪ್ರಯೋಗಾಲಯದೊಳಗೆ ಶ್ರೇಷ್ಠ ದರ್ಜೆಯ ತರಭೇತಿ ಪಡೆದ ವಿಜ್ಞಾನಿಗಳು ನಿಮ್ಮ ಬೆಳೆಗಳನ್ನು ನಾಶಪಡಿಸುತ್ತಿದ್ದ ಕೀಟಗಳನ್ನು ಮತ್ತು ಕಾಫಿಯ ಎಲ್ಲ ವಿಧದ ರೋಗಗಳನ್ನು ಕುರಿತು ಸಂಶೋಧನೆ ಮಾಡಲು ಸತತ ಪರಿಶ್ರಮದಲ್ಲಿ ನಿರತರಾಗಿದ್ದಾರೆ"[266] ಎಂಬುದಾಗಿ ಪ್ರಶಂಸಿದರು. ಹೀಗೆ ನಾಲ್ವಡಿಯವರು ಮೈಸೂರು ಸಂಸ್ಥಾನವನ್ನು ಸಾಂಪ್ರದಾಯಿಕತೆಯಿಂದ ಪರಿವರ್ತನೆಯತ್ತ ಶೀಲತೆಯೆಡೆ ಕೊಂಡೊಯ್ಯುವಲ್ಲಿ ಆಧುನಿಕಾಂಶಗಳ ಅಳವಡಿಕೆಗಳ ಬಗ್ಗೆ ಪ್ರೋತ್ಸಾಹಿಸುತ್ತಾ ಬಂದರು. ಹಾಗೆಯೇ ಹೊಸ ಹೊಸ ಸಂಶೋಧನೆಗಳನ್ನು ಜನಸಾಮಾನ್ಯರಿಗೆ ಪ್ರಚಾರಮಾಡುವಲ್ಲಿ ಬೇಕಾದ ಶಿಕ್ಷಣ ಮತ್ತು ಪ್ರಚಾರಕಾರ್ಯಗಳ ಬಗ್ಗೆಯೂ ಕ್ರಮಗಳನ್ನು ಕೈಗೊಂಡರು.

---

*264. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು - 150*

*265. ಅದೇ., ಪೂರ್ವೋಕ್ತ, ಸಂಪುಟ - 1, ಡಿಸ್‌ಕ್ರಿಪ್ಟೀವ್, ಪು. 70*

*266. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 320*

*ಆಧುನಿಕ ಕೃಷಿ ಶಿಕ್ಷಣ ಮತ್ತು ಪ್ರಚಾರ ಕಾರ್ಯ*

ಆಧುನಿಕ ಕೃಷಿ ವಿಧಿ ವಿಧಾನಗಳನ್ನು ಹಲವು ಯೋಜನೆಗಳ ಮೂಲಕ ಸಮಾಜಕ್ಕೆ ತಲುಪಿಸುವುದು ಒಂದು ವಿಧವಾದ ಆಧುನೀಕರಣ ಪ್ರಕ್ರಿಯೆ. ಆದರೆ ಅವಿದ್ಯಾವಂತರಾದ ರೈತರಿಗೆ ಆಧುನಿಕ ಅಂಶಗಳನ್ನು ಅಳವಡಿಸಿಕೊಳ್ಳಲು ಅನೇಕ ಅಡೆತಡೆಗಳಿರುತ್ತವೆ. ಅವರಿಗೆ ಸಾಹಿತ್ಯದ ಮೂಲಕ ಆ ಜ್ಞಾನವನ್ನು ಹಸ್ತಾಂತರಿಸಲಾಗುವುದಿಲ್ಲ. ನಾಲ್ವಡಿಯವರು ಈ ಸಮಸ್ಯೆಯನ್ನು ಅರಿತೇ "ಅವನಿಗೆ (ರೈತನಿಗೆ) ಕಲಿಸುವ ವಿಧಾನವು ಅವನು ಪ್ರತ್ಯಕ್ಷವಾಗಿ ನೋಡುವಂತೆ ಮಾಡುವ ಮೂಲಕ[267] ಎನ್ನುತ್ತಾ ಪ್ರಾತ್ಯಕ್ಷಿಕ ಫಾರ್ಮ್‌ಗಳನ್ನು, ವಸ್ತು ಪ್ರದರ್ಶನದಂತಹ ಕಾರ್ಯಕ್ರಮಗಳನ್ನು ರೂಪಿಸಿದರು. ಆದರೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರ ಮೂಲಕ ಆಧುನಿಕ ಕೃಷಿ ಶಿಕ್ಷಣವನ್ನು ಒದಗಿಸಬೇಕೆಂದು ಸಾರ್ವಜನಿಕ ಬೇಡಿಕೆ ಬಂದ ಮೇಲೆ ಕೃಷಿ ಶಾಲೆಗಳ ಸ್ಥಾಪನೆಗೆ ಗಮನ ಹರಿಸಲಾಯಿತು. ಆಧುನೀಕರಣ ಪ್ರಕ್ರಿಯೆಗೆ ಶಾಲಾ ಶಿಕ್ಷಣವನ್ನು ಮಾಧ್ಯಮವನ್ನಾಗಿ ಬಳಸಿಕೊಳ್ಳಲಾಯಿತು. ಆ ಮೂಲಕ ಕೃಷಿಯನ್ನು ಒಂದು ಸಾಂಪ್ರದಾಯಿಕ ಕಸುಬನ್ನಾಗಿ ಮಾತ್ರವಲ್ಲದೆ ವೈಜ್ಞಾನಿಕ ವಿಧಾನದಿಂದ ಮಾಡುವಂತಹ ವೃತ್ತಿಯನ್ನಾಗಿ ಸ್ವೀಕರಿಸುವಂತಹ ವಿದ್ಯಾವಂತರ ವರ್ಗವೊಂದನ್ನು ರೂಪಿಸಲಾಯಿತು. ಕೃಷಿ ತಜ್ಞರಾದ ಕೋಲ್‌ಮನ್‌ರು ರೂಪಿಸಿದ ಕೃಷಿ ಶಿಕ್ಷಣವನ್ನು ಅಭಿವೃದ್ಧಿಪಡಿಸುವ ಬಗೆಗಿನ ವರದಿಯನ್ನಾಧರಿಸಿ 1913ರ ಜುಲೈ 1 ರಂದು ಬೆಂಗಳೂರಿನ ಹೆಬ್ಬಾಳ್ ಫಾರ್ಮ್‌ನಲ್ಲಿ ಒಂದು ಕೃಷಿ ಶಾಲೆಯನ್ನು ಸ್ಥಾಪಿಸಲಾಯಿತು. ಇಲ್ಲಿ ಮೂರು ವರ್ಷಗಳ ಕಾಲ ಶಿಕ್ಷಣ ನೀಡಲಾಗುತ್ತಿತ್ತು. ಪಾಠ ಪ್ರವಚನಗಳು ಇಂಗ್ಲಿಷ್‌ನಲ್ಲಿರುತ್ತಿದ್ದವು[268]. ದೇಶೀಯ ಭಾಷೆಯಲ್ಲಿ ಶಿಕ್ಷಣ ನೀಡಲು ತುಮಕೂರು ಜಿಲ್ಲೆಯ ಚಿಕ್ಕನಹಳ್ಳಿ ಎಂಬಲ್ಲಿ ಒಂದು ಕೃಷಿ ಶಾಲೆಯನ್ನು (ಚಿಕ್ಕನಹಳ್ಳಿ ವರ್ನಾಕ್ಯುಲರ್ ಅಗ್ರಿಕಲ್ಚರ್ ಸ್ಕೂಲ್) ಸ್ಥಾಪಿಸಲಾಯಿತು. ಇಲ್ಲಿ ಒಂದು ವರ್ಷ ಕ್ಷೇತ್ರಕಾರ್ಯ ತರಭೇತುದಾರರಿಗೆ ತರಭೇತಿ ನೀಡಲಾಗುತ್ತಿತ್ತು[269]. ಇಲ್ಲಿನ ಪ್ರಾಯೋಗಿಕ ಶಿಕ್ಷಣದಲ್ಲಿ ಮರಗೆಲಸ, ಕಮ್ಮಾರಿಕೆ, ಹಗ್ಗ, ಬುಟ್ಟಿ ಎಣೆಯುವ ಹಾಗೂ ಚರ್ಮಗಾರಿಕೆಗಳ ಬಗ್ಗೆ ಬೋಧಿಸಲಾಗುತ್ತಿತ್ತು. ದಿನನಿತ್ಯ ಬಳಕೆಯ ಕೃಷಿ ಉಪಕರಣಗಳಾದ ನೇಗಿಲು, ಕೊಡಲಿ, ಮುಂತಾದವನ್ನು ವಿದ್ಯಾರ್ಥಿಗಳೇ ನಿರ್ಮಿಸುವಂತೆ ತರಭೇತಿ ನೀಡಲಾಗುತ್ತಿತ್ತು[270].

ಬೆಂಗಳೂರಿನ ಬಳಿ ರಾಮಕೃಷ್ಣಪುರ ಎಂಬಲ್ಲಿ 1929 ರಲ್ಲಿ ರಾಮಕೃಷ್ಣ ಕೃಷಿಶಾಲಾ ಎಂಬ ಒಂದು ಕೃಷಿ ಶಾಲೆಯನ್ನು ವೆಂಕಟರಾಮಯ್ಯ ಎಂಬ ಖಾಸಗಿ ವ್ಯಕ್ತಿ ಆರಂಭಿಸಿದರು. ಈ ಶಾಲೆಯ ಖರ್ಚುವೆಚ್ಚಗಳಿಗಾಗಿ ಅವರು ಹಣವನ್ನು ಒದಗಿಸಿದರು. ಈ ಶಾಲೆಗೆ ಬೆಂಗಳೂರು ಡಿಸ್ಟ್ರಿಕ್ಟ್ ಬೋರ್ಡ್ ಸಹ ಹಣದ ನೆರವು ನೀಡಿತು. ಈ ಶಾಲೆಯಲ್ಲಿ ಉತ್ತಮ

---

267. *ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 274*

268. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್; ಅಗ್ರಿಕಲ್ಚರ್ ಡಿಪಾರ್ಟ್‌ಮೆಂಟ್, ಪು. 25*

269. *ಅದೇ., ಪು. 26*

270. *ಅಗ್ರಿಕಲ್ಚರ್ ಇನ್ ಮೈಸೂರ್ (ದ್ವಿತೀಯ ಮತ್ತು ಪರಿಷ್ಕೃತ ಆವೃತ್ತಿ), 1939, ಪು. 132-133*

ಊಟ, ವಸತಿ ಮತ್ತು ಪ್ರಾಯೋಗಿಕ ಶಿಕ್ಷಣವನ್ನು ಒದಗಿಸಲಾಯಿತು. ರಾಜ್ಯದ ವಿವಿಧ ಯೋಜನೆಗಳಲ್ಲಿ ತಜ್ಞರಾಗಿ, ತರಭೇತುದಾರರಾಗಿ ದುಡಿಯುವ ತಜ್ಞರು ಈ ಶಾಲೆಯಲ್ಲಿ ರೂಪುಗೊಳ್ಳುವಂತಾದರು ಮತ್ತು ಇದರಿಂದ ಆಧುನೀಕರಣದ ಪ್ರಕ್ರಿಯೆಗೆ ಇನ್ನೂ ಹೆಚ್ಚಿನ ಚಾಲನೆ ದೊರಕಿದಂತಾಯಿತು[271].

ಕೆಲ ಕಾಲಾನಂತರ ಕೃಷಿ ಶಿಕ್ಷಣ ಮತ್ತು ಸಾಮಾನ್ಯ ಶಿಕ್ಷಣ ಪಡೆದ ಗ್ರಾಮೀಣ ಯುವಕರು ಗ್ರಾಮಗಳನ್ನು ತೊರೆದು ನಿರುದ್ಯೋಗಿಗಳಾಗಿ ನಗರಗಳಿಗೆ ವಲಸೆ ಹೋಗಿ ತೊಂದರೆಪಡುತ್ತಿದ್ದಾರೆಂಬ ಟೀಕೆಗಳು ಬರಲಾರಂಭಿಸಿದವು. ಆದ್ದರಿಂದ ನಾಲ್ವಡಿಯವರ ಸರ್ಕಾರ ಶಿಕ್ಷಿತ ಯುವಕರನ್ನು ಕೃಷಿ ಕ್ಷೇತ್ರದಲ್ಲಿ ತೊಡಗುವಂತೆ ಮಾಡುವತ್ತ ಒಂದು ದಿಟ್ಟ ಹೆಜ್ಜೆಯನ್ನಿಟ್ಟಿತು. 1929ರ ಆರ್ಥಿಕ ಸಮ್ಮೇಳನದಲ್ಲಿ ಡಾ. ಕೋಲ್‌ಮನ್‌ರವರು ಮಾತನಾಡುತ್ತಾ ಕೃಷಿಯಲ್ಲಿ ಶಿಕ್ಷಣ ಪಡೆದ ಯುವಕರನ್ನು ರಾಜ್ಯದಾದ್ಯಂತ ಇರುವ ಅಮೃತ್ ಮಹಲ್ ಕಾವಲ್‌ಗಳು ಮತ್ತು ಈಚಲು ವನಗಳಲ್ಲಿ ಕೃಷಿ ಚಟುವಟಿಕೆಗಳಲ್ಲಿ ದುಡಿಯುವಂತೆ ಮಾಡಬೇಕೆಂದೂ, ಆ ಮೂಲಕ ನಿರುದ್ಯೋಗಿಗಳಾಗಿರುವ ಯುವಕರಿಗೆ ಉತ್ತಮ ಜೀವನ ರೂಪಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಂತಾಗುತ್ತದೆಂದು ಅಭಿಪ್ರಾಯಪಟ್ಟರು ಈ ನಿಟ್ಟಿನಲ್ಲಿ ಸರ್ಕಾರವು ಮಧ್ಯಮ ವರ್ಗದ ನಿರುದ್ಯೋಗ ಸಮಸ್ಯೆಯ ಬಗ್ಗೆ ಪರಿಶೀಲಿಸಲು ಸಿ.ಎಸ್.ಬಾಲಸುಂದರಂ ಅಯ್ಯರ್‌ರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಆನಂತರ ಸರ್ಕಾರವು ಭದ್ರಾ ಕಾಲುವೆಯ ವ್ಯಾಪ್ತಿಯಲ್ಲಿ ಕೃಷಿ ಕಾಲೋನಿಯನ್ನು ಸ್ಥಾಪಿಸುವ ಬಗ್ಗೆ ಯೋಜಿಸಿತು. ಆದರೆ ಕಾರ್ಯರೂಪಕ್ಕೆ ಬರಲಿಲ್ಲ[272]. ಕೊನೆಗೆ ಸರ್ಕಾರವು 1940 ರಲ್ಲಿ ಕೃಷಿ ಕಾಲೋನಿಗಳ ಸ್ಥಾಪನೆಯ ಯೋಜನೆಯನ್ನು ಅಂಗೀಕರಿಸಿತು. ಆ ಯೋಜನೆಯಂತೆ "ಪ್ರತಿ ಕಾಲೋನಿಯ ವ್ಯಕ್ತಿಗೂ 15 ಎಕರೆ ಭೂಮಿಯನ್ನು ಆರು ವರ್ಷಗಳ ಅವಧಿಗೆ ಗುತ್ತಿಗೆ ನೀಡಲಾಯಿತು ಮತ್ತು ಸರ್ಕಾರವು ಪ್ರತಿ ಕಾಲೋನಿಯ ವ್ಯಕ್ತಿಗೂ ಕಾರ್ಯ ಬಂಡವಾಳವಾಗಿ 1500 ರೂಪಾಯಿಗಳನ್ನು, ಮನೆ, ಹಸುವಿನ ಕೊಟ್ಟಿಗೆ, ಎತ್ತುಗಳು, ನೇಗಿಲುಗಳು ಮತ್ತು ವರ್ಷದ ಕಾರ್ಯ ವೆಚ್ಚಕ್ಕೆಂದು 500 ರೂಪಾಯಿಗಳನ್ನು ಕೊಡಲಾಗುತ್ತಿತ್ತು. ಸರ್ಕಾರ ಮುಂಗಡವಾಗಿ ನೀಡಿದ ಹಣಕ್ಕೆ ಮೊದಲ ನಾಲ್ಕು ವರ್ಷ ಯಾವುದೇ ಬಡ್ಡಿ ವಿಧಿಸುತ್ತಿರಲಿಲ್ಲ. ಆನಂತರ ವರ್ಷಕ್ಕೆ ಶೇಕಡಾ 4 ರ ಬಡ್ಡಿಯಂತೆ ವಿಧಿಸಿ ನಂತರದ ನಾಲ್ಕು ವರ್ಷಗಳಲ್ಲಿ ಐದು ಸಮ ಕಂತುಗಳಲ್ಲಿ ಸಾಲ ವಸೂಲಿ ಮಾಡುವುದಾಗಿತ್ತು"[273]. ಈ ಯೋಜನೆಯಂತೆ ಮೈಸೂರಿನ ಶಿಕ್ಷಿತ ನಿರುದ್ಯೋಗಿಗಳಿಗೆ ಸಹಾಯ ಮಾಡಲು ಮತ್ತು ಕೃಷಿಯನ್ನು ಆಧುನೀಕರಣಗೊಳಿಸಲು ಕನ್ನಂಬಾಡಿ ಅಣೆಕಟ್ಟೆಯ ಇರ್ವಿನ್ ನಾಲೆಯ ವ್ಯಾಪ್ತಿಯಲ್ಲಿ ಕೃಷಿ ಕಾಲೋನಿಗಳನ್ನು ಸ್ಥಾಪಿಸಿತು. ಈ ಯೋಜನೆ ನಾಲ್ವಡಿಯವರ ನಿಧನಾ ನಂತರ ಅಂದರೆ 1941ರಿಂದ ಕಾರ್ಯರೂಪಕ್ಕೆ ಬಂದಿತು. ಸರ್ಕಾರ

---

*271. ಅದೇ., ಪು. 133-134*

*272. ಶಾಮರಾವ್ ಎಂ., ಮಾಡರ್ನ್ ಮೈಸೂರ್, ಸಂಪುಟ - II, ಬೆಂಗಳೂರು, 1936, ಪು. 411*

*273. ಜುಲೈ 1940, ಪು. 215*

ಯೋಜನೆಯಂತೆ ಶಿಕ್ಷಿತ ನಿರುದ್ಯೋಗಿಗಳನ್ನು ಗುರುತಿಸಿ 10 ಎಕರೆ ನೀರಾವರಿ ಮತ್ತು 5 ಎಕರೆ ಒಣಭೂಮಿ, ಮನೆ, 1000 ರೂಪಾಯಿ ಬಂಡವಾಳ 500 ರೂಪಾಯಿಗಳ ಉಪಕರಣಗಳು, 500 ರೂಪಾಯಿ ಕೃಷಿ ವೆಚ್ಚಗಳಿಗೆಂದು ಮುಂಗಡವಾಗಿ ನೀಡಿತು[274]. ಕಾಲೋನಿಗಳಲ್ಲಿ ನೆಲೆಸಿದ ಶಿಕ್ಷಿತ ಯುವಕರು ಆಧುನಿಕ ವಿಧಿ ವಿಧಾನಗಳನ್ನು ಕೃಷಿಯಲ್ಲಿ ಅಳವಡಿಸುತ್ತಾ ಹೆಚ್ಚು ಉತ್ಪಾದನೆಯೆಡೆಗೆ ಕಾರ್ಯನಿರತರಾದರು. ನಾಲ್ವಡಿಯವರ ಕೃಷಿ ಕಾಲೋನಿ ಯೋಜನೆಯು ನಿರುದ್ಯೋಗವನ್ನು ಒಂದು ಕಡೆ ನಿವಾರಿಸಿದರೆ ಶಿಕ್ಷಿತರನ್ನು ನಗರದಿಂದ ಗ್ರಾಮಗಳತ್ತ, ಕೃಷಿಯತ್ತ ತಿರುಗಿಸುವ ಮೂಲಕ ಕೃಷಿ ಆಧುನೀಕರಣ ಪ್ರಕ್ರಿಯೆಗೆ, ಆ ಮೂಲಕ ಮೈಸೂರಿನ ಸಮಗ್ರ ಅಭಿವೃದ್ಧಿಯತ್ತ ಇಟ್ಟ ಮಾದರಿಯ ದಿಟ್ಟ ಹೆಜ್ಜೆಯೆನ್ನಬಹುದು.

ಆಧುನಿಕ ಕೃಷಿ ಜ್ಞಾನವನ್ನು ಹರಡಲು ಹಲವು ಪ್ರಚಾರ ಕ್ರಮಗಳನ್ನು ಕೈಗೊಳ್ಳಲಾಯಿತು. ಮೈಸೂರು ರಾಜ್ಯದ ಶೇ 80ಕ್ಕೂ ಹೆಚ್ಚಿನ ಜನರು ಕೃಷಿಕರೂ ಮತ್ತು ಗ್ರಾಮೀಣ ಹಿನ್ನಲೆಯವರಾಗಿದ್ದು ಅವಿದ್ಯಾವಂತರಾಗಿದ್ದರು. ಹಾಗಾಗಿ ಪ್ರಚಾರವನ್ನು ಸಹ ವಿನೂತನ ವಿಧಾನಗಳಲ್ಲಿ ಕೈಗೊಳ್ಳಲಾಯಿತು. ಪ್ರಾತ್ಯಕ್ಷಿಕ ವಿಧಾನವನ್ನು ಪ್ರಧಾನವಾಗಿ ಅನುಸರಿಸಿದರೂ ಸಹ ಆಧುನಿಕ ಕೃಷಿ ಜ್ಞಾನವನ್ನು ಮುದ್ರಿತ ಸಾಹಿತ್ಯದ ರೂಪದಲ್ಲೂ ತಂದು ಪ್ರಚಾರವನ್ನು ಕೈಗೊಳ್ಳಲಾಯಿತು. ಹಸಿರು ಗೊಬ್ಬರದ ಬಳಕೆ, ಕಾಂಬೋಡಿಯಾ ಹತ್ತಿ ಬೆಳೆಯುವಂತೆ, ದನಗಳ ಗೊಬ್ಬರವನ್ನು ಸಂಸ್ಕರಿಸುವ ವಿಧಿವಿಧಾನ, ಮಿಡತೆ ಮುಂತಾದ ಕೀಟಗಳನ್ನು ತಡೆಯುವ ಕ್ರಮಗಳು, ಉತ್ತಮ ತಳಿಯ ಹೋರಿಗಳನ್ನು ಸಾಕುವ ಕ್ರಮ ಮುಂತಾದ ಆಧುನಿಕ ಅಂಶಗಳನ್ನು ಬಣ್ಣದ ಕಾಗದಗಳ ಮೇಲೆ ಮುದ್ರಿಸಿ ಗ್ರಾಮಗಳಲ್ಲಿ ಪ್ರದರ್ಶಿಸಲಾಗುತ್ತಿತ್ತು.[275] ದೇಶೀಯ ವೃತ್ತ ಪತ್ರಿಕೆಗಳಲ್ಲಿ ಆಧುನಿಕ ಕೃಷಿಯ ಬಗೆಗಿನ ಮಾಹಿತಿ ಮತ್ತು ಲೇಖನಗಳನ್ನು ಕೃಷಿ ಋತುಮಾನಕ್ಕೆ ಅನುಕೂಲವಾಗುವಂತಹವುಗಳನ್ನು ಪ್ರಕಟಿಸಲಾಗುತ್ತಿತ್ತು[276]. ದೇಶೀಯ ಭಾಷೆಯಲ್ಲಿ ಕೃಷಿಯ ಬಗೆಗಿನ ಮಾಹಿತಿಯನ್ನು ಕರಪತ್ರಗಳಲ್ಲಿ ಮುದ್ರಿಸಿ ಜಾತ್ರೆ ಮುಂತಾದ ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಹಂಚಲಾಗುತ್ತಿತ್ತು. ಕಂದಾಯ ಇಲಾಖೆಯ ಅಧಿಕಾರಿಗಳಿಗೆ ಹೆಬ್ಬಾಳ್ ಫಾರ್ಮ್‌ನಲ್ಲಿ ಆಧುನಿಕ ಕೃಷಿಯ ಬಗ್ಗೆ ಅರಿವು ಮೂಡಿಸಿ ಜಮಾಬಂದಿ ಮತ್ತು ತಾಲ್ಲೂಕು ಪ್ರವಾಸಗಳ ಸಂದರ್ಭದಲ್ಲಿ ಸಾರ್ವಜನಿಕರಿಗೆ ಪ್ರಚಾರ ಮಾಡುವಂತೆ ವ್ಯವಸ್ಥೆ ಮಾಡಲಾಗಿತ್ತು[277]. ಅರ್ಥಿಕ ಪರಿಷತ್ತು ಜಿಲ್ಲಾ, ತಾಲ್ಲೂಕು ಮತ್ತು ಹೋಬಳಿ ಮಟ್ಟದ ಸಮ್ಮೇಳನಗಳಲ್ಲಿ

---

*274. ಮೈಸೂರ್ ಇನ್‌ಫರ್ಮೇಷನ್ ಬುಲೆಟಿನ್., ಮಾರ್ಚ್ ಮತ್ತು ಏಪ್ರಿಲ್ 1941, ಪು. 82*

*275. ಅಗ್ರಿಕಲ್ಚರ್ ಇನ್ ಮೈಸೂರ್, ಪೂರ್ವೋಕ್ತ, ಪು. 191*

*276. ಅಗ್ರಿಕಲ್ಚರ್ ಇನ್ ಮೈಸೂರ್, ಪೂರ್ವೋಕ್ತ, ಪು. 192*

*277. ಸರ್ಕಾರಿ ಆದೇಶ ಸಂಖ್ಯೆ. 6433 - 83 - ಎ ಅಂಡ್ ಇ; 54-17-9, ದಿನಾಂಕ : 9-11-1919.*

ಆಧುನಿಕ ಬಿತ್ತನೆ ಬೀಜ, ಉಪಕರಣಗಳು, ಕ್ರಿಮಿನಾಶಕಗಳು, ರಾಸಾಯನಿಕ ಗೊಬ್ಬರಗಳು ಮುಂತಾದವನ್ನು ಪ್ರತ್ಯಕ್ಷವಾಗಿ ಪ್ರದರ್ಶಿಸಿ ಭಾಷಣಗಳ ಮೂಲಕ ತಿಳಿಸಲಾಗುತ್ತಿತ್ತು. ಕೃಷಿ ಇಲಾಖೆಯು ಪ್ರತಿ ವರ್ಷ ಪ್ರಕಟಿಸುತ್ತಿದ್ದ ಕ್ಯಾಲೆಂಡರ್‌ನಲ್ಲಿ ಕೃಷಿಯನ್ನು ಅಭಿವೃದ್ಧಿಗೊಳಿಸುವ ಕ್ರಮಗಳನ್ನು ಕುರಿತ ವಿವರಣೆಯನ್ನು ಮುದ್ರಿಸಿ ಹಂಚಲಾಗುತ್ತಿತ್ತು. ಕೃಷಿಗೆ ಸಂಬಂಧಿಸಿದ ವೈಜ್ಞಾನಿಕ ಸಂಶೋಧನೆಗಳನ್ನು, ಪ್ರಯೋಗಾಲಯಗಳಲ್ಲಿನ ಫಲಿತವನ್ನು 'ಮೈಸೂರ್ ಎಕನಾಮಿಕ್ ಜರ್ನಲ್' ಹಾಗೂ 'ಅರ್ಥಸಾಧಕ' ಎಂಬ ಇಂಗ್ಲಿಷ್ ಮತ್ತು ಕನ್ನಡ ಜರ್ನಲ್‌ಗಳಲ್ಲಿ ಪ್ರಕಟಿಸಲಾಗುತ್ತಿತ್ತು. ಪ್ರಸಿದ್ಧ ಕೃಷಿ ಜರ್ನಲ್‌ಗಳ ಪ್ರಮುಖ ಲೇಖನಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಕರಪತ್ರಗಳ ಮೂಲಕ ಪ್ರಚಾರ ಮಾಡಲಾಯಿತು. ಕನ್ನಡದ ಪ್ರಕಟಣೆಗಳಿಂದಾಗಿ ಬಹುಸಂಖ್ಯಾತ ಗ್ರಾಮೀಣ ಜನರಿಗೆ ಸುಲಭವಾಗಿ ಅರ್ಥವಾಗಲು ಸಾಧ್ಯವಾಯಿತು[278]. ಹೀಗೆ ನಾಲ್ವಡಿಯವರ ಸರ್ಕಾರವು ಪಾಶ್ಚಿಮಾತ್ಯ ಪ್ರಭಾವದ ಅಂಶಗಳನ್ನು ಮೈಸೂರಿಗೆ ತರುವಲ್ಲಿ, ಸ್ಥಳೀಯ ಅವಶ್ಯಕತೆಗೆ ತಕ್ಕಂತೆ ಅವುಗಳನ್ನು ಅಳವಡಿಸಿಕೊಳ್ಳುವಲ್ಲಿ ಮತ್ತು ಅದನ್ನು ಸಾರ್ವಜನಿಕಗೊಳಿಸುವಲ್ಲಿ ಬಹು ಆಸಕ್ತಿಯನ್ನು ತೋರಿತು.

ಆಧುನಿಕತೆಯನ್ನು ಪ್ರಚುರಿಸಲು ಸರ್ಕಾರಿ ಸಂಸ್ಥೆಗಳು ಹೇಗೆ ಶ್ರಮಿಸಿದವೊ ಹಾಗೆಯೇ ಕೆಲವು ಮೈಸೂರಿನ ಕ್ರಿಯಾಶೀಲ, ಪ್ರಯೋಗಶೀಲ ಗಣ್ಯ ವ್ಯಕ್ತಿಗಳು ಖಾಸಗಿಯಾಗಿಯೇ ಅಂತಹ ಪ್ರಯತ್ನಗಳನ್ನು ಮಾಡಿದರು. ಉದಾಹರಣೆಗೆ ಡಿ.ವಿ. ಗುಂಡಪ್ಪನವರು ತಮ್ಮ 'ಜ್ಞಾಪಕ ಚಿತ್ರಶಾಲೆ' ಸರಣಿಯಲ್ಲಿ ಪ್ರಜಾಪ್ರತಿನಿಧಿಸಭೆಯ ಸದಸ್ಯರಾಗಿದ್ದ ಬೆಂಗಳೂರಿನ ಮಾಗಡಿಯ ಕರಣಿಕ ಕೃಷ್ಣಮೂರ್ತಿ ಎಂಬುವವರು 1907-08 ರ ಸುಮಾರಿನಲ್ಲಿ ಪಾಶ್ಚಿಮಾತ್ಯ ಮೂಲದ ಆಧುನಿಕ ಕೃಷಿ ಸಲಕರಣೆಗಳನ್ನು ತರಿಸಿ ತಮ್ಮ ಮನೆಯಲ್ಲೇ ಪ್ರದರ್ಶನಕ್ಕೊಳಪಡಿಸುವ ಮೂಲಕ ಅಲ್ಲಿನ ಸ್ಥಳೀಯ ರೈತರಲ್ಲಿ ಕುತೂಹಲ ಹುಟ್ಟಿಸಿ ಅವುಗಳನ್ನು ಬಳಸುವಂತೆ ಮಾಡಲು ಆಲೋಚಿಸಿದ ಪ್ರಯೋಗಶೀಲ ಪ್ರಯತ್ನವನ್ನು ಈ ಕೆಳಕಂಡಂತೆ ವಿವರಿಸಿದ್ದಾರೆ. "ನಮ್ಮ ದೇಶದ ಜನರ ನೆಮ್ಮದಿಗೆ ಭೂ ವ್ಯವಸಾಯ ಒಂದು ಮೂಲಭೂತವಾದ ಅವಶ್ಯಕತೆಯೆಂಬುದನ್ನು ಮನಗಂಡು ಕೆಲವು ವಿದೇಶಿ ಕಂಪನಿಗಳೊಡನೆ ಪತ್ರವ್ಯವಹಾರ ನಡೆಸಿ ಹೊಸ ಹೊಸ ನಮೂನೆಯ ವ್ಯವಸಾಯ ಯಂತ್ರೋಪಕರಣಗಳನ್ನು ತರಿಸಿ, ತಮ್ಮ ಮನೆಯ ಮುಂಭಾಗದ ದೊಡ್ಡ ರೂಮಿನಲ್ಲಿ ಪ್ರದರ್ಶನ ಮಾಡಿದ್ದರು. ಉಳುವ ನೇಗಿಲು, ಹೊಸ ನಮೂನೆಯ ಕುಂಟೆ ಹೊಡೆಯುವ ಯಂತ್ರ, ಬಿತ್ತನೆಯ ಯಂತ್ರ, ಕಳೆ ತೆಗೆಯುವ ಯಂತ್ರ, ಮಣ್ಣು ಹೆಂಟೆಗಳನ್ನು ಪುಡಿ ಮಾಡುವ ಯಂತ್ರ, ಬತ್ತದ ಹೊಟ್ಟು ತೆಗೆಯುವ ಯಂತ್ರ, ಹತ್ತಿಯನ್ನು ಬಿಡಿಸಿ ಬೀಜವನ್ನು ಬೇರೆ ಮಾಡುವ ಯಂತ್ರ, ನವ ನಮೂನೆಯ ಸನಿಕೆಗಳು, ಗುದ್ದಲಿಗಳು, ಕುಡುಗೋಲುಗಳು ಮೊದಲಾದ ಪರಿಕರಗಳನ್ನು ಪ್ರದರ್ಶನ ಮಾಡಿದ್ದರು. ಇದನ್ನು ಕುರಿತು ಪತ್ರಿಕೆಗಳಲ್ಲಿ ಜಾಹೀರಾತುಗಳನ್ನು ಹಾಕಿಸಿದ್ದರು".

---

*278. ಸದಾಶಿವ ಕೆ., ಪೂರ್ವೋಕ್ತ, ಪು. 71-72*

ಹೀಗೆ ಉತ್ಸಾಹದಿಂದ ಮಾಡಿದ ಪ್ರಯೋಗಶೀಲತೆಯನ್ನು ನೋಡಲು ಹೆಚ್ಚಿನ ಜನ ಹೋಗುತ್ತಿರಲಿಲ್ಲ. ಬೇರೆ ಕೆಲಸವಿಲ್ಲದಿದ್ದಾಗ ಹೋಗಿ ಆ ಸಾಮಾನುಗಳನ್ನು ದೂರದಿಂದ ನೋಡಿ ಮುಸಿ ನಗುನಗುತ್ತಾ "ಕರಣಿಕರೆ, ಬಹು ಮೆಹನತ್ತು ಮಾಡಿದ್ದೀರಪ್ಪ, ಏನೇನೋ ಇದೆಯಲ್ಲ ಚಮತ್ಕಾರ!" ಎಂದು ಹೇಳಿ ಹಿಂದಿರುಗುತ್ತಿದ್ದರು. ಕೆಲ ವರ್ಷಗಳ ನಂತರ ಪ್ರದರ್ಶನ ಮುಚ್ಚಲ್ಪಟ್ಟಿತು. ಇದು ನೂತನ ಪ್ರಗತಿಯ ಪ್ರಾರಂಭಕರ್ತರ ಅನುಭವ ಎಂಬುದಾಗಿ ಡಿ.ವಿ.ಜಿ. ನೊಂದು ಬರೆದಿದ್ದಾರೆ [279]. ಆಗಿನ ಜನ ಮತ್ತು ಸಮಾಜ ಆಧುನಿಕ ಅಂಶಗಳನ್ನು ಅಳವಡಿಸಿಕೊಳ್ಳಲು ಹಿಂಜರಿಯುತ್ತಿದ್ದರು ಹಾಗೂ ಸಾಂಪ್ರದಾಯಕತೆಯಿಂದ ಇನ್ನೂ ಹೊರಬರಲಾಗದೆ ಬಳಲುತ್ತಿದ್ದರೆಂಬುದನ್ನು ಮೇಲಿನ ಉದಾಹರಣೆ ಸ್ಪಷ್ಟಪಡಿಸುತ್ತದೆ.

### *ಗ್ರಾಮಾಭಿವೃದ್ಧಿ ಯೋಜನೆಗಳು*

ನಾಲ್ವಡಿಯವರ ಸರ್ಕಾರವು ವಿವಿಧ ಆರ್ಥಿಕ ಕ್ಷೇತ್ರಗಳನ್ನು ಆಧುನೀಕರಣಗೊಳಿಸಲು ಪ್ರಯತ್ನಪಟ್ಟಂತೆ ಪ್ರಾದೇಶಿಕ ಮಟ್ಟದಲ್ಲೂ ಏಕರೀತಿಯ ಬೆಳವಣಿಗೆ ಸಾಧಿಸಲು ಅಂತಿಮವಾಗಿ ರಾಜ್ಯದ ಸಮಗ್ರ ಅಭಿವೃದ್ಧಿಯ ಗುರಿಯನ್ನು ಸಾಧಿಸಲು ಗ್ರಾಮೀಣಾಭಿವೃದ್ಧಿಯೋಜನೆ, ಮಲೆನಾಡು ಸಮಗ್ರ ಅಭಿವೃದ್ಧಿ ಯೋಜನೆಗಳೆಂಬ ಎರಡು ಯೋಜನೆಗಳನ್ನು ಹಮ್ಮಿಕೊಂಡಿತು. ನಾಲ್ವಡಿಯವರು ಬಹುಸಂಖ್ಯಾತ ಪ್ರಜೆಗಳು ನೆಲೆಸಿದ್ದ ಗ್ರಾಮಗಳ ಅಭಿವೃದ್ಧಿಯಿಂದಲೇ ರಾಜ್ಯದ ಅಭಿವೃದ್ಧಿಯೆಂದು ನಂಬಿದ್ದರು. ಈ ಯೋಜನೆಯನ್ನು 1914ರಲ್ಲಿ ಜಾರಿಗೊಳಿಸಲಾಯಿತು. ಈ ಯೋಜನೆಯ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು ಗ್ರಾಮ ಸಮಿತಿಗಳನ್ನು ರಚಿಸಲಾಯಿತು. ಈ ಗ್ರಾಮ ಸಮಿತಿಗಳು ಆ ಗ್ರಾಮಗಳ ಜನರ ಶಿಕ್ಷಣಾಭಿವೃದ್ಧಿ, ಕೈಗಾರಿಕೆ, ಕೃಷಿಗಳ ಬಗ್ಗೆ ತಿಳಿಸಿಕೊಡುವುದು, ವೃತ್ತಪತ್ರಿಕೆಗಳು, ಉಪನ್ಯಾಸಗಳು, ಪ್ರಾತ್ಯಕ್ಷಿಕ ಕಾರ್ಯಕ್ರಮಗಳನ್ನು ಏರ್ಪಡಿಸುವ ಮೂಲಕ ಜನರನ್ನು ಜಾಗೃತಿಗೊಳಿಸುವ ಉದ್ದೇಶವಿರಿಸಿಕೊಂಡಿದ್ದವು[280]. ಕೆಲವು ಗ್ರಾಮಗಳನ್ನು 'ಮಾದರಿ ಗ್ರಾಮ'ಗಳೆಂದು ಆಯ್ಕೆಮಾಡಿ ಸಮಗ್ರ ಅಭಿವೃದ್ಧಿಗೆ ಅನೇಕ ಯೋಜನೆಗಳನ್ನು ಕೈಗೊಳ್ಳಲಾಯಿತು. ನಾಲ್ವಡಿಯವರು 1926ರಲ್ಲಿ ಒಂದು ಮಾದರಿ ಗ್ರಾಮವನ್ನು ರೂಪಿಸಬೇಕೆಂದು ಯೋಚಿಸಿ ಒಂದು ಗ್ರಾಮವನ್ನು ದತ್ತು ತೆಗೆದುಕೊಂಡು ಹೇಗೆ ಕಾರ್ಯಗತಗೊಳಿಸಿದರೆಂಬುದನ್ನು "ಆಳಿದ ಮಹಾಸ್ವಾಮಿಯವರು" ಕೃತಿಯು ಹೀಗೆ ವಿವರಿಸುತ್ತದೆ. "ಆಳಿದ ಮಹಾಸ್ವಾಮಿಯವರು ಒಂದು ಮಾದರಿ ಗ್ರಾಮವನ್ನು ಏರ್ಪಾಡು ಮಾಡಬೇಕೆಂದು ಯೋಚಿಸಿ, ಮೈಸೂರು ನಗರದಲ್ಲಿ ಅಡ್ವೋಕೇಟರಾಗಿದ್ದ ಶ್ರೀಮಾನ್ ಎಚ್.ನರಸಿಂಗರಾಯರನ್ನು ಮತ್ತು

---

*279. ಗುಂಡಪ್ಪ ಡಿ.ವಿ., ಜ್ಞಾಪಕ ಚಿತ್ರಶಾಲೆ 1-8, ಹಲವರು ಸಾರ್ವಜನಿಕರು-6, ಕಾವ್ಯಾಲಯ ಪ್ರಕಾಶನ, ಮೈಸೂರು, 1999, ಪು. 249-250*

*280. ದಿ ಮೈಸೂರ್ ವಿಲೇಜ್ ಇಂಪ್ರೂವ್‌ಮೆಂಟ್ ಮ್ಯಾನ್ಯುಯಲ್, ಬೆಂಗಳೂರು, 1917, ಪು. 3-7*

ರಾಜಸೇವಾತಿಲಕ ಶ್ರೀಮಾನ್ ಮೇಜರ್ ಗೋಪಾಲರಾಯರನ್ನೂ ಆ ಕೆಲಸವನ್ನು ನಿರ್ವಹಿಸುವುದಕ್ಕಾಗಿ ನೇಮಿಸಿದರು. ಲಲಿತಾದ್ರಿಗೆ ಸಮೀಪದಲ್ಲಿದ್ದ ಸಕ್ಕಹಳ್ಳಿ ಗ್ರಾಮವನ್ನು 'ಲಲಿತಾದ್ರಿಪುರ'ವೆಂಬ ಹೆಸರಿನಿಂದ ಮತ್ತಷ್ಟು ಆರೋಗ್ಯಕರವಾದ ರೀತಿಯಲ್ಲಿ ಬೇರೆ ಸ್ಥಳದಲ್ಲಿ ಕಟ್ಟಿಸುವುದಕ್ಕಾಗಿ ಮಹಾಪ್ರಭುಗಳವರು ಅರಮನೆಗೆ ಸೇರಿದ ಇಪ್ಪತ್ತು ಎಕರೆಗಳ ವಿಸ್ತೀರ್ಣದ ಉತ್ತಮವಾದ ಕಾವಲು ಭೂಮಿಯನ್ನು ಉಚಿತವಾಗಿ ದಯಪಾಲಿಸಿದರು. ಅದರ ಜೊತೆಗೆ ಸೇರಿಸಿಕೊಂಡ ರೈತರ ಭೂಮಿಗಳಿಗೆ ಪ್ರತಿಯಾಗಿ ಫಲವತ್ತಾದ ಅರಮನೆಯ ಭೂಮಿಗಳನ್ನು ಅವರಿಗೆ ಕೊಡಿಸಿದರು. ಉತ್ತಮ ವಿಧದ ಮಾದರಿ ಮನೆಗಳನ್ನು ಕಟ್ಟಿಕೊಳ್ಳುವುದಕ್ಕಾಗಿ ನಿವೇಶನಗಳನ್ನು ಉಚಿತವಾಗಿ ಕೊಟ್ಟು, ಕೇವಲ ನೆಪಮಾತ್ರದ ಬಡ್ಡಿಯ ಮೇಲೆ ರೈತರಿಗೆ ಸಾಲಗಳನ್ನು ಕೊಡಲು ಮಹಾಸ್ವಾಮಿಯವರು ಖಾಸಾ ಭಂಡಾರದಿಂದ ಅರವತ್ತು ಸಾವಿರ ರೂಪಾಯಿಗಳಿಗಿಂತಲೂ ಅಧಿಕವಾದ ಮೊತ್ತವನ್ನು ದಯಪಾಲಿಸಿದುದಲ್ಲದೆ, ಸಾಲಗಳನ್ನು ತೀರಿಸುವುದಕ್ಕಾಗಿ ರೈತರು ಹಿಂದಕ್ಕೆ ಸಲ್ಲಿಸಿದ ಮೊತ್ತಗಳು ಆ ಮಾದರಿ ಗ್ರಾಮದ ಮೇಲ್ಪಾಟುಗಳಿಗಾಗಿ ವಿನಿಯೋಗವಾಗಬೇಕೇ ಹೊರತು, ಅರಮನೆಗೆ ಹಿಂದಕ್ಕೆ ಸಂದಾಯವಾಗಬೇಕಾದುದಿಲ್ಲವೆಂದು ಆಜ್ಞಾಪಿಸಿದರು. ಗ್ರಾಮಸ್ಥರು ಸಾಲಗಳನ್ನು ತೀರಿಸಲು ಹದಿನೈದು ವರ್ಷಗಳ ದೀರ್ಘಾವಧಿಯನ್ನು ಗೊತ್ತು ಮಾಡಿದುದಲ್ಲದೆ, ಮನೆಗಳನ್ನು ಕಟ್ಟಿಸಲು ಅವಶ್ಯವಾದ ಚೌಬೀನೆ ಮುಂತಾದ ಸಾಮಗ್ರಿಗಳನ್ನು ಉಚಿತವಾಗಿ ಸರ್ಕಾರದ ಕಾಡುಗಳಿಂದ ರೈತರು ಸಾಗಿಸಿಕೊಳ್ಳಬಹುದೆಂದೂ ಗೊತ್ತುಮಾಡಲಾಯಿತು. ಸರ್ಕಾರದವರು ಮೂರು ಸಾವಿರ ರೂಪಾಯಿಗಳನ್ನು ವೆಚ್ಚಮಾಡಿ ಕೆರೆಯನ್ನು ಜೀರ್ಣೋದ್ಧಾರ ಮಾಡಿಸಿಕೊಟ್ಟರು. ಗ್ರಾಮಸ್ಥರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮಹಾಸ್ವಾಮಿಯವರು ಪಾಠಶಾಲೆಯನ್ನು ಕಟ್ಟಿಸಿಕೊಟ್ಟರು. ಬಾಲಕ ಬಾಲಕಿಯರ ನಡೆ ನುಡಿಗಳನ್ನು ತಿದ್ದಿ, ವಿದ್ಯೆಯನ್ನು ಕಲಿಸಿ, ವ್ಯವಸಾಯದಲ್ಲಿಯೂ, ಚರಕದಲ್ಲಿ ನೂಲುವುದರಲ್ಲಿಯೂ ಶಿಕ್ಷಣ ಕೊಡುವಂತೆ ಆಜ್ಞಾಪಿಸಿದರು. ವಿದ್ಯಾರ್ಥಿಗಳ ಕೈಯಿಂದ ಶಾಸ್ತ್ರೀಯವಾಗಿ ವ್ಯವಸಾಯ ಮಾಡಿಸಿ ಶಿಕ್ಷಣ ಕೊಡಬೇಕೆಂದು ವಿಧಾಯಕವಾಯಿತು. ಪಾಠಶಾಲೆಯಲ್ಲಿ ಬಾಲಕ ಬಾಲಕಿಯರಿಗೆ ಧರ್ಮಬೋಧೆಯು ನಡೆಯಬೇಕೆಂದು ಗೊತ್ತಾಯಿತು. ಮಹಾಸ್ವಾಮಿಯವರು ಭಜನೆಮನೆಯನ್ನು, ಪರಸ್ಪರ ಸಹಾಯ ಸಂಘದ ಕಟ್ಟಡವನ್ನು ಮತ್ತು ಗ್ರಾಮ ಪಂಚಾಯಿತಿಯ ಚಾವಡಿಯ ಕಟ್ಟಡವನ್ನು ಕಟ್ಟಿಸಿ ಕೊಟ್ಟರು. ಬಾಲಕ ಬಾಲಕಿಯರು ಮೊದಲಾಗಿ ದೊಡ್ಡವರವರೆಗೂ ಗ್ರಾಮಸ್ಥರು ಸಮಸ್ತರೂ ಪರಸ್ಪರ ಸಹಾಯ ಸಂಘದ ಸದಸ್ಯರಾಗಬೇಕೆಂದೂ, ಗ್ರಾಮಸ್ಥರು ಸಣ್ಣಪುಟ್ಟ ವಿವಾದಗಳಿಗೆಲ್ಲ ನ್ಯಾಯಸ್ಥಾನದ ಬಾಗಿಲಿಗೆ ಹೋಗಿ ಹಣವನ್ನು ಪೋಲು ಮಾಡಿಕೊಳ್ಳದೆ ಗ್ರಾಮ ಪಂಚಾಯಿತಿಯವರಿಂದಲೇ ಅವುಗಳನ್ನು ವ್ಯವಸ್ಥೆಪಡಿಸಿಕೊಳ್ಳಬೇಕೆಂದೂ ಅಪ್ಪಣೆಯಾಯಿತು"[281]. ಹೀಗೆ ನಿರ್ಮಿಸಿದ ಮಾದರಿ ಗ್ರಾಮ ಲಲಿತಾದ್ರಿಪುರದ ನಿರ್ಮಾಣ

---

*281. ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 287-288*

ಕಾರ್ಯವನ್ನು ವೀಕ್ಷಿಸಿದ ನಾಲ್ವಡಿಯವರು ಗ್ರಾಮದ ನಾಮಧೇಯವನ್ನು ಕೆತ್ತಿದ ಶಿಲಾಪಟ್ಟಿಕೆಯ ಅನಾವರಣವನ್ನು 1926 ರ ನವೆಂಬರ್ ತಿಂಗಳಲ್ಲಿ ನೆರವೇರಿಸಿದರು. ಗ್ರಾಮಸ್ಥರೆಲ್ಲ ತಮ್ಮ ಮಾದರಿ ಗ್ರಾಮಕ್ಕೆ ನೀರಿನ ಕೊಳಾಯಿಗಳೂ ವಿದ್ಯುಚ್ಛಕ್ತಿಯ ದೀಪಗಳೂ ಅವಶ್ಯಕವೆಂದು ಅರಿಕೆ ಮಾಡಿಕೊಂಡಿದ್ದರಿಂದ ನಾಲ್ವಡಿಯವರು ತಮ್ಮ ಸ್ವಂತ ಹಣದಿಂದ ಆ ಸೌಲಭ್ಯಗಳನ್ನು ಒದಗಿಸಿದರು. ನಾಲ್ವಡಿಯವರ ಮಾದರಿ ಗ್ರಾಮದ ರಚನೆಯನ್ನು ಮದರಾಸಿನ 'ಹಿಂದೂ' ಪತ್ರಿಕೆ ಮೊದಲಾದವು ಶ್ಲಾಘಿಸಿ "ಅಖಿಲ ಭರತಖಂಡಕ್ಕೆ ಆದರ್ಶ ಪ್ರಾಯವೆಂದು ಕೊಂಡಾಡಿದವು"[282]. ಮೈಸೂರು ರಾಜ್ಯ ಒಂದು ಮಾದರಿ ರಾಜ್ಯವೆಂದು ಕರೆಸಿಕೊಳ್ಳುವಲ್ಲಿ ನಾಲ್ವಡಿಯ ವರು ಕೈಗೊಂಡ ಇಂತಹ ಆಧುನಿಕ ಪ್ರಯೋಗಗಳೇ ಕಾರಣವೆನ್ನಬಹುದು.

ಮೈಸೂರಿನ ಮಲೆನಾಡು ಪ್ರದೇಶವು ನೈಸರ್ಗಿಕ ಸಂಪತ್ತು, ಯತೇಚ್ಛ ಮಳೆ, ನೀರಾವರಿಯಿದ್ದರೂ ಸಹ ಅಲ್ಲಿ ಮಲೇರಿಯಾ ಮತ್ತಿತರ ಸಾಂಕ್ರಾಮಿಕ ರೋಗಗಳಿಂದ ಅಲ್ಲಿನ ಜನಸಂಖ್ಯೆ ಇಳಿಮುಖವಾಗುತ್ತಿತ್ತು. ನಾಲ್ವಡಿಯವರು ಮಲೆನಾಡಿನ ಸಮಸ್ಯೆಯನ್ನು ಆರ್ಥಿಕ ಸಮಸ್ಯೆಯೆಂದೂ ಅದನ್ನು ಆಧುನಿಕ ಆರ್ಥಿಕ ಕ್ರಮಗಳ ಮೂಲಕವೇ ಹೋಗಲಾಡಿಸಬಹುದೆಂಬ ಅಂಶವನ್ನು ಭದ್ರಾ ಅಣೆಕಟ್ಟು ಮತ್ತು ಕಾಲುವೆ ಕಾಮಗಾರಿ ಉದ್ಘಾಟನೆಯ ಸಂದರ್ಭದಲ್ಲಿ ಈ ರೀತಿ ಹೇಳಿದ್ದಾರೆ"...........ಮಲೆನಾಡು ಅನಾರೋಗ್ಯಕ್ಕೂ ಹೆಸರಾಗಿದೆ. ಈ ನ್ಯೂನ್ಯತೆಯನ್ನು ನಿವಾರಿಸಲು ಜನರಿಗೆ ಇಲ್ಲಿನ ಹವಾಗುಣಕ್ಕೆ ತಕ್ಕಂತೆ ಆಹಾರ ಮತ್ತು ಬಟ್ಟೆ ಧರಿಸುವಂತೆ ಶಿಕ್ಷಣ ಮತ್ತು ಬೋಧನೆಯನ್ನು ಮಾಡಬೇಕಾಗಿದೆ; ಅರ್ಥಾತ್ ಅವರ ಜೀವನಮಟ್ಟವನ್ನು ಅಭಿವೃದ್ಧಿಸಬೇಕಾಗಿದೆ. ಇದೊಂದು ಆರ್ಥಿಕ ಸಮಸ್ಯೆ. ಇದರ ನಿವಾರಣೆಯ ಮೊದಲ ಕ್ರಮವು ಕೇಂದ್ರಿತಗೊಂಡಿರುವುದು ಸಾಗುವಳಿಯಲ್ಲಿ, ಸುಧಾರಣೆ ಮತ್ತು ಭೂಮಿಯಿಂದ ಹೆಚ್ಚಿನ ಉತ್ಪಾದನೆ ತೆಗೆಯುವಂತಾಗುವುದರಲ್ಲಿ. ಜನರು ಕೃಷಿಯಲ್ಲಿ ವೈಜ್ಞಾನಿಕ ಕ್ರಮಗಳನ್ನು ಅಳವಡಿಸಿಕೊಂಡು ಕಬ್ಬು ಮುಂತಾದ ಬೆಲೆ ತರುವ ವಾಣಿಜ್ಯ ಬೆಳೆಗಳನ್ನು ಬೆಳೆಯುವಂತಾದರೆ ಮಾತ್ರ ಹಾಗೂ ಅವರಿಗೆ ಉತ್ತಮ ನೀರಿನ ಪೂರೈಕೆ ನೀಡಿದರೆ ಅವರು ಅವನ್ನೆಲ್ಲ ಮಾಡುತ್ತಾರೆ. ಅದರಿಂದ ಈ ಪ್ರದೇಶದಲ್ಲಿ ಹೀಗಿಗಿಂತ ಹೆಚ್ಚು ಜನಸಂಖ್ಯೆ, ಉತ್ತಮ ಆರೋಗ್ಯ ಹಾಗೂ ನೆಮ್ಮದಿಯಿಂದ ಬಾಳಲನುಕೂಲವಾಗುತ್ತದೆ"[283].

ಮಲೆನಾಡಿನ ಅನಾರೋಗ್ಯ, ಅಜ್ಞಾನ, ಬಡತನ, ಅನೈರ್ಮಲೀಕರಣಗಳ ಕಾರಣದಿಂದಾಗಿ ವಾಸಿಸಲು ಪ್ರಶಸ್ತವಲ್ಲದ ಪ್ರದೇಶವೆಂದು ಪರಿಗಣಿತವಾಗಿದ್ದಾಗ ನಾಲ್ವಡಿಯವರು ತಮ್ಮ ಭಾಷಣದಲ್ಲಿ ಹೇಳಿದಂತೆ ವೈಜ್ಞಾನಿಕ ವಿಧಾನಗಳು

---

*282. ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 289*

*283. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 244*

ಮತ್ತು ಆಧುನಿಕ ಆರ್ಥಿಕ ನೀತಿಗಳನ್ನು 'ಮಲೆನಾಡು ಅಭಿವೃದ್ಧಿ ಯೋಜನೆ' ಎಂಬ ವಿಶೇಷ ಯೋಜನೆಯ ಮೂಲಕ ಜಾರಿಗೊಳಿಸಿದರು. ಈ ಯೋಜನೆಯು 1914ರಲ್ಲಿ ಜಾರಿಗೊಂಡಿತು. ಈ ಯೋಜನೆಯ ಮೂಲಕ ಈ ಪ್ರದೇಶದ ಜನರಿಗೆ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ಹೆರಿಗೆ ಆಸ್ಪತ್ರೆ ಮತ್ತು ಚಿಕಿತ್ಸಾಲಯಗಳ ಸ್ಥಾಪನೆಯ ಮೂಲಕ ಆರೋಗ್ಯ ಸೌಲಭ್ಯಗಳನ್ನು ಒದಗಿಸಲಾಯಿತು. ಮಲೇರಿಯಾ ರೋಗವನ್ನು ತಡೆಗಟ್ಟಲು ಚುಚ್ಚುಮದ್ದು ಹಾಕುವ ವ್ಯವಸ್ಥೆಗಾಗಿ ಕಾಂಪೌಂಡರ್ ಮತ್ತು ದಾದಿಯರನ್ನು ನೇಮಿಸಲಾಯಿತು. ಒಳಚರಂಡಿ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಲಾಯಿತು. ಇಲ್ಲಿಯ ಪ್ರಮುಖ ಬೆಳೆಯಾದ ಕಾಫಿಯ ರೋಗಗಳನ್ನು ತಡೆಯಲು ಬಾಳೆಹೊನ್ನೂರಿನಲ್ಲಿ ಒಂದು ಪ್ರಾಯೋಗಿಕ ಫಾರ್ಮ್ ಅನ್ನು ಸ್ಥಾಪಿಸಲಾಯಿತು. ಹಾಗೆಯೇ ಅಡಿಕೆಗೆ ಬರುವ ಕೊಳೆರೋಗದ ಬಗ್ಗೆ ಸಂಶೋಧನೆ ಮಾಡಲು ಮಾರ್ಥೂರಿನಲ್ಲಿ ಒಂದು ಪ್ರಾಯೋಗಿಕ ಫಾರ್ಮ್ ಸ್ಥಾಪಿಸಲಾಯಿತು. ರಸ್ತೆ ಮತ್ತು ಸೇತುವೆಯನ್ನು ನಿರ್ಮಿಸುವ ಮೂಲಕ ಮಲೆನಾಡಿನ ಸಾರಿಗೆ ಸಂಪರ್ಕದ ತೊಂದರೆಯನ್ನು ನೀಗಿಸಲಾಯಿತು[284]. ಭದ್ರಾ ಅಣೆಕಟ್ಟೆ ಮತ್ತು ಕಾಲುವೆ ಕಾಮಗಾರಿ ಉದ್ಘಾಟನೆಯ ಸಂದರ್ಭದಲ್ಲಿ ಮಲೆನಾಡಿನ ಪ್ರದೇಶದ ಅಭಿವೃದ್ಧಿಗೆ ವಿಶೇಷ ಧನ ಸಹಾಯವನ್ನು ಘೋಷಿಸಿದ ನಾಲ್ವಡಿಯವರು "ಶಿವಮೊಗ್ಗ ಜಿಲ್ಲೆಯ ಕೊಪ್ಪ, ಮೂಡಿಗೆರೆ, ಕಳಸ ಮತ್ತು ಕಡೂರು ಮುಂತಾದ ಪಟ್ಟಣ, ಗ್ರಾಮೀಣ ಪ್ರದೇಶಗಳಿಗೆ ಉತ್ತಮ ಸಂಪರ್ಕ ವ್ಯವಸ್ಥೆ ಏರ್ಪಡಿಸುವುದು, ಪೈಪ್‌ಗಳ ಮೂಲಕ ಶುದ್ಧ ಕುಡಿಯುವ ನೀರು ಒದಗಿಸುವ ಹೊಸ ಯೋಜನೆ, ಆರೋಗ್ಯಾಭಿವೃದ್ಧಿಗೆ ನೆರವು ಮುಂತಾದವಕ್ಕೆ ವಿಶೇಷ ಧನ ಸಹಾಯ ಒದಗಿಸಲಾಗಿದೆ"[285] ಎಂಬುದಾಗಿ ನುಡಿದರು.

ನಾಲ್ವಡಿಯವರು ಮತ್ತು ಅವರ ಸರ್ಕಾರ ಕೈಗೊಂಡಿದ್ದ ಗ್ರಾಮಾಭಿವೃದ್ಧಿ ಯೋಜನೆಯ ಫಲಿತಾಂಶವನ್ನು ಕಂಡ ಲಾರ್ಡ್ ಸ್ಯಾಮ್ಯುಯೆಲ್‌ರವರು ತಮ್ಮ ಭಾಷಣವೊಂದರಲ್ಲಿ " ಮೈಸೂರು ಸಂಸ್ಥಾನದ ಬಹುಭಾಗಕ್ಕೆ ನಾನು ಮೋಟಾರು ಕಾರಿನಲ್ಲಿ ಹೋಗಿ ಬಂದೆನು; ಅದಕ್ಕೆ ಅವಕಾಶ ದೊರೆಯಿತು. ಅನೇಕ ಗ್ರಾಮಗಳಿಗೆ ಹೋಗಿ ಪರಿಶೀಲಿಸಿ ಬಂದೆನು. ಶ್ರೀಮನ್ಮಹಾರಾಜರವರಿಗೂ ಮತ್ತು ದಿವಾನರಿಗೂ ಬಹಳ ಪ್ರಿಯವಾಗಿರುವ ಗ್ರಾಮಪುನರುಜ್ಜೀವನ ಕಾರ್ಯಕಲಾಪಗಳ ವಿಷಯವಾಗಿ ಅನೇಕ ಸಂಗತಿಗಳನ್ನು ಕೇಳಿ ಸಂಗ್ರಹಿಸುವ ಅವಕಾಶವೂ ನನಗೆ ಲಭಿಸಿತು. ಈ ವಿಚಾರದಲ್ಲಿ ಮೈಸೂರು ಸಂಸ್ಥಾನದಲ್ಲಿ ಬಹಳ ಕೆಲಸವೂ ನಡೆದಿದೆ. ಅನೇಕ ಗ್ರಾಮಗಳಲ್ಲಿ ಅಸಾಧಾರಣವಾದ ಫಲಿತಾಂಶಗಳುಂಟಾಗಿವೆ. ನಾನು ಬ್ರಿಟಿಷ್ ಇಂಡಿಯಾ ಪ್ರಾಂತಗಳಲ್ಲಿ ಏಳಕ್ಕೂ, ಭಾರತೀಯ ಸಂಸ್ಥಾನಗಳಲ್ಲಿ ಏಳಕ್ಕೂ ಹೋಗಿದ್ದೆ. ನಾನು ಪ್ರತ್ಯಕ್ಷವಾಗಿ ನೋಡಿಯೂ, ಪರೋಕ್ಷವಾಗಿ ಕೇಳಿಯೂ ಮತ್ತು ಓದಿಯೂ ತಿಳಿದುಕೊಂಡ ಅಂಶಗಳಿಗನುಸಾರವಾಗಿ ಪರಿಶೀಲಿಸಿದರೆ,

---

284. *ಮಲ್ನಾಡ್ ಇಂಪ್ರೂವ್‌ಮೆಂಟ್ ಮ್ಯಾನ್ಯುಯಲ್, 1917, ಪು. 42*

285. *ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 245*

ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳಲ್ಲೆಲ್ಲ ಒಂದು ಪ್ರಾಂತ್ಯವು ಪ್ರಥಮ ಸ್ಥಾನವನ್ನಲಂಕರಿಸಿದೆ; ಅದು ಪಂಜಾಬ್ ಪ್ರಾಂತ್ಯ; ಭಾರತೀಯ ಸಂಸ್ಥಾನಗಳಲ್ಲೆಲ್ಲ ಒಂದು ಸ್ಥಾನವು ಪ್ರಥಮ ಸ್ಥಾನವನ್ನಲಂಕರಿಸಿದೆ; ಅದು ಮೈಸೂರು ಸಂಸ್ಥಾನ" ಎಂಬುದಾಗಿ ಹೇಳಿದ್ದಾರೆ[286].

ಮುಂಬೈ ಪ್ರಾಂತ್ಯದಲ್ಲಿ ಕಾಂಗ್ರೆಸ್‌ನ ಮುಖ್ಯ ಸಚಿವರಾಗಿದ್ದ ಬಿ.ಜಿ. ಖೇರ್‌ರವರು 1939ನೇ ಜುಲೈನಲ್ಲಿ ಮೈಸೂರು ಸಂಸ್ಥಾನದ ಸ್ಥಿತಿಯನ್ನು ಕಣ್ಣಾರೆ ನೋಡಿ, ಮೈಸೂರು ಸಂಸ್ಥಾನದ ರೈತರು ಇತರೆಡೆಗಳಲ್ಲಿರುವ ರೈತರಿಗಿಂತ ಹೆಚ್ಚು ಸುಖಿಗಳಾಗಿರುವರೆಂದೂ, ಜನತೆಯ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದರಲ್ಲಿ ಸರ್ಕಾರದವರು ಇತರೆಡೆಗಳಲ್ಲಿರುವುದಕ್ಕಿಂತ ಹೆಚ್ಚು ಶ್ರದ್ಧೆಯನ್ನು ವಹಿಸುತ್ತಿರುವರೆಂದೂ ಹೇಳಿದರು[287]. ಹಾಗೆಯೇ ಮುಂದುವರಿದು "ಇರ್ವಿನ್ ನಾಲೆಯಿಂದ ಸರ್ಕಾರದವರು ವ್ಯವಸಾಯಗಾರರಿಗೆ ಹೆಚ್ಚು ಅನುಕೂಲಗಳನ್ನೊದಗಿಸಿದ್ದಾರೆಂದೂ, ಅಲ್ಲಿಯ ಸ್ಥಿತಿಗತಿಗಳು ಆಶ್ಚರ್ಯಕರವಾಗಿವೆಯೆಂದೂ, ಅಲ್ಲಿಯ ರೈತರ ಕೊರತೆಗಳು ಕನಿಷ್ಠತಮವಾಗಿದ್ದು ಅವರುಗಳು ಸುಖವಾಗಿದ್ದಾರೆಂದು"[288] ಹೇಳಿರುವ ಹೇಳಿಕೆಗಳು ನಾಲ್ವಡಿಯವರ ಕಾಲದ ಕೃಷಿ ಮತ್ತು ಗ್ರಾಮಾಭಿವೃದ್ಧಿಯ ಬೆಳವಣಿಗೆಯ ಬಗ್ಗೆ ಸ್ಪಷ್ಟಚಿತ್ರವನ್ನು ಕೊಡುತ್ತವೆ.

### *ಸಿಲ್ವರ್ ಜ್ಯೂಬಿಲಿ ಸಮಾರಂಭ : ಜನರ ಅಭಿನಂದನಾ ಪತ್ರಿಕೆ*

ನಾಲ್ವಡಿಯವರು ತಮ್ಮ ರಾಜ್ಯಭಾರವನ್ನು ಯಶಸ್ವಿಯಾಗಿ ಇಪ್ಪತ್ತೈದು ವರ್ಷ ಪೂರೈಸಿದ ಸಂತೋಷಕ್ಕಾಗಿ 1927 ರ ಆಗಸ್ಟ್ 8ರಂದು ರಜತ ಮಹೋತ್ಸವ (ಸಿಲ್ವರ್ ಜ್ಯೂಬಿಲಿ) ನಡೆಯಿತು. ಆ ಸಭೆಗೆ ವೈಸ್‌ರಾಯ್ ಲಾರ್ಡ್‌ಇರ್ವಿನ್ ಮತ್ತು ಅವರ ಪತ್ನಿ ಬಂದಿದ್ದರು. ರಜತ ಮಹೋತ್ಸವವನ್ನು ಮಹಾನಗರಗಳಿಂದಿಡಿದು ಸಣ್ಣ ಪುಟ್ಟ ಗ್ರಾಮಗಳವರೆಗೆ ಇಡೀ ಸಂಸ್ಥಾನದಾದ್ಯಂತ ಜನ ಹರ್ಷದಿಂದ ಆಚರಿಸಿದರು. ಆ ಸಮಯದಲ್ಲಿ ಮೈಸೂರು ಸಂಸ್ಥಾನದ ಪ್ರಜೆಗಳ ಪರವಾಗಿ ಕೆ.ಪಿ.ಪುಟ್ಟಣ್ಣಚೆಟ್ಟಿಯವರು ಮಹಾರಾಜರಿಗೆ ರಜತ ಕರಂಡದಲ್ಲಿ ಅಭಿನಂದನ ಪತ್ರಿಕೆಯೊಂದನ್ನು ಅರ್ಪಿಸಿದರು. ಆ ಪತ್ರಿಕೆಯಲ್ಲಿ ನಾಲ್ವಡಿಯವರು ಕೈಗೊಂಡ ಪ್ರಜಾಭ್ಯುದಯ ಕಾರ್ಯಕ್ರಮಗಳನ್ನು ಹೀಗೆ ಕೃತಜ್ಞತೆಯಿಂದ ಸ್ಮರಿಸಿಕೊಂಡರು "ಮಹಾಸ್ವಾಮಿಯವರು ನಿರ್ಮಾಣ ಮಾಡಿಸಿರುವ ಕೃಷ್ಣರಾಜಸಾಗರ ಮುಂತಾದ ವಿಶಾಲ ಸರೋವರಗಳೂ, ಬಾವಿ, ಕೆರೆ, ಕಾಲುವೆಗಳೂ ಸುಗಮಗಳಾದ ಮಾರ್ಗಗಳೂ, ಧೂಮ ಶಕಟ ಸರಣಿಗಳೂ,

---

286. *ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 326-327*

287. *ಅದೇ., ಪು. 327*

288. *ಅದೇ., ಪು. 332-333*

ವಿದ್ಯುಚ್ಛಕ್ತಿ ಸಂಧಾನಗಳೂ, ಖನಿಜ ಶೋಧನೋದ್ಯಮಗಳೂ, ರಾಸಾಯನಿಕ ರಚನೆಗಳು, ಇತರ ವೈಜ್ಞಾನಿಕ ಕೃತಿಗಳೂ, ಭೂ ವ್ಯವಸಾಯ ವಿಸ್ತರಣ, ಯಂತ್ರಕರ್ಮ ಪ್ರಸರಣ, ವಾಣಿಜ್ಯೋತ್ತೇಜನಗಳ ಅನುಕೂಲ ಜನರಲ್ಲಿ ಕಾರ್ಯೋತ್ಸಾಹವನ್ನು ತುಂಬಿ, ಬುದ್ಧಿ ಕುಶಲತೆಯನ್ನು ಉತ್ತಮಗೊಳಿಸಿ, ಅವರ ಜೀವನ ಯೋಗ್ಯತೆಯನ್ನು ಉನ್ನತಿಗೆ ತರುತ್ತಿವೆ"[289].

ನಾಲ್ವಡಿಯವರ ನೇತೃತ್ವದಲ್ಲಿ ಮೈಸೂರು ಸರ್ಕಾರವು ಕೈಗೊಂಡ ಕೃಷಿ ಅಭಿವೃದ್ಧಿ ಮತ್ತು ಆಧುನಿಕ ಕ್ರಮಗಳನ್ನು ಅಂದಿನ ಅನೇಕ ಹೊರ ಪ್ರಾಂತ್ಯದ ಪತ್ರಿಕೆಗಳು ಹೊಗಳಿ ಲೇಖನಗಳನ್ನು ಪ್ರಕಟಿಸಿದ್ದವು. ದಿ ಮದ್ರಾಸ್ ಮೇಲ್ ಎಂಬ ಪತ್ರಿಕೆಯು 'ಅಗ್ರಿಕಲ್ಚರಲ್ ರಿಸರ್ಚ್ ಇನ್ ಮೈಸೂರ್' ಎಂಬ ಲೇಖನದಡಿಯಲ್ಲಿ "ಅನೇಕ ವರ್ಷಗಳಿಂದ ಮೈಸೂರು ಭಾರತದಲ್ಲಿ ಮಾದರಿ ರಾಜ್ಯವೆಂದು ಕರೆಯಲ್ಪಡುತ್ತಿದೆ ಮತ್ತು ಅದರ ಆಳರಸರು ಆ ಹೆಗ್ಗಳಿಕೆಯನ್ನು ಗಳಿಸಲು ಅನೇಕ ವಿಧಗಳಲ್ಲಿ ಕಾರಣರು, ಅವರಿಗೆ ಆ ಬಿರುದು ಹೊಂದಲು ಹೆಮ್ಮೆ ಇದೆ ಮತ್ತು ಅದಕ್ಕೆ ಅವರು ಅರ್ಹರು. ಮೈಸೂರು ಸರ್ಕಾರದ ಇಲಾಖೆಗಳಲ್ಲಿ ವಿಶೇಷವಾಗಿ ಒಂದು ಇಲಾಖೆಯ ಉದಾಹರಣೆಯನ್ನು ಭಾರತದ ವಿವಿಧ ಸರ್ಕಾರಗಳು ಕಡ್ಡಾಯವಾಗಿ ಅನುಸರಿಸಬೇಕು. ಅದು ನಾವು ಉಲ್ಲೇಖಿಸುತ್ತಿರುವುದು ಕೃಷಿ ಇಲಾಖೆಯನ್ನು"[290] ಎಂದು ಬರೆಯಿತು. ಅದೇ ಲೇಖನದಲ್ಲಿ ಮೈಸೂರು ಸರ್ಕಾರವು ಅಗ್ರಿಕಲ್ಚರಲ್ ಬ್ಯೂರೋ ಸ್ಥಾಪಿಸಿ ಡಾ. ಲೆಹ್‌ಮನ್ ಎಂಬ ಅಗ್ರಿಕಲ್ಚರಲ್ ಕೆಮಿಸ್ಟ್ ಅನ್ನು ನೇಮಿಸಿಕೊಂಡು ಸಾವಿರಾರು ರೂಪಾಯಿಗಳನ್ನು ವೆಚ್ಚಮಾಡಿ ಒಂದು ಸಂಶೋಧನಾಲಯವನ್ನು ಸ್ಥಾಪಿಸಿ ಅವಶ್ಯಕ ರಾಸಾಯನಿಕಗಳನ್ನು ಒದಗಿಸಿ ಸಂಶೋಧನೆಗೆ ಅನುಕೂಲ ಮಾಡಿಕೊಡಲಾಯಿತು. ಅದರ ಫಲಿತಾಂಶವಾಗಿ ಒಂದು ಲ್ಯಾಬೊರೇಟರಿ ಬೆಂಗಳೂರಿನಲ್ಲಿ ನೆಲೆಗೊಂಡಿದೆ, ಇದಕ್ಕೆ ಭಾರತದಲ್ಲಿ ಸಮನಾದುದು ಯಾವುದೂ ಇಲ್ಲ ಅಷ್ಟೇ ಏಕೆ ಪೌರ್ವಾತ್ಯ ಭಾಗದಲ್ಲೇ ಇಲ್ಲ ಎಂದು ನಾವು ಹೇಳಬಹುದು.......... ಲ್ಯಾಬೊರೇಟರಿಯಲ್ಲಿ ಪೊಟ್ಯಾಷ್ ಮತ್ತು ನೈಟ್ರೋಜನ್ ಬಗ್ಗೆ ಸಂಶೋಧನೆ ಮಾಡಲು ಪ್ರತ್ಯೇಕ ಕೊಠಡಿಗಳಿವೆ, ಸಂಗ್ರಹ ಕೊಠಡಿಗಳು ಹೇಗೆ ನಿರ್ಮಿಸಲ್ಪಟ್ಟಿವೆಯೆಂದರೆ ಅವುಗಳನ್ನು ಲ್ಯಾಬೊರೇಟರಿಗಳಾಗಿ ಪರಿವರ್ತಿಸಿಕೊಳ್ಳಬಹುದು. ಇಡೀ ಕಟ್ಟಡವು ಕೊಳವೆಗಳ ಮೂಲಕ ಅನಿಲ (Gas)ಪೂರೈಕೆ ಆಗುವಂತೆ ಅಳವಡಿಸಲಾಗಿದೆ, ಅನಿಲ ಕೊಳಾಯಿಗಳು ಹೇಗೆ ಅಳವಡಿಸಲ್ಪಟ್ಟಿವೆಯೆಂದರೆ ಬೆಂಚುಗಳ ಮುಂದಿನಿಂದಲೇ ಅನಿಲ ಪೂರೈಕೆಯನ್ನು ನಿಯಂತ್ರಿಸಬಹುದು, ಕೊಳಾಯಿಗಳ ಮುಂದೆ ನಿಂತಿರುವಾಗ ಆಗುವ ಅಪಾಯಗಳನ್ನು ತಡೆಗಟ್ಟಲಾಗಿದೆ. ಇನ್ನಿತರ ಕೊಳವೆಗಳು ಗಾಳಿ ಮತ್ತು ನೀರನ್ನು ಒದಗಿಸುವಂತಿದ್ದು ನಾಲ್ಕನೆಯದು ಅನುಪಯುಕ್ತವಾದುದು ಹೋಗುವಂತೆ ರೂಪಿಸಲಾಗಿದೆ"[291]. ದಿ ಮದ್ರಾಸ್ ಮೇಲ್ ಪತ್ರಿಕೆಯ ಈ ಲೇಖನವು ಅಂದಿನ

---

289. *ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 295*

290. *ದಿ ಮದ್ರಾಸ್ ಮೇಲ್., ದಿನಾಂಕ 3-3-1903, ಪ್ರೆಸ್ ಕಟಿಂಗ್ಸ್; 1(ಎ), ಕರ್ನಾಟಕ ರಾಜ್ಯ ಪತ್ರಾಗಾರ ಮೈಸೂರು ಶಾಖೆ, ಪು. 38.*

291. *ಅದೇ.*

ಕಾಲಕ್ಕೆ ಅತ್ಯಂತ ಆಧುನಿಕವಾದ ಲ್ಯಾಬೊರೇಟರಿಯ ವರ್ಣನೆಯನ್ನು ಒದಗಿಸುತ್ತದೆ. ಈ ಲ್ಯಾಬೊರೇಟರಿ ಮುಂದಿನ ಕೃಷಿ ಮತ್ತು ಕೈಗಾರಿಕೆಗಳ ಆಧುನಿಕತೆಗೆ ಅಸ್ತಿಭಾರದಂತಾಯಿತು. ಹಾಗೆಯೇ ನಾಲ್ವಡಿಯವರು ಪಾಶ್ಚಿಮಾತ್ಯ ವೈಜ್ಞಾನಿಕ ಬೆಳವಣಿಗೆಯನ್ನು ಸ್ಥಳೀಯ ಅನುಕೂಲಕ್ಕೆ ಬಳಸಿಕೊಳ್ಳಲು ಇಂತಹ ಪ್ರಯೋಗಾಲಯಗಳನ್ನು ಬಳಸಿಕೊಂಡರು. ನಾಲ್ವಡಿಯವರು ಅಭಿಪ್ರಾಯಪಟ್ಟಿದ್ದಂತೆ ಪ್ರಯೋಗ ಶಾಲೆಗಳ ಮೇಲೆ ಮಾಡುವ ವೆಚ್ಚವು ದೀರ್ಘಾವಧಿಯಲ್ಲಿ ಬಂಡವಾಳವೆಂದೂ, ದೇಶದ ಎಲ್ಲ ಯಶಸ್ಸಿನ ಹಿನ್ನೆಲೆ ಎಂದಾಗಿತ್ತು[292].

ಟೈಮ್ಸ್ ಎಂಬ ಪತ್ರಿಕೆಯು 1904ರ ಆಗಸ್ಟ್ 19ರಂದು "ಮಾಡೆಲ್ ಫಾರ್ಮ್ಸ್ ಇನ್ ಏನ್ ಇಂಡಿಯನ್ ಫ್ಯೂಡೇಟರಿ ಸ್ಟೇಟ್" ಎಂಬ ಶೀರ್ಷಿಕೆಯಡಿಯಲ್ಲಿ ಮೈಸೂರಿನ ಹೊಸ ಮಹಾರಾಜ "ತನ್ನ ಕೃಷಿ ಪ್ರಧಾನ ರಾಜ್ಯದಲ್ಲಿ ವಿಶೇಷವಾದ ಪ್ರಯೋಗಗಳತ್ತ ಹೆಜ್ಜೆಯಿಟ್ಟಿದ್ದಾರೆ..........ಮೈಸೂರು ಸರ್ಕಾರವು ಹೊರಡಿಸಿದ ಇತ್ತೀಚಿನ ಆದೇಶವು ಇಂಗ್ಲೆಂಡ್‌ನ ಪ್ರಾಯೋಗಿಕ ಕೃಷಿಕರ ಒಲವು ಮತ್ತು ಆಸಕ್ತಿಗಳತ್ತ ಹೆಚ್ಚು ಗಮನ ಹರಿಸುವಂತಹದಾಗಿದೆ.

ಮಹಾರಾಜ ಮತ್ತು ಅವರ ಮಂತ್ರಿಗಳು ಮೈಸೂರಿನ ರೈತರು ತಮ್ಮ ಪರಂಪರಾನುಗತ ಕೃಷಿ ವಿಧಾನಗಳನ್ನು ತೊರೆಯದೆ ವೈಜ್ಞಾನಿಕ ಕೃಷಿ ವಿಧಾಗಳನ್ನು ಅದರಲ್ಲೂ ಆಧುನಿಕ ಸಹಕಾರ ಪದ್ಧತಿಯನ್ನು ಕಲಿಯುವಂತೆ ಅವಕಾಶಗಳನ್ನು ಸೃಷ್ಟಿಸುವತ್ತ ಇಚ್ಛೆ ಹೊಂದಿದ್ದಾರೆ. ಐದು ವರ್ಷಗಳ ಹಿಂದೆ ಮಹಾರಾಜರು ಉನ್ನತ ವೈಜ್ಞಾನಿಕ ಸಾಧನೆ ಮಾಡಿದ ಜರ್ಮನಿಯ ಕೃಷಿ ರಾಸಾಯನಿಕ ವಿಜ್ಞಾನಿಯನ್ನು ನೇಮಿಸಿಕೊಂಡರು ಸ್ಕಾಟಿಷ್ ಸಂಜಾತರೊಬ್ಬರನ್ನು ಕೃಷಿ ಇಲಾಖೆಯ ಡೈರೆಕ್ಟರ್ ಆಗಿ ನೇಮಿಸಿ ಹಲವಾರು ವಿಚಾರಣೆ ಮತ್ತು ಪ್ರಯೋಗಗಳನ್ನು ಕೈಗೊಳ್ಳಲು ಕಾರಣರಾಗಿದ್ದಾರೆ[293] ಎಂದು ಮೈಸೂರಿನಲ್ಲಿ ಕೈಗೊಂಡಿದ್ದ ಆಧುನಿಕ ಪ್ರಕ್ರಿಯೆಗಳನ್ನು ಹೊಗಳಲಾಗಿದೆ. ಆ ಪತ್ರಿಕೆಯು ಮುಂದುವರಿದು ಮೈಸೂರು ಜಾರಿಗೆ ತಂದ ಮಾಡೆಲ್ ಫಾರ್ಮ್ ಕಾರ್ಯಕ್ರಮಗಳನ್ನು ಈ ರೀತಿ ಬಣ್ಣಿಸಿದೆ "ಜಿಲ್ಲೆಯ ಉಸ್ತುವಾರಿ ನೋಡಿಕೊಳ್ಳುವ ಜಿಲ್ಲಾಧಿಕಾರಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಅಮಲ್ದಾರರು ಪ್ರತಿ ತಾಲ್ಲೂಕಿನಲ್ಲಿ ಅತ್ಯಂತ ಬುದ್ಧಿವಂತ ಮತ್ತು ಮುನ್ನುಗ್ಗುವ ಗುಣದ ಕೆಲ ರೈತರನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಅನಂತರ ಸರ್ಕಾರವು ಅತ್ಯುತ್ತಮ ಬಿತ್ತನೆ ಬೀಜ, ಗೊಬ್ಬರ, ಉಪಕರಣ ಮುಂತಾದವನ್ನು ಒದಗಿಸಿ ಅವರು ತಮ್ಮ ಸಾಗುವಳಿ ಭೂಮಿಗಳಲ್ಲಿ ಮಾಡೆಲ್ ಫಾರ್ಮ್‌ಗಳಂತೆ ಬೆಳಸಬೇಕೆಂಬ ಷರತ್ತಿನ ಮೇಲೆ ಆ ವರ್ಷ ಪೂರೈಸುತ್ತಿತ್ತು. ನುರಿತ ಸರ್ಕಾರಿ ತಜ್ಞರು ಮತ್ತು ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ವಿಶೇಷ ಬೆಳೆಗಳು ಮತ್ತಿತರ ಅಭಿವೃದ್ಧಿ ಕ್ರಮಗಳನ್ನು ಅಳವಡಿಸಿಕೊಳ್ಳುವಂತೆ ಮಾರ್ಗದರ್ಶನ ಮಾಡಲಾಗುತ್ತಿತ್ತು.

---

*292. **ಸ್ಪೀಚಸ್ ಆಫ್ ಹಿಸ್ ಹೈನೆಸ್.,** ಪೂರ್ವೋಕ್ತ, ಪು. 224-226*

*293. **ದಿ ಟೈಮ್ಸ್.,** ದಿನಪತ್ರಿಕೆ : 19-8-1904, ಪೇಪರ್ ಕಟಿಂಗ್ಸ್, ಪು. 2*

ಬೆಳೆಯ ಬಿತ್ತನೆ ಹಂತದಿಂದ ಕೊಯ್ಲಿನವರೆಗೆ ಬಳಸುವ ಬಿತ್ತನೆ ಬೀಜ, ಗೊಬ್ಬರ, ನೀರು, ಬೆಳೆಯ ಮೌಲ್ಯ, ಬರುವ ರೋಗಗಳು ಮುಂತಾದ ಅಂಶಗಳನ್ನು ದಾಖಲೆ ಇಡಲಾಗುತ್ತದೆ." ಹೀಗೆ ಟೈಮ್ಸ್ ಪತ್ರಿಕೆಯು ನಾಲ್ವಡಿಯವರ ಮೈಸೂರು ಸರ್ಕಾರವು ಕೈಗೊಂಡಿದ್ದ ಕೃಷಿ ಆಧುನೀಕರಣ ಪ್ರಕ್ರಿಯೆಯನ್ನು ಯಥಾವತ್ತಾಗಿ ನಿರೂಪಿಸಿ ಪ್ರಶಂಸಿಸಿದೆ. ಹಾಗೆಯೇ ಕೃಷಿ ವಸ್ತು ಪ್ರದರ್ಶನ ಯೋಜನೆ ಮತ್ತು ಉತ್ತಮವಾದುದಕ್ಕೆ ಬಹುಮಾನ ನೀಡುವ ಸರ್ಕಾರದ ಪ್ರೋತ್ಸಾಹ ಕ್ರಮಗಳನ್ನು ಹೊಗಳಿದೆ[294].

ಮದ್ರಾಸ್‌ಸ್ಟ್ಯಾಂಡರ್ಡ್ ಪತ್ರಿಕೆಯು ಮತ್ತೆ 1905ರಲ್ಲಿ 'ಅಗ್ರಿಕಲ್ಚರ್ ಇನ್ ಮೈಸೂರ್' ಎಂಬ ಶೀರ್ಷಿಕೆಯಡಿಯಲ್ಲಿ ಮೈಸೂರು ರಾಜ್ಯವು ಕೃಷಿ ಸಂಶೋಧನೆಯಲ್ಲಿ ಅತ್ಯಂತ ಅಭಿಮಾನ ಪಡುವ ರೀತಿ ಕಾರ್ಯನಿರ್ವಹಿಸುತ್ತಿದೆ ಎಂದು ಹೊಗಳುತ್ತಾ "ಕೃಷಿ ಕ್ಷೇತ್ರದ ಉದ್ಯಮಶೀಲತೆಗೆ ಮಹಾರಾಜರ ಸರ್ಕಾರ ನೀಡುತ್ತಿರುವ ಉದಾರ ಸಹಕಾರದ ಜೊತೆಗೆ ಕೃಷಿ ಉದ್ಯಮವನ್ನು ಸುಧಾರಿಸುವಲ್ಲಿ ಮತ್ತು ಅಭಿವೃದ್ಧಿಗೊಳಿಸುವಲ್ಲಿ ಅಲ್ಲಿನ ರೈತರ ಸ್ವಂತ ಉತ್ಸಾಹವೂ ಜೊತೆಗೂಡಿರುವುದೂ ಕಾರಣವಾಗಿದೆ[295] ಎಂದು ಉಲ್ಲೇಖಿಸುವ ಮೂಲಕ ನಾಲ್ವಡಿಯವರ ಸರ್ಕಾರದ ಕೃಷಿ ಆಧುನೀಕರಣ ಪ್ರಕ್ರಿಯೆಯನ್ನು ರೈತರು ಮೆಚ್ಚಿದ್ದರು ಮತ್ತು ಅದನ್ನು ಅಳವಡಿಸಲು ತಾವು ಮುಂದಾಗಿದ್ದರೆಂಬುದನ್ನು ತಿಳಿಸುತ್ತದೆ. ಸರ್ಕಾರದ ಆಧುನೀಕರಣ ಪ್ರಕ್ರಿಯೆಗೆ ಸಾರ್ವಜನಿಕ ಪ್ರತಿಕ್ರಿಯೆ ಸಕಾರಾತ್ಮಕ ವಾಗಿತ್ತೆಂದೇಳಬಹುದು. ಇದೇ ಲೇಖನದಲ್ಲಿ ಕಬ್ಬಿನ ಬೆಳೆಗೆ ನಡೆಸಿದ ಪ್ರಯೋಗಗಳ ಬಗ್ಗೆ ತಿಳಿಸುತ್ತಾ "ಇಡೀ ಪ್ರದೇಶದ ಭೂಮಿಯನ್ನು" ಮಣ್ಣನ್ನು ಮಗುಚಿಹಾಕುವ ಹಲಗೆ ಹೊಂದಿದ ನೇಗಿಲಿನಿಂದ (Mould-board- ಕೆನಡಾದ್ದು) ಆರು ಇಂಚು ಆಳದವರೆಗೆ ಉಳುಮೆ ಮಾಡಿ ಮತ್ತೆ ಮೇಲಿನ ಪದರವನ್ನು ಸಡಿಲಿಸಲು ಎರಡುಬಾರಿ ಸಾಗುವಳಿ ಮಾಡಲಾಗುತ್ತದೆ". ಪ್ರಯೋಗಾತ್ಮಕ ತುಕಡಿಗಳಲ್ಲಿ ಮೂಳೆಗೊಬ್ಬರ (Bone-meal), ಮ್ಯಾಗ್ನೀಸಿಯಂ ಪೊಟ್ಯಾಸಿಯಂ ಸಲ್ಫೇಟ್ ಮತ್ತು ಕ್ಲೋರೈಡ್‌ಗಳ ಸಂಯುಕ್ತ ಲವಣ (Kainit), ಕೊಬ್ಬರಿ ಎಣ್ಣೆಯ ಹಿಪ್ಪೆ (Poonac) ಮುಂತಾದ ಗೊಬ್ಬರಗಳನ್ನು ಬಳಸಲಾಗುತ್ತಿದೆ"[296] ಎಂದೂ ಬರೆದಿದೆ. ಒಟ್ಟಾರೆ ಆಗ್ಗೆ ಪಾಶ್ಚಿಮಾತ್ಯ ಮೂಲದ ಆಧುನಿಕ ಕೃಷಿ ಜ್ಞಾನ, ವಿಧಿವಿಧಾನ, ಸಲಕರಣೆಗಳನ್ನು ಬಳಸಿಕೊಂಡು ಕೃಷಿಯ ಆಧುನೀಕರಣ ಪ್ರಕ್ರಿಯೆಗೆ ಮುಂದಾಗಿದ್ದ ಮೈಸೂರು ಸಂಸ್ಥಾನದ ಕ್ರಿಯಾಶೀಲ ಚಟುವಟಿಕೆಗಳನ್ನು ಇಡೀ ಬ್ರಿಟಿಷ್ ಪ್ರಭುತ್ವದ ಎಲ್ಲ ಭಾಗಗಳಲ್ಲೂ ಕುತೂಹಲದಿಂದ ಗಮನಿಸಲಾಗುತ್ತಿತ್ತು ಎಂಬುದು ಇದರಿಂದ ತಿಳಿಯುತ್ತದೆ. ಮುಂಚೂಣಿಯಲ್ಲಿರುವವರು ಎಲ್ಲರ ಗಮನವನ್ನು ಸೆಳೆಯುವಂತೆ ನಾಲ್ವಡಿಯವರ ಮೈಸೂರು ಇಡೀ ಪ್ರಪಂಚವನ್ನೇ ಆಕರ್ಷಿಸಿತ್ತು.

ಅದೇ ಮದ್ರಾಸ್ ಸ್ಟ್ಯಾಂಡರ್ಡ್ ಪತ್ರಿಕೆಯು ಮೂರು ತಿಂಗಳ ನಂತರ ಮೈಸೂರು ವೈಜ್ಞಾನಿಕ ಕೃಷಿ ಬೆಳವಣಿಗೆಯಲ್ಲಿ

---

*294. ದಿ ಟೈಮ್ಸ್., ದಿನಪತ್ರಿಕೆ : 19-8-1904, ಪೇಪರ್ ಕಟಿಂಗ್ಸ್, ಪು. 2*

*295. ಮದ್ರಾಸ್ ಸ್ಟ್ಯಾಂಡರ್ಡ್, ದಿನಪತ್ರಿಕೆ : 3-7-1905, ಪೇಪರ್ ಕಟಿಂಗ್ಸ್ - 1 (ಬಿ), ಪು. 12*

*296. ಅದೇ.*

ಎಚ್ಚರದಿಂದಿರಬೇಕೆಂದು ಈ ಕೆಳಕಂಡಂತೆ ತಿಳಿಸುತ್ತದೆ "ಕೃಷಿ ವಿಷಯಕ್ಕೆ ಹೆಚ್ಚು ಗಮನಹರಿಸಲಾಗಿದೆ. ಕೀಟ ನಾಶಕಗಳು ಮತ್ತು ಸಸ್ಯ ರೋಗಗಳ ಬಗ್ಗೆ ಸಂಶೋಧನೆ ನಡೆಸಲು ಕೆನಡಾದಿಂದ ಶಿಲೀಂದ್ರಶಾಸ್ತ್ರಜ್ಞ (mycologist) ಮತ್ತು ಕೀಟಶಾಸ್ತ್ರಜ್ಞ (Entomologist) ರನ್ನು ನೇಮಿಸಿಕೊಳ್ಳಲಾಗಿದೆ. ಅದಕ್ಕಾಗಿ ಭಾರತ ಸರ್ಕಾರದ ಅನುಮತಿಯನ್ನು ಕೇಳಲಾಗಿದೆ-ಇಬ್ಬರು ಸಹಾಯಕ ರಾಸಾಯನಿಕ ತಜ್ಞರನ್ನು ನೇಮಿಸಿಕೊಳ್ಳಲಾಗುತ್ತಿದೆ. ಈ ಸಂಬಂಧದಲ್ಲಿ ವೈಜ್ಞಾನಿಕ ಕೃಷಿ ಕೈಗೊಳ್ಳುವವರಿಗೆ ಅವಶ್ಯವಾಗಿ ಒಂದು ಎಚ್ಚರಿಕೆಯ ಮಾತನ್ನು ಹೇಳಬೇಕು. ಇದು ಭಾರತದಲ್ಲಿ ಇನ್ನೂ ಬೆಳೆಯ ಬೇಕಾಗಿದೆ ಮತ್ತು ಯೂರೋಪಿನ ದೇಶಗಳಲ್ಲಿ ಹಾಗೂ ಅಮೇರಿಕಾದಲ್ಲಿ ಸಾಧಿತವಾಗಿರುವ ತತ್ವಗಳನ್ನು ಯಥಾವತ್ತಾಗಿ ಭಾರತಕ್ಕೆ ಆಮದು ಮಾಡಿಕೊಳ್ಳಲಾಗದು ಏಕೆಂದರೆ ಅವುಗಳ ನಡುವಿನ ಹವಾಗುಣ, ಭೂಮಿ ಮತ್ತಿತರ ಪರಿಸ್ಥಿತಿಗಳು ವಿಭಿನ್ನವಾಗಿರುವುದು."[297] ಪತ್ರಿಕೆಯ ಮೇಲ್ಕಾಣಿಸಿದ ಲೇಖನದಿಂದ ತಿಳಿದುಬರುವ ಅಂಶವೆಂದರೆ ಪಾಶ್ಚಿಮಾತ್ಯ ದೇಶಗಳಲ್ಲಿ ಸಾಧಿತವಾಗಿದ್ದ ವೈಜ್ಞಾನಿಕ ಕೃಷಿ ಜ್ಞಾನವನ್ನು ಭಾರತದಲ್ಲಿ ಇನ್ನೂ ಅಳವಡಿಸುವ ಪ್ರಕ್ರಿಯೆ ಆರಂಭವಾಗಿಲ್ಲದ ಕಾಲದಲ್ಲಿ ಮೈಸೂರು ಸಂಸ್ಥಾನವು ತಾನು ಗಳಿಸಿದ್ದ ಮಾದರಿ ಸಂಸ್ಥಾನವೆಂಬ ಹೆಗ್ಗಳಿಕೆಯನ್ನು ಇನ್ನೂ ಭದ್ರಗೊಳಿಸುವಂತೆ ಹಾಗೂ ರುಜುವಾತುಪಡಿಸುವಂತೆ ಕೃಷಿ ಆದುನೀಕರಣ ಪ್ರಕ್ರಿಯೆಗೆ ಮುಂದಾಗಿತ್ತೆಂಬುದು. ಹಾಗೆಯೇ ಈ ಪತ್ರಿಕೆಯು ಪಾಶ್ಚಿಮಾತ್ಯ ದೇಶಗಳಲ್ಲಿ ಯಶಸ್ವಿಯಾದ ವೈಜ್ಞಾನಿಕ ಕೃಷಿ ವಿಧಾನವು ಭಾರತದಲ್ಲಿ ಯಶಸ್ವಿಯಾಗುವುದೇ ಎಂಬ ಅನುಮಾನ ವ್ಯಕ್ತಪಡಿಸುತ್ತದೆ. ಆದರೆ ನಾಲ್ವಡಿಯವರು ದೂರದೃಷ್ಟಿ ಹೊಂದಿದ ಮಹಾರಾಜ ಮಾತ್ರವಲ್ಲದೆ ವಿಜ್ಞಾನವು ಸಾರ್ವತ್ರಿಕವಾದುದು, ಪಾಶ್ಚಿಮಾತ್ಯ ದೇಶಗಳಲ್ಲಿ ಸಂದ ವಿಜ್ಞಾನವು ಪೌರ್ವಾತ್ಯ ಮೈಸೂರಿನಲ್ಲಿ ಸಲ್ಲುತ್ತದೆಂಬುದನ್ನು ತಮ್ಮ ಆಧುನಿಕ ಶಿಕ್ಷಣ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಯ, ದೇಶಗಳೊಂದಿಗಿನ ಒಡನಾಟವಿರಿಸಿಕೊಂಡಿದ್ದ ನಾಲ್ವಡಿಯವರು ಅರಿತಿದ್ದರು. ಅದೆಲ್ಲಕ್ಕಿಂತ ಹೆಚ್ಚಾಗಿ ನಾಲ್ವಡಿಯವರ ಮನಸ್ಸು ಸಂಶೋಧನಾ ಪ್ರವೃತ್ತಿಯದಾಗಿತ್ತು ಮತ್ತು ಜಗತ್ತಿನ ಯಾವೆಡೆಯಲ್ಲಾದರೂ ಕಾಣುವ ಉತ್ತಮವಾದ ಲೌಕಿಕ ಹಾಗೂ ಅಲೌಕಿಕ ಜ್ಞಾನಗಳನ್ನು ತಾವು ಪಡೆದು ಅದನ್ನು ತನ್ನ ಪ್ರಜೆಗಳತ್ತ ಕೊಂಡೊಯ್ಯುವ ಉದಾರ ಮನಸ್ಸಿನ ರಾಜಕೀಯ ನಾಯಕರಾಗಿದ್ದರು.

ಕೃಷಿ ಕ್ಷೇತ್ರದಲ್ಲಿ ಆಧುನಿಕತೆಯನ್ನು ಅಳವಡಿಸುವಲ್ಲಿ ಹಾಗೂ ಸಮಾಜವನ್ನು ಪರಿವರ್ತನೆಯತ್ತ ಕೊಂಡೊಯ್ಯುವಲ್ಲಿ ನಾಲ್ವಡಿಯವರು ಮಾಡಿರುವ ಪ್ರಯತ್ನಗಳ ಬಗೆಗಿನ ವಿವರಣೆಗಳನ್ನು ಸಂಕ್ಷಿಪ್ತವಾಗಿ ತಿಳಿದ ಮೇಲೆ ಅವುಗಳಿಂದ ಒಡಮೂಡಿದ ಕೆಲವು ನಿರ್ಣಯಗಳನ್ನು ಈ ರೀತಿಯಾಗಿ ಗುರುತಿಸಬಹುದಾಗಿದೆ. ಮೊದಲನೆಯದಾಗಿ ಮೈಸೂರು ಸಂಸ್ಥಾನದ ಏಳಿಗೆಯಲ್ಲಿ ಕೃಷಿಯ ಮಹತ್ವವನ್ನು ಅರಿತಿದ್ದ ನಾಲ್ವಡಿಯವರು ಆಧುನಿಕ ಕಾಲದ ಅವಶ್ಯಕತೆ

---

*297. ಮದ್ರಾಸ್ ಸ್ಟಾಂಡರ್ಡ್, ದಿನಪತ್ರಿಕೆ : 3-7-1905, ಪೇಪರ್ ಕಟಿಂಗ್ಸ್ - 1 (ಬಿ), ಪು. 28*

ಹಾಗೂ ಸನ್ನಿವೇಶಗಳಿಗೆ ತಕ್ಕಂತೆ ಕೃಷಿ ಉದ್ಯಮ ಕ್ಷೇತ್ರದಲ್ಲಿ ಹಲವಾರು ಪ್ರಾಯೋಗಿಕ ಯೋಜನೆಗಳನ್ನು ರೂಪಿಸುತ್ತಾ ಪ್ರತ್ಯಕ್ಷ ಪ್ರಯೋಗಗಳ ಮೂಲಕ ಜನರಲ್ಲಿ ಆಧುನಿಕಾಂಶಗಳ ಅಳವಡಿಕೆಗೆ ಪ್ರೋತ್ಸಾಹಿಸುತ್ತಾ ಅವುಗಳ ಬಗ್ಗೆ ಒಲವನ್ನು ಬೆಳೆಸಿಕೊಳ್ಳುವಂತೆ ತಮ್ಮ ಅಮೋಘ ಭಾಷಣಗಳ ಮೂಲಕ ಕರೆ ನೀಡುತ್ತಾ ಬಂದದ್ದು. ಎರಡನೆಯದಾಗಿ ತಮ್ಮ ಕರೆಯ ಅನುಷ್ಠಾನದ ಹಿನ್ನೆಲೆಯಲ್ಲಿ ಕಾರ್ಯ ನಿರ್ವಹಿಸುವಂತೆ ಹಲವಾರು ಕೃಷಿ ಸಮಿತಿಗಳನ್ನು ರಚನೆ ಮಾಡಿ ಅವುಗಳ ಮೂಲಕ ಕೃಷಿ ಸಲಕರಣೆಗಳಾದ ನೇಗಿಲು, ರಸಗೊಬ್ಬರ, ಬಿತ್ತನೆ ಬೀಜ, ಕಬ್ಬು, ಹತ್ತಿ ಮತ್ತು ರೇಷ್ಮೆ ಬೆಳೆ ಮುಂತಾದವುಗಳಿಗೆ ಸಂಬಂಧಿಸಿದಂತೆ ನೂತನ ವಿಧಾನಗಳ ಅಳವಡಿಕೆಗೆ ಸರ್ಕಾರದ ವತಿಯಿಂದ ಸಾಲ ಸೌಲಭ್ಯ ಹಾಗೂ ತಿಳುವಳಿಕೆಯ ಮೂಲಕ ಪ್ರೋತ್ಸಾಹದಾಯಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಹಾಗೂ ಆರ್ಥಿಕ ಲಾಭಾಂಶವನ್ನು ಪಡೆಯುವ ದಾರಿಯಲ್ಲಿ ಪ್ರಜೆಗಳನ್ನು ಕೊಂಡೊಯ್ಯಲು ಪ್ರಯತ್ನಿಸಿದ್ದು. ಮೂರನೆಯದಾಗಿ ವಿದೇಶಿ ತಜ್ಞರನ್ನು ನೇಮಕ ಮಾಡಿಕೊಳ್ಳುವುದರ ಮೂಲಕ ಪಾಶ್ಚಿಮಾತ್ಯ ವೈಜ್ಞಾನಿಕ ವಿಚಾರಧಾರೆಗಳನ್ನು ಸ್ಥಳೀಯ ಸಮಾಜದ ಕೃಷಿಕ್ಷೇತ್ರದಲ್ಲಿ ಅಳವಡಿಸುತ್ತಾ ಸಂಪ್ರದಾಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಸಮೀಕರಣಕ್ಕೆ ಪ್ರೋತ್ಸಾಹ ನೀಡುತ್ತಾ ಬಂದದ್ದು. ನಾಲ್ಕನೆಯದಾಗಿ ಆರೋಗ್ಯಕರ ಜೀವನ ನಡೆಸುವ ಹಿನ್ನಲೆಯಲ್ಲಿ ಅವಶ್ಯಕ ಪೋಷಕಾಂಶಗಳಾದ ತರಕಾರಿ, ಹಣ್ಣು, ಹಾಲು, ಮಾಂಸ ಮೊಟ್ಟೆಗಳ ಉತ್ಪಾದನೆಯಲ್ಲಿ ಕೂಡ ಆಧುನಿಕತೆಯ ಅಳವಡಿಕೆಯನ್ನು ತಂದು ಹೆಚ್ಚುತ್ತಿರುವ ಜನಸಂಖ್ಯೆಗೆ ಉತ್ಪಾದನಾ ಕ್ಷೇತ್ರವನ್ನು ಅಭಿವೃದ್ಧಿಪಡಿಸಲು ಯಶಸ್ವಿ ಕಾರ್ಯಯೋಜನೆಗಳನ್ನು ರೂಪಿಸಿದ್ದು. ಐದನೆಯದಾಗಿ ಪ್ರಯೋಗಾತ್ಮಕ ಫಾರ್ಮ್‌ಗಳ ಮೂಲಕ ಆಧುನಿಕ ಸಂಶೋಧನೆಗಳಿಗೆ ಅವಕಾಶಮಾಡಿಕೊಟ್ಟು ಸಾಂಪ್ರದಾಯಿಕ ಕೃಷಿ ಕ್ಷೇತ್ರದೊಳಗೆ ವೈಜ್ಞಾನಿಕ ವಿಚಾರಧಾರೆಗಳು ಸಮ್ಮಿಲನಗೊಂಡು ಕೃಷಿಕ್ಷೇತ್ರವು ವಿಸ್ತಾರವಾಗಿ ಬೆಳೆಯುವಂತೆ ಪ್ರೋತ್ಸಾಹ ನೀಡಿದ್ದು. ಆರನೆಯದಾಗಿ ಸಾಮಾನ್ಯ ರೈತನಿಗೂ ಅರ್ಥವಾಗುವ ರೀತಿಯಲ್ಲಿ ಶಿಕ್ಷಣವನ್ನು ನೀಡುವ ಹಾದಿಯಲ್ಲಿ ವಸ್ತುಪ್ರದರ್ಶನ ಕಾರ್ಯಯೋಜನೆಯನ್ನು ರೂಪಿಸಿ ಪ್ರಪಂಚದ ಮಟ್ಟದಲ್ಲಿ ಆಗುತ್ತಿದ್ದ ಬದಲಾವಣೆಗಳಿಗೆ ಸಂಬಂಧಿಸಿದ ಜ್ಞಾನವನ್ನು ಪ್ರಚಾರ ಕಾರ್ಯಗಳ ಮೂಲಕ ನೀಡಲು ಅವಕಾಶ ಮಾಡಿಕೊಟ್ಟಿದ್ದು. ಏಳನೆಯದಾಗಿ ಕೃಷಿ ಶಾಲೆಗಳನ್ನು ತೆರೆಯುವುದರ ಮೂಲಕ ರೈತರಿಗೆ ಕೃಷಿ ಶಿಕ್ಷಣವನ್ನು ಸಾಹಿತ್ಯದ ಮೂಲಕ ನೀಡಲು ಮುಂದಾಗಿ ಕೃಷಿಯನ್ನು ಒಂದು ಸಾಂಪ್ರದಾಯಿಕ ಕಸುಬನ್ನಾಗಿ ಮಾತ್ರವಲ್ಲದೆ ವೈಜ್ಞಾನಿಕ ವಿಧಾನದಿಂದಲೂ ಮಾಡಬಹುದೆಂಬುದನ್ನು ಹಾಗೂ ವೃತ್ತಿಯನ್ನಾಗಿಯೂ ಸ್ವೀಕರಿಸುವಂತಹ ವಿದ್ಯಾವಂತರ ವರ್ಗವನ್ನು ರೂಪಿಸಲು ಪ್ರಯತ್ನಿಸಿದುದ್ದು. ಎಂಟನೆಯದಾಗಿ ಗ್ರಾಮಗಳನ್ನು ದತ್ತು ತೆಗೆದುಕೊಳ್ಳುವುದರ ಮೂಲಕ ಗ್ರಾಮಾಭಿವೃದ್ಧಿ

ಯೋಜನೆಗಳನ್ನು ರೂಪಿಸಿ ಇತರೆ ಗ್ರಾಮಗಳಿಗೆ ಆ ದತ್ತು ಗ್ರಾಮ 'ಮಾದರಿ' ಯಾಗಿದ್ದುಕೊಂಡು ಹೋಲಿಕೆಗಳೊಡನೆ ಇತರೆ ಗ್ರಾಮಗಳ ಜನರು ತಮ್ಮ ಗ್ರಾಮಗಳನ್ನು 'ಮಾದರಿ ಗ್ರಾಮದ ಕಲ್ಪನೆ' ಎಡೆಗೆ ಸಾಗಿಸುವಂತಹ ಆಲೋಚನೆಗಳನ್ನು ಬೆಳಸಿಕೊಳ್ಳುವಂತೆ ಅವಕಾಶಗಳನ್ನು ದೊರಕಿಸಿ ಕೊಟ್ಟಿದ್ದು. ಒಂಬತ್ತನೆಯದಾಗಿ ವೃತ್ತ ಪತ್ರಿಕೆಗಳು ನಾಡಿನಲ್ಲಾಗುತ್ತಿದ್ದ ಸಮಗ್ರ ಬೆಳವಣಿಗೆಗಳನ್ನು ಜನರಿಗೆ ತಿಳಿಸುವಂತಹ ಕಾರ್ಯವನ್ನು ನಿರ್ವಹಿಸಿದ್ದು. ಹತ್ತನೆಯದಾಗಿ ನಾಲ್ವಡಿಯವರೇ 'ಯಥಾರಾಜ ತಥಾಪ್ರಜಾ' ಎಂಬ ಸೂಕ್ತಿಯ ಸಂಕೇತವಾಗಿ ಆಧುನಿಕ ಅಂಶಗಳನ್ನು ತಾವೂ ನಿರಾಕರಿಸದೇ, ಪ್ರಜೆಗಳೂ ನಿರಾಕರಿಸದಂತೆ ನೋಡಿಕೊಳ್ಳುತ್ತಾ ಸಂಪ್ರದಾಯಬದ್ಧ ಸಮಾಜವನ್ನು ಸಾಂಸ್ಕೃತಿಕ ಹಿನ್ನೆಲೆಯ ಚಿಂತನೆಯಲ್ಲೇ ಅದನ್ನು ಒಪ್ಪಿಕೊಳ್ಳುವಂತೆ ಅವರಲ್ಲಿ ಮನವಿ ಮಾಡಿಕೊಳ್ಳುತ್ತಾ, ಆ ಮೂಲಕ ಎಲ್ಲ ಕ್ಷೇತ್ರಗಳು ಆಧುನಿಕತೆಗೆ ತೆರೆದುಕೊಳ್ಳುವಂತೆ ತಮ್ಮ ಆಕರ್ಷಣೀಯ ಭಾಷಣಗಳ ಮೂಲಕ ಸಮಾಜವನ್ನು ಹೊಸ ಪರಿಸ್ಥಿತಿಯ ಕಡೆಗೆ ಕೊಂಡೊಯ್ಯುವ ಮಾರ್ಗದರ್ಶಿ ಸೂಚಿಯಂತೆ ಕೆಲಸ ಮಾಡಿದ್ದು. ಇವೆಲ್ಲ ಪ್ರಯೋಗಗಳಿಂದುಂಟಾದ ಪರಿಣಾಮಗಳ ಫಲಿತಾಂಶದ ಬೆಳವಣಿಗೆಯನ್ನು ಕಣ್ಣಾರೆ ಕಂಡ ಗಾಂಧೀಜಿಯವರು ತಮ್ಮ ಪರಿಕಲ್ಪನೆಯ ಹಾದಿಯಲ್ಲೇ ಸಾಗುತ್ತಿದ್ದ ಮೈಸೂರು ಸಂಸ್ಥಾನದ ಬೆಳವಣಿಗೆಯನ್ನು ಗುರುತಿಸಿ ಬಹುಶಃ ಅದನ್ನು 'ಮಾದರಿ ಸಂಸ್ಥಾನ'ವೆಂದು ಕರೆದಿದ್ದು. ಅಷ್ಟೇ ಏಕೆ ಬ್ರಿಟಿಷ್ ವೈಸ್ರಾಯಿ ಲಾರ್ಡ್ ಕರ್ಜನ್‌ರವರೇ ಅಭಿಪ್ರಾಯಿಸಿರುವಂತೆ ಶ್ರೀ ಚಾಮರಾಜ ಒಡೆಯರಿಗೆ ಅಧಿಕಾರ ನೀಡಿದ್ದೊಂದು ಪರೀಕ್ಷಾರ್ಥವಾಗಿದ್ದು ಅವರ ರಾಜ್ಯಭಾರವು ಸಫಲವಾಗಿ ನೆರವೇರದೆ ಹೋಗಿದ್ದರೆ ತಾವು ಮೈಸೂರು ಸಂಸ್ಥಾನದ ಬಗ್ಗೆ ತೋರುತ್ತಿರುವ ಔದಾರ್ಯಕ್ಕೆ ಆಕ್ಷೇಪಣೆಯು ಬರುತ್ತಿದ್ದುದರ ಜೊತೆಗೆ ಭಾರತೀಯ ಸಂಸ್ಥಾನಗಳ ಮತ್ತು ಭಾರತೀಯರ ಆಡಳಿತ ನಿರ್ವಹಣ ಸಾಮರ್ಥ್ಯದ ವಿಚಾರದಲ್ಲೋ ಕಳಂಕವು ಹೊರುವಂತಾಗುತ್ತಿದ್ದಿತು. "ಆದಕಾರಣ ಪ್ರತಿಯೊಬ್ಬರ ದೃಷ್ಟಿಯೂ ಮೈಸೂರು ಸಂಸ್ಥಾನದ ಕಡೆಗೆ ತಿರುಗಿದ್ದಿತು; ಪರೀಕ್ಷಾರ್ಥವಾಗಿ ಮಾಡಿದ ಆ ದೊಡ್ಡ ಏರ್ಪಾಡು ಯಾವ ರೀತಿ ಪರಿಣಮಿಸುವುದೆಂಬುದನ್ನೂ, ಮತ್ತು ಬ್ರಿಟಿಷ್ ಸರ್ಕಾರದವರು ನಿರ್ಭರ ಚಿತ್ತದಿಂದ ನೆರವೇರಿಸಿದ ಕಾರ್ಯವು ಹೇಗೆ ಸಾರ್ಥಕವಾಗುವುದೆಂಬುದನ್ನು ಸಮಸ್ತರೂ ನಿರೀಕ್ಷಿಸಿ ನೋಡುತ್ತಿದ್ದಾರೆ. ಸಂಸ್ಥಾನದ ಆಡಳಿತದಲ್ಲಿ ಲೇಶ ಮಾತ್ರವೂ ನ್ಯೂನತೆಗಳೇ ಇರಲಿಲ್ಲವೆಂದಾಗಲಿ, ಸ್ವಲ್ಪ ಮಾತ್ರವೇ ಆಕ್ಷೇಪಣೆಯವಲ್ಲದ ಮಟ್ಟಿಗೆ ಪರಿಪೂರ್ಣವಾದ ಶಿಸ್ತಿನಿಂದಲೇ ಸಮಸ್ತ ಕಾರ್ಯಗಳೂ ನಡೆದಿವೆಯೆಂದಾಗಲಿ ನಾನು ಹೇಳುವುದಿಲ್ಲ. ನಾವುಗಳು ಧ್ಯೇಯಗಳನ್ನು ಕುರಿತು ಮಾತನಾಡುವುದೇ ಹೆಚ್ಚು. ಆದರೆ, ಲೇಶವೂ ಸಂದೇಹವಿಲ್ಲದೆ ಇಷ್ಟನ್ನೇನೊ ನಾನು ಹೇಳಬಹುದಾಗಿದೆ; ಈ ಸಂಸ್ಥಾನದಲ್ಲಿ ಪ್ರಭುತ್ವ ಮಾಡಿದವರೂ, ಮಾಡುವವರು ಪ್ರಭುನಿಷ್ಠರಾಗಿ ದೇಶಾಭಿಮಾನದಿಂದ ಕೂಡಿದ್ದು ಸಂಸ್ಥಾನದ ಆಡಳಿತವನ್ನು ಬಹು ಚೆನ್ನಾಗಿ ನಿರ್ವಹಿಸುತ್ತಾರೆ[298] ಎಂಬ ಮಾತುಗಳು ಮೈಸೂರು ಸಂಸ್ಥಾನವು ಭಾರತೀಯ ಮಟ್ಟದಲ್ಲಿ ಹೇಗೆ ಆಕರ್ಷಣೀಯ

ಸ್ಥಾನವನ್ನು ಪಡೆದಿದ್ದಿತು ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಅಲ್ಲದೇ ಮೈಸೂರು ಸಂಸ್ಥಾನದ ಮಹಾರಾಜರಾಗಿದ್ದ ನಾಲ್ವಡಿಯವರು ಕೂಡ ಬ್ರಿಟಿಷರ ನಿರೀಕ್ಷೆಯನ್ನು ಸಾರ್ಥಕಗೊಳಿಸುವಲ್ಲಿ ಅವಶ್ಯಕವಾದ ಜ್ಞಾನವನ್ನು ಬ್ರಿಟಿಷರ ಪೋಷಣೆಯಲ್ಲೇ ಶಿಕ್ಷಣದ ಮೂಲಕ ಪಡೆದವರೇ ಆಗಿದ್ದರು. ತಮ್ಮ ವ್ಯಕ್ತಿತ್ವವನ್ನು ವಿಭಿನ್ನವಾಗಿ ರೂಪಿಸಿಕೊಂಡು ಆ ಎರಕದ ಸಾರವನ್ನು ತಮ್ಮ ಸಂಸ್ಥಾನದ ಬೆಳವಣಿಗೆಯ ಹಿನ್ನೆಲೆಯ ಕಾರ್ಯಕ್ಷೇತ್ರದಲ್ಲಿ ಅಳವಡಿಸುತ್ತಾ ಬಂದು ಸಂಪ್ರದಾಯಬದ್ಧವಾಗಿದ್ದ ಮೈಸೂರು ಸಂಸ್ಥಾನದ ಸಮಾಜವನ್ನು ಆಧುನಿಕತೆಯತ್ತ ಕೊಂಡೊಯ್ಯುವ'ಪರಿವರ್ತನಾ ರೂವಾರಿ'ಯಾಗಿ ಕೆಲಸ ಮಾಡಿದರು ಹಾಗೂ ಮೈಸೂರು ಸಂಸ್ಥಾನವು ಬ್ರಿಟಿಷ್ ಸರ್ಕಾರದವರ ಪ್ರಯೋಗಾತ್ಮಕ ಚಿಂತನೆಯ ಹಾದಿಯಲ್ಲೇ ಸಾಗಿ ಇಡೀ ಭಾರತದ ಮಟ್ಟದಲ್ಲಿ 'ಮಾದರಿ ಸಂಸ್ಥಾನ' ವಾಗಿ ಗುರುತಿಸಿಕೊಳ್ಳುವಲ್ಲಿ ಅಗತ್ಯವಿದ್ದ ಕಾರ್ಯ ಯೋಜನೆಗಳನ್ನೇ ತನ್ನ ಆಡಳಿತಾವಧಿಯ ಕೊನೆಯ ವರೆಗೂ ರೂಪಿಸುತ್ತಾ ಬಂದರು ಎಂಬುದೇ ಆಗಿದೆ. ಅಂತಹ ಹಲವಾರು ಕಾರ್ಯಯೋಜನೆಗಳು ಹೇಗೆ ಕೈಗಾರಿಕಾ ವಲಯಗಳಲ್ಲೂ ರೂಪುಗೊಳ್ಳುತ್ತಾ ಬಂದವು ಎಂಬುದರ ಬಗೆಗಿನ ಪರಿಶೀಲನಾತ್ಮಾಕ ವಿವರಣೆಯನ್ನು ಮುಂದೆ ನೀಡಲಾಗಿದೆ.

### *iii) ಕೈಗಾರಿಕೆಯಲ್ಲಿ ಆಧುನಿಕ ತಾಂತ್ರಿಕತೆ ಮತ್ತು ವೈಜ್ಞಾನಿಕತೆ*

ಈ ಅಧ್ಯಾಯದ ಮೊದಲ ಭಾಗದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಕೃಷಿ ಸಂಬಂಧಿ ಆರ್ಥಿಕ ಕ್ಷೇತ್ರಗಳಲ್ಲಿ ಪಾಶ್ಚಿಮಾತ್ಯ ಪ್ರಭಾವದ ಆಧುನೀಕರಣವನ್ನು ಹೇಗೆ ಅಳವಡಿಸಿ ಮೈಸೂರಿನ ಆರ್ಥಿಕತೆಯನ್ನು ಬೆಳೆಸಲು ಪ್ರಯತ್ನಿಸಿದರೆಂಬುದನ್ನು ತಿಳಿದೆವು. ಈ ವಿಭಾಗದಲ್ಲಿ ನಾಲ್ವಡಿಯವರು ಕೈಗಾರಿಕಾ ಮತ್ತು ವಾಣಿಜ್ಯ ಕ್ಷೇತ್ರದಲ್ಲಿ ಆಧುನೀಕರಣವನ್ನು ಅಳವಡಿಸಿ ಅಭಿವೃದ್ಧಿಯತ್ತ ಮೈಸೂರನ್ನು ಹೇಗೆ ಕೊಂಡೊಯ್ದರೆಂಬುದನ್ನು ತಿಳಿಯಲು ಪ್ರಯತ್ನಿಸುವುದಾಗಿದೆ. ನಾಲ್ವಡಿಯವರು ದೇಶದ ಸಂಪತ್ತನ್ನು ವೃದ್ಧಿಸಲು ಬೃಹತ್ ಕೈಗಾರಿಕೆಗಳು ಅವಶ್ಯವೆಂದು ಮತ್ತು ಬೃಹತ್ ಕೈಗಾರಿಕೆಗಳು ಪಾಶ್ಚಿಮಾತ್ಯ ನಾಗರಿಕತೆಯ ಹೆಗ್ಗುರುತಗಳಂತಿವೆ ಎಂದು ಅಭಿಪ್ರಾಯಪಟ್ಟಿದ್ದರು. ನಾಲ್ವಡಿಯವರು ಈ ಅಭಿಪ್ರಾಯವನ್ನು ಬೆಂಗಳೂರಿನ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್'ಸಂಸ್ಥೆಯ ಕಟ್ಟಡದ ಶಂಕುಸ್ಥಾಪನೆಯ ಸಂದರ್ಭದಲ್ಲಿ ಆಡಿದ ಮಾತುಗಳಲ್ಲಿ ಪ್ರತಿಬಿಂಬಿಸಿದ್ದಾರೆ "ಕಲ್ಕತ್ತಾ ಮತ್ತು ಬೊಂಬಾಯಿಯಂತಹ ಕೆಲವು ಕೇಂದ್ರಗಳನ್ನು ಹೊರತುಪಡಿಸಿದರೆ ಇಂದಿನ ಭಾರತವು ಸಂಪೂರ್ಣವಾಗಿ ಕೃಷಿ ಪ್ರಧಾನ ದೇಶವೆಂಬುದನ್ನು ನಾನು ಮತ್ತೆ

---

*298. ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 193*

ನೆನಪಿಸಬೇಕಾಗಿಲ್ಲ, ಆದರೂ ದೇಶದ ಸಂಪತ್ತನ್ನು ವೃದ್ಧಿಸುವಲ್ಲಿ ಬೃಹತ್ ಕೈಗಾರಿಕೆಗಳ ಕೊಡುಗೆ ಅಪಾರವಾದುದು ಮತ್ತು ಬೃಹತ್ ಕೈಗಾರಿಕೆಗಳು ಪಾಶ್ಚಿಮಾತ್ಯ ನಾಗರಿಕತೆಯ ಹೆಗ್ಗುರುತುಗಳಂತಿವೆ, ಅಂತಹವು ಕಾರ್ಯತಃ ನಮ್ಮಲ್ಲಿ ಅಸ್ತಿತ್ವದಲ್ಲಿಲ್ಲ. ಕೃಷಿ ವೃತ್ತಿಯ ಪ್ರಜೆಗಳನ್ನು ಕೈಗಾರಿಕೆಯ ಪ್ರಜೆಗಳಿಗೆ ಹೋಲಿಸಿದರೆ ಅವಶ್ಯಕವಾಗಿ ಬಡವರು, ಭಾರತದ ವಿಷಯದಲ್ಲಿ ಮಳೆಯ ಅಭಾವದಿಂದ ಎದುರಾಗುವ ಕ್ಷಾಮಗಳು ಈ ಬಡತನವನ್ನು ಇನ್ನೂ ಹೆಚ್ಚಿಸಿವೆ...... ಶ್ರಮಿಕ ವರ್ಗದ ಸ್ಥಿತಿಯನ್ನು ಉತ್ತಮಗೊಳಿಸಲು ಕೈಗೊಳ್ಳುವ ಉತ್ತಮ ನಡೆಗಳೆಂದರೆ ಪ್ರಸಕ್ತ ಇರುವ ಕೈಗಾರಿಕೆಗಳನ್ನು ವಿಸ್ತೃತಗೊಳಿಸುವುದು ಮಾತ್ರವಲ್ಲ ಅವುಗಳ ಸಂಖ್ಯೆ ಮತ್ತು ವ್ಯಾಪ್ತಿಯನ್ನು ಹೆಚ್ಚಿಸಬೇಕು ಮತ್ತು ಆ ಮೂಲಕ ಜೀವನಕ್ಕಾಗಿ ಭೂಮಿಯನ್ನಾಶ್ರಯಿಸುವವರ ಸಂಖ್ಯೆಯನ್ನು ತಗ್ಗಿಸಬೇಕು"[299]. ಈ ಮೇಲಿನ ನಾಲ್ವಡಿಯವರ ಮಾತುಗಳು ಮುಂದಿನ ಅವರ ಕೈಗಾರಿಕಾ ಬೆಳವಣಿಗೆಯ ಬಗೆಗಿನ ಮಾರ್ಗ ಸೂಚಿಯಂತೆ ತೋರುತ್ತವೆ. ಒಟ್ಟಾರೆ ಕೃಷಿಯನ್ನು ಆಧುನೀಕರಣಗೊಳಿಸುತ್ತಲೇ ಕೈಗಾರಿಕಾ ವಲಯವನ್ನು ಸದೃಢಗೊಳಿಸುವ ಅವರ ನಿಲುವು ಮತ್ತೆ ಅವರ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದ ಸಮನ್ವಯವನ್ನೇ ತೋರಿಸುತ್ತವೆ. ಕೃಷಿಯ ಮೇಲಿನ ಅಧಿಕ ಒತ್ತಡವನ್ನು ಕೈಗಾರಿಕಾ ವಲಯದತ್ತ ತಿರುಗಿಸುವ ಅವರ ಚಿಂತನೆಯು ಕೈಗಾರಿಕಾ ಬೆಳವಣಿಗೆಗೆ ಹಾಗೆಯೇ ನಿರುದ್ಯೋಗ ನಿವಾರಣೆಗೆ ಕೈಗೊಂಡ ಕ್ರಮಗಳು ಅತ್ಯಂತ ಕ್ರಮಬದ್ಧವಾದ ಆಧುನಿಕ ವಿಧಾನವೆಂದೇಳಬಹುದು.

*ನಾಲ್ಕು ಆಶಯಗಳು*

ನಾಲ್ವಡಿ ಕೃಷ್ಣರಾಜ ಒಡೆಯರು ದೇಶೋನ್ನತಿಗೆ ಕೈಗಾರಿಕೆಗಳ ಅಭಿವೃದ್ಧಿ ಅವಶ್ಯವೆಂದು ಪ್ರತಿಪಾದಿಸಿದ್ದರು[300]. ಅವರ ಕೈಗಾರಿಕಾ ಅಭಿವೃದ್ಧಿಯ ಕಾರ್ಯನೀತಿಯು ನಾಲ್ಕು ಆಶಯಗಳ ಮೇಲೆ ರೂಪುಗೊಂಡಿದ್ದು ಅವುಗಳನ್ನು ತಮ್ಮ ಸರ್ಕಾರದ ಮೂಲಕ ಸಾಕಾರಗೊಳಿಸಲು ಪ್ರಯತ್ನಿಸಿದರು. ಮೊದಲನೆಯ ಆಶಯ ಪ್ರಜೆಗಳ ಬಳಕೆಗೆ ಬೇಕಾದ ನಾನಾವಸ್ತುಗಳನ್ನು ದೇಶೀಯವಾಗಿ ಉತ್ಪಾದಿಸುವಂತೆ ಮಾಡುವ ಮೂಲಕ ವಿದೇಶಗಳಿಗೆ ಹೋಗುತ್ತಿದ್ದ ಮೈಸೂರಿನ ಹಣವನ್ನು ಸಂಸ್ಥಾನದಲ್ಲೇ ಉಳಿಯುವಂತೆ ಮಾಡುವುದು. ಈ ಆಶಯದ ಮೊದಲ ಹೆಜ್ಜೆಯಾಗಿ ವಿದ್ಯುಚ್ಛಕ್ತಿ ಇಲಾಖೆಗೆ ವಿದೇಶಗಳಿಂದ ಆಮದಾಗಿ ಬರಬೇಕಾಗಿದ್ದ ಎಲೆಕ್ಟ್ರಿಕ್ ಟ್ರಾನ್ಸ್‌ಫಾರ್ಮರ್‌ಗಳನ್ನು ಸಂಸ್ಥಾನದಲ್ಲೇ ಉತ್ಪಾದಿಸುವಂತೆ ಮಾಡಲಾಯಿತು. ಎರಡನೇ ಆಶಯವೆಂದರೆ ಚಿನ್ನದ ಮೇಲಿನ ರಾಜಾಯ, ಅಫೀಮು, ಗಾಂಜಾ, ಸಾರಾಯಿ, ಹೆಂಡ ಮುಂತಾದ ಮಾದಕ ವಸ್ತುಗಳಿಂದ ಬರುತ್ತಿದ್ದ 'ಎಕ್ಸೈಜು' ಸುಂಕ ಹಂತಹಂತವಾಗಿ ನಿಂತು ಸರ್ಕಾರದ ಆದಾಯ ತಗ್ಗಿದರೂ ಆ ನಷ್ಟ ಗಮನಕ್ಕೆ ಬಾರದ ರೀತಿಯಲ್ಲಿ ಕೃಷಿ, ಕೈಗಾರಿಕೆಗಳ ಆದಾಯವನ್ನು ಹೆಚ್ಚುವಂತೆ ಮಾಡುವುದು. ಮೂರನೆಯ

299. *ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 83-84*

300. *ಅದೇ.*

ಆಶಯವೆಂದರೆ ನಗರ ಮತ್ತು ಪಟ್ಟಣಗಳಲ್ಲಿ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸಿ ಗ್ರಾಮಾಂತರ ಪ್ರದೇಶದ ಜನ ಹೆಚ್ಚು ಹೆಚ್ಚಾಗಿ ಕಾರ್ಖಾನೆಗಳಲ್ಲಿ ಉದ್ಯೋಗ ಪಡೆಯುವಂತೆ ಮಾಡಿ ಆ ಮೂಲಕ ಭೂಮಿಯ ಮೇಲಿನ ಅಧಿಕ ಒತ್ತಡವನ್ನು ತಗ್ಗಿಸುವುದು[301]. ಎಲ್ಲಕ್ಕೂ ಮಿಗಿಲಾದ ನಾಲ್ಕನೆಯ ಆಶಯವೆಂದರೆ ಪ್ರಕೃತಿ ಮಾತೆಯೇ ಮೈಸೂರು ಸಂಸ್ಥಾನಕ್ಕೆ ಕರುಣಿಸಿರುವ ಸಾಧನ ಸಂಪತ್ತುಗಳನ್ನು ಬಳಸಿಕೊಂಡು ನಾನಾ ಕೈಗಾರಿಕೆಗಳನ್ನು ಪ್ರಾರಂಭಿಸಿ ಅಭ್ಯುದಯವನ್ನು ಸಾಧಿಸುವುದು. ಆ ಮೂಲಕ ಮೈಸೂರು ಸಂಸ್ಥಾನವು ಉಚ್ಛ್ರಾಯ ಸ್ಥಿತಿಯಲ್ಲಿರುವ ಪಾಶ್ಚಾತ್ಯ ದೇಶಗಳ ಸಮನಾಗಿ, ಸಂಸ್ಥಾನದ ಪ್ರಜೆಗಳ ಜೀವನಮಟ್ಟ ಮೇಲಕ್ಕೇರಿ ಅವರ ಸುಖ, ಸಂತೋಷ, ಸಂಪತ್ತು ವಿಶೇಷವಾಗಿ ವೃದ್ಧಿಸುವಂತೆ ಮಾಡುವುದಾಗಿತ್ತು[302]. ಈ ಹಿನ್ನೆಲೆಯಲ್ಲಿ ನಾಲ್ವಡಿಯವರು ಕೈಗಾರಿಕಾ ವಲಯದಲ್ಲಿ ಅಳವಡಿಸಿದ ವೈಜ್ಞಾನಿಕತೆ ಮತ್ತು ತಾಂತ್ರಿಕ ಅಂಶಗಳನ್ನು ಗುರುತಿಸುವ ನಿಟ್ಟಿನಲ್ಲಿ ಸ್ಥಾಪಿಸಿದ ಸಂಸ್ಥೆಗಳು, ಕೈಗೊಂಡ ಕಾರ್ಯಯೋಜನೆಗಳ ಅಧ್ಯಯನದ ಅಡಿಯಲ್ಲಿ ಐದು ಪ್ರಮುಖ ಪರಿಕಲ್ಪನೆಗಳನ್ನು ಮಾಡಿಕೊಳ್ಳಲಾಗಿದೆ. ಅವುಗಳೆಂದರೆ;

1) ಕೈಗಾರಿಕೆಗಳಲ್ಲಿ ವೈಜ್ಞಾನಿಕತೆ : ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್
2) ವಿದ್ಯುಚ್ಛಕ್ತಿ
3) ಬೃಹತ್ ಕೈಗಾರಿಕಾ ಕಾರ್ಖಾನೆಗಳ ಬೆಳವಣಿಗೆ
4) ದೇಶೀಯ ಕೈಗಾರಿಕೆಗಳಲ್ಲಿ ಆಧುನಿಕತೆ
5) ಗೃಹ ಕೈಗಾರಿಕಾ ಸಂಸ್ಥೆಗಳ ಸ್ಥಾಪನೆ.

**1) *ಕೈಗಾರಿಕೆಗಳಲ್ಲಿ ವೈಜ್ಞಾನಿಕತೆ : ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್***

ನಾಲ್ವಡಿಯವರಲ್ಲಿ ವಿಜ್ಞಾನಕ್ಕೆ ಸಂಬಂಧಿಸಿದ ವಿಚಾರಗಳಲ್ಲಿ ಹಾಗೂ ನೂತನ ಸಂಶೋಧನೆಗಳಲ್ಲಿ ವಿಶೇಷ ಆಸಕ್ತಿ ಇತ್ತು. ಅವರು ವಿದ್ಯಾರ್ಥಿದಿಸೆಯಲ್ಲೇ 'ಫ್ರೆಟ್‌ವರ್ಕ್' ಎಂಬ ಮರಗೆಲಸ ಮುಂತಾದವುಗಳಲ್ಲಿ ಪ್ರಥಮ ಸ್ಥಾನ ಪಡೆಯುತ್ತಿದ್ದರು. ನಾನಾ ಕೈಗಾರಿಕೆಗಳ ಮತ್ತು ಹೊಸ ಯಂತ್ರಗಳ ಬಗ್ಗೆ ಸದಾ ತಿಳಿಯುವ ಕುತೂಹಲ ಇತ್ತು. ಅವರು ತಮ್ಮ 14ನೇ ವಯಸ್ಸಿನಲ್ಲೇ ಮರ, ರಟ್ಟು, ತಗಡು, ತಂತಿಗಳನ್ನು ಬಳಸಿಕೊಂಡು ರೈಲಿನ ಸ್ಟೀಂ ಎಂಜಿನ್ನಿನ

301. *ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 329*

302. *ಅದೇ., ಪು. 330*

ಮಾದರಿಯೊಂದನ್ನು ರಚಿಸಿದ್ದರು. ಎಂಜಿನ್ನಿನ ಬಾಹ್ಯಾಕೃತಿಯಲ್ಲಿ ಮಾತ್ರವಲ್ಲದೆ ಒಳಗಿನ ಯಂತ್ರಭಾಗಗಳನ್ನು ಕೂಡ ಸಮ ಪ್ರಮಾಣದಲ್ಲಿ ಸರಿಯಾಗಿರುವಂತೆ ಜೋಡಣೆಗೊಳಿಸಿದ್ದರು. ತೆಳುವಾದ ಮರದ ಹಲಗೆಗಳನ್ನು ವಿವಿಧಾಕೃತಿಗಳಿಗೆ ಕೊರೆದು ನಾನಾ ವಸ್ತುಗಳನ್ನು ರಚಿಸುವ ಕಲೆಯನ್ನು ಕಲಿತಿದ್ದರು[303]. ಇವರ ಈ ಕಲಿಕಾ ಪ್ರವೃತ್ತಿಯೇ ಮುಂದೆ ಅವುಗಳನ್ನು ಅವಕಾಶ ಸಿಕ್ಕಾಗ ಪ್ರತ್ಯಕ್ಷವಾಗಿ ಬಳಸುವಂತೆ ಮಾಡಲು ಕಾರಣವಾಯಿತು. ನಾಲ್ವಡಿಯವರು 1900ರ ಜನವರಿಯಲ್ಲಿ ತಮ್ಮ ಗುರು ಫ್ರೇಜರ್ ಹಾಗೂ ಸಹಪಾಠಿಗಳೊಡನೆ ಉತ್ತರ ಭಾರತದ ಪ್ರವಾಸ ಕೈಗೊಂಡಾಗ ಬೊಂಬಾಯಿಯಲ್ಲಿ ಅಂದಿನ ಆಧುನಿಕ ಭಾರತದ ಆರ್ಥಿಕ ಶಿಲ್ಪಿಗಳೆಂದೇ ಪ್ರಸಿದ್ಧರಾಗಿದ್ದ ಜೆಮ್‌ಷೆಡ್ ಜಿ ಟಾಟಾರವರನ್ನು ಭೇಟಿ ಮಾಡಿದರು[304]. ಈ ಭೇಟಿಯು ಮುಂದೆ ಮೈಸೂರಿನ ವೈಜ್ಞಾನಿಕ, ತಾಂತ್ರಿಕ ಹಾಗೂ ಆರ್ಥಿಕ ಪರಿವರ್ತನೆಗೆ ಬುನಾದಿಯಾಯಿತು. ಶ್ರೇಷ್ಠ ದಾನಿ ಎಂದು ಹೆಸರಾದ ಜೆ.ಎನ್.ಟಾಟಾರವರು ವಿಜ್ಞಾನ ಸಂಶೋಧನೆಗೆ ಮುಡಿಪಾದ ಸಂಸ್ಥೆಯೊಂದಕ್ಕೆ ದತ್ತಿ ನೀಡಲು ಅಪೇಕ್ಷೆ ವ್ಯಕ್ತಪಡಿಸಿದರು. ಇದರ ಫಲವಾಗಿ 1905 ರಲ್ಲಿ ಬೆಂಗಳೂರಿನಲ್ಲಿ 'ಭಾರತೀಯ ವಿಜ್ಞಾನ ಸಂಸ್ಥೆ' (ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್) ಆರಂಭಗೊಂಡಿತು[305]. ಈ ಸಂಸ್ಥೆಯ ಸ್ಥಾಪನೆಗೆ ಅವಶ್ಯಕವಾದ ಭೂಮಿಯನ್ನು ಬೆಂಗಳೂರಿನ ಮಲ್ಲೇಶ್ವರಂ ಬಡಾವಣೆಯ ಬಳಿಯಲ್ಲಿ ನೀಡಲಾಯಿತು. ಅಲ್ಲದೆ ಈ ಸಂಸ್ಥೆಯ ಸ್ಥಾಪನೆಯಿಂದ ಮೈಸೂರು ಮತ್ತು ಇಡೀ ದಕ್ಷಿಣ ಭಾರತದ ಜನರಿಗೆ ಶಾಶ್ವತವಾಗಿ ಉಪಯೋಗವಾಗಲೆಂದು ನಾಲ್ವಡಿಯವರು 50,000 ರೂಪಾಯಿಗಳನ್ನು ಸಹಾಯ ದ್ರವ್ಯವಾಗಿ ನೀಡಿದರು[306]. ನಾಲ್ವಡಿಯವರು 1911 ರ ಫೆಬ್ರವರಿ1 ರಂದು ಈ ಸಂಸ್ಥೆಯ ಕಟ್ಟಡದ ಶಂಕುಸ್ಥಾಪನೆ ನೆರವೇರಿಸುತ್ತಾ "ಬಡತನದ ಪರಿಸ್ಥಿತಿಯ ಮಧ್ಯೆ ಭಾರತದಲ್ಲಿ ಬದುಕುತ್ತಿರುವ ಪ್ರತಿಯೊಬ್ಬ ಚಿಂತನಾಶೀಲ ವ್ಯಕ್ತಿಯೂ ಕುಶಲಕಲೆ ಮತ್ತು ಕೈಗಾರಿಕೆಗಳನ್ನು ವೈಜ್ಞಾನಿಕ ನಿಟ್ಟಿನಲ್ಲಿ ಬೆಳವಣಿಗೆ ಗೊಳಿಸಬೇಕೆಂಬ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ಧ್ಯೇಯೋದ್ದೇಶವನ್ನು ಸ್ವಾಗತಿಸುತ್ತಾರೆ ಅಂತಹ ಸ್ವಾಗತಿಸುವ ಸಾವಿರಾರು ಧ್ವನಿಗಳಿಗೆ ನಾನು ಪ್ರತಿಧ್ವನಿ ಸೇರಿಸುತ್ತೇನೆ"[307] ಎನ್ನುವ ಮೂಲಕ ಆ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ಬೆಂಬಲಿಸಿದರು. ನಾಲ್ವಡಿಯವರ ಮೌಖಿಕ ಬೆಂಬಲ ಅಲ್ಲಿಗೆ ನಿಲ್ಲದೆ ಆ ಸಂಸ್ಥೆಯ ಕಟ್ಟಡದ ನಿರ್ಮಾಣಕ್ಕೆಂದು 5 ಲಕ್ಷ ರೂಪಾಯಿಗಳ ಆರ್ಥಿಕ ಬೆಂಬಲ ನೀಡಿ ಪ್ರೋತ್ಸಾಹಿಸಿತು[308]. ಅದೇ ಸಂದರ್ಭದಲ್ಲಿ ಈ

303. *ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 105-106*

304. *ಅದೇ., ಪು. 329-330*

305. *ಸಂಪದ್ಗಿರಿರಾವ್ ಕೆ. (ಸಂ)., ಕರ್ನಾಟಕ ಪರಂಪರೆ, ಸಂಪುಟ - II, ಪು. 347*

306. *ದಿ ಹಿಂದೂ ದಿನಪತ್ರಿಕೆ, 3-11-1905, ಪ್ರೆಸ್ ಕಟಿಂಗ್ಸ್ - 1 (ಬಿ), ಪು. 37*

307. *ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 83-84*

308. *ಸಂಪದ್ಗಿರಿರಾವ್ ಕೆ., ಪೂರ್ವೋಕ್ತ, ಪು. 348*

ಸಂಸ್ಥೆಯ ಸ್ಥಾಪನೆಗೆ ಕಾರಣರಾದ ಜೆ.ಎನ್.ಟಾಟಾರವರ ದೂರದೃಷ್ಟಿ ಹಾಗೂ ಉದಾರಶೀಲತೆಯನ್ನು ಭಾರತೀಯರು ಹಲವಾರು ತಲೆಮಾರುಗಳ ಕಾಲ ಜ್ಞಾಪಿಸಿಕೊಳ್ಳುತ್ತಾರೆಂದು ಹೇಳಿದರು[309]. ಈ ಸಂಸ್ಥೆಯು ಮುಂದಿನ ಮೈಸೂರಿನ ಎಲ್ಲ ಬೆಳವಣಿಗೆಗಳಿಗೂ ಬೇಕಾದ ವೈಜ್ಞಾನಿಕ, ತಾಂತ್ರಿಕ ಹಾಗೂ ಆಧುನಿಕ ಮಾಹಿತಿ ಹಾಗೂ ತಜ್ಞ ವ್ಯಕ್ತಿಗಳನ್ನು ಪೂರೈಸುವ ಮೂಲಕ ಮೈಸೂರಿನ ಬೆಳವಣಿಗೆಗೆ ಆ ಮೂಲಕ ಮೈಸೂರಿನ ಆಧುನೀಕರಣಕ್ಕೆ ಮೂಲ ನೆಲೆಯಾಯಿತು. ಈ ಸಂಸ್ಥೆಯ ಅನೇಕ ಸಂಶೋಧನೆಗಳನ್ನು ಕೃಷಿ ಮತ್ತು ಕೈಗಾರಿಕೆಗಳಲ್ಲಿ ಅಳವಡಿಸಿಕೊಳ್ಳಲಾಯಿತು. ಉದಾಹರಣೆಗೆ ಬೆಂಗಳೂರಿನಲ್ಲಿ ನಡೆದ ಇಂಡಿಯನ್ ಸೈನ್ಸ್ ಕಾಂಗ್ರೆಸ್‌ನ ಸಮಾವೇಶದಲ್ಲಿ ನಾಲ್ವಡಿಯವರು ಭಾಷಣ ಮಾಡುತ್ತಾ "ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಉನ್ನತ ವೈಜ್ಞಾನಿಕ ಸಂಶೋಧನೆಗೆ ಅನುಕೂಲ ಮಾಡಿ ಕೊಡುವ ಉದ್ದೇಶದ ಮೇಲೆ ರೂಪುಗೊಂಡಿತು. ಈ ಸಂಸ್ಥೆಯ ರಾಸಾಯನಿಕ ತಜ್ಞರು ಪರಿಶ್ರಮದಿಂದ ಸಂಶೋಧಿಸಿದ ಜ್ಞಾನವನ್ನು ಮೈಸೂರಿನಲ್ಲಿ ಸಣ್ಣ ಪ್ರಮಾಣದಲ್ಲಿ ಕಾರ್ಯತಃ ಬಳಸಿಕೊಂಡು ಅನುಕೂಲ ಪಡೆಯುತ್ತಿದ್ದೇವೆಂದು"[310] ಹೇಳಿದರು. ಇದೇ ಸಂಸ್ಥೆಯು ಮೊದಲ ಬಾರಿಗೆ ಒಳ್ಳೆಯ ಗುಣಮಟ್ಟದ ಸೋಪು ತಯಾರಿಕಾ ವಿಧಾನವನ್ನು ರೂಪಿಸಿತು. ಸರ್ಕಾರವು ಈ ವಿಧಾನವನ್ನು ವಾಣಿಜ್ಯ ರೂಪದಲ್ಲಿ ಬಳಸಲು ಬೆಂಗಳೂರಿನಲ್ಲಿ ಒಂದು ಸೋಪು ಕಾರ್ಖಾನೆಯನ್ನು 1918ರಲ್ಲಿ ಸ್ಥಾಪಿಸಿತು. ಅದಕ್ಕೆ ಮೊದಲು ಸೋಪಿನ ಉತ್ಪಾದನಾ ವಿಧಾನವನ್ನು ತಿಳಿದು ಬರಲು ಎಸ್.ಜಿ.ಶಾಸ್ತ್ರಿ ಎಂಬುವವರನ್ನು ಇಂಗ್ಲೆಂಡ್‌ಗೆ ಕಳುಹಿಸಲಾಯಿತು[311]. ಹೀಗೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನ ಧ್ಯೇಯೋದ್ದೇಶಗಳು ಹಾಗೂ ನಾಲ್ವಡಿಯವರ ಪ್ರಭಾವಿತ ಭಾಷಣಗಳು ಮತ್ತು ಪ್ರೋತ್ಸಾಹದಾಯಕ ಕಾರ್ಯ ಚಟುವಟಿಕೆಗಳು ಅನೇಕ ಕೈಗಾರಿಕಾ ಸ್ಥಾವರಗಳ ಸ್ಥಾಪನೆಗೆ ದಾರಿಮಾಡಿಕೊಟ್ಟವು.

## ವಿದ್ಯುತ್‌ಶಕ್ತಿ

ಬೃಹತ್ ಕೈಗಾರಿಕೆಗಳ ಅಭಿವೃದ್ಧಿಗೆ ಬೇಕಾದ ಯಂತ್ರಚಾಲನ ಶಕ್ತಿಗೆ ಮೂಲವಾದ ವಿದ್ಯುತ್ ಶಕ್ತಿಯನ್ನು ಉತ್ಪಾದಿಸಲು ಮೈಸೂರು ಸರ್ಕಾರ 1890 ರ ದಶಕದಲ್ಲೇ ಯೋಜಿಸಿತು. ಅಂತಿಮವಾಗಿ ಮೈಸೂರು ರಾಜ್ಯದ ಶಿವನ ಸಮುದ್ರ ಜಲವಿದ್ಯುದಾಗರವು 1902ರ ಜೂನ್ ತಿಂಗಳಿಂದಲೇ ವಿದ್ಯುಚ್ಛಕ್ತಿಯ ಉತ್ಪಾದನೆಯನ್ನು ಆರಂಭಿಸಿತು[312]. ವಿಸ್ತೃತ ಮಟ್ಟದಲ್ಲಿ ಜಲವಿದ್ಯುತ್ ಉತ್ಪಾದಿಸುವ ಈ ಯೋಜನೆ ಏಷ್ಯಾದಲ್ಲಿಯೇ ಮೊಟ್ಟ ಮೊದಲನೆಯದು. ಆ ಕಾಲಕ್ಕೆ ಬೃಹತ್ ಬಂಡವಾಳ, ಯಂತ್ರೋಪಕರಣಗಳನ್ನಾಧರಿಸಿದ ಶಿವನಸಮುದ್ರ ಜಲವಿದ್ಯುತ್ ಯೋಜನೆಯು

---

*309. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 84*

*310. ಅದೇ., ಪು. 145*

*311. ಶಾಮರಾವ್ ಎಂ., ಪೂರ್ವೋಕ್ತ, ಪು. 272*

*312. ಅದೇ., ಪು. 181-182*

ಕಾರ್ಯಗತಗೊಳ್ಳಲು 16 ವರ್ಷದ ಬಾಲಕ ಮಹಾರಾಜರು ಅಪರೋಕ್ಷವಾಗಿ ಕಾರಣರು. ಶಿವನಸಮುದ್ರ ಜಲವಿದ್ಯುತ್ ಯೋಜನೆಯನ್ನು ಮೈಸೂರಿನ ಕೆಲ ಅಧಿಕಾರಿವರ್ಗ ವಿರೋಧಿಸಿದಾಗ ರೀಜೆಂಟರಾದ ತಮ್ಮ ತಾಯಿಯ ಬಳಿ ನಾಲ್ವಡಿಯವರು ಯೋಜನೆಯ ಬಗ್ಗೆ ವಿಧವಿಧವಾಗಿ ವಿವರಿಸಿ ಅಂತಹ ಬೃಹತ್ ಯೋಜನೆಯನ್ನು ಮೈಸೂರು ಕೈಗೊಂಡರೆ ಅಮೇರಿಕಾ ತೋರಿದಂತಹ ಎದೆಗಾರಿಕೆಯನ್ನು ತೋರಿದಂತಾಗಿ ವಿಶ್ವಮಾನ್ಯತೆ ಪಡೆಯುತ್ತದೆಂದೂ, ಯೋಜನೆಯನ್ನು ಕೈಗೊಳ್ಳಬೇಕೆಂದು ಅರಿಕೆ ಮಾಡಿಕೊಂಡರು. ನಾಲ್ವಡಿ ಕೃಷ್ಣರಾಜ ಒಡೆಯರ ಜೀವನ ಚರಿತ್ರಕಾರರು ಉಲ್ಲೇಖಿಸಿರುವಂತೆ "ಈ ವಿಷಯಕ್ಕೆ ಮಹಾಸ್ವಾಮಿಯವರು ಪ್ರವೇಶಿಸದೆ ತಟಸ್ಥರಾಗಿದ್ದ ಪಕ್ಷಕ್ಕೆ ಶಿವನಸಮುದ್ರದಲ್ಲಿ ವಿದ್ಯುಚ್ಛಕ್ತಿಯ ಉತ್ಪತ್ತಿಯ ಏರ್ಪಾಡೇ ಬಹುಶಃ ನೆರವೇರುತ್ತಿರಲಿಲ್ಲವೆಂದು ದಾರಾಳವಾಗಿ ಹೇಳಬಹುದು"[313] ಎಂದಿದ್ದಾರೆ. ಈ ಯೋಜನೆಗೆ ಯಂತ್ರೋಪಕರಣಗಳು ಅಮೇರಿಕಾದಿಂದ ಬಂದವಲ್ಲದೆ ಇಡೀ ಯೋಜನೆಯನ್ನು ಅಮೇರಿಕಾದ ಜನರಲ್ ಎಲೆಕ್ಟ್ರಿಕಲ್ ಕಂಪನಿ ಕಾರ್ಯಗತಗೊಳಿಸಿತು[314]. ಇದೇ ಯೋಜನೆಗೆ 1902ರಲ್ಲಿ 50 ಲಕ್ಷ ಬಂಡವಾಳ ಹೂಡಿದ್ದು 1910-11ರ ವೇಳೆಗೆ 82.62 ಲಕ್ಷ ರೂಪಾಯಿಗಳನ್ನು ಬಂಡವಾಳವಾಗಿ ಹೂಡಲಾಗಿತ್ತು[315]. ವಿದ್ಯುಚ್ಛಕ್ತಿಗೆ ರಾಜ್ಯದಾದ್ಯಂತ ಬೇಡಿಕೆ ಹೆಚ್ಚಿತು. ಮೈಸೂರು, ಬೆಂಗಳೂರು ನಗರಗಳಿಗೆ ವಿದ್ಯುತ್ತನ್ನು ಒದಗಿಸಿದ್ದು ಅನಂತರ ಗ್ರಾಮೀಣ ಪ್ರದೇಶಗಳಿಗೂ ವಿದ್ಯುತ್ ಪೂರೈಸಲಾಯಿತು. ಬೇಸಿಗೆಯಲ್ಲಿ ನೀರಿನ ಪೂರೈಕೆ ತಗ್ಗಿ ವಿದ್ಯುತ್ ಉತ್ಪಾದನೆ ಕುಗ್ಗುವುದನ್ನು ತಡೆಯಲು ಕಾವೇರಿ ಜಲಾಶಯ ನಿರ್ಮಾಣ ಯೋಜನೆ (ಈಗಿನ ಕೆ.ಆರ್.ಎಸ್)ಯನ್ನು ಕೈಗೊಳ್ಳಲಾಯಿತು. ವಿದ್ಯುತ್ತಿನ ಬೇಡಿಕೆ ಹೆಚ್ಚಿದಂತೆ ಉತ್ಪಾದನೆಯನ್ನು ಹೆಚ್ಚಿಸಲು 1914-15 ರಲ್ಲಿ ನಾಲ್ಕನೇ ವಿದ್ಯುತ್ ಸ್ಥಾವರವನ್ನು, 1918ರಲ್ಲಿ ಐದನೇ ವಿದ್ಯುತ್ ಸ್ಥಾವರಗಳನ್ನು ಪ್ರಾರಂಭಿಸಲಾಯಿತು. ಅನಂತರ ಶಿಂಷಾದಲ್ಲೊಂದು ವಿದ್ಯುತ್ ಉತ್ಪಾದನಾ ಕೇಂದ್ರವನ್ನು ಸ್ಥಾಪಿಸಲಾಯಿತು[316]. ವಿದ್ಯುತ್ ಉತ್ಪಾದನೆ 1911-12ರಲ್ಲಿ 13,000 ಅಶ್ವಶಕ್ತಿಯಷ್ಟಿದ್ದದ್ದು 1940ರ ವೇಳೆಗೆ 50,000 ಅಶ್ವಶಕ್ತಿಗಳಿಗೇರಿತು. ವಿದ್ಯುತ್ ಶಕ್ತಿಯಿಂದ ರಾಜ್ಯಕ್ಕೆ ಬರುತ್ತಿದ್ದ ಆದಾಯವು ಅದೇ ಅವಧಿಯಲ್ಲಿ 16.65 ಲಕ್ಷ ರೂಪಾಯಿಗಳಿಂದ 50ಲಕ್ಷ ರೂಪಾಯಿಗಳಿಗೇರಿತು[317]. ಜೋಗ್ ಜಲಪಾತದ ಬಳಿಯಲ್ಲಿ ಶರಾವತಿ ನದಿ ನೀರಿನಿಂದ 70 ಸಾವಿರ ಅಶ್ವಶಕ್ತಿ ವಿದ್ಯುತ್ ಉತ್ಪಾದಿಸುವ ಯೋಜನೆಗೆ ನಾಲ್ವಡಿಯವರು 1939ನೇ ಮಾರ್ಚ್ 5ರಂದು ಶಿಲಾನ್ಯಾಸಗೊಳಿಸಿದರು. ಈ ಯೋಜನೆಯ ಅಂದಾಜು ವೆಚ್ಚ 1.5ಕೋಟಿ ರೂಪಾಯಿಗಳು[318]. ಈ ಎಲ್ಲ ಯೋಜನೆಗಳ

---

313. *ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 130*

314. *ಮದ್ರಾಸ್ ಸ್ಟ್ಯಾಂಡರ್ಡ್ ದಿನಪತ್ರಿಕೆ ; ದಿನಾಂಕ : 28-8-1902, ಪ್ರೆಸ್ ಕಟಿಂಗ್ಸ್ 1 (ಎ) ಪು. 21*

315. *ಸ್ಟ್ಯಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ಆಫ್ ಮೈಸೂರ್ 1915, ಪು. 59*

316. *ಹಯವದನ ರಾವ್ ಸಿ. (ಸಂ)., ಮೈಸೂರ್ ಗೆಸೆಟಿಯರ್, ಸಂಪುಟ - IV, ಪು. 224*

317. *ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 331*

318. *ಅದೇ., ಪು. 331-332*

ನಿರ್ಮಾಣದಲ್ಲಿ ಅಮೇರಿಕಾದ ಎಂಜಿನಿಯರ್ ಎಚ್.ಪಿ.ಗಿಬ್ಸ್ ಹಾಗೂ ಎಸ್.ಜಿ.ಫೋರ್ಬ್ಸ್ ಪ್ರಮುಖ ಪಾತ್ರ ವಹಿಸಿದರು. ಆರಂಭದಲ್ಲಿ ಕೋಲಾರ ಚಿನ್ನದ ಗಣಿಗೆ ಮಾತ್ರ ಸೀಮಿತಗೊಂಡಿದ್ದ ವಿದ್ಯುತ್ ಪೂರೈಕೆ ಅನಂತರ ಬೆಂಗಳೂರು, ಮೈಸೂರುಗಳ ಕೈಗಾರಿಕೆಗಳಿಗೂ ಹಾಗೂ ಬೀದಿ ದೀಪಗಳಿಗೂ ಪೂರೈಸಲಾಯಿತು. ಕಡಿಮೆ ಬೆಲೆಗೆ ದೊರೆಯುತ್ತಿದ್ದ ವಿದ್ಯುತ್ ಶಕ್ತಿಯನ್ನು ಬಳಸಿಕೊಳ್ಳಲು ಅನೇಕ ಕೈಗಾರಿಕೋದ್ಯಮಗಳು ಯಾಂತ್ರೀಕರಣಗೊಂಡವು. ಇದರಿಂದಾಗಿ ಕೈಗಾರಿಕೆಗಳ ಬೆಳವಣಿಗೆಗೆ ತೀವ್ರ ವೇಗ ದೊರಕಿತು. ಸರ್ಕಾರವು ಗ್ರಾಮೀಣ ರೈತರಿಗೆ ನೀರೆತ್ತುವ ಪಂಪುಗಳನ್ನು ಸಾಲದ ಮೇಲೆ ಪೂರೈಸಿದ್ದಲ್ಲದೆ ಕಡಿಮೆ ದರದಲ್ಲಿ ವಿದ್ಯುತ್ತನ್ನು ಪೂರೈಸಿ ನೀರಾವರಿ ಅಭಿವೃದ್ಧಿಗೆ ಆ ಮೂಲಕ ಕೃಷಿ ಅಭಿವೃದ್ಧಿಗೆ ಪ್ರೋತ್ಸಾಹ ನೀಡಿತು.

ನಾಲ್ವಡಿಯವರು ಮೈಸೂರು ರಾಜ್ಯದಲ್ಲಿ ಕೈಗಾರಿಕೆಗಳ ಆಧುನೀಕರಣವನ್ನು ಎರಡು ರೀತಿಯಾಗಿ ಕೈಗೊಂಡರು. ಮೊದಲನೆಯದಾಗಿ ಪಾಶ್ಚಿಮಾತ್ಯ ಮಾದರಿಯ ಮೇಲೆ ಬೃಹತ್ ಕೈಗಾರಿಕಾ ಕಾರ್ಖಾನೆಗಳನ್ನು ಸ್ಥಾಪಿಸುವುದು. ಎರಡನೆಯದಾಗಿ ದೇಶೀಯ ಉತ್ಪಾದನೋದ್ಯಮಗಳು, ಗೃಹ ಕೈಗಾರಿಕೆ, ಕುಶಲಕಲೆಗಳಲ್ಲಿ ತಾಂತ್ರಿಕತೆ, ವೈಜ್ಞಾನಿಕತೆ ಆಧಾರದ ಮೇಲೆ ನವೀನ ವಿಧಾನಗಳನ್ನು ಅಳವಡಿಸಿಕೊಂಡು ಜಾಗತಿಕ ಪೈಪೋಟಿಯನ್ನೆದುರಿಸಿ ನಿಂತು ಬೆಳವಣಿಗೆ ಸಾಧಿಸುವಂತೆ ಮಾಡುವುದು. ನಮ್ಮ ಅಧ್ಯಯನಾವಧಿಯಲ್ಲಿ ಪ್ರಪಂಚವು ಎರಡು ಮಹಾಯುದ್ಧಗಳನ್ನು ಕಂಡ ಕಾಲ. ಈ ಯುದ್ಧಗಳ ಕಾಲದಲ್ಲಿ ವಿದೇಶಗಳಿಂದ ಪದಾರ್ಥಗಳ ಆಮದು ಕಡಿತಗೊಂಡಿದ್ದರಿಂದ ದೇಶೀಯವಾಗಿ ಅಂತಹ ಉತ್ಪನ್ನಗಳ ಕೈಗಾರಿಕೆಗಳ ಸ್ಥಾಪನೆಗೆ ಸ್ಫೂರ್ತಿ ಸಿಕ್ಕಿತು. ಅಲ್ಲದೆ ಹೊಸ ಕೈಗಾರಿಕೆಗಳಿಗೆ ವಿದೇಶಿ ವಸ್ತುಗಳ ಪೈಪೋಟಿ ಇಲ್ಲದಂತಾಗಿದ್ದು ಅವುಗಳ ಬೆಳವಣಿಗೆಗೆ ಕಾರಣವಾಯಿತು. ಹಾಗೆಯೇ ಯಂತ್ರೋಪಕರಣಗಳು ಹಾಗೂ ಬಿಡಿ ಭಾಗಗಳ ಅಲಭ್ಯತೆಯಿಂದಾಗಿ ಆರಂಭದಲ್ಲಿ ತೊಂದರೆಯಾಗಿದ್ದೇ ಸ್ಥಳೀಯ ಉತ್ಪಾದನೆಗೆ ಪ್ರೇರಕವಾಯಿತು.

***ಬೃಹತ್ ಕೈಗಾರಿಕಾ ಕಾರ್ಖಾನೆಗಳ ಬೆಳವಣಿಗೆ***

ನಾಲ್ವಡಿಯವರು 1911ರಲ್ಲಿ ಬೆಂಗಳೂರಿನಲ್ಲಿ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್' ಸಂಸ್ಥೆಯ ಕಟ್ಟಡದ ಶಂಕುಸ್ಥಾಪನೆಯಲ್ಲಿ ಬೃಹತ್ ಕೈಗಾರಿಕೆಗಳ ಮಹತ್ವವನ್ನು ಕುರಿತು ಹೇಳುತ್ತಾ "ಅಂತಹವು ಕಾರ್ಯತಃ ನಮ್ಮಲ್ಲಿ ಅಸ್ತಿತ್ವದಲ್ಲಿಲ್ಲ" ಎಂದಿದ್ದಾರೆ. ಅಂದರೆ 1911ರವರೆಗೂ ಮೈಸೂರು ರಾಜ್ಯದಲ್ಲಿ ಬೃಹತ್ ಕೈಗಾರಿಕೆ ಎಂಬುದು ಇರಲಿಲ್ಲ. ಅಲ್ಲಿಯವರೆಗೂ ಇದ್ದ ಕೈಗಾರಿಕೆಗಳೆಲ್ಲ ಸಣ್ಣ ಕೈಗಾರಿಕೆಗಳಾಗಿದ್ದವು. ಇವುಗಳು ಪ್ರಧಾನವಾಗಿ ಬೆಂಗಳೂರು ಮತ್ತು

ಮೈಸೂರು ನಗರಗಳ ಸುತ್ತ ನೆಲೆಗೊಂಡಿದ್ದವು. ಅದಕ್ಕೆ ಪ್ರಮುಖ ಕಾರಣ ಕಡಿಮೆ ಬೆಲೆಯಲ್ಲಿ ವಿದ್ಯುತ್ ಶಕ್ತಿ ದೊರೆಯುತ್ತಿದ್ದುದು. ಶಿವನಸಮುದ್ರದಲ್ಲಿ ಹೆಚ್ಚು ವಿದ್ಯುತ್ ಶಕ್ತಿ ಉತ್ಪಾದನೆಗೊಂಡಂತೆ ಕೋಲಾರ ಚಿನ್ನದ ಗಣಿಗಾರಿಕಾ ಚಟುವಟಿಕೆಗಳಿಗೆ ಪೂರೈಸಿ ಉಳಿದ ವಿದ್ಯುತ್ತನ್ನು ಕೈಗಾರಿಕಾ ವಲಯಕ್ಕೆ ಸರ್ಕಾರ ಕಡಿಮೆ ಬೆಲೆಗೆ ಪೂರೈಸಲಾರಂಭಿಸಿತು. ಇದರಿಂದಾಗಿ ಸಣ್ಣ ಕೈಗಾರಿಕೆಗಳಲ್ಲಿ ಯಂತ್ರಗಳನ್ನು ಅಳವಡಿಸುವ ಪ್ರಕ್ರಿಯೆ ಆರಂಭಗೊಂಡಿತು. ನಾಲ್ವಡಿಯವರು ಕೈಗಾರಿಕೆಗಳಲ್ಲಿ ಯಾಂತ್ರೀಕರಣವನ್ನು ಕುರಿತಂತೆ 1914ರ ಮೈಸೂರು ದಸರಾ ಕೈಗಾರಿಕಾ ಮತ್ತು ಕೃಷಿ ವಸ್ತುಪ್ರದರ್ಶನದಲ್ಲಿ ಈ ರೀತಿ ಬೆಂಬಲಿಸಿ ಮಾತನಾಡಿದರು "ಕೈಗಾರಿಕಾ ಯಂತ್ರೋಪಕರಣಗಳನ್ನು ಖರೀದಿಸುವ ಸಮಿತಿಯ ಚಿಂತನೆ ಒಂದು ಹೊಸ ಹೆಜ್ಜೆ, ಅದು ಬಹು ಪ್ರಮುಖವಾದುದೆಂದು ನಂಬಿದ್ದೇನೆ ಮತ್ತು ರಾಜ್ಯದಾದ್ಯಂತ ಶಕ್ತಿಯಿಂದ ಚಲಿಸುವ ಸಣ್ಣ ಯಾಂತ್ರಿಕ ಕೇಂದ್ರಗಳು ವಿಸ್ತೃತವಾಗಿ ಪ್ರವೇಶಿಸುತ್ತವೆಂದು ನಂಬಿದ್ದೇನೆ."[319] ನಾಲ್ವಡಿಯವರ ಈ ಪ್ರೋತ್ಸಾಹಕಾರಿ ಮಾತುಗಳು ಹಲವು ಕೈಗಾರಿಕೆಗಳಲ್ಲಿ ಯಂತ್ರಗಳನ್ನು ಬಳಸುವುದಕ್ಕೆ ದಾರಿಯಾಯಿತು. ಸರ್ಕಾರವು 1913 ರಿಂದಲೇ ಕೈಗಾರಿಕೆಗಳ ಹಲವು ಕಾರ್ಯಗಳಿಗೆ ಯಂತ್ರಗಳನ್ನು ಅಳವಡಿಸುವ ಚಟುವಟಿಕೆಗಳನ್ನು ಬೆಂಬಲಿಸಲು ಸಾಲದ ಯೋಜನೆ ಮತ್ತಿತರ ರಿಯಾಯ್ತಿಗಳನ್ನು ಪ್ರಕಟಿಸಿತು. ಅದರ ಫಲಿತಾಂಶವಾಗಿ ಅನೇಕ ಖಾಸಗಿ ಉದ್ಯಮಿಗಳು ತಮ್ಮ ತಮ್ಮ ಸಣ್ಣ ಕೈಗಾರಿಕೆಗಳಲ್ಲಿ ಯಂತ್ರಗಳನ್ನು ಅಳವಡಿಸಿದರು. ಹಾಗಾಗಿ ರಾಜ್ಯದಾದ್ಯಂತ 7000 ಅಶ್ವ ಶಕ್ತಿಯಷ್ಟು ವಿದ್ಯುತ್ತನ್ನು ಇಂತಹ ಸಣ್ಣ ಕೈಗಾರಿಕೆಗಳಲ್ಲೇ ಬಳಸುವಂತಾಯಿತು. ಅಂತಹ ಪ್ರಮುಖ ಉದ್ಯಮಗಳೆಂದರೆ ನೀರೆತ್ತುವ ಘಟಕಗಳು, ಸಕ್ಕರೆ ಮಿಲ್ಲುಗಳು, ಎಣ್ಣೆ ಮತ್ತು ಹಿಟ್ಟಿನ ಗಿರಣಿಗಳು, ಹತ್ತಿ ಮತ್ತು ಅಕ್ಕಿಯ ಮಿಲ್ಲುಗಳು,[320] ರೇಷ್ಮೆ ಉದ್ಯಮಗಳು, ಮೂಳೆ ಕಾರ್ಖಾನೆ, ಚರ್ಮ ಹದಮಾಡುವ ಉದ್ಯಮ ಮುಂತಾದವು.

ಬೆಂಗಳೂರು ಈ ಕಾಲದಲ್ಲಿ ವಸ್ತ್ರೋದ್ಯಮದಲ್ಲಿ ದಕ್ಷಿಣ ಭಾರತದ ಪ್ರಮುಖ ಕೇಂದ್ರವಾಗಿ ಬೆಳೆದಿತ್ತು. ಬೆಂಗಳೂರಿನ ಹವಾಗುಣವು ಈ ಉದ್ಯಮದ ಬೆಳವಣಿಗೆಗೆ ಪೂರಕವಾಗಿತ್ತು. ಹಾಗಾಗಿ ಈ ಉದ್ಯಮದಲ್ಲಿ ಉತ್ಪಾದನೆಗೊಳ್ಳುತ್ತಿದ್ದ ವಸ್ತುಗಳ ಒಟ್ಟು ಮೌಲ್ಯ 1ಕೋಟಿ 30 ಲಕ್ಷ ರೂಪಾಯಿಗಳಾಗಿದ್ದವು. 1884 ರಲ್ಲೇ ಆರಂಭಗೊಂಡ ಮೈಸೂರ್ ಸ್ಪಿನ್ನಿಂಗ್ ಅಂಡ್ ಮ್ಯಾನುಫ್ಯಾಕ್ಚರಿಂಗ್ ಮಿಲ್ಸ್ (ಮಹಾರಾಜಾಸ್ ಮಿಲ್ ಎಂದು ಹೆಸರಾಗಿತ್ತು) ಮತ್ತು 1887ರಲ್ಲಿ ಆರಂಭಗೊಂಡ ಬೆಂಗಳೂರ್ ಉಲ್ಲನ್, ಕಾಟನ್ ಮತ್ತು ಸಿಲ್ಕ್ ಮಿಲ್ಸ್‌ಗಳು ಸ್ಥಳೀಯ ಬಂಡವಾಳಗಳಲ್ಲಿ ಆರಂಭಗೊಂಡಿದ್ದವು. ಅವು ವ್ಯವಸ್ಥಾಪನೆಯ ಆಂತರಿಕ ಸಮಸ್ಯೆಗಳಿಂದಾಗಿ ಕೆಲಕಾಲ ತೊಂದರೆಯಲ್ಲಿದ್ದವು. ಆಗ ಸರ್ಕಾರ ಆ ಮಿಲ್ಲುಗಳ ಷೇರುಗಳನ್ನು ಖರೀದಿಸಿ ಅವುಗಳ ಪುನಃಶ್ಚೇತನಕ್ಕೆ ಕಾರಣವಾಯಿತು.

---

*319. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 121*

*320. ಹಯವದನರಾವ್ ಸಿ. (ಸಂ)., ಮೈಸೂರ್ ಗೆಸೆಟಿಯರ್, ಸಂಪುಟ - III, ಪು. 267*

ಅನಂತರ ಈ ಮಿಲ್ಲುಗಳು ಲಾಭದತ್ತ ಮುನ್ನಡೆದವು. ಈ ಮಿಲ್ಲುಗಳಲ್ಲಿ ಹತ್ತಿ ಬಟ್ಟೆಗಳ ಜೊತೆಗೆ ಉಣ್ಣೆಯ ಕಂಬಳಿಗಳು ಮತ್ತು ಕಾರ್ಪೆಟ್‌ಗಳನ್ನು ತಯಾರಿಸಲಾಗುತ್ತಿತ್ತು. 1921 ರ ವೇಳೆಗೆ ಈ ಎರಡು ಮಿಲ್ಲುಗಳು 674 ಮಗ್ಗಗಳನ್ನು, 43,092 ನೂಲುಸುತ್ತುವ ಕದಿರುಗಳನ್ನು ಹೊಂದಿದ್ದು, 3947 ಕಾರ್ಮಿಕರಿಗೆ ಉದ್ಯೋಗಗಳನ್ನು ಒದಗಿಸಿದ್ದವು[321].

ಮೇಲಿನ ಸಣ್ಣ ಉದ್ಯಮಗಳನ್ನು ಹೊರತುಪಡಿಸಿದರೆ 1910 ರವರೆಗೂ ಹೆಸರಿಸುವಂತಹ ಬೃಹತ್ ಕೈಗಾರಿಕೆಗಳು ಮೈಸೂರು ರಾಜ್ಯದಲ್ಲಿರಲಿಲ್ಲ. ಸರ್.ಎಂ.ವಿಶ್ವೇಶ್ವರಯ್ಯನವರನ್ನು ಮೈಸೂರಿಗೆ ಮುಖ್ಯ ಎಂಜಿಯರ್ ಆಗಿ ಕರೆಸಿದ ಮೇಲೆ ನಿಜವಾದ ಅರ್ಥದ ಕೈಗಾರಿಕೀರಣ ಮೈಸೂರು ರಾಜ್ಯದಲ್ಲಿ ಆರಂಭಗೊಂಡಿತು. ಮೈಸೂರು ರಾಜ್ಯದಲ್ಲಿ ಅಧಿಕಾರಿಗಳಾಗಿ ಕಾರ್ಯನಿರ್ವಹಿಸಿದ ಅನೇಕ ಐರೋಪ್ಯ ಅಧಿಕಾರಿಗಳು ನಾಲ್ವಡಿಯವರಲ್ಲಿದ್ದ ಅತ್ಯುತ್ತಮ ಅಧಿಕಾರಿಗಳ ಆಯ್ಕೆಯ ಸಾಮರ್ಥ್ಯವನ್ನು ಕುರಿತು ಹೊಗಳಿದ್ದಾರೆ. ಅದರಲ್ಲಿ ಅತ್ಯಂತ ಪ್ರಮುಖವಾದ ಆಯ್ಕೆಯೆಂದರೆ ವಿಶ್ವೇಶ್ವರಯ್ಯನವರದು. ನಾಲ್ವಡಿಯವರು ಬೊಂಬಾಯಿ ಸರ್ಕಾರದಲ್ಲಿ ಸಮರ್ಥರಾಗಿ ಕಾರ್ಯನಿರ್ವಹಿಸಿ ಐರೋಪ್ಯರಿಂದಲೇ ಪ್ರಶಂಸೆಗೊಳಪಟ್ಟಿದ್ದ ವಿಶ್ವೇಶ್ವರಯ್ಯನವರ ಕಾರ್ಯಸಾಮರ್ಥ್ಯವನ್ನು ಮೆಚ್ಚಿ ಆಗಿನ ದಿವಾನರಾಗಿದ್ದ ಟಿ.ಆನಂದರಾಯರ ಮೂಲಕ ಅವರನ್ನು ಮೈಸೂರಿಗೆ ಕರೆಸಿಕೊಳ್ಳಲು ಈ ರೀತಿ ಪತ್ರ ಬರೆಸಿದ್ದರು. "ನಿಮ್ಮ ವಿದ್ಯಾರ್ಹತೆ ಮತ್ತು ನೀವು ಸಲ್ಲಿಸಿರುವ ಅಮೋಘ ಸೇವೆಗಳಿಗಾಗಿ ಮಾತ್ರವಲ್ಲದೆ ನೀವು ಜನ್ಮತಃ ಮೈಸೂರಿನವನೆಂಬ ಕಾರಣದಿಂದಲೂ ನಿಮ್ಮ ಸೇವೆಯನ್ನು ಪಡೆಯಲು ಮಹಾರಾಜರು ಸಂತೋಷಿಸುತ್ತಾರೆ"[322]. ಈ ಪತ್ರವು ನಾಲ್ವಡಿಯವರಲ್ಲಿ ಆಡಳಿತಕ್ಕೆ ದೇಶೀಯರನ್ನೇ ಕರೆತರಬೇಕೆಂಬ ಅಧಮ್ಯ ಆಕಾಂಕ್ಷೆ ಹೊಂದಿದ್ದರೆಂಬುದನ್ನು ತಿಳಿಸುತ್ತದೆ. ಮುಖ್ಯ ಇಂಜಿನಿಯರ್ ಆಗಿ ಮೈಸೂರಿಗೆ ಬರಬೇಕೆಂಬ ನಾಲ್ವಡಿಯವರ ಆಹ್ವಾನಕ್ಕೆ ಪ್ರತಿಯಾಗಿ ಮಹಾರಾಜರು ಹೆಚ್ಚಿನ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಮತ್ತು ತಾಂತ್ರಿಕ ಶಿಕ್ಷಣದ ವಿಸ್ತರಣೆಗೆ ಆಧ್ಯತೆ ನೀಡುವ ಭರವಸೆ ನೀಡಿದರೆ ಮುಖ್ಯ ಎಂಜಿನಿಯರ್ ಆಗುವ ಷರತ್ತಿನ ಮೇಲೆ ವಿಶ್ವೇಶ್ವರಯ್ಯನವರು ಮೈಸೂರಿಗೆ ಬರಲೊಪ್ಪಿದರು[323]. ನಾಲ್ವಡಿಯವರ ಆಯ್ಕೆ ಪ್ರಕ್ರಿಯೆ ಅಷ್ಟಕ್ಕೆ ನಿಲ್ಲದೆ 1912ರಲ್ಲಿ ಮೊದಲಬಾರಿಗೆ ಆಡಳಿತಾಧಿಕಾರಿಯಲ್ಲದ ಇಂಜಿನಿಯರ್ ಹಿನ್ನೆಲೆಯ ವಿಶ್ವೇಶ್ವರಯ್ಯನವರನ್ನು ಮೈಸೂರಿನ ದಿವಾನರನ್ನಾಗಿ ನೇಮಿಸಿದರು. ಇಂತಹ ಅತ್ಯುತ್ತಮ ಅಧಿಕಾರಿಗಳ ಆಯ್ಕೆ ಮತ್ತು ಅವರಿಗೆ ಸಂಧಿಗ್ದ ಪರಿಸ್ಥಿತಿಯಲ್ಲೂ ನೀಡಿದ ಅಚಲವಾದ ಬೆಂಬಲ ಮತ್ತು ಪ್ರೋತ್ಸಾಹಗಳಿಂದಾಗಿ ಮೈಸೂರಿನಲ್ಲಿ ಅನೇಕ ಅಭಿವೃದ್ಧಿ ಯೋಜನೆಗಳನ್ನು ಸಾಧಿಸಲು ಸಾಧ್ಯವಾಯಿತು.

---

*321. ಹಯವದನರಾವ್ ಸಿ. (ಸಂ)., ಮೈಸೂರ್ ಗೆಸೆಟಿಯರ್, ಸಂಪುಟ - III, ಪು. 268-269*

*322. ಜಯಪ್ಪಗೌಡ ಡಿ. ಎಸ್., ಪೂರ್ವೋಕ್ತ, ಪು. 27*

*323. ವಿಶ್ವೇಶ್ವರಯ್ಯ ಎಂ., ಮೆಮ್ಯಾರ್ಸ್ ಆಫ್ ಮೈ ವರ್ಕಿಂಗ್ ಲೈಫ್, ಬೆಂಗಳೂರು, 1959, ಪು. 42*

ಕೈಗಾರಿಕಾ ಬೆಳವಣಿಗೆಗೆ ತಾಂತ್ರಿಕ ಶಿಕ್ಷಣ ಪಡೆದ ತಂತ್ರಜ್ಞರ, ಕುಶಲ ಕಾರ್ಮಿಕರ ಸ್ಥಳೀಯ ದೊರೆಯುವಿಕೆ ಅತ್ಯಂತ ಅವಶ್ಯಕವೆಂಬುದನ್ನು ಅರಿತು ತಾಂತ್ರಿಕ ಶಿಕ್ಷಣದ ಅಭಿವೃದ್ಧಿ ಕುರಿತು ಸಲಹೆ ನೀಡಲು 1910ರಲ್ಲಿ ಒಂದು ಸಮಿತಿಯನ್ನು ನೇಮಿಸಲಾಯಿತು. ಅದಕ್ಕೆ ಅಧ್ಯಕ್ಷರಾಗಿದ್ದ ವಿಶ್ವೇಶ್ವರಯ್ಯನವರು ರಾಜ್ಯದ ಕೈಗಾರಿಕಾ ಮತ್ತು ವಾಣಿಜ್ಯದ ಅಭಿವೃದ್ಧಿಗೆ ಪ್ರತ್ಯೇಕ ಇಲಾಖೆಯನ್ನು ರಚಿಸುವಂತೆ ಸಲಹೆ ಮಾಡಿದರು[324]. ಅನಂತರ ರಾಜ್ಯದಲ್ಲಿ ಯೋಜನಾಬದ್ಧ ಕೈಗಾರಿಕಾ ಬೆಳವಣಿಗೆಗೆ ಸಮೀಕ್ಷೆ ಮಾಡಲು ಕೈಗಾರಿಕಾ ತಜ್ಞ ಅಲ್ಫರ್ಡ್ ಚಾಟರ್‌ಟನ್‌ರನ್ನು ಮದ್ರಾಸ್ ಸರ್ಕಾರದಿಂದ ವಿಶೇಷವಾಗಿ ಕರೆಸಿಕೊಳ್ಳಲಾಯಿತು. ಚಾಟರ್‌ಟನ್‌ರವರು ಇಡೀ ರಾಜ್ಯದಲ್ಲಿ ಕೈಗಾರಿಕೆಗಳನ್ನು ಎಲ್ಲೆಲ್ಲಿ ಸ್ಥಾಪಿಸಬಹುದೆಂಬುದರ ಬಗ್ಗೆ ಸಮೀಕ್ಷೆ ನಡೆಸಿ ವರದಿಯನ್ನು ಆರ್ಥಿಕ ಪರಿಷತ್ತಿನ ಕೈಗಾರಿಕಾ ಮತ್ತು ವಾಣಿಜ್ಯ ಸಮಿತಿಗೆ ಸಲ್ಲಿಸಿದರು. ಆ ಪ್ರಕಾರವಾಗಿ ಚಾಟರ್‌ಟನ್‌ರವರ ಕೈಗಾರಿಕಾ ಯೋಜನೆಯನ್ನು 1913 ರ ಜನವರಿ 20ರಂದು ಜಾರಿಗೆ ತರಲಾಯಿತು. ಅಲ್ಲದೆ ಪ್ರತ್ಯೇಕವಾದ ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯನ್ನು ಅಸ್ತಿತ್ವಕ್ಕೆ ತಂದು ಚಾಟರ್‌ಟನ್ ರವರನ್ನೇ ಇಲಾಖೆಯ ಮುಖ್ಯಸ್ಥರನ್ನಾಗಿಸಲಾಯಿತು. ಈ ಇಲಾಖೆಯು ನಿರ್ವಹಿಸುತ್ತಿದ್ದ ಮುಖ್ಯ ಕಾರ್ಯಗಳೆಂದರೆ: ಕೈಗಾರಿಕೆಗಳು ಹಾಗೂ ವಾಣಿಜ್ಯ ವ್ಯವಹಾರಗಳನ್ನು ಆರಂಭಿಸುವವರಿಗೆ ಸಲಹೆ ನೀಡುವುದು, ಯೋಜನೆ ಸಿದ್ಧಪಡಿಸಲು ಅಂಕಿ ಅಂಶಗಳು ಮತ್ತಿತರ ಮಾಹಿತಿಗಳನ್ನು ನೀಡುವುದು, ಉದ್ಯಮಕ್ಕಾಗಿ ಅಂದಾಜು ತಪಶೀಲು ಮಾಡುವುದು, ಸಾಲಸೌಲಭ್ಯ ನೀಡುವುದು, ಪ್ರಾಯೋಗಿಕ ಸ್ಥಾವರಗಳು ಅಥವಾ ತಯಾರಿಕಾ ಘಟಕಗಳನ್ನು ಸ್ಥಾಪಿಸುವುದು, ಇಡೀ ರಾಜ್ಯಕ್ಕೆ ಸಂಬಂಧಿಸಿದಂತೆ ಕೈಗಾರಿಕಾ ಅಂಕಿ ಅಂಶಗಳ ಬಗ್ಗೆ ಸಮೀಕ್ಷೆ ನಡೆಸುವುದು, ಕೇಂದ್ರೀಯ ಕೈಗಾರಿಕಾ ವಸ್ತು ಸಂಗ್ರಹಾಲಯ ಸ್ಥಾಪಿಸುವುದು, ಮೈಸೂರಿನ ವಸ್ತುಗಳಿಗೆ ತಕ್ಕ ಮಾರುಕಟ್ಟೆಗಳನ್ನು ಒದಗಿಸುವುದು[325]. ಹೀಗೆ ಈ ಇಲಾಖೆಯು ಸರ್ಕಾರ ಅಥವಾ ಖಾಸಗಿ ವ್ಯಕ್ತಿಗಳು ನಿರ್ಧಿಷ್ಟ ಕೈಗಾರಿಕಾ ಅಥವಾ ವಾಣಿಜ್ಯ ಯೋಜನೆಗಳನ್ನು ಕೈಗೊಂಡರೆ ಸ್ಥಾಪನೆಯಿಂದ ಹಿಡಿದು ಮಾರಾಟದವರೆಗಿನ ಕಾರ್ಯ ಚಟುವಟಿಕೆಗಳಲ್ಲಿ ನೆರವು ನೀಡುತ್ತಿತ್ತು.

ನಾಲ್ವಡಿಯವರ ಸರ್ಕಾರವು ಮೈಸೂರು ರಾಜ್ಯದಲ್ಲಿ ಕೈಗಾರಿಕಾ ಚಟುವಟಿಕೆಗಳನ್ನು ತೀವ್ರಗೊಳಿಸಲು 1913 ರ ನಂತರ ಹಲವು ಕ್ರಮಗಳನ್ನು ಕೈಗೊಂಡಿತು. ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಅಥವಾ ಯಂತ್ರಗಳನ್ನು ಕೊಳ್ಳಲು ಮುಂದೆ ಬರುವ ಖಾಸಗಿ ವ್ಯಕ್ತಿಗಳು ಹಾಗೂ ಸಹಕಾರ ಸಂಘಗಳಿಗೆ ಮುಂಗಡ ಸಾಲ ಸೌಲಭ್ಯ ಒದಗಿಸಿತು. ಈ ಉದ್ದೇಶಕ್ಕಾಗಿ ಒಂದು ಸಾಲ ನಿಧಿಯನ್ನು ಸ್ಥಾಪಿಸಿ ಆ ನಿಧಿಯ ಮೂಲಕ ಸಾಲ ಒದಗಿಸಲಾಯಿತು[326]. ಪ್ರಮುಖವಾಗಿ

---

*324. ವಿಶ್ವೇಶ್ವರಯ್ಯ ಎಂ., ಪೂರ್ವೋಕ್ತ, ಪು. 44*

*325. ಜಯಪ್ಪಗೌಡ, ಡಿ. ಎಸ್., ಪೂರ್ವೋಕ್ತ, ಪು. 144*

*326. ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್; ಇಂಡಸ್ಟ್ರೀಸ್ ಅಂಡ್ ಕಾಮರ್ಸ್, ಸೀರಿಸ್ - 3, 1916, ಪು. 22*

ನೀರಾವರಿ ಪಂಪ್ ಸ್ಥಾಪಿಸಲು, ಸಕ್ಕರೆ ತಯಾರಿಕಾ ಯಂತ್ರಗಳ ಖರೀದಿಗೆ, ನೇಯ್ಗೆ ಕಾರ್ಖಾನೆಗಳ ಆಧುನೀಕರಣಕ್ಕೆ ಸಾಲ ನೀಡಲಾಯಿತು. ದೇಶೀಯ ಕೈಗಾರಿಕಾ ಉತ್ಪಾದನೆಗಳಿಗೆ ಬೇಡಿಕೆ ರೂಪಿಸಲು ಸರ್ಕಾರವು ತನ್ನ ಇಲಾಖೆಗಳಿಗೆ ಕೈಗಾರಿಕಾ ಸಾಮಗ್ರಿಗಳನ್ನು ಕೊಳ್ಳುವಾಗ ಮೈಸೂರಿನ ಕಚ್ಚಾ ವಸ್ತುಗಳನ್ನು ಬಳಸಿಕೊಂಡು[327] ಮೈಸೂರಿನ ಕೈಗಾರಿಕೆಗಳು ತಯಾರಿಸಿದ ಸಾಮಗ್ರಿಗಳನ್ನು ಕೊಳ್ಳಲು ಆದ್ಯತೆ ನೀಡಲಾಯಿತು.

ಸ್ಥಳೀಯ ಕಚ್ಚಾವಸ್ತುಗಳ ದೊರೆಯುವಿಕೆ ಮತ್ತಿತರ ಅಂಶಗಳನ್ನು ಆಧರಿಸಿ ಹಾಗೂ ರಾಜ್ಯಕ್ಕೆ ಅಗತ್ಯವಾದ ವಿವಿಧ ಕೈಗಾರಿಕಾ ಯೋಜನೆಗಳು ರೂಪುಗೊಳ್ಳತೊಡಗಿದವು. ಕೈಗಾರಿಕಾ ಉಪನಗರಗಳನ್ನು ಬೆಂಗಳೂರು, ಮೈಸೂರು ಮತ್ತು ದಾವಣಗೆರೆಗಳಲ್ಲಿ ಸ್ಥಾಪಿಸಲಾಯಿತು[328]. 1913 ರಿಂದ 1917 ರವರೆಗಿನ ಅವಧಿಯಲ್ಲಿ ಕೈಗಾರಿಕಾ ಇಲಾಖೆಯು 9 ಸಕ್ಕರೆಮಿಲ್ಲುಗಳು, 8 ಎಣ್ಣೆ ಮಿಲ್ಲುಗಳು, 60 ನೀರಾವರಿ ಪಂಪ್‌ಗಳು, 24 ಹಿಟ್ಟಿನ ಮತ್ತು 11 ಅಕ್ಕಿ ಮಿಲ್ಲುಗಳನ್ನು ಸ್ಥಾಪಿಸಲು ನೆರವು ನೀಡಿತು[329]. ನಾಲ್ವಡಿಯವರ ಸರ್ಕಾರವು ಯಾಂತ್ರೀಕರಣಕ್ಕೆ ನೀಡಿದ ಪ್ರೋತ್ಸಾಹದಿಂದಾಗಿ ಯಂತ್ರಗಳಿಗೆ ಬೇಡಿಕೆ ಹೆಚ್ಚತೊಡಗಿತು. ಆದರೆ 1914ರಲ್ಲಿ ಮೊದಲ ಮಹಾಯುದ್ಧ ಪ್ರಾರಂಭವಾಗಿ ವಿದೇಶಗಳಿಂದ ಬರುತ್ತಿದ್ದ ಯಂತ್ರೋಪಕರಣಗಳ ಆಮದಿಗೆ ತೊಂದರೆಯಾಯಿತು. ಬೆಂಗಳೂರಿನ ಲೋಕೋಪಯೋಗಿ ಕಾರ್ಯಗಾರವನ್ನು ವಿಸ್ತರಿಸಿ ಅಲ್ಲಿಯೇ ಕೃಷಿ ಮತ್ತು ಕೈಗಾರಿಕೆಗಳಿಗೆ ಅವಶ್ಯವಾದ ಯಂತ್ರೋಪಕರಣಗಳನ್ನು ತಯಾರಿಸಲು ಸರ್ಕಾರ ನಿರ್ಧರಿಸಿತು. ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿದ್ದ ಬೆಂಗಳೂರಿನ ಕಾರ್ಯಾಗಾರವನ್ನು 1917 ರಲ್ಲಿ ಕೈಗಾರಿಕಾ ಇಲಾಖೆಗೆ ವರ್ಗಾಯಿಸಲಾಯಿತು. ಹೆಚ್ಚುತ್ತಿದ್ದ ಯಂತ್ರೋಪಕರಣಗಳು ಮತ್ತು ಅವುಗಳ ದುರಸ್ತಿಯ ಬಗೆಗಿನ ಬೇಡಿಕೆಯನ್ನು ನೀಗಿಸಲು ಪ್ರತಿ ಜಿಲ್ಲಾ ಕೇಂದ್ರದಲ್ಲೂ ಕಾರ್ಯಗಾರವನ್ನು ಸ್ಥಾಪಿಸಲು ನಿರ್ಧರಿಸಿತು. ಬೆಂಗಳೂರು ಮತ್ತು ಚಿತ್ರದುರ್ಗಗಳಲ್ಲಿ ಇಂತಹ ಕಾರ್ಯಗಾರಗಳು ಸ್ಥಾಪನೆಗೊಂಡವು[330]. ಹೀಗೆ ನಾಲ್ವಡಿಯವರು ಎಲ್ಲ ಕ್ಷೇತ್ರಗಳಲ್ಲೂ ಯಾಂತ್ರೀಕರಣವನ್ನು ಅಳವಡಿಸಿಕೊಳ್ಳಲು ಪ್ರೋತ್ಸಾಹಿಸಿದರು.

ನಾಲ್ವಡಿಯವರ ಸರ್ಕಾರವು ಕೈಗಾರಿಕೆಗಳಿಗೆ ನೀಡಿದ ಬೆಂಬಲಿತ ನೀತಿಯಿಂದ ಅನೇಕ ಸರ್ಕಾರಿ ಮತ್ತು ಖಾಸಗಿ ಒಡೆತನದ ಕೈಗಾರಿಕೆಗಳು ಸ್ಥಾಪನೆಗೊಂಡವು. ಮೈಸೂರಿನಲ್ಲಿ ಕೃಷ್ಣರಾಜೇಂದ್ರ ಮಿಲ್ ಅನ್ನು ಸ್ಥಾಪಿಸುವ ಯೋಜನೆ 1915 ರಲ್ಲಿ ಸಿದ್ಧಗೊಂಡಿತು[331]. ಅದರಲ್ಲೂ ಮಹಾಯುದ್ಧದ ಪರಿಸ್ಥಿತಿಯಿಂದಾಗಿ ಹತ್ತಿ ಬಟ್ಟೆಗಳು ಪಾಶ್ಚಿಮಾತ್ಯ

---

327. *ಸರ್ಕಾರಿ ಆದೇಶ ಸಂಖ್ಯೆ : ಎಫ್. ಎಲ್. 2760 - 808 - ಜಿ. ಎಫ್ 214-10-88, ದಿನಾಂಕ : 23-12-1913*

328. *ಕಡತದ ಸಂಖ್ಯೆ ; 134-14, ಕ್ರಮ ಸಂಖ್ಯೆ 7-36, ಮುನಿಸಿಪಲ್, 1914*

329. *ಹ್ಯಾಂಡ್ ಬುಕ್ ಆಫ್ ಮೈಸೂರ್ ಅಡ್ಮಿನಿಸ್ಟ್ರೇಷನ್, ಪು. 145*

330. *ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ 1917-18, ಮೈಸೂರ್, ಪು. 34*

331. *ಅದೇ., 1915-16. ಪು. 36*

ದೇಶಗಳಿಂದ ಬರುವುದು ನಿಂತಾಗ ಅವುಗಳಿಗೆ ದೇಶೀಯವಾಗಿ ಬೇಡಿಕೆ ಹೆಚ್ಚಿತು ಅದರಿಂದಾಗಿ ರಾಜ್ಯದಲ್ಲಿ ಅಂತಹ ಹೊಸ ಮಿಲ್ಲುಗಳ ಸ್ಥಾಪನೆಗೆ ಅವಕಾಶ ಒದಗಿಬಂತು. 50 ಲಕ್ಷ ರೂಪಾಯಿಗಳ ಬಂಡವಾಳದೊಂದಿಗೆ ಶ್ರೀ ಕೃಷ್ಣರಾಜೇಂದ್ರ ಮಿಲ್ 1924ರ ಆರಂಭದಲ್ಲಿ ಕಾರ್ಯನಿರ್ವಹಿಸಲು ಆರಂಭಿಸಿತು. ಆ ಮಿಲ್‌ನಲ್ಲಿ ಆರಂಭದಲ್ಲೇ 25,000 ನೂಲು ಸುತ್ತುವ ಕದಿರುಗಳು ಕೆಲಸ ಮಾಡುತ್ತಿದ್ದವು. ಅದೊಂದು ಅತ್ಯಂತ ಆಧುನಿಕವಾದ ಉಡುಪು ತಯಾರಿಕಾ ಉದ್ಯಮವಾಗಿತ್ತು[332]. ಶ್ರೀ ಕೃಷ್ಣರಾಜೇಂದ್ರ ಮಿಲ್‌ನ ಶಂಕುಸ್ಥಾಪನೆಯ ಸಂದರ್ಭದಲ್ಲಿ ಕೈಗಾರಿಕೆಗಳ ಬೆಳವಣಿಗೆಯಲ್ಲಿ ಸ್ಥಳೀಯ ಉದ್ಯಮಿಗಳ ಪ್ರಯತ್ನವನ್ನು ಮೆಚ್ಚಿ ನಾಲ್ವಡಿ ಈ ಕೆಳಕಂಡಂತೆ ಮಾತನಾಡಿದರು "ಮೈಸೂರಿನಲ್ಲಿ ಕೈಗಾರಿಕೆಗಳ ಬೆಳವಣಿಗೆಗಳ ವಿಷಯದಲ್ಲಿ ನನಗೆ ತೀವ್ರವಾದ ಆಸಕ್ತಿಯಿದೆ........ ಈ ಮಿಲ್ಲಿನ ಸ್ಥಾಪನೆಯ ಬಗೆಗಿನ ಚಿಂತನೆ ಮತ್ತು ಉದ್ಯಮಶೀಲತೆ ಸ್ಥಳೀಯವಾಗಿಯೇ ಹುಟ್ಟಿದವೆಂಬುದನ್ನು ತಿಳಿದು ವಿಶೇಷವಾಗಿ ಸಂತೋಷವಾಗಿದೆ. ಹಾಗೆಯೇ ಈ ಮಿಲ್ಲಿನ ಕಂಪನಿಯ ಬಂಡವಾಳವು ಹೆಚ್ಚಾಗಿ ಮೈಸೂರಿನ ಸಾರ್ವಜನಿಕರಿಂದ ಬಂದುದಾಗಿದೆ." [333] ಹೀಗೆ ಕೈಗಾರಿಕಾ ಬೆಳವಣಿಗೆಯಲ್ಲಿ ಸ್ಥಳೀಯ ಉದ್ಯಮಿಗಳ ಪಾತ್ರವನ್ನು ಮೆಚ್ಚಿದ್ದಲ್ಲದೆ ನಾಲ್ವಡಿಯವರು ಐದು ಲಕ್ಷ ರೂಪಾಯಿಗಳನ್ನು ಷೇರುಗಳ ಮೂಲಕ ಬಂಡವಾಳವಾಗಿ ತೊಡಗಿಸಿದರು. ಅಲ್ಲದೆ ಮಿಲ್‌ಗೆ ಬೇಕಾದ ಉತ್ತಮವಾದ ನಿವೇಶನ ಮತ್ತು ನಿರ್ಧಿಷ್ಟ ಅವಧಿಗೆ ರಿಯಾಯಿತಿ ದರದಲ್ಲಿ ವಿದ್ಯುತ್ ಶಕ್ತಿಯನ್ನು ಪೂರೈಸಲಾಯಿತು[334]. ಮತ್ತೊಂದು ಬಟ್ಟೆ ಗಿರಣಿ ಮಿನರ್ವ ಮಿಲ್ಸ್‌ನ ಎಂಬುದು 30 ಲಕ್ಷ ರೂಪಾಯಿಗಳ ಬಂಡವಾಳದೊಂದಿಗೆ ಬೆಂಗಳೂರಿನಲ್ಲಿ ಆರಂಭಗೊಂಡಿತು. ಇದು 20,000 ನೂಲು ಸುತ್ತುವ ಕದಿರುಗಳನ್ನು ಹೊಂದಿತ್ತು. ಈ ಮಿಲ್ಲಿನ ಸ್ಥಾಪನೆಗೆ ಬೇಕಾದ 70 ಎಕರೆ ಭೂಮಿಯನ್ನು ಕಡಿಮೆ ದರದಲ್ಲಿ ಸರ್ಕಾರವು ಒದಗಿಸಿತು. ಮಹಾಯುದ್ಧದಿಂದಾಗಿ ಉಂಟಾದ ಉಣ್ಣೆ ಬಟ್ಟೆಗಳ ಬೇಡಿಕೆಯನ್ನು ಪೂರೈಸಲು ದಿ ಬೆಂಗಳೂರು ಉಲ್ಲನ್, ಕಾಟನ್ ಅಂಡ್ ಸಿಲ್ಕ್ಸ್ ಮಿಲ್ಸ್ ಕಂಪನಿ ಬೆಂಗಳೂರಿನಲ್ಲಿ ಆರಂಭಗೊಂಡಿತು. ಕೈಸರ್-ಐ-ಹಿಂದ್ ಉಲ್ಲನ್ ಮಿಲ್ಸ್ ಲಿಮಿಟೆಡ್ ಎಂಬ ಮತ್ತೊಂದು ಕೈಗಾರಿಕೆ 1922ರಲ್ಲಿ ಖಾಸಗಿ ಯವರಿಂದ ಆರಂಭಗೊಂಡು ನಂತರ ಪಬ್ಲಿಕ್ ಜಾಯಿಂಟ್ ಸ್ಟಾಕ್ ಕಂಪನಿಯಾಗಿ ಪರಿವರ್ತನೆಗೊಂಡಿತು[335].

ಮೈಸೂರಿನ ಪ್ರಮುಖ ಬೆಳೆ ಮತ್ತು ಉದ್ಯಮವಾದ ರೇಷ್ಮೆ ಗೂಡುಗಳಿಂದ ರೇಷ್ಮೆ ನೂಲು ತೆಗೆದು ಸುತ್ತುವ ಕ್ಷೇತ್ರದಲ್ಲಿ ಮೈಸೂರು ಸರ್ಕಾರವು ಪ್ರಯೋಗಾತ್ಮಕವಾದ ರೇಷ್ಮೆ ಫಿಲೇಚರ್‌ಗಳನ್ನು ಅಳವಡಿಸಿತು. ಯಾಂತ್ರಿಕ ರೇಷ್ಮೆ

---

332. *ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಸಂಪುಟ - III, ಪು. 270*
333. *ಸ್ಪೀಚಸ್ ಆಫ್ ಹಿಸ್ ಹೈನೆಸ್., ಪೂರ್ವೋಕ್ತ, ಪು. 188*
334. *ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಪು. 270*
335. ಅದೇ., *ಪು. 271*

ಮಗ್ಗಗಳಿಗೆ ಬಳಸಲು ಒಂದೇ ತರಹದ ತುಂಡರಿಯದ ರೇಷ್ಮೆ ನೂಲು ದೊರೆಯುತ್ತಿರಲಿಲ್ಲ. ಹಾಗಾಗಿ ಸರ್ಕಾರವು ಪ್ರಯೋಗಾತ್ಮಕವಾಗಿ ಮೈಸೂರಿನಲ್ಲಿ ಇಂತಹ ಸುಧಾರಿತ ಫಿಲೇಚರ್‌ಗಳನ್ನು ಅಳವಡಿಸಿದ್ದರಿಂದ ಅತ್ಯುತ್ಕೃಷ್ಟ ದರ್ಜೆಯ ರೇಷ್ಮೆ ನೂಲು ದೊರೆಯಲಾರಂಭಿಸಿತು. ಈ ಪ್ರಯೋಗವು ಯಶಸ್ವಿಯಾಗಿದ್ದರಿಂದ ಕೆಲವು ಸ್ಥಳೀಯ ಬಂಡವಾಳಗಾರರು ದೊಡ್ಡ ದೊಡ್ಡ ಫಿಲೇಚರ್‌ಗಳನ್ನು ಬಳಸಲಾರಂಭಿಸಿದರು. ಇದು ಮುಂದೆ ದೊಡ್ಡ ಪ್ರಮಾಣದ ರೇಷ್ಮೆ ನೂಲುವಿಕೆ ಮತ್ತು ನೇಯ್ಗೆಗೆ ಸಹಾಯಕವಾಯಿತು[336].

ಮೈಸೂರು ರಾಜ್ಯದಲ್ಲಿ ಚರ್ಮ ಹದ ಮಾಡುವ ಉದ್ಯಮವು ಗುಡಿ ಕೈಗಾರಿಕೆಯಾಗಿದ್ದು ಅತ್ಯಂತ ಹಳೆಯ ವಿಧಾನಗಳ ಮೂಲಕ ಚರ್ಮವನ್ನು ಹದ ಮಾಡಲಾಗುತ್ತಿತ್ತು. ಆದರೆ 1908ರಲ್ಲಿ ಆರಂಭಗೊಂಡ 'ದಿ ಮೈಸೂರ್ ಕ್ರೋಮ್ ಟ್ಯಾನರೀ ಲಿಮಿಟೆಡ್' ಎಂಬ ಕಾರ್ಖಾನೆಯು ಮೊದಲ ಬಾರಿಗೆ ಆಧುನಿಕ ವಿಧಾನಗಳನ್ನು ಬಳಸಿಕೊಂಡು, ವಿದ್ಯುತ್ ಶಕ್ತಿಯ ನೆರವಿನಿಂದ ನಡೆಯುವ ದೊಡ್ಡ ಕೈಗಾರಿಕೆಯಂತೆ ಕಾರ್ಯನಿರ್ವಹಿಸಲಾರಂಭಿಸಿತು. ಆಧುನಿಕ ಕೈಗಾರಿಕೆಯಂತೆ ಆರಂಭವಾದ ಈ ಉದ್ಯಮವನ್ನು ಬೆಂಬಲಿಸಲು ನಾಲ್ವಡಿಯವರ ಸರ್ಕಾರವು 60,000ರೂಪಾಯಿಗಳನ್ನು ಆ ಕಂಪನಿಯ ಷೇರುಗಳಲ್ಲಿ ಬಂಡವಾಳವಾಗಿ ತೊಡಗಿಸಿತು[337].

ಬೆಂಗಳೂರು ನಗರ ಬೆಳೆದಂತೆ ಕಟ್ಟಗಳ ನಿರ್ಮಾಣ, ನೀರಿನ ಪೂರೈಕೆ ಮುಂತಾದ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಇಟ್ಟಿಗೆ, ಹೆಂಚು, ಪೈಪುಗಳಿಗೆ ಬೇಡಿಕೆ ಹೆಚ್ಚಿತು. ಹಿಂದೆ ಹಳ್ಳಿಗಳ ಕುಂಬಾರರು ಮಾಡುತ್ತಿದ್ದ ಮಣ್ಣಿನ ಸಾಮಾನುಗಳಿಗಿಂತ ಉತ್ತಮ ಗುಣಮಟ್ಟದ ಮತ್ತು ವಿಭಿನ್ನ ಮಾದರಿಯ ಇಟ್ಟಿಗೆ ಮತ್ತು ಹೆಂಚುಗಳನ್ನು ಈ ಆಧುನಿಕ ಫ್ಯಾಕ್ಟರಿಗಳು ಉತ್ಪಾದಿಸತೊಡಗಿದವು. ಅದರಲ್ಲಿ ಪ್ರಮುಖವಾದುದೆಂದರೆ ಸಿಟಿ ಬ್ರಿಕ್ ಅಂಡ್ ಟೈಲ್ ವರ್ಕ್ಸ್ ಲಿಮಿಟೆಡ್, ಬೆಂಗಳೂರು. ಆನಂತರ ಯಾಂತ್ರೀಕೃತ ಶಕ್ತಿಯನ್ನಾಧರಿಸಿದ ಮಂಗಳೂರು ಹೆಂಚಿನ ಮಾದರಿಯ ಕಾರ್ಖಾನೆಗಳು ಮೈಸೂರು, ತುಮಕೂರು, ದೊಡ್ಡಬಳ್ಳಾಪುರ, ಚನ್ನಪಟ್ಟಣ, ಶೃಂಗೇರಿ, ಸಾಗರ ಮುಂತಾದೆಡೆ ಸ್ಥಾಪಿತವಾದವು. ಬೆಂಗಳೂರಿನ ಯಲಹಂಕದ ಬಳಿ ಒಳಚರಂಡಿ ಪೈಪುಗಳ ತಯಾರಿಕಾ ಘಟಕವು ಕೂಡ ಸ್ಥಾಪನೆಗೊಂಡಿತು[338].

ಮೈಸೂರು ರಾಜ್ಯವು ಶತಮಾನಗಳಿಂದ ಶ್ರೀಗಂಧದ ಮರವನ್ನು ಹೊರ ದೇಶಗಳಿಗೆ ರಫ್ತು ಮಾಡಿ ಆದಾಯವನ್ನು ಗಳಿಸುತ್ತಿತ್ತು. ಆದರೆ 1914ರ ಕೊನೆಯ ವೇಳೆಗೆ ಮಹಾಯುದ್ಧದ ಪರಿಣಾಮವಾಗಿ ಶ್ರೀಗಂಧದ ಮರ ಯೂರೋಪಿಗೆ ರಫ್ತಾಗುವುದು ಕಡಿಮೆಯಾಯಿತು. ರಾಜ್ಯವು ಪ್ರಮುಖ ಆದಾಯದ ಮೂಲವನ್ನು ಕಳೆದುಕೊಳ್ಳುವ ಭೀತಿಗೊಳಗಾಯಿತು.

---

*336. ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಪು. 271-274*

*337. ಅದೇ., ಪು. 273*

*338. ಅದೇ., ಪು. 274*

ಆ ಸಂದರ್ಭದಲ್ಲಿ ಕೈಗಾರಿಕಾ ಇಲಾಖೆಯ ನಿರ್ದೇಶಕರಾದ ಆಲ್ಫ್ರೆಡ್ ಚಾಟರ್‌ಟನ್‌ರವರು ಸರ್ಕಾರವೇ ಗಂಧದೆಣ್ಣೆ ಕಾರ್ಖಾನೆಯನ್ನು ಸ್ಥಾಪಿಸಬೇಕೆಂದು ಸಲಹೆ ನೀಡಿದರು. ಆದರೆ ಗಂಧದೆಣ್ಣೆ ತಯಾರಿಸುವ ದೇಶೀಯ ವಿಧಾನವು ಬಹು ಅಪಕ್ವವಾಗಿದ್ದು, ಹೆಚ್ಚಿನ ಎಣ್ಣೆಯು ವ್ಯರ್ಥವಾಗಿ ಪೋಲಾಗುತ್ತಿತ್ತು ಮತ್ತು ಶೇಕಡಾ 10 ರಿಂದ 20 ಭಾಗ ಮರದಲ್ಲೇ ಉಳಿದು ಹೋಗುತ್ತಿತ್ತು. ಹಾಗಾಗಿ ಮೊದಲು ಉತ್ತಮ ಮತ್ತು ಆರ್ಥಿಕವಾಗಿ ಕಡಿಮೆ ಖರ್ಚಾಗುವಂತಹ ಎಣ್ಣೆ ಉತ್ಪಾದಿಸುವ ವಿಧಾನಗಳ ಬಗ್ಗೆ ಪ್ರಯೋಗಗಳನ್ನು ನಡೆಸಲಾಯಿತು. ಅಂತಿಮವಾಗಿ ವೈಜ್ಞಾನಿಕ ವಿಧಾನಗಳನ್ನನುಸರಿಸಿ ಗಂಧದೆಣ್ಣೆ ಕಾರ್ಖಾನೆ ಆರಂಭಿಸಿದರೆ ಯಶಸ್ವಿಯಾಗಬಹುದೆಂಬ ನಂಬಿಕೆ ಬಂದ ನಂತರ ನಾಲ್ವಡಿಯವರ ಸರ್ಕಾರವು ಕಾರ್ಖಾನೆ ಆರಂಭಿಸಲು 1915ರಲ್ಲಿ ಒಂದು ಲಕ್ಷ ರೂಪಾಯಿ ಹಣ ಬಿಡುಗಡೆ ಮಾಡಿತು[339]. ಅದರಂತೆ 1916ರಿಂದ ಬೆಂಗಳೂರಿನ ಗಂಧದೆಣ್ಣೆ ಕಾರ್ಖಾನೆಯು ಉತ್ಪಾದನೆ ಆರಂಭಿಸಿತು[340]. ಮೈಸೂರಿನ ಗಂಧದೆಣ್ಣೆಗೆ ಇಂಗ್ಲೆಂಡ್, ಅಮೇರಿಕಾ ಮತ್ತು ಜಪಾನ್‌ಗಳಿಂದ ಬಹಳ ಬೇಡಿಕೆ ಬಂದಿತು. ಹಾಗಾಗಿ 1917ರಲ್ಲಿ ಮತ್ತೊಂದು ಗಂಧದೆಣ್ಣೆ ಕಾರ್ಖಾನೆಯನ್ನು ಮೈಸೂರಿನಲ್ಲಿ ಆರಂಭಿಸಲಾಯಿತು. ಗಂಧದೆಣ್ಣೆಯ ಬೆಲೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ 1914ರಲ್ಲಿ ಒಂದು ಎಲ್‌ಬಿಗೆ 21 ಷಿಲ್ಲಿಂಗ್ ಇದ್ದದ್ದು 1917ರ ವೇಳೆಗೆ 50 ಷಿಲ್ಲಿಂಗ್‌ಗೆ ಏರಿತು. 1916-17ರಲ್ಲಿ 7,59,489 ರೂಪಾಯಿ ಮೌಲ್ಯದ ಗಂಧದೆಣ್ಣೆ ಮಾರಾಟವಾದರೆ, 1917-18ರಲ್ಲಿ 27,50,422 ರೂಪಾಯಿಗಳ ಮೌಲ್ಯದ ಗಂಧದೆಣ್ಣೆ ಮಾರಾಟವಾಯಿತು[341]. ಇದೇ ವೇಳೆ ಬೆಂಗಳೂರಿನಲ್ಲಿ ಆಂಡರ್‌ಸನ್ ಆಯಿಲ್ ಎಕ್ಸ್ಪೆಲರ್ ಕಂಪನಿ ಮತ್ತೊಂದು ಗಂಧದೆಣ್ಣೆ ಕಾರ್ಖಾನೆಯನ್ನು ಆರಂಭಿಸಿತು[342]. ಹೀಗಾಗಿ ಕಚ್ಚಾ ವಸ್ತುವಾಗಿ ಶ್ರೀಗಂಧವನ್ನು ಮಾರುತ್ತಿದ್ದ ಮೈಸೂರು ನಾಲ್ವಡಿಯವರ ಕಾಲದಲ್ಲಿ ತಾನೇ ಆಧುನಿಕ ಕಾರ್ಖಾನೆಯನ್ನು ಸ್ಥಾಪಿಸಿ ಅದೇ ಪಾಶ್ಚಿಮಾತ್ಯ ದೇಶಗಳಿಗೆ ಸಿದ್ಧ ವಸ್ತುವನ್ನು ರಫ್ತು ಮಾಡಿ ಪೋಲಾಗುತ್ತಿದ್ದ ಲಾಭವನ್ನು ತಾನೇ ಗಳಿಸಲಾರಂಭಿಸಿತು. ಈ ಗಂಧದೆಣ್ಣೆ ಕಾರ್ಖಾನೆಗಳು ಮೈಸೂರು ರಾಜ್ಯಕ್ಕೆ ಒಳ್ಳೆಯ ಹೆಸರು, ಲಾಭ ತಂದುದಲ್ಲದೆ ಇಲ್ಲಿನ ಜನತೆಗೆ ಉದ್ಯೋಗಗಳನ್ನು ಒದಗಿಸಿದವು.

### *ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ*

ಕಬ್ಬಿಣ ಮತ್ತು ಉಕ್ಕುಗಳು ಎಲ್ಲ ಕೈಗಾರಿಕಾ ಬೆಳವಣಿಗೆಗೆ ಅತ್ಯವಶ್ಯಕ. ಹಾಗಾಗಿ ಕಬ್ಬಿಣ ಮತ್ತು ಉಕ್ಕಿನ ಉದ್ಯಮಗಳನ್ನು 'ಕೈಗಾರಿಕೆಯ ಮಾತೃ' ಎಂದು ಕರೆಯಲಾಗಿದೆ. ನಾಲ್ವಡಿಯವರು ಕಬ್ಬಿಣದ ಮಹತ್ವವನ್ನು ಅರಿತಿದ್ದು ಅಂದು ಬೃಹತ್ ಕಬ್ಬಿಣ ಕಾರ್ಖಾನೆ ಸ್ಥಾಪಿಸುವುದು ಕಷ್ಟಸಾಧ್ಯವಾಗಿದ್ದ ಕಾರ್ಯವಾಗಿದ್ದರೂ ದೃಢ ಮನಸ್ಸಿನಿಂದ

---

*339. ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಪು. 277*

*340. ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್, 1916-17, ಪು. 37*

*341. ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಪು. 277*

*342. ಶಾಮರಾವ್ ಎಂ., ಪೂರ್ವೋಕ್ತ, ಸಂಪುಟ - II, ಪು. 272*

ಅದನ್ನು ಸಾಧಿಸಿ ತೋರಿಸಿದರು. ಜನಪದ ಆಧಾರವು ತಿಳಿಸುವಂತೆ ನಾಲ್ವಡಿಯವರು ಮಲೆನಾಡಿನ ಭಾಗದಲ್ಲಿ ಅದರಲ್ಲೂ ಬಾಬಾಬುಡನ್ ಪರ್ವತ ಶ್ರೇಣಿಗಳಲ್ಲಿ ರಾಜ್ಯ ಪ್ರವಾಸ ಕೈಗೊಂಡಿದ್ದಾಗ ಒಮ್ಮೆ ತುಂಬಿ ಹರಿಯುತ್ತಿದ್ದ ನದಿಯನ್ನು ತಮ್ಮ ಬಿಳಿ ಕುದುರೆಯ ಮೇಲೆ ಕುಳಿತು ದಾಟಿದರು. ನದಿಯಿಂದ ಹೊರಬಂದ ಬಿಳಿ ಕುದುರೆ ಕಂದು ಬಣ್ಣಕ್ಕೆ ತಿರುಗಿದುದನ್ನು ನಾಲ್ವಡಿ ಗಮನಿಸಿದರು. ಆ ಕಂದು ಬಣ್ಣದ ಹುಡಿಯು ನದಿಯ ನೀರಿನಲ್ಲಿನ ಕಬ್ಬಿಣದ ಖನಿಜಾಂಶವೆಂದು ತಿಳಿದು ಮಣ್ಣಿನಲ್ಲಿ ಕೊಚ್ಚಿ ಬಂದ ನೀರಿನಲ್ಲೇ ಇಷ್ಟು ಕಬ್ಬಿಣದ ಖನಿಜವಿರುವುದಾದರೆ ಆ ಪರ್ವತಗಳಡಿಯಲ್ಲಿನ ಭೂಮಿಯಲ್ಲಿ ಅದೆಷ್ಟು ಖನಿಜವಿರಬಹುದೆಂದು ಆಲೋಚಿಸಿದರು. ಆ ಆಲೋಚನೆಯು ತಜ್ಞರ ಮೂಲಕ ಕಬ್ಬಿಣದ ಶೋಧನೆಗೂ ಆ ನಂತರ ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ಸ್ಥಾಪನೆಗೂ ಕಾರಣವಾಯಿತು. ವಿಶ್ವೇಶ್ವರಯ್ಯನವರು 1915ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಮಾತನಾಡುತ್ತಾ "ನಮ್ಮ ಖನಿಜ ಸಂಪನ್ಮೂಲಗಳನ್ನು ಬಳಸಿಕೊಳ್ಳಬೇಕಾಗಿದೆ. ಬಾಬಾಬುಡನ್ ಗಿರಿ ಶ್ರೇಣಿಯ ಕಬ್ಬಿಣದ ಅದಿರಿನ ನಿಕ್ಷೇಪವನ್ನು ಬಳಸಿಕೊಳ್ಳಲು ಅವಕಾಶವಿದೆ. ಮರದ ಇದ್ದಿಲನ್ನು ಉಪಯೋಗಿಸಿ ಕಬ್ಬಿಣದ ಅದಿರನ್ನು ಕರಗಿಸಿ ವಾಣಿಜ್ಯ ಪ್ರಮಾಣದಲ್ಲಿ ಕಬ್ಬಿಣವನ್ನು ಉತ್ಪಾದಿಸುವ ಸಮಸ್ಯೆ ಬಗೆಹರಿದರೆ ಇದು ಸಾಧ್ಯ"[343] ಎಂದು ಹೇಳುವ ಮೂಲಕ ಈ ಯೋಜನೆಗೆ ಅಧಿಕೃತ ಚಾಲನೆಯನ್ನು ಪಡೆದರು. ಬೃಹತ್ ಕಬ್ಬಿಣ ಕಾರ್ಖಾನೆ ಸ್ಥಾಪಿಸಲು ಬೇಕಾದ ಬಂಡವಾಳ, ತಂತ್ರಜ್ಞಾನ ಮತ್ತು ವ್ಯವಸ್ಥಾಪನೆಗಳ ಅಭಾವವಿತ್ತು. ಅದಕ್ಕಾಗಿ ಬೊಂಬಾಯಿಯ ಟಾಟಾ ಕಬ್ಬಿಣ ಮತ್ತು ಉಕ್ಕಿನ ಕಂಪನಿಯ ವ್ಯವಸ್ಥಾಪಕ ಮಂಡಳಿಯ ಸಲಹೆಯನ್ನು ಪಡೆಯಲಾಯಿತು. ಆ ಕಂಪನಿಯ ಜೆಮ್‌ಷೆಡ್‌ಪುರ ಕಾರ್ಖಾನೆಯಲ್ಲಿ ತಾಂತ್ರಿಕ ಸಲಹೆಗಾರರಾಗಿದ್ದ ಅಮೇರಿಕಾದ ಎಂಜಿನಿಯರ್ ಸಿ.ಪಿ. ಪೆರಿನ್‌ರವರನ್ನು 1916ರಲ್ಲಿ ಮೈಸೂರಿಗೆ ಕರೆಸಿ ಭದ್ರಾವತಿಯಲ್ಲಿ ಕಾರ್ಖಾನೆ ಸ್ಥಾಪಿಸಲು ಸ್ಥಳ ಪರಿಶೀಲನೆ ನಡೆಸಲಾಯಿತು. ಮೈಸೂರು ಪ್ರದೇಶದಲ್ಲಿ ಕಲ್ಲಿದ್ದಲು ದೊರೆಯದೇ ಇದ್ದುದರಿಂದ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಲ್ಲಿ ಮರದ ಇದ್ದಿಲನ್ನು ಇಂಧನವಾಗಿ ಬಳಸುವ ಪ್ರಯೋಗ ನಡೆಸಲಾಯಿತು. ಇಂತಹ ತಂತ್ರಜ್ಞಾನವನ್ನು ಅಮೇರಿಕಾದಲ್ಲಿ ಬಳಸಲಾಗಿತ್ತು. ಅದನ್ನು ಹೊರತುಪಡಿಸಿದರೆ ಜಪಾನ್‌ನಲ್ಲಿ ಮಾತ್ರ ಬಳಕೆಯಲ್ಲಿತ್ತು. ಟಾಟಾ ಕಂಪನಿಯೊಂದಿಗೆ ಮಾತುಕತೆಗೆ ಹೋದ ವಿಶ್ವೇಶ್ವರಯ್ಯನವರು ಆ ಸಭೆಯಲ್ಲಿ ಕಾರ್ಖಾನೆ ಸ್ಥಾಪನೆಯ ಉದ್ದೇಶವನ್ನು ವಿವರಿಸುತ್ತಾ "ಮಹಾರಾಜರ ಸರ್ಕಾರವು ಸಂಸ್ಥಾನದ ಕುಶಲತಜ್ಞರನ್ನು ತರಬೇತಿಗೊಳಿಸಲು ಹಾಗೂ ಪ್ರಾಂತದಲ್ಲಿರುವ ಕುಶಲ ತಜ್ಞರಿಗೆ ಉದ್ಯೋಗ ಒದಗಿಸಲು ಮತ್ತು ಹೂಡಿದ ಬಂಡವಾಳಕ್ಕೆ ಲಾಭಗಳಿಸಲು ಉದ್ದೇಶಿಸಿದೆ"[344] ಎಂದು ಹೇಳಿದರು. ಅಂದರೆ ನಾಲ್ವಡಿಯವರ ಪ್ರಕಾರ ಬೃಹತ್ ಕಾರ್ಖಾನೆಯ ಸ್ಥಾಪನೆಯೆಂದರೆ ಆ

*343. ವಿಶ್ವೇಶ್ವರಯ್ಯ ಎಂ., ಪೂರ್ವೋಕ್ತ, ಪು. 78*

*344. ಅದೇ.*

ಪ್ರದೇಶದ ಜನರಿಗೆ ತರಭೇತಿ, ಉದ್ಯೋಗಗಳನ್ನು ಒದಗಿಸುವ ಕೇಂದ್ರಗಳೇ ಆಗಿದ್ದವು. ಟಾಟಾ ಕಂಪನಿಯ ನೆರವಿನಿಂದ ಭದ್ರಾವತಿ ಕಾರ್ಖಾನೆ ಸ್ಥಾಪಿಸಲು ದಿವಾನರಾದ ವಿಶ್ವೇಶ್ವರಯ್ಯ ಪ್ರಯತ್ನಿಸಿದುದನ್ನು ಕೌನ್ಸಿಲ್ ಸದಸ್ಯ ಎ.ಆರ್. ಬ್ಯಾನರ್ಜಿ ಮತ್ತು ಮಹಾರಾಜರ ಆಪ್ತ ಕಾರ್ಯದರ್ಶಿಯಾಗಿದ್ದ ಆರ್.ಎಚ್. ಕ್ಯಾಂಬೆಲ್ ವಿರೋಧಿಸುತ್ತಿದ್ದರು. ಕೆಲಕಾಲ ಈ ಯೋಜನೆ ನೆನೆಗುದಿಗೆ ಬಿದ್ದಿತು. ಆದರೆ ಮಹಾರಾಜ ನಾಲ್ವಡಿಯವರು ಈ ಯೋಜನೆಯ ಬಗ್ಗೆ ಅತೀವ ಆಸಕ್ತಿ ಹೊಂದಿದ್ದು ತಮ್ಮ ಸರ್ಕಾರದ ಅಧಿಕಾರಿಗಳ ವಿರೋಧವನ್ನು ಲೆಕ್ಕಿಸದೆ 1918ರ ಮೇ ತಿಂಗಳಲ್ಲಿ ಅಂಗೀಕಾರ ನೀಡಿದರು[345]. ಈ ಕಾರ್ಖಾನೆಯು 1923ರವರೆಗೂ ಕುಂಟುತ್ತಾ ನಡೆಯಿತು. ಕೊನೆಗೆ 1923ರಲ್ಲಿ ಕಬ್ಬಿಣದ ಬೆಲೆ ಇಳಿತ ಮತ್ತು ಉತ್ಪಾದನಾ ವೆಚ್ಚ ಅಧಿಕವಾಗಿದ್ದರಿಂದ ಈ ಕಾರ್ಖಾನೆಯನ್ನು ಮುಚ್ಚುವಂತೆ ಅಮೇರಿಕಾದ ತಾಂತ್ರಿಕ ಸಲಹೆಗಾರರಾದ ಪೆರಿನ್ ಮತ್ತು ಮಾರ್ಷಲ್ ಸಲಹೆ ನೀಡಿದರು. ಮೈಸೂರಿನ ಪತ್ರಿಕೆಗಳು ಮತ್ತು ಸಾರ್ವಜನಿಕರು ಭದ್ರಾವತಿಯ ಕಾರ್ಖಾನೆಯನ್ನು 'ಬಿಳಿ ಆನೆ' ಎಂದು ಮೂದಲಿಸತೊಡಗಿದರು. ಆದರೆ ನಾಲ್ವಡಿಯವರು ಈ ಕಾರ್ಖಾನೆಯನ್ನು ಮುಚ್ಚುವ ಬದಲು ಅದನ್ನು ನಷ್ಟದಿಂದ ಹೊರತಂದು ಮುನ್ನಡೆಸಲು ಯೋಚಿಸಿದರು. ಅದಕ್ಕೆ ಸಮರ್ಥ ವ್ಯಕ್ತಿ ವಿಶ್ವೇಶ್ವರಯ್ಯನವರೇ ಎಂದು ನಿರ್ಧರಿಸಿ ಬೊಂಬಾಯಿಯಲ್ಲಿದ್ದ ಅವರನ್ನು ಮನವೊಲಿಸಿ ಆ ಕಾರ್ಖಾನೆಯ ಆಡಳಿತ ಮಂಡಳಿಯ ಅಧ್ಯಕ್ಷರನ್ನಾಗಿಸಿದರು[346]. ಅಧ್ಯಕ್ಷರಾದ ವಿಶ್ವೇಶ್ವರಯ್ಯನವರು ವಿದೇಶಿ ತಜ್ಞರ ಸ್ಥಾನದಲ್ಲಿ ಸ್ಥಳೀಯರನ್ನು ನೇಮಿಸುವ ಮೂಲಕ ಉತ್ಪಾದನಾ ವೆಚ್ಚವನ್ನು ತಗ್ಗಿಸುವ, ಸಿಬ್ಬಂದಿಯ ಕೆಲಸದ ದಕ್ಷತೆಯನ್ನು ಹೆಚ್ಚಿಸುವ ಮೂಲಕ, ಆಡಳಿತಾತ್ಮಕ ಸುಧಾರಣೆ ಮುಂತಾದ ಕ್ರಮಗಳಿಂದಾಗಿ ನಷ್ಟದಲ್ಲಿದ್ದ ಕಾರ್ಖಾನೆಯನ್ನು ಲಾಭದತ್ತ ನಡೆಸಿದರು. ಇಂತಹ ಉತ್ತಮ ಕಾರ್ಯ ಸಾಧನೆ ಮಾಡಿದ ವಿಶ್ವೇಶ್ವರಯ್ಯನವರನ್ನು ಕುರಿತು "ಕಬ್ಬಿಣದ ಕಾರ್ಖಾನೆ ಅತ್ಯುತ್ತಮವಾಗಿ ನಡೆಯುತ್ತಿದೆ ಎಂದು ತಿಳಿದಿದ್ದೇನೆ.... ನೀವು ಅಮೇರಿಕದ ಕೆಲಸಗಾರರನ್ನು ನಿವಾರಿಸಿ ನಮ್ಮ ಜನರಿಂದಲೇ ಸಮಗ್ರವಾಗಿ ಕಾರ್ಖಾನೆಯನ್ನು ನಡೆಸುತ್ತಿರುವುದು ಅವರನ್ನು ವಿಶೇಷವಾಗಿ ಬೆರಗುಗೊಳಿಸಿದೆ. ಇದು ರಾಜ್ಯ ಹೆಮ್ಮೆ ಪಡಬೇಕಾದ ಸಾಧನೆ" ಎಂದು ಪತ್ರದ ಮೂಲಕ ನಾಲ್ವಡಿಯವರು ಪ್ರಶಂಸಿಸಿದರು[347]. ಹೀಗೆ ಕೈಗಾರಿಕೆಗಳು, ಯಂತ್ರೋಪಕರಣಗಳಿಗೆ ಮೂಲ ಧಾತುವಾಗಿದ್ದ ಕಬ್ಬಿಣ ಮತ್ತು ಉಕ್ಕಿನ ಉತ್ಪಾದನೆಗೆ ನಾಲ್ವಡಿಯವರು ಆದ್ಯ ಗಮನ ನೀಡಿದ್ದರಿಂದ ಭದ್ರಾವತಿಯ ಕಾರ್ಖಾನೆ ಉಳಿಯುವಂತಾಯಿತು. ಹಾಗಾಗಿ 1940ರ ವೇಳೆಗೆ ಮೈಸೂರು ರಾಜ್ಯವು 30,298 ಟನ್ ಉಕ್ಕನ್ನು ಉತ್ಪಾದಿಸುವ ಮಟ್ಟಕ್ಕೆ ಬೆಳೆಯುವಂತಾಯಿತು[348]. ಈ ಕಾರ್ಖಾನೆಯ ಬೆಳವಣಿಗೆಯನ್ನು ಕುರಿತು ಗಾಂಧೀಜಿಯವರು ತಮ್ಮ 'ಯಂಗ್ ಇಂಡಿಯಾ' (1-9-1927) ಪತ್ರಿಕೆಯಲ್ಲಿ "ಇದು ರಾಜ್ಯಕ್ಕೆ ಪ್ರತಿ ವರ್ಷ ಹತ್ತು ಲಕ್ಷ ರೂಪಾಯಿಗಳ

---

345. *ಸ್ಟ್ಯಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ಆಫ್ ಮೈಸೂರ್, ಪು. 39*

346. *ವಿಶ್ವೇಶ್ವರಯ್ಯ ಎಂ., ಪೂರ್ವೋಕ್ತ, ಪು. 93*

347. *ಜಯಪ್ಪಗೌಡ ಡಿ. ಎಸ್., ಪೂರ್ವೋಕ್ತ, ಪು. 161*

348. *ಸ್ಟ್ಯಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ಆಫ್ ಮೈಸೂರ್, 1923-24 ಟು 1947-48, ಬೆಂಗಳೂರು, 1951, ಪು. 141*

ಆದಾಯ ತರುತ್ತಿದೆ ಮತ್ತು ಐದು ಸಾವಿರ ಜನರಿಗೆ ಉದ್ಯೋಗ ಒದಗಿಸಿದೆ. ಅದರ ಮೂಲಕರ್ತೃ ಮೈಸೂರಿಗರು. ಅದರ ಸಿಬ್ಬಂದಿ ಮತ್ತು ಕಾರ್ಮಿಕರು ಬಹುಮಟ್ಟಿಗೆ ಮೈಸೂರಿಗರು. ಹೆಚ್ಚೆಂದರೆ ದಕ್ಷಿಣ ಭಾರತೀಯರು ಈ ಸಂಗತಿ ನಿಮಗೂ ಮತ್ತು ಭಾರತಕ್ಕೂ ಹೆಮ್ಮೆ ತರುವಂತಹದಾಗಿದೆ"[349] ಎಂದು ಪ್ರಶಂಸಿಸಿ ಬರೆದರು. ಹೀಗೆ ನಾಲ್ವಡಿಯವರು ಕಬ್ಬಿಣ ಮತ್ತು ಉಕ್ಕಿನ ಉತ್ಪಾದನೆಯ ಮಹತ್ವವನ್ನು ಗುರುತಿಸಿದ್ದು ಮುಂದಿನ ಮೈಸೂರಿನ ದೇಶೀಯ ಕೈಗಾರಿಕೆಗಳ ಅಭಿವೃದ್ಧಿಗೆ ಮೂಲ ಸ್ಫೂರ್ತಿಯಾಯಿತು.

***ದೇಶೀಯ ಕೈಗಾರಿಕೆಗಳಲ್ಲಿ ಆಧುನಿಕತೆ***

ನಾಲ್ವಡಿಯವರು ದೇಶದ ಸಂಪತ್ತಿನ ಅಭಿವೃದ್ಧಿಗೆ ಬೃಹತ್ ಕೈಗಾರಿಕೆಗಳು ಅವಶ್ಯಕವೆಂದೂ; ಅವು ಪಾಶ್ಚಿಮಾತ್ಯ ನಾಗರಿಕತೆಯ ಹೆಗ್ಗುರುತುಗಳೆಂದೂ ಹೇಳುತ್ತಾ ಬೃಹತ್ ಕೈಗಾರಿಕೆಗಳ ಸ್ಥಾಪನೆಯನ್ನು ಪ್ರತಿಪಾದಿಸಿದರು ಮತ್ತು ರಾಜ್ಯದಲ್ಲಿ ಅನೇಕ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸಿದರು. ಹಾಗೆಯೇ ದೇಶೀಯ ಗೃಹ ಕೈಗಾರಿಕೆಗಳು, ಉತ್ಪಾದನೋದ್ಯಮಗಳು ಮತ್ತು ಕುಶಲಕಲೆಗಳಲ್ಲಿ ಆಧುನಿಕವಾದ ತಾಂತ್ರಿಕ ಮತ್ತು ವೈಜ್ಞಾನಿಕ ಅಂಶಗಳನ್ನು ಅಳವಡಿಸಿಕೊಂಡು ಪಾಶ್ಚಿಮಾತ್ಯ ಕೈಗಾರಿಕಾ ದೇಶಗಳ ಪೈಪೋಟಿಯನ್ನೆದುರಿಸಿ ನಿಲ್ಲುವಂತಾಗಲು ಅನೇಕ ಕ್ರಮಗಳನ್ನು ಕೈಗೊಂಡರು. ನಾಲ್ವಡಿಯವರು ಮದ್ರಾಸ್‌ನಲ್ಲಿ ನಡೆದ "ಇಂಡಸ್ಟ್ರಿಯಲ್ ಅಂಡ್ ಆರ್ಟ್ಸ್ ಎಕ್ಸಿಬಿಷನ್"ನ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡುತ್ತಾ ಅವರಿಗೆ ದೇಶೀಯ ಕಲೆ ಮತ್ತು ಕುಶಲತೆಗಳ ಬಗ್ಗೆ ಆಸಕ್ತಿಯಿರುವಂತೆ ಪಾಶ್ಚಿಮಾತ್ಯ ಮೂಲದ ಪ್ರಗತಿಪರ ಉದ್ಯಮಶೀಲತೆಯ ಬಗ್ಗೆಯೂ ಅಭಿಮಾನವಿರುವುದಾಗಿ ಹೇಳಿದರು[350]. ಹಾಗೆಯೇ "ಪ್ರಾಚೀನ ಕಾಲದಿಂದ ಪ್ರಸಿದ್ಧವಾದ ದೇಶೀಯ ಕೈಗಾರಿಕೆಗಳು ಅವನತಿಯತ್ತ ಸಾಗುತ್ತಿವೆ. ಅವುಗಳು ಉತ್ಪಾದಿಸಿದ ಬಟ್ಟೆಗೆ ಭಾರತ ಒಂದು ಕಾಲದಲ್ಲಿ ಪ್ರಪಂಚದಲ್ಲೇ ಹೆಸರಾಗಿತ್ತು. ಆದರೆ ಇಂದು ಅವುಗಳ ಜಾಗದಲ್ಲಿ ಪಾಶ್ಚಿಮಾತ್ಯ ದೇಶಗಳ ಯಾಂತ್ರೀಕೃತ ಮಗ್ಗಗಳ ಬಟ್ಟೆಗಳು ಆವರಿಸಿವೆ. ನಮ್ಮ ಕೈಗಾರಿಕೆಗಳು ಅವುಗಳೊಂದಿಗೆ ದೇಶೀಯ ಅಥವಾ ವಿದೇಶಿ ಮಾರುಕಟ್ಟೆಗಳಲ್ಲಿ ಯಶಸ್ವಿಯಾಗಿ ಸ್ಪರ್ಧಿಸಲಾಗುತ್ತಿಲ್ಲ. ಇದಕ್ಕೆ ಕಾರಣ ನಮ್ಮ ಕುಶಲಕಾರ್ಮಿಕರು ಬಹು ಹಳೆಯ ವಿಧಾನಗಳನ್ನು ಉತ್ಪಾದನೆಯಲ್ಲಿ ಅನುಸರಿಸುತ್ತಿರುವುದೇ ಕಾರಣವಾಗಿದೆ. ಇದರಿಂದ ಹೊರಬರಬೇಕೆಂದರೆ ಕುಶಲ ಕರ್ಮಿಗಳು ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು"[351] ಎಂದು ಹೇಳಿದರು. ಅದೇ ಸಮಾರಂಭದಲ್ಲಿ ನಾಲ್ವಡಿಯವರು "ಕಾಲಕಾಲಾಂತರದಿಂದ ಪ್ರಸಿದ್ಧಿ ಪಡೆದಿರುವ ಭಾರತದ ಕುಶಲ ಕಲೆಗಳು ವಂಶಪಾರಂಪರ್ಯ

---

349. *ನಾರಾಯಣರಾವ್ ವಿ.ಎಸ್., ಮೋಕ್ಷಗುಂಡ ವಿಶ್ವೇಶ್ವರಯ್ಯ, ಪು. 98-99*

350. *ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 18*

351. *ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 19-20*

ವೃತ್ತಿದಾರರ ಮೂಲಕ ಇನ್ನೂ ಉಳಿದುಕೊಂಡಿವೆ. ಆದರೆ ಅದರ ಮುಂದಿನ ಉಳಿವಿಗೆ ಆಧುನಿಕ ಜ್ಞಾನದ ಬೆಳಕನ್ನು ಅಳವಡಿಸಿಕೊಳ್ಳಬೇಕು" ಎಂದು ಹೇಳಿದರು[352]. ಆಧುನಿಕ ಪ್ರಪಂಚದ ಪೈಪೋಟಿಯಲ್ಲಿ ಸಾಂಪ್ರದಾಯಿಕ ಕಸುಬುಗಳು, ಕೈಗಾರಿಕೆಗಳು ಉಳಿಯಬೇಕೆಂದರೆ ಆಧುನಿಕ ಜ್ಞಾನವನ್ನು ಅಳವಡಿಸಿಕೊಳ್ಳುವ, ಆ ಮೂಲಕ ಶಕ್ತಗೊಳ್ಳುವುದೇ ಶಾಶ್ವತ ಪರಿಹಾರವೆಂದು ಭಾವಿಸಿದ್ದರು.

ಮೈಸೂರು ರಾಜ್ಯದಲ್ಲಿ ಕೃಷಿಯ ನಂತರದ ಪ್ರಮುಖ ಆರ್ಥಿಕ ಕ್ಷೇತ್ರವೆಂದರೆ ನೇಯ್ಗೆ ಉದ್ಯಮ. ರಾಜ್ಯದಲ್ಲಿ ಉತ್ತಮ ಸಾರಿಗೆ ಸಂಪರ್ಕ ಅಭಿವೃದ್ಧಿಗೊಂಡಿದ್ದರಿಂದ ರಾಜ್ಯದಾದ್ಯಂತ ನೆಲೆಗೊಂಡಿದ್ದ ಕೈಮಗ್ಗಗಳಿಗೆ ಕಡಿಮೆ ಬೆಲೆ ಮತ್ತು ಸುಲಭವಾಗಿ ಕಚ್ಚಾಪದಾರ್ಥಗಳನ್ನು ಪೂರೈಸಲು ಸಾಧ್ಯವಾಯಿತು. ಯಾಂತ್ರೀಕೃತ ಮಗ್ಗಗಳ ಪೈಪೋಟಿಯ ನಡುವೆಯೂ ಕೈಮಗ್ಗಗಳ ನೇಯ್ಗೆ ಚಟುವಟಿಕೆಯು ಹೆಚ್ಚು ಜನರಿಗೆ ಉದ್ಯೋಗವನ್ನು ಮತ್ತು ಹೆಚ್ಚು ಉತ್ಪಾದನೆಯನ್ನು ನೀಡುತ್ತಿತ್ತು. ಬಟ್ಟೆ ಉತ್ಪಾದನೆಯ ಒಟ್ಟು ಮೌಲ್ಯ ಒಂದು ಕೋಟಿ ರೂಪಾಯಿಗಳಿಗೂ ಹೆಚ್ಚಿದ್ದು ಸ್ಥಳೀಯ ಬೇಡಿಕೆಯ ¾ ಭಾಗವನ್ನು ಪೂರೈಸುತ್ತಿತ್ತು. ರಾಜ್ಯದಾದ್ಯಂತ 30,000ಕ್ಕೂ ಹೆಚ್ಚು ಕೈಮಗ್ಗಗಳಿದ್ದು ಹತ್ತಿ ಬಟ್ಟೆಯನ್ನು ಉತ್ಪಾದಿಸುತ್ತಿದ್ದವು. ಹಾಗೆಯೇ ಹೆಚ್ಚಿನ ಸಂಖ್ಯೆಯ ಕೈಮಗ್ಗಗಳಲ್ಲಿ ರೇಷ್ಮೆ ಮತ್ತು ಉಣ್ಣೆ ವಸ್ತುಗಳನ್ನು ಉತ್ಪಾದಿಸಲಾಗುತ್ತಿತ್ತು[353]. ಮೈಸೂರಿನ ಪ್ರಮುಖ ಕೈಗಾರಿಕೆಯಾದ ನೇಯ್ಗೆ ಉದ್ಯಮದಲ್ಲಿ ಆಧುನಿಕವಾದ ಫ್ಲೈ-ಷಟಲ್ (Fly-shuttle) ಗಳನ್ನು ಅಳವಡಿಸಿಕೊಳ್ಳಬೇಕೆಂದು ನಾಲ್ವಡಿಯವರು ಭಾಷಣವೊಂದರಲ್ಲಿ ಹೀಗೆ ಹೇಳಿದರು. "ಭಾರತದ ಬೊಂಬಾಯಿ ಪ್ರಾಂತ್ಯದಲ್ಲಿ ನೇಯ್ಗೆಯಲ್ಲಿ ಹಲವು ಪ್ರಮುಖ ಸುಧಾರಣೆಗಳನ್ನು ದೇಶೀಯ ಮಗ್ಗಗಳಲ್ಲಿ ಅಳವಡಿಸಿಕೊಳ್ಳಲಾಗಿದೆ. ಬಂಗಾಳ ಮತ್ತು ಮದ್ರಾಸ್‌ಗಳಲ್ಲಿ ನೇಯ್ಗೆಯಲ್ಲಿ ಫ್ಲೈ-ಷಟಲ್‌ಗಳನ್ನು ಬಳಸುವ ಜ್ಞಾನವನ್ನು ವ್ಯವಸ್ಥಿತವಾಗಿ ಪ್ರಸರಿಸಲು ಪ್ರಯತ್ನ ಮಾಡಲಾಗುತ್ತಿದೆ. ಬೆಂಗಳೂರಿನಲ್ಲಿ ಟಾಟಾರವರ ನೇತೃತ್ವದಲ್ಲಿ ರೇಷ್ಮೆ ನೂಲಿನ ಕೈಗಾರಿಕೆಯೊಂದು ಹಂತಹಂತವಾಗಿ ಬೆಳವಣಿಗೆಗೊಳ್ಳುತ್ತಿದೆ[354] ಎಂಬುದಾಗಿ ಹೊರ ಪ್ರಾಂತ್ಯಗಳಲ್ಲಾಗುತ್ತಿದ್ದ ಬೆಳವಣಿಗೆಗಳ ಬಗ್ಗೆ ಸಂಸ್ಥಾನದ ಜನತೆಗೆ ತಿಳುವಳಿಕೆ ನೀಡುತ್ತಿದ್ದರಲ್ಲದೇ ನಾಲ್ವಡಿಯವರು ತಮ್ಮ ಸರ್ಕಾರದ ಮೂಲಕ ಎಲ್ಲಾ ನೆರವು ನೀಡಿ 1928 ರ ವೇಳೆಗೆ ರಾಜ್ಯದಲ್ಲಿನ 4/5 ಭಾಗದ ಹತ್ತಿ ಮತ್ತು ರೇಷ್ಮೆ ಬಟ್ಟೆಯನ್ನು ನೂಲುವ ಕೈಮಗ್ಗಗಳಿಗೆ ಆಧುನಿಕವಾದ ಫ್ಲೈ-ಷಟಲ್‌ಗಳನ್ನು ಅಳವಡಿಸಿಕೊಳ್ಳುವ ವ್ಯವಸ್ಥೆ ಮಾಡಿಸಿದರು[355]. ಹತ್ತಿಬಟ್ಟೆ ನೇಯ್ಗೆಯ ಕೈಮಗ್ಗಗಳು ಪ್ರಮುಖವಾಗಿ ಮೈದಾನ ಪ್ರದೇಶಗಳಲ್ಲಿ ನೆಲೆಗೊಂಡಿದ್ದವು. ಅದರಲ್ಲೂ ಬೆಂಗಳೂರು ಜಿಲ್ಲೆಯಲ್ಲಿ

---

*352. ಅದೇ., ಪು. 24*

*353. ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಪು. 238*

*354. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 23*

*355. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 239*

ಶೇಕಡಾ 40 ರಷ್ಟು ಕೈಮಗ್ಗಗಳಿದ್ದವು. ನೇಯ್ಗೆಗಾರರು ಅಶಿಕ್ಷಿತರು, ಅಜ್ಞಾನಿಗಳೂ ಮತ್ತು ಸಂಪ್ರದಾಯವಾದಿಗಳಾಗಿದ್ದರು. ಹೊಸ ವಿಧಾನಗಳನ್ನು ಅವರ ಗಮನಕ್ಕೆ ತಂದರೂ ಸಹ ತಕ್ಷಣಕ್ಕೆ ಅಳವಡಿಸಿಕೊಳ್ಳುತ್ತಿರಲಿಲ್ಲ. ಆದರೂ ನಾಲ್ವಡಿಯವರ ಸರ್ಕಾರವು ನೇಯ್ಗೆ ಉದ್ಯಮವನ್ನು ಅಭಿವೃದ್ಧಿಗೊಳಿಸಲು ಹಲವಾರು ಕ್ರಮಗಳನ್ನು ಕೈಗೊಂಡಿತು. ಅದರಲ್ಲಿ ಪ್ರಮುಖವಾದುದು ಫ್ಲೈ-ಷಟಲ್‌ಗಳನ್ನು ದೇಶೀಯ ಮಗ್ಗಗಳಿಗೆ ಅಳವಡಿಸಿದ್ದು. ಹಾಗೆಯೇ ಯಾಂತ್ರೀಕೃತ ಮಿಲ್ಲುಗಳಲ್ಲಿ ಉತ್ಪಾದನೆಗೊಂಡ ನೂಲನ್ನು ಒದಗಿಸಿದ್ದು ಮತ್ತು ನೇಯ್ಗೆಗಾರರನ್ನು ಮಧ್ಯವರ್ತಿಗಳಿಂದ ತಪ್ಪಿಸಲು ಅನೇಕ ಕ್ರಮಗಳನ್ನು ಕೈಗೊಂಡಿತು[356].

ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಬ್ರಿಟಿಷ್ ಇಂಡಿಯಾ ಮತ್ತು ಅನೇಕ ಸಂಸ್ಥಾನಗಳಲ್ಲಿ ಖಾದಿ ಉತ್ಪಾದನೆಗೆ ಮತ್ತು ಪ್ರಚಾರಕ್ಕೆ ಪ್ರೋತ್ಸಾಹವಿಲ್ಲದಂತಹ ಸಂದರ್ಭದಲ್ಲೂ ನಾಲ್ವಡಿಯವರು ದೇಶಾಭಿಮಾನ ಮತ್ತು ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲೊಂದಾದ ಖಾದಿಯನ್ನು ಬೆಂಬಲಿಸಲು 1927ರಲ್ಲಿ ಬದನವಾಳು ಎಂಬಲ್ಲಿ ಖಾದಿ ಕಾರ್ಯಾಲಯವೊಂದನ್ನು ಸ್ಥಾಪಿಸಿದರು. ಆ ಮೂಲಕ ನೂಲುವ ಮತ್ತು ನೇಯುವ ಉದ್ಯಮವನ್ನು ಪ್ರಚುರಿಸಲಾಯಿತು. ಬಡ ರೈತರು ತಮ್ಮ ವಿರಾಮ ಕಾಲದಲ್ಲಿ ಖಾದಿಯಂತಹ ಉಪಪ್ರವೃತ್ತಿಯನ್ನು ಕೈಗೊಳ್ಳಲು ಪ್ರೋತ್ಸಾಹಿಸಲಾಯಿತು[357]. 1939ರಲ್ಲಿ ಬದನವಾಳುವಿನಲ್ಲಿ ಖಾದಿ ಉತ್ಪಾದನಾ ಕಾರ್ಯದ ಜೊತೆಗೆ ಕೈ ಕಾಗದ, ಬೆಂಕಿಪೊಟ್ಟಣ, ಗ್ರಾಮೀಣ ಎಣ್ಣೆ ಉದ್ಯಮ, ಚರ್ಮಗಾರಿಕೆ ಮುಂತಾದ ಗ್ರಾಮೋದ್ಯೋಗಗಳನ್ನು ಕೈಗೊಳ್ಳುವವರಿಗೆ ಸಹ ನೆರವು ನೀಡಲಾಯಿತು[358].

ಮೈಸೂರು ರಾಜ್ಯದ ಮತ್ತೊಂದು ಪ್ರಸಿದ್ಧ ಉದ್ಯಮವೆಂದರೆ ರೇಷ್ಮೆ ಉದ್ಯಮ. ಈ ಉದ್ಯಮವು ಸುಮಾರು ಎರಡು ಲಕ್ಷ ಕುಟುಂಬಗಳಿಗೆ ಉದ್ಯೋಗ ನೀಡಿತ್ತು. 1915 ರ ನಂತರ ಜಪಾನ್ ಮುಂತಾದ ದೇಶಗಳಿಂದ ಬಂದ ಮಿತಿಮೀರಿದ ಪೈಪೋಟಿಯನ್ನು ಎದುರಿಸಲಾರದೆ ಮೈಸೂರಿನ ರೇಷ್ಮೆ ಉದ್ಯಮ ಜರ್ಝರಿತಗೊಂಡಿತು. ರೇಷ್ಮೆ ಬೆಳೆಯ ಅಭಿವೃದ್ಧಿಗೆ ಸರ್ಕಾರವು ಹಿಪ್ಪನೇರಳೆ ಕಡ್ಡಿಗಳನ್ನು ಉಚಿತವಾಗಿ ನೀಡುವುದು, ರೋಗರಹಿತ ರೇಷ್ಮೆ ಮೊಟ್ಟೆಗಳನ್ನು ಒದಗಿಸುವುದು ಮುಂತಾದ ಕ್ರಮಗಳನ್ನು ಕೈಗೊಂಡಿತು. ಅಲ್ಲದೆ ರೇಷ್ಮೆಗೂಡನ್ನು ಬಿಚ್ಚಿ ನೂಲನ್ನು ತೆಗೆಯುವ ವಿಧಾನದಲ್ಲಿ ಹಳೆಯ 'ಚರಕ'ವೆಂಬ ರಾಟೆಯಿಂದ ಬಿಚ್ಚುವ ವಿಧಾನಕ್ಕೆ ಬದಲಾಗಿ 'ಫಿಲೇಚರ್' ಯಂತ್ರಗಳನ್ನು ಅಳವಡಿಸಿ ಶುದ್ಧವಾದ ರೇಷ್ಮೆ ನೂಲನ್ನು ತೆಗೆಯುವ ವಿಧಾನವನ್ನು ಅಳವಡಿಸಿಕೊಳ್ಳಲು ಪ್ರೋತ್ಸಾಹಿಸಲಾಯಿತು. ಇಂತಹ ಶುದ್ಧ

---

*356. **ಅದೇ.**, ಪು. 240-241*

*357. **ವೆಂಕಟರಾಮಯ್ಯ ಸಿ. ಕೆ.**, ಪೂರ್ವೋಕ್ತ, ಪು. 322-323*

*358. **ಸುರೇಶ್ ಎ.ಎಸ್.**, ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿ ನಾಯಕತ್ವದ ಕಾಂಗ್ರೆಸ್‌ನ ರಚನಾತ್ಮಕ ಕಾರ್ಯಕ್ರಮಗಳು - ಒಂದು ಅಧ್ಯಯನ (1920-1948), ಅಪ್ರಕಟಿತ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಪು. 55*

*359. **ವೆಂಕಟರಾಮಯ್ಯ ಸಿ. ಕೆ.**, ಪೂರ್ವೋಕ್ತ, ಪು. 332*

ರೇಷ್ಮೆಯು 'ಫಿಲೇಚರ್' ಯಂತ್ರಗಳಲ್ಲಿ ತಯಾರಾದುದಕ್ಕೆ ವಿಶ್ವದಾದ್ಯಂತ ಅಪಾರ ಬೇಡಿಕೆ ಬಂದಿತು[359].

ಮೈಸೂರಿನ ಅತ್ಯಂತ ವಿಶಿಷ್ಟವಾದ ಮತ್ತೊಂದು ಕುಶಲಕಲೆಯೆಂದರೆ ಶ್ರೀಗಂಧದ ಮರದಲ್ಲಿ ಕೆತ್ತನೆ ಮಾಡುವುದು. ಈ ಕಲೆಯಲ್ಲಿ ನಿಷ್ಣಾತರಾಗಿದ್ದ ವರ್ಗವೆಂದರೆ ಗುಡಿಗಾರರು. ಇವರು ಪ್ರಮುಖವಾಗಿ ಹಿಂದೂ ದೇವತಾ ಮೂರ್ತಿಗಳು, ಪ್ರಾಣಿಗಳು, ಬಾಚಣಿಗೆ, ಬೀಸಣಿಗೆ, ಪೆಟ್ಟಿಗೆಗಳು, ಚಿತ್ರಪಟಗಳು ಮೊದಲಾದ ಕಲಾಕೃತಿಗಳನ್ನು ತಯಾರಿಸುತ್ತಿದ್ದರು. ಇವರ ಹೆಚ್ಚಿನ ಉತ್ಪನ್ನಗಳನ್ನು ಸರ್ಕಾರಿ ಡಿಪೋಗಳ ಮೂಲಕ ಮಾರಾಟ ಮಾಡುವ ವ್ಯವಸ್ಥೆ ಮಾಡಲಾಯಿತು. ಅಲ್ಲದೆ ಅವರೇ ಸಂಘಟಿತರಾಗಿ ಬಂಡವಾಳ ರೂಪಿಕೆ ಮತ್ತು ಮಾರಾಟದಲ್ಲಿ ತೊಡಗುವಂತೆ ಮಾಡಲು ಸಹಕಾರಿ ತತ್ವದ ಮೇಲೆ ಸಹಕಾರಿ ಸಂಘಗಳನ್ನು ಸ್ಥಾಪಿಸಿಕೊಳ್ಳುವಂತೆ ಪ್ರೋತ್ಸಾಹಿಸಲಾಯಿತು. ಹಾಗೆಯೇ ದಂತ, ಮರಗಳಲ್ಲಿ ಹುದುಗು ಕೆತ್ತನೆ ಕೆಲಸ ಮಾಡುತ್ತಿದ್ದ ಮುಸ್ಲಿಂ ಕುಶಲ ಕರ್ಮಿಗಳಿಗೆ ಸರ್ಕಾರವೇ ಮೂಲ ಕಚ್ಚಾವಸ್ತುಗಳಾದ ದಂತ ಮತ್ತು ಮರ ಅಥವಾ ಹಣವನ್ನು ಮುಂಗಡವಾಗಿ ನೀಡಿ ಸಿದ್ಧಗೊಂಡ ವಸ್ತುಗಳನ್ನು ಕೇಂದ್ರೀಯ ಡಿಪೋ ಮೂಲಕ ಮಾರಾಟ ಮಾಡುವ ವ್ಯವಸ್ಥೆ ಮಾಡಿತು[360].

ಮರಕೊಯ್ಯುವ ಉದ್ಯಮದಲ್ಲಿ ಯಾಂತ್ರೀಕೃತ ಮಿಲ್ಲುಗಳ ಸ್ಥಾಪನೆಗೆ ಪ್ರೋತ್ಸಾಹ ನೀಡಲಾಯಿತು. ಬೆಂಗಳೂರಿನ ಸುತ್ತಮುತ್ತಲು ಅನೇಕ ಪೀಠೋಪಕರಣ ತಯಾರಿಕಾ ಘಟಕಗಳು ಕಾರ್ಯನಿರ್ವಹಿಸುತ್ತಿದ್ದವು. ಇಲ್ಲಿ ಇಂಗ್ಲಿಷ್ ಡಿಸೈನ್‌ನ ಪೀಠೋಪಕರಣಗಳನ್ನು ಹೆಚ್ಚಾಗಿ ತಯಾರಿಸಲಾಗುತ್ತಿತ್ತು[361]. ನಾಲ್ವಡಿಯವರು ದಸರಾ ಕೈಗಾರಿಕಾ ಮತ್ತು ಕೃಷಿ ವಸ್ತು ಪ್ರದರ್ಶನದಲ್ಲಿ ಮಾತನಾಡುತ್ತಾ ಕುಶಲಕರ್ಮಿಗಳು ದೇಶೀಯ ವಿನ್ಯಾಸ ಮತ್ತು ಅವಶ್ಯಕತೆಗೆ ತಕ್ಕಂತೆ ಪೀಠೋಪಕರಣಗಳನ್ನು ಉತ್ಪಾದಿಸಿ ಎಂದು ಈ ಕೆಳಕಂಡಂತೆ ಸಲಹೆ ನೀಡಿದರು "ವಸ್ತು ಪ್ರದರ್ಶನದಲ್ಲಿ ಅನೇಕ ವಿಧದ ಯೂರೋಪಿಯನ್ ಪೀಠೋಪಕರಣಗಳನ್ನು ಪ್ರದರ್ಶಿಸಲಾಗಿದೆ. ಆದರೆ ನಾನು ನೋಡಲು ಬಯಸುವುದೆಂದರೆ ನಮ್ಮ ವಿನ್ಯಾಸಕಾರರು ಮತ್ತು ಕುಶಲಕರ್ಮಿಗಳು ತಮ್ಮ ಬುದ್ಧಿಶಕ್ತಿಯನ್ನು ಉಪಯೋಗಿಸಿ ಅವುಗಳನ್ನು ಅಭಿವೃದ್ಧಿಗೊಳಿಸಿ, ಆದರ್ಶೀಕರಿಸಿ ಮಧ್ಯಮವರ್ಗದ ಮೈಸೂರಿಗರಿಗೆ ಇಷ್ಟವಾಗುವಂತೆ ರೂಪಿಸಿ; ಅವುಗಳ ಮನೋಹರತೆ ಮತ್ತು ಉತ್ತಮ ಅಭಿರುಚಿಗಳನ್ನು ಸಂಯೋಜಿಸಿಕೊಂಡು ಭಾರತೀಯ ಕುಟುಂಬಗಳ ಅವಶ್ಯಕತೆ ಮತ್ತು ಅನುಕೂಲಕ್ಕೆ ತಕ್ಕಂತೆ ರೂಪಿಸಿ"[362]. ನಾಲ್ವಡಿಯವರು ಕೆತ್ತನೆಯ ಕಲೆಯಲ್ಲಿ ಪಾಶ್ಚಿಮಾತ್ಯ ವಿಜ್ಞಾನ ಮತ್ತು ತಾಂತ್ರಿಕತೆಯನ್ನು ಅಳವಡಿಸಿಕೊಳ್ಳಲು ಆಶಿಸಿದ್ದರೇ ಹೊರತು ಸಂಪೂರ್ಣವಾಗಿ ಪಾಶ್ಚಿಮಾತ್ಯೀಕರಣಗೊಳಿಸುವುದಕ್ಕಲ್ಲ ಎಂಬುದು ಮೇಲ್ಕಂಡ ಅವರ ಮಾತಿನಿಂದ ಸ್ಪಷ್ಟವಾಗುತ್ತದೆ. ಮೈಸೂರಿನ ದೇಶೀಯ ಕೈಗಾರಿಕೆಗಳಲ್ಲಿ ಮತ್ತೊಂದು

---

*360. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 255-257*

*361. ಅದೇ., ಪು. 26*

*362. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 300*

ಪ್ರಮುಖವಾದುದೆಂದರೆ ಅರಗಿನ ಬಣ್ಣದ ವಸ್ತುಗಳನ್ನು ತಯಾರು ಮಾಡುವ ಉದ್ಯಮ. ಈ ಉದ್ಯಮವು ಚನ್ನಪಟ್ಟಣದಲ್ಲಿ ಕೇಂದ್ರೀಕೃತವಾಗಿದ್ದು ಚಿತ್ರಗಾರರು ಎಂಬ ಜನ ಆ ಉದ್ಯಮದಲ್ಲಿ ತೊಡಗಿಕೊಂಡಿದ್ದರು. ಹಳೆ ಎಂಬ ಮರವನ್ನು ವಿವಿಧ ಆಕಾರಗಳಿಗೆ ಕತ್ತರಿಸಲು ಈ ಜನ ಬೌಲೇಥ್ (ಬಿಲ್ಲಿನಾಕಾರದ ಚರಕಿ ಯಂತ್ರ) ಅನ್ನು ಬಳಸಿ, ಕತ್ತರಿಸಿ ವಿವಿಧ ಆಕಾರಗಳನ್ನು ಮೂಡಿಸಿದ ಮೇಲೆ ವಿವಿಧ ಬಣ್ಣದ ಅರಗನ್ನು ಲೇಪನ ಮಾಡಿ ಬೌ-ಲೇಥ್‌ನಿಂದ ಒತ್ತಿದಾಗ ಪದಾರ್ಥಗಳ ಮೇಲೆ ವಿವಿಧ ಬಣ್ಣಗಳು ಮೂಡುತ್ತಿದ್ದವು[363]. ನಾಲ್ವಡಿಯವರು ಈ ಪಾರಂಪರಿಕ ಕಸುಬಿನಲ್ಲಿ ಆಧುನಿಕತೆಯನ್ನು ತರುವ ಪ್ರಯತ್ನ ಮಾಡಿದರು. ನಾಲ್ವಡಿಯವರು ಮದ್ರಾಸ್ ಕೈಗಾರಿಕಾ ಮತ್ತು ಕಲಾವಸ್ತು ಪ್ರದರ್ಶನದಲ್ಲಿ ಹೇಳಿದಂತೆ "ಪರಂಪರಾನುಗತವಾಗಿ ವೃತ್ತಿದಾರರಾಗಿರುವವರಿಗೆ ಮತ್ತು ಆಸಕ್ತಿ ಹೊಂದಿರುವವರಿಗೆ ಅವರ ಕ್ಷೇತ್ರಕ್ಕೆ ಸಂಬಂಧಿಸಿದ ಆಧುನಿಕ ಜ್ಞಾನ ಮತ್ತು ತಾಂತ್ರಿಕತೆಯನ್ನು ಒದಗಿಸಿದರೆ ಅವರ ವೃತ್ತಿಯಲ್ಲಿ ಪ್ರಾವೀಣ್ಯತೆ ಮತ್ತು ಕಾರ್ಯಶೀಲತೆ ಸಾಧಿಸಲು ನೆರವಾಗುವುದು. ಹಾಗೆಯೇ ಪ್ರಸಿದ್ಧ ಭಾರತೀಯ ಕುಶಲ ಕಲೆಗಳಲ್ಲಿ ಸುಧಾರಣೆಯನ್ನು ತರಲು ಕೈಗಾರಿಕಾ ತರಭೇತಿಯಂತಹ ಮಾರ್ಗಗಳನ್ನು ಅನುಸರಿಸಬೇಕು"[364] ಎಂಬುದಾಗಿ ಆ ವರ್ಗದ ಕುಶಲಕರ್ಮಿಗಳಲ್ಲಿದ್ದ ಶಿಕ್ಷಣದ ಕೊರತೆಯನ್ನು ಗುರುತಿಸಿ, ಆ ಕೊರತೆಯನ್ನು ನೀಗಿಸುವಲ್ಲಿ ಅವಶ್ಯಕವಾದ ಕಾರ್ಯಯೋಜನೆಯನ್ನು ರೂಪಿಸುವಲ್ಲಿ ಮುಂದಾದರು.

ಮೇಲ್ಕಂಡ ಭಾಷಣದ ಹೇಳಿಕೆಯಂತೆ ಬಣ್ಣದ ಅರಗಿನ ವಸ್ತುಗಳ ಉತ್ಪಾದನೆಯಲ್ಲಿ ತೊಡಗಿದ್ದವರಿಗೆ ಮತ್ತು ಆ ಉದ್ಯಮದಲ್ಲಿ ಆಸಕ್ತಿ ಹೊಂದಿದ್ದವರಿಗೆ ಸ್ಥಳೀಯ ಕೈಗಾರಿಕಾ ಶಾಲೆಗಳಲ್ಲಿ ಆ ಉದ್ಯಮದ ಬಗ್ಗೆ ತರಬೇತಿ ನೀಡಲಾಯಿತು. ಹೀಗೆ ತರಭೇತಿ ಪಡೆದ ವಿದ್ಯಾರ್ಥಿಗಳು ಈ ಉದ್ಯಮದಲ್ಲಿ ತೊಡಗಿ ಸ್ವತಂತ್ರವಾಗಿ ಜೀವನ ನಡೆಸಲಾರಂಭಿಸಿದರು. ಸರ್ಕಾರವು ಹಿಂದಿನ ಒಂದೇ ಕೈಯಲ್ಲಿ ತಿರುಗಿಸುತ್ತಿದ್ದ ಚರಕಿಯಂತ್ರದ ಜಾಗದಲ್ಲಿ ಯಾಂತ್ರೀಕೃತ ಚರಕಿಯಂತ್ರ (ಲೇಥ್)ಗಳನ್ನು ಅಳವಡಿಸಿದ್ದರಿಂದ ಬಣ್ಣದ ಅರಗಿನ ವಸ್ತುಗಳ ಉತ್ಪಾದನೆ ಹೆಚ್ಚಿತು. ಗೊಂಬೆಗಳ ಬಣ್ಣ, ಶೈಲಿಗಳೂ ಆಕರ್ಷಣೀಯಗೊಂಡವು. ಹಾಗಾಗಿ ಚನ್ನಪಟ್ಟಣದ ಬಣ್ಣದ ಬೊಂಬೆಗಳಿಗೆ ಎಲ್ಲ ವರ್ಗಗಳಿಂದಲೂ, ಯೂರೋಪಿಯನ್ನರನ್ನೊಳಗೊಂಡಂತೆ ಬೇಡಿಕೆ ಬಂದಿತು. ಹೊಸ ಚರಕಿಯಂತ್ರಗಳಿಂದ ಮಾಡುತ್ತಿದ್ದ ಬಣ್ಣ ಅಳಿಸಿ ಹೋಗುತ್ತಿರಲಿಲ್ಲ. ಯಾಂತ್ರೀಕೃತ ಚರಕಿ ಯಂತ್ರಗಳಿಂದ, ಆಧುನಿಕ ತರಭೇತಿ ಪಡೆದ ವಿದ್ಯಾರ್ಥಿಗಳು ಭೂರಿಗೆ ಮರದಿಂದ ವಿವಿಧ ಪ್ರಾಣಿಗಳು, ಪಕ್ಷಿಗಳು ಮತ್ತು ಹಣ್ಣುಗಳು ಮುಂತಾದವುಗಳ ಆಕೃತಿಯನ್ನು ತಯಾರಿಸಿ ನೈಸರ್ಗಿಕವಾದ ಬಣ್ಣಗಳನ್ನು ಅವುಗಳಿಗೆ ಅನುಸರಿಸಿ ಆಕರ್ಷಣೀಯವಾಗಿ ಬಣ್ಣ ಹಾಕುತ್ತಿದ್ದರು. ಇದರಿಂದ ಅವು ಇನ್ನೂ ಹೆಚ್ಚಿನ ಆಕರ್ಷಣೆ ಪಡೆದು ಭಾರತದಾದ್ಯಂತ ಅವುಗಳ ಮಾರುಕಟ್ಟೆ ವಿಸ್ತರಣೆಗೊಳ್ಳುವಂತಾಯಿತು. ಪರಿಣಾಮವಾಗಿ ಚನ್ನಪಟ್ಟಣ

---

*363. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 260*

*364. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 21-23*

*365. ಹಯವದನರಾವ್ ಸಿ., ಪೂರ್ವೋಕ್ತ, ಪು. 261*

ಕೇಂದ್ರ ಮತ್ತು ಅದರ ಉತ್ಪಾದನೆಯ ಗೊಂಬೆಗಳು ಚಂದಕ್ಕೆ ಹೆಸರಾದವು. ಇಂದಿಗೂ ಆ ಉದ್ಯಮ ಮುಂದುವರಿಯುತ್ತಿದೆ[365].

ದೇಶೀ ಕೈಗಾರಿಕೆಯ ಮತ್ತೊಂದು ಪ್ರಮುಖ ಕ್ಷೇತ್ರವೆಂದರೆ ಎಣ್ಣೆ ಉದ್ಯಮ. ಎಣ್ಣೆ ಉದ್ಯಮವು ರಾಜ್ಯದಾದ್ಯಂತ ಹರಡಿದ್ದು ಗಾಣಿಗರು ಎಂಬ ಜನ ಹೆಚ್ಚಾಗಿ ಈ ಉದ್ಯಮದಲ್ಲಿ ತೊಡಗಿಕೊಂಡಿದ್ದರು. ಎಣ್ಣೆ ಬೀಜಗಳನ್ನು ಅರಯಲು ಸಾಂಪ್ರದಾಯಿಕವಾಗಿ ಮರದ ಅಥವಾ ಕಲ್ಲಿನ ಗಾಣಗಳನ್ನು ಬಳಸಲಾಗುತ್ತಿತ್ತು. ಈ ವಿಧಾನವು ಅತ್ಯಂತ ಹಳೆಯದಾಗಿದ್ದು ಹೆಚ್ಚು ಶ್ರಮ ಹಾಗೂ ಕಾಲವನ್ನು ತೆಗೆದುಕೊಳ್ಳುತ್ತಿತ್ತು. ಒಂದು ಕಲ್ಲಿನ ಗಾಣದಿಂದ 50 ಸೇರು ಎಣ್ಣೆ ಬೀಜವನ್ನು ದಿನವೊಂದಕ್ಕೆ ಅರೆದು ಎಣ್ಣೆ ಬೀಜದ ಶೇ. 30 ರಷ್ಟು ತೂಕದ ಎಣ್ಣೆಯನ್ನು ಮಾತ್ರ ಉತ್ಪಾದಿಸಲಾಗುತ್ತಿತ್ತು. 1890ರ ಸುಮಾರಿನಲ್ಲಿ 3572 ಗಾಣಗಳಿದ್ದದ್ದು 1921ರ ವೇಳೆಗೆ ಅವುಗಳ ಸಂಖ್ಯೆ 2500ಕ್ಕೆ ಇಳಿಯಿತು. ಅದಕ್ಕೆ ಕಾರಣ ಯಾಂತ್ರೀಕೃತ ಮಿಲ್ಲುಗಳನ್ನು ಪರಿಚಯಿಸಿದ್ದು[366]. ಹೀಗೆ ದೇಶೀಯ ಗಾಣಗಳ ಬದಲು ತಿರುಪುಗಾಣಗಳನ್ನು (Screw presses) ಬಳಸಲು ಪ್ರೋತ್ಸಾಹಿಸಿದ್ದರಿಂದ ಎಣ್ಣೆ ಹಿಪ್ಪೆಯಲ್ಲಿ ಹೆಚ್ಚಿನ ಎಣ್ಣೆ ಅಂಶವು ಉಳಿದು ಪೋಲಾಗುವುದು ತಪ್ಪಿತು. ಅಲ್ಲದೆ ತಿರುಪುಗಾಣಗಳಿಂದ ಎಣ್ಣೆ ಹಿಪ್ಪೆಯು ಘನರೂಪದಲ್ಲಿ ದೊರಕುತ್ತಿದ್ದುದರಿಂದ ಎಣ್ಣೆ ಹಿಪ್ಪೆಯನ್ನು ಗೊಬ್ಬರವಾಗಿ ಬಳಸುವುದನ್ನು ನಾಲ್ವಡಿಯವರ ಸರ್ಕಾರ ಪ್ರೋತ್ಸಾಹಿಸಿತು[367].

### *ಗೃಹ ಕೈಗಾರಿಕೆಗಳ ಸಂಸ್ಥೆ ಸ್ಥಾಪನೆ*

ರಾಜ್ಯದಾದ್ಯಂತ ಗ್ರಾಮೀಣ ಮತ್ತು ಗೃಹ ಕೈಗಾರಿಕೆಗಳನ್ನು ಮತ್ತೆ ಪುನರುಜ್ಜೀವನಗೊಳಿಸಬೇಕೆಂಬ ಮನೋಭಾವನೆಯನ್ನು ನಾಲ್ವಡಿ ಹೊಂದಿದ್ದರು. ಮೈಸೂರು ರಾಜ್ಯದ ಆಗಿನ ಹಣಕಾಸಿನ ಕಾರ್ಯದರ್ಶಿಯಾಗಿದ್ದ ಜೆ.ಎಸ್. ಚಕ್ರವರ್ತಿಯವರು ಜನರ ಜೀವನ ವೆಚ್ಚ ನಿರ್ವಹಣೆಗೆ ಉಪಕಸುಬುಗಳನ್ನು ಹೊಂದುವಂತಾಗಲು ಗೃಹ ಕೈಗಾರಿಕೆಗಳ ಸಂಸ್ಥೆಯೊಂದರ ಸ್ಥಾಪನೆಯ ಅವಶ್ಯಕತೆ ಇದೆ ಎಂಬ ಪ್ರಸ್ತಾವನೆಯನ್ನು ಸಲ್ಲಿಸಿದರು. ಅದರಂತೆ ಸರ್ಕಾರವು 1916ಲ್ಲಿ ಗೃಹ ಕೈಗಾರಿಕಾ ಸಂಸ್ಥೆಯನ್ನು ಸ್ಥಾಪಿಸಿತು[368]. ಈ ಸಂಸ್ಥೆಯ ಮುಖ್ಯ ಕಾರ್ಯಗಳೆಂದರೆ; ಗ್ರಾಮೀಣ ಹಾಗೂ ಪಟ್ಟಣಗಳಲ್ಲಿನ ಉಪಕಸುಬುಗಳ ಸಮೀಕ್ಷೆ, ಗೃಹ ಕೈಗಾರಿಕೆಗಳ ಪ್ರಾತ್ಯಕ್ಷಿಕ ಪ್ರದರ್ಶನ ಹಾಗೂ ಪ್ರಚಾರ, ಈ ಕಸುಬುಗಳಲ್ಲಿ ತರಬೇತಿ ನೀಡುವ ತರಬೇತುದಾರ ಶಿಕ್ಷಕರಿಗೆ ತರಬೇತಿ ನೀಡುವುದು ಮುಂತಾದವು. ಈ ಸಂಸ್ಥೆಯು

---

*366. ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಪು. 261*

*367. ಅದೇ., ಪು. 50-51*

*368. ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್ : ಇಂಡಸ್ಟ್ರೀಸ್ ಅಂಡ್ ಕಾಮರ್ಸ್, ಪು. 28*

ಹಗ್ಗ ಹೊಸೆಯುವ, ಬುಟ್ಟಿ ಹೆಣೆಯುವ, ಹೈನುಗಾರಿಕೆ, ಕೋಳಿ, ಕುರಿ, ಹಂದಿ ಸಾಕಣೆ, ಉಪ್ಪಿನಕಾಯಿ ತಯಾರಿಕೆ, ಬಟ್ಟೆ ಹೊಲಿಯುವುದು ಮುಂತಾದ ಉಪಕಸುಬುದಾರರಿಗೆ ಪ್ರೋತ್ಸಾಹ ನೀಡಿತು. ಅಲ್ಲದೆ ಆಧುನಿಕ ರೀತಿಯಲ್ಲಿ ಬತ್ತದ ಗಿರಣಿ, ಕೈಮಗ್ಗ, ಎಣ್ಣೆಗಾಣ ಮತ್ತು ಧಾನ್ಯದ ಗಿರಣಿಗಳನ್ನು ಸ್ಥಾಪಿಸಲು ನೆರವು ನೀಡುವುದು ಮುಂತಾದ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿತು. ಈ ಸಂಸ್ಥೆಯು ಆರಂಭದಲ್ಲಿ ಚುರುಕಾಗಿ ಕೆಲಸ ಮಾಡಿ ಜನರನ್ನು ಆಕರ್ಷಿಸಿತು. ಆದರೆ ಸರ್ಕಾರದ ಸಹಾಯಧನ, ಸಾಲ ಸೌಲಭ್ಯಗಳನ್ನೇ ನಂಬಿದ್ದ ಜನಕ್ಕೆ ವಿಸ್ತೃತ ರೀತಿಯಲ್ಲಿ ಸರ್ಕಾರ ಒದಗಿಸಲಾಗಲಿಲ್ಲ. ಅಲ್ಲದೆ ಈ ಕಸುಬುದಾರರು ಉತ್ಪಾದಿಸಿದ ಉತ್ಪನ್ನಗಳನ್ನು ಮಾರಾಟ ಮಾಡುವ ಕೊರತೆ ಇದ್ದುದರಿಂದ ಈ ಕಸುಬುಗಳು ಬೆಳೆಯಲಾಗಲಿಲ್ಲ. ಆದರೂ ಜನರ ಜೀವನ ಮಟ್ಟವನ್ನು ಸುಧಾರಿಸುವ ನಾಲ್ವಡಿಯವರ ಪ್ರಯತ್ನ ಮತ್ತು ಆಧುನಿಕ ಕ್ರಮಗಳು ಗೃಹ ಕೈಗಾರಿಕೆಗಳು ನಶಿಸದೆ ಉಳಿಯಲು ಸಹಾಯ ಮಾಡಿದವು.

### *iv) ಆರ್ಥಿಕ ಚಟುವಟಿಕೆಗಳಲ್ಲಿ ಆಧುನಿಕತೆ - ಹಣಕಾಸಿನ ಸೌಲಭ್ಯ*

ಬ್ಯಾಂಕಿಂಗ್ ಪ್ರಾಚೀನ ಕಾಲದಿಂದಲೂ ಪಟ್ಟಣಗಳ ಆರ್ಥಿಕ ಜೀವನದ ಒಂದು ವಿಶಿಷ್ಟ ಅಂಗವಾಗಿದೆ. "ಯೂರೋಪಿಯನ್ನರ ಆಗಮನದವರೆಗೂ ಎಲ್ಲ ಕಾಲದಲ್ಲಿಯೂ ಭಾರತದಲ್ಲಿ 'ಬ್ಯಾಂಕಿಂಗ್' ವ್ಯಾಪಾರದ ಒಂದು ಉಪಾಂಗವಾಗಿತ್ತು" ಎಂಬುದಾಗಿ ಎ. ಎಲ್. ಭಾಷ್ಯಂರವರು ಅಭಿಪ್ರಾಯಪಟ್ಟಿದ್ದಾರೆ[369]. ಬ್ಯಾಂಕುಗಳು ಮತ್ತು ಹಣಕಾಸಿನ ಸಂಸ್ಥೆಗಳು ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಹೂಡಿಕೆಯಲ್ಲಿ ದುಡಿದು ಉತ್ಪಾದನಾ ಚಟುವಟಿಕೆಗಳಲ್ಲಿ ನೆರವಾಗುತ್ತಾ ಬಂದಿವೆ. ಈ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯಲ್ಲಿ ಬ್ಯಾಂಕಿಂಗ್ ಉದ್ಯಮ ತನ್ನದೇ ಆದ ಮಹತ್ವಪೂರ್ಣ ಕೊಡುಗೆಯನ್ನು ನೀಡಿದೆ. ಭಾರತದಲ್ಲಿ ವ್ಯವಸ್ಥಿತ ಆಧುನಿಕ ಬ್ಯಾಂಕಿಂಗ್ ಉದ್ಯಮಕ್ಕೆ 1½ ಶತಮಾನದ ಚರಿತ್ರೆ ಇದ್ದರೆ ಮೈಸೂರು ಸಂಸ್ಥಾನದಲ್ಲಿ ಆಧುನಿಕ ಬ್ಯಾಂಕಿಂಗ್ ಉದ್ಯಮಕ್ಕೆ 125 ವರ್ಷಗಳ ಸುದೀರ್ಘ ಐತಿಹಾಸಿಕ ಪರಂಪರೆ ಇದೆ. ಅದರ ಸಂಕ್ಷಿಪ್ತ ಪರಿಚಯದ ವಿವರಣೆ ಈ ಕೆಳಕಂಡಂತಿದೆ.

ಆಧುನಿಕ ಭಾರತದಲ್ಲಿ ಬ್ರಿಟಿಷ್ ಮಾದರಿಯ (English Banking System) ಅಂದರೆ ಒಂದು ವ್ಯವಸ್ಥಿತ ಕಾನೂನುಬದ್ಧವಾದ ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಆರಂಭಗೊಂಡಿದ್ದು ಸುಮಾರು ಎರಡು ಶತಮಾನಗಳ ಮೊದಲು ಅಂದರೆ 1806 ರಿಂದ 1834ರ ಅವಧಿಯಲ್ಲಿ ಪ್ರೆಸಿಡೆನ್ಸಿ ನಗರಗಳಾದ ಕಲ್ಕತ್ತಾ, ಬೊಂಬಾಯಿ, ಮದ್ರಾಸ್‌ಗಳಲ್ಲಿ. ಮೊದಲಿಗೆ ಕೂಡು ಬಂಡವಾಳ ಸಂಸ್ಥೆಗಳು (1770ರಲ್ಲಿ ಆರಂಭ) ಅಸ್ತಿತ್ವದಲ್ಲಿದ್ದವು. ಆದರೆ ಕಾರಣಾಂತರಗಳಿಂದ ಅವು 1832ರಲ್ಲಿ ಮುಚ್ಚಲ್ಪಟ್ಟವು. ಬಳಿಕ 1860ರಲ್ಲಿ ಕೆಲವು ಸಾರ್ವಜನಿಕ ಕಂಪನಿಗಳು, ಅಪರಿಮಿತ ಹೊಣೆಗಾರಿಕಾ

---

*369. ಸೂರ್ಯನಾಥ್ ಯು. ಕಾಮತ್ (ಸಂ)., ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ - 2, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, 1985, ಪು. - 113*

ನಿಯಮಾವಳಿಗಳು 'ಬ್ಯಾಂಕಿಂಗ್' ಉದ್ಯಮವನ್ನು ಆರಂಭಿಸುವಂತಹ ಉತ್ತೇಜನವನ್ನು ನೀಡಿದವು. ಹೀಗೆ ರೂಪುಗೊಂಡ ಬ್ಯಾಂಕಿಂಗ್ ವ್ಯವಸ್ಥೆ ವ್ಯಾಪಾರ, ಕೈಗಾರಿಕೆಗಳ ಒಂದು ಉಪಾಂಗವಾಗಿ ಮಾರ್ಪಟ್ಟು 1865ರ ವೇಳೆಗೆ ಭಾರತದಲ್ಲಿ ಖಾಸಗೀ ವಲಯದ ಬ್ಯಾಂಕುಗಳ ಪ್ರಾರಂಭಕ್ಕೂ ಉತ್ತೇಜನ ದೊರಕಿದಂತಾಯಿತು.

ಮೈಸೂರು ಪ್ರಾಂತ್ಯದಲ್ಲಿ 1809ರಲ್ಲಿ ಬ್ರಿಟಿಷರು ಬೆಂಗಳೂರಿನಲ್ಲಿ ಪ್ರಥಮ ಬಾರಿಗೆ 'ದಂಡು ಪ್ರದೇಶ' ಪ್ರಾರಂಭಿಸುವ ಮೂಲಕ ಬೆಂಗಳೂರು ನಗರದಲ್ಲಿ ವಾಣಿಜ್ಯ, ವ್ಯಾಪಾರ ಉದ್ದಿಮೆಗಳ ಅಭಿವೃದ್ಧಿಗೆ ಕಾರಣ ಕರ್ತರಾದರು. ಇದರಿಂದ ಬೆಳೆಯುತ್ತಿರುವ ವಾಣಿಜ್ಯ ವ್ಯವಹಾರಗಳಿಗೆ ಹಣಕಾಸಿನ ನೆರವು ಒದಗಿಸಲು ಸಹಾಯಕವಾಗುವಂತೆ ನಗರಗಳಲ್ಲಿ ಅನೇಕ ಖಾಸಗಿ ಮತ್ತು ಸರ್ಕಾರಿ ವಲಯದ ಬ್ಯಾಂಕುಗಳು ಸ್ಥಾಪನೆಗೊಂಡವು. ಅವುಗಳಲ್ಲಿ ಮೊದಲನೆಯ ಖಾಸಗಿ ಬ್ಯಾಂಕುಗಳೆಂದರೆ; 1868ರಲ್ಲಿ ಬೆಂಗಳೂರಿನಲ್ಲಿ ಆರಂಭಗೊಡ ಬೆಂಗಳೂರು ಬ್ಯಾಂಕ್ (ಲಿ) ಮತ್ತು ಮೈಸೂರು ಬ್ಯಾಂಕು ಕಾರ್ಪೋರೇಷನ್ (ಲಿ). 1868 ರಿಂದ 1876ರ ವೇಳೆಗೆ ಹಳೆಯ ಮೈಸೂರು ಸಂಸ್ಥಾನದಲ್ಲಿ 62 ಬ್ಯಾಂಕಿಂಗ್ ಕಂಪನಿಗಳು ಅಸ್ತಿತ್ವದಲ್ಲಿದ್ದು ಅವು ಹೆಚ್ಚು ಜಾತಿ, ಧರ್ಮ, ವ್ಯಕ್ತಿ ನಾಮ ಸೂಚಕವಾಗಿದ್ದವು. ಅಂದಿನ ಮೈಸೂರು ಸಂಸ್ಥಾನದಲ್ಲಿ ಬ್ಯಾಂಕಿಂಗ್ ವ್ಯವಹಾರ ಕೇವಲ ಬೆಂಗಳೂರು, ಮೈಸೂರಿಗೆ ಮಾತ್ರ ಸೀಮಿತವಾಗಿರದೆ ಇತರೆ ಪ್ರದೇಶಗಳಾದ ಕೋಲಾರ, ತುಮಕೂರುಗಳಿಗೂ ವ್ಯಾಪಿಸಿತ್ತು. ನಂತರ 1874ರಲ್ಲಿ ರಾಜಧಾನಿ ಬ್ಯಾಂಕ್, ಮೈಸೂರು ಮತ್ತು 1874ರಲ್ಲೇ ಟೌನ್ ಬ್ಯಾಂಕ್, ಮೈಸೂರು ಇವು ಮೈಸೂರು ನಗರದಲ್ಲೇ ಪ್ರಾರಂಭವಾಗಿ ದೀರ್ಘಕಾಲದ ಸೇವೆಯ ನಂತರ ಬೇರೆ ಬ್ಯಾಂಕುಗಳೊಡನೆ ವಿಲೀನವಾದವು[370].

ಹೀಗೆ ಹಳೆಯ ಮೈಸೂರು ಪ್ರದೇಶದ ಬ್ಯಾಂಕಿಂಗ್ ಉದ್ಯಮದ ಇತಿಹಾಸ ಇತರೆ ಪ್ರದೇಶಗಳಿಗಿಂತ ಭಿನ್ನವಾಗಿತ್ತು. ಸರ್ಕಾರ ಈ ಬ್ಯಾಂಕುಗಳ ಮೂಲಕ ಕೃಷಿ ಕ್ಷೇತ್ರದ ಬೆಳವಣಿಗೆಗೆ ಬೇಕಾದ ಹಣದ ಸೌಲಭ್ಯವನ್ನು ತಕಾವಿ ಅಥವಾ ಮುಂಗಡ ಸಾಲ ನೀಡುವಂತಹ ಯೋಜನೆಗಳ ಮೂಲಕ ಒದಗಿಸಿತು. ನಂತರ ಕೃಷಿ ಅಭಿವೃದ್ಧಿ ಚಟುವಟಿಕೆಗಳಿಗೆ ರೈತರಿಗೆ ಸಾಲ ನೀಡಲು ಮೈಸೂರು ಸರ್ಕಾರವು 1890ರಲ್ಲಿ 'ದಿ ಮೈಸೂರ್ ಲ್ಯಾಂಡ್ ಇಂಪ್ರೂವ್‌ಮೆಂಟ್ ಲೋನ್ಸ್ ಆಕ್ಟ್' ಎಂಬ ಕಾಯ್ದೆಯನ್ನು ಜಾರಿಗೆ ತಂದಿತು[371]. ಆದರೆ ಈ ಕಾಯ್ದೆಯ ಅಡಿಯಲ್ಲಿ ಹೆಚ್ಚಿನ ರೈತರಿಗೆ ಸಾಲ ನೀಡಲಾಗಲಿಲ್ಲ. ಹಾಗಾಗಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು 1893ರಲ್ಲಿ ಕೃಷಿ ಬ್ಯಾಂಕುಗಳ ಸ್ಥಾಪನೆಗೆ ಒತ್ತಾಯಿಸಿದ್ದರು[372]. ಇದರ ಪರಿಣಾಮವಾಗಿ 1894ರಲ್ಲಿ ಸಹಕಾರಿ ತತ್ವ ಮತ್ತು ಕೂಡು ಬಂಡವಾಳ ಸಂಸ್ಥೆಗಳ ತತ್ವಗಳನ್ನು ಸಮೀಕರಿಸಿಕೊಂಡು "ವ್ಯವಸಾಯ ಬ್ಯಾಂಕು" ಎಂಬ ವಿಶೇಷ ಮಾದರಿಯ 'ಮಿಶ್ರತಳಿ'ಯ ಬ್ಯಾಂಕುಗಳನ್ನು

---

370. ***ಪಾಟೀಲ್ ಎಂ. ಬಿ. ರವರ.,*** *ಲೇಖನದಿಂದ, ಇತಿಹಾಸ ದರ್ಶನ, ಸಂಪುಟ - VI, 1991, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, 1992, ಪು. 208*

371. ***ದಿ ಮೈಸೂರ್ ಕೋಡ್.,*** *ಸಂಪುಟ - 1, ಕರ್ನಾಟಕ ಸರ್ಕಾರದ ಪ್ರಕಟಣೆ, ಬೆಂಗಳೂರು, 1955, ಪು. 178-179*

372. ***ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ,*** *ಬೆಂಗಳೂರು, 1893, ಪು. 53*

ಗ್ರಾಮೀಣ ಪ್ರದೇಶದಲ್ಲಿ ಸರ್ಕಾರವೇ ತನ್ನ ಬಂಡವಾಳವನ್ನು ತೊಡಗಿಸುವ ಮೂಲಕ ಪ್ರಾರಂಭಿಸಿತು. ಈ 'ಅರೆ ಸಹಕಾರಿ' ಮತ್ತು 'ಅರೆ ಕಂಪನಿ' ವ್ಯವಸ್ಥೆಯನ್ನು ಮೈಗೂಡಿಸಿಕೊಂಡ ಮಿಶ್ರತಳಿಯ ಬ್ಯಾಂಕುಗಳ ಮೂಲೋದ್ದೇಶ ಚಿಕ್ಕಪುಟ್ಟ ಹಿಡುವಳಿದಾರರಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ಸೌಲಭ್ಯದ ನೆರವು ಒದಗಿಸುವುದಾಗಿತ್ತು. ಈ ರೀತಿಯ ಪ್ರಥಮ ಬ್ಯಾಂಕು 1894ರ ಡಿಸೆಂಬರ್‌ನಲ್ಲಿ ಶ್ರೀರಂಗಪಟ್ಟಣದ ಪಾಲಹಳ್ಳಿಯಲ್ಲೂ, ಎರಡನೆ ಬ್ಯಾಂಕು 1897ರಲ್ಲಿ ನಂಜನಗೂಡಿನಲ್ಲೂ ಪ್ರಾರಂಭಗೊಂಡವು. ಹೀಗೆ 1901 ರ ಸುಮಾರಿಗೆ ಮೈಸೂರು ಸಂಸ್ಥಾನದಲ್ಲಿ ಇಂತಹ 64 ಬ್ಯಾಂಕುಗಳು 3000 ಸದಸ್ಯರೊಂದಿಗೆ ಕಾರ್ಯಾರಂಭ ಮಾಡಿದ್ದವಾದರೂ ಕಾಲಕ್ರಮೇಣ ಸರ್ಕಾರವೇ ಇವುಗಳನ್ನು ಮುಚ್ಚುವಂತಹ ಪರಿಸ್ಥಿತಿಗೆ ಬಂದಿತು. ಕಾರಣ ದೊಡ್ಡ ಹಿಡುವಳಿದಾರರು ಮತ್ತು ಶ್ರೀಮಂತ ಸದಸ್ಯರು ಈ ಬ್ಯಾಂಕಿನ ಸುಲಭ ಬಡ್ಡಿಯ ಸಾಲವನ್ನು (ಶೇ. 4ರ ದರದಲ್ಲಿ) ವ್ಯಾಪಕವಾಗಿ ಪಡೆದು ಹೊರಗೆ ಹೆಚ್ಚಿನ ಬಡ್ಡಿಗೆ ಸಾಲ ನೀಡಿ ತಾವು ಪಡೆದ ಸಾಲವನ್ನು ಸರ್ಕಾರಕ್ಕೆ ಮರುಪಾವತಿಸದೇ ಹೋದದ್ದು. ಇದರಿಂದ ಜನಸಾಮಾನ್ಯರಿಗೆ ಮುಂದೆ ಸಾಲ ದೊರೆಯದಂತಾಯಿತು[373]. ಅಲ್ಲದೇ ಸರ್ಕಾರ ಮತ್ತು ಬ್ಯಾಂಕಿನ ನಡುವೆ ಮಧ್ಯವರ್ತಿಗಳಂತೆ ಈ ದೊಡ್ಡ ಹಿಡುವಳಿದಾರರು ಮತ್ತು ಶ್ರೀಮಂತ ಸದಸ್ಯರು ಬೆಳವಣಿಗೆ ಹೊಂದುತ್ತಾ ಹೆಚ್ಚು ಲಾಭಾಂಶ ಪಡೆಯಲಾರಂಭಿಸಿದರು. ಇದೇ ವೇಳೆಗೆ ಮದ್ರಾಸ್ ಸರ್ಕಾರದ ಪರವಾಗಿ ಫ್ರೆಡ್ರಿಕ್ ನಿಕೋಲಸ್‌ನು ಜರ್ಮನಿ ಮತ್ತು ಇತರೆ ಯೂರೋಪಿನ ದೇಶಗಳಲ್ಲಿ ಕೈಗೊಂಡ ಅಧ್ಯಯನದ ಫಲಶೃತಿಯ ಮೇರೆಗೆ ಭಾರತದಲ್ಲಿ ರೈಫೀಸಿಯನ್ ಮಾದರಿಯ ಸಹಕಾರಿ ಸಂಸ್ಥೆಗಳ ಸ್ಥಾಪನೆ ಸೂಕ್ತವೆಂದು ಅಭಿಪ್ರಾಯಪಟ್ಟರು. ಆದರೆ ಇಂತಹ ಸಂಸ್ಥೆಗಳಿಗೆ ಅಂದಿನ ಕಾನೂನು (1890) ಸೂಕ್ತವಾಗಿರಲಿಲ್ಲ. ಆದ್ದರಿಂದ ಸಹಕಾರಿ ಸಂಸ್ಥೆಗಳ ರಚನೆಗೆ ಅಗತ್ಯವಾದ ಕಾನೂನನ್ನು ರಚಿಸುವಂತೆ 1901ರಲ್ಲಿ ಸರ್ ಎಡ್‌ವರ್ಡ್ ಲಾ ಎಂಬುವವರ ನಾಯಕತ್ವದಲ್ಲಿ ಲಾರ್ಡ್ ಕರ್ಜನ್‌ರವರಿಗೆ ಆಯೋಗವನ್ನು ಕಳುಹಿಸಲಾಯಿತು. ಇದು ಕೇಂದ್ರ ಸರ್ಕಾರದ ಕಾನೂನಾಗಿದ್ದರೂ ಇದರ ಆಡಳಿತ ವ್ಯಾಪ್ತಿಯನ್ನು ಪ್ರಾಂತೀಯ ಸರ್ಕಾರಗಳಿಗೂ ವಿಸ್ತರಿಸಲಾಗಿತ್ತು[374]. ಹೀಗೆ ಪ್ರಪಂಚದಲ್ಲಾಗುತ್ತಿದ್ದ ಬದಲಾವಣೆಗೆ ತಕ್ಕಂತೆ ಭಾರತೀಯ ಮಟ್ಟದಲ್ಲಿ ನಡೆಯುತ್ತಿದ್ದ ಪ್ರಯೋಗಾತ್ಮಕ ಕಾರ್ಯ ಚಟುವಟಿಕೆಗಳ ವ್ಯಾಪ್ತಿ ಪ್ರಾಂತೀಯ ಮಟ್ಟದಲ್ಲೂ ಅನುಷ್ಠಾನಗೊಳ್ಳಬೇಕಾಗಿದ್ದ ಅವಧಿಯಲ್ಲೇ ಅಂದರೆ 1902ರಲ್ಲೇ ಮೈಸೂರು ಸಂಸ್ಥಾನದ ಮಹಾರಾಜರಾಗಿ ನಾಲ್ವಡಿ ಕೃಷ್ಣರಾಜ ಒಡೆಯರು ಅಧಿಕೃತವಾಗಿ ಆಡಳಿತವನ್ನು ವಹಿಸಿಕೊಂಡರು. ತಮ್ಮ ಆಡಳಿತಾವದಿಯಲ್ಲಿ ಅವರು ಇಂತಹ ಆಧುನಿಕ ವಿಚಾರಧಾರೆಗಳನ್ನು ಕಾಲ ಮತ್ತು ಸನ್ನಿವೇಶಗಳಿಗೆ ತಕ್ಕಂತೆ ಹೇಗೆ ಆರ್ಥಿಕ ಹಣಕಾಸಿನ ಚಟುವಟಿಕೆಗಳಾದ ಬ್ಯಾಂಕಿಂಗ್ ಉದ್ಯಮ, ಸಹಕಾರಿ ಸಂಘಗಳ ಬೆಳವಣಿಗೆ, ಸಹಕಾರಿ

---

*373. ಸೂರ್ಯನಾಥ್ ಯು. ಕಾಮತ್ ಮತ್ತು ಲಕ್ಷ್ಮಣ ತೆಲಗಾವಿ (ಸಂ)., ಇತಿಹಾಸ ದರ್ಶನ, ಸಂಪುಟ - 3, ಸಂಚಿಕೆ - 1, 1988, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಪು. 45*

*374. ಅದೇ., ಪು. 45-46*

ಚಳವಳಿಗಳ ಪೋಷಣೆ ಇವೇ ಮೊದಲಾದ ಕ್ಷೇತ್ರಗಳಲ್ಲಿ ಅಳವಡಿಸುವ, ಮಾರ್ಪಡಿಸುವ ಮೂಲಕ ಮೈಸೂರು ಸಂಸ್ಥಾನವನ್ನು ಪ್ರಗತಿಯತ್ತ, ಮಾದರಿಯತ್ತ, ಪರಿವರ್ತನೆಯತ್ತ ಕೊಂಡೊಯ್ದರು ಎಂಬುದನ್ನು ಕುರಿತಾದ ಅಧ್ಯಯನವನ್ನು ಈ ಮುಂದೆ ಮಾಡಲಾಗಿದೆ.

ಆರ್ಥಿಕ ಚಟುವಟಿಕೆಗಳಲ್ಲಿ ಬಂಡವಾಳದ ಪ್ರಾಮುಖ್ಯತೆಯನ್ನು ನಾಲ್ವಡಿಯವರು ಗುರುತಿಸಿದ್ದರು. ಅವರ ನೇರ ಅಧಿಕಾರ ಪೂರ್ವದಲ್ಲಿ ಅಂದರೆ 1900ರಲ್ಲಿ ಮೈಸೂರು ಸಂಸ್ಥಾನದಾದ್ಯಂತ 61 ಕೃಷಿ ಬ್ಯಾಂಕುಗಳು ಅಸ್ತಿತ್ವದಲ್ಲಿದ್ದು 14,86,500 ರೂಪಾಯಿಗಳಷ್ಟು ಹಣವನ್ನು ಸಾಲವಾಗಿ ನೀಡಿದ್ದವು ಹಾಗೂ ಸಾಲ ವಸೂಲಾತಿಯಲ್ಲಿ ಯಶಸ್ಸು ಕಾಣದೇ ವಿಫಲಗೊಂಡಿದ್ದವು. ಇಂತಹ ವಿಫಲಗೊಂಡ ಕೃಷಿ ಬ್ಯಾಂಕುಗಳ ಸ್ಥಾನದಲ್ಲಿ ಆಧುನಿಕ ಮಾದರಿಯ ಸಹಕಾರಿ ಬ್ಯಾಂಕುಗಳನ್ನು ಸ್ಥಾಪಿಸುವ ಕಾರ್ಯಪ್ರಯತ್ನವು ನಾಲ್ವಡಿಯವರ ನೇರ ಅಧಿಕಾರಾವಧಿಯ ಕಾಲದಲ್ಲಿ ರೂಪುಗೊಂಡಿತಲ್ಲದೆ 1905ರಲ್ಲಿ ಈ ಕಾರ್ಯಯೋಜನೆ ನೇರವಾಗಿ ಅಸ್ತಿತ್ವಕ್ಕೆ ಬಂದಿತು.

### *ಬ್ಯಾಂಕಿಂಗ್ ಉದ್ಯಮದ ಬೆಳವಣಿಗೆಯಲ್ಲಿ ಸಹಕಾರಿ ಚಳವಳಿಗಳ ಪಾತ್ರ*

ಸಹಕಾರಿ ಚಳವಳಿಯು 1844ರಲ್ಲಿ ಇಂಗ್ಲೆಂಡ್‌ನ 'ರಾಕ್‌ಡೀಲ್' ನಗರದಲ್ಲಿ 28 ಜನ ನೇಕಾರರಿಂದ ಬೀಜಾಂಕುರವಾಗಿ 1849ರಲ್ಲಿ ಜರ್ಮನಿಯ ಫ್ರೆಡರಿಕ್ ವಿಲಿಯಂ ರೇಪೀಸನ್‌ರವರಿಂದ ರೂಪಾಂತರ ಹೊಂದಿ (ಕೃಷಿ ಸಹಕಾರಿ ಬ್ಯಾಂಕುಗಳ) ನಂತರ ಯೂರೋಪಿನ ಇತರೆ ದೇಶಗಳಿಗೂ ಮತ್ತು ಭಾರತಕ್ಕೂ ಹರಡಿತು. ಈ ಸಹಕಾರಿ ಸಂಘ ಅಥವಾ ಬ್ಯಾಂಕುಗಳು ಬಡ ರೈತರ, ಕಾರ್ಮಿಕರ, ಅಸಂಘಟಿತ, ಶೋಷಿತ ವರ್ಗಗಳ ಆರ್ಥಿಕ ಮುಗ್ಗಟ್ಟನ್ನು ನಿವಾರಿಸುವ ಉದ್ದೇಶ ಹೊಂದಿದ್ದವು[375]. ಈ ಸಹಕಾರಿ ಆಂದೋಲನಗಳು ಅಥವಾ ಚಳವಳಿಗಳು ಆಧುನಿಕ ಅರ್ಥ ವ್ಯವಸ್ಥೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದವು. ದೇಶದ ಸರ್ವತೋಮುಖ ಬೆಳವಣಿಗೆಯಲ್ಲಿ ಜನರು ಹೆಚ್ಚು ಹೆಚ್ಚು ಒಗ್ಗೂಡಿ ಸಹಕಾರ ಮನೋಭಾವನೆಯಿಂದ ಸಂಘಟಿತರಾಗಿ ದುಡಿಯಲು ಪ್ರಯತ್ನಿಸುವುದು ಅವಶ್ಯಕವೆಂಬುದು ನಾಲ್ವಡಿಯವರ ಅಭಿಪ್ರಾಯವಾಗಿತ್ತು. ಈ ಕುರಿತು ನಾಲ್ವಡಿಯವರು ದಸರಾ ವಸ್ತು ಪ್ರದರ್ಶನದ ಉದ್ಘಾಟನಾ ಸಮಾರಂಭವೊಂದರಲ್ಲಿ ಸೇರಿದ್ದ ಬೃಹತ್ ಜನಸ್ತೋಮದೆದುರು ಸಹಕಾರ ಚಳವಳಿ ಮತ್ತು ಪದ್ಧತಿಯ ಅನುಕೂಲಗಳನ್ನು ಕೆಳಕಂಡಂತೆ ಪ್ರತಿಪಾದಿಸಿದ್ದರು. "ನನ್ನ ಮನಸ್ಸಿನಲ್ಲಿ ಚಿಕ್ಕದೊಂದು ಅನುಮಾನವಿದೆ ಅದೇನೆಂದರೆ ವಿಶಾಲ ಜನವರ್ಗಗಳು ಕೈಗಾರಿಕಾ ಮತ್ತಿತರ ಉದ್ಯಮಗಳಲ್ಲಿ ಯಶಸ್ವಿಯುತವಾಗಿ ಸ್ಪರ್ಧಿಸುವುದನ್ನು ತಡೆದಿರುವುದು ಅವರಲ್ಲಿನ ಅವ್ಯವಸ್ಥಿತ ಬಂಡವಾಳ ಮತ್ತು ಮನುಷ್ಯ ಮನುಷ್ಯರ ನಡುವೆ ಭರವಸೆಗಳ ಕೊರತೆಯೇ ಆಗಿವೆ. ಈ ಕೊರತೆಗಳು ನಮ್ಮ ಯಶಸ್ಸಿನ ಮೇಲೆ ಬೀರಿದ ಪ್ರಭಾವ ಸಣ್ಣ ಪ್ರಮಾಣದ್ದೇನಲ್ಲ. ಸಹಕಾರ ಪದ್ಧತಿಯಡಿಯಲ್ಲಿ

---

*375. ಸೂರ್ಯನಾಥ್ ಯು. ಕಾಮತ್ ಮತ್ತು ಲಕ್ಷ್ಮಣ ತೆಲಗಾವಿ (ಸಂ)., ಪೂರ್ವೋಕ್ತ, ಪು - 45-46*

*376. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 63*

ಯಾವುದೇ ಸ್ಥಳೀಯ ಕುಶಲಕರ್ಮಿಗಳ ಅಥವಾ ಕೃಷಿಕರ ಸಂಸ್ಥೆಯಾಗಲಿ ಅವುಗಳು ಎಷ್ಟೇ ಬಡತನ ಮತ್ತು ಸಂಖ್ಯೆಯಲ್ಲಿ ಕಡಿಮೆಯಿರಲಿ, ಚಿಕ್ಕ ಆರಂಭದ ನಂತರ ಹಂತಹಂತವಾಗಿ ತಕ್ಷಣದ ಮತ್ತು ಭವಿಷ್ಯತ್ತಿನ ಬೆಳವಣಿಗೆಗೆ ಅವಶ್ಯಕವಾಗುವಷ್ಟು ಬಂಡವಾಳವನ್ನು ಪಡೆಯುತ್ತವೆ"[376].

ನಾಲ್ವಡಿಯವರ ಸರ್ಕಾರವು ಬ್ರಿಟಿಷ್ ಭಾರತ ಸರ್ಕಾರವು ಜಾರಿಗೆ ತಂದಿದ್ದ 1904ರ ಕೋ ಆಪರೇಟಿವ್ ಕ್ರೆಡಿಟ್ ಸೊಸೈಟೀಸ್ ಕಾಯ್ದೆಯನ್ನಾಧರಿಸಿ 1905ರ ಜೂನ್‌ನಲ್ಲಿ 'ದಿ ಮೈಸೂರ್ ಕೋ ಆಪರೇಟಿವ್ ಸೊಸೈಟೀಸ್ ಕಾಯ್ದೆ'ಯನ್ನು ಜಾರಿಗೆ ತಂದರು. ಈ ಕಾಯ್ದೆಯಂತೆ 1905-06ರಲ್ಲಿ ಬೆಂಗಳೂರು, ಮೈಸೂರು, ವೈಟ್‌ಫೀಲ್ಡ್, ಹೊಳೇನರಸೀಪುರ ಮತ್ತು ಕೊಪ್ಪ ಎಂಬ ಐದು ಕೇಂದ್ರಗಳಲ್ಲಿ ಸಹಕಾರಿ ಸಂಘಗಳು ಸ್ಥಾಪನೆಗೊಂಡವು. ಬೆಂಗಳೂರಿನ ಸಂಘವು ನಗರದ ಸಂಘವಾಗಿದ್ದು ಇನ್ನುಳಿದವು ಗ್ರಾಮೀಣ ಸಂಘಗಳಾಗಿದ್ದವು[377]. ಈ ಸಹಕಾರ ಸಂಘಗಳ ಪ್ರಮುಖ ಧ್ಯೇಯೋದ್ದೇಶಗಳೆಂದರೆ; ಸದಸ್ಯರಲ್ಲಿ ಉಳಿತಾಯ ಮತ್ತು ಮಿತವ್ಯಯ ದೃಷ್ಟಿಗಳನ್ನು ಬೆಳೆಸುವುದು, ಸದಸ್ಯರ ಕೃಷಿ ಅಥವಾ ಕೈಗಾರಿಕಾ ಉತ್ಪನ್ನಗಳನ್ನು ಮಾರಾಟ ಮಾಡುವುದು, ಉದ್ಯಮಗಳಿಗೆ ಕಚ್ಚಾವಸ್ತು ಒದಗಿಸುವುದು, ಸದಸ್ಯರಿಂದ ಬಂಡವಾಳವನ್ನು ಆಕರ್ಷಿಸುವುದು ಮತ್ತು ಸಾಲ ನೀಡುವುದಾಗಿತ್ತು. ಈ ಗ್ರಾಮೀಣ ಸಂಘಗಳು ಕೃಷಿಕರನ್ನಾಧರಿಸಿದವಾಗಿದ್ದು ಕೃಷಿ ಸಲಕರಣೆಗಳು, ಗೊಬ್ಬರ, ಉತ್ತಮ ಬಿತ್ತನೆ ಬೀಜ, ನೇಗಿಲು, ಕಬ್ಬಿನ ಯಂತ್ರಗಳನ್ನು ಸಾಲದ ಮೇಲೆ ಪೂರೈಸುತ್ತಿದ್ದವು[378]. ರಾಜ್ಯದಾದ್ಯಂತ 1910-11ರ ವೇಳೆಗೆ 70 ಕೋ- ಆಪರೇಟಿವ್ ಸೊಸೈಟಿಗಳು ಇದ್ದು ಅವುಗಳಲ್ಲಿ 9, 043 ಸದಸ್ಯರಿದ್ದು 2, 31, 486 ರೂಪಾಯಿಗಳಷ್ಟು ಸಾಲವನ್ನು ನೀಡಲಾಗಿತ್ತು[379]. ಸಹಕಾರಿ ಆಂದೋಲನದ ಮಹತ್ವವನ್ನು ಜನತೆಗೆ ಮನದಟ್ಟು ಮಾಡಲು ಜಿಲ್ಲೆ, ತಾಲ್ಲೂಕು ಮತ್ತು ಹೋಬಳಿ ಮಟ್ಟದಲ್ಲಿ ಸಮ್ಮೇಳನಗಳನ್ನು ಸಂಘಟಿಸಲಾಯಿತು. ಇದರಿಂದ ಜನರು ಸಹಕಾರಿ ಸಂಘಗಳ ಮಹತ್ವವನ್ನರಿತರು. ಹಾಗಾಗಿ 1913-14ರ ವೇಳೆಗೆ ಸಹಕಾರಿ ಸಂಘಗಳ ಸಂಖ್ಯೆ 530ಕ್ಕೆ ಏರಿದವು. ವಿಸ್ತೃತಗೊಂಡ ಸಹಕಾರಿ ಸಂಘಗಳ ಆಡಳಿತವನ್ನು ನೋಡಿಕೊಳ್ಳಲು ಸಹಕಾರಿ ಇಲಾಖೆಯನ್ನು ವಿಸ್ತರಿಸಲಾಯಿತು. ಹೆಚ್ಚಿನ ಹುದ್ದೆಗಳನ್ನು ಸೃಷ್ಟಿಸಿ ಸಹಕಾರಿ ಇಲಾಖೆಯ ಕಾರ್ಯ ವ್ಯಾಪ್ತಿಯನ್ನು ವಿಸ್ತರಿಸಲಾಯಿತು[380]. ಎಲ್ಲಾ ಸಹಕಾರಿ ಸಂಘಗಳಿಗೂ ಹಾಗೂ ಸದಸ್ಯರಿಗೆ ಸಾಲ ನೀಡುತ್ತಿದ್ದ ರಾಜ್ಯಮಟ್ಟದ ಅತಿದೊಡ್ಡ ಸಹಕಾರಿ ಬ್ಯಾಂಕ್ ಆಗಿದ್ದ ಬೆಂಗಳೂರು ಕೇಂದ್ರೀಯ ಸಹಕಾರಿ ಬ್ಯಾಂಕ್ ವಿಸ್ತೃತಗೊಂಡ ಎಲ್ಲ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸಲಾಗಲಿಲ್ಲ. ಆದ್ದರಿಂದ ಸರ್ಕಾರವು 1915ರಲ್ಲಿ ಮೈಸೂರು ಪ್ರಾಂತೀಯ

---

*377. **ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್ಸ್**, 1905-06, ಪು. 37*

*378. **ಹಯವದನ ರಾವ್ ಸಿ. (ಸಂ).,  ಪೂರ್ವೋಕ್ತ**, ಪು. 310*

*379. **ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್ಸ್**, 1910-11. ಪು. 36*

*380. **ಅದೇ., ಪೂರ್ವೋಕ್ತ.**, 1917-18, ಪು. 37*

ಸಹಕಾರಿ ಬ್ಯಾಂಕನ್ನು ಸ್ಥಾಪಿಸಿತು. ಈ ಬ್ಯಾಂಕ್‌ನ ಸ್ಥಾಪನೆಯೊಂದಿಗೆ ಮೈಸೂರು ರಾಜ್ಯದಲ್ಲಿ ಸಹಕಾರಿ ಆಂದೋಲನ ವಿಸ್ತೃತಗೊಂಡಿತು. ಅಲ್ಲಿಯವರೆಗೂ ಸಹಕಾರಿ ಸಂಘಗಳು ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಮಾತ್ರ ಕೇಂದ್ರೀಕೃತಗೊಂಡಿದ್ದವು. 1905ರ ಸಹಕಾರಿ ಸಂಘಗಳ ಕಾಯ್ದೆಯಲ್ಲಿನ ಲೋಪದೋಷಗಳನ್ನು ಸರಿಪಡಿಸಲು 1918ರಲ್ಲಿ ಒಂದು ಕಾಯ್ದೆಯನ್ನು ಜಾರಿಗೆ ತರಲಾಯಿತು. ಈ ಕಾಯ್ದೆಯು ಕೃಷಿ, ಕೈಗಾರಿಕೆ ಮತ್ತಿತರ ಆರ್ಥಿಕ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದಂತವರಿಗೆ ತಮ್ಮದೇ ಸಂಘಗಳನ್ನು ಸ್ಥಾಪಿಸಿಕೊಳ್ಳುವ ಅವಕಾಶ ಒದಗಿಸಿತು. ಹೀಗೆ 1918ರ ವೇಳೆಗೆ ಅಸ್ತಿತ್ವದಲ್ಲಿದ್ದ ಸಹಕಾರ ಸಂಘಗಳ ಪಟ್ಟಿ ಇಂತಿತ್ತು[381].

| **ಸಂಘಗಳ ಹೆಸರು** | **ಸಂಘಗಳ ಸಂಖ್ಯೆ** |
|---|---|
| ಪ್ರಾಥಮಿಕ ಕೃಷಿಯೇತರ ಸಾಲ ಸಂಘಗಳು | 70 |
| ಪ್ರಾಥಮಿಕ ಕೃಷಿ ಸಾಲ ಸಂಘಗಳು | 900 |
| ಕೇಂದ್ರೀಯ ಬ್ಯಾಂಕ್‌ಗಳು, ಯೂನಿಯನ್‌ಗಳು ಇತ್ಯಾದಿ | 20 |
| ಗೊಬ್ಬರ ಸರಬರಾಜು ಸಂಘಗಳು | 03 |
| ವ್ಯವಸಾಯೋಪಕರಣ ಸಂಘಗಳು | 03 |
| ಏತ ನೀರಾವರಿ ಸಂಘಗಳು | 02 |
| ಗಂಧದ ಮರ ಕೆತ್ತುವ ಸಂಘಗಳು | 02 |
| ದಂತ ಕೆಲಸದ ಸಂಘಗಳು | 02 |
| ಆಟದ ವಸ್ತುಗಳ ಸಂಘಗಳು | 02 |
| ನೇಯ್ಗೆ ಸಂಘಗಳು | 22 |
| ಭತ್ತ ಅರೆಯುವ ಮತ್ತು ಬೆಲ್ಲ ತಯಾರಿಕಾ ಸಂಘಗಳು | 10 |
| ಉಗ್ರಾಣಗಳು | 20 |
| ಧಾನ್ಯ ಬ್ಯಾಂಕ್‌ಗಳು | 25 |

---

*381. ಬ್ಲೂ ಬುಕ್ ಜರ್ನಲ್: 1918-19, ಸಂಪುಟ - 3, ಸಂಖ್ಯೆ - 3, ಪು. 112-113*

| | |
|---|---|
| ಗೃಹ ನಿರ್ಮಾಣ ಸಂಘಗಳು | 04 |
| ಹಿಂದುಳಿದ ವರ್ಗಗಳ ಸಂಘಗಳು | 15 |
| ಒಟ್ಟು | 1100 |

ಸಂಘದ ಸದಸ್ಯರ ಕೃಷಿ ಉತ್ಪಾದನೆಗಳನ್ನು ಲಾಭದ ಬೆಲೆಗೆ ಮಾರಾಟ ಮಾಡುವಂತಾಗಲು ಮಾರಾಟ ಸಂಘಗಳನ್ನು ಸ್ಥಾಪಿಸಲಾಯಿತು. ಈ ಸಂಘಗಳು ಮಧ್ಯವರ್ತಿಗಳು ಕೃಷಿಕರ ಉತ್ಪಾದನೆಗಳನ್ನು ಕನಿಷ್ಠ ಬೆಲೆಗೆ ಕೊಂಡು ಅಧಿಕ ಲಾಭ ಮಾಡಿಕೊಳ್ಳುತ್ತಿದ್ದುದನ್ನು ತಡೆಗಟ್ಟಿ ಮಾರುಕಟ್ಟೆಯಲ್ಲಿ ವಸ್ತುಗಳಿಗೆ ಉತ್ತಮ ಬೆಲೆ ಮತ್ತು ಲಾಭ ದೊರೆಯುವಂತೆ ಮಾಡಿದವು. ಉತ್ಪಾದನಾ ವಸ್ತುಗಳ ಮೇಲೆ ಈ ಸಂಘಗಳು ಮುಂಗಡ ಸಾಲ ನೀಡಿ ಸುಗ್ಗಿಯ ವೇಳೆ ರೈತರು ಮಧ್ಯವರ್ತಿಗಳ ಶೋಷಣೆಗೀಡಾಗುವುದನ್ನು ತಪ್ಪಿಸಿದವು[382]. ಮೈಸೂರು ಜಿಲ್ಲೆಯ ಕೆಲವು ಭತ್ತವನ್ನು ಬೆಳೆಯುವ ಬೆಳೆಗಾರರು ಸಂಘಟಿತರಾಗಿ ಭತ್ತ ಸಂಗ್ರಹ, ಮಾರಾಟ ಮತ್ತು ಗಿರಣಿ ಮಾಡುವ ಚಟುವಟಿಕೆಗಳಲ್ಲಿ ತೊಡಗಲು ಸಹಕಾರಿ ಸಂಘವನ್ನು ಸ್ಥಾಪಿಸಿಕೊಂಡರು. ಭೂರಹಿತ ಶೋಷಿತ ವರ್ಗದವರನ್ನು ಕೃಷಿಕರನ್ನಾಗಿ ಮಾಡಲು ಆದಿ ಕರ್ನಾಟಕ ಕಾಲೋನಿ ಸಹಕಾರ ಸಂಘವು ಭೂಮಿ ಮತ್ತು ಬಂಡವಾಳವನ್ನು ಸಹಕಾರಿ ಸಂಸ್ಥೆಗಳ ಮೂಲಕ ಒದಗಿಸುವಂತಹ ಆಸಕ್ತಿದಾಯಕವಾದ ಪ್ರಯೋಗವನ್ನು ಮಾಡಲಾಯಿತು[383]. ಗ್ರಾಮೀಣ ಜನರಲ್ಲಿ ಉಳಿತಾಯ ಮತ್ತು ಮಿತವ್ಯಯ ಸಾಧಿಸುವಂತೆ ಪ್ರೋತ್ಸಾಹಿಸಲು ಮತ್ತು ಆ ಉಳಿತಾಯವನ್ನು ಬಂಡವಾಳವಾಗಿ ಬಳಸಿಕೊಂಡು ಅಭಿವೃದ್ಧಿಗೊಳ್ಳುವಂತೆ ಮಾಡಲು ಗ್ರಾಮೀಣ ಉಳಿತಾಯ ಬ್ಯಾಂಕುಗಳನ್ನು ಸ್ಥಾಪಿಸಲಾಯಿತು[384]. ಹೀಗೆ ಸಹಕಾರಿ ಚಳವಳಿಯು ರಾಜ್ಯದಾದ್ಯಂತ ಹರಡಿ 1937ರ ವೇಳೆಗೆ 1862 ಸಂಘಗಳಿದ್ದು 62,229 ಸದಸ್ಯರು ಮತ್ತು 55,00,845 ರೂಪಾಯಿಗಳ ಬಂಡವಾಳದ ಮೇಲೆ ಕಾರ್ಯನಿರ್ವಹಿಸುತ್ತಿದ್ದವು[385]. ಈ ಸಹಕಾರ ಸಂಘಗಳು ಸಹಕಾರಿ ಚಟುವಟಿಕೆಗಳ ಜೊತೆಗೆ ಗ್ರಾಮೀಣ ಜನರ ಸೌಲಭ್ಯಗಳ ವೃದ್ಧಿಗೆ ದುಡಿದವು. ಅವು ಶಾಲೆಗಳ ನಿರ್ವಹಣೆ, ಓದುವ ಕೊಠಡಿಗಳನ್ನು ನಿರ್ಮಿಸುವುದು ಮುಂತಾದ ಗ್ರಾಮೀಣಾಭಿವೃದ್ಧಿ ಚಟುವಟಿಕೆಗಳಲ್ಲಿ ಆಸಕ್ತಿವಹಿಸಿ ದುಡಿದವು. ಸರ್ಕಾರವು ಸಹಕಾರಿ ಚಳವಳಿಯನ್ನು ಪ್ರೋತ್ಸಾಹಿಸಲು ಸಹಕಾರ ಸಂಘಗಳ ಸ್ಥಾಪನೆಗೆ ನೀಡುವ ಸ್ಟಾಂಪ್ ಡ್ಯೂಟಿಯನ್ನು ಮನ್ನಾ ಮಾಡಿತು. ನಾಲ್ವಡಿಯವರು 1905ರಲ್ಲಿ ಈ ಚಳವಳಿಯನ್ನು ಉದ್ಘಾಟಿಸುವಾಗ ಹಿಂದುಳಿದ ಸಹಕಾರ ಸಂಘಗಳಿಗೆ ಬಡ್ಡಿರಹಿತ 2000 ರೂಪಾಯಿಗಳನ್ನು ಘೋಷಿಸಿದ್ದರು. ಸಹಕಾರ ಕ್ಷೇತ್ರದಲ್ಲಿ ತೊಡಗಿಕೊಂಡಿರುವವರಿಗೆ ಪ್ರೋತ್ಸಾಹಿಸಲು ಯುವರಾಜರಾದ ಕಂಠೀರವ ನರಸಿಂರಾಜ ಒಡೆಯರು 1918-19ರಲ್ಲಿ ಉತ್ತಮ ಸಹಕಾರ ಸಂಘಗಳಿಗೆ ಬಹುಮಾನ ನೀಡುವ ಕ್ರಮವನ್ನು ಜಾರಿಗೆ

382. *ಮೈಸೂರ್ ಅಗ್ರಿಕಲ್ಚರಲ್ ಕ್ಯಾಲೆಂಡರ್.*, 1929, ಪು. 35

383. *ಆನ್ಯುಯಲ್ ರಿಪೋರ್ಟ್ ಆನ್ ದಿ ಕೋ-ಆಪರೇಟಿವ್ ಸೊಸೈಟೀಸ್ ಇನ್ ಮೈಸೂರ್*, 1926-27, ಪು. 198

384. *ಗವರ್ನಮೆಂಟ್ ಪ್ರೊಸೀಡಿಂಗ್*, ಆರ್ಡರ್ ಆನ್ ಡೇಟೆಡ್: 22-12-1915

385. *ಅಗ್ರಿಕಲ್ಚರ್ ಇನ್ ಮೈಸೂರ್*, 1939, ಗವರ್ನಮೆಂಟ್ ಪ್ರೆಸ್, ಬೆಂಗಳೂರು, ಪು. 187

386. *ಹಯವದನ ರಾವ್ ಸಿ. (ಸಂ).*, ಪೂರ್ವೋಕ್ತ, ಪು. 316-317

ತಂದರು. ರಾಜ್ಯದ ಅತ್ಯುತ್ತಮ ಕೈಗಾರಿಕಾ ಸಂಘಕ್ಕೆ ಮಹಾರಾಜ ನಾಲ್ವಡಿಯವರ ಹೆಸರಿನಲ್ಲಿ ಬಹುಮಾನಗಳನ್ನು ನೀಡಲಾಗುತ್ತಿತ್ತು. ಉಳಿದ ಬಹುಮಾನಗಳನ್ನು ಯುವರಾಜರ ಹೆಸರಲ್ಲಿ ಕೊಡಲಾಗುತ್ತಿತ್ತು. ಬಹುಮಾನವನ್ನು ಪಾರಿತೋಷಕದ ರೂಪದಲ್ಲಿಯು ನೀಡಲಾಗುತ್ತಿತ್ತು[386].

ಹೀಗೆ ನಾಲ್ವಡಿಯವರು ಆರ್ಥಿಕ ಚಟುವಟಿಕೆಗಳಿಗೆ ಸರ್ಕಾರ ನೀಡುತ್ತಿದ್ದ ಸೀಮಿತ ಸಾಲ ಸೌಲಭ್ಯಗಳ ಜೊತೆಗೆ ತಮ್ಮ ಉಳಿತಾಯದ ಹಣವನ್ನು ಬಂಡವಾಳವಾಗಿ ಹೂಡಿ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡಿದರು. ಇಡೀ ಸಹಕಾರಿ ಚಳವಳಿಯು ಜನರಲ್ಲಿ ಉಳಿತಾಯ, ಮಿತವ್ಯಯ ಮತ್ತು ಸಾಹಸಶೀಲ ಉದ್ಯಮಶೀಲತೆಗಳನ್ನು ಮೈಸೂರು ಸಂಸ್ಥಾನದ ಜನರು ಅಳವಡಿಸಿಕೊಂಡು ರಾಜ್ಯದ ಅಭಿವೃದ್ಧಿ ಚಟುವಟಿಕೆಗಳಲ್ಲಿ ಪಾಲುದಾರರಾಗುವಂತೆ ಮಾಡಿದರು. ಅಲ್ಲದೇ ನಾಲ್ವಡಿಯವರು ಅಭಿವೃದ್ಧಿ ಯೋಜನೆಗಳನ್ನು ಸಿದ್ಧಪಡಿಸಲು ಅಧಿಕಾರಿಗಳು ಮತ್ತು ಅಧಿಕಾರೇತರ ಅನುಭವಿಗಳ ವಿವಿಧ ಸಮಿತಿಗಳನ್ನು ರಚಿಸಿ ಕೆಲಸದಲ್ಲಿ ತೊಡಗಿಸಿದರು. ರಾಜ್ಯದ ಹಣಕಾಸು ಸಂಸ್ಥೆಗಳನ್ನು ದೃಢಗೊಳಿಸಲು ಕ್ರಮ ಕೈಗೊಂಡರು. ಹಾಗೆಯೇ ಬ್ರಿಟಿಷ್ ಸರ್ಕಾರದೊಂದಿಗೆ 1913ರಲ್ಲಿ ಒಂದು ಒಪ್ಪಂದವನ್ನು ಮಾಡಿಕೊಳ್ಳುವ ಮೂಲಕ ರಾಜ್ಯದ ಅಭಿವೃದ್ಧಿ ಯೋಜನೆಗಳನ್ನು ಕೈಗೊಳ್ಳಲು ಇನ್ನೂ ಹೆಚ್ಚಿನ ಅಧಿಕಾರವನ್ನು ಪಡೆದರು. ರಾಜ್ಯದ ಆಯವ್ಯಯದ ಸ್ವರೂಪವನ್ನು ಬದಲಾಯಿಸಿ ಅದಕ್ಕೆ ಅಭಿವೃದ್ಧಿಪರ ಹೂಡಿಕೆ ಲಕ್ಷಣವನ್ನು ತಂದುಕೊಟ್ಟರು. ಇಂತಹ ಕಾರ್ಯ ಚಟುವಟಿಕೆಗಳು ರಾಜ್ಯದ ಹಣಕಾಸು ನಿರ್ವಹಣೆಯಲ್ಲಿ ಮಹತ್ತರ ತಿರುವಿಗೆ ಅವಕಾಶ ಮಾಡಿಕೊಟ್ಟು ಮೈಸೂರು ಬ್ಯಾಂಕ್‌ನ ಸ್ಥಾಪನೆಗೆ ದಾರಿ ಮಾಡಿಕೊಟ್ಟವು.

### *ಮೈಸೂರು ಬ್ಯಾಂಕ್‌ನ ಸ್ಥಾಪನೆ*

ಮೈಸೂರು ರಾಜ್ಯದಲ್ಲಿ ಸರ್ಕಾರದ ಹಣಕಾಸು ವ್ಯವಹಾರ ಹಾಗೂ ಸಾರ್ವಜನಿಕರ ವಾಣಿಜ್ಯ ವ್ಯವಹಾರಗಳಿಗಾಗಿ ವ್ಯವಸ್ಥಿತವಾದ ಬ್ಯಾಂಕ್ ಇರಲಿಲ್ಲ. ರಾಜ್ಯದ ಹಣಕಾಸು ಚಟುವಟಿಕೆಗಳನ್ನು ಕೃಷಿ ಬ್ಯಾಂಕುಗಳು, ಜಾಯಿಂಟ್ ಸ್ಟಾಕ್ ಕಂಪನಿಗಳು, ಸಹಕಾರಿ ಸಂಘಗಳು ನೋಡಿಕೊಳ್ಳುತ್ತಿದ್ದವು. ಹಾಗಾಗಿ ವ್ಯವಸ್ಥಿತ ಬ್ಯಾಂಕ್‌ನ ಅವಶ್ಯಕತೆ ಎಲ್ಲರಿಗೂ ಅಗತ್ಯವೆನಿಸಿತ್ತು. ಆರ್ಥಿಕ ಪರಿಷತ್ತಿನ ಕೈಗಾರಿಕಾ ಮತ್ತು ವಾಣಿಜ್ಯ ಸಮಿತಿಯು 1912ರಲ್ಲಿ ರಾಜ್ಯದ ಕೈಗಾರಿಕೆ ಮತ್ತು ವಾಣಿಜ್ಯವನ್ನು ಪ್ರೋತ್ಸಾಹಿಸಲು ಬ್ಯಾಂಕೊಂದನ್ನು ಸ್ಥಾಪಿಸಬೇಕೆಂದು ಸಲಹೆ ನೀಡಿತು[387]. ಆ ಸಲಹೆಯಂತೆ ಮೈಸೂರು ಬ್ಯಾಂಕ್ 1913 ರ ಮಾರ್ಚಿಯಲ್ಲಿ ಸ್ಥಾಪನೆಗೊಂಡಿತು[388]. ನಾಲ್ವಡಿಯವರ ಸರ್ಕಾರವು ಬ್ಯಾಂಕಿನ ಸ್ಥಾಪನೆಗೆ 5 ಲಕ್ಷ

---

*387. ಶಾಮರಾವ್ ಎಂ., ಪೂರ್ವೋಕ್ತ, ಪು. 272*

*388. ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್ : ಇಂಡಸ್ಟ್ರೀಸ್ ಅಂಡ್ ಕಾಮರ್ಸ್, ಪು. 6*

ರೂಪಾಯಿಗಳನ್ನು ಆರಂಭ ಠೇವಣಿಯಾಗಿ ನೀಡಿತು. ಶೇಕಡ ಮೂರರ ಬಡ್ಡಿಯ ದರದಲ್ಲಿ ಐದು ಲಕ್ಷ ರೂಪಾಯಿಗಳನ್ನು ಕಾರ್ಯನಿರತ ಬಂಡವಾಳವಾಗಿ ನೀಡಿತು. ಬ್ಯಾಂಕಿನ ನಿರ್ದೇಶಕರು ತಲಾ 5 ಸಾವಿರ ರೂಪಾಯಿಗಳನ್ನು ಠೇವಣಿ ನೀಡಬೇಕಾಯಿತು. ಈ ಬ್ಯಾಂಕಿನ ಮುಖ್ಯ ಕಾರ್ಯಗಳೆಂದರೆ ಸರ್ಕಾರಿ ಖಜಾನೆಯಾಗಿ ಕೆಲಸ ಮಾಡುವುದು, ಆರ್ಥಿಕ ಚಟುವಟಿಕೆಗಳಲ್ಲಿ ಬಂಡವಾಳ ಒದಗಿಸುವುದು, ಸರ್ಕಾರಿ ಖಜಾನೆಗಳಿಲ್ಲದ ಸ್ಥಳಗಳಲ್ಲಿ ಈ ಬ್ಯಾಂಕು ಖಜಾನೆಯಂತೆ ಕೆಲಸ ಮಾಡುವುದಾಗಿತ್ತು[389]. ಮೈಸೂರು ಬ್ಯಾಂಕು ಆರಂಭಗೊಂಡ ಎರಡು ವರ್ಷಗಳಲ್ಲೇ ಅಂದರೆ 1915ರ ಜುಲೈನಲ್ಲಿ ಸಾರ್ವಜನಿಕ ಠೇವಣಿ 20,32,000 ರೂಪಾಯಿಗಳಿಗೇರಿತು. ಹಾಗೆಯೇ ಒಟ್ಟು ವ್ಯವಹಾರವು 41 ಲಕ್ಷ ರೂಪಾಯಿಗಳಿಗೆ ಹೆಚ್ಚಿತು. ನಿವ್ವಳ ಲಾಭವು 1,10,000 ರೂಪಾಯಿಗಳಿದ್ದವು.

ಮೈಸೂರು ಬ್ಯಾಂಕ್ ಸ್ಥಾಪನೆಗೊಂಡರೂ ಸಹ ಬೆಳವಣಿಗೆಗೊಳ್ಳುತ್ತಿದ್ದ ಮೈಸೂರಿನ ಎಲ್ಲ ಆರ್ಥಿಕ ಚಟುವಟಿಕೆಗಳಿಗೆ ಅದರಲ್ಲೂ ಕೈಗಾರಿಕೆಗಳಿಗೆ ಅಗತ್ಯವಿದ್ದ ದೊಡ್ಡ ಪ್ರಮಾಣದ ಬಂಡವಾಳವನ್ನು ಒದಗಿಸಲು ಸಾಕಾಗುತ್ತಿರಲಿಲ್ಲ. ಹಾಗಾಗಿ ಆರ್ಥಿಕ ಪರಿಷತ್ತಿನ ಕೈಗಾರಿಕಾ ಸಮಿತಿಯು ನೀಡಿದ ಶಿಫಾರಸ್ಸಿನ ಪ್ರಕಾರ ನಾಲ್ವಡಿಯವರ ಸರ್ಕಾರವು 1918ರಲ್ಲಿ 'ಕೈಗಾರಿಕಾ ಹೂಡಿಕೆ ನಿಧಿ' ಮತ್ತು 'ಕೈಗಾರಿಕಾ ಅಭಿವೃದ್ಧಿ ನಿಧಿ' ಎಂಬ ಎರಡು ಪ್ರತ್ಯೇಕ ನಿಧಿಗಳನ್ನು ಸ್ಥಾಪಿಸಿತು. ಸರ್ಕಾರದ ಜೊತೆಗೆ ಸಾರ್ವಜನಿಕರೂ ಸಹ ಕೈಗಾರಿಕಾ ಹೂಡಿಕೆ ನಿಧಿಯಲ್ಲಿ, ಬಂಡವಾಳ ಹೂಡಿಕೆ ನಿಧಿಯಲ್ಲಿ ಬಂಡವಾಳವನ್ನು ಹೂಡಬಹುದಿತ್ತು[390]. ರಾಜ್ಯದ ಅಭಿವೃದ್ಧಿ ಯೋಜನೆಗಳಿಗೆ ಖಾಸಗಿ ಬಂಡವಾಳವು ಸಾಂಸ್ಥಿಕ ರೂಪದಲ್ಲಿ ಪ್ರವೇಶಿಸಿ ಸರ್ಕಾರಕ್ಕೆ ಬಂಡವಾಳದ ಕೊರತೆಯನ್ನು ನೀಗಿಸಿತು. ನಾಲ್ವಡಿಯವರು ತಮ್ಮ ಭಾಷಣಗಳಲ್ಲಿ ಆಪತ್ಕಾಲಕ್ಕೆ ಉಳಿತಾಯ ಮಾಡಿ, ಮಿತವ್ಯಯ ಸಾಧಿಸಿ ಎನ್ನುವ ಮೂಲಕ ಜನರಲ್ಲಿ ಉಳಿತಾಯ ಪ್ರಜ್ಞೆಯನ್ನು ಬೆಳೆಸಿದರು. ಗ್ರಾಮೀಣ ಜನರಲ್ಲಿ ಉಳಿತಾಯ ಪ್ರವೃತ್ತಿ ಬೆಳೆಸಲು 1915ರಲ್ಲಿ ಉಳಿತಾಯ ಬ್ಯಾಂಕುಗಳನ್ನು ಸ್ಥಾಪಿಸಿದರು. ಹಾಗೆಯೇ ಶಾಲೆಗಳು, ಸಾರ್ವಜನಿಕ ಕಛೇರಿ ಮತ್ತು ಕಾರ್ಖಾನೆಗಳ ಕಾರ್ಮಿಕರಲ್ಲಿ ಉಳಿತಾಯ ಸಂಘಗಳನ್ನು ಸ್ಥಾಪಿಸಲಾಯಿತು. ಉಳಿತಾಯ ಸಂಘ ಮತ್ತು ಬ್ಯಾಂಕುಗಳು ಸಂಗ್ರಹಿಸಿದ ಹಣವನ್ನು ಕಾಯ್ದಿಡಲು ಹಾಗೂ ಉತ್ಪಾದನಾ ಚಟುವಟಿಕೆಗಳಿಗೆ ಬಂಡವಾಳವಾಗಿ ಬಳಸುವ ಉದ್ದೇಶಕ್ಕಾಗಿ ಫೀಡರ್ ಬ್ಯಾಂಕುಗಳು ಅಥವಾ ಪೋಷಕ ಬ್ಯಾಂಕುಗಳನ್ನು ಸ್ಥಾಪಿಸಿದರು[391]. ಹೀಗೆ ಸಾರ್ವಜನಿಕರಲ್ಲಿ ಉಳಿತಾಯ ಮತ್ತು ಬಂಡವಾಳ ತೊಡಗಿಸುವಿಕೆಯ ಪ್ರವೃತ್ತಿಗಳನ್ನು ಬೆಳೆಸುವ ಮೂಲಕ ಖಾಸಗಿ ಮತ್ತು ಸಾರ್ವಜನಿಕ ವಲಯಗಳಿಗೆ ಬೇಕಾದ ಮೂಲ ಬಂಡವಾಳವನ್ನು ಸ್ಥಳೀಯವಾಗಿಯೇ ಸಂಗ್ರಹವಾಗುವಂತೆ ಮಾಡಿದರು. ಇದು ಹಣಕಾಸಿನ ಕ್ಷೇತ್ರವನ್ನಷ್ಟೇ ಅಲ್ಲದೇ ವಾಣಿಜ್ಯ ಕ್ಷೇತ್ರದ ಅಭಿವೃದ್ಧಿಗೂ ಸಹಕಾರಿಯಾಯಿತು.

---

*389. **ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್**, 1915-16, ಪು. 16*

*390. **ಬ್ಲೂ ಬುಕ್ ಜರ್ನಲ್**: 1918-19, ಸಂಪುಟ - IV, ಪು. 396*

*391. **ಹಯವದನರಾವ್ ಸಿ. (ಸಂ).**, ಪೂರ್ವೋಕ್ತ, ಸಂಪುಟ - IV, ಪು. 396*

ಬ್ಯಾಂಕಿಂಗ್, ವ್ಯಾಪಾರ, ವಾಣಿಜ್ಯ ಹಾಗೂ ಕೈಗಾರಿಕೆಗಳ ಅಭಿವೃದ್ಧಿಗೆ ಪೂರಕವಾಗಿ ನಿಂತದ್ದು ಸಾರಿಗೆ ಸಂಪರ್ಕಗಳು. ಆರ್ಥಿಕ ವ್ಯವಸ್ಥೆಯ ಜೀವನಾಡಿಗಳಾದ ರಸ್ತೆ ಮತ್ತು ರೈಲು ಮಾರ್ಗಗಳಿಲ್ಲದೆ ಕೈಗಾರಿಕೆಗಳಾಗಲೀ, ವ್ಯಾಪಾರ ವ್ಯವಹಾರಗಳಾಗಲೀ ಸುಸ್ಪಷ್ಟವಾಗಿ ಬೆಳೆಯಲಾರವು. ಆದುದರಿಂದ ಮೈಸೂರು ಸಂಸ್ಥಾನದಲ್ಲಿ ಸಾರಿಗೆ ಸಂಪರ್ಕಗಳು ನಮ್ಮ ಅಧ್ಯಯನದ ಕಾಲಾವಧಿಯಲ್ಲಿ ಹೇಗೆ ಬೆಳೆದು ಬಂದವು ಎಂಬುದನ್ನು ಆ ಬೆಳವಣಿಗೆಯಲ್ಲಿ ನಾಲ್ವಡಿಯವರ ಪ್ರೋತ್ಸಾಹಕ ಪಾತ್ರವೇನು ಎಂಬುದನ್ನು ಮುಂದಿನ ಶೀರ್ಷಿಕೆಯಲ್ಲಿ ಪ್ರಸ್ತಾಪಿಸಲಾಗುವುದು.

### *v) ಸಾರಿಗೆ ಸಂಪರ್ಕ ವ್ಯವಸ್ಥೆಯಲ್ಲಿ ಆಧುನಿಕತೆ*

ಒಂದು ದೇಶದ ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆಯನ್ನು ಮಾನವನ ದೇಹದ ರಕ್ತವಾಹಿನಿಗಳ ಜಾಲಕ್ಕೆ ಹೋಲಿಸುವುದುಂಟು. ಈ ವ್ಯವಸ್ಥೆಯು ಸುಸಂಘಟಿತವಾಗಿದ್ದಲ್ಲಿ ಮಾತ್ರ ದೇಶದ ಆರ್ಥಿಕ ಚಟುವಟಿಕೆಯ ಸಮೃದ್ಧಿ ಸಾಧ್ಯ. ಆಧುನಿಕ ಸಾರಿಗೆ ಸಂಪರ್ಕ ಸಾಧನಗಳು ಒಂದು ದೇಶದ ಅಭಿವೃದ್ಧಿಯ ನರನಾಡಿಗಳಂತೆ ಕೆಲಸ ಮಾಡುತ್ತವೆ. ಮೈಸೂರು ಪ್ರದೇಶದಲ್ಲಿ ಸಾರಿಗೆ ಸಂಪರ್ಕಗಳ ಬೆಳವಣಿಗೆ ಪ್ರಾಚೀನ ಕಾಲದಿಂದಲೂ ಅಭಿವೃದ್ಧಿಗೊಂಡಿತ್ತು. ಆದರೆ ಆಧುನಿಕ ಕಾಲಕ್ಕೆ ಹಳೆಯ ಮೈಸೂರು ಸಂಸ್ಥಾನದಲ್ಲಿನ ರಸ್ತೆಗಳು ಕಿರಿದಾಗಿಯೂ, ಅಂಕುಡೊಂಕಾಗಿದ್ದು ಗ್ರಾಮೀಣ ಅವಶ್ಯಕತೆಗಳನ್ನು ಪೂರೈಸುವಂತಿದ್ದವು. ಅಲ್ಲದೆ ಸಾರಿಗೆ ಸಾಗಾಣಿಕೆಗೆ ಪ್ರಾಣಿಗಳನ್ನು ಅಥವಾ ಒರಟಾದ ಬಂಡಿಗಳನ್ನು ಬಳಸಲಾಗುತ್ತಿತ್ತು. ಸಂಸ್ಥಾನದ ಕೆಲವು ರಸ್ತೆಗಳನ್ನು ಹೊರತುಪಡಿಸಿದರೆ ಇನ್ನುಳಿದ ರಸ್ತೆಗಳು ಸಿಮೆಂಟು ಅಥವಾ ಡಾಂಬರು ಹಾಸು ನೆಲವಿಲ್ಲದ, ಸೇತುವೆಗಳಿಲ್ಲದ ಗುಂಡಿಕೊರಕಲುಗಳಿಂದ ತುಂಬಿದ್ದವು[392]. ಈ ಮಾಹಿತಿಗೆ ಪೂರಕವಾಗಿ ತಿರುಮಲೆ ತಾತಾಚಾರ್ಯಶರ್ಮ ರವರು ಅಂದಿನ ರಸ್ತೆಗಳ ವಾಸ್ತವಿಕ ಚಿತ್ರಣವನ್ನು ಈ ರೀತಿಯಾಗಿ ವಿವರಿಸಿದ್ದಾರೆ "ಟಾರು, ಸೀಮೆಂಟುಗಳು ಇಂಗ್ಲಿಷ್ ನಿಘಂಟುಗಳಲ್ಲಿದ್ದ ಶಬ್ದಗಳೇ ಹೊರತು ನಮ್ಮ ಜನರ ಬಳಕೆಯಲ್ಲಿದ್ದ ಮಾತುಗಳಲ್ಲ. ಅವರ ಕಿವಿಗಳಿಗೆ ಸಹ ಈ ಮಾತುಗಳ ಪರಿಚಯವಿರಲಿಲ್ಲ. ಅಂದ ಮೇಲೆ ಬಂಡಿಯಲ್ಲಿ ಕುಳಿತವರು ರಸ್ತೆಯ "ಉಬ್ಬರ ವಿಳಿತ" ಗಳಿಗೆ ಗುರಿಯಾಗಬೇಕಾದದ್ದು ವಿಧಿವಿಲಾಸ! ಏರು, ತಗ್ಗು, ಗುಣಿ, ಅಡ್ಡಕಾಲುವೆ ಮೊದಲಾದವುಗಳನ್ನು ದಾಟುವಾಗ ಬಂಡಿಯಲ್ಲಿ ಕೂತವರು ತಮಗೆ ತಿಳಿಯದೆಯೇ ಮಾಡುವ 'ಸರ್ಕಸ್' ಚಮತ್ಕಾರಗಳನ್ನು ಊಹಿಸುವುದಕ್ಕೆ ಸಾಧ್ಯವಿಲ್ಲ. ತಲೆಗೆ ತಲೆ ಡಿಕ್ಕಿ ಹೊಡೆದಾಗ, ಒಬ್ಬರ ಮೇಲೊಬ್ಬರು ಬಿದ್ದಾಗ, ನೋಡಬೇಕು ನೋವು ನಾಚಿಕೆ ಬೆರೆತ ನಗುವನ್ನು; ಬೇವು-ಬೆಲ್ಲ ಬೆರೆತಂತೆ! ದಾರಿ ಕೊಂಚ ಕೊರಕಲಾದಾಗ, ಅಡ್ಡ ಕಾಲುವೆ ಕೊಂಚ ಆಳವೆಂದು ಕಂಡು

---

392. *ಸೂರ್ಯನಾಥ್ ಯು. ಕಾಮತ್ (ಸಂ)., ಪೂರ್ವೋಕ್ತ, ಪು. 200*

393. *ತಿ.ತಾ.ಶರ್ಮ., ನನ್ನ ಜೀವನ ಮತ್ತು ವ್ಯೆಯ (ಆತ್ಮ ಕಥೆ) ನವನೀತ ಪ್ರಕಾಶನ, ಬೆಂಗಳೂರು, 2002, ಪು. 81*

ಬಂದಾಗ, ಬಂಡಿಯಲ್ಲಿ ಕೂತ ಗಂಡಾಳುಗಳೆಲ್ಲ ಇಳಿದು ಬಿಡುವರು. ಬೇಕೆನಿಸಿದರೆ ಉರುಳುವ ಚಕ್ರಗಳಿಗೆ ಕೈ ಹಾಕುವರು. ಎಲ್ಲ "ಸುಖ ಪ್ರಯಾಣ"![393]. ಇಂತಹ ಹಳೆಯ ರಸ್ತೆಗಳನ್ನು ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಸೈನ್ಯ ಹಾಗೂ ಫಿರಂಗಿ ಸಾಗಾಣಿಕೆಯ ಸಲುವಾಗಿ ಒಳ್ಳೆಯ ರಸ್ತೆಗಳನ್ನಾಗಿ ರಚಿಸುವ ಪ್ರಯತ್ನ ಪ್ರಾರಂಭಗೊಂಡಿತು. ಆದರೆ ಆ ರಸ್ತೆಗಳು ತರಾತುರಿಯಿಂದ ಸುಧಾರಿತ ಹಳೆಯ ರಸ್ತೆಗಳಾಗಿದ್ದು, ಸ್ವಲ್ಪ ಕಾಲದಲ್ಲಿಯೇ ನಿರುಪಯೋಗಿಯಾದವು. ಸುಧಾರಿಸಿದ ಮತ್ತು ಸುವ್ಯವಸ್ಥಿತವಾದ ಜಲ್ಲಿ ಹಾಕಿದ ರಸ್ತೆಗಳು ಹಾಗೂ ಸೇತುವೆಗಳು ಆಧುನಿಕ ಯುಗದ ಕೊಡುಗೆಯಾಗಿವೆ.

ಹತ್ತೊಂಬತ್ತನೇ ಶತಮಾನದ ಮಧ್ಯದವರೆಗೆ ರಸ್ತೆ ಮಾಡುವುದು ಅತಿ ನಿಧಾನದ ಮತ್ತು ಒರಟಾದ ಕೆಲಸವಾಗಿತ್ತು. 1856ನೇ ಜೂನ್ ತಿಂಗಳಲ್ಲಿ ಹಳೆಯ ಮೈಸೂರು ಪ್ರದೇಶದಲ್ಲಿ ಸ್ಥಾಪನೆಗೊಂಡು ಲೋಕೋಪಯೋಗಿ ಇಲಾಖೆಯು ರಾಜ್ಯ ರಸ್ತೆಗಳು, ಪ್ರಾಂತೀಯ ರಸ್ತೆಗಳು ಹಾಗೂ ಗ್ರಾಮೀಣ ರಸ್ತೆಗಳೆಂದು ವರ್ಗೀಕರಿಸಿ ರಸ್ತೆಗಳ ನಿರ್ಮಾಣದ ಕಾರ್ಯವನ್ನು ಕೈಗೊಂಡಿತು. ಆದರೆ ಮೋಟಾರು ವಾಹನಗಳ ಬಳಕೆ ಆರಂಭಗೊಂಡಿದ್ದರಿಂದ ಸಾರಿಗೆ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸುವ ಅವಶ್ಯಕತೆ ಹೆಚ್ಚಿತು. ಈ ಅವಶ್ಯಕತೆಗೆ ತಕ್ಕಂತೆ ನಾಲ್ವಡಿಯವರು ತಮ್ಮ ಆಡಳಿತಾವಧಿಯಲ್ಲಿ ಸಾರಿಗೆ ಸಂಪರ್ಕ ವ್ಯವಸ್ಥೆಯಲ್ಲಿ ಹೊಸ ಆಲೋಚನೆಗಳನ್ನು, ಅನುಕರಣೆಗಳನ್ನು, ಕೃಷಿಕೈಗಾರಿಕೆ ಮತ್ತು ವಾಣಿಜ್ಯ ಕ್ಷೇತ್ರಗಳ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಅಳವಡಿಸುವ ಮೂಲಕ ಆ ಕ್ಷೇತ್ರವನ್ನು ಅಭಿವೃದ್ಧಿಪಡಿಸಲು ಹೇಗೆ ಪ್ರೋತ್ಸಾಹಿಸಿದರು ಎಂಬುದನ್ನು ಮುಂದೆ ಪ್ರಸ್ತಾಪಿಸಲಾಗಿದೆ.

***ರಸ್ತೆ ಸಾರಿಗೆ ಅಭಿವೃದ್ಧಿ***

ನಾಲ್ವಡಿಯವರು ಸಾರಿಗೆ ಸಂಪರ್ಕ ವ್ಯವಸ್ಥೆಯಲ್ಲಿ ರಸ್ತೆ, ರೈಲುಮಾರ್ಗ ಹಾಗೂ ಅವುಗಳನ್ನು ಸಂಪರ್ಕಿಸುವ ಸೇತುವೆಗಳ ಮಹತ್ವವನ್ನು ಅರಿತವರಾಗಿದ್ದರು. ಹಾಗಾಗಿ ಅವರು ರಸ್ತೆ, ರೈಲುಮಾರ್ಗಗಳನ್ನಲ್ಲದೇ ಸೇತುವೆಗಳನ್ನು ನಿರ್ಮಿಸಲು ಸರ್ಕಾರದ ಹಾಗೂ ಜನರ ಸಹಭಾಗಿತ್ವವನ್ನು ಬಳಸಿಕೊಳ್ಳಲು ಮುಂದಾದರು. ನಾಲ್ವಡಿಯವರು ರಸ್ತೆಯ ಮಹತ್ವವನ್ನು ಕುರಿತಂತೆ ಸೇತುವೆಯೊಂದರ ಉದ್ಘಾಟನೆಯಲ್ಲಿ ಹೀಗೆ ಹೇಳಿದರು. "ಮೋಟಾರು ವಾಹನಗಳ ಆವಿಷ್ಕಾರವು ಸಾರಿಗೆ ವಿಧಾನದಲ್ಲಿ ಆಶ್ಚರ್ಯಕಾರಕವಾದ ಮಾರ್ಪಾಡಿಗೆ ಕಾರಣವಾಗಿದೆ. ದೇಶದ ಆರ್ಥಿಕ ಬೆಳವಣಿಗೆಗೆ ರಸ್ತೆ ಅತ್ಯಂತ ಶಕ್ತವಾದ ಅಂಶ"[394]. ಮೊದಲು ರಸ್ತೆಗಳ ನಿರ್ಮಾಣ ಮತ್ತು ಉಸ್ತುವಾರಿಯನ್ನು ಸರ್ಕಾರದ ಸಾರ್ವಜನಿಕ ಕಾಮಗಾರಿ ಇಲಾಖೆ ನಿರ್ವಹಿಸುತ್ತಿತ್ತು. ನಾಲ್ವಡಿಯವರ ಸರ್ಕಾರವು ರಾಜ್ಯದ ರಸ್ತೆಗಳನ್ನು ಅಭಿವೃದ್ಧಿಗೊಳಿಸಲು

---

*394. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 330*

ಅವುಗಳನ್ನು ಪ್ರಾಂತೀಯ ರಸ್ತೆಗಳು, ಜಿಲ್ಲಾ ನಿಧಿ ರಸ್ತೆಗಳು ಮತ್ತು ಗ್ರಾಮ ರಸ್ತೆಗಳೆಂದು ವಿಂಗಡಿಸಲಾಯಿತು. ಪ್ರಾಂತೀಯ ರಸ್ತೆಗಳಿಗೆ ರಾಜ್ಯದ ನಿಧಿಯಿಂದ, ಜಿಲ್ಲಾ ರಸ್ತೆಗಳಿಗೆ ಜಿಲ್ಲಾ ನಿಧಿಯಿಂದ ಪೂರ್ಣವಾಗಿ ಹಣ ನೀಡಲಾಗುತ್ತಿತ್ತು. ಗ್ರಾಮೀಣ ರಸ್ತೆಗಳ ನಿರ್ಮಾಣಕ್ಕೆ ರಾಜ್ಯವು ಅರ್ಧಭಾಗ ಅನುಧಾನ ನೀಡಿ ಇನ್ನುಳಿದ ಅರ್ಧಭಾಗವನ್ನು ಗ್ರಾಮಸ್ಥರು ಗ್ರಾಮಾಭಿವೃದ್ಧಿ ಯೋಜನೆಯಡಿಯಲ್ಲಿ ವಾರಕ್ಕೊಮ್ಮೆ ಅರ್ಧದಿನ ಶ್ರಮದಾನ ಮಾಡುವ ಮೂಲಕ ಭರಿಸಬೇಕಿತ್ತು[395]. ಹೀಗೆ ನಾಲ್ವಡಿಯವರ ಸರ್ಕಾರವು ವಿಶಾಲವಾದ ಗ್ರಾಮೀಣ ರಸ್ತೆಗಳ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ಗ್ರಾಮಸ್ಥರ ಸಹಭಾಗಿತ್ವ ಮಾಡಿಕೊಂಡಿದ್ದರಿಂದ ರಸ್ತೆಗಳು ಸುಸ್ಥಿತಿಯಲ್ಲಿರುವಂತಾಯಿತು.

ರಸ್ತೆಗಳ ಆಧುನಿಕತೆಯಲ್ಲಿ ರೈಲ್ವೆ ಪ್ರವೇಶಿಕೆಯ ಪಾತ್ರವು ಪ್ರಮುಖವಾದುದು. ರೈಲ್ವೆ ಮಾರ್ಗ ವಿಸ್ತರಣೆಗೊಂಡಂತೆ ರಾಜ್ಯದ ಎಲ್ಲ ಮೂಲೆಗಳಿಂದ ರೈಲು ಕೇಂದ್ರಗಳಿಗೆ ಸಂಪರ್ಕಿಸುವ ಅವಶ್ಯಕತೆ ಹೆಚ್ಚಿತು. ಅದರಲ್ಲೂ ಜಲ್ಲಿ ಹಾಕಿದ ಸಿಮೆಂಟು ಅಥವಾ ಡಾಂಬರಿನ ಹಾಸು ನೆಲವಿರುವ ರಸ್ತೆಗಳಿಗೆ ಬೇಡಿಕೆ ಹೆಚ್ಚಿತು. ವರ್ಷಪೂರ್ತಿ ಸುಗಮ ಸಾರಿಗೆಯ ಅನುಕೂಲಕ್ಕೆ ಸೇತುವೆಗಳ ಅವಶ್ಯಕತೆ ಕಂಡುಬಂದಿತು. ಒಟ್ಟಾರೆ ರೈಲ್ವೆ ಪ್ರವೇಶಿಕೆ ರಸ್ತೆಗಳ ಆಧುನೀಕರಣಕ್ಕೆ ಮತ್ತು ವಿಸ್ತರಣೆಗೆ ತೀವ್ರ ಪ್ರಭಾವ ಬೀರಿತೆಂದು ಹೇಳಬಹುದು[396]. ನಾಲ್ವಡಿಯವರು ರಸ್ತೆ ನಿರ್ಮಾಣ ಮತ್ತು ನಿರ್ವಹಣೆಯ ಜವಾಬ್ದಾರಿಯನ್ನು ಸ್ಥಳೀಯ ಸ್ವಯಂ ಸರ್ಕಾರಗಳಿಗೆ ವಹಿಸಿದರು. ಅದರಂತೆ ಪ್ರತಿ ಜಿಲ್ಲೆ, ತಾಲ್ಲೂಕು ಮತ್ತು ಪಟ್ಟಣಗಳ ರಸ್ತೆಗಳನ್ನು ಆಯಾಯ ಜಿಲ್ಲೆ, ತಾಲ್ಲೂಕು ಬೋರ್ಡ್ ಮತ್ತು ಮುನಿಸಿಪಾಲಿಟಿಗಳು ನಿರ್ಮಿಸುವ ಮತ್ತು ನಿರ್ವಹಣೆ ಮಾಡುವಂತಾಯಿತು. ಇದರಿಂದಾಗಿ ಈ ಕೆಳಕಂಡ ಅಂಕಿ ಅಂಶದಲ್ಲಿ ರಸ್ತೆಗಳು ವಿಸ್ತರಣೆಗೊಂಡವು[397].

| ವರ್ಷ | ರಾಜ್ಯನಿಧಿ ರಸ್ತೆ ಉದ್ದ | ಜಿಲ್ಲಾ ನಿಧಿ ರಸ್ತೆ ಉದ್ದ | ಒಟ್ಟು |
|---|---|---|---|
| 1891 | 1730 | 3113 | 4843 |
| 1904 | 1927 | 3502 | 5429 |
| 1925-26 | 3318 | 5146 | 8464 |
| 1939-40 | 3567 | 6033 | 9600 |

ಮೇಲ್ಕಂಡ ಒಟ್ಟು ರಸ್ತೆಯಲ್ಲಿ 1917-18ರ ವೇಳೆಗೆ 1816 ಮೈಲಿ ಹಾಸು ನೆಲ ಮಾಡಲಾಗಿತ್ತು[398]. ಸಂಚಾರಿ

---

*395. ವಿಶ್ವೇಶ್ವರಯ್ಯ ಎಂ., ಸ್ಪೀಚಸ್, ಬೈ ಸರ್ ಎಂ. ವಿಶ್ವೇಶ್ವರಯ್ಯ (ದಿವಾನ್ ಆಫ್ ಮೈಸೂರ್ 1910-17), ಸಂಪುಟ - 1, 1917, ಬೆಂಗಳೂರು, ಪು. 194*

*396. ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಪು. 323-324*

*397. ಅದೇ., ಪು. 325*

*- ಸೂರ್ಯನಾಥ್ ಯು. ಕಾಮತ್., ಪೂರ್ವೋಕ್ತ, ಪು. 201*

*398. ರಿಪೋರ್ಟ್ ಆನ್ ದಿ ಆಡ್ಮಿನಿಸ್ಟ್ರೇಷನ್ ಆಫ್ ಪಬ್ಲಿಕ್ ವರ್ಕ್ಸ್ ಡಿಪಾರ್ಟ್‌ಮೆಂಟ್, 1917-18, ಪು. 14*

*399. ವೆಂಕಟರಾಮಯ್ಯ, ಸಿ. ಕೆ., ಪೂರ್ವೋಕ್ತ, ಪು. 334*

ರಸ್ತೆ ಮಾರ್ಗಗಳನ್ನು ಸುಸ್ಥಿತಿಯಲ್ಲಿಡಲು 'ರಸ್ತೆನಿಧಿ' ಎಂಬ ಒಂದು ನಿಧಿಯನ್ನು ಸ್ಥಾಪಿಸಿ ಅದರ ಸಹಾಯದಿಂದ ರಸ್ತೆ ಮಾರ್ಗಗಳನ್ನು ಉತ್ತಮ ಸ್ಥಿತಿಯಲ್ಲಿಡಲಾಯಿತು[399].

1924 ರ ವೇಳೆಗೆ ಪ್ರಮುಖ ಜಿಲ್ಲೆಗಳಲ್ಲಿ ಪೂರ್ಣಗೊಂಡಿದ್ದ ರಸ್ತೆಗಳ ಉದ್ದ ಈ ಕೆಳಗೆ ತಿಳಿಸಿದಂತಿತ್ತು.

| | |
|---|---|
| ಬೆಂಗಳೂರು | 215 ಮೈಲಿ |
| ಕೋಲಾರ | 211¾ ಮೈಲಿ |
| ತುಮಕೂರು | 189 ಮೈಲಿ |
| ಚಿತ್ರದುರ್ಗ | 220 ಮೈಲಿ |
| ಮೈಸೂರು | 386 ಮೈಲಿ |
| ಹಾಸನ | 191½ ಮೈಲಿ |
| ಶಿವಮೊಗ್ಗ | 283½ ಮೈಲಿ |
| ಕಡೂರು | 326 ¾ ಮೈಲಿ |

1914 ರಿಂದ 1940 ರ ವೇಳೆಗೆ ರಸ್ತೆಗಳ ಉದ್ದ ದ್ವಿಗುಣಗೊಂಡಿತು. ಮೈಸೂರು ಸಂಸ್ಥಾನದಲ್ಲಿ ಸರಾಸರಿ 100 ಚದರ ಮೈಲಿಗಳಿಗೆ ಇದ್ದ ರಸ್ತೆಯ ಉದ್ದ 36 ಮೈಲಿಗಳು. ಗ್ರಾಮೀಣ ಪ್ರದೇಶಗಳಲ್ಲಿ ರಸ್ತೆ ನಿರ್ಮಾಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದುದು ಈ ಅವಧಿಯ ಪ್ರಮುಖ ಲಕ್ಷಣ[400].

### *ಸೇತುವೆಗಳ ನಿರ್ಮಾಣ - ಸಾರಿಗೆ ಸಂಪರ್ಕದಲ್ಲಿ ಸುಧಾರಣೆ (ಆಧುನಿಕತೆ)*

ನಾಲ್ವಡಿಯವರ ಕಾಲದಲ್ಲಿ ರಸ್ತೆ ಸಾರಿಗೆ ಬೆಳವಣಿಗೆಗೆ ಪೂರಕವಾಗಿ ಅನೇಕ ಸೇತುವೆಗಳನ್ನು ನಿರ್ಮಿಸಲಾಯಿತು. ಮೈಸೂರಿನ ಪ್ರದೇಶದಲ್ಲಿನ ನದಿಗಳು ಮಳೆಗಾಲದಲ್ಲಿ ಸಾರಿಗೆ ಸಂಪರ್ಕ ವ್ಯವಸ್ಥೆಯನ್ನು ಕಡಿತಗೊಳಿಸುತ್ತಿದ್ದವು. ಹಾಗಾಗಿ ಮೈಸೂರು ಸರ್ಕಾರವು ಸಾರ್ವಜನಿಕ ಕಾಮಗಾರಿ ಇಲಾಖೆಯ ಮೂಲಕ ಅನೇಕ ಸೇತುವೆಗಳನ್ನು ನಿರ್ಮಿಸಿತ್ತು. ಸೇತುವೆ ನಿರ್ಮಾಣವು ಅತ್ಯಂತ ವೆಚ್ಚದಾಯಕವಾದುದು. ಉದಾಹರಣೆಗೆ 1868ರಲ್ಲಿ ತುಂಗಭದ್ರ ನದಿಗಡ್ಡಲಾಗಿ ಹರಿಹರದಲ್ಲಿ

---

400. *ನಂಜರಾಜ ಅರಸು ಪಿ. ವಿ. ಮತ್ತು ಚಂದ್ರರಾಜ ಅರಸು ಎಸ್. ಆರ್. (ಸಂ)., ನಾಲ್ವಡಿ ಕೃಷ್ಣರಾಜ ಒಡೆಯರ್ ಒಂದು ದರ್ಶನ, ಮೈಸೂರು, 1996, ಪು. 65-66*

ನಿರ್ಮಿಸಿದ ಸೇತುವೆಯು 3,48,096 ರೂಪಾಯಿಗಳ ವೆಚ್ಚದಿಂದ ನಿರ್ಮಿಸಿದುದಾಗಿತ್ತು. ನಾಲ್ವಡಿಯವರ ಆಡಳಿತಾವಧಿಯಲ್ಲಿ ನಿರ್ಮಿಸಿದ ಪ್ರಮುಖ ಸೇತುವೆಗಳೆಂದರೆ ;

ಹೊನ್ನಾಳಿ ಬಳಿ ತುಂಗಭದ್ರಾ ನದಿಗೆ

ಮೈಸೂರು ಜಿಲ್ಲೆಯಲ್ಲಿ ಹೊಸೂರು - ಬೇಗೂರು ರಸ್ತೆಯಲ್ಲಿ ಭೃಗು ನದಿಗೆ

ತೀರ್ಥಹಳ್ಳಿ - ಹುಲಿಕಲ್ ಘಾಟ್ ರಸ್ತೆಯಲ್ಲಿ ಮೂರು ಸೇತುವೆಗಳು

ಗೊರೂರಿನ ಬಳಿ ಹೇಮಾವತಿ ನದಿಗೆ

ಟಿ. ನರಸೀಪುರದ ಬಳಿ ಕಾವೇರಿ ನದಿಗೆ

ಎಡೆತೊರೆಯ ಬಳಿ ಕಾವೇರಿ ನದಿಗೆ

ರಾಮನಾಥಪುರದ ಬಳಿ ಕಾವೇರಿ ನದಿಗೆ

ಹಲಗೂರಿನ ಬಳಿ ಶಿಂಷಾ ನದಿಗೆ

ಹೊಳೆ ನರಸೀಪುರದ ಬಳಿ ಹೇಮಾವತಿ ನದಿಗೆ

ಬೇಲೂರು ಬಳಿ ಯಗಚಿ ನದಿಗೆ

ಬಾಳೆಹೊನ್ನೂರು ಬಳಿ ಭದ್ರಾ ನದಿಗೆ ನಿರ್ಮಿಸಲಾದ ಸೇತುವೆಗಳು ಪ್ರಮುಖವಾಗಿವೆ[401].

ನಾಲ್ವಡಿಯವರು ರಸ್ತೆ ನಿರ್ಮಾಣ ಕಾರ್ಯಕ್ಕೆ ಸರ್ಕಾರವೇ ಪೂರ್ಣ ಹಣವನ್ನು ತೊಡಗಿಸುವುದಕ್ಕೆ ಬದಲಾಗಿ ರಸ್ತೆ ಮತ್ತು ಸೇತುವೆಗಳ ನಿರ್ಮಾಣಕ್ಕೆ ಸ್ಥಳೀಯ ಸರ್ಕಾರಗಳನ್ನು ಪಾಲುದಾರರನ್ನಾಗಿ ಮಾಡಿಕೊಳ್ಳುವ ಯೋಜನೆಯನ್ನು ಜಾರಿಗೊಳಿಸಿದರು. ಈ ನಿಟ್ಟಿನಲ್ಲಿ 1902ರಲ್ಲೇ ಸ್ಥಳೀಯ ಸಂಸ್ಥೆಗಳ ನಿಬಂಧನೆಯನ್ನು ರೂಪಿಸಿ ಅದರಂತೆ ಜಿಲ್ಲಾಬೋರ್ಡ್, ತಾಲ್ಲೂಕು ಬೋರ್ಡ್ ಮತ್ತು ಸಂಯುಕ್ತ ಗ್ರಾಮ ಪಂಚಾಯಿತಿಗಳನ್ನು ಸ್ಥಾಪಿಸಲಾಯಿತು[402]. 1918ಲ್ಲಿ ಆ ನಿಬಂಧನೆಗೆ ತಿದ್ದುಪಡಿ ತಂದು ಚುನಾಯಿತ ಸದಸ್ಯರ ಬಹುಮತವಿರುವಂತೆ ಮಾಡಲಾಯಿತು[403]. ಈ ಸ್ಥಳೀಯ ಸಂಸ್ಥೆಗಳಿಗೆ ತಮ್ಮ ತಮ್ಮ ವ್ಯಾಪ್ತಿಯಲ್ಲಿ ಬರುವ ರಸ್ತೆ, ಸೇತುವೆಗಳ ನಿರ್ಮಾಣ, ಕಾಮಗಾರಿಗಳ ನಿರ್ವಹಣೆ, ನೈರ್ಮಲ್ಯ, ನೀರುಪೂರೈಕೆ, ವೈದ್ಯಕೀಯ ಶಿಕ್ಷಣ ಸಂಸ್ಥೆಗಳ ನಿರ್ವಹಣೆ ಇವೇ ಮೊದಲಾದ ಜವಾಬ್ದಾರಿಗಳನ್ನು

---

*401. ನಂಜರಾಜ ಅರಸು ಪಿ. ವಿ. ಮತ್ತು ಚಂದ್ರರಾಜ ಅರಸು ಎಸ್. ಆರ್. (ಸಂ), ಪೂರ್ವೋಕ್ತ, ಪು. 66*

*402. ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಸಂಪುಟ - IV, ಪು. 293*

*403. ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ 1918-19, ಪು. 24*

ವಹಿಸಿಕೊಡಲಾಗಿತ್ತು. 1918ರ ನಿಬಂಧನೆಯಲ್ಲಿ ಈ ಸಂಸ್ಥೆಗಳು ತಮ್ಮದೇ ಆದ ಸ್ವತಂತ್ರ ನಿಧಿ ಹೊಂದುವಂತೆ, ಸ್ಥಳೀಯ ಶುಲ್ಕಗಳಲ್ಲಿ ಅರ್ಧಕ್ಕೆ ಕಡಿಮೆಯಿಲ್ಲದ ಮೊತ್ತವು ಆ ನಿಧಿಗಳಿಗೆ ಸಲ್ಲುವಂತೆ ವ್ಯವಸ್ಥೆಗೊಳಿಸಲಾಯಿತು. ಈ ಸಂಸ್ಥೆಗಳು ತಮ್ಮ ವ್ಯಾಪ್ತಿಯಲ್ಲಿ ಯೋಜನೆಗಳನ್ನು ರೂಪಿಸಿ ಸರ್ಕಾರದ ಅನುಮೋದನೆ ಪಡೆದು ಅದಕ್ಕಾಗಿ ಬೇಕಾಗುವ ಬಂಡವಾಳವನ್ನು ಸಾರ್ವಜನಿಕರಿಂದ ಸಾಲ ಎತ್ತುವ ಮತ್ತು ವಿಶೇಷ ಸುಂಕ ವಿಧಿಸುವ ಅಧಿಕಾರ ಪಡೆದವು[404].

ನಾಲ್ವಡಿಯವರು ಕಾವೇರಿಗಡ್ಡಲಾಗಿ ಟಿ. ನರಸೀಪುರದ ಬಳಿ ನಿರ್ಮಿಸಿದ ಸೇತುವೆಯನ್ನು ಉದ್ಘಾಟಿಸಿ "ರಸ್ತೆಗಳ ಅಭಿವೃದ್ಧಿಗೆ ಸರ್ಕಾರ ಮತ್ತು ಸ್ಥಳೀಯ ಸಂಸ್ಥೆಗಳಾದ ಜಿಲ್ಲಾ ಬೋರ್ಡ್‌ಗಳು ಹೆಚ್ಚು ಆಸಕ್ತಿ ವಹಿಸಿವೆ, ಅದರಲ್ಲಿ ಎಲ್ಲೆಲ್ಲಿ ಸೇತುವೆಗಳ ಅವಶ್ಯಕತೆಯಿದೆಯೋ ಅಲ್ಲೆಲ್ಲಾ ಯೋಜಿಸಲಾಗಿದೆ. ನಿರ್ಮಾಣ ಅಷ್ಟೇ ಅಲ್ಲ ರಸ್ತೆಗಳನ್ನು ಮತ್ತು ಸೇತುವೆಗಳನ್ನು ತೃಪ್ತಿಕರವಾದ ಸ್ಥಿತಿಯಲ್ಲಿ ನಿರ್ವಹಿಸುವುದೂ ಕಡಿಮೆ ಪ್ರಮುಖವಾದುದೇನಲ್ಲ"[405] ಎನ್ನುವ ಮೂಲಕ ರಸ್ತೆ ಮತ್ತು ಸೇತುವೆಗಳ ನಿರ್ಮಾಣ ಹಾಗೂ ನಿರ್ವಹಣೆಯಲ್ಲಿ ಸರ್ಕಾರ ಹಾಗೂ ಸ್ಥಳೀಯ ಸಂಸ್ಥೆಗಳ ಸಹಭಾಗಿತ್ವದ ಅವಶ್ಯಕತೆಯನ್ನು ಒತ್ತಿ ಹೇಳಿದರು.

ನಾಲ್ವಡಿಯವರು ತಮ್ಮ ಭಾಷಣಗಳ ಮೂಲಕ ಸಾರ್ವಜನಿಕರು ಮತ್ತು ಸ್ಥಳೀಯ ಸಂಸ್ಥೆಗಳು ಸ್ಪರ್ಧಾ ರೂಪದಲ್ಲಿ ಸೇತುವೆ ನಿರ್ಮಾಣಕ್ಕೆ ಮುಂದಾಗುವಂತೆ ಮಾಡಲು ಹೊಗಳುವ, ಸಲಹೆ ಹಾಗೂ ಮಾರ್ಗದರ್ಶನ ನೀಡುತ್ತಾ ರಸ್ತೆ ಹಾಗೂ ಸೇತುವೆಗಳ ಮಹತ್ವವನ್ನು ಮನಮುಟ್ಟುವಂತೆ ಹೇಳುತ್ತಿದ್ದರಲ್ಲದೇ ಸರ್ಕಾರದ ಸಹಾಯ ಹಸ್ತ ಚಾಚುವ ಮಾರ್ಗಗಳನ್ನು ಬಳಸಿದರು.

ತಮ್ಮ ಸರ್ಕಾರದ ಅಧಿಕಾರ ಹಾಗೂ ಕರ್ತವ್ಯಗಳನ್ನು ಸ್ಥಳೀಯ ಸಂಸ್ಥೆಗಳ ಜೊತೆಗೆ ಹಂಚಿಕೊಳ್ಳುವ ಮೂಲಕ ನಾಲ್ವಡಿಯವರು ಸ್ವಯಮಾಡಳಿತದಲ್ಲಿ ಜನರು ತೊಡಗಿಸಿಕೊಳ್ಳುವಂತೆ ಮಾಡಿದರು. ಜನತೆ ನಾಲ್ವಡಿಯವರ ಬಗ್ಗೆ ಅಪಾರ ಗೌರವ, ಅಭಿಮಾನಗಳನ್ನು ಹೊಂದಿದ್ದರು. ಹಾಗಾಗಿ ನಾಲ್ವಡಿ ಹೇಳುತ್ತಿದ್ದ ಒಂದೊಂದು ಮಾತು ಜನರ ಮೇಲೆ ಅಗಾಧ ಪ್ರಭಾವ ಬೀರುತ್ತಿದ್ದವು. ಇಂತಹ ಪ್ರಭಾವವನ್ನು ನಾಲ್ವಡಿಯವರು ರಸ್ತೆ ಅಭಿವೃದ್ಧಿ ಅದರಲ್ಲೂ ಸೇತುವೆಗಳ ನಿರ್ಮಾಣದಲ್ಲಿ ಸ್ಥಳೀಯ ಸಂಸ್ಥೆಗಳ ಮೂಲಕ ಜನತೆಯನ್ನು ರಾಜ್ಯದ ಸಮಗ್ರ ಅಭಿವೃದ್ಧಿಯಲ್ಲಿ ಸಮರ್ಥವಾಗಿ ಬಳಸಿಕೊಂಡರು.

---

*404. ಸ್ಟ್ಯಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ಆಫ್ ಮೈಸೂರ್, 1920, ಪು. 24*

*405. ಸ್ಪೀಚಸ್ ಬೈ ಹಿಸ್ ಹೈನೆಸ್, ಪೂರ್ವೋಕ್ತ, ಪು. 330*

ಸೇತುವೆಗಳ ಉಪಯೋಗ ಮತ್ತು ಮಹತ್ವವನ್ನು ಕುರಿತು ನಾಲ್ವಡಿಯವರು ಹೇಮಾವತಿ ನದಿಗಡ್ಡಲಾಗಿ ನಿರ್ಮಿಸಿದ್ದ ಗೊರೂರಿನ ಸೇತುವೆಯ ಉದ್ಘಾಟನೆಯಲ್ಲಿ ಹೀಗೆ ನುಡಿದರು. "ಈ ಹೊಸ ಸೇತುವೆ ಮೈಸೂರು, ಹಾಸನ ಮತ್ತು ಕೂರ್ಗ್ ಜಿಲ್ಲೆಗಳ ನಡುವೆ ಅವಶ್ಯಕ ಸಂಪರ್ಕ ಕೊಂಡಿಯಾಗುತ್ತದೆ ಮತ್ತು ಇದು ಮೈದಾನ ಹಾಗೂ ಮಲೆನಾಡು ಜಿಲ್ಲೆಗಳ ಭಾಗಗಳನ್ನು ಬಹಳ ಹತ್ತಿರ ತರುತ್ತದೆ[406]. ಹಾಗೆಯೇ ಕಾವೇರಿ ನದಿಗೆ ಅಡ್ಡಲಾಗಿ ಟಿ. ನರಸೀಪುರದ ಬಳಿ ನಿರ್ಮಿಸಿರುವ ಸೇತುವೆಯನ್ನು ಉದ್ಘಾಟಿಸುತ್ತಾ "ಈ ಸೇತುವೆಯು ಈ ಭಾಗದ ನಮ್ಮ ರಾಜ್ಯ ಮತ್ತು ಮದ್ರಾಸ್ ಪ್ರೆಸಿಡೆನ್ಸಿಯು ಹೊಂದಿಕೊಂಡ ಜಿಲ್ಲೆಗಳ ನಡುವೆ ಸಂಪರ್ಕದ ಅಭಿವೃದ್ಧಿಗೆ ದಾರಿಮಾಡಿಕೊಟ್ಟಿತು. ಶಿವನಸಮುದ್ರವೂ ಸಹ ಮೈಸೂರಿಗೆ ಬಹಳ ಹತ್ತಿರವಾಯಿತು"[407]. ಹೀಗೆ ಎರಡು ಸೇತುವೆಗಳ ನಿರ್ಮಾಣದಿಂದಾಗಿ ಮದ್ರಾಸ್ ಪ್ರಾಂತ್ಯಕ್ಕೆ ಒಂದೆಡೆ, ಮತ್ತೊಂದೆಡೆ ಕೊಡಗು ಭಾಗಕ್ಕೆ ಮೈಸೂರು ಜನತೆ ಉತ್ತಮ ಸಂಪರ್ಕ ಹೊಂದುವಂತಾಯಿತು. ಕೃಷ್ಣರಾಜ ಅಣೆಕಟ್ಟೆಯ ನಿರ್ಮಾಣದಿಂದಾಗಿ ಕೃಷಿ ಉತ್ಪಾದನೆ ಅಧಿಕಗೊಂಡಿದ್ದು ಜನತೆ ಮತ್ತು ವ್ಯಾಪಾರಿಗಳು ಸಾಲ ಎತ್ತಿ ಮೈಸೂರಿನ ಜಿಲ್ಲಾ ಬೋರ್ಡ್‌ನ ಮೂಲಕ ಗೊರೂರು ಸೇತುವೆಯನ್ನು ನಿರ್ಮಿಸಲು ಕಾರಣವಾಯಿತು[408]. ಕೃಷ್ಣರಾಜ ಅಣೆಕಟ್ಟೆಯ ಭಾಗದಲ್ಲಿ ಇನ್ನೂ ಕೆಲವು ಇಂತಹ ಯೋಜನೆಗಳನ್ನು ಕೈಗೊಳ್ಳುವ ಅವಶ್ಯಕತೆಯನ್ನು ಕುರಿತು ಗೊರೂರು ಸೇತುವೆಯ ಉದ್ಘಾಟನೆಯ ಸಂದರ್ಭದಲ್ಲಿ ಹೀಗೆ ಹೇಳಿದರು. "ಕೃಷ್ಣರಾಜ ಅಣೆಕಟ್ಟೆಯ ಉತ್ತರ ಮತ್ತು ದಕ್ಷಿಣ ಕಾಲುವೆಗಳಿಂದ ಹಾಗೂ ಚಂಗರವಳ್ಳಿ ಕಾಲುವೆಗಳಡಿಯಲ್ಲಿ ವಿಸ್ತೃತವಾಗಿ ನೀರಾವರಿ ಸಾಗುವಳಿ ಏರ್ಪಟ್ಟಿದೆ. ಆದರೆ ಕೃಷಿ ಉತ್ಪಾದನೆಗಳನ್ನು ಸಾಗಿಸಲು ಕಾವೇರಿ ನದಿಗಡ್ಡಲಾಗಿ ರಾಮನಾಥಪುರದ ಬಳಿ ಮತ್ತು ಹೇಮಾವತಿ ನದಿಗೆ ಗೊರೂರು ಬಳಿ ಸೇತುವೆಗಳ ಅನುಪಸ್ಥಿತಿಯಿರುವುದರಿಂದ ತೊಂದರೆಯಾಗಿದೆ. ಈಗ ಗೊರೂರು ಸೇತುವೆ ನಿರ್ಮಿಸಲು ಜನ ಕುತೂಹಲದಿಂದಿದ್ದಾರೆ ಮತ್ತು ಅದಕ್ಕೆ ಸಂಬಂಧಿಸಿದ ಚಳವಳಿಯು ಆಗಲೇ ರೂಪುಗೊಂಡಿದ್ದು ಅವಶ್ಯಕ ಫಂಡನ್ನು ಸಂಗ್ರಹಿಸಲು ಪ್ರಯತ್ನಗಳು ಮುಂದಾಗಿವೆ. ಗೊರೂರು ಯೋಜನೆಯ ಯಶಸ್ಸು ಈ ಸುತ್ತಮುತ್ತಲ ಜನರಿಗೆ ಸ್ಫೂರ್ತಿ ತಂದಿದೆ ಮತ್ತು ಇದೇ ರೀತಿಯ ಯೋಜನೆಗಳನ್ನು ಕೈಗೊಳ್ಳಲು ಸ್ಥೈರ್ಯ ಮೂಡಿಸಿದೆ'[409].

ಮೇಲ್ಕಂಡ ನಾಲ್ವಡಿಯವರ ಮಾತುಗಳ ಪ್ರಭಾವದಿಂದಾಗಿ ಕೇವಲ ಆರು ವರ್ಷಗಳಲ್ಲಿ ಮೈಸೂರು ಜಿಲ್ಲಾ ಬೋರ್ಡ್ ವತಿಯಿಂದ 1927ರಲ್ಲಿ ಹೇಮಾವತಿ ನದಿಗಡ್ಡಲಾಗಿ ಗೊರೂರು, 1932ರಲ್ಲಿ ಟಿ. ನರಸೀಪುರದ ಬಳಿ ಕಾವೇರಿ ನದಿಗಡ್ಡಲಾಗಿ ಮತ್ತು 1933ರಲ್ಲಿ ಹೇಮಾವತಿ ನದಿಗಡ್ಡಲಾಗಿ ಅಕ್ಕಿ ಹೆಬ್ಬಾಳದ ಬಳಿ ಮೂರು ಸೇತುವೆಗಳು

---

*406. ಸ್ಪೀಚಸ್ ಬೈ ಹಿಸ್ ಹೈನೆಸ್, ಪೂರ್ವೋಕ್ತ, ಪು. 258*
*407. ಅದೇ., ಪು. 330*
*408. ಅದೇ., ಪು. 258*
*409. ಅದೇ., ಪು. 259*
*410. ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 333*
*411. ಸ್ಪೀಚಸ್ ಬೈ ಹಿಸ್ ಹೈನೆಸ್, ಪೂರ್ವೋಕ್ತ, ಪು. 330*

ನಿರ್ಮಾಣಗೊಂಡವು[410].

ನಾಲ್ವಡಿಯವರು ಪ್ರತಿ ಸೇತುವೆಯ ಉದ್ಘಾಟನೆಯಲ್ಲೂ 'ಇಂದಿನ ಸಮಾರಂಭದಲ್ಲಿ ಭಾಗವಹಿಸುತ್ತಿರುವುದು ನನಗೆ ಅತ್ಯಂತ ಸಂತೋಷ ತಂದಿದೆ'[411] ಎಂಬ ಹರ್ಷವನ್ನು ಸೂಚಿಸುವ ಮೂಲಕ ಹಾಗೂ "ನಾನು ನೀಡಿದ ಒಂದು ಯೋಜನೆಯ ಸಲಹೆಯನ್ನು ಕ್ರಿಯಾಶೀಲವಾಗಿ ಅನುಸರಿಸಿದ ಮೈಸೂರು ಡಿಸ್ಟ್ರಿಕ್ಟ್ ಬೋರ್ಡ್‌ನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ"[412] ಎನ್ನುವ ಮೂಲಕ ಅವರಿಗೆ ಪ್ರೇರಣೆ ನೀಡುತ್ತಿದ್ದರು.

ಈ ಸೇತುವೆಗಳನ್ನು ಆಧುನಿಕ ವೈಜ್ಞಾನಿಕ ಹಾಗೂ ತಾಂತ್ರಿಕ ವಿಧಿ-ವಿಧಾನಗಳನ್ನು ಬಳಸಿಕೊಂಡು ನಿರ್ಮಿಸಿದ ಎಂಜಿನಿಯರುಗಳನ್ನು ನಾಲ್ವಡಿ ಹೀಗೆ ಅಭಿನಂದಿಸಿದರು. "ಮೈಸೂರು ಜಿಲ್ಲಾ ಬೋರ್ಡನ್ನು ಅಭಿನಂದಿಸುತ್ತಾ ಇಂಜಿನಿಯರುಗಳನ್ನು ನಾನು ನಿರ್ಲಕ್ಷಿಸುವುದಿಲ್ಲ. ಹಿಂದೆ ಸೇತುವೆಗಳ ನಿರ್ಮಾಪಕರು ಅನುಭವ ವಿಧಾನದ ಮೇಲೆ ಕೆಲಸ ಮಾಡುತ್ತಿದ್ದರು. ಆದರೆ ಇಂದಿನ ಇಂಜಿನಿಯರುಗಳು ಸೇತುವೆ ನಿರ್ಮಾಣವನ್ನು ಕಲೆ ಮತ್ತು ವಿಜ್ಞಾನ ಅಂಶವಾಗಿ ಬೆಳೆಸಿದ್ದಾರೆ"[413] ಮೈಸೂರಿನಲ್ಲಿ ಸಾರ್ವಜನಿಕ ಕಾಮಗಾರಿಗಳ ನಿರ್ಮಾಣ ಅಭಿವೃದ್ಧಿಗೊಂಡಂತೆ ಅವುಗಳ ನಿರ್ಮಾಣವನ್ನು ಸರ್ಕಾರದ ಇಲಾಖೆಯೊಂದೇ ನಿರ್ವಹಿಸಲಾಗುತ್ತಿರಲಿಲ್ಲ. ಹಾಗಾಗಿ ಗುತ್ತಿಗೆದಾರ ಸಂಸ್ಥೆಗಳಂತಹ ತಜ್ಞರನ್ನೊಳಗೊಂಡ ಆಧುನಿಕ ಸಾರ್ವಜನಿಕ ಕಾಮಗಾರಿ ನಿರ್ಮಾಣ ಸಂಸ್ಥೆಗಳ ಮಹತ್ವ ಮತ್ತು ಅವಶ್ಯಕತೆಯನ್ನು ಮೆಚ್ಚಿ ಹೀಗೆ ಹೇಳಿದರು. "ಗುತ್ತಿಗೆದಾರ ಸಂಸ್ಥೆಗಳು ಇಂತಹ ಕೆಲಸಗಳನ್ನು ಯಶಸ್ವಿಯಾಗಿ ನಿರ್ವಹಿಸಲು ಸಿದ್ಧರಾಗಿದ್ದಾರೆ. ಈ ರಾಜ್ಯದಲ್ಲಿ ಇಂತಹ ಸಂಸ್ಥೆಗಳ ಬೆಳವಣಿಗೆಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ. ಒಟ್ಟು ಗುತ್ತಿಗೆ ಸಂಸ್ಥೆಗಳು ಇಲಾಖೆಯ ಅಗಣಿತ ಚಿಕ್ಕ ಚಿಕ್ಕ ವಿವರಗಳಿಂದ ಮುಕ್ತಿ ನೀಡಿವೆ. ಇಂತಹ ಮುಖ್ಯ ಕೆಲಸವೊಂದನ್ನು ಆರಂಭದಿಂದ ಅಂತ್ಯದವರೆಗೆ ಕಾರ್ಯನಿರ್ವಹಿಸಿದ ಅಂತಹ ಸಂಸ್ಥೆಯ ಕಾರ್ಯವನ್ನು ನೋಡಿ ನನಗೆ ಸಂತೋಷವಾಗಿದೆ[414].

ಹೀಗೆ ನಾಲ್ವಡಿಯವರು ಅನುಸರಿಸಿದ ಆಧುನಿಕ ಕ್ರಮಗಳು ಸಾರಿಗೆ ಸಂಪರ್ಕದ ಕೊಂಡಿಯೆನಿಸುವಂತಹ ಸೇತುವೆಗಳ ನಿರ್ಮಾಣಕ್ಕೆ ಕಾರಣವಾದವು. ಒಟ್ಟಾರೆ ನಾಲ್ವಡಿಯವರ ಕಾಲದಲ್ಲಿ ಕೈಗೊಂಡ ಆಧುನಿಕ ಮಾದರಿಯ ರಸ್ತೆಗಳ ನಿರ್ಮಾಣದಿಂದಾಗಿ ಸಾರಿಗೆ ಸಾಧನಗಳ ಬಳಕೆ ಬಹುಮಟ್ಟಿಗೆ ಬೆಳೆಯಿತು. ನಾಲ್ವಡಿಯವರ ಕಾಲದಲ್ಲಿ ಪರಿಚಯಿಸಲ್ಪಡುವ ಆಧುನಿಕ ಮಾದರಿಯ ಸಾರಿಗೆ ಸಾಧನಗಳಾದ ವಾಹನಗಳ ಬೆಳವಣಿಗೆಯನ್ನು ಕುರಿತು ತಿಳಿಯುವ ಮೊದಲು ಅವರ ಆಳ್ವಿಕೆಯ ಆರಂಭ ಕಾಲದಲ್ಲಿದ್ದ ವಾಹನಗಳ ವಾಸ್ತವಿಕತೆ, ವ್ಯವಸ್ಥೆಗಳ ಬಗೆಗಿನ ಪರಿಚಯ ಮಾಡಿಕೊಳ್ಳುವುದು ಬಹು ಸೂಕ್ತವೆನಿಸುತ್ತದೆ. ಇದಕ್ಕೆ ಸಂಬಂಧಿಸಿದಂತೆ ವಿವರಿಸಲ್ಪಡುವ ಮಾಹಿತಿಯು ಬೆಂಗಳೂರಿಗೆ

---

*412. ಸ್ಪೀಚಸ್ ಬೈ ಹಿಸ್ ಹೈನೆಸ್, ಪೂರ್ವೋಕ್ತ, ಪು. 354*

*413. ಅದೇ., ಪು. 354-355*

*414. ಅದೇ., ಪು. 355*

ಬಹು ಸಮೀಪದಲ್ಲೇ ಬರುವ ಗೋರಿಬಿದನೂರು ತಾಲ್ಲೋಕಿನ ಹಳ್ಳಿಯೊಂದಕ್ಕೆ ಸಂಬಂಧಿಸಿದುದಾಗಿದೆ. ಅದನ್ನು ಕುರಿತಂತೆ ತಿ.ತಾ.ಶರ್ಮರವರು ತಮ್ಮ ಕೃತಿಯಲ್ಲಿ "ಆಗ ಜಟಕಾಗಳೂ ಇರಲಿಲ್ಲ; ಬಸ್ಸುಗಳ ಹೆಸರನ್ನೇ ಕೇಳಿರಲಿಲ್ಲ. ರೈಲೇನೋ ಬಂದಿತ್ತು. ಆದರೆ ಸೂಲಿಕುಂಟೆಯಿಂದ ವಾಟದ ಹೊಸ ಹಳ್ಳಿಗಿನ್ನೂ ರೈಲು ಬಂದಿರಲಿಲ್ಲ. ಮುಂದೆ ಎಂದಾದರೂ ರೈಲು ಬಂದರೇನೂ ಆಶ್ಚರ್ಯವಿಲ್ಲ! ಸದ್ಯಕ್ಕೆ ಭಾಗವತ 'ಶಕಟಾಸುರ'ನ ಕಾಲದಿಂದ ಬಳಕೆಯಲ್ಲಿದ್ದ 'ವೃಷಭವಾಹನ' ಬಿಟ್ಟರೆ ಇನ್ನೊಂದಿಲ್ಲ"[415] ಎಂಬುದಾಗಿ ವಿವರಿಸುತ್ತಾರೆ. ನಂತರ ಮುಂದುವರಿಸಿ ಅದರೊಳಗೆ ರೂಪಿಸಿಕೊಳ್ಳುತ್ತಿದ್ದ ವ್ಯವಸ್ಥೆಯನ್ನು ಕುರಿತು "ಬಂಡಿಯಲ್ಲಿ ಬತ್ತದ ಒಣಹುಲ್ಲನ್ನು ಒಟ್ಟಾಗಿ ಹರಡಿ, ಅದರ ಮೇಲೆ ಕಂಬಳಿಯನ್ನೋ ಜಮಖಾನೆಯನ್ನೋ ಹಾಸಿ, ಸುಪ್ಪತ್ತಿಗೆಯನ್ನು ಮೀರಿಸುವಂತೆ ಮಾಡುತ್ತಿದ್ದರು. ಕಮಾನಿನಿಂದ ತೂಗಾಡುವ ಕುಚ್ಚದ ಕೈ ಆಸರೆಯ ಹಗ್ಗಗಳು ಬೇರೆ! ಕೂತು ಸಾಕಾದರೆ ಇಳಿದು ನಡೆಯುವುದು. ನಡೆದು ಸಾಕಾದರೆ ಹತ್ತಿ ಕೂರುವರು"[416] ಎಂಬುದಾಗಿ ಅಂದು ಅಸ್ತಿತ್ವದಲ್ಲಿದ್ದ ವಾಹನ ವ್ಯವಸ್ಥೆಯ ಬಗೆಗಿನ ಸ್ಪಷ್ಟ ಚಿತ್ರಣವನ್ನು ನೀಡಿದ್ದಾರೆ. ಇಂತಹ ವ್ಯವಸ್ಥೆಯೊಳಕ್ಕೆ ಪಾಶ್ಚಿಮಾತ್ಯ ನಾಗರಿಕತೆ ಆಗ ತಾನೆ ನಮ್ಮ ದೇಶದ ಮೂಲೆ ಮೂಲೆಗೂ ಪಸರಿಸುತ್ತಿತ್ತು. ಜನರು ಪಾಶ್ಚಿಮಾತ್ಯರ ಈ ಮೆರಗು ಜೀವನಕ್ಕೆ ಮಾರುಹೋಗಿದ್ದರು. ಆಗ ತಾನೆ ಬೈಸಿಕಲ್ಲು, ಮೋಟಾರು ಕೂಡ ಜನರ ಉಪಯೋಗಕ್ಕೆ ಬರುತ್ತಿದ್ದವು. ಅದುವರೆಗೆ ಕುದುರೆಯ ಓಟವನ್ನು ಕಂಡು ತೃಪ್ತಿಪಡುತ್ತಿದ್ದರು ಮಾತ್ರವೇ ಅಲ್ಲ, ಆನಂದೋತ್ಸಾಹಗಳನ್ನು ಪಡೆಯುತ್ತಿದ್ದರು.[417] ಇಂತಹ ಸನ್ನಿವೇಶದಲ್ಲಿ ನಾಲ್ವಡಿಯವರು ಆಧುನಿಕ, ಪಾಶ್ಚಿಮಾತ್ಯ ಮೂಲದ ಸಾರಿಗೆ ಸಾಧನಗಳಾದ ಬೈಸಿಕಲ್ಲು, ಮೋಟಾರು ಕಾರು, ಬಸ್ಸು, ರೈಲುಗಾಡಿ, ವಿಮಾನಗಳನ್ನು ಜನಸಾಮಾನ್ಯರಿಗೆ ಪರಿಚಯಿಸಲು ಮತ್ತು ಬಳಸುವಂತೆ ಉತ್ತೇಜಿಸಲು ಅನೇಕ ಕ್ರಮಗಳನ್ನು ಕೈಗೊಂಡರು. ನಾಲ್ವಡಿಯವರು ಇಂಗ್ಲೆಂಡಿನಿಂದ ಎರಡು ಬೈಸಿಕಲ್‌ಗಳನ್ನು ತರಿಸಿದ್ದರು. ಅವುಗಳನ್ನು ಮೈಸೂರಿನ ಜನತೆಗೆ ಪರಿಚಯಿಸಲು "ಪ್ರತಿದಿನ ಸಂಜೆ ಇಬ್ಬರು ಕಟ್ಟುಮಸ್ತಾದ ಸಿಪಾಯಿಗಳ ಕೈಗೆ ಕೊಟ್ಟು ಅವರು ಊರಲ್ಲೆಲ್ಲಾ ಒಂದು ರೌಂಡು ಸೈಕಲ್ಲಲ್ಲಿ ಸುತ್ತಿ ಬರಬೇಕು ಅಂತ ವ್ಯವಸ್ಥೆ ಮಾಡಿದ್ದರು. ಆ ಸೈಕಲ್ ಸವಾರಿ ನೋಡುವುದಕ್ಕೆ ಪ್ರತೀ ಮನೆ ಮುಂದೆ ಸಂಜೆ ಹೆಂಗಸರು ಮಕ್ಕಳು ದಿನಾ ತುದಿಗಾಲಲ್ಲಿ ನಿಂತು ಕಾಯ್ತಾ ಇದ್ದರು"[418]. 'ಆಗ ಬೈಸಿಕಲ್ಲುಗಳು ಈಗಿನ ಏರೋಪ್ಲೇನಿನಷ್ಟು ಅಪೂರ್ವ ದರ್ಶನದ ವಸ್ತುವಾಗಿತ್ತು'[419]. ಹೀಗೆ ಮೈಸೂರಿನ ಜನತೆಗೆ ಪರಿಚಯವಾದ ಬೈಸಿಕಲ್ ಆನಂತರ ವಿದ್ಯಾವಂತ ಅನ್ನಿಸಿಕೊಂಡವನಿಗೆ ಸೈಕಲ್ ಸವಾರಿ ಇಂಗ್ಲಿಷ್‌ನ ಹಾಗೆ ತೀರಾ ಅನಿವಾರ್ಯವಾದ ವಿದ್ಯೆಯಾಯಿತು. ಸ್ವಂತ ಸೈಕಲ್ ಹೊಂದುವುದು

---

*415. ತಿ.ತಾ.ಶರ್ಮ., ಪೂರ್ವೋಕ್ತ, ಪು. 80*

*416. ಅದೇ,*

417. *ತ.ಸು.ಶಾಮರಾಯ., ನೆನಪಿನ ಅಲೆಗಳು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ- ಬಂಗಾರದ ಬೆಳೆ-2, ಮೈಸೂರು, 2000, ಪು. 7*

*418. **ಆಂದೋಲನ ದಿನಪತ್ರಿಕೆ,** ದಿನಾಂಕ 3-6-2001, ಹಾಡುಪಾಡು, ವಾರದ ವಿಶೇಷ ವಿಭಾಗ, ಪು. 1*

*419. **ನವರತ್ನ ರಾಮರಾವ್.,** ಕೆಲವು ನೆನಪುಗಳು, ಗೀತಾ ಬುಕ್ ಹೌಸ್, ಮೈಸೂರು, 1989, ಪು. 127*

*420. **ಆಂದೋಲನ ದಿನಪತ್ರಿಕೆ,** ದಿನಾಂಕ 3-6-2001, ಪೂರ್ವೋಕ್ತ, ಪು. 1*

ಸಾಮಾಜಿಕ ಘನತೆಯ ವಿಷಯವಾಯಿತು. ನಲ್ಲಿ ನೀರನ್ನು ಕಬ್ಬಿಣದ ಪೈಪಲ್ಲಿ ಬರುತ್ತೆ ಎಂದು ಮಡಿಯ ಕಾರಣಕ್ಕೆ ಕುಡಿಯದ ಪರಮ ಆಚಾರವಂತರೂ ಕೂಡ ಕಬ್ಬಿಣದ ಸೈಕಲ್ಲನ್ನು ಹತ್ತುವುದಕ್ಕೆ ತಮ್ಮ ಕಚ್ಚೆ ಪಂಚೆಯ ಸ್ಟೈಲನ್ನೇ ಬದಲು ಮಾಡಿಕೊಂಡು ಸೈಕಲ್ ಕಚ್ಚೆ ಎಂಬ ಹೊಸ ಮಾದರಿಯ ಕಚ್ಚೆ ಉಡಲಾರಂಬಿಸಿದರು[420]. ಹೀಗೆ ರಾಜಧಾನಿ ಮೈಸೂರಲ್ಲಿ ಪರಿಚಯವಾದ ಬೈಸಿಕಲ್ ಮಲೆನಾಡಿನ ಹಳ್ಳಿಗೂ ವ್ಯಾಪಿಸಿತು. 20ನೇ ಶತಮಾನದ ಆರಂಭದಲ್ಲಿ ಬೈಸಿಕಲ್ ಮಲೆನಾಡಿನ ಬೆಟ್ಟಳ್ಳಿಗೆ ಹೇಗೆ ಪ್ರವೇಶಿಸಿತು ಎಂಬುದನ್ನು ಕುವೆಂಪುರವರು ತಮ್ಮ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮನಮುಟ್ಟುವಂತೆ ವರ್ಣಿಸಿದ್ದಾರೆ. ತೀರ್ಥಹಳ್ಳಿಯ ಪಾದ್ರಿ ಜೀವರತ್ನಯ್ಯ ಬೆಟ್ಟಳ್ಳಿ ದೇವಯ್ಯನಿಗೆ ಬೈಸಿಕಲ್ ಕಲಿಸುತ್ತಾರೆಂಬ ವಾರ್ತೆ ವಿವಿಧ ರೂಪ ಧರಿಸಿ ಸುತ್ತಮುತ್ತಲಿನ ಹಳ್ಳಿಗಳಿಗೆ ಹಬ್ಬಿ ಬೆಟ್ಟಳ್ಳಿಯ ಬಯಲಲ್ಲಿ ಜನ "ಸೋಜಿಗ ನೋಡುವ ಕಾತರದಿಂದ ಪ್ರೇರಿತರಾಗಿ ಹೊತ್ತಿಗೆ ಮೊದಲೆ ನೆರೆದಿದ್ದುದರಿಂದ ಸಂತೆ ಜಾತ್ರೆಗಳಲ್ಲಾಗುವಂತೆ ಸದ್ದು ಮೊಳಗತೊಡಗಿತು"[421]. ಬೈಸಿಕಲ್ ಎಂಬ ವಿದೇಶಿ ಪದವನ್ನು ಉಚ್ಚಾರಣೆ ಮಾಡಲಾರದ ಹಳ್ಳಿಗರ ಬಾಯಲ್ಲಿ 'ಬೀಸೆಕಲ್ಲು' ಎಂದಾಗಿತ್ತು. ಬೈಸಿಕಲ್ ಎಂಬ ವಸ್ತು ಮತ್ತು ಅದರ ಸವಾರಿ ಅದ್ಭುತವಾದ ಅತೀಂದ್ರಿಯ ಅಂಶವಾಗಿ "ಪಾದ್ರಿ ಬೀಸೆಕಲ್ಲಿನ ಮೇಲೆ ಕುಳಿತು ಮಂತ್ರಶಕ್ತಿಯಿಂದ ಸಂಚಾರಿಸುತ್ತಾನೆ ಎಂದು ಚಿತ್ರಿಸಿಕೊಂಡಿದ್ದರು". ಬೈಸಿಕಲ್ಲನ್ನು ಹೊತ್ತು ತರಲು ನೇಮಿಸಿದ್ದ ಗಾಡಿ ಹೊಡೆಯುವ ಬಚ್ಚ ಬೈಸಿಕಲ್ ಹೊತ್ತುತರುವ ಮೂಲಕ 'ನವನಾಗರಿಕತೆಗೆ ಪ್ರವೇಶ ದೀಕ್ಷೆ ಪಡೆಯುತ್ತಿದ್ದೇನೆಂದು ಭಾವಿಸಿಕೊಂಡು" ತನ್ನ ಕೇರಿಯವರನ್ನು ತಿರಸ್ಕಾರ ಭಾವದಿಂದ ನೋಡುತ್ತಿದ್ದ. ಬೈಸಿಕಲ್ ನೋಡುವ ಕುತೂಹಲ ಜನಕ್ಕೆ ಎಷ್ಟಿತ್ತೆಂದರೆ ಪಾದ್ರಿ ಹಿಡಿದಿದ್ದ ಬೈಸಿಕಲ್ಲಿನ ಬಳಿಗೆ ನುಗ್ಗಿದರು. "ಆ ನೂಕುನುಗ್ಗಲಿನಲ್ಲಿ ಮುಟ್ಟಬಹುದಾದವರು ಮುಟ್ಟಬಾರದವರು ಎಂಬ ಬೇದಭಾವಕ್ಕೆ ರಿಯಾಯಿತಿ ಒದಗಿದಂತಾಗಿತ್ತು". ಮತ ಪ್ರಚಾರವನ್ನೆ ಪ್ರಧಾನ ಉದ್ದೇಶವಾಗಿ ಹೊಂದಿದ್ದ ಪಾದ್ರಿ ಮನದಲ್ಲೇ ಅಂದುಕೊಂಡದ್ದು "ಮತ ಪ್ರಚಾರಕ್ಕೆ ಬೈಬಲ್ಲು, ಏಸುಕ್ರಿಸ್ತನಿಗಿಂತಲೂ ಬೈಸಿಕಲ್ಲೆ ಹೆಚ್ಚು ಪ್ರಭಾವಶಾಲಿ"[422] ಎಂದು. ಹೀಗೆ ಮೈಸೂರು ರಾಜ್ಯದ ಜನ ಆರಂಭದಲ್ಲಿ ಕೌತುಕವಾಗಿ ನೋಡಿದ ಬೈಸಿಕಲ್ ಮುಂತಾದ ಸಾರಿಗೆ ಸಾಧನಗಳನ್ನು ಅನಂತರ ದಿನಬಳಕೆಗೆ ಬಳಸುವಂತಾಯಿತು.

1903ರ ಜನವರಿಯಲ್ಲಿ ದೆಹಲಿ ವಸ್ತುಪ್ರದರ್ಶನಕ್ಕೆಂದು ಹೋಗಿದ್ದ ನಾಲ್ವಡಿಯವರು ಅಲ್ಲಿಂದ ಮೈಸೂರು ಸಂಸ್ಥಾನಕ್ಕೆ ಮೊಟ್ಟಮೊದಲ ಬಾರಿಗೆ ಮೋಟಾರು ಕಾರುಗಳನ್ನು ತರಿಸಿದರು[423]. ನಾಲ್ವಡಿಯವರಿಗೆ ಹೊಸತನ್ನು ಅದು ವಸ್ತುವಾಗಲಿ ಅಥವಾ ವಿಷಯವಾಗಲಿ ಮೈಸೂರಿಗೆ ತೆರಬೇಕೆಂಬ ಆಸಕ್ತಿ ಅಪಾರವಾಗಿತ್ತು. ನಾಲ್ವಡಿಯವರು ಮೋಟಾರು ಕಾರುಗಳನ್ನು ಪಾಶ್ಚಿಮಾತ್ಯ ದೇಶಗಳಿಂದ ಆಮದು ಮಾಡಿಕೊಳ್ಳುವ ಬದಲು ಸ್ಥಳೀಯವಾಗಿ ಕಾರ್ಖಾನೆಯನ್ನು ಸ್ಥಾಪಿಸಿ

---

*421. **ಕುವೆಂಪು**, ಮಲೆಗಳಲ್ಲಿ ಮಧುಮಗಳು, ಉದಯರವಿ ಪ್ರಕಾಶನ, ಮೈಸೂರು, 2004, ಪು. 152*

*422. **ಅದೇ.**, ಪು. 153-156*

*423. **ವೆಂಕಟರಾಮಯ್ಯ ಸಿ. ಕೆ.**, ಪೂರ್ವೋಕ್ತ, ಪು. 222*

ಉತ್ಪಾದಿಸಬೇಕೆಂದು ಯೋಜಿಸಿದ್ದರು. ಈ ಯೋಜನೆಗೆ ದಿವಾನರಾದ ಮಿರ್ಜಾ ಇಸ್ಮಾಯಿಲ್ ಮತ್ತು ಮಾಜಿ ದಿವಾನರಾದ ವಿಶ್ವೇಶ್ವರಯ್ಯನವರು ರೂಪುರೇಷೆಯನ್ನು ಸಿದ್ಧಪಡಿಸಿದ್ದರು. ಆದರೆ ಬ್ರಿಟಿಷರ ಏಜೆಂಟರಂತಿದ್ದ ನಾಲ್ವಡಿಯವರ ಪ್ರೈವೇಟ್ ಸೆಕ್ರೆಟರಿ ಚಾರ್ಲ್‌ಟಾಡ್ ಹಂಟರ್ ಈ ಯೋಜನೆಗೆ ನಕಾರಾತ್ಮಕ ಉತ್ತರ ನೀಡಿದ್ದರಿಂದ ಹಾಗೂ ಬ್ರಿಟಿಷ್ ಭಾರತ ಸರ್ಕಾರವು ಈ ಯೋಜನೆಯನ್ನು ಕುರಿತಂತೆ ಅನೇಕ ಪ್ರಶ್ನೆಗಳನ್ನು ಎತ್ತಿದ್ದರಿಂದ ಮೈಸೂರು ರಾಜ್ಯದ 'ಕಾರ್ ಫ್ಯಾಕ್ಟರಿ' ಯೋಜನೆ ಸಾಕಾರಗೊಳ್ಳಲಿಲ್ಲ. ಈ ಯೋಜನೆ ಜಾರಿಗೊಂಡರೆ ಭಾರತವು ಇಂಗ್ಲೆಂಡ್ ಕಾರುಗಳನ್ನು ಆಮದು ಮಾಡಿಕೊಳ್ಳುವುದು ತಗ್ಗಿ ಇಂಗ್ಲೆಂಡ್‌ನ ಕಾರ್ ಕಂಪನಿಗಳ ವ್ಯಾಪಾರದ ಮೇಲೆ ಪ್ರತಿಕೂಲ ಪರಿಣಾಮವಾಗುತ್ತದೆಂಬ ಕಾರ್ ಉದ್ಯಮಿಗಳ ಲಾಬಿಯೂ ಈ ಯೋಜನೆಯ ಜಾರಿಗೆ ತಡೆಯಾಯಿತು[424]. ಆದರೆ ಅಂದು ಜನರು ಪಾಶ್ಚಿಮಾತ್ಯ ತಾಂತ್ರಿಕತೆಯ ಬಗ್ಗೆ ಬಹಳಷ್ಟು ಕುತೂಹಲ ಭರಿತರಾಗಿದ್ದರು. ಉದಾಹರಣೆಗೆ ಅಂದು ದಿವಾನರಾಗಿದ್ದ ವಿಶ್ವೇಶ್ವರಯ್ಯನವರು ಬೆಂಗಳೂರಿನಿಂದ ಮೊಳಕಾಲ್ಮೂರಿಗೆ ಪ್ರಯಾಣಿಸುವಾಗ ನಮ್ಮೂರ (ತಳುಕು) ಬಳಿಯ ರಸ್ತೆಯ ಮೇಲೆ ಆದುಹೋಗಬೇಕಾಗಿತ್ತು. ಅವರ ಮೋಟಾರಿನ ಜೊತೆಗೆ ಇನ್ನೂ ಆರು ಮೋಟಾರುಗಳು ಪ್ರಯಾಣ ಬೆಳೆಸಿದ್ದವು. ಈ ಆಶ್ಚರ್ಯವನ್ನು ಕಾಣುವುದಕ್ಕಾಗಿ ಸುತ್ತಮುತ್ತಲಿನ ಹತ್ತಾರು ಹಳ್ಳಿಗಳಿಂದ ಸಹಸ್ರಾರು ಜನರು ಬಂದು ರಸ್ತೆಯ ಪಕ್ಕದಲ್ಲಿ ಮೋಟಾರು ವಾಹನಗಳನ್ನು ನೋಡಲೆಂದು ತಂಗಿರುತ್ತಿದ್ದರು[425] ಎಂಬುದಾಗಿ ತ.ಸು. ಶಾಮರಾಯರು ಬರೆದಿದ್ದಾರೆ.

ಸಾರ್ವಜನಿಕ ಸಾರಿಗೆಗೆ ಪಲ್ಲಕ್ಕಿ, ಎತ್ತಿನಗಾಡಿಗಳು ಮಾತ್ರ ಬಳಕೆಯಲ್ಲಿದ್ದವು. ನಾಲ್ವಡಿಯವರು ರಾಜಾಸ್ಥಾನದ ವಧುವನ್ನು ವಿವಾಹವಾದ ಮೇಲೆ ಕುದುರೆ ಟಾಂಗಾ ಮೈಸೂರನ್ನು ಪ್ರವೇಶಿಸಿತು. ಸಾರ್ವಜನಿಕರನ್ನು ಹೊತ್ತೊಯ್ಯಲು ಅಮ್ನಿ ಬಸ್ಸುಗಳು ರಸ್ತೆಯ ಮೇಲೆ ಓಡಾಡಲಾರಂಭಿಸಿದವು. ಮೊದಲು ಸಿ.ಎಂ. ಗರುಡಾಚಾರ್ ಎನ್ನುವವರು ಬಸ್‌ಗಳನ್ನು ಓಡಿಸಿದರು. ಕ್ರಮೇಣ ಅನೇಕರು ಕಲ್ಲಿದ್ದಲ್ಲಿನಿಂದ ಓಡುವ ಬಸ್‌ಗಳನ್ನು ವ್ಯವಸ್ಥಿತವಾಗಿ ನಡೆಸಲು ತಮ್ಮದೇ ಆದ ಮೋಟಾರ್ ಕಂಪನಿಗಳನ್ನು ಆರಂಭಿಸಿದರು. ಅವರಲ್ಲಿ ಅಮೆಚೂರ್ ಡ್ರಾಮಾಟಿಕ್ ಅಸೋಸಿಯೇಷನ್ನಿನ 'ಮೋಟಾರ್' ರಾಘುವಾಚಾರ್, ಎಸ್.ಎಲ್. ಎನ್. ರಾವ್, ಷಣ್ಮುಗ ಮೊದಲಿಯಾರ್, ಬಿ. ಕೆ. ರೆಹಮಾನ್ ಮುಖ್ಯರು[426]. ಹೀಗೆ ಮೋಟಾರು ವಾಹನಗಳ ಬಳಕೆಗೆ ಪ್ರೋತ್ಸಾಹ ದೊರೆತು 1936ರ ವೇಳೆಗೆ ಮೈಸೂರು ರಾಜ್ಯದಲ್ಲಿ 2972 ಕಾರುಗಳು, 572 ಬಸ್ಸುಗಳು, 364 ಲಾರಿಗಳು ಓಡಾಡುವಂತಾಯಿತು.

ನಾಲ್ವಡಿಯವರು ರಸ್ತೆ ಸಾರಿಗೆ, ರೈಲ್ವೆ ಸಾರಿಗೆಗಳನ್ನು ಜನತೆಗೆ ಒದಗಿಸಿದಂತೆ 20ನೇ ಶತಮಾನದ ಆರಂಭದಲ್ಲಿ

---

424. *ಜರ್ನಲ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, ಸಂಪುಟ -19, 1985, ಡಿಪಾರ್ಟ್‌ಮೆಂಟ್ ಆಫ್ ಹಿಸ್ಟರಿ, ಮೈಸೂರು, ಪು. 49-53.*

425. *ಶಾಮರಾಯರು ತ.ಸು., ಪೂರ್ವೋಕ್ತ, ಪು. 7*

426. *ಚಂದ್ರಮೌಳಿ ಕೆ. ಬೆಂಗಳೂರಿನ ನೋಟಗಳು, ಪ್ರಿಸಮ್ ಬುಕ್ಸ್ ಪ್ರೈ ಲಿ., ಬೆಂಗಳೂರು, 2002, ಪು. 95*

ವಿಶ್ವದ ಕೌತುಕತೆಯ ಕುರುಹಾಗಿದ್ದ ವಿಮಾನವನ್ನು ಹಾಗೂ ವಿಮಾನಯಾನವನ್ನು ಮೈಸೂರಿನ ಜನತೆಗೆ ಪರಿಚಯಿಸಲು ಪ್ರಯತ್ನಿಸಿದರು. ನಾಲ್ವಡಿಯವರು ಬ್ರಿಟಿಷ್ ಭಾರತ ಸರ್ಕಾರಕ್ಕೆ ಪತ್ರವೊಂದನ್ನು ಬರೆದು ಮೈಸೂರಿನ ದಸರಾ ಸಂದರ್ಭದಲ್ಲಿ ಜನತೆಗೆ ವಿಮಾನ ವೀಕ್ಷಣೆಗೆ ಅನುವು ಮಾಡಿಕೊಡಬೇಕೆಂದು ಮನವಿ ಮಾಡಿಕೊಂಡರು. ಅದರಂತೆ ರೈಲಿನಲ್ಲಿ ಬಂದ ವಿಮಾನದ ಬಿಡಿ ಭಾಗಗಳನ್ನು ಜೋಡಿಸಿ ದಸರಾಕ್ಕೆ ಬಂದ ಸಾಮಾನ್ಯ ಜನತೆ ವಿಮಾನವನ್ನು ಹಾಗೂ ಅದರ ಹಾರಾಟವನ್ನು ನೋಡಿ ತಮ್ಮ ಕುತೂಹಲವನ್ನು ಹಾಗೂ ಪ್ರಾಪಂಚಿಕ ಜ್ಞಾನವನ್ನು ಪಡೆಯುವಂತೆ ಮಾಡಿದರು. ಭಾರತದಲ್ಲಿ 1911ರಿಂದ ಮೊದಲ ವಿಮಾನ ಸಂಚಾರ ಆರಂಭಗೊಂಡಿತು. ಬೆಂಗಳೂರಿನ ಜಕ್ಕೂರಿನ ಬಳಿಯಲ್ಲಿ 1932ರ ವೇಳೆಗೆ ವಿಮಾನ ನಿಲ್ದಾಣವು ನಿರ್ಮಾಣಗೊಂಡಿತು. ಟಾಟಾ ಸನ್ಸ್ ಲಿಮಿಟೆಡ್ 1932ರಲ್ಲಿ ಕರಾಚಿಯಿಂದ ಮದರಾಸ್, ಅಹ್ಮದಾಬಾದ್, ಬೊಂಬಾಯಿ ಮತ್ತು ಬಳ್ಳಾರಿಗಳಿಗೆ ಆಹ್ವಾನದ ಮೇಲೆ ವಿಮಾನಯಾನ ಆರಂಭಿಸಿತು[427]. ಅನಂತರ ವಾರಕ್ಕೆರಡು ಸಾರಿ ಬೆಂಗಳೂರಿನ ಮೂಲಕ ಹೈದ್ರಾಬಾದ್‌ನಿಂದ ಮದರಾಸಿಗೆ ವಿಮಾನಗಳು ಪ್ರಯಾಣಿಕರನ್ನು ಕುಳ್ಳಿರಿಸಿಕೊಂಡು ಹೋಗಿ ಬರುವ ವ್ಯವಸ್ಥೆಯಾಯಿತು[428]. ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ವಿಮಾನ ಜೋಡಣಾ ಮತ್ತು ರಿಪೇರಿ ಕಾರ್ಯಾಗಾರವೊಂದು ಆರಂಭ'ಗೊಂಡು ಅನಂತರ ಎಚ್. ಎ.ಎಲ್. ಕಾರ್ಖಾನೆ ಎಂಬ ವಿಮಾನ ಕಾರ್ಖಾನೆ ಸ್ಥಾಪನೆಗೊಂಡು ಮೈಸೂರು ಸಂಸ್ಥಾನ ವಿಮಾನ ಉತ್ಪಾದನಾ ಕ್ಷೇತ್ರದಲ್ಲಿ ಹೆಸರಾಯಿತು.

### *ರೈಲುಸಾರಿಗೆ*

ನಾಲ್ವಡಿಯವರ ಆಳ್ವಿಕೆಯ ಕಾಲದಲ್ಲಿ ರೈಲು ಸಾರಿಗೆಯು ಗಣನೀಯ ಪ್ರಮಾಣದ ಪ್ರಗತಿ ಸಾಧಿಸಿತು. ರೈಲು ಮಾರ್ಗಗಳನ್ನು ವಿಸ್ತರಿಸಲು ಮದರಾಸು ಮತ್ತು ದಕ್ಷಿಣ ಮಹಾರಾಷ್ಟ್ರ ರೈಲ್ವೆ ಕಂಪನಿಯ ಅಧೀನದಲ್ಲಿದ್ದ ನಿರ್ಮಾಣ ಕಾರ್ಯವನ್ನು ಮೈಸೂರು ಸಂಸ್ಥಾನವೇ ಪಡೆದುಕೊಂಡಿತು. ಪರಿಣಾಮವಾಗಿ ಮೈಸೂರು ಸರ್ಕಾರದ ಸ್ವಾಮ್ಯದಲ್ಲಿ ಹೊಸ ರೈಲುಸಾರಿಗೆ ನಿರ್ಮಾಣ ಇಲಾಖೆಯನ್ನು ಪ್ರಾರಂಬಿಸಲಾಯಿತು. ಈಗಾಗಲೇ ಮೈಸೂರು ಪ್ರಾಂತ್ಯದಲ್ಲಿದ್ದ ರೈಲ್ವೆಮಾರ್ಗಗಳನ್ನು ಸರ್ಕಾರದ ವಶಕ್ಕೆ ವರ್ಗಾಯಿಸಲಾಯಿತು. ನಾಲ್ವಡಿಯವರು ರೈಲು ಸಾರಿಗೆ ಬೆಳವಣಿಗೆಗೂ ಕ್ರಮ ಕೈಗೊಂಡರು. 1859ರಲ್ಲೇ ಹಾಕಲ್ಪಟ್ಟ ರೈಲ್ವೆ ಮಾರ್ಗ ಕಾರ್ಯವು 1900 ರವೇಳೆಗೆ 410 ಮೈಲಿಗಳಷ್ಟಾಗಿತ್ತು. ಆದರೆ

---

*427. ಸೂರ್ಯನಾಥ ಯು. ಕಾಮತ್ (ಸಂ)., ಪೂರ್ವೋಕ್ತ, ಪು. 263*

*428. ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 337*

1900 ರಿಂದ 1911 ರವರೆಗೂ ಯಾವುದೇ ಹೊಸ ರೈಲು ಮಾರ್ಗ ನಿರ್ಮಾಣಗೊಳ್ಳಲಿಲ್ಲ. ಆಗ ನಾಲ್ವಡಿಯವರು ಸ್ಥಗಿತಗೊಂಡಿದ್ದ ರೈಲ್ವೆ ಮಾರ್ಗ ನಿರ್ಮಾಣಕ್ಕೆ ಚಾಲನೆ ನೀಡಲು 1912ರಲ್ಲಿ ಪ್ರತ್ಯೇಕ ರೈಲ್ವೆ ಇಲಾಖೆಯನ್ನಾರಂಭಿಸಿ ಸರ್ಕಾರದ ಮೂಲಕ ರೈಲು ಮಾರ್ಗ ನಿರ್ಮಿಸಲು ಮುಂದಾದರು.

ನಾಲ್ವಡಿಯವರ ಪ್ರೋತ್ಸಾಹ ಮತ್ತು ದಿವಾನರುಗಳ ಪ್ರಯತ್ನದಿಂದಾಗಿ ಮೈಸೂರು ಸಂಸ್ಥಾನದಲ್ಲಿ ಅನೇಕ ಹೊಸ ರೈಲುಮಾರ್ಗಗಳು ಪ್ರಾರಂಭವಾದವು. ಇದಕ್ಕೂ ಮುಂಚೆ ಮೈಸೂರು ಸಂಸ್ಥಾನದಲ್ಲಿ ಬೆಂಗಳೂರು ಮತ್ತು ಮದರಾಸುಗಳ ನಡುವಣ ಬ್ರಾಡ್‌ಗೇಜ್ ರೈಲು ಮಾರ್ಗವು 1859ರಲ್ಲೇ ಹಾಕಲ್ಪಟ್ಟಿತು[429]. 1881ರ ವೇಳೆಗೆ ಮೈಸೂರು ರಾಜ್ಯದಲ್ಲಿ 51 ಮೈಲಿಗಳ ಉದ್ದದ ರೈಲು ಮಾರ್ಗವಿದ್ದಿತು. ಮೈಸೂರು ಸರ್ಕಾರವು ರೈಲ್ವೆ ಸಾರಿಗೆಯ ಮಹತ್ವವನ್ನರಿತು 80 ಲಕ್ಷ ರೂಪಾಯಿಗಳಷ್ಟು ಸಾಲ ಮಾಡಿ 1900ರ ವೇಳೆಗೆ 410 ಮೈಲಿಗಳಷ್ಟು ರೈಲು ಮಾರ್ಗವನ್ನು ನಿರ್ಮಿಸಿತು[430]. 1900 ರಿಂದ 1911ರ ವರೆಗೂ ಒಂದು ದಶಕದ ಕಾಲ ಯಾವುದೇ ಹೊಸ ರೈಲು ಮಾರ್ಗ ನಿರ್ಮಾಣಗೊಳ್ಳಲಿಲ್ಲ. ನಾಲ್ವಡಿಯವರು ರೈಲ್ವೆ ಸಾರಿಗೆಯ ಮಹತ್ವವನ್ನು ಅರಿತಿದ್ದು ಲಾರ್ಡ್ ಹಾರ್ಡಿಂಜ್ ಮತ್ತು ಲೇಡಿ ಹಾರ್ಡಿಂಜ್ ಗೌರವಾರ್ಥ ಏರ್ಪಡಿಸಿದ್ದ ಮೈಸೂರಿನ ಸಭೆಯಲ್ಲಿ ಹೀಗೆ ಹೇಳಿದರು. "ಕಳೆದ ಕೆಲ ವರ್ಷಗಳಿಂದ ಮೈಸೂರಿನ ರೈಲ್ವೆ ವಿಸ್ತರಣೆಯು ಸ್ಥಗಿತಗೊಂಡಿದೆ ಮತ್ತು ಬಹಳ ಹಿಂದೆಯೇ ನಾವು ನಮ್ಮ ರೈಲ್ವೆಯನ್ನು ವಿಸ್ತರಿಸಬೇಕೆಂದು ರಾಜ್ಯದಾದ್ಯಂತ ಆಂತರಿಕ ಸಂಪರ್ಕವನ್ನು ರೂಢಿಸಬೇಕೆಂದು ಅರಿತಿದ್ದೇವೆ ಮತ್ತು ಅದೇ ವೇಳೆ ಸುತ್ತಲಿರುವ ಬ್ರಿಟಿಷ್ ಪ್ರಾಂತ್ಯಗಳೊಂದಿಗೆ ಮುಖ್ಯ ಸಂಪರ್ಕ ಮತ್ತು ಉಪಯುಕ್ತ ಮಾರ್ಗಗಳನ್ನು ನಿರ್ಮಿಸಬೇಕು"[431] ಎನ್ನುವ ಮೂಲಕ ಸ್ಥಗಿತಗೊಂಡಿದ್ದ ಮೈಸೂರಿನ ರೈಲ್ವೆ ನಿರ್ಮಾಣಕ್ಕೆ ಚಾಲನೆ ಕೊಡಲು ಮುಂದಾದರು. ಹಲವು ರೈಲ್ವೆ ಯೋಜನೆಗಳನ್ನು ಅನುಷ್ಠಾನಗೊಳಿಸಲು 1912ರಲ್ಲಿ ಪ್ರತ್ಯೇಕ ರೈಲ್ವೆ ಇಲಾಖೆಯನ್ನು ರಚಿಸಲಾಯಿತು. ಈ ಇಲಾಖೆಗೆ ಮುಖ್ಯ ಇಂಜಿನಿಯರ್ ಆಗಿ ಇ.ಎ.ಎಸ್. ಬೆಲ್ ಎಂಬುವವರನ್ನು ನೇಮಿಸಲಾಯಿತು. ನಾಲ್ವಡಿಯವರು ಸರ್ಕಾರದ ಮೂಲಕವೇ ರೈಲ್ವೆ ಮಾರ್ಗಗಳನ್ನು ನಿರ್ಮಿಸಲು ಮುಂದಾದರು. ರಾಜ್ಯದ ರೈಲು ಮಾರ್ಗಗಳ ನಿರ್ಮಾಣ ಮತ್ತು ಕಾರ್ಯನಿರ್ವಹಣೆಯಲ್ಲಿ ಸಲಹೆ ನೀಡಲು ರೈಲು ಸಮಿತಿಯನ್ನು ರಚಿಸಲಾಯಿತು[432]. ಸರ್ಕಾರವು ಹಣದ ಅಭಾವವನ್ನು ಎದುರಿಸುತ್ತಿದ್ದುದರಿಂದ ಜಿಲ್ಲಾ ಬೋರ್ಡ್‌ಗಳಿಗೆ ಸ್ಥಳೀಯವಾಗಿ ರೈಲ್ವೆ ಮಾರ್ಗಗಳನ್ನು ನಿರ್ಮಿಸಲು ಸಾರ್ವಜನಿಕರಿಂದ ಸಾಲ ಎತ್ತುವ, ರೈಲ್ವೆ ಅಧಿಶುಲ್ಕ (ಸೆಸ್) ವಿಧಿಸಿ

---

*429. ಸೂರ್ಯನಾಥ್ ಯು. ಕಾಮತ್ (ಸಂ), ಪೂರ್ವೋಕ್ತ, ಸಂಪುಟ - II, ಪು. 235*

*430. ಟ್ರಾನ್ಸ್‌ಫರ್ ಆಫ್ ದಿ ಮೈಸೂರ್ ಸ್ಟೇಟ್ ರೈಲ್ವೆ ಟು ದಿ ಸದರನ್ ಮರಾಠ ರೈಲ್ವೆ ಕಂಪನಿ, ಪು. 2*

*431. ಸ್ಪೀಚಸ್ ಬೈ ಹಿಸ್ ಹೈನೆಸ್, ಪೂರ್ವೋಕ್ತ, ಪು. 108*

*432. ಹಯವದನರಾವ್ (ಸಂ), ಪೂರ್ವೋಕ್ತ, ಸಂಪುಟ - IV, ಪು. 370*

*433. ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್, 1915-16, ಪು. 28*

ನಿಧಿ ಕೂಡಿಸುವ ಅಧಿಕಾರ ನೀಡಿತು[433].

ನಾಲ್ವಡಿಯವರು ಜಿಲ್ಲಾ ಬೋರ್ಡ್‌ಗಳ ರೈಲ್ವೆ ಯೋಜನೆಗಳಲ್ಲಿ ಹಣ ತೊಡಗಿಸುವುದನ್ನು ಈ ಕೆಳಕಂಡಂತೆ ಬೆಂಬಲಿಸಿದರು. "ಜಿಲ್ಲಾ ಬೋರ್ಡ್‌ಗಳು ಇಂತಹ ಸಾರ್ವಜನಿಕ ಕಾಮಗಾರಿಗಳಾದ ಸೇತುವೆಗಳು ಮತ್ತು ರೈಲ್ವೆಗಳಂತಹ ಯೋಜನೆಗಳಿಗೆ ಹಣ ತೊಡಗಿಸುತ್ತಿರುವುದು ಈ ದೇಶದಲ್ಲಿ ಸ್ವಯಂ - ಸರ್ಕಾರದ ನೈಜವಾದ ಬೆಳವಣಿಗೆಯ ಸ್ಫೂರ್ತಿಯುತ ದ್ಯೋತಕವಾಗಿ ಕಾಣುತ್ತವೆ"[434].

ನಾಲ್ವಡಿಯವರ ಸರ್ಕಾರವು ಸ್ಥಳೀಯ ಸಂಸ್ಥೆಗಳಿಗೆ ನೀಡಿದ ಪ್ರೋತ್ಸಾಹದಿಂದಾಗಿ ಕೋಲಾರ ಜಿಲ್ಲಾ ಬೋರ್ಡ್ ಕೋಲಾರ - ಬೌರಿಂಗ್‌ಪೇಟೆ ನಡುವಣ ರೈಲುಮಾರ್ಗದ ಕಾರ್ಯವನ್ನು 1911ರಲ್ಲಿ ಆರಂಭಿಸಿ 1913ರ ಡಿಸೆಂಬರ್‌ನಲ್ಲಿ ಪೂರ್ಣಗೊಳಿಸಿತು[435]. ಬೌರಿಂಗ್‌ಪೇಟೆ-ಕೋಲಾರ ಮಾರ್ಗದ ರೈಲ್ವೆಯನ್ನು ಉದ್ಘಾಟಿಸುತ್ತಾ ನಾಲ್ವಡಿಯವರು" ಈ ಮಾರ್ಗವನ್ನು ಉದ್ಘಾಟಿಸಲು ನನಗೆ ಬಹಳ ಸಂತೋಷವಾಗಿದೆ ಏಕೆಂದರೆ ಈ ಜಿಲ್ಲೆಯ ಜನ ತಾವೇ ಹಣ ಸಂಗ್ರಹಿಸಿ ಬಹಳ ಅವಶ್ಯಕತೆಯಿದ್ದ ಮಾರ್ಗವನ್ನು ತಾವೇ ನಿರ್ಮಿಸಿ ಸಾರ್ವಜನಿಕ ಸ್ಫೂರ್ತಿಯನ್ನು ಎತ್ತಿ ತೋರಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಲೋಕಲ್‌ಫಂಡ್ ಮೂಲಕ ರೈಲ್ವೆ ನಿರ್ಮಾಣದಲ್ಲಿ ನೀವು ಮುಂಭೂಣಿಯಲ್ಲಿದ್ದೀರಿ. ಅದಕ್ಕಾಗಿ ನೀವು ನಮ್ಮ ಸರ್ಕಾರದ ಬೆಂಬಲಗಳಿಸಲು ಯೋಗ್ಯರಾಗಿದ್ದೀರಿ ಮತ್ತು ನೀವು ತೋರಿದ ದಾರಿಯಲ್ಲಿ ಇನ್ನಿತರ ಜಿಲ್ಲೆಗಳೂ ನಿಧಾನವಾಗಿ ಸಾಗುತ್ತವೆಂಬ ನಂಬಿಕೆ ನನಗಿದೆ. ಬಂಡವಾಳ ತೊಡಗಿಸಲು ರೈಲ್ವೆಗಿಂತ ಉತ್ತಮವಾದುದು ಲೋಕಲ್ ಬೋರ್ಡ್‌ಗೆ ಯಾವುದಿಲ್ಲ ಮತ್ತು ನಿಮ್ಮ ಉದ್ಯಮಶೀಲತೆ ನಿಮಗೆ ಉತ್ತಮ ಫಲ ನೀಡುತ್ತದೆಂಬ ನಂಬಿಕೆಯಿದೆ'[436] ಎಂದು ಹೇಳಿದರು. ಇದೇ ಸಭೆಯಲ್ಲಿ ನಾಲ್ವಡಿಯವರು "ನನ್ನ ಸರ್ಕಾರವು ಈ ರೈಲ್ವೆ ಮಾರ್ಗವನ್ನು ಚಿಂತಾಮಣಿಯಿಂದ ಚಿಕ್ಕಬಳ್ಳಾಪುರದವರೆಗೆ ವಿಸ್ತರಿಸುವ ಪ್ರಾಮುಖ್ಯತೆಯನ್ನು ಒಪ್ಪಿದೆ, ಕೋಲಾರ ಜಿಲ್ಲಾ ಬೋರ್ಡ್ ಬೌರಿಂಗ್‌ಪೇಟೆಯಿಂದ ಚಿಕ್ಕಬಳ್ಳಾಪುರದವರೆಗಿನ ರೈಲ್ವೆ ಮಾರ್ಗ ನಿರ್ಮಾಣದ ಒಟ್ಟು ವೆಚ್ಚದಲ್ಲಿ ಅರ್ಧದಷ್ಟನ್ನು ಸಂಗ್ರಹಿಸಿದರೆ ನನ್ನ ಸರ್ಕಾರವು ಇನ್ನುಳಿದ ಹಣವನ್ನು ಮುಂಗಡವಾಗಿ ಕೊಡಲು ಸಿದ್ಧ"[437] ಎಂದು ಘೋಷಿಸಿದರು. ಅದರಂತೆ 1916ರಲ್ಲಿ ಕೋಲಾರ - ಚಿಕ್ಕಬಳ್ಳಾಪುರ ನಡುವಣ ರೈಲ್ವೆಮಾರ್ಗ ಪೂರ್ಣಗೊಂಡಿತು[438]. ಮೈಸೂರು ಜಿಲ್ಲಾ ಬೋರ್ಡ್ ನಂಜನಗೂಡು - ಚಾಮರಾಜನಗರ ನಡುವಣ ರೈಲುಮಾರ್ಗದ ನಿರ್ಮಾಣಕ್ಕೆ ಬೇಕಾದ ಸಾಲವನ್ನು ಶೇ. 7ರ ಬಡ್ಡಿಯಂತೆ ಎತ್ತಲು ಸರ್ಕಾರ ಅನುಮತಿ ನೀಡಿತು. ಅಂತಿಮವಾಗಿ ಈ ಮಾರ್ಗವು ಒಟ್ಟು 12 ಲಕ್ಷ ವೆಚ್ಚದೊಂದಿಗೆ ಪೂರ್ಣಗೊಂಡಿತು[439].

---

*434. **ಸ್ಪೀಚಸ್ ಬೈ ಹಿಸ್ ಹೈನೆಸ್**, ಪೂರ್ವೋಕ್ತ, ಪು. 354*

*435. **ಹಯವದನ ರಾವ್ (ಸಂ)**, ಪೂರ್ವೋಕ್ತ, ಸಂಪುಟ - III, ಪು. 332*

*436. **ಸ್ಪೀಚಸ್ ಬೈ ಹಿಸ್ ಹೈನೆಸ್**, ಪೂರ್ವೋಕ್ತ, ಪು. 114-115*

*437. **ಅದೇ.**, ಪು. 115*

*438. **ಹ್ಯಾಂಡ್ ಬುಕ್ ಆಫ್ ಮೈಸೂರ್ ಅಡ್ಮಿನಿಸ್ಟ್ರೇಷನ್**, ಪು. 121-124*

*439. **ಹಯವದನ ರಾವ್ ಸಿ. (ಸಂ)**, ಪೂರ್ವೋಕ್ತ ಪು. 334*

ಮೈಸೂರು ಸರ್ಕಾರವು ನೇರವಾಗಿ ಇಲಾಖೆಯ ಮೂಲಕವೂ ಕೆಲವು ಪ್ರಮುಖ ರೈಲುಮಾರ್ಗಗಳನ್ನು ನಿರ್ಮಿಸಿತು. ಅವುಗಳೆಂದರೆ ಯಲಹಂಕ : - ಚಿಕ್ಕಬಳ್ಳಾಪುರ, ಯಶವಂತಪುರ - ಯಲಹಂಕ, ತರೀಕೆರೆ - ನರಸಿಂಹರಾಜಪುರ, ಬೆಂಗಳೂರು - ಯಶವಂತಪುರ, ಮೈಸೂರು - ಅರಸೀಕರೆ.

1919ರಲ್ಲಿ ಮೈಸೂರು ಸರ್ಕಾರವು ಮದ್ರಾಸ್ ಮತ್ತು ಸದರನ್ ಮರಾಠ ರೈಲ್ವೆ ಕಂಪನಿಯ ಅಧೀನದಲ್ಲಿದ್ದ ಬೀರೂರು - ಶಿವಮೊಗ್ಗ, ಬೆಂಗಳೂರು - ಮೈಸೂರು - ನಂಜನಗೂಡು ರೈಲುಮಾರ್ಗಗಳನ್ನು ರಾಜ್ಯ ರೈಲ್ವೆ ಇಲಾಖೆಗೆ ವಹಿಸಿತು. 1940ರ ವೇಳೆಗೆ ಶಿವಮೊಗ್ಗದಿಂದ ಬೀರೂರು - ತಾಳಗುಪ್ಪದವರೆಗೂ ಕೊಂಡೊಯ್ಯಲಾಯಿತು[440]. ಒಟ್ಟಾರೆ ನಾಲ್ವಡಿಯವರು ನೀಡಿದ ರೈಲ್ವೆ ಪ್ರೋತ್ಸಾಹ ನೀತಿಯಿಂದಾಗಿ 1901-02ರಲ್ಲಿ 411 ಮೈಲಿ ಉದ್ದವಿದ್ದ ರೈಲುಮಾರ್ಗ 1923-24ರ ವೇಳೆಗೆ 571 ಮೈಲಿ ಮತ್ತು 1937-38 ರ ವೇಳೆಗೆ ಸುಮಾರು 757 ಮೈಲಿಗಳಿಗೇರಿತು[441]. ರೈಲ್ವೆ ಅಭಿವೃದ್ಧಿಯು ಸರಕು ಸಾಗಾಣಿಕೆ ಮತ್ತು ಪ್ರಯಾಣವನ್ನು ಸುಗಮಗೊಳಿಸಿತು.

ಮೇಲಿನ ವಿವರಣೆಯಿಂದ ತಿಳಿದು ಬರುವ ಸಾಮಾನ್ಯ ಅಂಶಗಳೆಂದರೆ ಮೊದಲನೆಯದಾಗಿ ರೈಲ್ವೆ ಅಭಿವೃದ್ಧಿಯಿಂದಾಗಿ ಕೃಷಿ ಪದಾರ್ಥಗಳು ಸುಗಮವಾಗಿ ರಾಜ್ಯದಾದ್ಯಂತ ತಲುಪಿ ಬೆಲೆಗಳ ಏರಿಳಿತದಲ್ಲಿ ಹೆಚ್ಚು ವ್ಯತ್ಯಾಸ ಕಾಣಿಸಿಕೊಳ್ಳಲು ಅವಕಾಶವಿಲ್ಲದಂತಾಗಿ ಒಂದೇ ಮಟ್ಟ ಕಾಯ್ದುಕೊಳ್ಳುವಂತಾದದ್ದು. ಹಾಗೆಯೇ ಜನರ ನೈತಿಕತೆಯ ಮೇಲೂ ಸಾಕಷ್ಟು ಪ್ರಭಾವ ಬೀರಿ ಎಲ್ಲಾ ಸಮುದಾಯಗಳು ಒಂದೆಡೆ ಕುಳಿತು ಸಂಚಾರ ಮಾಡುವಂತಾಗಿ ಸಂಪ್ರದಾಯಬದ್ಧ ಜಾತಿಪ್ರಧಾನ ಸಮಾಜದೊಳಗೆ ಪರಿವರ್ತನೆಗೆ ಅವಕಾಶ ದೊರೆತದ್ದರಿಂದ ಜಾತಿ ವ್ಯವಸ್ಥೆ ಬಿದ್ದು ಹೋಗದಿದ್ದರೂ ಜಾತಿ ಜಾತಿಗಳ ನಡುವೆ ಸಹನೆ ಬೆಳೆಯಲು ಅವಕಾಶ ಮಾಡಿಕೊಟ್ಟಿದ್ದು[442]. ಎರಡನೆಯದಾಗಿ ನಾಲ್ವಡಿಯವರು ಕೈಗೊಂಡ ಕ್ರಮಗಳಿಂದಾಗಿ 1937-38ರ ವೇಳೆಗೆ ರೈಲು ಮಾರ್ಗವು ಸುಮಾರು 757 ಮೈಲಿಗಳಷ್ಟಾಯಿತು. ರೈಲ್ವೆ ಸಾರಿಗೆ ಅನುಕೂಲದಿಂದಾಗಿ ಭಾರತದ ವಿವಿಧ ಸ್ಥಳಗಳಿಂದ ವಿದ್ವಾಂಸರೂ, ಸಂಗೀತಗಾರರು, ವ್ಯಾಪಾರೋದ್ಯಮಿಗಳು, ನಾಟಕ ಕಂಪನಿಗಳು, ಪುರಾಣಿಕರು, ಕೀರ್ತನಕಾರರು, ನರ್ತಕಿಯರು ಮೊದಲಾದ ಜನವರ್ಗ ಮೈಸೂರನ್ನರಸಿ ಬರುವಂತಾಯಿತು[443]. ಭಾರತೀಯ ಸಂಸ್ಕೃತಿ, ಕಲೆ, ಸಾಹಿತ್ಯ, ಸಂಗೀತಗಳು ರಾಜಾಸ್ಥಾನದ ಬೆಂಬಲವನ್ನು ಅರಸಿ ಮೈಸೂರಿಗೆ ಧಾವಿಸಿದವು. ತಾವೂ ಉಳಿದವು ಹಾಗೂ ಮೈಸೂರನ್ನು ಭಾರತದ ಸಾಂಸ್ಕೃತಿಕ ಕೇಂದ್ರವನ್ನಾಗಿಸಿದವು.

ಹೀಗೆ ಆಧುನೀಕರಣಗೊಂಡ ಮೈಸೂರಿನ ಸಾರಿಗೆ ಸಂಪರ್ಕ ವ್ಯವಸ್ಥೆಯು ಬೆಳೆಯುತ್ತಿದ್ದ ಮೈಸೂರಿನ ಕೃಷಿ,

---

*440. ಸೂರ್ಯನಾಥ್ ಯು. ಕಾಮತ್ (ಸಂ), ಪೂರ್ವೋಕ್ತ, ಭಾಗ - 2. ಪು. 236*

*441. ಅದೇ.*

*442. ಹಯವದನ ರಾವ್ ಸಿ. (ಸಂ), ಪೂರ್ವೋಕ್ತ, ಪು. 336*

*443. ಧಾರವಾಡಕರ ರಾ. ಯ., ಹೊಸಗನ್ನಡ ಸಾಹಿತ್ಯದ ಉದಯಕಾಲ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1975. ಪು. 9*

ಕೈಗಾರಿಕಾ ಉತ್ಪನ್ನಗಳನ್ನು ದೂರದೂರದ ಮಾರುಕಟ್ಟೆಗಳಿಗೆ ಶೀಘ್ರವಾಗಿ ವಿಲೇವಾರಿಯಾಗುವಂತೆ ಮಾಡುವ ಮೂಲಕ ಮೈಸೂರಿನ ಆರ್ಥಿಕತೆಯ ಬೆಳವಣಿಗೆಗೆ ಪ್ರೇರಕ ಶಕ್ತಿಯಾಯಿತು ಹಾಗೂ ವ್ಯಾಪಾರ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿಯೂ ಆಧುನಿಕತೆಯ ಅಂಶಗಳ ಅಳವಡಿಕೆಗೆ ಅವಕಾಶ ಮಾಡಿಕೊಟ್ಟಿತು.

### *vi) ವ್ಯಾಪಾರ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿ ಆಧುನಿಕತೆ*

ಕೃಷಿ ಮತ್ತು ಕೈಗಾರಿಕೆಗಳ ಬೆಳವಣಿಗೆಯಿಂದ ಸಮಾಜದ ಮೇಲುಂಟಾದ ಪರಿಣಾಮಗಳನ್ನು ಮತ್ತು ಪರಿವರ್ತನೆಗಳನ್ನು ಕುರಿತು ಅಧ್ಯಯನ ಮಾಡುವಾಗ ಇವೆರಡಕ್ಕೂ ಸ್ಫೂರ್ತಿದಾಯಕವಾಗಿರುವ ವ್ಯಾಪಾರ - ವಾಣಿಜ್ಯಗಳ ಬಗ್ಗೆ ತಿಳಿಯುವುದು ಅವಶ್ಯಕ. ಉತ್ಪಾದನಾ ರಂಗದಿಂದ ವಸ್ತುಗಳನ್ನು ಬಳಕೆದಾರರಿಗೆ ಮಾರುಕಟ್ಟೆಗಳ ಮೂಲಕ ಒದಗಿಸಿ, ಆ ಮೂಲಕ ನಾಡಿನ ಆರ್ಥಿಕ ವ್ಯವಸ್ಥೆಯನ್ನು ಸುಸೂತ್ರವಾಗಿ ಮುಂದುವರಿಸಿ ಸಮಾಜವನ್ನು ಅಭಿವೃದ್ಧಿಪಡಿಸುವುದರಲ್ಲಿ, ಪರಿವರ್ತನೆಗೊಳಪಡಿಸುವುದರಲ್ಲಿ ವ್ಯಾಪಾರ - ವಾಣಿಜ್ಯಗಳ ಪಾತ್ರ ಬಹು ಹಿರಿದಾದದ್ದು. ಅಂತೆಯೇ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ, ಮೈಸೂರು ಸಂಸ್ಥಾನದಲ್ಲಿ ಲಭ್ಯವಾಗಿದ್ದ ಸಂಪನ್ಮೂಲಗಳನ್ನು ವ್ಯವಸ್ಥಿತವಾಗಿ ಬಳಸಿಕೊಂಡು ಕೈಗಾರಿಕೆ, ವಾಣಿಜ್ಯ, ವ್ಯಾಪಾರ, ಸಾರಿಗೆ ಸಂಪರ್ಕ ಮೊದಲಾದ ಕ್ಷೇತ್ರದಲ್ಲಿ ಪುರೋಭಿವೃದ್ಧಿಯನ್ನು ಸಾಧಿಸಲಾಯಿತು. ಅಂದಿನ ಪರಿಸ್ಥಿತಿಯಲ್ಲಿ ವ್ಯಾಪಾರ ವಾಣಿಜ್ಯ ಉತ್ತರ ಹಾಗೂ ದಕ್ಷಿಣ ಭಾರತದ ವಿವಿಧ ಭಾಗಗಳ ನಡುವಣ ಸಂಪರ್ಕ ಸೇತುವೆಯಾಯಿತು. ಆ ಮೂಲಕ ಸಮಾಜದ ಪರಿವರ್ತನೆಗೂ ಕಾರಣವಾಯಿತು. ಇಂತಹ ವ್ಯಾಪಾರ ವಾಣಿಜ್ಯ ಕ್ಷೇತ್ರದಲ್ಲಿ ಆಧುನಿಕತೆ, ವೈಜ್ಞಾನಿಕತೆಯ ವ್ಯವಸ್ಥಿತ ಮಾದರಿಯನ್ನು ಅಳವಡಿಸಿ ಹೇಗೆ ಸಮಾಜವನ್ನು ಅಭಿವೃದ್ಧಿಯತ್ತ, ಪರಿವರ್ತನೆಯತ್ತ ನಾಲ್ವಡಿಯವರು ಹಾಗೂ ಅವರ ಸರ್ಕಾರದ ಆಡಳಿತಗಾರರು ಕೊಂಡೊಯ್ಯುವ ಪ್ರಯತ್ನ ಮಾಡಿದರೆಂಬುದರ ಬಗೆಗಿನ ಸಂಕ್ಷಿಪ್ತ ವಿವರಣೆಯನ್ನು ಈ ಕೆಳಗೆ ನೀಡಲಾಗಿದೆ.

ನಾಲ್ವಡಿಯವರ ಆಳ್ವಿಕೆಯ ಕಾಲದ ವ್ಯಾಪಾರ ವಾಣಿಜ್ಯಗಳ ಬೆಳವಣಿಗೆಯನ್ನು ತಿಳಿಯುವ ಮೊದಲು ಅಂದು ಅಸ್ತಿತ್ವದಲ್ಲಿದ್ದ ಸ್ಥಳೀಯ ವ್ಯಾಪಾರದ ವಾಸ್ತವಿಕ ರೂಪರೇಷಗಳನ್ನು ತಿಳಿಯುವುದು ಅವಶ್ಯಕ. ಅಂದು ರಾಜ್ಯದ ಆಂತರಿಕ ವ್ಯಾಪಾರದಲ್ಲಿ ಸಂತೆಗಳು ಪ್ರಮುಖ ಪಾತ್ರವಹಿಸಿದ್ದವು ಹಾಗೂ ಅವು ಸ್ಥಳೀಯ ವ್ಯಾಪಾರದ ಕೇಂದ್ರಗಳೂ ಆಗಿದ್ದವು. ಹಳ್ಳಿಗಳಲ್ಲಿ ಸಂತೆ, ಪಟ್ಟಣಗಳಲ್ಲಿ ಪೇಟೆ ಅಥವಾ ಸಂತೇಪೇಟೆ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು.

---

*444. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 301*

ಸಂತೆಗಳಲ್ಲಿ ರೈತರು ಮತ್ತು ವ್ಯಾಪಾರಿಗಳು ಭಾಗವಹಿಸಿ ಕೊಡು-ಕೊಳ್ಳುವ ವ್ಯವಹಾರಗಳನ್ನು ನಡೆಸುತ್ತಿದ್ದರು[444]. ನಾಲ್ವಡಿಯವರ ಕಾಲದಲ್ಲಿದ್ದ ಪ್ರಮುಖ ವ್ಯಾಪಾರಿ ವರ್ಗಗಳೆಂದರೆ; ಬಣಜಿಗರು, ಕೋಮಟಿಗರು, ನಗರ್ತರು, ತಮಿಳು ಮೊದಲಿಯಾರರು, ಮುಸಲ್ಮಾನರು, ತೆಲುಗು ಶೆಟ್ಟರು, ದೇವಾಂಗ ಶೆಟ್ಟರು ಮೊದಲಾದವರು. ಇವರು ಹತ್ತಿ ಕೈಗಾರಿಕೆ ಮತ್ತು ರೇಷ್ಮೆ ಕೈಗಾರಿಕೆಗಳನ್ನು ನಡೆಸುತ್ತಿದ್ದರಲ್ಲದೇ ವ್ಯಾಪಾರವನ್ನೂ ಮಾಡುತ್ತಿದ್ದರು ಹಾಗೂ ಕಾಫಿಯ ಬೆಳೆಯನ್ನು ಸಹ ಬೆಳೆಯುತ್ತಿದ್ದರು. ಒಕ್ಕಲಿಗರು ತಾವು ಬೆಳೆದ ದವಸ ಧಾನ್ಯಗಳನ್ನು, ಕೆಲಸಗಾರರು ಮತ್ತು ಉತ್ಪಾದಕರು ತಾವು ತಯಾರಿಸುತ್ತಿದ್ದ ವಸ್ತುಗಳನ್ನು ತಮಗೆ ಅನುಕೂಲವಾದ ರೀತಿಯಲ್ಲಿ ಒಂದು ಕಡೆ ಸೇರಿ ಪೇಟೆ, ಮಾರುಕಟ್ಟೆ ಅಥವಾ ಸಂತೆಗೆ ವ್ಯಾಪಾರಕ್ಕಾಗಿ ಕೊಂಡೊಯ್ದು ಮಾರಾಟ ಮಾಡುತ್ತಿದ್ದರು[445]. ಈ ಕಾಲದ ವ್ಯಾಪಾರದಲ್ಲಿ ವ್ಯವಸಾಯವು ಪ್ರಥಮ ಸ್ಥಾನವನ್ನು ಪಡೆದಿದ್ದು ಆಹಾರ ಧಾನ್ಯಗಳು ಮತ್ತು ವಾಣಿಜ್ಯ ಬೆಳೆಗಳು ಮೈಸೂರು ಸಂಸ್ಥಾನದ ಮುಖ್ಯ ವ್ಯಾಪಾರದ ಸಗಟುಗಳಾಗಿದ್ದವು. ಭತ್ತ, ರಾಗಿ, ಜೋಳ, ಬೇಳೆಕಾಳುಗಳು, ಎಣ್ಣೆಬೀಜಗಳು, ಹೊಗೆಸೊಪ್ಪು, ಜವಳಿ (ಹತ್ತಿಬಟ್ಟೆ), ನೂಲು, ಬೆಲ್ಲ, ಸಕ್ಕರೆ, ವೀಳ್ಯದೆಲೆ, ಅಡಿಕೆ, ಉಪ್ಪು, ಉದ್ದು, ಮೆಣಸು, ಲವಂಗ, ಚೆಕ್ಕೆ, ಅರಗು ಕಚ್ಚಾರೇಷ್ಮೆ, ಕಾಫಿ, ತೆಂಗಿನಕಾಯಿ, ಕೊಬ್ಬರಿ ಮೊದಲಾದ ವಸ್ತುಗಳಲ್ಲದೆ, ಮೈಸೂರು ನಾಡಿನಲ್ಲಿ ವಿಶೇಷವಾಗಿ ದೊರಕುತ್ತಿದ್ದ ಶ್ರೀಗಂದ ಮರದ ತುಂಡುಗಳಿಗೆ ಯೂರೋಪಿಯನ್ನರಿಂದ ವಿಶೇಷ ಬೇಡಿಕೆಯಿದ್ದು, ಅದು ಮೈಸೂರು ಸಂಸ್ಥಾನದ ವಾಣಿಜ್ಯ ಮತ್ತು ವ್ಯಾಪಾರದ ಅಭಿವೃದ್ಧಿಗೆ ಪ್ರಮುಖ ಆಧಾರವಾಗಿತ್ತು[446].

ಮೈಸೂರು ಸಂಸ್ಥಾನದ ಆಗಿನ ಪ್ರಮುಖ ವ್ಯಾಪಾರಿ ಕೇಂದ್ರಗಳೆಂದರೆ; ಮೈಸೂರು, ಬೆಂಗಳೂರು, ಶ್ರೀರಂಗಪಟ್ಟಣ, ತುಮಕೂರು, ತಿಪಟೂರು, ಮಂಡ್ಯ, ಎಡತೊರೆ, ಹುಣಸೂರು, ಚಾಮರಾಜನಗರ, ತಿ. ನರಸೀಪುರ, ತಲಕಾಡು, ನಂಜನಗೂಡು, ಹಾಸನ, ಚಿತ್ರದುರ್ಗ, ಕಳಲೆ, ಗುಂಡ್ಲುಪೇಟೆ, ದೇವನಹಳ್ಳಿ ಮುಂತಾದವುಗಳು. ಈ ಸ್ಥಳಗಳಲ್ಲಿ ಹೊರಗಿನ ವ್ಯಾಪಾರಿಗಳು ತಂಗಲು ಎಲ್ಲಾ ಏರ್ಪಾಡುಗಳನ್ನು ಒದಗಿಸಲಾಗಿತ್ತು. ಕೊಯಮತ್ತೂರು ಮತ್ತು ಪಶ್ಚಿಮ ಕರಾವಳಿಯಿಂದ ಅಂದಿನ ದವಸಧಾನ್ಯಗಳಿಗೆ ಹೆಚ್ಚಿನ ಬೇಡಿಕೆಯಿತ್ತು. ನೀಲಗಿರಿಯು ಸಹ ಮೈಸೂರಿನಿಂದ ಆಹಾರ ಧಾನ್ಯಗಳನ್ನು ಪಡೆಯುತ್ತಿತ್ತು. ಬೆಂಗಳೂರು ಮತ್ತು ಮದರಾಸುಗಳ ನಡುವಣ ಹೆಚ್ಚಿನ ವ್ಯಾಪಾರ ವಾಣಿಜ್ಯ ಸಂಪರ್ಕವಿತ್ತು. ಮೈಸೂರು ಸಂಸ್ಥಾನದೊಂದಿಗೆ ಪಾಲುಕಾಡಪೇಟೆ, ಕೊಡುವಾಯಿಪೇಟೆ, ಕೊಲ್ಲಂಗೋಡು ಪೇಟೆ, ನೆರ್ಜಿಪೇಟೆ, ಮಣೂರು ಕಾಡುಪೇಟೆ, ಕಬ್ಬಿನಪೇಟೆ, ಅಮ್ಮತಂಮನ ಪೇಟೆಗಳು ಸಂಪರ್ಕ ಹೊಂದಿದ್ದು ಉಭಯ ಮಾರ್ಗವಾಗಿ ವ್ಯಾಪಾರವು ನಡೆಯುತ್ತಿತ್ತು. ನಂಜನಗೂಡು ಮತ್ತು ಕಳಲೆ ಅಂತರರಾಜ್ಯ ವ್ಯಾಪಾರ ಕೇಂದ್ರಗಳಾಗಿದ್ದು ತಮಿಳುನಾಡು,

---

*445. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 286*

*446. ಅದೇ., ಪು. 296-97*

*447. ಅದೇ., ಪು. 292-93*

ವೈನಾಡುಗಳೊಂದಿಗೆ ಸಂಪರ್ಕ ಹೊಂದಿತ್ತು[447]. ತೆಂಗಿನಕಾಯಿಯ ತಿರುಳನ್ನು ದೂರದ ಮದರಾಸಿಗೆ ಕಳುಹಿಸಲಾಗುತ್ತಿತ್ತು. ಚನ್ನಪಟ್ಟಣ ಕೃಷಿ ಉತ್ಪನ್ನಗಳ ಹಾಗೂ ಮರದ ಆಟಿಕೆ ಸಾಮಾನುಗಳ ಮಾರುಕಟ್ಟೆಯ ಕೇಂದ್ರವಾಗಿದ್ದು ಅಲ್ಲಿಗೆ ನಾನಾ ಕಡೆಗಳಿಂದ ವ್ಯಾಪಾರಿಗಳು ಬರುತ್ತಿದ್ದರು. ಸಾಗರಪೇಟೆಯೊಂದಿಗೆ ಹದಿನೈದು ಪಟ್ಟಣಗಳು ವ್ಯಾಪಾರದ ಸಂಪರ್ಕ ಹೊಂದಿದ್ದವು. ಅವುಗಳಲ್ಲಿ ದೂರದ ವಾಲಾಜಪೇಟೆ, ಕಾಡಪತ್ರಿ, ಕಡಪಾ, ರಾಯದುರ್ಗ, ಬಳ್ಳಾರಿ ಮೊದಲಾದವುಗಳು ಸೇರಿದ್ದವು. ಈ ಮೇಲಿನ ಅಂಶಗಳಿಂದ ಮೈಸೂರು ಸಂಸ್ಥಾನವು ತನ್ನ ವ್ಯಾಪ್ತಿಯಲ್ಲದೆ ಇತರೆ ಅಕ್ಕಪಕ್ಕದ ರಾಜ್ಯಗಳೊಂದಿಗೂ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವನ್ನಿಟ್ಟುಕೊಂಡಿತ್ತೆಂದು ತಿಳಿದುಬರುತ್ತದೆ.

ಅಂತೆಯೇ ಸಂತೆ ಮತ್ತು ಜಾತ್ರೆಗಳು ವ್ಯಾಪಾರ ವಾಣಿಜ್ಯಗಳ ಬೆಳವಣಿಗೆಗೆ ಪೂರಕವಾಗಿದ್ದಂತೆ ಗ್ರಾಮೀಣ ಜನರ ಸಾಂಸ್ಕೃತಿಕ ಕಲಾ ಪ್ರದರ್ಶನದ ವೇದಿಕೆಗಳೂ ಆಗಿದ್ದವು. ಎಡತೊರೆ, ತಿ. ನರಸೀಪುರ, ಬನ್ನೂರು, ತಲಕಾಡು, ಶ್ರೀರಂಗಪಟ್ಟಣ, ಸೋಮನಾಥಪುರ, ಮೂಗೂರು, ನಂಜನಗೂಡು, ಚಾಮರಾಜನಗರ, ಚುಂಚನಕಟ್ಟೆ ಮೊದಲಾದ ಕಡೆಗಳಲ್ಲಿ ಪ್ರತಿವರ್ಷವೂ ಜಾತ್ರೆಗಳು ನಡೆಯುತ್ತಿದ್ದು ಜಾತ್ರೆ ಮತ್ತು ಪ್ರತಿವಾರ ನಡೆಯುತ್ತಿದ್ದ ಸಂತೆಗಳಲ್ಲಿ ವ್ಯಾಪಾರ ವಹಿವಾಟಿನ ಜೊತೆಗೆ ರಾತ್ರಿ ನಾಟಕ, ಕೋಲಾಟ, ನೀಲಗಾರರ ಹಾಡು, ನಕಲಿ ವೇಷದವರು, ಹೀಗೆ ಸುತ್ತಮುತ್ತ ಊರಿನ ಜನರ ಪ್ರತಿಭೆ ಈ ಸಂತೆ ಹಾಗೂ ಜಾತ್ರೆಗಳಲ್ಲಿ ಹಬ್ಬಹರಿದಿನಗಳ ಉತ್ಸವಗಳಲ್ಲಿ ಪ್ರದರ್ಶಿಸಲ್ಪಡುತ್ತಿತ್ತು. ಹೀಗೆ ಜಾನಪದ ಕಲೆಗಳಿಗೆ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಈ ಸಂತೆ ಮತ್ತು ಜಾತ್ರೆಗಳು ಪ್ರೇರಕ ಶಕ್ತಿ ಹಾಗೂ ಸಂಪರ್ಕ ಸಾಧನಗಳಾಗಿದ್ದವು. ಸಂತೆ ಮತ್ತು ಜಾತ್ರೆಗಳಲ್ಲಿ ಸಾಮಾನ್ಯವಾಗಿ ಸಾಟಿ ಪದ್ಧತಿಯು ಆಚರಣೆಯಲ್ಲಿತ್ತಲ್ಲದೆ ಗ್ರಾಮೀಣ ಕುಶಲಕರ್ಮಿಗಳ ಬದುಕು ಸಂಪೂರ್ಣವಾಗಿ ಸಂತೆಯನ್ನೇ ಅವಲಂಬಿಸಿತ್ತು. ಹಚ್ಚೆ ಹಾಕುವವರು, ಕುಂಬಾರರು, ಕಮ್ಮಾರರು, ಬಳೆಗಾರರು, ದರ್ಜಿಗಳು, ಬಡಗಿಗಳು, ಲಾಳ ಹೊಡೆಯುವವರು, ಮಕ್ಕಳ ಆಟಿಕೆಗಳನ್ನು ಮಾರುವವರು ಸಂತೆಯಿಂದ ಸಂತೆಗೆ ತಿರುಗುತ್ತಾ ತಮ್ಮ ಬದುಕನ್ನು ಸಾಗಿಸುತ್ತಿದ್ದರು[448]. ಉದಾಹರಣೆಗೆ ಬಿ.ಎಲ್. ರೈಸ್‌ರವರು ಎಡತೊರೆ ತಾಲ್ಲೂಕಿನ ಚುಂಚನಕಟ್ಟೆ ಎಂಬಲ್ಲಿ ವಿಶಾಲವಾದ ಜಾತ್ರೆ ನಡೆಯುತ್ತಿತ್ತೆಂದು, ಅದು ಸುಮಾರು ತಿಂಗಳಿನವರೆಗೂ ನಡೆಯುತ್ತಿದ್ದು, ವರ್ಷಕ್ಕೊಮ್ಮೆ ಸೇರುತ್ತಿದ್ದ ಸಂತೆಯಾಗಿತ್ತೆಂಬುದಾಗಿ ಉಲ್ಲೇಖಿಸುತ್ತಾರೆ[449].

ಸಂತೆ ಮತ್ತು ಜಾತ್ರೆಗಳು ಅಂದು ಜನರ ಅಗತ್ಯತೆಗಳನ್ನು ಪೂರೈಸುತ್ತಿದ್ದವಲ್ಲದೇ ಹಳ್ಳಿ ಅಥವಾ ಊರುಗಳು ಪಟ್ಟಣಗಳಾಗಿ ಬೆಳೆಯುವಲ್ಲಿಯೂ ಸಹ ಸಹಕಾರಿಯಾಗಿದ್ದವು. ಹೇಗೆಂದರೆ, ವಿವಿಧ ವರ್ಗಗಳ ಜನರು, ಕಸುಬುದಾರರು ಮತ್ತು ವ್ಯಾಪಾರಿಗಳು ಬಂದು ನೆಲೆಸುತ್ತಿದ್ದುದರಿಂದ ರಾಜನಿಗೂ ಮತ್ತು ಸ್ಥಳೀಯ ಸರ್ಕಾರಕ್ಕೂ ತೆರಿಗೆಯ ರೂಪದಲ್ಲಿ

448. *ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, ಪು. 301-302*

449. *ರೈಸ್ ಬಿ. ಎಲ್. (ಸಂ)., ಮೈಸೂರ್, ಸಂಪುಟ - II, ಮೈಸೂರ್ ಬೈ ಡಿಸ್ಟ್ರಿಕ್ಟ್ಸ್, ವೆಸ್ಟ್ ಮಿನಿಸ್ಟರ್, ಲಂಡನ್, 1897, ಪು. 242*

ಹೆಚ್ಚಿನ ಆದಾಯ ದೊರಕುತ್ತಿದ್ದುದರಿಂದ ಸರ್ಕಾರವು ವ್ಯಾಪಾರಿಗಳ ಜೀವನಾವಶ್ಯಕತೆಗಳ ಈಡೇರಿಕೆಯ ದೃಷ್ಟಿಯಿಂದ ಬಡಾವಣೆಗಳ ನಿರ್ಮಾಣಕ್ಕೆ ಮುಂದಾದುದರಿಂದ ಹಳ್ಳಿ ಅಥವಾ ಊರುಗಳು ಕ್ರಮೇಣವಾಗಿ ಪಟ್ಟಣಗಳಾಗಿ ಪರಿವರ್ತನೆಗೊಳ್ಳುವಂತಾಯಿತು. ಹೀಗೆ ಸಾಂಪ್ರದಾಯಿಕವಾಗಿ ರೂಪಗೊಂಡಿದ್ದ ವ್ಯಾಪಾರ ವಾಣಿಜ್ಯ ಕ್ಷೇತ್ರವು ನಾಲ್ವಡಿಯವರ ನಾಯಕತ್ವದಲ್ಲಿ ಆಧುನಿಕ ಮಾದರಿಯ ಕಾರ್ಯ ಯೋಜನೆಗಳ ಮೂಲಕ ನೂತನ ವ್ಯವಸ್ಥೆಯೆಡೆಗೆ ಸಾಗುವ ಹಿನ್ನೆಲೆಯಲ್ಲಿ ಕೈಗೊಂಡ ಪ್ರಯತ್ನಗಳ ಕಿರುಪರಿಚಯವನ್ನು ಈ ಕೆಳಗೆ ಮಾಡಿಕೊಡಲಾಗಿದೆ.

ಆಧುನಿಕ ಆರ್ಥಿಕತೆಯ ಅಸ್ತಿಭಾರ ಹಾಗೂ ಪ್ರತೀಕವೇ ಆ ದೇಶಗಳ ವ್ಯಾಪಾರ ವಾಣಿಜ್ಯಗಳಾಗಿದ್ದು ಯಾವುದೇ ಸರ್ಕಾರವು ಉತ್ಪಾದಕ ಕ್ಷೇತ್ರಗಳಲ್ಲಿ ಆಧುನೀಕರಣ ಅಂಶಗಳನ್ನು ಅಳವಡಿಸಿ ಉತ್ಪಾದನೆಯನ್ನು ಹೆಚ್ಚಿಸುವುದು ಎಷ್ಟು ಮುಖ್ಯವೋ ಹಾಗೆಯೇ ಆ ಉತ್ಪಾದನೆಗೆ ತಕ್ಕ ಮಾರುಕಟ್ಟೆಯನ್ನು ರೂಪಿಸುವುದೂ ಅಷ್ಟೇ ಮುಖ್ಯ. ಇದೇ ಹಿನ್ನೆಲೆಯಲ್ಲಿ ನಾಲ್ವಡಿಯವರು ಮೈಸೂರಿನ ಉತ್ಪನ್ನಗಳಿಗೆ ಆಧುನಿಕ ಮಾದರಿಯ ಮಾರುಕಟ್ಟೆಯನ್ನು ರೂಪಿಸಿ ರಾಜ್ಯದ ವ್ಯಾಪಾರ ವಾಣಿಜ್ಯಗಳ ಅಭಿವೃದ್ಧಿಗೆ ಆಧ್ಯ ಗಮನ ನೀಡಿದರು. ಅಧಿಕಾರಕ್ಕೆ ಬಂದ ಆರಂಭದಲ್ಲೇ ನಾಲ್ವಡಿಯವರು ಮದ್ರಾಸ್‌ನ ಆರ್ಟ್ಸ್ ಎಕ್ಸಿಬಿಷನ್ ಉದ್ಘಾಟಿಸುತ್ತಾ "ಹೊಸ ವಿಧಾನಗಳನ್ನು ಅಳವಡಿಸಬೇಕು. ಹೊಸ ಕುಶಲಕಲೆಗಳನ್ನು ಬೆಳೆಸಬೇಕು. ಹೊಸ ಮಾರುಕಟ್ಟೆಗಳನ್ನು ಹುಡುಕಬೇಕು"[450] ಎಂದು ಹೇಳುವ ಮೂಲಕ ಮೈಸೂರಿನ ಪದಾರ್ಥಗಳಿಗೆ ರಾಷ್ಟ್ರೀಯ, ಅಂತರ ರಾಷ್ಟ್ರೀಯ ಮಟ್ಟದಲ್ಲಿ ಮಾರುಕಟ್ಟೆ ಒದಗಿಸಲು ಅನೇಕ ಯೋಜನೆಗಳನ್ನು ಹಮ್ಮಿಕೊಂಡರು. ಅಲ್ಲಿಯವರೆಗೂ ಮೈಸೂರು ರಾಜ್ಯದ ವಾಣಿಜ್ಯ ಚಟುವಟಿಕೆಗಳಲ್ಲಿ ಖಾಸಗಿ ವಾಣಿಜ್ಯೋದ್ಯಮಿಗಳೇ ಹೆಚ್ಚಾಗಿ ತೊಡಗಿಕೊಂಡಿದ್ದರು. ನಾಲ್ವಡಿಯವರು ರಾಜ್ಯದ ಆರ್ಥಿಕ ಪ್ರಗತಿಗೆ ಪೂರಕವಾದ ವ್ಯಾಪಾರ ವಾಣಿಜ್ಯಗಳನ್ನು ಬೆಳೆಸಲು ಸರ್ಕಾರವು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಭಾಗವಹಿಸುವಂತೆ ಮಾಡುವ ಮೂಲಕ ಬೆಳೆಸಲು ಪ್ರಯತ್ನಿಸಿದರು. ಆ ನಿಟ್ಟಿನಲ್ಲಿ 1916ರಲ್ಲಿ ಸ್ಥಾಪಿತವಾದ ಪ್ರಮುಖ ಸಂಸ್ಥೆಯೆಂದರೆ 'ವಾಣಿಜ್ಯ ಮಹಾಮಂಡಲಿ' (ಛೇಂಬರ್ ಆಫ್ ಕಾಮರ್ಸ್). ಈ ಮಹಾಮಂಡಲಿಯ ಸ್ಥಾಪನೆಯ ಅವಶ್ಯಕತೆಯನ್ನು ಆರ್ಥಿಕ ಪರಿಷತ್ತಿನ ಕೈಗಾರಿಕೆ ಮತ್ತು ವಾಣಿಜ್ಯ ಸಮಿತಿ ಒತ್ತಿ ಹೇಳಿತು. ಈ ಸಮಿತಿಯ ಸದಸ್ಯರಾಗಿದ್ದ ಸರ್ ಆಲ್ಫ್ರೆಡ್ ಚಾಟರ್‌ಟನ್, ಡಬ್ಲ್ಯು. ಸಿ. ರೋಸ್, ಬಿ. ಕೆ. ಗರುಡಾಚಾರ್,

---

*450. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 20*

*451. ಶಾಮರಾವ್ ಎಂ., ಪೂರ್ವೋಕ್ತ, ಪು. 273*

ವರ್ದಮಾನಯ್ಯ ಮತ್ತು ರಂಗನಾಥರಾವ್ ರಾಜ್ಯದ ಹೆಚ್ಚಿನ ವ್ಯಾಪಾರವು ಸಾಂಪ್ರದಾಯಿಕ ವಿಧಾನದಲ್ಲಿ ನಡೆಯುತ್ತಿದೆ ಎಂಬುದನ್ನು ಉಲ್ಲೇಖಿಸಿದರು[451]. ರಾಜ್ಯದ ವ್ಯಾಪಾರಿಗಳ ದೃಷ್ಟಿಕೋನ ಸಂಕುಚಿತವೂ, ಅವರಲ್ಲಿ ಸಹಕಾರದ ಕೊರತೆ ಎದ್ದು ಕಾಣುತ್ತಿತ್ತು, ಅವರ ವ್ಯಾಪಾರೀ ವಿಧಾನಗಳು ಅತ್ಯಂತ ಪ್ರಾಚೀನವಾಗಿದ್ದು ಆ ಕಾಲಕ್ಕೆ ಸರಿ ಹೊಂದುತ್ತಿರಲಿಲ್ಲ. ವ್ಯಾಪಾರಿಗಳು ರಾಜ್ಯದ ವ್ಯಾಪಾರದ ಅಂಕಿ ಅಂಶಗಳ ಬಗ್ಗೆ ಅಜ್ಞಾನಿಗಳಾಗಿದ್ದರು ಮತ್ತು ತರಭೇತಿ ಹೊಂದಿದವರಾಗಿರಲಿಲ್ಲ ಹಾಗಾಗಿ ತೀವ್ರವಾಗಿ ಬದಲಾಗುತ್ತಿದ್ದ ಪ್ರಪಂಚದ ವಾಣಿಜ್ಯ ವಿಚಾರಗಳನ್ನು ಅಳವಡಿಸಿಕೊಳ್ಳಲು ಅವರು ಅಸಮರ್ಥರಾಗಿದ್ದರು. ಇಂತಹ ನ್ಯೂನತೆಗಳನ್ನು ಹೋಗಲಾಡಿಸಿಕೊಂಡು ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ಕೈಗಾರಿಕೆ ಮತ್ತು ವಾಣಿಜ್ಯಗಳಲ್ಲಿ ಸಹಕಾರ ಮನೋಭಾವನೆಯಿಂದ ದುಡಿಯುವಂತೆ ತರಭೇತಿ, ಸಹಕಾರ, ಪ್ರೋತ್ಸಾಹ ನೀಡಲು ವಾಣಿಜ್ಯ ಮಹಾಮಂಡಲಿಯನ್ನು ಸ್ಥಾಪಿಸಲಾಯಿತು[452]. ಈ ಮಹಾಮಂಡಲಿಯು ಕೈಗಾರಿಕೆ ಮತ್ತು ವ್ಯಾಪಾರದಲ್ಲಿ ನಿರತರಾಗಿದ್ದ ರಾಜ್ಯದ ಜನರ ವ್ಯಾವಹಾರಿಕ ಸಮಸ್ಯೆಗಳನ್ನು ಸರ್ಕಾರದ ಗಮನಕ್ಕೆ ತರುತ್ತಿತ್ತು. ಸರ್ಕಾರವು ತನ್ನ ವಿವಿಧ ಇಲಾಖೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಮೂಲಕ ಆ ಸಮಸ್ಯೆಗಳನ್ನು ಪರಿಹರಿಸಿ ವಾಣಿಜ್ಯ ಚಟುವಟಿಕೆಗಳಿಗೆ ಉತ್ತೇಜನ ನೀಡುತ್ತಿತ್ತು. ವಾಣಿಜ್ಯ ಮಹಾಮಂಡಲಿಯು 1916 ರ ಮೇ 8 ರಂದು ಬೆಂಗಳೂರಿನಲ್ಲಿ ಉದ್ಘಾಟಿಸಲ್ಪಟ್ಟಿತು. ಅಂದಿನ ಸಭೆಯಲ್ಲಿ 500 ವ್ಯಾಪಾರಿಗಳು ಸೇರಿದ್ದರು. ವಾಣಿಜ್ಯ ಮಹಾಮಂಡಲಿಯ ಮುಖ್ಯಸ್ಥರಾಗಿ ಡಬ್ಲ್ಯು.ಸಿ.ರೋಸ್ ರವರು ನೇಮಕಗೊಂಡರು. ವಾಣಿಜ್ಯ ಮಹಾಮಂಡಲಿಯ ಶಾಖೆಗಳು ರಾಜ್ಯದ ಪ್ರಮುಖ ವಾಣಿಜ್ಯ ಕೇಂದ್ರಗಳಾದ ತುಮಕೂರು, ದಾವಣಗೆರೆ, ಚಿಕ್ಕಮಗಳೂರು ಮತ್ತು ತಿಪಟೂರುಗಳಲ್ಲಿ ಸ್ಥಾಪನೆಗೊಂಡವು[453]. ವಾಣಿಜ್ಯ ಮಹಾಮಂಡಲಿಗೆ ಬ್ರಿಟಿಷ್ ಇಂಪೀರಿಯಲ್ ಕೌನ್ಸಿಲ್ ಆಫ್ ಕಾಮರ್ಸ್ ಮಾನ್ಯತೆ ನೀಡಿತು[454]. ಈ ಸಂಸ್ಥೆಯು ರಾಜ್ಯದ ವ್ಯಾಪಾರಿಗಳು ಮತ್ತು ವಾಣಿಜ್ಯೋದ್ಯಮಿಗಳ ವಾಣಿಜ್ಯಕ್ಕೆ ಸಂಬಂಧಿಸಿದ ಅಭಿಪ್ರಾಯಗಳನ್ನು ಸಂಗ್ರಹಿಸಿ, ಕ್ರೂಢೀಕರಿಸಿ ಮಾಹಿತಿಯನ್ನು ಸಾರ್ವಜನಿಕರಿಗೆ ಒದಗಿಸುತ್ತಿತ್ತು[455]. ಮೈಸೂರಿನ ವ್ಯಾಪಾರಿಗಳು ವಿದೇಶಿ ವ್ಯಾಪಾರ ಕೈಗೊಳ್ಳುವಂತೆ ಮಾಡಲು ಆಸಕ್ತ ವ್ಯಾಪಾರಿಗಳನ್ನು ಸರ್ಕಾರವೇ ಹಣಕಾಸು ನೆರವು ನೀಡಿ ವಿದೇಶಿ ಪ್ರವಾಸ ಕೈಗೊಳ್ಳಲು ಕ್ರಮಕೈಗೊಂಡಿತು. ಹಾಗೆ ಜಪಾನಿಗೆ ಹೋದ ವ್ಯಾಪಾರಿಗಳಿಗೆ ತಲಾ 2500 ರೂ.ಗಳ ಸಹಾಯಧನ ಹಾಗೂ ಅವರ ನೆರವಿಗೆ ದುಭಾಷಿಗಳು ಮತ್ತು ಅಧಿಕಾರಿಗಳನ್ನು ಒದಗಿಸಿತು[456].

ನಾಲ್ವಡಿಯವರ ಸರ್ಕಾರವು ವಿಸ್ತೃತವಾದ ರೀತಿಯಲ್ಲಿ ದೇಶೀಯ ಮತ್ತು ವಿದೇಶಿಯ ವ್ಯಾಪಾರಕ್ಕೆ ಉತ್ತೇಜನ

---

*452. **ಶಾಮರಾವ್ ಎಂ., ಪೂರ್ವೋಕ್ತ**, ಪು. 273*

*453. **ಅದೇ.**, ಪು. 274*

*454. **ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್**, 1916-17, ಪು. 39*

*455. **ಶಾಮರಾವ್ ಎಂ., ಪೂರ್ವೋಕ್ತ**, ಪು. 274*

*456. **ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್, ಇಂಡಸ್ಟ್ರೀಸ್ ಅಂಡ್ ಕಾಮರ್ಸ್**, ಪು. 113*

*457. **ಹ್ಯಾಂಡ್ ಬುಕ್ ಆಫ್ ಮೈಸೂರ್ ಅಡ್ಮಿನಿಸ್ಟ್ರೇಷನ್**, ಪು. 145*

ಕೊಡಲು ಕೈಗಾರಿಕಾ ಇಲಾಖೆಯಲ್ಲಿ ವಾಣಿಜ್ಯ ವಿಭಾಗವೊಂದನ್ನು 1917ರಲ್ಲಿ ರಚಿಸಿತು. ಈ ವಿಭಾಗವು ವಾಣಿಜ್ಯಕ್ಕೆ ಸಂಬಂಧಿಸಿದ ಅಂಕಿ ಅಂಶಗಳು ಮತ್ತು ಮಾಹಿತಿಗಳನ್ನು ವಾಣಿಜ್ಯ ಬ್ಯೂರೋದ ಮೂಲಕ ಸಂಗ್ರಹಿಸುವುದು, ಕೇಂದ್ರೀಯ ವಾಣಿಜ್ಯ ವಸ್ತು ಸಂಗ್ರಹಾಲಯಗಳನ್ನು ಸ್ಥಾಪಿಸಿ ಆ ಮೂಲಕ ಪ್ರಚಾರ ಮತ್ತು ಮಾರುಕಟ್ಟೆ ರೂಪಿಸುವುದು, ವಾಣಿಜ್ಯ ಮಾಹಿತಿಗಳನ್ನೊಳಗೊಂಡ ನಿಯತಕಾಲಿಕ ಬುಲೆಟಿನ್‌ಗಳನ್ನು ಪ್ರಕಟಿಸುವುದು ಮುಂತಾದ ಕಾರ್ಯಚಟುವಟಿಕೆಗಳ ಮೂಲಕ ರಾಜ್ಯದ ವಾಣಿಜ್ಯ ಚಟುವಟಿಕೆಗಳನ್ನು ಚುರುಕುಗೊಳಿಸಿತು[457]. ಇದರ ಪರಿಣಾಮವಾಗಿ ನಾಲ್ವಡಿಯವರ ಕಾಲದಲ್ಲಿ ಆಂತರಿಕ ಮತ್ತು ವಿದೇಶೀ ವ್ಯಾಪಾರವು ವ್ಯವಸ್ಥಿತವಾಗಿ ಬೆಳವಣಿಗೆ ಹೊಂದುತ್ತಾ ಬಂದಿತು. ಅಂದು ಆಂತರಿಕವಾಗಿ ಗ್ರಾಮಿಗರು ಎಣ್ಣೆಯನ್ನು, ಜೈನ ಮತಕ್ಕೆ ಸೇರಿದ ಭೋಗಾರ ವರ್ಗದವರು ಹಿತ್ತಾಳೆ, ತಾಮ್ರ ಮತ್ತು ಇತರೆ ಮನೆಯ ಸಾಮಾನುಗಳನ್ನು ತಯಾರಿಸಿ ಮಾರುತ್ತಿದ್ದರು. ಗುಡಿಗಾರರು ಎಂಬ ಜನಾಂಗದವರು ಗಂಧದ ಮರದ ಕೆತ್ತನೆ ಕೆಲಸ ಮತ್ತು ಆಭರಣಗಳನ್ನು ತಯಾರಿಸಿ ಮಾರಿದರೆ ಪಟ್ಟೆಗಾರರು ಮತ್ತು ಕಟ್ಟಾರಿಗಳು ಕಚ್ಚಾರೇಷ್ಮೆಯನ್ನು ತಯಾರಿಸಿ ಮಾರುತ್ತಿದ್ದರು[458].

ಮೈಸೂರು ಸಂಸ್ಥಾನದ ಕೃಷಿ ಮತ್ತು ಕೈಗಾರಿಕೋತ್ಪನ್ನಗಳು ಪಶ್ಚಿಮ ತೀರದ ಬಂದರುಗಳಾದ ಭಟ್ಕಳ, ಮಂಗಳೂರು, ಹೊನ್ನಾವರಗಳ ಮೂಲಕ ಒಳನಾಡಿನ ಪಟ್ಟಣಗಳಿಂದ ಅರೇಬಿಯಾ, ಪರ್ಷಿಯಾ, ದಕ್ಷಿಣ ಆಫ್ರಿಕಾ, ಪೋರ್ಚುಗಲ್ಲು, ಮಲಯಾ, ಬರ್ಮಾ, ಚೀನಾ ಮೊದಲಾದ ದೇಶಗಳಿಗೆ ರಫ್ತಾಗುತ್ತಿದ್ದವು. ಇಂಗ್ಲಿಷ್, ಫ್ರೆಂಚ್ ಮತ್ತು ಡಚ್ ವ್ಯಾಪಾರಿಗಳ ಸಹಾಯದಿಂದ 'ಬೆಂಗಳೂರಿನ ವ್ಯಾಪಾರಿಗಳ ಸಂಘ' ರಚಿತವಾಗಿತ್ತು. ಇದರಿಂದಾಗಿ ಮೈಸೂರು ಸಂಸ್ಥಾನದ ವ್ಯಾಪಾರ ವಾಣಿಜ್ಯಗಳನ್ನು ಮತ್ತಷ್ಟು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ನಾಲ್ವಡಿಯವರು ಹಲವು ಸಾರಿಗೆ ಸಂಪರ್ಕಗಳನ್ನು ಉತ್ತಮಪಡಿಸಿದರು. ಮೈಸೂರು ಸಂಸ್ಥಾನವು ವಿದೇಶಿ ವ್ಯಾಪಾರಕ್ಕೆ ಸಂಬಂಧಿಸಿದಂತೆ ಮದ್ರಾಸು ಅಥವಾ ಬೊಂಬಾಯಿ ಬಂದರುಗಳನ್ನೇ ಅವಲಂಬಿಸಬೇಕಿತ್ತು[459]. ಬ್ರಿಟಿಷ್ ಸರ್ಕಾರದಿಂದ ಭಟ್ಕಳವನ್ನು ಪಡೆದುಕೊಂಡು ಅದನ್ನು ಮೈಸೂರು ರಾಜ್ಯದ ಉತ್ತಮ ಬಂದರನ್ನಾಗಿ ಮಾಡುವ ಪ್ರಯತ್ನಕ್ಕೆ ಬ್ರಿಟಿಷ್ ಸರ್ಕಾರದವರು ಅನುಮತಿ ನೀಡಿರಲಿಲ್ಲ. ಹೀಗೆ ಚಾಲ್ತಿಯಲ್ಲಿದ್ದ ದೇಶೀ, ವಿದೇಶಿ ವ್ಯಾಪಾರವು ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚು ಮಾನ್ಯತೆ ಪಡೆಯುವಂತೆ ಮಾಡಲು ಹಲವಾರು ಕಾರ್ಯಯೋಜನೆಗಳನ್ನು ರೂಪಿಸಲಾಯಿತು.

ಮೈಸೂರು ಸರ್ಕಾರವು 19ನೇ ಶತಮಾನದಿಂದಲೂ ತನ್ನ ಕೃಷಿ, ಕೈಗಾರಿಕೆ ಹಾಗೂ ಖನಿಜ ಸಂಪತ್ತುಗಳಿಗೆ

---

*458. ಹಯವದನ ರಾವ್ ಸಿ. (ಸಂ)., ಪೂರ್ವೋಕ್ತ, 302*

*459. ಅದೇ., ಪು. 293*

*460. ಇತಿಹಾಸ ದರ್ಶನ., ಸಂಪುಟ - 6, 1991, ಪು. 244-245*

ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಬೇಡಿಕೆ ಹಾಗೂ ಮಾರುಕಟ್ಟೆ ಸೃಷ್ಟಿಸಲು ವಸ್ತುಪ್ರದರ್ಶನ ಹಾಗೂ ವಸ್ತು ಸಂಗ್ರಹಾಲಯಗಳನ್ನು ಪ್ರಚಾರದ ಮಧ್ಯಮಗಳಾಗಿ ಬಳಸಿಕೊಂಡಿತು. ಇದರ ಆರಂಭವು 1851ರಲ್ಲೇ ಏರ್ಪಟ್ಟಿದ್ದ "ಲಂಡನ್ ಗ್ರೇಟ್ ಎಕ್ಸಿಬಿಷನ್" ಎಂಬ ಬೃಹತ್ ವಸ್ತು ಪ್ರದರ್ಶನಕ್ಕೆ ಮೈಸೂರು ಸಂಸ್ಥಾನದ ಭೂ ಖನಿಜ ಸಂಪತ್ತು, ಕೈಗಾರಿಕಾ ಸಂಪತ್ತು, ಆಹಾರ ದಿನಸಿ, ರೇಷ್ಮೆ, ಗಂಧದೆಣ್ಣೆ, ಬಟ್ಟೆ ಮುಂತಾದ ವಸ್ತುಗಳು ಹೋಗಿದ್ದವು[460]. ಇದೇ ಮಾದರಿಯ ವಸ್ತು ಪ್ರದರ್ಶನಗಳು ಲಂಡನ್ನಿನಲ್ಲಿ 10 ವರ್ಷಗಳಿಗೊಮ್ಮೆ, ಪ್ಯಾರಿಸ್‌ನಲ್ಲಿ 5 ವರ್ಷಗಳಿಗೊಮ್ಮೆ ನಡೆಯಲಾರಂಭಿಸಿದವು. ನಂತರ ವಿಶ್ವದ ಮೂಲೆ ಮೂಲೆಗಳಲ್ಲಿ ನಡೆಯುತ್ತಾ ಬಂದವು. ಕಲ್ಕತ್ತಾದಲ್ಲಿ 1883ರಲ್ಲಿ, ಮೈಸೂರಿನಲ್ಲಿ 1885ರಲ್ಲಿ ಈ ಮಾದರಿಯ ವಸ್ತು ಪ್ರದರ್ಶನಗಳು ಏರ್ಪಟ್ಟವು[461]. ಪರಿಣಾಮವಾಗಿ ಮೈಸೂರು ಸರ್ಕಾರ ತನ್ನ ರಾಜ್ಯದ ಕೃಷಿ ಮತ್ತು ಕೈಗಾರಿಕಾ ವಸ್ತುಗಳನ್ನು ಬೆಂಬಲಿಸುವ ಆಲೋಚನೆಯಲ್ಲಿ ಪ್ರತಿ ವರ್ಷವೂ ದಸರಾ ಸಂದರ್ಭದಲ್ಲಿ ಇಂತಹ ವಸ್ತು ಪ್ರದರ್ಶನಗಳನ್ನು ಏರ್ಪಡಿಸಲು ತೀರ್ಮಾನಿಸಿತು. ಆರಂಭದಲ್ಲಿ ಈ ಪ್ರದರ್ಶನವು ನಾಲ್ಕು ಅಥವಾ ಐದು ವರ್ಷಗಳಿಗೊಮ್ಮೆ ಸಂಘಟಿಸಲ್ಪಡುತ್ತಿದ್ದುದು 1907ರ ನಂತರ ಪ್ರತಿವರ್ಷ ಏರ್ಪಡುವಂತಾಯಿತು[462]. ಇದಕ್ಕೆ ಸ್ಫೂರ್ತಿ ಎಂದರೆ 1903ರ ಜನವರಿಯಲ್ಲಿ ಚಕ್ರವರ್ತಿ ಏಳನೇ ಎಡ್ವರ್ಡ್ ಅವರ ಅಧಿಕಾರ ಸ್ವೀಕಾರದಾನುಸಾರವಾಗಿ ದೆಹಲಿಯಲ್ಲಿ ನಡೆದ ಕಲಾ ವಸ್ತುಪ್ರದರ್ಶನ. ಈ ಕಲಾ ವಸ್ತುಪ್ರದರ್ಶನದಲ್ಲಿ ನಾಲ್ವಡಿಯವರು ಖುದ್ದಾಗಿ ಭಾಗವಹಿಸಿದ್ದರಲ್ಲದೆ ಮೈಸೂರು ಸಂಸ್ಥಾನದಲ್ಲಿ ತಯಾರಾಗುವ ಅನೇಕ ವಸ್ತುಗಳನ್ನು ಪ್ರತ್ಯೇಕ ವಿಭಾಗವೊಂದರಲ್ಲಿ ಪ್ರದರ್ಶಿಸುವ ವ್ಯವಸ್ಥೆ ಮಾಡಿದ್ದರು. ಲಾರ್ಡ್ ಕರ್ಜನ್‌ರವರ ಅಧ್ಯಕ್ಷತೆಯಲ್ಲಿ ಏರ್ಪಟ್ಟಿದ್ದ ಈ ಪ್ರದರ್ಶನದಲ್ಲಿ ಪ್ರದರ್ಶಿಸಲ್ಪಟ್ಟ ಮೈಸೂರಿನ ಗಂಧದ ಕೆತ್ತನೆಯ ಕೆಲಸಕ್ಕೆ ಚಿನ್ನದ ಪದಕ ದೊರೆಯಿತು[463]. ಲಾರ್ಡ್ ಕರ್ಜನ್‌ರವರು ಸಮಾರಂಭದ ಭಾಷಣದಲ್ಲಿ ಮೈಸೂರು ಸಂಸ್ಥಾನದಿಂದ ಬಂದಿದ್ದ ಬೀಟೆಯ ಮರದ ಮತ್ತು ಶ್ರೀಗಂಧದ ಸಾಮಾನುಗಳಷ್ಟು ಸುಂದರವಾದ ಮರದ ಸಾಮಾನುಗಳು ಮತ್ತೆಲ್ಲಿಂದಲೂ ಬಂದಿರಲಿಲ್ಲವೆಂದು ಹೊಗಳಿದರು[464].

1907 ರ ದಸರಾ ವಸ್ತು ಪ್ರದರ್ಶನವನ್ನು ಉದ್ಘಾಟಿಸುತ್ತಾ ನಾಲ್ವಡಿಯವರು ಅದರ ಮಹತ್ವವನ್ನು ಒತ್ತಿ ಹೇಳಿದರು. ಪ್ರತಿವರ್ಷ ನಡೆಸುವ ಇಂಗಿತವನ್ನು ವ್ಯಕ್ತಪಡಿಸಿದರು[465]. ಆದರೆ ಅದರಲ್ಲಿ ವೈಶಿಷ್ಟ್ಯತೆ ಮೂಡಿದ್ದು

---

*461. ಅದೇ.*

*462. ವಡಿವೇಲು, ಬಿ. ವೈ., ಸಮ್ ಮೈಸೂರ್ ವರ್ದೀಸ್, ಪು. 132*

*463. ದಿ ಮದ್ರಾಸ್ ಮೇಲ್., ದಿನಪತ್ರಿಕೆ, ದಿನಾಂಕ: 15-1-1903. ಪು. 28*

*464. ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 222-223*

*465. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 62*

1911ರಲ್ಲಿ. ನಾಲ್ವಡಿಯವರು ಉತ್ತರ ಭಾರತದ ಪ್ರಯಾಗಕ್ಕೆ ಪ್ರವಾಸ ಕೈಗೊಂಡಿದ್ದಾಗ ಅಲ್ಲಿ ಭಾರೀ ವಸ್ತುಪ್ರದರ್ಶನವೊಂದು ಜರುಗಿತ್ತು. ಇದರಿಂದ ಪ್ರಭಾವಿತರಾದ ಅವರು ಈ ಹಿಂದೆ ಮೈಸೂರಿನಲ್ಲಿ 1907ರಲ್ಲಿ ಏರ್ಪಟ್ಟಿದ್ದ ವಸ್ತುಪ್ರದರ್ಶನಕ್ಕಿಂತ ಭಾರಿಯಾದ ವಸ್ತು ಪ್ರದರ್ಶನವೊಂದನ್ನು ಏರ್ಪಡಿಸಬೇಕೆಂದು ಹಂಬಲಿಸಿದರು. ಇದರ ಪರಿಣಾಮವಾಗಿ ಪ್ರತಿ ವರ್ಷ ಮೈಸೂರು ನಗರದಲ್ಲಿ ವಿಶೇಷವಾಗಿ ಮತ್ತು ಭಾರೀ ಪ್ರಮಾಣದಲ್ಲಿ ವ್ಯವಸಾಯ ಹಾಗೂ ಕೈಗಾರಿಕೆಗಳ ವಸ್ತು ಪ್ರದರ್ಶನವು ನಡೆಯಲಾರಂಭವಾದದ್ದು ಆ ಬಳಿಕವೇ. ಈ ವ್ಯವಸ್ಥೆಯು ಕೇವಲ ದೇಶೀಯವಾಗಿ ಮಾತ್ರವಲ್ಲದೆ, ವಿದೇಶಗಳಲ್ಲೂ ನಡೆಯುತ್ತಿದ್ದ ವಸ್ತುಪ್ರದರ್ಶನಗಳಲ್ಲಿ ಪಾಲ್ಗೊಳ್ಳುವಂತೆಯೂ, ಆ ಮೂಲಕ ಇಲ್ಲಿ ತಯಾರಾದ ವಸ್ತುಗಳಿಗೆ ಬೇಡಿಕೆಯನ್ನು ಪಡೆದು ಹೆಚ್ಚಿನ ಲಾಭಾಂಶವನ್ನು ಪಡೆಯುವಂತೆಯೂ ಆಲೋಚಿಸಲಾಯಿತು. ಅದರಂತೆ ಕುಶಲವಸ್ತು ರಚನೆಯ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ 1924ರಲ್ಲಿ ಲಂಡನ್ನಿನಲ್ಲಿ ನಡೆದ ಬ್ರಿಟಿಷ್ ಸಾಮ್ರಾಜ್ಯದ ವೆಂಬ್ಲಿ ವಸ್ತು ಪ್ರದರ್ಶನದಲ್ಲಿ ಮೈಸೂರಿನ ವಸ್ತುಗಳಿಗೆ ಮಾನ್ಯ ಸ್ಥಾನವೂ ದೊರಕುವಂತಾಯಿತು. ಆಗ ರಾಣಿಯಾಗಿದ್ದ ಮೇರಿಯು ಮೈಸೂರಿನ ವಸ್ತುಗಳನ್ನು ಬಹಳವಾಗಿ ಮೆಚ್ಚಿದ್ದಲ್ಲದೆ ಅನೇಕ ವಸ್ತುಗಳನ್ನು ಕ್ರಯಕ್ಕೆ ಕೊಂಡು ಪ್ರೋತ್ಸಾಹಿಸಿದರು[466]. ಹೀಗೆ ವರ್ಷಗಳು ಕಳೆದಂತೆ ಮೈಸೂರು ಸಂಸ್ಥಾನದ ಕಾರ್ಖಾನೆಗಳಲ್ಲಿ ತಯಾರಾದ ವಸ್ತುಗಳು ದೇಶ ಮತ್ತು ವಿದೇಶಗಳಲ್ಲಿ ನಡೆಯುತ್ತಿದ್ದ ವಸ್ತುಪ್ರದರ್ಶನಗಳಲ್ಲಿ ಪ್ರದರ್ಶಿತಗೊಂಡು ಪಾರಿತೋಷಕಗಳನ್ನೂ, ಪ್ರಶಸ್ತಿ ಪತ್ರಗಳನ್ನು ತಪ್ಪದೇ ಪಡೆಯುವಂತಾಯಿತು.

ಕಾಲ ಕ್ರಮೇಣ ಮೈಸೂರು ದಸರಾ ವಸ್ತುಪ್ರದರ್ಶನವು ಪ್ರಪಂಚದ ವಿವಿಧ ಭಾಗಗಳಿಂದ ವಸ್ತುಗಳನ್ನು ಆಕರ್ಷಿಸುತ್ತಾ ಬಂದಿತು. ವಿಶೇಷವಾಗಿ ಭಾರತದ ವಿವಿಧ ಭಾಗಗಳಿಂದ ಬಂದ ವಸ್ತುಗಳನ್ನು ನೋಡಿದ ಜನರು "ಈ ತರಹದ ವಸ್ತುಗಳೆಲ್ಲ ಭಾರತದಲ್ಲಿ ಸಿದ್ಧಗೊಳ್ಳುತ್ತವೆಂದು ನಮಗೆ ಗೊತ್ತಿರಲಿಲ್ಲ" ವೆಂಬುದಾಗಿ ಹೇಳುವುದು ಸರ್ವೇಸಾಮಾನ್ಯವಾದ ಹೇಳಿಕೆಯಾಗಿತ್ತು. ಹೀಗೆ ಪ್ರಸಿದ್ಧಗೊಂಡ ದಸರಾ ವಸ್ತುಪ್ರದರ್ಶನವು ಮೈಸೂರಿನ ವಸ್ತುಗಳನ್ನೊಳಗೊಳ್ಳಬೇಕು, ಮೈಸೂರಿಗೆ ಹಣವನ್ನು ತರುವಂತಾಗಬೇಕು ಎಂಬುದಾಗಿ 1927 ರ ಮೈಸೂರು ದಸರಾ ಕೈಗಾರಿಕಾ ಮತ್ತು ಕೃಷಿ ವಸ್ತು ಪ್ರದರ್ಶನದ ಬಹುಮಾನ ವಿತರಣಾ ಸಮಾರಂಭದಲ್ಲಿ ನುಡಿದರು. ಹಾಗೆಯೇ "ಭವಿಷ್ಯದ ವರ್ಷಗಳಲ್ಲಿ ನಾನು ಹೆಚ್ಚಾಗಿ ಮೈಸೂರಿನ ವಸ್ತುಗಳನ್ನು ನೋಡಲಿಚ್ಛಿಸುತ್ತೇನೆ. ಅಂದರೆ ನಾನು ಬೇರೆ ಭಾಗಗಳ ಸ್ನೇಹಿತರನ್ನು ಸ್ವಾಗತಿಸುವುದಿಲ್ಲವೆಂದು ಅರ್ಥವಲ್ಲ ಅವರು ಬಂದು ಇಲ್ಲಿ ಅವರ ವಸ್ತುಗಳನ್ನು ಮಾರಲಿ ಮತ್ತು

---

*466. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 273*

*467. ಅದೇ.*

ಹೊಸ ಪ್ರಕ್ರಿಯೆಗಳ ಬಗ್ಗೆ ಬೋಧಿಸಲಿ ನನಗೆ ಸಂತೋಷ. ಆದರೆ ನನಗೆ ಹೆಚ್ಚು ಸಂತೋಷವಾಗುವ ಮುಂದೊಂದು ಕಾಲ ಬರುತ್ತದೆ, ಆಗ ಅವರು ಇಲ್ಲಿ ಬರುತ್ತಾರೆ ಬೋಧಿಸುವುದಕ್ಕಲ್ಲ ಆದರೆ ಕಲಿಯಲಿಕ್ಕೆ, ಮಾರಲಿಕ್ಕಲ್ಲ ಆದರೆ ಕೊಳ್ಳಲಿಕ್ಕೆ, ಮೈಸೂರು ಹಣವನ್ನು ಕೊಂಡೊಯ್ಯುವುದಕ್ಕಲ್ಲ ಆದರೆ ಅವರ ಹಣವನ್ನು ಮೈಸೂರಿನಲ್ಲಿ ಬಿಡಲು"[467]. ಹೀಗೆ ನಾಲ್ವಡಿಯವರು ಸ್ವಾವಲಂಬಿ ಮೈಸೂರನ್ನು, ಮೈಸೂರಿಗೆ ಅನುಕೂಲಕರವಾದ ವಿದೇಶಿ ವ್ಯಾಪಾರ ಚಟುವಟಿಕೆಗಳಿಂದ ಕೂಡಿದ ವಾಣಿಜ್ಯ ನೀತಿಯನ್ನು ಪ್ರತಿಪಾದಿಸುತ್ತಿದ್ದರು. ಮೈಸೂರಿನಲ್ಲಿ ಗಂಧದೆಣ್ಣೆ, ರೇಷ್ಮೆ ಬಟ್ಟೆ ಹಾಗೂ ಮರದ ಕೆತ್ತನೆ ವಸ್ತುಗಳು ಮುಂತಾದವುಗಳನ್ನು ಲಾಭದಾಯಕವಾಗಿ ಮಾರಲು ಮತ್ತು ಮಾರುಕಟ್ಟೆ ವಿಸ್ತರಿಸಲು ಹಾಗೂ ಮೈಸೂರು ಸಂಸ್ಥಾನದ ವರ್ತಕರು ಅಪೇಕ್ಷಿಸಿದಾಗ ವ್ಯಾಪಾರ ವಾಣಿಜ್ಯ ಮುಂತಾದ ವಿಚಾರಗಳ ಬಗ್ಗೆ ಸಮರ್ಪಕ ಮಾಹಿತಿ ನೀಡಿ ಅವರು ವಿದೇಶಗಳ ವಾಣಿಜ್ಯ ಮಂಡಲಿಗಳೊಡನೆ ವ್ಯವಹರಿಸಲು ಸಹಾಯಕವಾಗಲೆಂದು ಅಂತರರಾಷ್ಟ್ರೀಯ ವಾಣಿಜ್ಯ ಕೇಂದ್ರವಾದ ಲಂಡನ್ ನಗರದಲ್ಲಿ 1929ರಲ್ಲಿ "ಟ್ರೇಡ್ ಕಮಿಷನರ್" ಎಂಬ ಹುದ್ದೆಯನ್ನು ಹಾಗೂ 'ಮೈಸೂರ್ ಎಂಪೋರಿಯಂ' ಎಂಬ ಮಳಿಗೆಯನ್ನು ಸ್ಥಾಪಿಸಿದರು. ಇದು ಮೈಸೂರಿನ ವಸ್ತುಗಳಿಗೆ ಮತ್ತು ವಾಣಿಜ್ಯೋದ್ಯಮಿಗಳಿಗೆ ಅಂತರ ರಾಷ್ಟ್ರೀಯ ವಲಯದಲ್ಲಿ ಸಂಪರ್ಕ ಕೇಂದ್ರವಾಗಿ ಕೆಲಸ ನಿರ್ವಹಿಸಿತು[468]. ನಾಲ್ವಡಿಯವರು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ವಸ್ತುಗಳ ಬೇಡಿಕೆ ಸೃಷ್ಟಿಸಲು ಪ್ರಚಾರ ಅವಶ್ಯಕವೆಂಬುದನ್ನು ಅರಿತಿದ್ದರು. ಅಲ್ಲದೆ ಮೈಸೂರಿನ ಯಾವ ವಸ್ತುವಿಗೆ ಯಾವ ದೇಶದಲ್ಲಿ ಬೇಡಿಕೆ ಇದೆ. ಮೈಸೂರಿನ ವಸ್ತುಗಳಿಗೆ ಯಾವ ಹೊಸ ದೇಶದಲ್ಲಿ ಹೆಚ್ಚಿನ ಮಾರುಕಟ್ಟೆಯ ಸಾಧ್ಯತೆ ಇದೆ ಎಂಬುದನ್ನು ಅರಿತಿದ್ದರು. ಅವರು ಬಾಳೆಹೊನ್ನೂರಿನ ಪ್ರಯೋಗಾತ್ಮಕ ಕೇಂದ್ರದ ಪ್ರಯೋಗಾಲಯದ ಉದ್ಘಾಟನೆಯಲ್ಲಿ ಮಾತನಾಡುತ್ತಾ ವ್ಯಕ್ತಪಡಿಸಿದ ಅಂಶಗಳು ಅವರಿಗೆ ಅಂತರರಾಷ್ಟ್ರೀಯ ಮಾರುಕಟ್ಟೆ, ವ್ಯಾಪಾರ ವಾಣಿಜ್ಯದ ಬಗ್ಗೆ ಇದ್ದ ಅರಿವು ಹಾಗೂ ಒಲವನ್ನು ವ್ಯಕ್ತಪಡಿಸುತ್ತವೆ "ಪೋಸ್ಟ್ ತರುವ ಎಲ್ಲ ಕಾಗದಗಳಲ್ಲೂ ನೀವು ಇದನ್ನು ಖರೀದಿಸಿ ಅಥವಾ ಈ ದೇಶದ ಅಥವಾ ಮತ್ತೊಂದು ದೇಶದ ಉತ್ಪಾದನೆ ಅಥವಾ ಆಹಾರಗಳನ್ನು ಬಳಸಿ ಎಂಬ ಆಹ್ವಾನಗಳನ್ನು ಹೊತ್ತೇ ತರುತ್ತವೆ. ಜನರಿಗೆ ಹೆಚ್ಚು ಕಾಫಿ ಕುಡಿಯಿರಿ ಮತ್ತು ನಿಮ್ಮ ಕಾಫಿಯನ್ನು ಹೆಚ್ಚು ಖರೀದಿಸಿರೆಂದು ಪ್ರಚಾರ ಮಾಡಲು ಇದು ಒಳ್ಳೆಯ ಕಾಲವಲ್ಲವೆ? ಭಾರತವು ಈಗಾಗಲೇ ಯುನೈಟೆಡ್ ಕಿಂಗ್‌ಡಮ್ ಬಳಸುವ ಐದನೇ ಒಂದು (1/5) ಭಾಗದಷ್ಟು ಕಾಫಿಯನ್ನು ಪೂರೈಸುತ್ತಿದೆ; ಆದರೆ ಯುನೈಟೆಡ್ ಕಿಂಗ್‌ಡಮ್ ಮತ್ತು ಅದರ ಪ್ರಮುಖ ವಸಾಹತುಗಳಲ್ಲಿ ವಾರ್ಷಿಕ ಅನುಭೋಗ ತಲಾವಾರು ಕೇವಲ ಒಂದು ಪೌಂಡ್, ಅದೇ ಫ್ರಾನ್ಸ್‌ನಲ್ಲಿ ಅದು ಐದು, ಜರ್ಮನಿಯಲ್ಲಿ ಆರರಿಂದ ಏಳು, ಅಮೇರಿಕಾದಲ್ಲಿ

---

*468. ವೆಂಕಟರಾಮಯ್ಯ ಸಿ. ಕೆ., ಪೂರ್ವೋಕ್ತ, ಪು. 332*

*469. ಸ್ಪೀಚಸ್ ಬೈ ಹಿಸ್ ಹೈನೆಸ್., ಪು. 321*

ಹನ್ನೊಂದರಿಂದ ಹನ್ನೆರಡು ಮತ್ತು ಹಾಲೆಂಡಿನಲ್ಲಿ ಹದಿನಾಲ್ಕರಿಂದ ಹದಿನೈದು ಪೌಂಡು ಎಂಬುದನ್ನು ತಿಳಿದು ನನಗೆ ಆಶ್ಚರ್ಯವಾಗಿದೆ. ನಾನು ಸೂಚಿಸಿದ ಎರಡು ಅಂಶಗಳನ್ನು ಆಧರಿಸಿ ಪ್ರಚಾರ ಅಂದೋಲನ ಕೈಗೊಂಡರೆ ಅತ್ಯುತ್ಕೃಷ್ಟವಾದ ಫಲಿತಾಂಶ ನಮ್ಮನ್ನರಸಬಹುದೆಂದು ಈ ಅಂಕಿ ಅಂಶಗಳು ದೃಢವಾಗಿ ತಿಳಿಸುತ್ತವೆ"[469].

ಮೇಲ್ಕಂಡ ನಾಲ್ವಡಿಯವರ ಮಾತುಗಳು ಅವರಿಗೆ ಅಂತರರಾಷ್ಟ್ರೀಯ ಮಾರುಕಟ್ಟೆ, ವ್ಯಾಪಾರ ವಾಣಿಜ್ಯದ ಬಗ್ಗೆ ಇದ್ದ ಅರಿವು ಹಾಗೂ ಒಲವನ್ನು ವ್ಯಕ್ತಪಡಿಸುತ್ತವೆ. ಮೈಸೂರಿನ ಪ್ರಮುಖ ವಾಣಿಜ್ಯ ಬೆಳೆಯಾದ ಕಾಫಿಯನ್ನು ಯುನೈಟೆಡ್ ಕಿಂಗ್‌ಡಮ್ ಹಾಗೂ ಅದರ ವಸಾಹತು ದೇಶಗಳಿಗಿಂತ ಹೆಚ್ಚಾಗಿ ಕಾಫಿಯನ್ನು ತಲಾವಾರು ಅತಿ ಹೆಚ್ಚು ಬಳಸುವ ಫ್ರಾನ್ಸ್, ಜರ್ಮನಿ ಹಾಗೊ ಅಮೆರಿಕಾ ದೇಶಗಳಲ್ಲಿ ಪ್ರಚಾರ ಮಾಡಿ ನಮ್ಮ ವಸ್ತುಗಳನ್ನು ಹೆಚ್ಚು ಮಾರಬಹುದೆಂದು ಕಾಫಿ ಉತ್ಪಾದಕರಿಗೆ ವಾಣಿಜ್ಯದ ಮರ್ಮವನ್ನು ತಿಳಿಸಿಕೊಟ್ಟರು. ಹೀಗೆ ನಾಲ್ವಡಿಯವರು ತಾವು ಗಳಿಸಿದ ಆಧುನಿಕ ಶಿಕ್ಷಣ ಹಾಗೂ ಹೊರ ಪ್ರಪಂಚದ ಎಲ್ಲ ಚಟುವಟಿಕೆಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲ ಅವರಿಗೆ ಈ ಎಲ್ಲ ಮಾಹಿತಿಯ ಜ್ಞಾನವನ್ನು ಒದಗಿಸುತ್ತಿತ್ತು. ಪಡೆದ ಆ ಆಧುನಿಕ ಜ್ಞಾನವನ್ನು ತಮ್ಮ ರಾಜ್ಯದ ಹಾಗೂ ಜನರ ಏಳ್ಗೆಗೆ ಬಳಸಿದರೆಂಬುದು ಅವರ ಎಲ್ಲ ಕಾರ್ಯ ಯೋಜನೆಗಳಿಂದ ಹಾಗೂ ಅವರ ಭಾಷಣಗಳಿಂದ ತಿಳಿದುಬರುತ್ತದೆ.

***ಆಂತರಿಕ ಮಾರುಕಟ್ಟೆ ಹಾಗೂ ವ್ಯಾಪಾರಗಳಲ್ಲಿ ಸುಧಾರಣೆ***

ಮೈಸೂರು ಸರ್ಕಾರವು ಕೃಷಿ ಉತ್ಪನ್ನಗಳಿಗೆ ಉತ್ತಮ ಮಾರುಕಟ್ಟೆ ಒದಗಿಸಲು ಅನೇಕ ಕ್ರಮಗಳನ್ನು ಕೈಗೊಂಡಿತು. 'ಇಂಪೀರಿಯಲ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್' ಎಂಬ ಸಂಸ್ಥೆಯು 1935ರಲ್ಲಿ ಮೈಸೂರು ಸಂಸ್ಥಾನದಲ್ಲಿನ ಮಾರುಕಟ್ಟೆ ವ್ಯವಸ್ಥೆಯ ಬಗ್ಗೆ ಸಮೀಕ್ಷೆಯೊಂದನ್ನು ನಡೆಸಿತು. ಈ ಸಮೀಕ್ಷೆಯು ಮೈಸೂರಿನ ವಿವಿಧ ಕೃಷಿ ಉತ್ಪನ್ನಗಳಿಗೆ ಉತ್ತಮ ಮಾರುಕಟ್ಟೆ ಒದಗಿಸುವ ಮೂಲಕ ರೈತರಿಗೆ ಈಗಿಗಿಂತ ಉತ್ತಮ ಪ್ರತಿಫಲ ದೊರೆಯುವಂತೆ ಮಾಡಬೇಕೆಂದು ತಿಳಿಸಿತು. ಅಲ್ಲದೆ ಸ್ಥಳೀಯ ಮಾರುಕಟ್ಟೆಯಲ್ಲಿನ ನ್ಯೂನತೆಗಳನ್ನು ಹೋಗಲಾಡಿಸಿ ಸುಧಾರಣೆಗಳನ್ನು ತರಬೇಕೆಂದು ತಿಳಿಸಿತು[470]. ಈ ಸಲಹೆಯಂತೆ ಮೈಸೂರು ಸರ್ಕಾರವು ಚಾಲ್ತಿಯಲ್ಲಿದ್ದ 1902 ರ ತೂಕ ಮತ್ತು ಅಳತೆಗೆ ಸಂಬಂಧಿಸಿದ

---

*470. ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್, 1937-38, ಪು. 188*

*471. ದಿ ಮೈಸೂರ್ ಕೋಡ್., ಸಂಪುಟ - I, (1850 - 1920), ಕರ್ನಾಟಕ ಸರ್ಕಾರದ ಪ್ರಕಟಣೆ, ಬೆಂಗಳೂರು, 1955, ಪು. 451*

*472. ಹನುಮಂತಪ್ಪ ಎಚ್. (ಸಂ)., ಹಿಸ್ಟರಿ ಆಫ್ ಕರ್ನಾಟಕ ಲೆಜಿಸ್ಲೇಚರ್, ಸಂಪುಟ - III, (1924-40), ಕರ್ನಾಟಕ ಸರ್ಕಾರದ ಪ್ರಕಟಣೆ, ಬೆಂಗಳೂರು, 1990, ಪು. 249*

ಕಾನೂನಿಗೆ 1927ರಲ್ಲಿ ತಿದ್ದುಪಡಿ ತಂದಿತು. ಈ ತಿದ್ದುಪಡಿಯ ಪ್ರಕಾರ ಪ್ರತಿಯೊಬ್ಬರೂ ಅಧಿಕೃತ ತೂಕ ಮತ್ತು ಅಳತೆ ಮಾಪಕಗಳನ್ನು ಬಳಸಬೇಕೆಂದಾಯಿತು[471]. ಪ್ರಜಾಪ್ರತಿನಿಧಿ ಸಭೆಯ ಸದಸ್ಯರು 1938ರಲ್ಲಿ ರಾಜ್ಯದ ಪ್ರಮುಖ ಸ್ಥಳಗಳಲ್ಲಿ ಕೃಷಿ ಮಾರುಕಟ್ಟೆಗಳನ್ನು ಸ್ಥಾಪಿಸಬೇಕೆಂದು ಸರ್ಕಾರಕ್ಕೆ ಬೇಡಿಕೆ ಸಲ್ಲಿಸಿದರು. ಸರ್ಕಾರವು ಹತ್ತಿ ಬೆಳೆಯ ಮಾರಾಟಕ್ಕಿದ್ದ ರೆಗ್ಯುಲೇಟೆಡ್ ಮಾರುಕಟ್ಟೆಗಳನ್ನು ದಾವಣಗೆರೆ ಮತ್ತು ಚಿತ್ರದುರ್ಗಗಳಲ್ಲದೆ ಬೇರೆ ಸ್ಥಳಗಳಲ್ಲೂ ವಿಸ್ತರಿಸಲು ಮತ್ತು ಬೇರೆ ಬೆಳೆಗಳ ಮಾರಾಟಕ್ಕೂ ಮಾರುಕಟ್ಟೆಗಳನ್ನು ಸ್ಥಾಪಿಸಲು ಒಪ್ಪಿತು[472]. ಅಲ್ಲದೆ 1939ರಲ್ಲಿ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ಕಾಯ್ದೆಯನ್ನು ಜಾರಿಗೊಳಿಸಿತು. ಈ ಕಾಯ್ದೆಯ ಪ್ರಕಾರ ಪ್ರತಿ ಮಾರುಕಟ್ಟೆಯು ಒಂದು ಮಾರುಕಟ್ಟೆ ಸಮಿತಿಯನ್ನು ಹೊಂದಿರಬೇಕಿತ್ತು ಮತ್ತು ಅದರಲ್ಲಿ 12 ರಿಂದ 16 ಸದಸ್ಯರಿದ್ದು ಅರ್ಧದಷ್ಟು ಸದಸ್ಯರು ಕೃಷಿ ಉತ್ಪನ್ನಗಳ ಉತ್ಪಾದಕರಾಗಿರಬೇಕಿತ್ತು. ಸಮಿತಿಗಳು ಈ ಕಾಯ್ದೆಯ ನಿಯಮಗಳನುಸಾರ ಆ ಮಾರುಕಟ್ಟೆಯಲ್ಲಿನ ಕೃಷಿ ಉತ್ಪನ್ನಗಳ ಮಾರಾಟ ಮತ್ತು ಖರೀದಿ ಚಟುವಟಿಕೆಗಳನ್ನು ನಿಯಂತ್ರಿಸಬೇಕಿತ್ತು[473].

ಮಾರುಕಟ್ಟೆ ಸಮಿತಿಯು ಮಾರುಕಟ್ಟೆಯನ್ನು ಬಳಸುವ ಬ್ರೋಕರ್‌ಗಳಿಗೆ, ತೂಕದವರಿಗೆ, ಅಳತೆಯವರಿಗೆ ಸಮೀಕ್ಷಕರಿಗೆ ಲೈಸೆನ್ಸ್‌ಗಳನ್ನು ನೀಡುತ್ತಿತ್ತು ಮತ್ತು ಅದಕ್ಕಾಗಿ ವಂತಿಗೆಯನ್ನು ವಸೂಲಿ ಮಾಡುತ್ತಿತ್ತು. ಮಾರುಕಟ್ಟೆಯಲ್ಲಿ ಬಳಸುವ ತೂಕ ಮತ್ತು ಅಳತೆ ಮಾಪಕಗಳನ್ನು ಹಾಗಾಗ್ಗೆ ದೃಢೀಕರಿಸುವ ಅಧಿಕಾರ ಮಾರುಕಟ್ಟೆಯ ಸಮಿತಿಗಿತ್ತು. ಮಾರಾಟಗಾರ ಅಥವಾ ಖರೀದಿದಾರರ ನಡುವೆ ತೂಕ ಅಥವಾ ವಸ್ತುವಿನ ಗುಣಮಟ್ಟ, ಬೆಲೆ ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ಭಿನ್ನಾಭಿಪ್ರಾಯ ಬಂದರೆ ಸಮಿತಿಯು ತೀರ್ಮಾನ ನೀಡಬೇಕಿತ್ತು. ಇಂತಹ ಮಾರುಕಟ್ಟೆಗಳ ವ್ಯಾಪ್ತಿಯಲ್ಲಿ ಯಾವುದೇ ಖಾಸಗಿ ಮಾರುಕಟ್ಟೆಗಳು ಸ್ಥಾಪನೆಯಾಗುವಂತಿರಲಿಲ್ಲ. ಈ ಕಾಯ್ದೆಯ ನಿಯಮಗಳನ್ನು ಉಲ್ಲಂಘಿಸಿದವರಿಗೆ 500 ರೂಪಾಯಿವರೆಗೆ ದಂಡ ವಿಧಿಸುವ ಅವಕಾಶವಿತ್ತು[474]. ಈ ಕಾಯ್ದೆಯು ಆಂತರಿಕ ಮಾರುಕಟ್ಟೆ ವ್ಯವಸ್ಥೆಯನ್ನು ಸುಧಾರಿಸಿತಲ್ಲದೆ ಕೃಷಿ ಉತ್ಪಾದಕರು ಮಧ್ಯವರ್ತಿಗಳು, ಹಣಲೇವಾದೇವಿಗಾರರಿಂದ ಶೋಷಣೆಗೊಳಗಾಗುವುದನ್ನು ತಪ್ಪಿಸಿತು. ಕೃಷಿ ಉತ್ಪಾದಕರಿಗೆ ತಮ್ಮ ಉತ್ಪನ್ನಗಳಿಗೆ ಉತ್ತಮ ಬೆಲೆ ಪಡೆಯುವಂತೆ ಮಾಡುವ ಮೂಲಕ ಕೃಷಿ ಆಧುನೀಕರಣದ ಫಲವು ಕೃಷಿಕರಿಗೆ ದೊರೆತು ಅವರ ಜೀವನಮಟ್ಟವು ವೃದ್ಧಿಗೊಳ್ಳುವಂತೆ ಮಾಡಿದರು.

ಹೀಗೆ ಕೃಷಿ, ಕೈಗಾರಿಕೆ, ವ್ಯಾಪಾರ - ವಾಣಿಜ್ಯ ಮುಂತಾದ ಕ್ಷೇತ್ರಗಳಲ್ಲಿ ನಾಲ್ವಡಿಯವರು ಕೈಗೊಂಡ ಆಧುನಿಕ ಅಭಿವೃದ್ಧಿ ಕಾರ್ಯಗಳ ಪ್ರಭಾವದಿಂದ ಮೈಸೂರು ರಾಜ್ಯದ ಆದಾಯವು ಏರುತ್ತಲೇ ಹೋಯಿತು. ಈ ಕೆಳಗಿನ ಅಂಕಿ ಅಂಶಗಳು ಅದನ್ನು ದೃಢೀಕರಿಸುತ್ತವೆ.

---

*473. **ದಿ ಮೈಸೂರ್ ಕೋಡ್**, ಸಂಪುಟ - II, ಕರ್ನಾಟಕ ಸರ್ಕಾರದ ಪ್ರಕಟಣೆ, ಬೆಂಗಳೂರು, 1955, ಪು. 468*

*474. **ಅದೇ.**, ಪು. 469, 475, 476.*

| ವರ್ಷ | ವೆಚ್ಚ (ಲಕ್ಷ ರೂ.ಗಳಲ್ಲಿ) | ಆದಾಯ |
|---|---|---|
| 1910-11 | 240 | 258 |
| 1920-21 | 323 | 313 |
| 1930-31 | 381 | 361 |
| 1940-41 | 542 | 544 |

(*ಆಧಾರಗಳು : ಸ್ಟಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ಆಫ್ ಮೈಸೂರ್, 1921,* ಪು. 42-44, 1948, ಪು. 45, ಪು. 56)

ನಾಲ್ವಡಿಯವರ ಸರ್ಕಾರವು ಸಾರಿಗೆ ಸಂಪರ್ಕ, ಮಾರುಕಟ್ಟೆ ವ್ಯವಸ್ಥೆಗಳನ್ನು ಆಧುನೀಕರಣಗೊಳಿಸಿ ವ್ಯಾಪಾರ ವಾಣಿಜ್ಯಕ್ಕೆ ಪ್ರೋತ್ಸಾಹ ಕೊಟ್ಟಿದ್ದರಿಂದ ಆ ಕ್ಷೇತ್ರದಲ್ಲೂ ಬೆಳವಣಿಗೆ ಹೊಂದುದನ್ನು ಈ ಕೆಳಗಿನ ಅಂಕಿ ಅಂಶಗಳು ಸ್ಪಷ್ಟಪಡಿಸುತ್ತವೆ. ಅದರಲ್ಲೂ ರೈಲುಮಾರ್ಗದ ಮೂಲಕ ಆಮದು ಮತ್ತು ರಫ್ತಾಗುತ್ತಿದ್ದ ವಸ್ತುಗಳ ಈ ಕೆಳಕಂಡ ಪಟ್ಟಿ ಅದನ್ನು ಸ್ಪಷ್ಟಪಡಿಸುತ್ತದೆ.

***ರೈಲುಮಾರ್ಗದ ಮೂಲಕ ಆದ ವ್ಯಾಪಾರದ ಅಂಕಿ ಅಂಶಗಳು (ಲಕ್ಷ ರೂಪಾಯಿಗಳಲ್ಲಿ)***

| ವರ್ಷ | ಆಮದು | ರಫ್ತು | ಒಟ್ಟು ಮಾರಾಟದ ಮೊತ್ತ |
|---|---|---|---|
| 1910-11 | 433 | 337 | 770 |
| 1920-21 | 1317 | 842 | 2159 |
| 1930-31 | 1055 | 889 | 1944 |
| 1940-41 | 2090 | 1562 | 3652 |

(*ಆಧಾರಗಳು : ಸ್ಟಾಟಿಸ್ಟಿಕಲ್ ಅಬ್‌ಸ್ಟ್ರಾಕ್ಟ್ ಆಫ್ ಮೈಸೂರ್, 1948.* ಪು. 148-149)

ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ಆರ್ಥಿಕತೆಯಲ್ಲಿ ಆಧುನಿಕತೆ ಎಂಬ ಶೀರ್ಷಿಕೆಯಲ್ಲಿ ನಾಲ್ವಡಿಯವರು ಆರ್ಥಿಕ ಕ್ಷೇತ್ರವನ್ನು ಆಧುನೀಕರಣಗೊಳಿಸಿ ಹೇಗೆ ಮೈಸೂರನ್ನು ಅಭಿವೃದ್ಧಿಯತ್ತ ಕೊಂಡೊಯ್ದರೆಂಬುದನ್ನು

ಸಮೀಕ್ಷಿಸಿದಾಗ ಕೆಲವು ತೀರ್ಮಾನಗಳಿಗೆ ಬರಬಹುದು. ಮೊದಲನೆಯದಾಗಿ ನಾಲ್ವಡಿಯವರು ತಮ್ಮ ಭಾಷಣದಲ್ಲಿ ಉಲ್ಲೇಖಿಸಿರುವಂತೆ ದೇಶದ ಸಂಪದಭಿವೃದ್ಧಿಗೆ ಬೃಹತ್ ಕೈಗಾರಿಕೆಗಳು ಅವಶ್ಯವೆಂದೂ, ಬೃಹತ್ ಕೈಗಾರಿಕೆಗಳು ಪಾಶ್ಚಿಮಾತ್ಯ ನಾಗರಿಕತೆಯ ಹೆಗ್ಗುರುತುಗಳೆಂದು ಹೇಳಿದ್ದು ಅವರು ಕೈಗಾರಿಕೆಗಳಿಗೆ ನೀಡಿದ ಮಹತ್ವವನ್ನು ತಿಳಿಸುತ್ತದೆ. ಭಾರತವು ಕೃಷಿ ಪ್ರಧಾನ ರಾಷ್ಟ್ರವೆಂಬುದನ್ನು ಅವರು ಅರಿತಿದ್ದರೂ ಆಧುನಿಕ ಕಾಲದಲ್ಲಿ ಆರ್ಥಿಕ ಬೆಳವಣಿಗೆಗೆ ಕೈಗಾರಿಕೆಗಳು ಅತ್ಯವಶ್ಯವೆಂಬುದನ್ನು ಪಾಶ್ಚಿಮಾತ್ಯ ದೇಶಗಳ ಉದಾಹರಣೆಗಳಿಂದ ಅರಿತಿದ್ದರು. ಮಳೆಯನ್ನೇ ಆಶ್ರಯಿಸಿದ್ದ ಕೃಷಿಯಿಂದ ಎದುರಾಗುವ ಕ್ಷಾಮ, ಬಡತನ, ನಿರುದ್ಯೋಗಗಳನ್ನು ಬೃಹತ್ ಕೈಗಾರಿಕೆಗಳ ಸ್ಥಾಪನೆಯಿಂದ ಸರಿಪಡಿಸಬಹುದೆಂಬ ಅವರ ಚಿಂತನೆ ಆ ಕಾಲಕ್ಕೆ ಆಧುನಿಕವಾದದ್ದೆ. ಎರಡನೆಯದಾಗಿ ನಾಲ್ವಡಿಯವರ ಕೈಗಾರಿಕಾಭಿವೃದ್ಧಿಯ ಬಗೆಗಿನ ನಾಲ್ಕು ಆಶಯಗಳಂತೂ ಇಂದಿಗೂ ಅಭಿವೃದ್ಧಿಶೀಲ ಹಾಗೂ ಬಡರಾಷ್ಟ್ರಗಳು ಅಳವಡಿಸಿಕೊಳ್ಳಲೇಬೇಕಾದ ಆರ್ಥಿಕ ನೀತಿಗಳಾಗಿವೆ. ಅವರ ನಾಲ್ಕು ಆಶಯಗಳ ಮೂಲ ಉದ್ದೇಶ ಮೈಸೂರನ್ನು ಸದೃಢ, ಸ್ವಾವಲಂಬಿ, ಸಮಾನತೆ, ಸಮೃದ್ಧವಾದ ನಾಡಾಗಿ ರೂಪಿಸುವುದಾಗಿತ್ತು. ಮೂರನೆಯದಾಗಿ ಮೈಸೂರಿನ ಎಲ್ಲ ಬೆಳವಣಿಗೆಗಳಿಗೂ ಬೇಕಾದ ವೈಜ್ಞಾನಿಕ, ತಾಂತ್ರಿಕ ಹಾಗೂ ಆಧುನಿಕ ಮಾಹಿತಿ ಮತ್ತು ತಜ್ಞರನ್ನು ರೂಪಿಸುವಲ್ಲಿ ನಾಲ್ವಡಿಯವರು ಜೆಮ್ ಷೆಡ್ ಜಿ ಟಾಟಾರವರ ನೆರವಿನಿಂದ ಆರಂಭಿಸಿದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಸಂಸ್ಥೆಯಂತೂ ಅವರ ದೂರದರ್ಶಿತ್ವಕ್ಕಿಡಿದ ಕನ್ನಡಿ. ಬೃಹತ್ ಕೈಗಾರಿಕೆಗಳ ಯಂತ್ರಚಾಲನಾ ಶಕ್ತಿಯ ಮೂಲವಾದ ವಿದ್ಯುತ್ತನ್ನು ಉತ್ಪಾದಿಸಲು 1890ರ ದಶಕದಲ್ಲೇ ಯೋಜಿಸಿದ್ದು ಅವರ ಸಾಹಸ ಪ್ರವೃತ್ತಿಯ ಸಂಕೇತವೆನ್ನಬಹುದು. ನಾಲ್ಕನೆಯದಾಗಿ 1911ರವರೆಗೂ ಬೃಹತ್ ಕೈಗಾರಿಕೆಗಳು ಮೈಸೂರಿನಲ್ಲಿರಲಿಲ್ಲದುದನ್ನು ಗಮನಿಸಿ ನಾಲ್ವಡಿಯವರು ಸರ್ಕಾರದ ವತಿಯಿಂದಲೇ ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯನ್ನು ಸ್ಥಾಪಿಸುವ ಮೂಲಕ ಹಾಗೂ ವಿವಿಧ ಖಾಸಗಿ ಉದ್ದಿಮೆದಾರರು ಸ್ಥಾಪಿಸಲು ಯೋಜಿಸಿದ ಬೃಹತ್ ಕೈಗಾರಿಕೆಗಳಲ್ಲಿ ಸರ್ಕಾರವು ಬಂಡವಾಳವನ್ನು ತೊಡಗಿಸುವ ಮೂಲಕ ಮೈಸೂರಿನ ಕೈಗಾರಿಕಾಭಿವೃದ್ಧಿಗೆ ಕಾರಣವಾಯಿತು. ಐದನೆಯದಾಗಿ ನಾಲ್ವಡಿಯವರು ಪಾಶ್ಚಿಮಾತ್ಯ ಮಾದರಿಯ ಬೃಹತ್ ಕೈಗಾರಿಕೆಗಳಿಗೆ ಆದ್ಯತೆ ನೀಡಿದಂತೆ ಬಹುಸಂಖ್ಯಾತರ ಉದ್ಯೋಗವಾಗಿದ್ದ ಗೃಹ ಕೈಗಾರಿಕೆಗಳಂತಹ ಉತ್ಪಾದನೋದ್ಯಮಗಳನ್ನು ಕಡೆಗಣಿಸದಿದ್ದುದು ಆಧುನಿಕ ಪ್ರಪಂಚದ ಪೈಪೋಟಿಯಲ್ಲಿ ಸಾಂಪ್ರದಾಯಿಕ ಕಸುಬುಗಳು, ಕೈಗಾರಿಕೆಗಳು ಉಳಿಯಬೇಕಾದರೆ ಆಧುನಿಕ ಜ್ಞಾನವನ್ನು, ತಾಂತ್ರಿಕತೆಯನ್ನು ಅಳವಡಿಸಿಕೊಂಡು ಶಕ್ತಗೊಳ್ಳುವುದೇ ಶಾಶ್ವತ ಪರಿಹಾರವೆಂದು ಅವರು ನಂಬಿದ್ದರು. ಅವರ ಈ ಆರ್ಥಿಕ ನೀತಿಯು ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯಗಳ

ಸಮನ್ವಯವೆಂದೇಳಬಹುದು.

ಆರನೆಯದಾಗಿ ಆರ್ಥಿಕ ಚಟುವಟಿಕೆಗಳ ಆಧುನಿಕತೆಗೆ ಹಣಕಾಸಿನ ಸೌಲಭ್ಯದ ಅವಶ್ಯಕತೆಯನ್ನರಿತು ಕೃಷಿ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು, ಮೈಸೂರು ಬ್ಯಾಂಕ್ ಮುಂತಾದವುಗಳನ್ನು ಸ್ಥಾಪಿಸಿ ನೆರವು ನೀಡಿದರು. ಮೈಸೂರಿನ ಸಾಮಾಜಿಕ, ಆರ್ಥಿಕ ಅಸಮಾನತೆಯನ್ನು ನೀಗಿಸಲು ಸಹಕಾರಿ ಆಂದೋಲನವನ್ನು ಬಳಸಿಕೊಂಡದ್ದು, ಆರ್ಥಿಕ ಬೆಳವಣಿಗೆಯಲ್ಲಿ ಪ್ರಜೆಗಳ ಪಾಲ್ಗೊಳ್ಳುವಿಕೆ ಆ ಕಾಲಕ್ಕೆ ಅತ್ಯಂತ ಹೊಸ ಅಂಶಗಳು. ಏಳನೆಯದಾಗಿ ಸಾರಿಗೆ, ಸಂಪರ್ಕದಲ್ಲಿ ಆಧುನಿಕತೆ ತರಲು ನಾಲ್ವಡಿಯವರು ಸರ್ಕಾರದ ಇಲಾಖೆಗಳ ಜೊತೆಗೆ ಸ್ಥಳೀಯ ಸ್ವಯಂ ಸರ್ಕಾರಗಳನ್ನು ಬಳಸಿಕೊಂಡುದು ವಿಶಿಷ್ಟವಾದ ಅಂಶ. ಇದರಿಂದಾಗಿ ರಸ್ತೆ, ರೈಲ್ವೆ ನಿರ್ಮಾಣ ಮತ್ತು ನಿರ್ವಹಣೆಯ ಜವಾಬ್ದಾರಿ ಹೊತ್ತ ತಾಲ್ಲೂಕು ಬೋರ್ಡ್, ಜಿಲ್ಲಾ ಬೋರ್ಡ್‌ಗಳು ಮತ್ತು ಮುನಿಸಿಪಾಲಿಟಿಗಳು ಸಾರಿಗೆ ಸಂಪರ್ಕ ಬೆಳವಣಿಗೆಗೆ ತೀವ್ರತೆ ಒದಗಿಸಿದವು. ಸುಧಾರಿತ ಸೇತುವೆಗಳ ನಿರ್ಮಾಣವು ಸಾರಿಗೆ ಸಂಪರ್ಕವನ್ನು ಸುಗಮಗೊಳಿಸಿ ವ್ಯಾಪಾರ ವಾಣಿಜ್ಯ, ಜನಸಾಗಾಣಿಕೆಗೆ ನೆರವಾಯಿತು. ಸಾರಿಗೆಯ ಸಾಧನಗಳಾಗಿ ಬಳಕೆಗೆ ಬಂದ ಸೈಕಲ್, ಮೋಟಾರು ಕಾರು, ಬಸ್ಸು, ರೈಲು, ವಿಮಾನಗಳು ಮೈಸೂರಿನ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಗೆ, ಪರಿವರ್ತನೆಗೆ, ಆಧುನಿಕತೆಗೆ ದಾರಿಮಾಡಿಕೊಟ್ಟವು. ಕೊನೆಯದಾಗಿ ಆಧುನೀಕರಣಗೊಂಡ ಕೃಷಿ, ಕೈಗಾರಿಕೆ ಮುಂತಾದ ಉತ್ಪಾದನಾಂಗಗಳಿಂದ ಉತ್ಪಾದನೆಗೊಂಡ ವಸ್ತುಗಳಿಗೆ ಮಾರುಕಟ್ಟೆ ಒದಗಿಸಲು, ವ್ಯಾಪಾರ ವಾಣಿಜ್ಯವನ್ನು ಅಭಿವೃದ್ಧಿಗೊಳಿಸಲು ಸ್ಥಾಪಿಸಿದ ವಾಣಿಜ್ಯ ಮಹಾಮಂಡಲಿ, ದಸರಾ ವಸ್ತುಪ್ರದರ್ಶನ, ಮಾರುಕಟ್ಟೆ ಸಮಿತಿಗಳು, ಲಂಡನ್‌ನಲ್ಲಿ ಸ್ಥಾಪಿತವಾದ ಮೈಸೂರ್ ಎಂಪೋರಿಯಂ ಮೈಸೂರಿನ ವಸ್ತುಗಳಿಗೆ ದೇಶೀಯ ಮತ್ತು ವಿದೇಶಿ ಮಾರುಕಟ್ಟೆಗಳಲ್ಲಿ ಬೇಡಿಕೆ ಸೃಷ್ಟಿಸಲು ಆ ಮೂಲಕ ಮೈಸೂರಿನ ಆರ್ಥಿಕ ಬೆಳವಣಿಗೆಗೆ ನೆರವಾದವು. ಒಟ್ಟಾರೆ ನಾಲ್ವಡಿ ಕೃಷ್ಣರಾಜ ಒಡೆಯರು ಆರ್ಥಿಕತೆಯಲ್ಲಿ ಅಳವಡಿಸಿದ ಆಧುನಿಕ ಅಂಶಗಳು ಮೈಸೂರಿನ ಸರ್ವಾಂಗೀಣ ಅಭಿವೃದ್ಧಿಗೆ ಕಾರಣವಾದವೆಂದು ಹೇಳಬಹುದು. ನಾಲ್ವಡಿಯವರು ಆರ್ಥಿಕತೆಯಲ್ಲಿ ಆಧುನಿಕತೆ ತರುವ ಮೂಲಕ ಮೈಸೂರಿನ ಜನತೆಯ ಲೌಕಿಕ ಬೆಳವಣಿಗೆಗೆ ಕ್ರಮ ಕೈಗೊಂಡಂತೆ ಸಮಾಜದಲ್ಲಿ ಅಸಮಾನತೆ, ಮೂಢನಂಬಿಕೆ, ಆಚರಣೆಗಳನ್ನು ಹೋಗಲಾಡಿಸಿ ಸಾಮಾಜಿಕ ಪರಿವರ್ತನೆ ತರಲು ಶಿಕ್ಷಣವೆಂಬ ಸಾಧನವನ್ನು ಹೇಗೆ ಬಳಸಿದರೆಂಬುದನ್ನು ಮುಂದಿನ ಅಧ್ಯಾಯದಲ್ಲಿ ತಿಳಿಯೋಣ.

ಅಧ್ಯಾಯ - 4

# ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಶಿಕ್ಷಣ

ಭಾರತೀಯ ಸಮಾಜವನ್ನು ಹುರಿಯಾದ ಹಗ್ಗಗಳಿಂದ ಬಿಗಿದು ಮಹಾಸಾಗರದಲ್ಲಿ ತೇಲಿಬಿಟ್ಟ ಒಂದು ತೆಪ್ಪಕ್ಕೆ ವಿದ್ವಾಂಸರು ಹೋಲಿಸುತ್ತಾರೆ. ಈ ಸಮಾಜವು ಮಹಾಸಾಗರದ ಅಲೆಗಳ ಹೊಯ್ದಾಟಕ್ಕೆ ಸಿಲುಕಿ ಅದು ತನ್ನ ಮೊದಲಿನ ನೆಲೆಯನ್ನು ಬಿಟ್ಟು ಬಲುದೂರ ಕದಲಿದರೂ ಅದರೊಳಗಿನ ಹಾಯಿಗಳು ತಮ್ಮ ತಮ್ಮ ಸ್ಥಾನಗಳಿಗೆ ಅಂಟಿಕೊಂಡಿರುವಂತೆ, ಅನಂತ ಕಾಲ ಪ್ರವಾಹದಲ್ಲಿ ಸಿಲುಕಿ ಪರಿವರ್ತಿತವಾಗಿದ್ದರೂ, ಪರಿವರ್ತನವಿಲ್ಲದಂತೆ ಭಾರತೀಯ ಸಮಾಜ ನಿಂತಂತೆ ಭಾಸವಾಗುತ್ತದೆ. ಈ ಸಮಾಜದ ಪ್ರಧಾನ ಸ್ವಭಾವ ಪ್ರವೃತ್ತಿ ಗತಿಗಿಂತ ಸ್ಥಿತಿ, ಕ್ರಾಂತಿಗಿಂತ ಶಾಂತಿಗೆ ಪ್ರಾಮುಖ್ಯತೆ ಕೊಡುತ್ತಿತ್ತೆಂದು[475] ಸಾಮಾನ್ಯವಾಗಿ ನಮ್ಮ ಅಧ್ಯಯನದ ಕಾಲಾವಧಿಯನ್ನು ಆಧಾರವಾಗಿಟ್ಟುಕೊಂಡು ಅರ್ಥೈಸಿಕೊಳ್ಳಬಹುದು. ಮೇಲ್ಕಂಡ ಸಾಮಾನ್ಯವಾದ ಭಾರತೀಯ ಸಮಾಜದ ರಚನೆ ಮತ್ತು ಚಲನವಲನಗಳು ಮೈಸೂರು ಸಂಸ್ಥಾನದ ಸಮಾಜಕ್ಕೂ ಅನ್ವಯವಾಗುತ್ತವೆ.

ಪರಿವರ್ತನಾರಹಿತತೆ ಪ್ರಧಾನ ಲಕ್ಷಣವಾದರೂ ಸಚೇತನ ಜನಗಳಿಂದ ಸಂಘಟಿತವಾದ ಸಮಾಜದಲ್ಲಿ ಸಾಮಾನ್ಯವಾದ ಚಲನವಲನಗಳಂತೆ ಪರಿವರ್ತನೆಗಳು ತಲೆದೋರುವುದು ಸಹಜವಾದುದು. ಅಲ್ಪವೃತ್ತಿಯಿಂದ ಜೀವಿಸುತ್ತಿದ್ದ ಸಮಾಜದ ಪ್ರಥಮಾವಸ್ಥೆಯಲ್ಲಿ ಆಸೆ ಆಕಾಂಕ್ಷೆಗಳು ಪರಿಮಿತವಾಗಿದ್ದವು. ಆದರೆ ಕಾಲಗತಿಯಿಂದ ನಾಗರಿಕತೆಯು ವಿಸ್ತಾರಗೊಂಡಂತೆ ಸಮಾಜದ ಜೀವನ ಕ್ಷೇತ್ರವು ವಿಸ್ತಾರವಾಗಿ ಸಮಾಜದ ಗೊತ್ತುಗುರಿಗಳು ಮಾರ್ಪಟ್ಟವು. ರಾಜಕೀಯ ಆಂದೋಲನಗಳು, ಆರ್ಥಿಕ ಸ್ಪರ್ಧೆ, ಧರ್ಮ ಮತಗಳಲ್ಲುಂಟಾದ ಸುಧಾರಣಾ -ಸಂಘಟನಾ ಆಂದೋಲನಗಳು ಮೆಲ್ಲಮೆಲ್ಲನೆ ಸಮಾಜದಲ್ಲಿ ವ್ಯತ್ಯಾಸಗಳು ಅಳವಡಲು ಕಾರಣವಾದವು. ಹೀಗೆ ಸ್ಥಿತ್ಯಂತರಗಳಿಗೆ ಇಂಬು ಕೊಡುತ್ತಾ ಪರಿವರ್ತನಾಶೀಲವಾದ ಸಮಾಜದ ಅಪರಿವರ್ತನೀಯವಾದ ಒಂದು ಸನ್ನಿವೇಶವು ಈ ಕಾಲದ ಸಮಾಜದ ಗಮನಾರ್ಹ ಮನೋಪ್ರವೃತ್ತಿಯಾಗಿ ಕಾಣುತ್ತದೆ. ಈ ಮನೋಪ್ರವೃತ್ತಿಯು ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಗೆ ಸಮಾಜವು ಸಕಾರಾತ್ಮಕವಾಗಿ ಅಥವಾ ನಕಾರತ್ಮಕವಾಗಿ ಸ್ಪಂದಿಸುವಂತೆ ಮಾಡುವ ನಿರ್ಧಾರಕ ಶಕ್ತಿಯಾಗುತ್ತದೆ. ಈ ಮನೋಪ್ರವೃತ್ತಿಯು ಒಂದು ನಿರ್ಧಿಷ್ಟ ಸಮಾಜದ ಸಂಸ್ಕೃತಿಯಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಮುಂತಾದ ಅಂಶಗಳಿಂದ ರೂಪುಗೊಂಡದ್ದಾಗಿರುತ್ತದೆ. ಇಂತಹ ಮನೋಪ್ರವೃತ್ತಿಗೆ

---

475. *ಸಾಲೆತ್ತೂರ ಬಿ.ಎ. ಮತ್ತು ದೇಸಾಯಿ ಪಾಂಡುರಂಗರಾಯರು., ಕನ್ನಡ ನಾಡಿನ ಚರಿತ್ರೆ, ಭಾಗ-1, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2003. ಪು. 82*

ಸಾಂಸ್ಕೃತಿಕ ಇತಿಹಾಸದ ಬೇರುಗಳು ಆಳವಾಗಿರುತ್ತವೆ. ಈ ಮನೋಪ್ರವೃತ್ತಿಯು ನಿರ್ದಿಷ್ಟ ಸಮಾಜದ ಬೆಳವಣಿಗೆ, ಅವನತಿ, ಪರಿವರ್ತನೆ, ಸ್ಥಗಿತತೆ ಮುಂತಾದ ಅಂಶಗಳನ್ನು ನಿರ್ಧರಿಸುತ್ತದೆ. ಮನೋಪ್ರವೃತ್ತಿಯು ಸಾಂಪ್ರದಾಯಿಕತೆಗೆ ಹೆಚ್ಚು ಒಳಗಾಗಿದ್ದರೆ ಸಾಮಾಜಿಕ ಪರಿವರ್ತನೆಯ ತೀವ್ರತೆ ಕ್ಷೀಣವಾಗಿಯೂ, ಅದೇ ಮನೋಪ್ರವೃತ್ತಿಯು ಆಧುನಿಕತೆಯನ್ನು ಸ್ವೀಕರಿಸುವ ವಿಶಾಲಗುಣವನ್ನೊಂದಿದ್ದರೆ ಸಾಮಾಜಿಕ ಪರಿವರ್ತನೆ ತೀವ್ರವಾಗಿರುತ್ತದೆ. ಮನೋಪ್ರವೃತ್ತಿಯು ಅಲೌಕಿಕ ಅಂಶಗಳಾದ ಆದರ್ಶಗಳು, ಮೌಲ್ಯಗಳು, ಸಾಮಾಜಿಕ, ಧಾರ್ಮಿಕ ನಂಬಿಕೆಗಳು, ಆಚರಣೆಗಳು, ಸಾಂಸ್ಕೃತಿಕ ಅಂಶಗಳ ಮೇಲೆ ಹೆಚ್ಚು ಪ್ರಭಾವವನ್ನು ಹೊಂದಿರುತ್ತದೆ. ಅಲ್ಲದೆ ಸಮಾಜದ ಲೌಕಿಕ ಅಂಶಗಳಾದ ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ ಮುಂತಾದ ಆರ್ಥಿಕ ಕ್ಷೇತ್ರಗಳ ರೂಪಿಕೆಯ ಮೇಲೂ ಪ್ರಭಾವ ಬೀರಿರುತ್ತದೆ. ಸಾಂಪ್ರದಾಯಿಕತೆಯು ಮನೋಪ್ರವೃತ್ತಿಯ ಮೂಲಕ ಹೇಗೆ ಆಧುನಿಕತೆಯ ಅಂಶಗಳನ್ನು ನಿರಾಕರಿಸುತ್ತಾ ಬಂದಿತು ಎಂಬ ಅನೇಕ ಉದಾಹರಣೆಗಳು ನಮಗೆ ದೊರೆಯುತ್ತವೆ. ಇಂತಹ ಉದಾಹರಣೆಗಳು ನಮ್ಮ ಅಧ್ಯಯನದ ಪೀಠ ಭೂಮಿಯಾದ ಮೈಸೂರು ಸಂಸ್ಥಾನದ ಸಮಾಜವು ಸಾಂಪ್ರದಾಯಿಕತೆಯ ಅಡಿಗಟ್ಟಿನ ಮೇಲೆ ರೂಪುಗೊಂಡಿತ್ತೆಂಬುದನ್ನು ಸ್ಪಷ್ಟಪಡಿಸುತ್ತವೆ. ಆದರೂ ಮೈಸೂರು ಪ್ರದೇಶದ ಸಮಾಜವು ಹತ್ತೊಂಬತ್ತನೇ ಶತಮಾನದ ಅಂತ್ಯದಲ್ಲಿ ಹಾಗೂ ಇಪ್ಪತ್ತನೇ ಶತಮಾನದ ಆರಂಭದಿಂದ ಸಾಂಪ್ರದಾಯಿಕತೆಯ ಮುಸುಗನ್ನು ಕಿತ್ತೊಗೆದು ಆಧುನಿಕತೆಯ ಪ್ರಭಾವಕ್ಕೆ ಹೆಚ್ಚು ಒಳಗಾಗಲಾರಂಭಿಸಿತ್ತು. ಇಪ್ಪತ್ತನೇ ಶತಮಾನದಲ್ಲಿ ಮೈಸೂರು ಸಂಸ್ಥಾನ ಹಾಗೂ ಸಮಾಜವು ನಾಲ್ವಡಿ ಕೃಷ್ಣರಾಜ ಒಡೆಯರ ನೇತೃತ್ವದಲ್ಲಿ 'ಮಾದರಿ ಸಂಸ್ಥಾನ'ವಾಗುವ ನಿಟ್ಟಿನಲ್ಲಿ ಹೆಚ್ಚೆಚ್ಚು ಆಧುನಿಕ ಪ್ರಕ್ರಿಯೆಗಳನ್ನು ಅಳವಡಿಸಿಕೊಂಡು ಮುನ್ನಡೆಯುವುದನ್ನು ನಿಚ್ಚಳವಾಗಿ ಕಾಣಬಹುದು. ನಾವು ಮೊದಲೇ ನಿರ್ಧರಿಸಿದಂತೆ ನಿರ್ದಿಷ್ಟ ಸಮಾಜದ 'ಮನೋಪ್ರವೃತ್ತಿ' ಯು ಸಾಮಾಜಿಕ ಪರಿವರ್ತನೆಯ ತೀವ್ರತೆಯನ್ನು ನಿರ್ಧರಿಸುತ್ತದೆ. ಹಾಗಾಗಿ 'ಮನೋಪ್ರವೃತ್ತಿ'ಯನ್ನು ರೂಪುಗೊಳಿಸುವಲ್ಲಿ ಅಥವಾ ಮಾರ್ಪಾಡುಗೊಳಿಸುವಲ್ಲಿ ಆ ಸಮಾಜದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳು ಹೇಗೆ ಪ್ರಮುಖ ಪಾತ್ರ ವಹಿಸುತ್ತವೆಯೋ ಹಾಗೆಯೇ ಆ ಸಮಾಜದ ಸಾಂಸ್ಕೃತಿಕ ಹಾಗೂ ರಾಜಕೀಯ ನಾಯಕರೂ ಸಹ ಅಷ್ಟೇ ಪ್ರಭಾವಶಾಲಿ ಪಾತ್ರವನ್ನು ವಹಿಸುತ್ತಾರೆ. ಈ ಹಿನ್ನೆಲೆಯಲ್ಲಿ ನಾಲ್ವಡಿಯವರು ರಾಜಕೀಯ ನಾಯಕರಾಗಿ ಮಾತ್ರವಲ್ಲದೆ ಸಾಂಪ್ರದಾಯಿಕತೆಯ ಸಾಂಸ್ಕೃತಿಕ ನಾಯಕರಾಗಿಯೂ ಬದಲಾದ ಕಾಲಕ್ಕೆ, ಪರಿಸ್ಥಿತಿಗೆ ತಕ್ಕಂತೆ ಸಮಾಜವನ್ನು ಪ್ರಗತಿಯತ್ತ ಕೊಂಡೊಯ್ಯಲು ಹಲವು ರೀತಿಯಲ್ಲಿ ಪ್ರಯತ್ನಿಸಿದರು. ನಾಲ್ವಡಿಯವರು ಆಧುನಿಕ ಕಾಲಕ್ಕೆ ತಕ್ಕಂತೆ ಶಿಕ್ಷಣ ಹಾಗೂ ಜ್ಞಾನವನ್ನು ಪಡೆದಿದ್ದಲ್ಲದೆ ಕಾಲಕಾಲಕ್ಕೆ

ಅವುಗಳನ್ನು ಪರಿಷ್ಕರಿಸುತ್ತಾ ತಮ್ಮ ಸಂಸ್ಥಾನದಲ್ಲಿ ಅವುಗಳನ್ನು ಅಳವಡಿಸುವ ಸಾಧ್ಯಾಸಾಧ್ಯತೆಗಳನ್ನು, ಸಾಧಕ ಬಾಧಕಗಳನ್ನು ಕುರಿತು ಚಿಂತಿಸಿ ಅವಕಾಶ ದೊರೆತಾಗಲೆಲ್ಲ ಅವುಗಳನ್ನು ಪ್ರಾತ್ಯಕ್ಷಿಕವಾಗಿ ಆಚರಣೆಗೆ ತರಲು ಪ್ರಯತ್ನಿಸಿದರು. ನಾಲ್ವಡಿಯವರು ತಮ್ಮ ಜೀವಿತಾವಧಿಯಲ್ಲಿ ಭಾಗವಹಿಸಿದ ಸಮಾರಂಭಗಳಲ್ಲಿ ರಾಜ್ಯದ ಪ್ರವಾಸದ ಸಂದರ್ಭದಲ್ಲಿ ಜನತೆಯನ್ನುದ್ದೇಶಿಸಿ ಮಾಡಿದ ಪ್ರಭಾವಶಾಲಿ ಭಾಷಣಗಳಲ್ಲಿ ಆಧುನಿಕವಾದ ವೈಜ್ಞಾನಿಕ, ತಾಂತ್ರಿಕ, ತಾತ್ವಿಕ ಮತ್ತು ಆರ್ಥಿಕ ಅಂಶಗಳನ್ನು ಪ್ರಚುರಿಸುತ್ತಾ, ಮನವರಿಕೆ ಮಾಡಿಕೊಡುತ್ತಾ ಅವುಗಳನ್ನು ಜೀವನದ ವಿವಿಧ ಕ್ಷೇತ್ರಗಳಲ್ಲಿ ಅಳವಡಿಸಿಕೊಳ್ಳಬೇಕೆಂದು ಮಾಡಿದ ಸಲಹೆ ಮತ್ತು ಮನವಿಗಳು ಜನತೆಯ 'ಮನೋಪ್ರವೃತ್ತಿ'ಯನ್ನು ಮಾರ್ಪಾಡುಗೊಳಿಸಿ ಆಧುನಿಕತೆಯನ್ನು ಒಪ್ಪಿಕೊಳ್ಳುವಂತೆ, ಅಳವಡಿಸಿಕೊಳ್ಳುವಂತೆ ಮಾಡುವ ಮೂಲಕ ಸಾಮಾಜಿಕ ಪರಿವರ್ತನೆಗೆ ಕಾರಣಕರ್ತರಾದರು. ಈ ಹಿನ್ನೆಲೆಯಲ್ಲಿ ನಾಲ್ವಡಿಯವರನ್ನು ಸಾಮಾಜಿಕ ಪರಿವರ್ತನೆಯ ರೂವಾರಿಯೆಂದು ಪರಿಭಾವಿಸಲಾಗಿದೆ. ಈ ಅಧ್ಯಾಯದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಎಂಬ ವ್ಯಕ್ತಿ, ಮೈಸೂರು ಸರ್ಕಾರವೆಂಬ ಸಂಸ್ಥೆಯ ಮೂಲಕ ಮೈಸೂರು ಸಮಾಜವನ್ನು ಆಧುನಿಕ ಕಾಲದ ಅವಶ್ಯಕತೆಗೆ ತಕ್ಕಂತೆ ಶಿಕ್ಷಣ ಎಂಬ ಮಾಧ್ಯಮದ ಮೂಲಕ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಆಧುನಿಕ ಅಂಶಗಳನ್ನು ಅಳವಡಿಸುತ್ತಾ ಆ ಮೂಲಕ ಸಾಮಾಜಿಕ ಪರಿವರ್ತನೆಗೆ ಹೇಗೆ ಚಾಲನೆ ನೀಡಿದರು, ಸಾಮಾಜಿಕ ಪರಿವರ್ತನೆಯನ್ನು ತರುವಲ್ಲಿ ಶಿಕ್ಷಣವು ಹೇಗೆ ಪ್ರಮುಖ ಪಾತ್ರವಹಿಸಿತೆಂಬುದನ್ನು ವಿಶ್ಲೇಷಿಸುವುದಾಗಿದೆ.

ಯಾವುದೇ ಸಮಾಜದ ಚರಿತ್ರೆಯಲ್ಲಿ ಶಿಕ್ಷಣದಪ್ರಭಾವವನ್ನು ಅಲ್ಲಗಳೆಯುವಂತಿಲ್ಲ. ಶಿಕ್ಷಣವು ಮನುಷ್ಯನಿಗೆ ಅತ್ಯವಶ್ಯಕವಾದ ಸಂಸ್ಕಾರವನ್ನೊದಗಿಸುತ್ತದೆ ಮತ್ತು ಅದರ ಬಲದಿಂದ ಮಾನವನು ಉನ್ನತ ಜೀವಿಯಾಗಬಲ್ಲನು. ಆದರೆ ಸಾಮಾಜಿಕ ಪರಿವರ್ತನೆಯಲ್ಲಿ ಶಿಕ್ಷಣದ ಗುರಿ ಏನಾಗಿರಬೇಕೆಂಬುದರ ಬಗ್ಗೆ ತಜ್ಞರಲ್ಲಿ ಚರ್ಚೆಗಳು ಮತ್ತು ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ಇದಕ್ಕೆ ಸಂಬಂಧಿಸಿದಂತೆ ಎರಡು ಮೂಲಭೂತ ಪ್ರಶ್ನೆಗಳು ವಿದ್ವಾಂಸರ ಮುಂದಿವೆ. ಅವುಗಳೆಂದರೆ ;

1. ಶಿಕ್ಷಣವು ಸಮಾಜದ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಬೇಕೆ?
2. ಶಿಕ್ಷಣವು ಸಾಮಾಜಿಕ ಪರಿವರ್ತನೆಯನ್ನು ತರುವ ಪ್ರಭಾವಶಾಲಿ ಮಾಧ್ಯಮವಾಗಬೇಕೆ?

ಇದು ಚರ್ಚಾಸ್ಪದ ವಿಷಯ. ಆದರೆ ಆಧುನಿಕ ಪ್ರಪಂಚದಲ್ಲಿ ಶಿಕ್ಷಣವನ್ನು ಸಾಮಾಜಿಕ ಪರಿವರ್ತನೆಯ

---

*476. **ಚಿತ್ರಾ ಶಿವಕುಮಾರ್.**, ಎಜುಕೇಷನ್, ಸೋಷಿಯಲ್ ಇನ್‌ಈಕ್ವಾಲಿಟಿ ಅಂಡ್ ಸೋಷಿಯಲ್ ಚೇಂಜ್ ಇನ್ ಕರ್ನಾಟಕ, ಹಿಂದೂಸ್ಥಾನ್ ಪಬ್ಲಿಷಿಂಗ್ ಕಾರ್ಪೋರೇಷನ್, ದೆಹಲಿ, 1982, ಪು. 1*

ಬಹು ಪರಿಣಾಮಕಾರಿ ಸಾಧನವೆಂದೇ ಪರಿಗಣಿಸಲಾಗಿದೆ[476]. ಶಿಕ್ಷಣ ವ್ಯವಸ್ಥೆಯು ಸಾಮಾಜಿಕ ಪರಿವರ್ತನೆಯ ದಿಕ್ಕನ್ನೂ, ಗತಿ ವಿಧಾನಗಳನ್ನೂ ನಿರ್ಧರಿಸುವ ಮತ್ತು ಅನ್ವೇಷಿಸುವ ಗುರಿ ಹೊಂದಿರಬೇಕು ಎಂಬುದು ಆಧುನಿಕ ತಜ್ಞರ ಸಾಮಾನ್ಯ ಅಭಿಪ್ರಾಯವಾಗಿದೆ. ಈ ಗುರಿ ಸಾಧನೆಗಾಗಿಯೇ ಎಲ್ಲಾ ಆಧುನಿಕ ಸಮಾಜಗಳಲ್ಲಿ ಶಾಲಾ-ಕಾಲೇಜುಗಳನ್ನು ಮತ್ತು ವಿಶ್ವವಿದ್ಯಾನಿಲಯಗಳನ್ನೂ ಸ್ಥಾಪಿಸಲಾಗಿದೆ. ಇಂತಹ ಶಿಕ್ಷಣ ಕೇಂದ್ರಗಳಲ್ಲಿ ಸಂಶೋಧನೆ ಮತ್ತು ಆವಿಷ್ಕಾರಗಳಿಗೆ ಸಮಾಜದ ಆಳುವ ವರ್ಗ ಬೆಂಬಲ ನೀಡುತ್ತಾ ಬಂದಿದೆ. ಉನ್ನತ ಶಿಕ್ಷಣಕ್ಕಾಗಿ ಆಧುನಿಕ ಕಾಲದಲ್ಲೂ ಸಮಾಜವು ಮಾನವ ಹಾಗೂ ಭೌತಿಕ ಸಂಪತ್ತನ್ನು ಮೀಸಲಾಗಿಡುವ ಅವಶ್ಯಕತೆ ಹೆಚ್ಚುತ್ತಲೇ ಇದೆ. ಅದಕ್ಕೆ ಕಾರಣ ಬಹುತೇಕ ಶಿಕ್ಷಣ ತಜ್ಞರ ಪ್ರಕಾರ ಮುಕ್ತ ವಾತಾವರಣದಲ್ಲಿ ಶಿಕ್ಷಣವು ಸಾಮಾಜಿಕ ಪರಿವರ್ತನೆಯನ್ನು ತರಬಲ್ಲ ಅತ್ಯಂತ ಪ್ರಭಾವೀ ಮಾಧ್ಯಮವೆಂಬುದೇ ಆಗಿದೆ.

ಜಗದ್ವಿಕಾಸವಾದ (Teleology)ದ ದೃಷ್ಟಿಯಲ್ಲಿ ಶಿಕ್ಷಣವು ಸಮಾಜವು ತಾನೇ ರೂಪಿಸಿಕೊಂಡ ಗುರಿಗಳನ್ನು ಸಾಧಿಸಲು ಸಹಾಯ ಮಾಡುತ್ತದೆ. ಆ ಗುರಿಗಳೆಂದರೆ ;

ಎ) ತಂತ್ರಜ್ಞಾನ, ವೈಜ್ಞಾನಿಕ ಮತ್ತು ಇತರ ಕ್ಷೇತ್ರಗಳ ಗುರಿ ಸಾಧಿಸಿ ದೇಶದ ಒಟ್ಟಾರೆ ಬೆಳವಣಿಗೆಗೆ ನೆರವಾಗುವುದು.

ಬಿ) ಹಲವಾರು ವಿಧದ ಸಾಮಾಜಿಕ ಅಸಮಾನತೆಗಳನ್ನು ತಗ್ಗಿಸಿ ಸಮಾನತಾವಾದ (egalitarian) ಸಮಾಜವನ್ನು ನಿರ್ಮಿಸುವುದು.

ಸಿ) ಜವಾಬ್ದಾರಿಯುತ ಪ್ರಜೆಗಳ ವ್ಯಕ್ತಿತ್ವ ರೂಪಿಕೆ ಮತ್ತು ಸಾಮಾಜಿಕ ಹಾಗೂ ರಾಜಕೀಯ ಪ್ರಜ್ಞೆಯುಳ್ಳ ಸದಸ್ಯರನ್ನು ಪ್ರಜಾಪ್ರಭುತ್ವ ಸಮಾಜಕ್ಕಾಗಿ ರೂಪಿಸುವುದು[477].

ವ್ಯಕ್ತಿಗಳ ಸಮೂಹವಾದ ಸಮಾಜವು ಬದಲಾವಣೆಗಳನ್ನು, ಆ ಮೂಲಕ ಬೆಳವಣಿಗೆಯನ್ನು ಅರಸುತ್ತಾ ಸಾಗುವುದು ಸಾಮಾನ್ಯವಾದ ಪ್ರಕ್ರಿಯೆ. ಹಾಗೆಯೇ ಬದಲಾವಣೆಗಳನ್ನು ಒಪ್ಪಿ ಅಳವಡಿಸಿಕೊಳ್ಳುವಂತೆ ವ್ಯಕ್ತಿ ಅಥವಾ ವ್ಯಕ್ತಿಗಳ ಸಮೂಹವಾದ ಸಮಾಜವನ್ನು ಸಿದ್ಧಗೊಳಿಸುವಲ್ಲಿ ಶಿಕ್ಷಣ ಪ್ರಮುಖ ಪಾತ್ರ ವಹಿಸುತ್ತದೆ. ಶಿಕ್ಷಣದ ಪ್ರಭಾವದಿಂದ ಆಗುವ ಸಾಮಾಜಿಕ ಪರಿವರ್ತನೆಯು ನಿಶ್ಶಬ್ದವಾದ ಕ್ರಾಂತಿ. ಈ ಪ್ರಕ್ರಿಯೆಯಲ್ಲಿ ಯಾವುದೇ ಒತ್ತಡ ಅಥವಾ ಬಲವಂತವಿರುವುದಿಲ್ಲ. ಅದಕ್ಕೆ ಬದಲು ಸ್ವಯಂ ಪ್ರೇರಣೆ ಪ್ರಮುಖವಾಗಿರುತ್ತದೆ. ಈ ಸ್ವಯಂ ಪ್ರೇರಣಾ

477. *ಚಿತ್ರಾ ಶಿವಕುಮಾರ್., ಪೂರ್ವೋಕ್ತ, ಪು. 1*

ಮನೋಭಾವನೆಯನ್ನು ರೂಪಿಸುವ ಶಕ್ತಿಯೇ ಶಿಕ್ಷಣ. ಇಂತಹ ಶಿಕ್ಷಣವನ್ನು ಸಮಾಜವು ಸಾರ್ವತ್ರಿಕವಾಗಿ ಸ್ವಯಂ ಪ್ರೇರಣೆಯಿಂದ ಅಥವಾ ಪಡೆಯಲು ಸಾಧ್ಯವಾಗದಿದ್ದರೆ ಸರ್ಕಾರವೆಂಬ ಸಂಸ್ಥೆಯು ಶಿಕ್ಷಣವನ್ನು ಶಾಸನಬದ್ಧವಾಗಿ ಬಲವಂತದಿಂದಲಾದರೂ ನೀಡುವುದು ಆಧುನಿಕ ಕಾಲದ ಪ್ರಧಾನ ಲಕ್ಷಣವಾಗಿ ಕಾಣುತ್ತದೆ. ಈ ಲಕ್ಷಣವೇ ಶಿಕ್ಷಣದ ಮಹತ್ವವನ್ನು ಹಾಗೂ ಬೆಳವಣಿಗೆಯನ್ನು ಮತ್ತು ಶಿಕ್ಷಣಗಳ ನಡುವಿನ ಸಂಬಂಧವನ್ನು ಎತ್ತಿ ತೋರಿಸುತ್ತದೆ. ಈ ಹಿನ್ನೆಲೆಯಲ್ಲಿ ನಾಲ್ವಡಿಯವರು ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು, ಸಮಾಜದ ಎಲ್ಲ ವರ್ಗಗಳಿಗೂ ಶಿಕ್ಷಣ ದೊರಕುವಂತೆ ಮಾಡಿ ಆ ಮೂಲಕ ಸಮಗ್ರ ಮೈಸೂರಿನ ಬೆಳವಣಿಗೆ ಸಾಧಿಸಲು ಶಿಕ್ಷಣವನ್ನು ಶಾಸನಬದ್ಧವಾಗಿ, ರಾಜ್ಯದ ಮೂಲಕ ಜಾರಿಗೊಳಿಸಲು ಹೇಗೆ ಪ್ರಯತ್ನಿಸಿದರು ಎಂಬುದನ್ನು ಹಾಗೂ ನಮ್ಮ ಅಧ್ಯಯನ ಕಾಲದಲ್ಲಿ ಆಧುನಿಕ ಶಿಕ್ಷಣ ಮೈಸೂರಿನ ಸಂಪ್ರದಾಯಬದ್ಧ ಸಮಾಜದಲ್ಲಿ ಯಾವ ರೀತಿಯ ಸಾಮಾಜಿಕ ಪರಿವರ್ತನೆಯನ್ನು ತಂದಿತು ಎಂಬುದನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲು ಪ್ರಯತ್ನಿಸಲಾಗಿದೆ.

ಆಧುನಿಕ ಕಾಲದಲ್ಲಿ ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಶಿಕ್ಷಣವು ವಹಿಸಿದ ಪಾತ್ರವನ್ನು ಕುರಿತು ವಿವೇಚಿಸುವ ಮೊದಲು ಆಧುನಿಕ ಪೂರ್ವ ಕಾಲದಲ್ಲಿದ್ದ ಶಿಕ್ಷಣ ವ್ಯವಸ್ಥೆ ಹಾಗೂ ಅದು ಸಾಮಾಜಿಕ ಪರಿವರ್ತನೆಯಲ್ಲಿ ವಹಿಸಿದ ಪಾತ್ರದ ಐತಿಹಾಸಿಕ ಹಿನ್ನೆಲೆಯನ್ನು ತಿಳಿದುಕೊಳ್ಳುವುದು ಅಧ್ಯಯನದ ದೃಷ್ಟಿಯಿಂದ ಅತ್ಯವಶ್ಯಕ. ಪ್ರಾಚೀನ ಕಾಲದಿಂದಲೂ ಭಾರತೀಯರು ಸರ್ವ ಸಂಪತ್ತುಗಳಲ್ಲಿ ವಿದ್ಯೆಯೇ ಶ್ರೇಷ್ಠವಾದುದೆಂದು ನಂಬಿದ್ದರು. ವಿದ್ಯಾಹೀನನಾದವನು ಒಂದು ಪಶುವಿಗೆ ಸಮಾನ ಎಂದು ಭಾವಿಸಲಾಗಿತ್ತು. ಶಿಕ್ಷಣದ ಗುರಿ ವ್ಯಕ್ತಿಯ ವ್ಯಕ್ತಿತ್ವವನ್ನು ವಿಕಾಸಗೊಳಿಸುವುದಾಗಿತ್ತು[478]. ಆಧುನಿಕ ಪೂರ್ವ ಕರ್ನಾಟಕದಲ್ಲಿ ಕಂಡುಬರುವ ಒಂದು ಪ್ರಮುಖ ಅಂಶವೆಂದರೆ ಊರೂರುಗಳಲ್ಲಿ ಹಳ್ಳಿಹಳ್ಳಿಗಳಲ್ಲಿ ಅಗ್ರಹಾರಗಳು, ಮಠಗಳು, ಘಟಿಕಾಸ್ಥಾನಗಳು ನಿರ್ಮಾಣವಾಗಿ ಶಿಕ್ಷಣವನ್ನು ಸಾಧ್ಯವಾದಷ್ಟು ವ್ಯಾಪಕವನ್ನಾಗಿ ಮಾಡುವ ಪ್ರಯತ್ನ. ಈ ಅಂಶಕ್ಕೆ ಸಾಕ್ಷೀಭೂತವಾಗಿ ನಾಡಿನಾದ್ಯಂತ ದೊರಕುವ ನೂರಾರು ಶಾಸನಗಳು ಆ ಕಾಲದ ಶಿಕ್ಷಣ ವ್ಯವಸ್ಥೆ ಹಾಗೂ ರಾಜರು, ಜನರು ಶಿಕ್ಷಣಕ್ಕೆ ನೀಡುತ್ತಿದ್ದ ಉದಾರ ಪ್ರೋತ್ಸಾಹಕ್ಕೆ ನಿದರ್ಶನವಾಗಿವೆ[479]. ವೈದಿಕ ಯುಗದಲ್ಲಿ ಬಾಯಿಂದ ಬಾಯಿಗೆ ಕಲಿಯುತ್ತಾ ಬರುವ ಶಿಕ್ಷಣ ಕ್ರಮವು ನಂತರದ ಕಾಲಘಟ್ಟದಲ್ಲಿ ವಿವಿಧ ಜ್ಞಾನ ಶಾಖೆಗಳು ಬೆಳೆದು ಅವುಗಳನ್ನು ಕಲಿಸುವ ಪದ್ಧತಿಯಲ್ಲೂ ವಿಕಾಸ ತಲೆದೋರಿತು. ಶಿಕ್ಷಣ ಸಂಸ್ಥೆಗಳು ರೂಪುಗೊಂಡವು. ಉಪನಿಷತ್ತುಗಳ ಕಾಲಕ್ಕೆ ಶಿಕ್ಷಣ ವ್ಯವಸ್ಥೆಗೆ, ಸ್ಪಷ್ಟ ಉದ್ದೇಶ ಮತ್ತು ವ್ಯಾಪ್ತಿ ರೂಪುಗೊಂಡಿತು. ಆಧ್ಯಾತ್ಮಿಕ ತಳಹದಿಯ ಮೇಲೆ ರೂಪುಗೊಂಡ ಧಾರ್ಮಿಕ ಶಿಕ್ಷಣವೇ ಆಗಿನ ಶಿಕ್ಷಣದ

---

478. *ಸಿಂಗ್ ಎಂ. ಪಿ.., "ಎ ಸ್ಟೂಡೆಂಟ್ಸ್ ಹಿಸ್ಟರಿ ಆಫ್ ಎಜುಕೇಷನಲ್ ಥಾಟ್", ಸಂಪುಟ II, ಅಮೃತಸರ, 1957, ಪು. 7*

479. *ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ. 450 - 1150), 2002, ಬೆಂಗಳೂರು, ಪು. 226*

ಮೂಲಾಧಾರವಾಗಿತ್ತೆನ್ನಬಹುದು. ಆಧುನಿಕ ಪೂರ್ವಕಾಲದಲ್ಲಿ ವಿದ್ಯಾದಾನವು ನಡೆಯುತ್ತಿದ್ದುದು ಮುಖ್ಯವಾಗಿ ನಾಲ್ಕು ಕೇಂದ್ರಗಳಲ್ಲಿ.

1. ಅಗ್ರಹಾರ
2. ದೇವಸ್ಥಾನ ಅಥವಾ ಮಠ
3. ಬ್ರಹ್ಮಪುರಿ
4. ಘಟಿಕಾಸ್ಥಾನ

ಅಗ್ರಹಾರ ಮತ್ತು ಬ್ರಹ್ಮಪುರಿಗಳು ವಿದ್ಯಾವಂತ ಬ್ರಾಹ್ಮಣರಿಗೆ ಮೀಸಲಾದ ವಿದ್ಯಾಕೇಂದ್ರಗಳಾಗಿದ್ದವು. ಘಟಿಕಾಸ್ಥಾನವು ಧಾರ್ಮಿಕ ಶಿಕ್ಷಣದ ಪ್ರೌಢ ವಿದ್ಯಾಕೇಂದ್ರವಾಗಿತ್ತು. ಪ್ರಾಚೀನ ಕಾಲದಿಂದ ಬೌದ್ಧ ವಿಹಾರಗಳು, ಜೈನ ಬಸದಿಗಳು ಪ್ರಸಿದ್ಧ ವಿದ್ಯಾಕೇಂದ್ರಗಳಾಗಿದ್ದವು. ಅವುಗಳ ಪ್ರಭಾವಕ್ಕೊಳಗಾದ ವೈದಿಕ ದೇವಸ್ಥಾನಗಳು ವಿದ್ಯಾಕೇಂದ್ರಗಳಾಗಿ ಪರಿಣಮಿಸಿದವು. ದಾನದಲ್ಲಿ ವಿದ್ಯಾದಾನವೂ ಶ್ರೇಷ್ಠವೆಂಬ ನಂಬಿಕೆ ಬಲವಾದಂತೆ ಭಕ್ತರು ದೇವಾಲಯಗಳಿಗೆ ಧಾರ್ಮಿಕ ಉದ್ದೇಶದ ಜೊತೆಗೆ ಶೈಕ್ಷಣಿಕ ಸೌಲಭ್ಯ ಒದಗಿಸಲು ದಾನ ದತ್ತಿ ನೀಡಲಾರಂಭಿಸಿದರು. ಹಾಗಾಗಿ ದೇವಸ್ಥಾನವು ಪ್ರಮುಖ ಶೈಕ್ಷಣಿಕ ಕೇಂದ್ರವಾಯಿತು. ಪ್ರಸಿದ್ಧ ಸಾಲೊಟಗಿ ವಿದ್ಯಾಕೇಂದ್ರವು ಊರಿನ ಜನರ ಸಹಕಾರದಿಂದ ನಡೆಯುತ್ತಿತ್ತು. ಊರಿನ ಜನ ಪ್ರತಿಯೊಂದು ಮದುವೆಯಲ್ಲೂ ಐದು ಹಣವನ್ನು ಶಾಲೆಗಾಗಿ ಕೊಡಬೇಕೆಂಬ ನಿಯಮವಿದ್ದಿತು[480]. ಆಧುನಿಕ ಪೂರ್ವ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮರಳು ಅಥವಾ ಧೂಳಿನ ಹಲಗೆಯ ಮೇಲೆ ಬೆರಳಿನಿಂದ ಅಥವಾ ಕಡ್ಡಿಯಿಂದ ಬರೆಸುವ ಲಿಪಿಶಾಲೆಗಳು ಅಸ್ತಿತ್ವದಲ್ಲಿದ್ದವು. ಈ ಪ್ರಾಥಮಿಕ ಶಾಲೆಗಳನ್ನು ಸ್ಥಳೀಯವಾಗಿ ಕೆಲವು ಉತ್ಸಾಹಿಗಳು, ಶಿಕ್ಷಣಾಸಕ್ತರು ಸೇರಿ ನಡೆಸುತ್ತಿದ್ದರು. ಶಿಕ್ಷಣವನ್ನು ಪಡೆಯುವ ಮಕ್ಕಳ ತಂದೆ ಸುಗ್ಗಿಯ ಕಾಲದಲ್ಲಿ ಉಪಾಧ್ಯಾಯರಿಗೆ ಧಾನ್ಯದ ರೂಪದಲ್ಲಿ ಪ್ರತಿಫಲ ನೀಡುತ್ತಿದ್ದರು.

ಒಟ್ಟಾರೆ ಶಿಕ್ಷಣವು ರಾಜರು, ಶ್ರೀಮಂತರು, ಜನಸಾಮಾನ್ಯರು ನೀಡುತ್ತಿದ್ದ ದಾನದತ್ತಿಗಳಿಂದ ನಡೆಯುತ್ತಿತ್ತು. ಶಿಕ್ಷಣದ ವಿಷಯದಲ್ಲಿ ಸರ್ಕಾರ ನೇರವಾಗಿ ಕೈಹಾಕುತ್ತಿರಲಿಲ್ಲ. ಅಗ್ರಹಾರಗಳು ಮತ್ತು ಬ್ರಹ್ಮಪುರಿಗಳ ಸ್ಥಾಪನೆ, ಘಟಿಕಾಸ್ಥಾನ, ದೇವಾಲಯ ಹಾಗೂ ಮಠಗಳಿಗೆ ಉದಾರವಾದ ದಾನ ನೀಡುವ ಮೂಲಕ ಪರೋಕ್ಷವಾಗಿ ಬೆಂಬಲ

---

*480. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, 2001, ಮೈಸೂರು. ಪು. 225*

ನೀಡುತ್ತಿತ್ತು. ವಿದ್ಯಾಸಂಸ್ಥೆಗಳನ್ನು ಪೋಷಿಸುವುದಷ್ಟೇ ರಾಜನ ಕರ್ತವ್ಯವಾಗಿತ್ತು. ಸರ್ವರಿಗೂ ಶಿಕ್ಷಣ ಒದಗಿಸುವುದು ರಾಜ್ಯದ ಕರ್ತವ್ಯವೆಂಬ ನಂಬಿಕೆ ಬೆಳೆದಿರಲಿಲ್ಲ. ರಾಜ್ಯದ ಪೋಷಣೆಯಲ್ಲಿ ನಡೆಯುತ್ತಿದ್ದ ಪ್ರೌಢಶಿಕ್ಷಣ ಕೇಂದ್ರಗಳು ಮತ್ತು ವಿದ್ಯಾಭ್ಯಾಸ ಸಂಪೂರ್ಣವಾಗಿ ಬ್ರಾಹ್ಮಣರ ಕೈವಶವಾಗಿದ್ದವು. ಜನತೆಯ ಸ್ವಯಂ ಪ್ರಯತ್ನದಿಂದ ನಡೆಯುತ್ತಿದ್ದ ಶಿಕ್ಷಣ ಸಂಸ್ಥೆಗಳಲ್ಲಿ ಮಾತ್ರ ಪ್ರಾಥಮಿಕ ಶಿಕ್ಷಣವು ಬ್ರಾಹ್ಮಣೇತರರಿಗೆ ದೊರೆಯುತ್ತಿತ್ತು. ಚಾತುರ್ವರ್ಣ ವ್ಯವಸ್ಥೆ ಸಂಕೀರ್ಣಗೊಂಡ ಮೇಲೆ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ವರ್ಣಗಳಿಗೆ ಶಿಕ್ಷಣ ಮೀಸಲೆಂಬ ಭಾವನೆ ಬೆಳೆದು ನಾಲ್ಕನೇ ವರ್ಣವಾದ ಶೂದ್ರರಿಗೆ ಶಿಕ್ಷಣದ ಹಕ್ಕನ್ನು ನಿರ್ಬಂಧಿಸಲಾಯಿತು. ಸ್ತ್ರೀಯರನ್ನು ಶೂದ್ರರ ಗುಂಪಿನಲ್ಲಿ ಸೇರಿಸಿ ಶಿಕ್ಷಣದಿಂದ ದೂರವಿಡಲಾಯಿತು[481]. ಶಿಕ್ಷಣ ಕೇಂದ್ರಗಳೆಲ್ಲ ದೇವಾಲಯ, ಮಠ ಮುಂತಾದ ಧಾರ್ಮಿಕ ಕೇಂದ್ರಗಳಲ್ಲಿ ನೆಲೆಗೊಂಡಿದ್ದರಿಂದ ದೇವಾಲಯ ಪ್ರವೇಶದ ನಿಷೇಧಕ್ಕೊಳಗಾದ ಶೂದ್ರಾತಿಶೂದ್ರರು, ಅಸ್ಪೃಶ್ಯರು ಶಿಕ್ಷಣದಿಂದಲೂ ದೂರವಾದರು. ಒಟ್ಟಾರೆ ಆಧುನಿಕ ಪೂರ್ವ ಕಾಲದ ಶಿಕ್ಷಣವು ಅಸಮತೋಲನವಾಗಿ ಹಂಚಲ್ಪಟ್ಟಿತ್ತು. ಇದನ್ನು ಪ್ರತಿಭಟಿಸಿ ಧರ್ಮ ಮತ್ತು ಶಿಕ್ಷಣ ಇತರರಿಗೂ ದೊರೆಯುವಂತೆ ಮಾಡುವ ಸಾರ್ವತ್ರಿಕ ಪ್ರಯತ್ನವನ್ನು ಕೈಗೊಂಡವರು ಜೈನರು ಮತ್ತು ಬೌದ್ಧರು. ಇವರ ಜೊತೆಗೆ ಕರ್ನಾಟಕದಲ್ಲಾದ 12ನೇ ಶತಮಾನದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯು ಶಿಕ್ಷಣದ ಮೇಲೂ ತನ್ನ ಪರಿಣಾಮವನ್ನು ಬೀರಿತು. ವರ್ಣಾಧಾರಿತ ಶಿಕ್ಷಣ ಸೌಲಭ್ಯಕ್ಕೆ ಬದಲಾಗಿ ಎಲ್ಲರಿಗೂ ಶಿಕ್ಷಣವನ್ನು ಒದಗಿಸುವ, ಆ ಮೂಲಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವ ಪ್ರಯತ್ನವನ್ನು ಶಿವಶರಣರು ಮುಂದುವರಿಸಿಕೊಂಡು ಬಂದರು. ಹಳ್ಳಿಗಳಲ್ಲಿ ವೀರಶೈವ ಮಠಗಳು ನಡೆಸುತ್ತಿದ್ದ 'ಅಯ್ಯನವರ ಶಾಲೆ'ಗಳು ವಿದ್ಯಾಪ್ರಸಾರದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವು[482]. ಮಧ್ಯಕಾಲೀನ ಕರ್ನಾಟಕದಲ್ಲಿ ಬಂದ ಇಸ್ಲಾಂ ಧರ್ಮ ಮತ್ತು ಮುಸ್ಲಿಂ ಸಂಸ್ಕೃತಿಗಳು ವೈದಿಕ ಶೈಕ್ಷಣಿಕ ವ್ಯವಸ್ಥೆಯ ಮೇಲೆ ತೀವ್ರತರವಾದ ಬದಲಾವಣೆಯನ್ನೇನೂ ತರಲಿಲ್ಲ. ಮಸೀದಿಯು ಮುಸ್ಲಿಮರ ಶಿಕ್ಷಣ ಕೇಂದ್ರವಾಯಿತು. ಮಕ್ತಬಾಗಳು ಮತ್ತು ಮದ್ರಸಾಗಳು ಎರಡು ಸ್ತರದ ಇಸ್ಲಾಂ ಶಿಕ್ಷಣದ ಸಂಸ್ಥೆಗಳಾಗಿದ್ದವು. ಮಕ್ತಬಾಗಳಲ್ಲಿ ಕುರ್‌ಆನ್ ಕಂಠಪಾಠ ಸೇರಿದಂತೆ ಧಾರ್ಮಿಕ ಶಿಕ್ಷಣವನ್ನು ನೀಡಲಾಗುತ್ತಿತ್ತು. ಮುಸ್ಲಿಂ ಆಡಳಿತದಿಂದಾಗಿ ವೈದಿಕ ಶಿಕ್ಷಣ ಸಂಸ್ಥೆಗಳಿಗೆ ದೊರೆಯುತ್ತಿದ್ದ ರಾಜಾಸ್ಥಾನದ ಬೆಂಬಲ, ದಾನದತ್ತಿ ತಗ್ಗಿದವು. ಇಸ್ಲಾಂ ಧರ್ಮ ಮತ್ತು ಸಂಸ್ಕೃತಿಯಿಂದ ರಕ್ಷಣೆ ಪಡೆಯಲು ಹಿಂದೂ ಶಿಕ್ಷಣ ಸಂಸ್ಥೆಗಳು ಇನ್ನೂ ಸಂಪ್ರದಾಯಬದ್ಧವಾದವು. ಆ ಹಿನ್ನೆಲೆಯಲ್ಲಿ ಇಸ್ಲಾಂನ ಪ್ರವೇಶಿಕೆ ದೇಶೀಯ ಶಿಕ್ಷಣ ವ್ಯವಸ್ಥೆ ಮತ್ತು ಸಾಮಾಜಿಕ ಪರಿವರ್ತನಾ ಪ್ರಕ್ರಿಯೆಗಳಲ್ಲಿ ಸಕಾರಾತ್ಮಕತೆಗೆ ಬದಲು ನಕಾರಾತ್ಮಕ ಪರಿಣಾಮವನ್ನೇ ಬೀರಿದಂತಾಯಿತು. 20ನೇ

---

*481. ತಿಪ್ಪೇರುದ್ರಸ್ವಾಮಿ ಎಚ್., ಪೂರ್ವೋಕ್ತ, ಪು. 217*

*482. ಅದೇ., ಪು. 227-228*

ಶತಮಾನದ ಆರಂಭದಲ್ಲೂ ಸಹ ಸಿ. ಹಯವದನರಾವ್ ಉಲ್ಲೇಖಿಸುವಂತೆ "ಬೌದ್ಧಿಕ ಬೆಳವಣಿಗೆಗೆ ಶಿಕ್ಷಣವು ಅತ್ಯವಶ್ಯವೆಂದು ಭಾವಿಸಿದ್ದರೂ ಸಹ ಹಿಂದಿನ ಭಾರತೀಯ ಅರಸರು ಶಿಕ್ಷಣ ಒದಗಿಸುವುದು ರಾಜ್ಯದ ಕರ್ತವ್ಯವೆಂದು ಭಾವಿಸಿರಲೇ ಇಲ್ಲ. ಶಿಕ್ಷಣವು ಧಾರ್ಮಿಕ ಮುಖಂಡರು ಮತ್ತು ಪುರೋಹಿತರ ಕೈಯಲ್ಲೇ ಕೇಂದ್ರೀಕೃತಗೊಂಡಿತ್ತು"[483].

ಒಟ್ಟಾರೆ ಆಧುನಿಕ ಪೂರ್ವಕಾಲದ ಶಿಕ್ಷಣ ವ್ಯವಸ್ಥೆಯು ಸಾಮಾಜಿಕ, ಧಾರ್ಮಿಕ ಸಂಸ್ಥೆಗಳ ಕಪಿಮುಷ್ಠಿಯಲ್ಲಿ ನೆಲೆಗೊಂಡಿದ್ದು ಧಾರ್ಮಿಕ ಶಿಕ್ಷಣವೇ ಪ್ರಧಾನವಾಗಿತ್ತು. ಸಮಾಜದ ಯಥಾಸ್ಥಿತಿಯನ್ನು ಕಾಯ್ದುಕೊಂಡು ಹೋಗುವುದೇ ಆಧುನಿಕ ಪೂರ್ವ ಕಾಲದ ಶಿಕ್ಷಣದ ಉದ್ದೇಶವಾಗಿತ್ತು. ಸಾಮಾಜಿಕ ಪರಿವರ್ತನೆಯನ್ನು ತರುವ ಮಾಧ್ಯಮವಾಗಿ ಶಿಕ್ಷಣ ಆ ಕಾಲಕ್ಕೆ ಬಳಸಲ್ಪಡಲಿಲ್ಲ. ಶಿಕ್ಷಣದ ಹತೋಟಿ ಹೊಂದಿದ್ದ ಸಂಸ್ಥೆಗಳು ಯಥಾಸ್ಥಿತಿ ಮುಂದುವರಿಸಿಕೊಂಡು ಹೋಗುವುದರಲ್ಲಿ ಆಸಕ್ತವಾಗಿದ್ದವು. ಇಂತಹ ಕಾಲದಲ್ಲಿ ಕ್ರೈಸ್ತ ಮಿಷನರಿಗಳು ಮತ್ತು ಅಧಿಕಾರಕ್ಕೆ ಬಂದ ಕಮಿಷನರುಗಳ ಸರ್ಕಾರ ಆಧುನಿಕ ಶಿಕ್ಷಣ ವ್ಯವಸ್ಥೆ ಜಾರಿಗೊಳಿಸಲು ಪ್ರಯತ್ನಿಸಿದಾಗ ಅನೇಕ ಸಮಸ್ಯೆಗಳು ಸಮಾಜದಲ್ಲಿ ಕಾಣಿಸಿಕೊಂಡವು. ಹಾಗೆಯೇ ಆಧುನಿಕ ಶಿಕ್ಷಣವು ಬೆಳವಣಿಗೆಗೊಂಡ ಹಾಗೇ ಅನೇಕ ಸಾಮಾಜಿಕ ಪರಿವರ್ತನಾ ಪ್ರಕ್ರಿಯೆಗಳಿಗೆ ದಾರಿ ಮಾಡಿಕೊಟ್ಟಿತು. ಈ ಮುಂದಿನ ಶೀರ್ಷಿಕೆಯಲ್ಲಿ ಈ ಅಂಶಗಳನ್ನು ಅಧ್ಯಯನ ಮಾಡಲಾಗುವುದು.

## *ಮೈಸೂರಿನಲ್ಲಿ ಆಧುನಿಕ ಶಿಕ್ಷಣ ಹಾಗೂ ಸಾಮಾಜಿಕ ಪರಿವರ್ತನೆಯ ಆರಂಭ*

ಸಮಾಜದ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವ ಮಾಧ್ಯಮವಾಗಿದ್ದ ಶಿಕ್ಷಣವು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಮೈಸೂರಿನಲ್ಲಿ ಮತ್ತು ಭಾರತದ ವಿವಿಧ ಭಾಗಗಳಲ್ಲಿ ಆಗಲು ಪಾಶ್ಚಿಮಾತ್ಯ ಶಿಕ್ಷಣ ಮತ್ತು ಕ್ರೈಸ್ತ ಮಿಷನರಿಗಳ ಶಾಲೆಗಳ ಆಗಮನವನ್ನು ಕಾಯಬೇಕಾಯಿತು. ಕ್ರೈಸ್ತ ಮಿಷನರಿಗಳ ಸಂಪರ್ಕವು ಕರ್ನಾಟಕದ ಭಾಗಗಳೊಂದಿಗೆ 16ನೇ ಶತಮಾನದಿಂದ ಆರಂಭಗೊಂಡಿತು. ಫ್ರಾನ್ಸಿಸ್ಕನ್ ಫ್ರೈಯರ್, ಲೂಯಿಜ್ ಸಾಲ್ವೆಡರ್ 1510ರಲ್ಲಿ ಅಲ್ಫೋನ್ಸೋ ಅಲ್ಬುಕರ್ಕ್ ನ ಸಲಹೆಯ ಮೇರೆಗೆ ಹಂಪಿಗೆ ಭೇಟಿ ನೀಡಿದ್ದನು. ಮೈಸೂರು ಪ್ರದೇಶಕ್ಕೆ 1587ರ ಸುಮಾರಿನಲ್ಲಿ ಫ್ರಾನ್ಸಿಸ್ಕಾನರ ಮೂಲಕ ಕ್ರೈಸ್ತ ಮಿಷನರಿಗಳು ಪ್ರವೇಶಿಸಿದರು. ಸೊಸೈಟಿ ಆಫ್ ಜೀಸಸ್ ನ ಫಾದರ್ ಲಿಯನಾರ್ಡೋ ಸಿನ್ನಾಮಿಯಿಂದ 1648ರಲ್ಲಿ 'ದಿ ಮೈಸೂರು ಮಿಷನ್ ಆಫ್ ದಿ ಜೆಸ್ಯೂಯಟ್ಸ್' ಸ್ಥಾಪನೆಗೊಂಡಿತು[484]. ಫಾದರ್ ಸಿನ್ನಾಮಿಯು ಸನ್ಯಾಸಿಗಳಂತೆ ವೇಷ ಧರಿಸಿ ಕ್ರೈಸ್ತ ಪ್ರವರ್ತಕನಾಗಿ ಸಂಚರಿಸುತ್ತಾ ಶ್ರೀರಂಗಪಟ್ಟಣದಲ್ಲಿ ಬ್ರಾಹ್ಮಣನೊಬ್ಬನನ್ನು ಮತಪರಿವರ್ತನೆ ಮಾಡಿದ. ಅವನು ಹಲವಾರು ಬ್ರಾಹ್ಮಣರು, ಅಕ್ಕಸಾಲಿಗರು ಮತ್ತು ಒಕ್ಕಲಿಗರನ್ನು

---

*483. ಹಯವದನರಾವ್ ಸಿ. (ಸಂ)., ಮೈಸೂರು ಗೆಜೆಟಿಯರ್, ಸಂಪುಟ IV, ಪು. 494*

*484. ನಾಯ್ಡು ಬಿ.ಎನ್., ಇಂಟೆಲೆಕ್ಚುಯಲ್ ಹಿಸ್ಟರಿ ಆಫ್ ಕಲೋನಿಯಲ್ ಇಂಡಿಯಾ, ಮೈಸೂರು 1831-1920, ರಾವತ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ. 1996, ಪು. 43-44*

ಮತಪರಿವರ್ತಿಸಿ ಬಸವಾಪುರದಲ್ಲಿ ಚರ್ಚೊಂದನ್ನು ನಿರ್ಮಿಸಿದ. ಮೈಸೂರಿನ ರಾಜನಾದ ಕಂಠೀರವ ನರಸರಾಜ ಒಡೆಯರು ಫಾದರ್ ಸಿನ್ನಾಮಿಗೆ ಮೈಸೂರಿನಲ್ಲಿ ಮತಪರಿವರ್ತನಾ ಚಟುವಟಿಕೆಗೆ ಅನುಮತಿ ನೀಡಿದ್ದನಲ್ಲದೆ ಒಂದು ಮನೆ ಮತ್ತು ಅವನ ಜೀವನ ನಿರ್ವಹಣೆಗೆ ಒಂದು ಗ್ರಾಮದ ಕಂದಾಯವನ್ನು ನೀಡಿದ್ದ[485]. ಹೈದರ್ ಕಾಲದಲ್ಲಿ ಸೊಸೈಟಿ ಆಫ್ ಜೀಸಸ್ ಅನ್ನು ಧಮನಗೊಳಿಸಲು ಪ್ರಯತ್ನಿಸಿದ್ದರಿಂದ ಪೋರ್ಚುಗಲ್ ಸರ್ಕಾರ ಜೆಸ್ಯೂಯಟ್ ಮಿಷನರಿಗಳನ್ನು ತಮ್ಮ ದೇಶಗಳಿಗೆ ವಾಪಾಸ್ಸಾಗಬೇಕೆಂದು ತಿಳಿಸಿತು. ಆದರೆ ಮೈಸೂರಿನ ರಾಜನು ಪೋರ್ಚುಗಲ್ ಸರ್ಕಾರದ ನಿರ್ದೇಶನವನ್ನು ತಿರಸ್ಕರಿಸಿ "ಅವರು (ಜೆಸ್ಯೂಯಟರು) 150 ವರ್ಷಗಳ ಶ್ರಮದಿಂದ ಒಳ್ಳೆಯದನ್ನಲ್ಲದೆ ಬೇರೇನನ್ನೂ ಮಾಡಿಲ್ಲ" ಎಂದು ಅವರ ಇರುವಿಕೆಯನ್ನು ಪ್ರೋತ್ಸಾಹಿಸಿದ್ದನು[486]. ಸಿನ್ನಾಮಿಯು ಪ್ರಶ್ನಾರೂಪದ ಬೋಧನೆ ಮತ್ತು ಹಲವು ಸಂತರ ಜೀವನ ಚರಿತ್ರೆಯನ್ನು ಕನ್ನಡದಲ್ಲಿ ಹೊರತಂದ. ಅಲ್ಲದೆ "ಮೈಸೂರಿನಲ್ಲಿ ರೂಢಿಯಲ್ಲಿದ್ದ ಹಲವಾರು ತಪ್ಪುಗಳು ಮತ್ತು ಅಂಧಶ್ರದ್ಧೆಗಳನ್ನು ಅಪ್ರಮಾಣವೆಂದು ಸಾಧಿಸುವ" ಬರಹಗಳನ್ನು ಬಿಟ್ಟು ಹೋಗಿದ್ದಾನೆ[487]. ಮತ್ತೊಬ್ಬ ಕ್ರೈಸ್ತ ಪಾದ್ರಿ ಅಬ್ಬೆ ಜೆ. ದುಬಾಯ್ ಸಹ ಹಿಂದೂ ಸನ್ಯಾಸಿಗಳಂತೆ ವೇಷಧರಿಸಿ ಮತಪ್ರಚಾರ ಕೈಗೊಂಡಿದ್ದ. ಅವನು ಶ್ರೀರಂಗಪಟ್ಟಣ ಮತ್ತು ಬೆಂಗಳೂರುಗಳಲ್ಲಿ ಚರ್ಚುಗಳನ್ನು ನಿರ್ಮಿಸಿದ್ದಲ್ಲದೆ ಮತ ಪರಿವರ್ತನೆಗೊಂಡಿದ್ದ ಕ್ರೈಸ್ತರ ಬಡತನವನ್ನು ಹೋಗಲಾಡಿಸಲು 'ಸಹಕಾರಿ ಕೃಷಿ' ←——— (Co-operative farming)ಯನ್ನು ಕೈಗೊಳ್ಳಲು ಪ್ರೋತ್ಸಾಹಿಸಿದ್ದನು. ಅವನು ಸಂಸ್ಕೃತ ಮತ್ತು ದಕ್ಷಿಣ ಭಾರತದ ಭಾಷೆಗಳಲ್ಲಿ ವಿದ್ವಾಂಸನಾಗಿದ್ದು "ಹಿಂದೂ ಮ್ಯಾನರ್ಸ್, ಕಸ್ಟಮ್ಸ್ ಅಂಡ್ ಸೆರಮೊನೀಸ್" ಎಂಬ ಕೃತಿ ರಚಿಸಿದ್ದಾನೆ. ಇವನು ತನ್ನ ಹಣದಿಂದ ಪ್ಯಾರಿಸ್‌ನಿಂದ ತಂದ ಚುಚ್ಚುಮದ್ದನ್ನು ಮೊದಲ ಬಾರಿಗೆ ಸಿಡುಬಿಗೆ ಚುಚ್ಚುಮದ್ದನ್ನು ಹಾಕುವುದನ್ನು ಪರಿಚಯಿಸಿದ. ಇವನನ್ನು ಹಿಂದೂಗಳು "ದೊಡ್ಡ ಸ್ವಾಮಿಯವರು" ಎಂದು ಕರೆಯುತ್ತಿದ್ದರು[488]. ಹೀಗೆ ಕ್ರೈಸ್ತ ಪಾದ್ರಿಗಳ ಮತಪರಿವರ್ತನಾ ಚಟುವಟಿಕೆಗಳಿಂದಾಗಿ 1845ರ ವೇಳೆಗೆ 92 ಚರ್ಚುಗಳಿದ್ದು ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದಾಗಿ ಹೆಚ್ಚಿನ ಸಂಖ್ಯೆಯ ಸ್ಥಳೀಯ ಭಾರತೀಯರು ಕ್ರೈಸ್ತರಾದರು.

ಮೈಸೂರಿನಲ್ಲಿ ಪಾಶ್ಚಿಮಾತ್ಯ ಶಿಕ್ಷಣದ ಆರಂಭಕ್ಕೆ ಮೈಸೂರಿನ ಅರಸರು ಗಮನ ಹರಿಸಿದರು. 1831ರಲ್ಲಿ ರಾಜ್ಯಾಧಿಕಾರವನ್ನು ಕಳೆದುಕೊಂಡ ಮೂರನೇ ಕೃಷ್ಣರಾಜ ಒಡೆಯರು ಇಂಗ್ಲಿಷ್ ಶಿಕ್ಷಣದ ಮಹತ್ವವನ್ನರಿತು ಹಾಗೂ ಬ್ರಿಟಿಷ್ ರೆಸಿಡೆಂಟ್ ಕರ್ನಲ್ ಫ್ರೇಜರ್‌ರವರ ಸಲಹೆಯಂತೆ 1833ರಲ್ಲಿ ಉಚಿತ ಇಂಗ್ಲಿಷ್ ಶಾಲೆಯೊಂದನ್ನು ಮೈಸೂರಿನ

---

485. *ಫೆರ್ರಲಿ ಡಿ., ಜೆಸ್ಯೂಯಿಟ್ಸ್ ಇನ್ ಮೈಸೂರ್, ಕ್ಸೇವಿಯರ್ ಪ್ರೆಸ್, ಕೋಜಿಕೋಡ್, 1995, ಪು. 35-36*

486. *ಅದೇ., ಪು. I, II*

487. *ನಾಯ್ಡು ಬಿ.ಎನ್., ಪೂರ್ವೋಕ್ತ, ಪು. 44*

488. *ಅಬ್ಬೆ ಜೆ. ಎ. ದುಬಾಯ್., ಹಿಂದೂ ಮ್ಯಾನರ್ಸ್, ಕಸ್ಟಮ್ಸ್ ಅಂಡ್ ಸೆರಮೊನಿಸ್, ಏಷ್ಯನ್ ಎಜುಕೇಷನಲ್ ಸರ್ವಿಸಸ್, ನ್ಯೂಡೆಲ್ಲಿ, 2001, ಪು. XI ಮತ್ತು XII.*

489. *ಅನ್ನಾಲ್ಸ್ ಆಫ್ ದಿ ರಾಯಲ್ ಫ್ಯಾಮಿಲಿ, ಭಾಗ II, ಪು. 109*

ಅರಮನೆಯ ಒಂದು ಭಾಗದಲ್ಲಿ ಸ್ಥಾಪಿಸಿದರು[489]. ಆ ಶಾಲೆಯ ಉಸ್ತುವಾರಿಯನ್ನು ವೆಸ್ಲಿಯನ್ ಮಿಷನರಿಯ ರೆವರೆಂಡ್ ಟಿ. ಹಾಡ್ಸನ್ ವಹಿಸಿಕೊಂಡಿದ್ದರು, ಆ ನಂತರ ಅದು 'ರಾಜಾಸ್ ಸ್ಕೂಲ್' ಎಂಬ ಹೆಸರು ಪಡೆಯಿತು. ರಾಜಾಸ್ ಸ್ಕೂಲ್‌ನಲ್ಲಿ ಆರಂಭದಲ್ಲಿ ಅರಸು ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶ ಸೀಮಿತವಾಗಿತ್ತು. ಹಾಗೂ ಇಂಗ್ಲಿಷ್ ಶಿಕ್ಷಣದ ಬಗ್ಗೆ ಇನ್ನೂ ಅಷ್ಟು ಆಸಕ್ತಿ ಇರದಿದ್ದುದು ಮತ್ತು ಮತಾಂತರಗೊಳ್ಳುವ ಭಯಗಳಿಂದಾಗಿ ಈ ಶಾಲೆ ಆರಂಭದಲ್ಲಿ ಪ್ರಸಿದ್ಧಿಗೊಳ್ಳಲಿಲ್ಲ. ಆದರೆ 1840ರ ನಂತರ ರಾಜಾಸ್ ಸ್ಕೂಲ್ ಮೈಸೂರಿನಲ್ಲಿ ಪ್ರಸಿದ್ಧಿಗೊಂಡಿತು ಮತ್ತು ಆ ಶಾಲೆಗೆ ಅನೇಕ ಕ್ರಿಶ್ಚಿಯನ್ನರು, ಆಂಗ್ಲೋ ಇಂಡಿಯನ್ನರು ಮತ್ತು ಪಾರ್ಸಿಗಳು ಸೇರಲು ಮುಂದಾದರು[490]. ಆ ಶಾಲೆಗೆ ರಾಜಾಸ್ಥಾನದ ಬೆಂಬಲ ದೊರೆತು ಇಂಗ್ಲಿಷ್ ಭಾಷೆ, ಭೂಗೋಳ, ಅಂಕಗಣಿತ, ವಿಜ್ಞಾನ, ಗಣಿತ ಮುಂತಾದ ವಿಷಯಗಳನ್ನು ಕುರಿತ ಪುಸ್ತಕಗಳನ್ನು ಖರೀದಿಸಲಾಯಿತು. 1864ರಲ್ಲಿ ರಾಜಾಸ್ ಸ್ಕೂಲ್ ಪ್ರಥಮ ದರ್ಜೆ ಕಾಲೇಜಾಯಿತು ಮತ್ತು ಕಾಲೇಜನ್ನು ಸರ್ಕಾರವೇ ವಹಿಸಿಕೊಂಡಿತು[491]. ಕಮಿಷನರ್ ಮಾರ್ಕ್ ಕಬ್ಬನ್ ಕಾಲದಲ್ಲಿ ಪಾಶ್ಚಿಮಾತ್ಯ ಶಿಕ್ಷಣ ವಿಸ್ತಾರಗೊಂಡಿತು. ಲಂಡನ್ ಮಿಷನ್, ವೆಸ್ಲಿಯನ್ ಮಿಷನ್ ಮತ್ತು ಬ್ಯಾಸೆಲ್ ಮಿಷನ್‌ಗಳು ಇಂಗ್ಲಿಷ್ ಶಿಕ್ಷಣದ ಪ್ರಸರಣೆಗೆ ಮುಂದಾಗಿ ಮೈಸೂರು ರಾಜ್ಯದ ಅನೇಕ ಜಿಲ್ಲೆಗಳಲ್ಲಿ ಶಾಲೆಗಳನ್ನು ಆರಂಭಿಸಿದವು. ಮಿಷನರಿ ಶಾಲೆಗಳಲ್ಲಿ ಜಾತಿ, ಸಾಮಾಜಿಕ ಹಿನ್ನೆಲೆ ಯಾವುದನ್ನೂ ಪರಿಗಣಿಸದೇ ಪ್ರವೇಶ ನೀಡಲಾಯಿತು. ವೆಸ್ಲಿಯನ್ ಮಿಷನ್ ಗ್ರಾಮಾಂತರ ಪ್ರದೇಶಗಳಲ್ಲೂ ಶಾಲೆಗಳನ್ನು ತೆರೆಯಿತು. ರೆವರೆಂಡ್ ಜೊಸಾಯ್ ಹಡ್ಸನ್ 1869ರಲ್ಲಿ ಬೆಂಗಳೂರಿನಲ್ಲಿ ಹೆಣ್ಣು ಮಕ್ಕಳ ಶಾಲೆಯೊಂದನ್ನು ತೆರೆದನು. ಹೆಣ್ಣುಮಕ್ಕಳಿಗಾಗಿ 'ಮಿತ್ರಾಲಯ ಹಾಸ್ಟೆಲ್' ಸಹ ಸ್ಥಾಪನೆಗೊಂಡಿತು. ಹೆಣ್ಣು ಮಕ್ಕಳ ಶಾಲೆಗೆ 'ಬಾಲಿಕಾ ಪಾಠಶಾಲೆ' ಎಂಬ ಹೆಸರಾಯಿತು. ಈ ಶಾಲೆಯಲ್ಲಿ ಉನ್ನತ ಜಾತಿಯ ಹೆಣ್ಣು ಮಕ್ಕಳು ಪ್ರವೇಶ ಪಡೆದು ಶಿಕ್ಷಣದ ಜೊತೆಗೆ ಕವಾಯಿತು, ಹೊಲಿಗೆ, ಸಂಗೀತ ಮುಂತಾದವುಗಳನ್ನು ಕಲಿಯಲಾರಂಭಿಸಿದರು. ಅಲಸೂರಿನ ಮಿಷನ್ ಶಾಲೆಯಲ್ಲಿ ಹೆಚ್ಚಿನ ಸಂಖ್ಯೆಯ ತೆಲುಗು ಹೆಣ್ಣು ಮಕ್ಕಳು ಸೇರಿದ್ದರು. ಹೆಣ್ಣು ಮಕ್ಕಳ ಶಿಕ್ಷಣದ ಬೆಳವಣಿಗೆಗೆ ಅನೇಕ ಐರೋಪ್ಯ ಸ್ತ್ರೀಯರು ದುಡಿದರು[492].

ಕಮಿಷನರ್ ಕಬ್ಬನ್ ಲಂಡನ್‌ಮಿಷನರಿ ಸೊಸೈಟಿಗೆ ಬೆಂಗಳೂರಿನಲ್ಲಿ ಐದು ಎಕರೆ ಭೂಮಿಯನ್ನು ನೀಡಿದನು. ಮುಮ್ಮಡಿ ಕೃಷ್ಣರಾಜ ಒಡೆಯರು 500 ರೂಪಾಯಿಗಳ ದೇಣಿಗೆ ನೀಡಿದರು. ಎಲಿಜಬೆತ್ ಬಿ. ಎಮೆರಿ ಎಂಬ ಐರೋಪ್ಯ ಸ್ತ್ರೀ ವೆಸ್ಲಿಯನ್ ಮಿಷನರಿ ಟ್ರಸ್ಟ್‌ಗೆ ತನ್ನ ಎಲ್ಲ ಆಸ್ತಿಯನ್ನು ದಾನ ನೀಡಿದಳು. ವೆಸ್ಲಿಯನ್ ಮಿಷನ್ ದೊಡ್ಡ ಬಳ್ಳಾಪುರದಲ್ಲಿ ಭಾನುವಾರದ ಶಾಲೆಗಳನ್ನು ನಡೆಸುವ ಮೂಲಕ ಬಹುಸಂಖ್ಯಾತ ಬ್ರಾಹ್ಮಣೇತರ ಜಾತಿಯವರು ಶಿಕ್ಷಣ

---

*490. ನಾಯ್ಡು ಬಿ.ಎಸ್., ಪೂರ್ವೋಕ್ತ, ಪು. 45, 46*

*491. ಅದೇ., ಪು. 46*

*492. ಅದೇ., ಪು. 48-52*

ಪಡೆಯಲು ನೆರವಾಯಿತು. ಸ್ತ್ರೀಶಿಕ್ಷಣವನ್ನು ಪ್ರೋತ್ಸಾಹಿಸಲು ಮಿಷನರಿ ಶಾಲೆಗಳಲ್ಲಿ ಐರೋಪ್ಯ ಸ್ತ್ರೀಯರನ್ನು ನೇಮಿಸಿಕೊಳ್ಳಲಾಯಿತು. 1841ರ ವೇಳೆಗೆ ಎಂಟು ಬ್ರಾಹ್ಮಣರ ಹೆಣ್ಣುಮಕ್ಕಳು ಶಾಲೆಗಳಲ್ಲಿ ಓದುತ್ತಿದ್ದರು. 1912ರ ವೇಳೆಗೆ ಆರಂಭಗೊಂಡ ಗರ್ಲ್ಸ್ ಹೋಮ್ ಮತ್ತು ಗರ್ಲ್ಸ್ ಹೈಸ್ಕೂಲ್‌ಗಳಲ್ಲಿ ಕ್ರಿಶ್ಚಿಯನ್ ಮಕ್ಕಳೊಂದಿಗೆ ಬ್ರಾಹ್ಮಣರ ಹೆಣ್ಣುಮಕ್ಕಳು ಓದುತ್ತಿದ್ದರು[493]. ಕ್ರೈಸ್ತ ಪಾದ್ರಿಗಳು ಮತ್ತು ಮಿಷನರಿಗಳ ಪ್ರಭಾವಕ್ಕೊಳಗಾದ ಅನೇಕ ಭಾರತೀಯರು ಆಧುನಿಕ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದರು. ಉದಾಹರಣೆಗೆ ಸಿ. ಅರುಣಾಚಲ ಮುದಲಿ ಎಂಬುವವರು ಬೆಂಗಳೂರಿನ ಸಿವಿಲ್ ಮತ್ತು ಮಿಲಿಟರಿ ಸ್ಟೇಷನ್‌ನಲ್ಲಿ ಆಂಗ್ಲೋ-ವರ್ನಾಕ್ಯೂಲರ್ ಶಾಲೆಯನ್ನು ಯಶಸ್ವಿಯಾಗಿ ನಡೆಸಿದರು. ಬೌರಿಂಗ್ ಶಿಕ್ಷಕರನ್ನು ನೇಮಿಸುವಾಗ ಬುದ್ಧಿವಂತರನ್ನು ಆಯ್ಕೆ ಮಾಡುವ ಯೋಜನೆ ಆರಂಭಿಸಿದ. ಮಠಗಳಿಂದ ಶಿಕ್ಷಕರನ್ನು ನೇಮಿಸುತ್ತಿರಲಿಲ್ಲ. ಕಾರಣ ಅವರು ಗಣಿತ ಮತ್ತು ಭೂಗೋಳವನ್ನು ಸಮರ್ಥವಾಗಿ ಬೋಧಿಸಲಾರರೆಂಬುದಾಗಿತ್ತು. ಹಾಗಾಗಿ ಮಠಗಳಲ್ಲಿ ವಿದ್ಯಾಭ್ಯಾಸ ಮಾಡಿದವರಿಗೆ ಶಿಕ್ಷಕ ವೃತ್ತಿ ದೊರೆಯದಂತಾಯಿತು. ಇಂಗ್ಲಿಷ್ ಶಿಕ್ಷಣ ಮತ್ತು ಮಿಷನರಿ ಶಾಲೆಗಳಲ್ಲಿ ಓದುವುದು ಹಿರಿಮೆಯ ಮತ್ತು ಅರ್ಹತೆಯ ಮಾನದಂಡವಾದವು. ಆಧುನಿಕ ಶಿಕ್ಷಣವು ಗ್ರಾಮಾಂತರ ಜನರಿಗೂ ತಲುಪುವಂತಾಗಲು ಹೋಬಳಿ ಸ್ಕೂಲ್ ಪದ್ಧತಿಯನ್ನು ಅಳವಡಿಸಲಾಯಿತು. ಪರಿಣಾಮವಾಗಿ 1854 ರ ಹಾಲಿಫಾಕ್ಸ್ ವರದಿಯ ಮೇರೆಗೆ, ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಕ್ರಮಬದ್ಧ ಚಟುವಟಿಕೆ ಆ ವರ್ಷದಲ್ಲಿ ಆರಂಭಗೊಂಡು 1871-72ರ ವೇಳೆಗೆ 645 ಹೋಬಳಿ ಶಾಲೆಗಳಿದ್ದು ಜನ ಸಮುದಾಯಕ್ಕೆ ಪ್ರಾಥಮಿಕ ಶಿಕ್ಷಣ ದೊರೆಯುವಂತಾಯಿತು. 1861ರಲ್ಲಿ ಶಿಕ್ಷಣ ವೃತ್ತಿಯನ್ನಾರಿಸುವ ವಿದ್ಯಾರ್ಥಿಗಳಿಗೆ ತರಭೇತಿ ನೀಡುವ ನಾರ್ಮಲ್ ಸ್ಕೂಲ್‌ನ್ನು ಬೆಂಗಳೂರಿನಲ್ಲಿ ಆರಂಭಿಸಲಾಯಿತು. ನಾರ್ಮಲ್ ಸ್ಕೂಲಿನಿಂದ ತರಭೇತಿಗೊಂಡವರು ಹೊಸ ಶಾಲೆಗಳಲ್ಲಿ ಶಿಕ್ಷಕರಾಗಿ ನೇಮಕಗೊಳ್ಳುವ ಮೂಲಕ ಆಧುನಿಕ ಶಿಕ್ಷಣ ಬೆಳವಣಿಗೆಗೊಳ್ಳಲು ನೆರವಾದರು[494]. ಶಾಲೆಗೆ ಹೋಗುವ ವಿದ್ಯಾರ್ಥಿಗಳ ಪ್ರಮಾಣ 1867ರಿಂದ 1872ರ ವರೆಗೆ ಬಹಳ ಮಟ್ಟಿಗೆ ಹೆಚ್ಚಿತು. 1867ರಲ್ಲಿ ಶಾಲೆಗೆ ಹೋಗುವ ವಿದ್ಯಾರ್ಥಿಗಳ ಪ್ರಮಾಣ 591.6 ಜನರಿಗೆ ಒಬ್ಬರಿದ್ದರು. 1872ರ ವೇಳೆಗೆ 113 ಜನರಿಗೆ ಒಬ್ಬರಂತಾಯಿತು[495].

ಒಟ್ಟಾರೆ ಕ್ರೈಸ್ತ ಮಿಷನರಿಗಳು ಮತ್ತು ವ್ಯಕ್ತಿಗಳು ಆಧುನಿಕ ಶಿಕ್ಷಣವನ್ನು ಬೆಳೆಸಲು ಹಲವಾರು ಕ್ರಮಗಳನ್ನು ಕೈಗೊಂಡರು. ಮಿಷನರಿ ಶಾಲೆಗಳು ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿ ಹಾಗೂ ಧರ್ಮದ ನಡುವೆ ಸೇತುವೆಯಂತಿದ್ದು ಭಾರತೀಯ ಶಿಕ್ಷಣ ವ್ಯವಸ್ಥೆಯಲ್ಲಿ ಪಾಶ್ಚಿಮಾತ್ಯ ಶಿಕ್ಷಣದ ಆದರ್ಶಗಳು ಮತ್ತು ಕ್ರಮಬದ್ಧತೆಯನ್ನು ತಂದವು. ಕ್ರೈಸ್ತ ಮಿಷನರಿ ಶಾಲೆಗಳಲ್ಲಿ ಬೋಧಿಸುತ್ತಿದ್ದ ಭೌತಶಾಸ್ತ್ರ, ರಸಾಯನಶಾಸ್ತ್ರ, ಭೂಗೋಳಶಾಸ್ತ್ರ ಮತ್ತು ಇತಿಹಾಸ ವಿಷಯಗಳು ಹಿಂದೂ ಚಿಂತನೆಗಳ ಮೇಲೆ ತೀವ್ರ ಪ್ರಭಾವ ಬೀರಿದವು. ಅವು ಹಿಂದೂಗಳ ಭೂ ವಿವರಣೆಯ

---

*493. **ನಾಯ್ಡು ಬಿ.ಎನ್.**, ಪೂರ್ವೋಕ್ತ, ಪು. 55-56*

*494. **ಹಯವದನರಾವ್ (ಸಂ).**, ಪೂರ್ವೋಕ್ತ, ಸಂಪುಟ IV, ಪು. 497*

*495. **ಸದಾಶಿವ ಕೆ.**, ಪೂರ್ವೋಕ್ತ, ಪು. 137*

*496. **ಇಂಘಮ್, ಕೆನ್ನೆತ್.**, ರಿಫಾರ್ಮರ್ಸ್ ಇನ್ ಇಂಡಿಯಾ, ಕೇಂಬ್ರಿಡ್ಜ್, 1956 ಪು. 59*

ಬಗೆಗಿನ ಚಿಂತನೆಗಳನ್ನು ಆಕ್ಷೇಪಿಸಿದವು[496].

ಲಂಡನ್ ಮಿಷನರಿ ಸೊಸೈಟಿ ಬಳ್ಳಾರಿ ಪ್ರಾಂತ್ಯದಲ್ಲಿ ಕೈಗೊಂಡ ಶಿಕ್ಷಣ ಪ್ರಸಾರದಿಂದಾಗಿ ಆದ ಬದಲಾವಣೆಗಳನ್ನು ಕುರಿತು ಆ ಸಂಸ್ಥೆಯ 1819-21ರ ವರದಿ ಈ ರೀತಿ ಹೇಳಿದೆ "ಇಲ್ಲಿನ ನೆಲಸಿಗರಲ್ಲಿ ವೈಚಾರಿಕ ಸ್ಫೂರ್ತಿ ಎಲ್ಲೆಡೆ ವ್ಯಾಪಿಸುತ್ತಿದೆ. ಬ್ರಾಹ್ಮಣೀಯ ವ್ಯವಸ್ಥೆ ರೂಪಿಸಿದ್ದ ಪ್ರಮುಖ ಪೂರ್ವಾಗ್ರಹಗಳನ್ನು ಗುರುತಿಸಲಾರಂಭಿಸಿದ್ದಾರೆ ಮತ್ತು ಅವುಗಳ ಭಯವನ್ನು ತುಚ್ಛವಾಗಿ ಕಾಣುತ್ತಾರೆ. ಹಿಂದೂಗಳು ಅವುಗಳನ್ನು ಸಾರ್ವಜನಿಕವಾಗಿ ಖಂಡಿಸಲು ಬಳಸುವ ಮೂಲಕ ತಮ್ಮನ್ನು ಬಹಳ ಕಾಲ ಬಂಧಿಸಿದ್ದ ಜಾತಿ ಎಂಬ ಸರಪಳಿಯು ಸಡಿಲಗೊಳ್ಳುವಂತೆ ಮಾಡಿದ್ದಾರೆ ಮತ್ತು ಬಹುಸಂಖ್ಯಾತ ಜನ ಅವರ ಕ್ರೂರ ಮತ್ತು ತುಚ್ಛವಾದ ಮೂಢನಂಬಿಕೆಗಳನ್ನು ಭಾಗಶಃ ತೊರೆದಿದ್ದಾರೆ"[497]. ಮಿಷನರಿಗಳ ಕಾರ್ಯಚಟುವಟಿಕೆಗಳಿಂದಾಗಿ ಸಾರ್ವಜನಿಕರಲ್ಲಿ ಪ್ರಶ್ನಿಸುವ, ಆಲೋಚಿಸುವ, ತೀರ್ಮಾನಿಸುವ ವೈಚಾರಿಕತೆ ಬೆಳೆದುದನ್ನು ಮೇಲ್ಕಂಡ ಉಲ್ಲೇಖ ಸ್ಪಷ್ಟಪಡಿಸುತ್ತದೆ. ಹಾಗೆಯೇ 'ಹೂಣ ಭಾಷೆ' ಎಂದು ಪರಿಗಣಿತವಾಗಿದ್ದ ಇಂಗ್ಲಿಷ್ ಭಾಷೆಯನ್ನು ಮತ್ತು ಮಿಷನರಿಗಳ ಶಾಲೆಗಳು ಮತಾಂತರ ಕೇಂದ್ರಗಳೆಂಬ ಭಾವನೆ ಇದ್ದುದು ಹಂತಹಂತವಾಗಿ ಹೋಗಿ ಇಂಗ್ಲಿಷ್ ಶಿಕ್ಷಣದ ಮಹತ್ವವನ್ನರಿತು ಮೇಲ್ಜಾತಿಗಳು ಮಿಷನರಿ ಶಾಲೆಗಳನ್ನು ಸೇರಿದರು. ಮೈಸೂರಿನಲ್ಲಿ 1831ರ ನಂತರ ಏರ್ಪಟ್ಟ ಬ್ರಿಟಿಷರ ನೇರ ಆಳ್ವಿಕೆಯ ನಂತರ 1881ರವರೆಗೂ ಉಂಟಾದ ರಾಜಕೀಯ, ಆರ್ಥಿಕ, ಆಡಳಿತಶಾಹಿ ಪ್ರಭಾವಗಳಿಂದಾಗಿ ಮೈಸೂರಿನ ಸಮಾಜದಲ್ಲಾದ ಪರಿವರ್ತನೆಯನ್ನು ತೀ.ತಾ. ಶರ್ಮರವರು ಈ ರೀತಿ ವರ್ಣಿಸಿದ್ದಾರೆ. "ಮೈಸೂರು ಸಂಸ್ಥಾನದಲ್ಲಿ ಕುಂಪಣಿ ಸರ್ಕಾರ ಮೊದಲಾಯಿತು.(1831). 'ವೈದಿಕರು' ಪಾರಂಪರ್ಯವಾಗಿ ನಡೆಸುತ್ತಿದ್ದ 'ಸುಖಜೀವನ'ಕ್ಕೆ ಸಂಚಕಾರ ಬಂತು. ಸಂಸ್ಕೃತ ವಿದ್ಯಾಭ್ಯಾಸ ಸಡಿಲಿತು; ವೇದಾಧ್ಯಯನ, ಶಾಸ್ತ್ರಾಭ್ಯಾಸಗಳ ಆಕರ್ಷಕ ಶಕ್ತಿ ಕಡಿಮೆಯಾಗುತ್ತ ಬಂತು. ನೆಮ್ಮದಿಯ ಜೀವನವೆಂದರೆ 'ಲೌಕಿಕ ಜೀವನ' ಎಂಬ ಹೊಸ ನಂಬಿಕೆ ಜನರಲ್ಲಿ ಮೂಡಿತು. ವಸ್ತು-ವಿಚಾರಗಳ ಮೌಲ್ಯಗಳು ತಲೆಕೆಳಗಾದವು; ವೈದಿಕ ಸಮಾಜ ಮಾತ್ರವೇಕೆ, ಸಮಸ್ತ ಸಮಾಜದಲ್ಲೂ ಪ್ರಾಚೀನ ರಚನೆಗಳು ಸಡಿಲಿದುವು ; ಆಚಾರ ವಿಚಾರ, ಸಮಯ ಸಂಪ್ರದಾಯಗಳೆಲ್ಲ ತಪತಪನೆ ಉರುಳಲಾರಂಭಿಸಿದವು. ಈ ಪರಿವರ್ತನದ ಜಂಝೂಮಾರುತವನ್ನು ಎದುರಿಸುವ ಶಕ್ತಿ ಸಹಜವಾಗಿ ವೈದಿಕ ವರ್ಗಕ್ಕೆ ಇಲ್ಲವಾಯಿತು. ಕುಂಪಣಿ ಸರ್ಕಾರದ ಐವತ್ತು ವರ್ಷಗಳ ಪ್ರಭುತ್ವದಲ್ಲಿ ಪಾಶ್ಚಾತ್ಯ ನಾಗರಿಕತೆಯ ಪ್ರಭಾವ, ಅಂಗ್ಲಭಾಷಾಧ್ಯಯನದ ಆಕರ್ಷಣೆ ಕಲ್ಪನಾತೀತವೆನಿಸಿತು."[498] ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಸಂಸ್ಕೃತ ಜ್ಞಾನ, ಘನತೆ, ಗೌರವ, ಸಾಮಾಜಿಕ ಮನ್ನಣೆ ಆರ್ಥಿಕ ಶಕ್ತಿಯಾಗಿತ್ತು. ಆದರೆ ಪಾಶ್ಚಿಮಾತ್ಯ ಶಿಕ್ಷಣ ಪ್ರವೇಶಿಸಿ

---

*497. ಲಂಡನ್ ಮಿಷನರಿ ಸೊಸೈಟಿ ರಿಪೋರ್ಟ್, 1819-21, ಪು. 61*
*-ಉಲ್ಲೇಖ: ನಾಯ್ಡು ಬಿ.ಎನ್., ಪೂರ್ವೋಕ್ತ, ಪು. 53-54*

*498. ತಿ. ತಾ. ಶರ್ಮ., ನನ್ನ ಜೀವನ ಮತ್ತು ಧ್ಯೇಯ (ಆತ್ಮ ಕಥೆ), ನವನೀತ ಪ್ರಕಾಶನ, ಬೆಂಗಳೂರು, 2002, ಪು. 23*

ವ್ಯಾಪಿಸಿದಂತೆ ಸಂಸ್ಕೃತ ಶಿಕ್ಷಣ ಅಪ್ರಸ್ತುವೆನಿಸಿತು. ಹಾಗೂ ಹಿಯ್ಯಾಳಿಸುವ ಮಟ್ಟಕ್ಕೂ ಹೋಯಿತು. ತಿ.ತಾ. ಶರ್ಮರು ಉಲ್ಲೇಖಿಸಿರುವಂತೆ ಅವರು ಸಂಸ್ಕೃತ ವಿದ್ವಾಂಸನಾಗಬೇಕೆಂಬ ಆಸೆ ಬೆಳೆಸಿಕೊಂಡಾಗ ಅದನ್ನು ಟೀಕಿಸುತ್ತಾ ಅವರ ತಾತನ ವಿದ್ವಾಂಸ ಬಂಧುಗಳು "ಆ ವಿದ್ವತ್ತಿಗೆ ಈ ಕಾಲದಲ್ಲಿ ಒಂದು ಪಾವು ಅಕ್ಕಿ ಕಾಳು ಸಹ ಗಿಟ್ಟುವುದಿಲ್ಲ. ನೀನು ಬುದ್ಧಿವಂತ; ಇಂಗ್ಲಿಷ್ ಓದು" ಎಂದು ಸಲಹೆ ನೀಡಿದರು[499]. ಇಂಗ್ಲಿಷ್ ಕಲಿಯುತ್ತಿದ್ದ ವಿದ್ಯಾರ್ಥಿಗಳು 'ರಾಜಯೋಗ' ಪಡೆದವರೆಂದು ಗೌರವಿಸಲ್ಪಡುತ್ತಿದ್ದರು. ಇಂಗ್ಲಿಷ್‌ನಲ್ಲಿ ದಸ್ಕತ್ತು (ಸಹಿ) ಹಾಕುವವರನ್ನು ಆಶ್ಚರ್ಯಭರಿತ ಗೌರವದಿಂದ ನೋಡಲಾಗುತ್ತಿತ್ತು. ಅಂದಿನ ಸಮಾಜದಲ್ಲಿ 'ಚತುರ್ವೇದ ವೇದಾರ್ಥ ತತ್ವಜ್ಞರಿಗೆ ಗಿರಾಕಿ ಇಲ್ಲ. ಸಕಲ ಶಾಸ್ತ್ರ ಪ್ರವೀಣರಿಗೆ ಹೊಟ್ಟೆ ತುಂಬ ಅನ್ನ ಸಿಗುವುದಿಲ್ಲ. ಕಾವ್ಯ ನಾಟಕೇತಿಹಾಸಗಳನ್ನು ಕೇಳುವವರಿಲ್ಲ!' ಎಂಬ ಮಾತು ಪ್ರಚಲಿತದಲ್ಲಿತ್ತು. ದಿನ ಬೆಳಗಾದರೆ ಈ ಮಾತಿನ ಸತ್ಯ ಜನರಿಗೆ ಸ್ಪಷ್ಟವಾಗಿ ಅನುಭವಕ್ಕೆ ಬಂತು ;ಜೀವನದ ಭದ್ರತೆಯ ಕಡೆಗೆ ಸಮಾಜದ ದೃಷ್ಟಿ ಹೊರಳಿತು ವೈದಿಕ ವಿದ್ಯಾಭ್ಯಾಸವನ್ನಪೇಕ್ಷಿಸುತ್ತಿದ್ದವರೇ "ಹೂಣ ಭಾಷಾಭ್ಯಾಸ" ವನ್ನು ಅಪೇಕ್ಷಿಸಲಾರಂಭಿಸಿದರು. ವಿದ್ಯೆಯು ಜೀವನದ "ಸಾಧನೆ" ಎಂಬ ಕಲ್ಪನೆ "ಸಂಪಾದನೆ" ಎಂಬುದಾಗಿ ಪರಿವರ್ತನೆಗೊಂಡಿತು. ಮಹಾಮಹಾ ವಿದ್ವಾಂಸರ ಮನೆಗಳಲ್ಲಿ ಕಿರಿಯರು "ಆಂಗ್ಲ ವಿದ್ಯಾಭ್ಯಾಸ ಮಾಡುವುದರಿಂದಲೇ ನಮ್ಮ ಮೋಕ್ಷ" ಎಂದು ತಾಳೆವಾಲೆ ಗ್ರಂಥಗಳನ್ನು ಮೂಟೆಕಟ್ಟಿ ಅಟ್ಟದ ಮೇಲಿಟ್ಟರು. ಪಾಠಶಾಲೆಗಳು ಬರಿದಾದವು. "ಆಂಗ್ಲೋ-ವರ್ನಾಕ್ಯುಲರ್ ಸ್ಕೂಲ್" ಗಳು ತುಂಬಿದವು. ಆಂಗ್ಲ ಶಾಲೆಯ ಮೆಟ್ಟಿಲು ಹತ್ತುವುದೆಂದರೆ ಪರಮತದ ಸೋಪಾನ ಹತ್ತಿದಂತೆಂಬ ಭಾವನೆ ಎಲ್ಲೆಲ್ಲೂ ವ್ಯಾಪಿಸಿತು"[500]. ಒಟ್ಟಾರೆ ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಗಳು ಮೈಸೂರಿನ ಸಾಂಪ್ರದಾಯಿಕ ಶಿಕ್ಷಣ, ಆರ್ಥಿಕ, ಸಾಮಾಜಿಕ, ಆಡಳಿತಶಾಹಿ ವ್ಯವಸ್ಥೆಗಳ ಮೇಲೆ ತೀವ್ರ ಪರಿಣಾಮವನ್ನುಂಟು ಮಾಡಿದವು ಮತ್ತು ಸಾಮಾಜಿಕ ಪರಿವರ್ತನಾ ಪ್ರಕ್ರಿಯೆಯನ್ನು ತೀವ್ರಗೊಳಿಸಿದವು. ಮೈಸೂರಿನಲ್ಲಿ ಪಾಶ್ಚಿಮಾತ್ಯೀಕರಣದ ಪ್ರಕ್ರಿಯೆಯಲ್ಲಿ ಎಲ್ಲ ಜಾತಿಗಳಿಗೂ ನೇತೃತ್ವ ವಹಿಸಿದವರು ಬ್ರಾಹ್ಮಣರು. ಬಹು ಹಿಂದಿನ ಕಾಲದಿಂದ ಅವರು ಸಾಂಪ್ರದಾಯಿಕ ಶಿಕ್ಷಣದ ಮೇಲೆ ಪ್ರಭುತ್ವ ಹೊಂದಿದ್ದು ಬ್ರಿಟಿಷರ ಆಳ್ವಿಕೆ ಸ್ಥಾಪನೆಗೊಂಡ ನಂತರ ರೂಪುಗೊಂಡ ಹೊಸ ಅವಕಾಶಗಳನ್ನು ಗುರುತಿಸಿದ್ದು ಅವರೇ. ಆಧುನಿಕ ಪೂರ್ವಕಾಲದಲ್ಲಿ ಬ್ರಾಹ್ಮಣರು ಶಿಕ್ಷಣದ ಜೊತೆಗೆ ಭೂದಾನದ ಮೂಲಕ ಪಡೆದ ಭೂ ಒಡೆತನದಿಂದಾಗಿ ಕೃಷಿ ಆರ್ಥಿಕತೆ ಮತ್ತು ಸಮಾಜದ ಗಣ್ಯರಾಗಿದ್ದು ಗ್ರಾಮಗಳಲ್ಲಿ ನೆಲೆಸಿದ್ದರು. ಹೊಸ ಅವಕಾಶಗಳ ಬೀಗದ ಕೈ ಅಥವಾ ರಹದಾರಿ ಆದ ಇಂಗ್ಲಿಷ್ ಶಿಕ್ಷಣ ಪಡೆಯಲು ಬೆಂಗಳೂರು ಮತ್ತು ಮೈಸೂರುಗಳಂತಹ ನಗರಗಳಿಗೆ ಬಂದು ನೆಲೆಸಿದರು. ಬ್ರಾಹ್ಮಣರು ಪಾಶ್ಚಿಮಾತ್ಯೀಕರಣಕ್ಕೆ

---

*499. ತಿ. ತಾ. ಶರ್ಮ., ಪೂರ್ವೋಕ್ತ, ಪು. 129*

*500. ಅದೇ., ಪು. 24*

*501. ಶ್ರೀನಿವಾಸ್ ಎಂ.ಎನ್., ಕ್ಯಾಸ್ಟ್, ಇನ್ ಇಂಡಿಯಾ ಅಂಡ್ ಅದರ್ ಎಸ್ಸೇಸ್, ಬಾಂಬೆ, ಏಷ್ಯಾ ಪಬ್ಲಿಷಿಂಗ್ ಹೌಸ್, 1970, ಪು. 51-52*

ಒಳಗಾದದ್ದಲ್ಲದೆ ಮೈಸೂರಿನ ಹಿಂದೂ ಸಮಾಜದ ಇನ್ನಿತರ ವರ್ಗಗಳಿಗೂ ಪಾಶ್ಚಿಮಾತ್ಯೀಕರಣ ಹರಡಲು ಸೋಸು ಸಾಧನದಂತಾದರು (filter)[501].

ಪಾಶ್ಚಿಮಾತ್ಯ ಶಿಕ್ಷಣದ ಮಹತ್ವವನ್ನು ಗುರುತಿಸಿದ್ದು ಪಾಶ್ಚಿಮಾತ್ಯ ಶಿಕ್ಷಣ ಪಡೆದ ಗಣ್ಯವರ್ಗ ಮಾತ್ರವಲ್ಲ. ಭಾರತದ ಆಧುನಿಕ ಪೂರ್ವ ಸಾಂಪ್ರದಾಯಿಕ ಸಾಮಾಜಿಕ ಗಣ್ಯವರ್ಗವು ಹೊಸ ಶಿಕ್ಷಣವು ತಮ್ಮ ಹಳೆಯ ಸಾಮಾಜಿಕ ಘನತೆಯನ್ನು ಮುಂದುವರಿಸಿಕೊಂಡು ಹೋಗಲು ನೆರವಾಗುತ್ತದೆಂದು ಅರಿತರು. ಹಾಗೆಯೇ ಸಾಂಪ್ರದಾಯಿಕ ರಾಜಕೀಯ ಗಣ್ಯವರ್ಗವಾದ ಜಮೀನ್ದಾರರು ಮತ್ತು ತಾಲ್ಲೂಕ್‌ದಾರರೂ ಸಹ. ಈ ಪ್ರಕ್ರಿಯೆಯು ಗಣ್ಯವರ್ಗದಿಂದ ಕೆಳಗಿನ ಶ್ರೀಮಂತರು ಮತ್ತು ಮಧ್ಯಮವರ್ಗದವರು ಸಹ ಇಂಗ್ಲಿಷ್ ಶಿಕ್ಷಣ ಪಡೆಯುವಂತೆ ಪ್ರೇರೇಪಿಸಿತು[502]. ಅದರಲ್ಲೂ 1881ರಲ್ಲಿ ಪ್ರಜಾಪ್ರತಿನಿಧಿ ಸಭೆ ಸ್ಥಾಪನೆಗೊಂಡ ನಂತರ ಬ್ರಾಹ್ಮಣೇತರ ಮತ್ತು ಗ್ರಾಮೀಣ ಹಿನ್ನೆಲೆಯ ಸದಸ್ಯರು ಶಿಕ್ಷಣ ಸೌಲಭ್ಯವನ್ನು ವಿಸ್ತರಿಸುವಂತೆ ಸರ್ಕಾರದ ಮೇಲೆ ಒತ್ತಡ ತರಲಾರಂಭಿಸಿದರು. ಪಾಶ್ಚಿಮಾತ್ಯ ಶಿಕ್ಷಣಕ್ಕೆ ಬೇಡಿಕೆ ಹೆಚ್ಚಿದಂತೆ ಶಿಕ್ಷಣ ಸೌಲಭ್ಯ ಪೂರೈಸುವ ಒತ್ತಡ ಸರ್ಕಾರದ ಮೇಲೆ ನಿಂತಿತು.

ಒಟ್ಟಾರೆ ಮೇಲ್ಕಂಡಂತೆ ಮೈಸೂರಿನಲ್ಲಿ ಆಧುನಿಕ ಶಿಕ್ಷಣ ಪ್ರವೇಶಿಸುವುದರೊಂದಿಗೆ ಸಾಮಾಜಿಕ ಪರಿವರ್ತನಾ ಪ್ರಕ್ರಿಯೆಗಳು ಚುರುಕುಗೊಂಡವು. 1831ರಿಂದ 1881ರವರೆಗೂ ಈ ಪ್ರಕ್ರಿಯೆ ಮಂದಗತಿಯಲ್ಲೂ, 1881ರ ನಂತರ ವೇಗವನ್ನು ಪಡೆಯುವುದನ್ನು ಕಾಣಬಹುದು. ಆರಂಭದಲ್ಲಿ ಸಾಂಪ್ರದಾಯಿಕತೆ ಮತ್ತು ಆಧುನಿಕತೆಯ ನಡುವೆ ಸಂಘರ್ಷವನ್ನು ಕಾಣಬಹುದು. ಈ ಸಂಘರ್ಷದಲ್ಲಿ ಆಧುನಿಕತೆ ಮುನ್ನಡೆ ಸಾಧಿಸಿತು. ನಾಲ್ವಡಿಯವರ ಕಾಲ 1902 ರಿಂದ 1940. ಈ ಕಾಲದಲ್ಲೂ ಮೈಸೂರಿನ ಸಮಾಜ ಸಂಪ್ರದಾಯತೆಯನ್ನು ಉಳಿಸಿಕೊಂಡಿದ್ದು ಕೆಲವೊಮ್ಮೆ ಆಧುನಿಕತೆಯನ್ನು ವಿರೋಧಿಸುತ್ತಿತ್ತು. ಹಾಗೆಯೇ ಪಾಶ್ಚಿಮಾತ್ಯ ಶಿಕ್ಷಣವು ಆರಂಭದಲ್ಲಿ ಪ್ರಸಾರವಾದಾಗ ಪ್ರಾದೇಶಿಕವಾಗಿ, ಜನಾಂಗೀಯವಾಗಿ, ಜಾತಿವಾರು ಅಸಮತೋಲನವಾಗಿ ಹಂಚಲ್ಪಟ್ಟಿತ್ತು. ಇಂತಹ ಕಾಲದಲ್ಲಿ ನಾಲ್ವಡಿಯವರು ರಾಜ್ಯದ ಸರ್ವಾಂಗೀಣ ಅಭಿವೃದ್ಧಿಗೆ ಶಿಕ್ಷಣವೇ ಸಾಧನವೆಂದು ಭಾವಿಸಿ ಆಧುನಿಕ ಶಿಕ್ಷಣವನ್ನು

502. *ಬಸು, ಅಪರ್ಣ., ದಿ ಗ್ರೋಥ್ ಆಫ್ ಎಜುಕೇಷನ್ ಅಂಡ್ ಪೊಲಿಟಿಕಲ್ ಡೆವಲಪ್‌ಮೆಂಟ್ ಇನ್ ಇಂಡಿಯಾ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, 1974, ಪು. 5*

ಸಾರ್ವತ್ರಿಕಗೊಳಿಸಲು ಮುಂದಾದಾಗ ಅನೇಕ ಪ್ರತಿರೋಧಗಳು ಕಾಣಿಸಿಕೊಂಡವು. ಮುಂದಿನ ಉಪಶೀರ್ಷಿಕೆಯಲ್ಲಿ ಆ ಪ್ರತಿರೋಧಗಳು ಯಾವುವು?ಅವುಗಳನ್ನು ಹೇಗೆ ಎದುರಿಸಿ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲಾಯಿತು?ಅದರಿಂದಾದ ಸಾಮಾಜಿಕ ಪರಿವರ್ತನೆಗಳಾವುವು ಎಂಬುದನ್ನು ಕುರಿತು ಅಧ್ಯಯನ ಮಾಡಲಾಗುವುದು.

## ನಾಲ್ವಡಿ ಕಾಲದಲ್ಲಿ ಆಧುನಿಕ ಶಿಕ್ಷಣದ ಬೆಳವಣಿಗೆ ಮತ್ತು ಸಾಮಾಜಿಕ ಪರಿವರ್ತನೆ

ನಾಲ್ವಡಿಯವರು "ಶಿಕ್ಷಣವು ಎಲ್ಲಾ ಪ್ರಗತಿಯ ಮೂಲ"ವೆಂದು ತಮ್ಮ ಭಾಷಣದಲ್ಲಿ ಪ್ರತಿಪಾದಿಸಿದ್ದರು. ಹಾಗೆಯೇ "ಎಲ್ಲಾ ಆರ್ಥಿಕ ಮುಗ್ಗಟ್ಟಿಗೂ ಶಿಕ್ಷಣವೊಂದೇ ಮದ್ದು"[503] ಎಂದು ಪ್ರತಿಪಾದಿಸುತ್ತಾ ಶಿಕ್ಷಣ ಒದಗಿಸುವ ಮೂಲಕ ಜನರಲ್ಲಿ ಮನೆ ಮಾಡಿರುವ "ಬಡತನದ ತೀವ್ರತೆ, ಅಜ್ಞಾನ ಮತ್ತು ಅಪೌಷ್ಠಿಕತೆ"[504]ಗಳನ್ನು ಹೋಗಲಾಡಿಸಿ ಸ್ವಾಸ್ಥ್ಯ ಸದೃಢ ಸಮಾಜವನ್ನು ನಿರ್ಮಿಸಬೇಕೆಂಬುದು ನಾಲ್ವಡಿಯವರ ಶಿಕ್ಷಣದ ಬೆಳವಣಿಗೆಯ ಮೂಲ ಉದ್ದೇಶವಾಗಿತ್ತು. ಮೈಸೂರಿನಲ್ಲಿ ಆರಂಭಗೊಂಡ ಆಧುನಿಕ ಶಿಕ್ಷಣ ಮತ್ತು ಅದರ ಪ್ರತಿಫಲಗಳು ಪ್ರಾದೇಶಿಕವಾಗಿ, ಜಾತಿವಾರು ಅಸಮತೋಲನವಾಗಿ ಹಂಚಲ್ಪಟ್ಟಿದ್ದವು. ಸೌಲಭ್ಯಗಳನ್ನು ಹೊಂದದ ವರ್ಗಗಳು ಅತೃಪ್ತಿಗೊಂಡು, ಸಂಘಟಿತರಾಗಿ ಸರ್ಕಾರದ ಮುಂದೆ ತಮ್ಮ ಬೇಡಿಕೆಯನ್ನು ಇಡಲಾರಂಭಿಸಿದವು. ಪಾಶ್ಚಿಮಾತ್ಯ ಚಿಂತನೆಗಳು, ಪ್ರಜಾಸತ್ತಾತ್ಮಕ ಅಂಶಗಳಿಂದಾಗಿ ಜಾಗೃತಗೊಂಡ ಸಮಾಜ ಶಿಕ್ಷಣವನ್ನು ಪಡೆಯುವುದು ತಮ್ಮ "ಸಾಮಾಜಿಕ ಹಕ್ಕು" ಎಂದು ನೋಡಲಾರಂಭಿಸಿದರು. ಇಲ್ಲಿಯವರೆಗೂ ಆಧುನಿಕ ಶಿಕ್ಷಣ ಮತ್ತು ಅದರ ಸವಲತ್ತುಗಳಿಂದ ದೂರವಿದ್ದ ಜನ ಸಮುದಾಯಗಳು ಆಧುನಿಕ ಶಿಕ್ಷಣ ಪಡೆದು ಪೈಪೋಟಿಗಿಳಿದಾಗ ಸಾಮಾಜಿಕ ಸಂಘರ್ಷಗಳುಂಟಾದವು. ಆಧುನಿಕ ರಾಜ್ಯಾಡಳಿತ ವ್ಯವಸ್ಥೆಯಲ್ಲಿ 'ಸಾಮಾಜಿಕ ನ್ಯಾಯ' ಒದಗಿಸುವ ಮೂಲಕ ಕಲ್ಯಾಣ ರಾಜ್ಯವನ್ನು ರೂಪಿಸುವುದು ಆದರ್ಶ ವ್ಯವಸ್ಥೆಯೆನಿಸಿತು. ಇಂತಹ ಸ್ಥಿತ್ಯಂತರ ಪರಿಸ್ಥಿತಿಯಲ್ಲಿ ನಾಲ್ವಡಿಯವರು 'ಸಾಮಾಜಿಕ ನ್ಯಾಯ' ವನ್ನು ಒದಗಿಸಬೇಕೆಂದರೆ ಶಿಕ್ಷಣದಿಂದ ವಂಚಿತರಾಗಿದ್ದ ಬ್ರಾಹ್ಮಣೇತರರು, ಸ್ತ್ರೀಯರು, ಅಸ್ಪೃಶ್ಯರು ಮುಂತಾದವರಿಗೆ ಶಿಕ್ಷಣವು ದೊರಕುವಂತೆ ಮಾಡುವುದು ಅವಶ್ಯವಾಯಿತು. ಶಿಕ್ಷಣವನ್ನು ಆ ಮೂಲಕ ಬಹುಸಂಖ್ಯಾತರಿಗೆ ಒದಗಿಸಿದ್ದೇ ಒಂದು ಬಹುದೊಡ್ಡ ಸಾಮಾಜಿಕ ಪರಿವರ್ತನೆ ಎಂದೇಳಬಹುದು. ಶಿಕ್ಷಣವನ್ನು ಸಾರ್ವತ್ರಿಕಗೊಳಿಸಿದ್ದು ಮೈಸೂರಿನ ಸಾಮಾಜಿಕ ಪರಿವರ್ತನಾ ಪ್ರಕ್ರಿಯೆಯನ್ನು ತೀವ್ರಗೊಳಿಸಿತೆಂದೇಳಬಹುದು. ನಾಲ್ವಡಿಯವರು ಸಾರ್ವತ್ರಿಕ ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಎಂಬ ಹಿನ್ನೆಲೆಯಲ್ಲಿ ಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹ ಮತ್ತು ಬೆಳವಣಿಗೆ ಹಾಗೂ ಆ ಮೂಲಕ ಆದ ಸಾಮಾಜಿಕ

---

503. *ಸ್ಪೀಚಸ್ ಬೈ ಹಿಸ್ ಹೈನೆಸ್., ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹಾದೂರ್, 1902-1933, ಮೈಸೂರ್ ಗವರ್ನ್‌ಮೆಂಟ್, ಮೈಸೂರು, 1934, ಪು. 107*

504. *ಅದೇ., ಪು. 89*

ಪರಿವರ್ತನೆ ಇವುಗಳನ್ನು ಗುರುತಿಸುವುದು ಈ ಶೀರ್ಷಿಕೆಯಡಿಯ ಅಧ್ಯಯನದ ಉದ್ದೇಶವಾಗಿದೆ. ಈ ಅಧ್ಯಯನದ ಅನುಕೂಲಕ್ಕಾಗಿ ಮತ್ತು ಶಿಕ್ಷಣದ ಬೆಳವಣಿಗೆಯನ್ನು, ಬೆಳೆದು ಬಂದ ಹಾದಿಯನ್ನು ಗುರಿಯಾಗಿಟ್ಟುಕೊಂಡು ಕೆಲವು ಉಪ ಶೀರ್ಷಿಕೆಗಳನ್ನು ಮಾಡಿಕೊಳ್ಳಲಾಗಿದೆ. ಅವುಗಳೆಂದರೆ ;

*i) ಪ್ರಾಥಮಿಕ ಶಿಕ್ಷಣ*

*ii) ಪ್ರೌಢ ಶಿಕ್ಷಣ*

*iii) ಉನ್ನತ ಶಿಕ್ಷಣ (ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ)*

*iv) ಮಹಿಳಾ ಶಿಕ್ಷಣ*

*v) ಹಿಂದುಳಿದ ವರ್ಗಗಳಿಗೆ ಶಿಕ್ಷಣ ಮತ್ತು ಸರ್ಕಾರಿ ಹುದ್ದೆ*

*vi) ಪಂಚಮರಿಗೆ ಶಿಕ್ಷಣ*

*vii) ನಾಲ್ವಡಿ ಮತ್ತು ಪರಿಪೂರ್ಣ ಶಿಕ್ಷಣ*

### *i) ಪ್ರಾಥಮಿಕ ಶಿಕ್ಷಣ*

ಮೈಸೂರು ಸರ್ಕಾರವು 1870ರ ದಶಕದಲ್ಲೇ ಹೋಬಳಿ ಸ್ಕೂಲ್ ಪದ್ಧತಿಯನ್ನು ಅಳವಡಿಸುವ ಮೂಲಕ ಪ್ರಾಥಮಿಕ ಶಿಕ್ಷಣವನ್ನು ಪ್ರಸರಿಸಲು ಕ್ರಮ ಕೈಗೊಂಡಿತ್ತು. ಆದರೂ ನಾಲ್ವಡಿಯವರು 1911ರ ಜೂನ್‌ನಲ್ಲಿ ಎಕನಾಮಿಕ್ ಕಾನ್ಫರೆನ್ಸ್ ಉದ್ಘಾಟಿಸುತ್ತಾ "ಎಲ್ಲಾ ಆರ್ಥಿಕ ಮುಗ್ಗಟ್ಟಿಗೂ ಶಿಕ್ಷಣವೊಂದೇ ಮದ್ದು" ಎಂದು ಪ್ರತಿಪಾದಿಸುತ್ತಾ ಆ ಕಾಲದಲ್ಲಿ ಓದು ಬರಹ ಬಲ್ಲವರನ್ನು ಕುರಿತಂತೆ ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಮೈಸೂರನ್ನು ತುಲನೆ ಮಾಡುತ್ತಾ ಈ ರೀತಿ ಹೇಳಿದ್ದಾರೆ. "ಓದಲು, ಬರೆಯಲು ಬರುವವರು ಒಟ್ಟು ಜನಸಂಖ್ಯೆಯ ಶೇ. 90ರಷ್ಟು ಬ್ರಿಟನ್ ಮತ್ತು ಜರ್ಮನಿಗಳಲ್ಲಿದ್ದು, ಜಪಾನ್‌ನಲ್ಲಿ ಅವರ ಪ್ರಮಾಣ ಶೇ 80ರಷ್ಟಿದೆ. ಅದೇ ಮೈಸೂರಿನಲ್ಲಿ ಶೇ. 5 ಮಾತ್ರ."[505] ಮೇಲಿನ ನಾಲ್ವಡಿಯವರ ತುಲನೆಯು ಮೈಸೂರು ಪ್ರಾಥಮಿಕ ಶಿಕ್ಷಣದಲ್ಲಿ ಎಷ್ಟು ಹಿಂದುಳಿದಿತ್ತೆಂಬುದನ್ನು ತಿಳಿಸುತ್ತದೆ ಹಾಗೂ 1870ರಿಂದ 1911ರವರೆಗೂ ಶೇ 5 ಜನಸಂಖ್ಯೆಯನ್ನು ಮಾತ್ರ ಶಿಕ್ಷಣ ತಲುಪಿತ್ತು ಎಂಬುದನ್ನು ತಿಳಿಸುತ್ತದೆ.

ಪ್ರಾಥಮಿಕ ಶಿಕ್ಷಣವನ್ನು 1894-95ರಿಂದಲೇ ದೇಶೀಯ ಶಾಲೆಗಳ ಮೂಲಕ ವಿಸ್ತರಿಸಲು ಅನೇಕ

---

*505. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 88*

*506. ದಿ ಎಜುಕೇಷನ್ ಮ್ಯಾನ್ಯುಯಲ್, 1916, ಪು. 6*

ಯೋಜನೆಗಳನ್ನು ಮತ್ತು ಸುಲಭವಾಗಿ ಅರ್ಥವಾಗುವ ವಿಶೇಷ ಪಠ್ಯಕ್ರಮಗಳನ್ನು ಅಳವಡಿಸಲಾಯಿತು[506]. 1900ರ ನಂತರ ಜಾಗೃತಗೊಂಡ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಪ್ರಾಥಮಿಕ ಶಿಕ್ಷಣ, ಸ್ತ್ರೀಶಿಕ್ಷಣ ಮತ್ತು ವಯಸ್ಕರ ಶಿಕ್ಷಣಕ್ಕಾಗಿ ಸರ್ಕಾರದ ಮುಂದೆ ಬೇಡಿಕೆಗಳನ್ನು ತರಲಾರಂಭಿಸಿದರು. ಅದೇ ಸಭೆಯು 1901ರಲ್ಲಿ ಶಿಕ್ಷಣವನ್ನು ಕಡ್ಡಾಯಗೊಳಿಸಬೇಕೆಂದು ಬೇಡಿಕೆ ಸಲ್ಲಿಸಿತು[507]. ಮತ್ತೆ 1904-05ರಲ್ಲಿ ಸದಸ್ಯರು ರಾಜ್ಯದಲ್ಲಿ ಕಡ್ಡಾಯ ಶಿಕ್ಷಣ ನೀತಿಯನ್ನು ಅಳವಡಿಸಬೇಕೆಂದು, ಅಂತಹ ನೀತಿಯನ್ನು ಜಾರಿಗೆ ತಂದಿರುವ ಬರೋಡಾ ರಾಜ್ಯವನ್ನು ಅನುಸರಿಸಬೇಕೆಂದು ಒತ್ತಾಯಿಸಿದರು. ಅವರ ಮತ್ತೊಂದು ಬೇಡಿಕೆಯೆಂದರೆ ಶಿಕ್ಷಣವು ಉಚಿತ ಹಾಗೂ ಕಡ್ಡಾಯವಾಗ ಬೇಕೆಂಬುದಾಗಿತ್ತು. ಹಾಗೆಯೇ ಗ್ರಾಮೀಣ ಯುವಕರಿಗೆ ಕಡ್ಡಾಯವಾಗಿ ಪ್ರಾಥಮಿಕ ಹಂತದವರೆಗೆ ಓದುವ, ಬರೆಯುವ ಮತ್ತು ಅಂಕಗಣಿತಗಳನ್ನು ಕಲಿಸುವ ವ್ಯವಸ್ಥೆಯಾಗಬೇಕೆಂದು ಒತ್ತಾಯಿಸಿದರು[508].

ಮೈಸೂರು ರಾಜ್ಯವು 1905-06ರಲ್ಲಿ ಬರೋಡಾವು ಜಾರಿಗೆ ತಂದ ಕಡ್ಡಾಯ ಶಿಕ್ಷಣ ಕಾಯ್ದೆಯ ಬೆಳವಣಿಗೆಯನ್ನು ಪರಾಮರ್ಶಿಸಲು ಶಿಕ್ಷಣ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ ಮಿ. ಬಾಬಾರವರನ್ನು 1909ರಲ್ಲಿ ಬರೋಡಾಕ್ಕೆ ಕಳುಹಿಸಿತು. ಬರೋಡಾದಿಂದ ಹಿಂದಿರುಗಿದ ಮಿ. ಬಾಬಾ ಕಾಯ್ದೆ ಮತ್ತು ಅದರ ಬೆಳವಣಿಗೆಯನ್ನು ಕುರಿತು ವರದಿ ನೀಡಿದರು[509]. ಮೈಸೂರು ಸರ್ಕಾರವು ರಾಜ್ಯದ ಶೈಕ್ಷಣಿಕ ಸ್ಥಿತಿಗತಿಗಳನ್ನು ಪರಾಮರ್ಶಿಸಲು 1911-12ರಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಸಮಿತಿಯು ಶಾಲೆಗಳಿಗೆ ಹಾಜರಾಗುವ ಮೈಸೂರಿನ ವಿದ್ಯಾರ್ಥಿಗಳ ಶೇಕಡಾವಾರು ಪ್ರಮಾಣ ಶೇ. 2.42 ಇದ್ದು ಅದು ಒಟ್ಟಾರೆ ಭಾರತದ ಪ್ರಮಾಣ ಶೇ. 2.49ಕ್ಕಿಂತ ಕಡಿಮೆಯಿದೆ ಎಂದೂ ತಿಳಿಸಿತು. ಅಲ್ಲದೆ ರಾಜ್ಯದ ಗುರಿ ಅಶಿಕ್ಷಿತರ ಪ್ರಮಾಣವನ್ನು ತಗ್ಗಿಸುವುದು ಮಾತ್ರವಾಗಿರದೆ ಪ್ರಾಥಮಿಕ ಶಿಕ್ಷಣವನ್ನು ಸರ್ವರಿಗೂ ವಿಸ್ತರಿಸಬೇಕು. ಆ ಮೂಲಕ ವ್ಯಕ್ತಿಗಳ ದುಡಿಮೆಯ ಶಕ್ತಿಯನ್ನು ಹೆಚ್ಚಿಸಬೇಕೆಂದು ವರದಿಯಲ್ಲಿ ತಿಳಿಸಿತು[510]. ವರದಿಯನ್ನು ಅನುಮೋದಿಸಿದ ಸರ್ಕಾರವು 1913ರಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ನು ಜಾರಿಗೊಳಿಸಿತು[511]. ಬರೋಡಾ ಸಂಸ್ಥಾನದ ನಂತರ ಕಡ್ಡಾಯ ಶಿಕ್ಷಣವನ್ನು ಆರಂಭಿಸಿದ ದೇಶೀಯ ಸಂಸ್ಥಾನಗಳಲ್ಲಿ ಮೈಸೂರು ಎರಡನೆಯದು. ಈ ಕಾಯ್ದೆಯು ಪ್ರಾಥಮಿಕ ಶಿಕ್ಷಣವನ್ನು ಎಲ್ಲರಿಗೂ ಉಚಿತವೆಂದು ಘೋಷಿಸಿತು. ಸರ್ಕಾರವು ಈ ಕಾಯ್ದೆಯ ಮೂಲಕ ಶಾಲೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಮಂಜೂರು ಮಾಡಲು, ಕಟ್ಟಡಗಳನ್ನು ನಿರ್ಮಿಸಲು ಮತ್ತು ಶಿಕ್ಷಣವನ್ನು ಕಡ್ಡಾಯಗೊಳಿಸುವ ಅಧಿಕಾರ ಹೊಂದಿತು. ಹೊಸ ಅನುದಾನ ಸಂಹಿತೆ ರಚಿತವಾಗಿ ಅನುದಾನ ಪಡೆವ ಶಾಲೆಗಳ ನಿರ್ವಹಣಾ ಹೊಣೆಯನ್ನು ಶಾಲಾ ಸಮಿತಿಗಳಿಗೆ ವಹಿಸಲಾಯಿತು. ಖಾಸಗಿ ಶಾಲೆಗಳ

---

507. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸಂಟೇಟಿವ್ ಅಸೆಂಬ್ಲಿ, 1901*

508. *ಅದೇ., 1905, ಪು. 55*

509 *ದಿ ಮೈಸೂರ್ ಎಜುಕೇಷನ್ ಕ್ವಿಂಕೇನಿಯಲ್ ರಿಪೋರ್ಟ್, 1911-16, ಪು. 51*

510. *ರಿಪೋರ್ಟ್ ಆಫ್ ದಿ ಕಮಿಟಿ ಟು ದಿ ಗವರ್ನಮೆಂಟ್ ಆನ್ ದಿ ಪ್ರಾಬ್ಲಮ್ಸ್ ಆಫ್ ಎಲಿಮೆಂಟರಿ ಎಜುಕೇಷನ್, 1911-12, ಪು. 6*

511. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್, ಸೀರಿಸ್, V, ಎಜುಕೇಷನ್, ಪಾರ್ಟ್-1, 1917, ಪು. 81*

ಶಿಕ್ಷಕರ ವೇತನವನ್ನು ತಿಂಗಳಿಗೆ 4ರೂಪಾಯಿಗಳಿಂದ 5 ರಿಂದ 7ರೂಪಾಯಿಗಳಿಗೆ ಹೆಚ್ಚಿಸಲಾಯಿತು. ವಾರ್ಷಿಕ ವೇತನಕ್ಕೆ ಬದಲು ಮಾಸಿಕ ವೇತನ ಪದ್ಧತಿ ಜಾರಿಗೆ ತರಲಾಯಿತು. ಹೊಸ ಶಾಲೆಗಳನ್ನು ತೆರೆಯಲು ಹಿಂದಿನ ನಿಯಮದಂತೆ ಕನಿಷ್ಠ 25 ವಿದ್ಯಾರ್ಥಿಗಳಿರಬೇಕಿತ್ತು. ಆದರೆ ಈ ಕಾಯ್ದೆಯು ನಿಯಮವನ್ನು ಸಡಿಲಿಸಿ ಕನಿಷ್ಠ 15 ವಿದ್ಯಾರ್ಥಿಗಳಿದ್ದರೂ ಶಾಲೆ ತೆರೆಯಲು ಅವಕಾಶ ಒದಗಿಸಿತು. ಲೋಯರ್ ಸೆಕೆಂಡರಿಯಲ್ಲಿ ಉತ್ತೀರ್ಣರಾದ ಅಭ್ಯರ್ಥಿಗಳನ್ನು ಮಾತ್ರ ಶಿಕ್ಷಕರನ್ನಾಗಿ ಆಯ್ಕೆ ಮಾಡಲಾಗುತ್ತಿತ್ತು[512].

ಅನುದಾನ ಪಡೆವ ಶಾಲೆಗಳ ಸಮಿತಿಯವರು ಗ್ರಾಮಸ್ಥರಿಂದ ಹಣ ಅಥವಾ ಧಾನ್ಯದ ರೂಪದಲ್ಲಿ ವಾರ್ಷಿಕ ವಂತಿಗೆಯನ್ನು ಸಂಗ್ರಹಿಸುತ್ತಿದ್ದರು. ಈ ಯೋಜನೆ ಪ್ರಸಿದ್ಧಿಯಾಗಿ ರಾಜ್ಯದಾದ್ಯಂತ ಶಾಲೆಗಳಿಗೆ ಬೇಡಿಕೆ ಬಂದವು. ಸರ್ಕಾರವು 1914ರಲ್ಲಿ ಒಂದು ಸಾವಿರ ಅನುದಾನಿತ ಶಾಲೆಗಳಿಗೆ ಮಂಜೂರಾತಿ ನೀಡಿತು. ಯಶಸ್ವಿಗೊಂಡ ಅನುದಾನಿತ ಶಾಲೆಗಳನ್ನು ಸರ್ಕಾರಿ ಶಾಲೆಗಳನ್ನಾಗಿ ಪರಿವರ್ತಿಸಲು ಸರ್ಕಾರ ನಿರ್ಧರಿಸಿತು. ಶಿಕ್ಷಣಕ್ಕಾಗಿ ಸರ್ಕಾರ ಹೆಚ್ಚು ಸಂಪನ್ಮೂಲವನ್ನು ವಿನಿಯೋಗಿಸಲು ಮುಂದಾದ್ದರಿಂದ ಪ್ರಾಥಮಿಕ ಶಾಲೆಗಳು ಗ್ರಾಮಗಳಲ್ಲೂ ಸ್ಥಾಪನೆಯಾದವು[513]. ನಾಲ್ವಡಿಯವರು 1913ರ ತಮ್ಮ ಭಾಷಣದಲ್ಲಿ "ಎಲ್ಲಾ ಪ್ರಗತಿಯ ಮೂಲವಾದ ಶಿಕ್ಷಣ ತನಗನುಗುಣವಾದ ಗಮನ ಪಡೆಯುತ್ತಿದೆ. ಪ್ರಾಥಮಿಕ ಶಾಲೆ ಮತ್ತು ಶೈಕ್ಷಣಿಕ ಕಟ್ಟಡಗಳಿಗೆ ಅನುದಾನವನ್ನು ಸಾಕಷ್ಟು ಹೆಚ್ಚಿಸಿದ್ದೇವೆ. ಆಯ್ದ ಪ್ರದೇಶಗಳಲ್ಲಿ ಕಡ್ಡಾಯ ಶಿಕ್ಷಣ ಕಾನೂನು ರೀತಿ ಜಾರಿಗೆ ಬರುವಂತೆ ಕಾಯ್ದೆಯನ್ನು ಅನುಮೋದಿಸಿದ್ದೇವೆ. ಪ್ರಾಥಮಿಕ ಶಿಕ್ಷಣದ ವಿಸ್ತರಣೆ, ಸೂಕ್ತ ತರಬೇತಿ ಪಡೆದ ಉಪಾಧ್ಯಾಯರು ನಮ್ಮ ಅಗತ್ಯ ಬೇಡಿಕೆಗಳಾಗಿವೆ" ಎಂದು ಕಡ್ಡಾಯ ಶಿಕ್ಷಣ ಕಾಯ್ದೆ ಹಾಗೂ ಪ್ರಾಥಮಿಕ ಶಿಕ್ಷಣದ ಮಹತ್ವವನ್ನು ಪ್ರತಿಪಾದಿಸಿದರು[514]. ಸರ್ಕಾರ ಹಾಗೂ ಜನತೆ ಒಗ್ಗೂಡಿ ಈ ಯೋಜನೆಗೆ ಆಸಕ್ತಿ ತೋರಿದ್ದರಿಂದ 1911-12ರಲ್ಲಿ ಸರ್ಕಾರಿ ಮತ್ತು ಖಾಸಗಿ ಶಾಲೆಗಳ ಒಟ್ಟು ಸಂಖ್ಯೆ 4,568 ಇದ್ದುದು 1917-18ರ ವೇಳೆಗೆ 11,294ಕ್ಕೆ ಏರಿತು. ಹಾಗೆಯೇ 1910-11ರಲ್ಲಿ ಶಾಲೆಗೆ ಹಾಜರಾಗುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ 1,38,153 ಇದ್ದುದು 1917-18ರ ವೇಳೆಗೆ 3,66,856 ರಷ್ಟಾಯಿತು. ಶಿಕ್ಷಣದ ಮೇಲಿನ ವಿನಿಯೋಗವೂ ಸಹ 1911-12ರಲ್ಲಿ 3,77,594 ರೂಪಾಯಿಗಳಿದ್ದುದು 1915-16ರಲ್ಲಿ 6,37,812 ರೂಪಾಯಿಗಳಷ್ಟಾಯಿತು[515].

ಸರ್ಕಾರವು ಈ ಕಾಯ್ದೆಯನ್ನು ಆರಂಭದಲ್ಲಿ ನಗರಗಳು ಮತ್ತು ದೊಡ್ಡ ಪಟ್ಟಣಗಳಲ್ಲಿ ಮಾತ್ರ ಜಾರಿಗೆ

---

*512.* ***ಜಯಪ್ಪಗೌಡ ಡಿ.ಎಸ್.,*** *ಪೂರ್ವೋಕ್ತ ಪು. 96*

*513.* ***ಹಯವದನರಾವ್ ಸಿ. (ಸಂ).,*** *ಮೈಸೂರು ಗೆಜೆಟಿಯರ್, ಸಂ. 4, ಪು. 505*

*514.* ***ಸ್ಪೀಚಸ್ ಬೈ ಹಿಸ್ ಹೈನೆಸ್.,*** *ಪೂರ್ವೋಕ್ತ, ಪು. 107*

*515.* ***ರಿವ್ಯೂ ಆಫ್ ದಿ ಪ್ರೊಗ್ರೆಸ್ ಆಫ್ ಎಜುಕೇಷನ್ ಇನ್ ದಿ ಮೈಸೂರ್ ಸ್ಟೇಟ್,*** *(ಇನ್ನು ಮುಂದೆ ಆರ್.ವೈ.ಇ.ಎಂ. ಎಂದು ಬಳಸಲಾಗುವುದು), ಕ್ವಿನ್‌ಕ್ವೇನಿಯಂ, 1911-16, ಪು. 50*

*516.* ***ಸೂರ್ಯನಾಥ್ ಯು. ಕಾಮತ್.,*** *ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-3, ಪು. 12*

ತರಲು ನಿರ್ಧರಿಸಿತು. ಅದರಂತೆ 1915ರಲ್ಲಿ ಅಯ್ದು 15 ಕೇಂದ್ರಗಳಲ್ಲಿ ಕಡ್ಡಾಯ ಶಿಕ್ಷಣ ಜಾರಿಗೊಂಡಿದ್ದು 1921ರ ವೇಳೆಗೆ 240 ಕೇಂದ್ರಗಳಿಗೆ ವಿಸ್ತರಣೆಗೊಂಡಿತು[516]. ಈ ಕಾಯ್ದೆಯ ಪ್ರಭಾವದಿಂದ ಜನಸಾಮಾನ್ಯರಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿ ಬೆಳೆದು ಗ್ರಾಮಗ್ರಾಮಗಳಲ್ಲೂ ಶಾಲೆಗಳು ತೆರೆದು ಶಿಕ್ಷಣ ಗ್ರಾಮದತ್ತಲೂ ಪಸರಿಸುವಂತಾಯಿತು. ಶಾಲೆಗಳಲ್ಲಿ ಹಿಂದೆ ಬೋಧಿಸುತ್ತಿದ್ದ ಅಮರಕೋಶ, ಗಣಿತ ಮತ್ತು ನೀತಿಶಾಸ್ತ್ರಗಳ ಜೊತೆಗೆ ಇತಿಹಾಸ, ಭೂಗೋಳಶಾಸ್ತ್ರ ಮತ್ತು ವಿಜ್ಞಾನ ವಿಷಯಗಳನ್ನು ಬೋಧಿಸುವಂತಾಯಿತು[517]. ಕಡ್ಡಾಯ ಶಿಕ್ಷಣದ ಶಾಲೆಗಳನ್ನು ಸ್ಥಾಪಿಸಲು ಕೋರಿ ಹೆಚ್ಚು ಬೇಡಿಕೆಗಳು ಬರಲಾರಂಭಿಸಿದವು. ಆದರೆ ವಿಶ್ವೇಶ್ವರಯ್ಯನವರು ಹೇಳಿದಂತೆ "ಹಣದ ಅಭಾವ ಮತ್ತು ಶಿಕ್ಷಕರ ಕೊರತೆಯಿಂದಾಗಿಯಷ್ಟೇ ಇದರ ವಿಸ್ತರಣೆಯ ವೇಗ ಪರಿಮಿತಿಗೊಂಡಿತು."[518] 1919-20ರ ಆಯವ್ಯಯದಲ್ಲಿ ಕಡ್ಡಾಯ ಶಿಕ್ಷಣಕ್ಕೆ ನಿರ್ದಿಷ್ಟ ನಿಧಿಯನ್ನು ಎತ್ತಿಡಲಿಲ್ಲ. ಇದರೊಂದಿಗೆ ಈ ಯೋಜನೆಯು ಕುಂಟುತ್ತಾ ಸಾಗಿ ಕೊನೆಗೆ 1926 ರಲ್ಲಿ ಸರ್ಕಾರವು ಈ ಯೋಜನೆಯ ವಿಸ್ತರಣೆಯನ್ನು ನಿಲ್ಲಿಸಿ ಅದಕ್ಕೆ ಬದಲಾಗಿ ಇರುವ ಶಾಲೆಗಳನ್ನು ಉತ್ತಮಗೊಳಿಸಲು ಪ್ರಾಮುಖ್ಯತೆ ನೀಡಿತು[519]. ಒಟ್ಟಾರೆ ಪಾಶ್ಚಿಮಾತ್ಯ ದೇಶಗಳಲ್ಲಿದ್ದ ಕಡ್ಡಾಯ ಶಿಕ್ಷಣ ಹಾಗೂ ಶಿಕ್ಷಣವು 'ಸಾಮಾಜಿಕ ಹಕ್ಕು' ಎಂಬ ಪರಿಕಲ್ಪನೆಗಳನ್ನು ಮೈಸೂರು ರಾಜ್ಯವು ತನ್ನ ರಾಜ್ಯದ ಪ್ರಜೆಗಳಿಗೂ ವಿಸ್ತರಿಸಿದ ಕೀರ್ತಿಯನ್ನು ಪಡೆಯಿತು. ಈ ಯೋಜನೆಯ ವೈಫಲ್ಯಕ್ಕೆ ಕಾರಣ ಬಡತನ ಮತ್ತು ಅಜ್ಞಾನಗಳೇ ಆಗಿದ್ದವು. ನಾಲ್ವಡಿಯವರು ಈ ಯೋಜನೆಯ ಮೂಲಕ ಶಿಕ್ಷಣವನ್ನು ಗ್ರಾಮೀಣ ಪ್ರದೇಶ ಮತ್ತು ಜನಸಾಮಾನ್ಯರಿಗೂ ತಲುಪಿಸುವ ಮೂಲಕ ಶೈಕ್ಷಣಿಕ ಅಸಮಾನತೆಯನ್ನು ತಗ್ಗಿಸಲು ಪ್ರಯತ್ನಿಸಿದರು. ಕಡ್ಡಾಯ ಶಿಕ್ಷಣ ಯೋಜನೆಯು ವೈಫಲ್ಯಗೊಂಡರೂ ಸಹ ಜನರಲ್ಲಿ ಜಾಗೃತಿ ಹಾಗೂ ಸಾಮಾಜಿಕ ಪರಿವರ್ತನೆಯ ಮನೋಭಾವನೆಯ ಕಿಡಿಯನ್ನು ಹರಡುವಲ್ಲಿ ಪ್ರಮುಖ ಪಾತ್ರ ವಹಿಸಿತು.

1913ರ ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯ್ದೆ ಹಾಗೂ ಯೋಜನೆ ವೈಫಲ್ಯತೆಯಲ್ಲಿ ಕೊನೆಗೊಂಡಾಗ ಪ್ರಜಾಪ್ರತಿನಿಧಿ ಸದಸ್ಯರು ಮತ್ತು ಜನತೆಯಿಂದ ಮತ್ತೊಂದು ಕಾಯ್ದೆಯನ್ನು ಜಾರಿಗೆ ತರಬೇಕೆಂಬ ಬೇಡಿಕೆ ಬಂದಿತು. ಸರ್ಕಾರವು ಒಪ್ಪಿ 1930ರಲ್ಲಿ ಮತ್ತೊಂದು ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ನು ಜಾರಿಗೆ ತಂದಿತು. ಈ ಕಾಯ್ದೆಯ ಪ್ರಕಾರ ಪ್ರಾಥಮಿಕ ಶಾಲೆಗಳ ನಿರ್ವಹಣೆ ಸ್ಥಳೀಯ ಸಂಸ್ಥೆಗಳಿಗೊಳಪಟ್ಟಿತು. ಶಿಕ್ಷಣ ಸೌಲಭ್ಯಗಳನ್ನು ಹತ್ತು ವರ್ಷಗಳಲ್ಲಿ ಒದಗಿಸಿ ಆ ನಂತರ ಅಂತ್ಯದಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಲಾಗುವುದೆಂದು ಕಾಯ್ದೆಯಲ್ಲಿ ತಿಳಿಸಲಾಗಿತ್ತು.

---

*517. **ದಿ ಮೈಸೂರ್ ಬ್ಲೂ ಬುಕ್ ಜರ್ನಲ್ (1918-19)**, ಸಂ. 3, ಸಂಖ್ಯೆ 4, ಪು. 59*

*518. **ವಿಶ್ವೇಶ್ವರಯ್ಯ ಎಂ.**, ಸ್ಪೀಚಸ್, ಪು. 376*

*519. **ಸೂರ್ಯನಾಥ್ ಯು. ಕಾಮತ್.**, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-3, ಪು. 12*

ಅದರಂತೆ ಎಲ್ಲ ಪ್ರಾಥಮಿಕ ಶಾಲೆಗಳ ನಿರ್ವಹಣೆ, ವಿಸ್ತರಣೆಯ ಅಧಿಕಾರವನ್ನು ಎಂಟು ಜಿಲ್ಲಾ ಬೋರ್ಡ್‌ಗಳು ಮತ್ತು ನಾಲ್ಕು ಮುನಿಸಿಪಾಲಿಟಿಗಳಿಗೆ ವಹಿಸಲಾಯಿತು. ಈ ಸ್ಥಳೀಯ ಸಂಸ್ಥೆಗಳಿಗೆ ಶೈಕ್ಷಣಿಕ ತೆರಿಗೆಯನ್ನು ವಸೂಲಿ ಮಾಡುವ ಅಧಿಕಾರವನ್ನು ಒದಗಿಸಲಾಯಿತು.

ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಸಹಕಾರ ನೀಡಿದ ತುಮಕೂರು ಜಿಲ್ಲಾ ಬೋರ್ಡ್ ಮತ್ತು ಅದರ ಕಾರ್ಯಗಳನ್ನು ಪ್ರಶಂಸಿಸಿ ನಾಲ್ವಡಿಯವರು "ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವ ಕಾರ್ಯವನ್ನು ಸ್ವಯಂ ಮನೋಭಾವದಿಂದ ಕೈಗೊಂಡಿರುವುದು ಮತ್ತು 10 ಫರ್ಲಾಂಗ್ ದೂರದೊಳಗಿನ ವಸತಿನೆಲೆ ವ್ಯಾಪ್ತಿಯಲ್ಲೊಂದು ಶಾಲೆಯನ್ನು ತೆರೆಯಲು ಇಚ್ಛಿಸಿರುವುದು ಮತ್ತು ಸಹಕಾರ ಮಂತ್ರವನ್ನು ಜಿಲ್ಲಾ ಕೇಂದ್ರದಲ್ಲಿ ಹರಡಿ ಪ್ರತಿ ಹತ್ತು ನಿವಾಸಿಗಳಿರುವ ಸ್ಥಳದಿಂದ ಒಬ್ಬ ಸಹಾಯಕನನ್ನು ಗೊತ್ತುಮಾಡಿರುವುದು ಸಂತೋಷಕರ"[520]. ಎಂದು ಪ್ರೋತ್ಸಾಹಿಸಿದರು. ನಾಲ್ವಡಿಯವರು "ಗ್ರಾಮಾಂತರ ಪಾಠಶಾಲೆಗಳಿಗೆ ಹೋಗಿ ಮಕ್ಕಳೊಡನೆ ಮಾತನಾಡಿ ಮಕ್ಕಳನ್ನು ನೋಡಿಕೊಂಡು ಬರುತ್ತಿದ್ದರು". 1938ನೇ ಇಸವಿ ಜುಲೈ ತಿಂಗಳ 18 ರಂದು ಹಾಸನದ ಬಳಿಯ ಹನುಮಂತಪುರವೆಂಬ ಗ್ರಾಮದ ಪಾಠಶಾಲೆಗೆ ಹೋಗಿ ಅಲ್ಲಿಯ ಪರಿಸ್ಥಿತಿಯನ್ನು ಪರಿಶೀಲಿಸಿ, ಉಪಾಧ್ಯಾಯರಿಂದ ಮಾದರಿ ಪಾಠ ಮಾಡಿಸಿ ಹಿಂದಿರುಗಿದರು[521]. ನಾಲ್ವಡಿಯವರು ತಮ್ಮ ರಾಜ್ಯದ ಪ್ರವಾಸದ ಸಂದರ್ಭದಲ್ಲಿ, ಹೀಗೆ ದಿಢೀರನೆ ಶಾಲೆಗಳಿಗೆ ಭೇಟಿ ನೀಡಿ ಅವುಗಳ ಬೆಳವಣಿಗೆಗೆ ಸಲಹೆ, ಸೂಚನೆ, ನೆರವು ನೀಡುವ ಮೂಲಕವೂ ಶಿಕ್ಷಣದ ಬೆಳವಣಿಗೆಗೆ ನೆರವಾದರು. ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಅಧಿಕಾರ ವಿಕೇಂದ್ರೀಕರಣ ನೀತಿಯನ್ನು ಅನುಸರಿಸಿದ್ದು ಅತ್ಯಂತ ಪ್ರಗತಿಪರ ಚಿಂತನೆಯಾಗಿತ್ತು. ಆದರೆ ಸ್ಥಳೀಯ ಸಂಸ್ಥೆಗಳು ಹಣಕಾಸಿನ ಅಭಾವದಿಂದ ನಲುಗುತ್ತಿದ್ದು ಈ ಶಾಲೆಗಳನ್ನು ನಿರ್ವಹಿಸದಾದವು. ಸರ್ಕಾರವು ಹಣಕಾಸಿನ ನೆರವು ನೀಡುವ ಭರವಸೆಯನ್ನು ಉಳಿಸಿಕೊಳ್ಳಲಾಗಲಿಲ್ಲ[522]. 1937ರಲ್ಲಿ ದಿವಾನರಾದ ಮಿರ್ಜಾ ಇಸ್ಮಾಯಿಲ್‌ರವರು ಪ್ರಜಾಪ್ರತಿನಿಧಿ ಸಭೆಯಲ್ಲಿ "ಪ್ರಾಥಮಿಕ ಶಾಲೆಗಳ ನಿರ್ವಹಣಾ ಅಧಿಕಾರವನ್ನು 1930ರಲ್ಲಿ ಸ್ಥಳೀಯ ಸಂಸ್ಥೆಗಳಿಗೆ ವಹಿಸಿದ್ದರಿಂದ ಅವು ಹಣಕಾಸಿನ ಅಭಾವದಿಂದಾಗಿ ಯೋಜನೆಯನ್ನು ವಿಸ್ತರಿಸಲಾಗಲಿಲ್ಲ. ಆದ್ದರಿಂದ ಈ ಯೋಜನೆಯ ಬಗ್ಗೆ ತನಿಖೆ ಮಾಡಲು ಮತ್ತು ಆದಾಯದ ಮೂಲಗಳನ್ನು ಗುರುತಿಸಲು ಹಾಗೂ ಅವುಗಳನ್ನು ಸದುಪಯೋಗ ಪಡಿಸಿಕೊಳ್ಳುವ ಮಾರ್ಗಗಳನ್ನು ತಿಳಿಸುವಂತೆ ಸಮಿತಿಯೊಂದನ್ನು ನೇಮಿಸಲಾಗಿದೆ"[523] ಎಂದು ತಿಳಿಸಿದರು. ಅದರಂತೆ ನೇಮಕಗೊಂಡ ಸಮಿತಿಯು 1938ರಲ್ಲಿ ಪ್ರಾಥಮಿಕ ಶಿಕ್ಷಣದ ಸಮೀಕ್ಷೆಯನ್ನು ನಡೆಸಿ ಒಂದು ಯೋಜನೆಯ ಬಗ್ಗೆ ಸಲಹೆ ನೀಡಿತು. ಅದೆಂದರೆ ಸರ್ಕಾರವು ನಾಲ್ಕು ವರ್ಷಗಳ

---

*520. ಸ್ಪೀಚಸ್ ಬೈ ಹಿಸ್ ಹೈನೆಸ್., ಪು. 309*

*521. ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು. 530*

*522. ರಿಪೋರ್ಟ್ ಆನ್ ದಿ ಕಮಿಟಿ ಫಾರ್ ಎಜುಕೇಷನಲ್ ರಿಫಾರ್ಮ್ ಇನ್ ಮೈಸೂರ್, ಪು. 21-22*

*523. ಮಿರ್ಜಾ ಇಸ್ಮಾಯಿಲ್., ಸಂಪುಟ - III, 1937-38, ಪು. 182*

*524. ರಿಪೋರ್ಟ್ ಆನ್ ದಿ ಕಮಿಟಿ ಫಾರ್ ಎಜುಕೇಷನಲ್ ರಿಫಾರ್ಮ್ ಇನ್ ಮೈಸೂರ್, ಪು. 21-22*

ಅವಧಿಯಲ್ಲಿ ಒಂದು ಸಾವಿರ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಬೇಕು, ದೊಡ್ಡ ಗ್ರಾಮಗಳಲ್ಲಿ ಇಬ್ಬರು ಶಿಕ್ಷಕರ ಶಾಲೆಗಳನ್ನು, ಚಿಕ್ಕಗ್ರಾಮಗಳಲ್ಲಿ ಏಕ ಶಿಕ್ಷಕರ ಶಾಲೆಗಳನ್ನು ಸ್ಥಾಪಿಸಬೇಕೆಂದು ತಿಳಿಸಿತು. ವೆಚ್ಚವನ್ನು ಸರ್ಕಾರವು ಅರ್ಧ ಮತ್ತು ಸ್ಥಳೀಯ ಸಂಸ್ಥೆಗಳು ಅರ್ಧ ಭರಿಸಬೇಕೆಂದು ಸಮಿತಿ ಸಲಹೆ ನೀಡಿತು[524]. ಸರ್ಕಾರ ಸಮಿತಿಯ ಸಲಹೆಗಳನ್ನು ಗಂಭೀರವಾಗಿ ಪರಿಗಣಿಸಲಿಲ್ಲ[525]. ಅದೇ ವೇಳೆಗೆ ಹಾರ್ಟಾಗ್ ಸಮಿತಿಯು ಸಾರ್ವತ್ರಿಕ ಶಿಕ್ಷಣವು ರಾಜ್ಯದ ಕರ್ತವ್ಯವಾಗಬೇಕೆಂದು ಅಭಿಪ್ರಾಯಪಟ್ಟಿತು[526]. ಮೈಸೂರು ಸರ್ಕಾರವು ಪ್ರಾಥಮಿಕ ಶಾಲೆಗಳ ಮೇಲೆ ಹತೋಟಿ ಪಡೆಯಲು 1941ರಲ್ಲಿ ಪ್ರಾಥಮಿಕ ಶಿಕ್ಷಣ ಕಾಯ್ದೆಯೊಂದನ್ನು ಜಾರಿಗೊಳಿಸಿತು[527]. ಈ ಕಾಯ್ದೆಯ ಪ್ರಕಾರ ಮೈದಾನ ಪ್ರದೇಶದಲ್ಲಿ 500, ಮತ್ತು ಮಲೆನಾಡಿನಲ್ಲಿ 300 ಜನಸಂಖ್ಯೆಯನ್ನು ಹೊಂದಿದ ಪ್ರತಿ ಗ್ರಾಮಗಳಿಗೂ ಶಾಲೆಯೊಂದನ್ನು ಸರ್ಕಾರವೇ ಸ್ಥಾಪಿಸಬೇಕೆಂದಾಯಿತು ನಾಲ್ಕು ವರ್ಷಗಳ ಅವಧಿಯಲ್ಲಿ 1000 ಶಾಲೆಗಳನ್ನು ಸ್ಥಾಪಿಸುವ ಉದ್ದೇಶ ಹೊಂದಲಾಗಿತ್ತು. ಶಾಲೆಗಳ ಕಟ್ಟಡ ಮತ್ತು ಉಪಕರಣಗಳನ್ನು ಅಭಿವೃದ್ಧಿ ಪಡಿಸಲು ಸರ್ಕಾರ ಕ್ರಮ ಕೈಗೊಂಡಿತು. ಈ ಕಾಯ್ದೆ ಜಾರಿಯೊಂದಿಗೆ ಮೈಸೂರು ಸರ್ಕಾರವು ಪ್ರಾಥಮಿಕ ಶಿಕ್ಷಣ ಒದಗಿಸುವುದು ರಾಜ್ಯದ ಜವಾಬ್ದಾರಿ ಎಂಬ ನೀತಿಯನ್ನು ಅಧಿಕೃತಗೊಳಿಸಿತು[528]. ಹೀಗೆ ನಾಲ್ವಡಿಯವರು ಮತ್ತು ಅವರ ಸರ್ಕಾರ ಕೈಗೊಂಡ ಪ್ರಾಥಮಿಕ ಶಿಕ್ಷಣ ನೀತಿಯಿಂದಾಗಿ ವೈಫಲ್ಯಗಳ ನಡುವೆಯೂ ಬಹುಸಂಖ್ಯಾತ ಜನತೆಗೆ ಶಿಕ್ಷಣ ತಲುಪಿತು. ಆ ಮೂಲಕ ನಾವು ಆರಂಭದಲ್ಲಿ ಪರಿಕಲ್ಪಿಸಿಕೊಂಡಿದ್ದಂತೆ ಶಿಕ್ಷಣದ ಅಸಮತೋಲನವನ್ನು ಸರಿಪಡಿಸಲೆಂದೇ ನಾಲ್ವಡಿಯವರು ಈ ಕ್ರಮಗಳನ್ನು ಕೈಗೊಂಡರು ಎನ್ನಬಹುದು. ಒಟ್ಟಾರೆ ಶಿಕ್ಷಣದ ಸಾರ್ವತ್ರೀಕರಣವೇ ಸಾಮಾಜಿಕ ಪರಿವರ್ತನೆಗೆ ಬಹುಸಂಖ್ಯಾತ ಜನ ಸಮುದಾಯ ತೆರೆದುಕೊಳ್ಳುವಂತೆ, ಭಾಗವಹಿಸುವಂತೆ ಮಾಡಿತ್ತೆಂದೇಳಬಹುದು.

### *ii) ಪ್ರೌಢಶಿಕ್ಷಣ*

ಮೈಸೂರು ಸಂಸ್ಥಾನದಲ್ಲಿ ಪ್ರಥಮ ಪ್ರೌಢಶಾಲೆಯು 1858ರಲ್ಲಿ ಬೆಂಗಳೂರಿನಲ್ಲಿ ಆರಂಭಗೊಂಡಿತು. ಆನಂತರ ತುಮಕೂರು, ಶಿವಮೊಗ್ಗ ಮತ್ತು ಹಾಸನಗಳಲ್ಲಿದ್ದ ಮಿಷನರಿ ಶಾಲೆಗಳನ್ನು ಹಾಗೂ ಮೈಸೂರಿನ ಮಹಾರಾಜ ಪ್ರೌಢಶಾಲೆಯನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿತು. 1871-72ರಲ್ಲಿ ಮೆಟ್ರಿಕ್ ತರಗತಿಯವರೆಗೆ ಶಿಕ್ಷಣ ಕೊಡುತ್ತಿದ್ದ 11 ಶಾಲೆಗಳಿದ್ದವು. 1881ರ ವೇಳೆಗೆ 166 ಶಾಲೆಗಳಿಗೇರಿದವು. 1910-11ರಲ್ಲಿ 16 ಪ್ರೌಢಶಾಲೆಗಳಿದ್ದವು. ಅವುಗಳಲ್ಲಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ 3,435 [529]. ಮೈಸೂರು ಸಂಸ್ಥಾನದಲ್ಲಿದ್ದ ಎಲ್ಲ ಪ್ರೌಢಶಾಲೆಗಳು

---

525. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಅಕ್ಟೋಬರ್, 1940, ಪು. 44*
526. *ರಿಪೋರ್ಟ್ ಆನ್ ದಿ ಕಮಿಟಿ ಫಾರ್ ಎಜುಕೇಷನ್ ರಿಫಾರ್ಮ್ ಇನ್ ಮೈಸೂರ್, ಪು. 21-22*
527. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಅಕ್ಟೋಬರ್, 1941, ಪು. 44*
528. *ಮೈಸೂರ್ ಅಡ್ಮಿನಿಸ್ಟ್ರೇಷನ್ ರಿಪೋರ್ಟ್, 1941-42, ಪುಟ 94*
529. *ಸೂರ್ಯನಾಥ್ ಯು. ಕಾಮತ್., ಪೂರ್ವೋಕ್ತ, ಭಾಗ-3, ಪು. 16*

ಮದ್ರಾಸ್ ವಿಶ್ವವಿದ್ಯಾನಿಲಯದ ನಿಯಂತ್ರಣಕ್ಕೆ ಒಳಪಟ್ಟಿದ್ದವು. ಇಲ್ಲಿನ ವಿದ್ಯಾರ್ಥಿಗಳು ಮದ್ರಾಸ್ ಸರ್ಕಾರ ನಡೆಸುತ್ತಿದ್ದ ಪರೀಕ್ಷೆಗೆ ಕೂರಬೇಕಾಗಿತ್ತು. ಪರೀಕ್ಷೆಗೆ ಕೂರಲು ಮೈಸೂರಿನ ಅನೇಕ ವಿದ್ಯಾರ್ಥಿಗಳಿಗೆ ಅನುಮತಿ ದೊರೆಯುತ್ತಿರಲಿಲ್ಲ. ಈ ತೊಡಕನ್ನು ತಪ್ಪಿಸಲು ಮೈಸೂರು ಸರ್ಕಾರವು 1912ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷಾ ಯೋಜನೆಯನ್ನು ಅಂಗೀಕರಿಸಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಇಂಗ್ಲಿಷ್ ದ್ವಿತೀಯ ಭಾಷೆ, ಅಂಕಗಣಿತ, ಇತಿಹಾಸ ಮತ್ತು ಭೂಗೋಳಶಾಸ್ತ್ರ ವಿಷಯಗಳು ಕಡ್ಡಾಯವಾಗಿದ್ದವು. ಇವುಗಳ ಜೊತೆಗೆ ವಿದ್ಯಾರ್ಥಿಯು ವಿಜ್ಞಾನ, ಕೃಷಿ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದ ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಬೇಕಾಗಿತ್ತು[530]. ಈ ಯೋಜನೆಯಲ್ಲೇ ಪ್ರೌಢಶಾಲಾ ಶಿಕ್ಷಕರ ವೇತನ ಹೆಚ್ಚಿಸಲು ಮತ್ತು ಕಟ್ಟಡಗಳ ನಿರ್ಮಾಣಕ್ಕೆ ಪ್ರತಿವರ್ಷ ಎರಡು ಲಕ್ಷ ರೂ.ಗಳ ನಿಧಿಯನ್ನು ಮಂಜೂರು ಮಾಡಲಾಯಿತು. ಎಸ್.ಎಸ್.ಎಲ್.ಸಿ. ಪರೀಕ್ಷಾ ಪದ್ಧತಿಯನ್ನು ಜಾರಿಗೆ ತಂದಿದ್ದರಿಂದ ಹೆಚ್ಚು ವಿದ್ಯಾರ್ಥಿಗಳಿಗೆ ಅವಕಾಶ ದೊರೆಯಿತು. ರಾಜ್ಯದಲ್ಲೇ ಪರೀಕ್ಷೆ ನಡೆಸುವಂತಾಗಿದ್ದು ಹೆಚ್ಚು ಹೆಚ್ಚು ವಿದ್ಯಾರ್ಥಿಗಳಿಗೆ ಪರೀಕ್ಷೆ ತೆಗೆದುಕೊಳ್ಳಲು ಪ್ರೋತ್ಸಾಹ ದೊರೆತಂತಾಯಿತು. ಈ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವನಿಗೆ ಸರ್ಕಾರಿ ಮತ್ತು ಖಾಸಗಿಯಾಗಿ ಉದ್ಯೋಗ ಗಳಿಸುವ ಅವಕಾಶಗಳು ಸಾಕಷ್ಟಿದ್ದವು. ಅಲ್ಲಿಯವರೆಗೂ ಹೊರರಾಜ್ಯಗಳವರು ಅದರಲ್ಲೂ ಮದ್ರಾಸ್ ಪ್ರಾಂತ್ಯದಿಂದ ಬಂದು ಎಲ್ಲಾ ಉದ್ಯೋಗ ಅವಕಾಶಗಳನ್ನು ಬಾಚಿಕೊಳ್ಳುತ್ತಿದ್ದುದು ತಪ್ಪಿತು. ಸ್ಥಳೀಯರೇ ಉದ್ಯೋಗದ ಅರ್ಹತಾ ಶಿಕ್ಷಣವನ್ನು ಪಡೆದು ಪೈಪೋಟಿಗಿಳಿದರು. ಇದು ಮೈಸೂರು -ಮದ್ರಾಸ್ ಗುಂಪುಗಳ ನಡುವೆ ಸಂಘರ್ಷಕ್ಕೂ, ಮೈಸೂರು - ಮೈಸೂರಿಗರಿಗೆ ಎಂಬ ಮಾತು ಚಾಲ್ತಿಗೆ ಬಂತು. ಎಸ್.ಎಸ್.ಎಲ್.ಸಿ. ಪರೀಕ್ಷಾ ಯೋಜನೆಯ ಆರಂಭವೇ ಪ್ರತ್ಯೇಕ ವಿಶ್ವವಿದ್ಯಾನಿಲಯ ಸ್ಥಾಪನೆಗೆ ಮೊದಲ ಮೆಟ್ಟಿಲಾಯಿತು.

### *iii)* ಉನ್ನತ ಶಿಕ್ಷಣ : ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪನೆ

ಮೈಸೂರಿನಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣ, ಪ್ರೌಢ ಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹದಿಂದಾಗಿ ಹೆಚ್ಚಿನ ವಿದ್ಯಾರ್ಥಿಗಳು ಕಾಲೇಜು ಶಿಕ್ಷಣ ಪಡೆಯಲು ಅರ್ಹತೆ ಪಡೆದರು. ಆದರೆ ಮೈಸೂರಿನ ಕಾಲೇಜುಗಳು ಮತ್ತು ಅವು ನಡೆಸುತ್ತಿದ್ದ ಪದವಿ ಪರೀಕ್ಷೆಗಳಿಗೆ ಮದ್ರಾಸ್ ವಿಶ್ವವಿದ್ಯಾನಿಲಯದ ಮನ್ನಣೆಯ ಅಗತ್ಯವಿದ್ದುದರಿಂದ ಮೈಸೂರಿನಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳು ಬೆಳೆಯಲು ಅವಕಾಶವಿರಲಿಲ್ಲ. ಮೈಸೂರಿನ ಕಾಲೇಜುಗಳಲ್ಲಿ ಬಿ.ಎ. ಪದವಿಯವರೆಗೆ ಮಾತ್ರ ಅಧ್ಯಯನ ಮಾಡಲು ಅವಕಾಶವಿದ್ದು ಸ್ನಾತಕೋತ್ತರ ಅಧ್ಯಯನಕ್ಕೆ ದೂರದ ಪೂನಾ ಅಥವಾ ಮದ್ರಾಸ್‌ಗಳಿಗೆ

---

*530. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು. 103*

*531. ಹಯವದನರಾವ್ ಸಿ. (ಸಂ)., ಮೈಸೂರು ಗೆಜೆಟಿಯರ್, ಸಂಪುಟ -IV, ಪು. 509*

ವಿದ್ಯಾರ್ಥಿಗಳು ಹೋಗಬೇಕಾಗಿತ್ತು. ಉನ್ನತಾಧ್ಯಯನಕ್ಕೆ ದೂರದ ಸ್ಥಳಗಳಿಗೆ ಹೋಗಲು ಕೆಲ ವಿದ್ಯಾರ್ಥಿಗಳಿಗೆ ಹಣದ ಅಭಾವ, ತಂದೆ ತಾಯಿಗಳ ವಿರೋಧ ಮುಂತಾದ ಅಂಶಗಳು ತಡೆಗಟ್ಟಿದ್ದವು[531]. ಬೆಂಗಳೂರಿನ ಸೆಂಟ್ರಲ್ ಕಾಲೇಜು ಮತ್ತು ಮೈಸೂರಿನ ಮಹಾರಾಜ ಕಾಲೇಜು ಮಾತ್ರ ಪ್ರಥಮ ದರ್ಜೆ ಕಾಲೇಜುಗಳಾಗಿದ್ದವು. ಮೈಸೂರಿನ ಮಹಾರಾಣಿ ಕಾಲೇಜು ಎರಡನೇ ದರ್ಜೆ ಕಾಲೇಜಾಗಿತ್ತು. 1903 ರಿಂದ 1913ರವರೆಗೆ ಕೇವಲ 397 ಜನರು ಮಾತ್ರ ಇಲ್ಲಿನ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿ ಪದವಿ ಪಡೆದಿದ್ದರು[532]. ಕಾಲೇಜು ವ್ಯಾಸಂಗದ ಆಕಾಂಕ್ಷಿಗಳು ಹೆಚ್ಚಿದಂತೆ ಮೈಸೂರಿನಲ್ಲಿ ಪ್ರತ್ಯೇಕ ವಿಶ್ವವಿದ್ಯಾನಿಲಯದ ಬೇಡಿಕೆ ಹೆಚ್ಚಿತು. ಮೈಸೂರು ಆರ್ಥಿಕ ಪರಿಷತ್ತು ಮತ್ತು ಅದರ ಶಿಕ್ಷಣ ಸಮಿತಿ ಸ್ಥಾಪನೆಗೊಂಡ ನಂತರ ವಿಶ್ವವಿದ್ಯಾನಿಲಯದ ಸ್ಥಾಪನೆಗೆ ಆದ್ಯತೆ ನೀಡಲಾಯಿತು ಮತ್ತು ವಿವರವಾದ ಯೋಜನೆಯನ್ನು ಸಿದ್ಧಪಡಿಸಲಾಯಿತು. ದಿವಾನರಾಗಿದ್ದ ವಿಶ್ವೇಶ್ವರಯ್ಯನವರು 1913ರಲ್ಲಿ ಆರ್ಥಿಕ ಪರಿಷತ್ತಿನ ಅಧಿವೇಶನದಲ್ಲಿ ಮಾತನಾಡುತ್ತಾ "ಶಿಕ್ಷಣವನ್ನು ತೆಗೆದುಕೊಂಡರೆ ನಮ್ಮಲ್ಲಿರುವ ಒಟ್ಟು 57 ಲಕ್ಷ ಪ್ರಜೆಗಳಲ್ಲಿ ಕೇವಲ ಮೂರುವರೆ ಲಕ್ಷದಷ್ಟು ಜನ ಮಾತ್ರ ಓದು ಬರಹ ಬಲ್ಲವರು. ಅಂದರೆ ಪ್ರತಿ ನೂರು ಜನರಲ್ಲಿ ಕೇವಲ ಆರು ಮಂದಿ ಮಾತ್ರ ಓದು ಬರಹ ಬಲ್ಲವರು" ಎಂದು ಹೇಳುವ ಮೂಲಕ ಅಂದಿನ ಮೈಸೂರು ಶಿಕ್ಷಣದಲ್ಲಿ ಹೇಗೆ ಹಿಂದುಳಿದಿತ್ತು ಎಂಬುದನ್ನು ತಿಳಿಸಿದರು. ಹಾಗೆ ಮುಂದುವರಿದು "ನಮ್ಮ ಒಟ್ಟು ಜನಸಂಖ್ಯೆ ಹೆಚ್ಚು ಕಡಿಮೆ 6 ದಶಲಕ್ಷವಾಗಿದ್ದರೂ ಕೂಡ ನಮ್ಮಲ್ಲಿ ಒಂದೇ ಒಂದು ವಿಶ್ವವಿದ್ಯಾನಿಲಯವಿಲ್ಲ. ಆದರೆ ಕೆನಡಾದಲ್ಲಿ ನಮಗಿಂತ ಕೇವಲ ಶೇಕಡಾ 25ರಷ್ಟು ಮಾತ್ರ ಜನಸಂಖ್ಯೆ ಇದ್ದರೂ ಕೂಡ ಅಲ್ಲಿ 20 ವಿಶ್ವವಿದ್ಯಾನಿಲಯಗಳಿವೆ. ಅದೇ ಗ್ರೇಟ್ ಬ್ರಿಟನ್‌ನಲ್ಲಿ 45ದಶಲಕ್ಷ ಜನಸಂಖ್ಯೆಗೆ 20 ವಿಶ್ವವಿದ್ಯಾನಿಲಯುಗಳಿದ್ದರೆ, ಜರ್ಮನಿಯಲ್ಲಿ 65ದಶಲಕ್ಷ ಜನಸಂಖ್ಯೆಗೆ 20 ವಿಶ್ವವಿದ್ಯಾನಿಲಯಗಳಿವೆ"[533] ಎಂದು ಹೇಳುವ ಮೂಲಕ ಮೈಸೂರಿನಲ್ಲಿ ವಿಶ್ವವಿದ್ಯಾನಿಲಯದ ಸ್ಥಾಪನೆ ಅವಶ್ಯವೆಂದು ಪ್ರತಿಪಾದಿಸಿದರು. ವಿಶ್ವವಿದ್ಯಾನಿಲಯ ಸ್ಥಾಪನೆಗೆ ಮುನ್ನ ಅಭಿವೃದ್ಧಿಗೊಂಡ ದೇಶಗಳಲ್ಲಿನ ವಿಶ್ವವಿದ್ಯಾನಿಲಯಗಳನ್ನು ಪರಿಶೀಲಿಸಿ ವರದಿ ನೀಡಲು ಸಿ.ಆರ್. ರೆಡ್ಡಿ ಮತ್ತು ಥಾಮಸ್ ಡೆನ್‌ಹ್ಯಾಮ್‌ರನ್ನು ನಿಯೋಜಿಸಲಾಯಿತು. ಹಾಗೆಯೇ ವಿಶ್ವವಿದ್ಯಾನಿಲಯದ, ಸ್ವರೂಪ, ಕಾರ್ಯಗಳು, ಧ್ಯೇಯೋದ್ದೇಶಗಳ ಬಗ್ಗೆ ಯೋಜನೆ ತಯಾರಿಸಲು ಒಂದು ಸಮಿತಿಯನ್ನು ರಚಿಸಲಾಯಿತು[534]. ಆನಂತರ ಮದ್ರಾಸ್ ವಿಶ್ವವಿದ್ಯಾನಿಲಯದೊಂದಿಗೆ ಸಂಧಾನ ನಡೆಸಿತು. ಆರಂಭದಲ್ಲಿ ಮದ್ರಾಸ್ ಮೈಸೂರು ಸಂಸ್ಥಾನದಲ್ಲಿ ಪ್ರತ್ಯೇಕ ವಿಶ್ವವಿದ್ಯಾನಿಲಯದ ಸ್ಥಾಪನೆಯನ್ನು ವಿರೋಧಿಸಿತು. ಆದರೆ ಆಗಿನ ಬ್ರಿಟಿಷ್ ರೆಸಿಡೆಂಟ್ ಸರ್ ಹ್ಯೂ ಡ್ಯಾಲಿ ಮತ್ತು ದಿವಾನರಾದ ವಿಶ್ವೇಶ್ವರಯ್ಯನವರ ಸತತ ಪ್ರಯತ್ನದಿಂದಾಗಿ 1916ರಲ್ಲಿ

---

*532. ಫೈಲ್ ನಂ. 454-13, ಸೀರಿಯಲ್ ನಂ. 1-7, ಎಜುಕೇಷನ್, 1913-14 ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ. ಬೆಂಗಳೂರು*

*533. ವಿಶ್ವೇಶ್ವರಯ್ಯ ಎಂ., ನನ್ನ ವೃತ್ತಿಜೀವನದ ನೆನಪುಗಳು, ಕನ್ನಡಕ್ಕೆ ಡಾ. ಗಜಾನನ ಶರ್ಮ, ಅಂಕಿತ ಪುಸ್ತಕ, 2005. ಬೆಂಗಳೂರು, ಪು. 88*

*534. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು. 106*

ಭಾರತ ಸರ್ಕಾರದಿಂದ ವಿಶ್ವವಿದ್ಯಾನಿಲಯ ಸ್ಥಾಪನೆಯ ಪ್ರಸ್ತಾವನೆಗೆ ಮಂಜೂರಾತಿ ದೊರಕಿತು. ಮೈಸೂರು ಮತ್ತು ಮದ್ರಾಸ್ ವಿಶ್ವವಿದ್ಯಾನಿಲಯಗಳ ನಡುವಿನ ಸಂಘರ್ಷವು ಅಂತಿಮವಾಗಿ ಒಡಂಬಡಿಕೆ ಏರ್ಪಡುವ ಮೂಲಕ ಕೊನೆಗೊಂಡು 1916ರ ಜುಲೈ 1ರಿಂದ ವಿಶ್ವವಿದ್ಯಾನಿಲಯ ಪ್ರಾರಂಭಗೊಂಡಿತು. ಪ್ರಜಾಪ್ರತಿನಿಧಿ ಸಭೆಯಲ್ಲಿ ವಿಶ್ವವಿದ್ಯಾನಿಲಯ ಬಿಲ್ಲನ್ನು ಮಂಡಿಸಿದ ಸಂದರ್ಭದಲ್ಲಿ ವಿಶ್ವವಿದ್ಯಾನಿಲಯದ ಧ್ಯೇಯೋದ್ದೇಶಗಳನ್ನು ಕುರಿತು ವಿಶ್ವೇಶ್ವರಯ್ಯನವರು ಈ ರೀತಿ ಹೇಳಿದ್ದರು. "ಯಾವುದೇ ವಿಶ್ವವಿದ್ಯಾನಿಲಯವು ಒಂದು ಸಾಮಾನ್ಯ ಉದ್ದೇಶ ಮತ್ತು ಆಯಾ ದೇಶದ ನಾಗರಿಕತೆ ಮತ್ತು ಭೌತಿಕ ಸಂಪತ್ತಿಗನುಗುಣವಾಗಿ ಕೆಲವು ನಿರ್ದಿಷ್ಟ ಗುರಿಗಳನ್ನು ಹೊಂದಿರಬೇಕಾಗುತ್ತದೆ. ಸಾಮಾನ್ಯ ಉದ್ದೇಶವೆಂದರೆ, ವಿಶಾಲಾರ್ಥದಲ್ಲಿ ಕಲಿಕೆಗೆ ಉತ್ತೇಜನ, ಉನ್ನತ ವ್ಯಾಸಂಗದ ಒತ್ತಾಸೆ, ಸಾಂಸ್ಕೃತಿಕ ಕೇಂದ್ರಗಳ ಸೃಷ್ಟಿ ಮತ್ತು ದೇಶದ ಎಲ್ಲ ಮೂಲೆಗಳಿಂದಲೂ ಅಜ್ಞಾನದ ಅಂಧಕಾರವನ್ನು ಹೊರದೂಡಬಲ್ಲ 'ಜ್ಯೋತಿಯನ್ನು' ಹೊತ್ತಿಸಿ ಹರಡುವಂತೆ ನೋಡಿಕೊಳ್ಳುವುದು".

"ಮೈಸೂರು ವಿಶ್ವವಿದ್ಯಾನಿಲಯದ ನಿರ್ಧಿಷ್ಟ ಗುರಿಗಳೆಂದರೆ ಪ್ರಜೆಗಳ ಬೌದ್ಧಿಕ ಸಾಮರ್ಥ್ಯವನ್ನು ಅಭಿವೃದ್ಧಿಗೊಳಿಸುವುದರ ಜೊತೆಗೆ ಅವರ ಕಾರ್ಯ ನಿರ್ವಹಣಾ ಚಾತುರ್ಯಗಳನ್ನು ಹೆಚ್ಚಿಸುವುದಾಗಿದೆ. ನಮ್ಮ ರಾಜ್ಯದ ಭವಿಷ್ಯದ ಅಗತ್ಯಗಳಿಗೆ ತಕ್ಕಂತೆ ಅತ್ಯುತ್ತಮ ವ್ಯಾಪಾರಸ್ಥರು, ವಾಣಿಜ್ಯೋದ್ಯಮಿಗಳು, ಆರ್ಥಿಕ ತಜ್ಞರು, ಲಾಯರುಗಳು, ಆರೋಗ್ಯ ಮತ್ತು ನೈರ್ಮಲ್ಯ ತಜ್ಞರು, ಇಂಜಿನಿಯರುಗಳು, ಮುತ್ಸದ್ದಿಗಳನ್ನು ತಯಾರು ಮಾಡಿ ರಾಜ್ಯದ ಅಗತ್ಯಗಳಿಗೆ ಸಿದ್ದಗೊಳ್ಳುವಂತೆ ತರಬೇತುಗೊಳಿಸುವುದಾಗಿದೆ"[535].

ಮೇಲಿನ ಧ್ಯೇಯೋದ್ದೇಶಗಳೊಂದಿಗೆ ಆರಂಭಗೊಂಡ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮಹಾರಾಜ ನಾಲ್ವಡಿಯವರು ಕುಲಾಧಿಪತಿಗಳಾಗಿ (ಛಾನ್ಸಲರ್), ಯುವರಾಜರು ಸಮಕುಲಾಧಿಪತಿ(ಪ್ರೊಛಾನ್ಸಲರ್) ಗಳಾದರು. ವಿಶ್ವವಿದ್ಯಾನಿಲಯದ ಆಡಳಿತ ನಿರ್ವಹಣೆಗೆ ಕುಲಪತಿಗಳನ್ನೊಳಗೊಂಡ ಒಂಬತ್ತಕ್ಕಿಂತ ಕಡಿಮೆಯಿಲ್ಲದ ಮತ್ತು ಹದಿನೈದಕ್ಕಿಂತ ಹೆಚ್ಚಿಲ್ಲದ ಒಂದು ಕೌನ್ಸಿಲ್ ರಚಿತವಾಯಿತು. ಸೆನೆಟ್ ಮತ್ತು ಶಿಕ್ಷಣ ಮಂಡಳಿಗಳೂ ರಚಿತವಾದವು.[536] ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯ ಪ್ರಾರಂಭೋತ್ಸವದಲ್ಲಿ ನಾಲ್ವಡಿಯವರು ಮಾತನಾಡುತ್ತಾ "ಮೈಸೂರು ರಾಜ್ಯದ ಶಿಕ್ಷಣದಲ್ಲಿ ಇದೊಂದು ಹೊಸ ಶಕೆಯ ಆರಂಭ. ಜನದನಿಗೆ ಸ್ಪಂದಿಸಿ ರಾಷ್ಟ್ರೀಯ ವಿಶ್ವವಿದ್ಯಾನಿಲಯದ ಸೃಷ್ಟಿಯಾಗಿದೆ ಎಂಬುದು ಇತಿಹಾಸಾರ್ಹವಾಗಿದೆ. ಬ್ರಿಟಿಷ್ ಇಂಡಿಯಾದ ವ್ಯಾಪ್ತಿ ಹೊರಗೆ ಸ್ಥಾಪಿಸಲಾದ ಪ್ರಥಮ ವಿಶ್ವವಿದ್ಯಾನಿಲಯ

---

535. *ವಿಶ್ವೇಶ್ವರಯ್ಯ ಎಂ., ಪೂರ್ವೋಕ್ತ, ಪು. 93*

536. *ಹಯವದನರಾವ್ ಸಿ. (ಸಂ.)., ಮೈಸೂರು ಗೆಜೆಟಿಯರ್, ಸಂಪುಟ -IV, ಪು. 509*

537. *ಸ್ಪೀಚಸ್ ಬೈ ಹಿಸ್ ಹೈನಸ್., ಪೂರ್ವೋಕ್ತ, ಪು. 136*

ಇದಾಗಿದೆ ಮತ್ತು ಮೈಸೂರಿನ ವಿಶೇಷ ಆಕಾಂಕ್ಷೆಗಳನ್ನು ತಲುಪುವ ಹಾಗೂ ರಾಜ್ಯದ ಬೌದ್ಧಿಕ ಪ್ರಗತಿ ಮತ್ತದರ ಮುಂದಿನ ಪರಿಣಾಮಗಳನ್ನು ಮನಗಂಡು ಸ್ಥಾಪಿಸಲಾದ ಸಂಸ್ಥೆಯಾಗಿದೆ"[537] ಎಂದು ಅಭಿಪ್ರಾಯಪಟ್ಟರು. ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿದ್ದ ನಾಲ್ಕು ವರ್ಷಗಳ ಪದವಿ ಶಿಕ್ಷಣಕ್ಕೆ ಬದಲು ಮೂರು ವರ್ಷಗಳ ಪದವಿ ಶಿಕ್ಷಣವನ್ನು ಜಾರಿಗೆ ತರಲಾಯಿತು. ಆರಂಭದಲ್ಲಿ ಬಿ.ಎ. ಮತ್ತು ಬಿ.ಎಸ್ಸಿ. ಪದವಿಗಳು ಆರಂಭಗೊಂಡು 1919-20ರಲ್ಲಿ ಮೊದಲ ಬಾರಿಗೆ ಎಂ.ಎ. ಪದವಿ ಪರೀಕ್ಷೆಗಳು ನಡೆಯುವಂತಾದವು. ಮೈಸೂರು ಸರ್ಕಾರವು ವಿಶ್ವವಿದ್ಯಾನಿಲಯದ ಅವಶ್ಯಕತೆಗಳನ್ನರಿತು ಆಗಾಗ್ಗೆ ವಿಶ್ವವಿದ್ಯಾನಿಲಯದ ಕಾಯ್ದೆಗೆ ಸೂಕ್ತ ತಿದ್ದುಪಡಿ ತಂದಿತು. 1923-24ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಕಾಯ್ದೆಗೆ ತಿದ್ದುಪಡಿ ತರಲಾಯಿತು[538]. ಹಾಗೆಯೇ 1925ರಲ್ಲಿ ಸೆನೆಟ್ ಸಭೆಗೆ ಚುನಾಯಿತಗೊಂಡ ಹಾಗೂ ನೇಮಕಗೊಂಡ ಸದಸ್ಯರಿರುವಂತೆ ಪುನರ್ ರೂಪಿಸಲಾಯಿತು. ಅನೇಕ ಹೊಸ ವಿಭಾಗಗಳನ್ನು ಸ್ಥಾಪಿಸಲಾಯಿತು[539]. 1933ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಕಾಯ್ದೆಗೆ ತಿದ್ದುಪಡಿ ತಂದು ಕ್ರೋಢೀಕರಿಸಲಾಯಿತು. ಹೊಸ ಕಾಯ್ದೆಯು ವಿಶ್ವವಿದ್ಯಾನಿಲಯ ಸಂಶೋಧನೆ, ಜ್ಞಾನದ ಬೆಳವಣಿಗೆ ಮತ್ತು ಪ್ರಸರಣೆ ಬಗ್ಗೆ ತನ್ನದೇ ತೀರ್ಮಾನಗಳನ್ನು ಮಾಡುವ ಅಧಿಕಾರ ಹೊಂದಿತು[540]. ಹೀಗೆ ವಿಶ್ವವಿದ್ಯಾನಿಲಯವು ಹಂತಹಂತವಾಗಿ ತನ್ನ ಕಾರ್ಯಚಟುವಟಿಕೆಗಳನ್ನು ವಿಸ್ತರಿಸುತ್ತಾ ಸದೃಢಗೊಂಡಿತು. 1917ರಲ್ಲಿ ಬೆಂಗಳೂರಿನಲ್ಲಿ ಎಂಜಿನಿಯರಿಂಗ್ ಕಾಲೇಜು ಸ್ಥಾಪನೆಯಾಯಿತು. ಅದೇ ವರ್ಷ ಮೈಸೂರಿನ ಮಹಾರಾಣಿ ಕಾಲೇಜು ಪ್ರಥಮ ದರ್ಜೆ ಕಾಲೇಜಾಯಿತು. ಸರ್ಕಾರವು ಗ್ರಾಮೀಣ ಪ್ರದೇಶಗಳಿಗೂ ಉನ್ನತ ಶಿಕ್ಷಣವನ್ನು ವಿಸ್ತರಿಸಲು ಶಿವಮೊಗ್ಗ, ತುಮಕೂರು ಮುಂತಾದೆಡೆ ಆರು ಇಂಟರ್‌ಮೀಡಿಯೆಟ್ ಕಾಲೇಜುಗಳನ್ನು ಸ್ಥಾಪಿಸಿತು. 1924ರಲ್ಲಿ ಮೆಡಿಕಲ್ ಕಾಲೇಜನ್ನು ಬೆಂಗಳೂರಿನಲ್ಲಿ ಸ್ಥಾಪಿಸಿ ಅನಂತರ ಮೈಸೂರಿಗೆ ಸ್ಥಳಾಂತರಿಸಲಾಯಿತು. ಹೆಚ್ಚಿನ ವಿದ್ಯಾರ್ಥಿಗಳಿಗೆ ಕಾಲೇಜು ಪ್ರವೇಶ ದೊರೆಯುವಂತೆ ಮಾಡಲು ಮೈಸೂರಿನ ಮಹಾರಾಜ ಪ್ರೌಢಶಾಲೆ, ಬೆಂಗಳೂರಿನ ಸರ್ಕಾರಿ ಪ್ರೌಢಶಾಲೆಗಳಲ್ಲಿ ವಿಶ್ವವಿದ್ಯಾನಿಲಯದ ಪ್ರವೇಶ ಪರೀಕ್ಷಾ ತರಗತಿಗಳನ್ನು ತೆರೆಯಲಾಯಿತು. ಸ್ವಲ್ಪ ಕಾಲಾನಂತರ ರಾಜ್ಯದ ಐದು ವಿವಿಧ ಕೇಂದ್ರಗಳಲ್ಲಿ ಇಂತಹ ತರಭೇತಿ ತರಗತಿಗಳನ್ನು ಆರಂಭಿಸಲಾಯಿತು[541]. ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಯ ಸಂದರ್ಭದಲ್ಲಿ ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಟೇಟ್ ಸಾಹೇಬರು ಮುಂತಾದವರು ಶೈಕ್ಷಣಿಕ ಗುಣಮಟ್ಟ ಕುಸಿಯಬಹುದೆಂಬುದನ್ನು ಕುರಿತು "ಎರಡು ಕಾಲೇಜು, ಹತ್ತು ಜನ ಪ್ರೊಫೆಸರುಗಳು, ಒಂದು ವಿಶ್ವವಿದ್ಯಾನಿಲಯವಾಗಿ ನಡೆಯುವುದು ಯುಕ್ತವಲ್ಲ.

---

*538. ಮೈಸೂರ್ ಅಡ್ಮಿನಿಸ್ಟ್ರೇಷನ್ ರಿಪೋರ್ಟ್, 1923-24, ಪು. 17*

*539. ಹಯವದನರಾವ್ ಸಿ. (ಸಂ)., ಪೂರ್ವೋಕ್ತ, ಪು. 509*

*540. ಯೂನಿವರ್ಸಿಟಿ ಆಫ್ ಮೈಸೂರ್ "ದಿ ಕ್ಯಾಲೆಂಡರ್ ಫಾರ್ 1944-45, ಸಂ. 1, ಪು. 9*

*541. ಸೂರ್ಯನಾಥ್ ಯು. ಕಾಮತ್., ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-3, ಪು. 53-54*

*542. ಮಾಸ್ತಿ ವೆಂಕಟೇಶ ಅಯ್ಯಂಗಾರ್., ಭಾವ, ಭಾಗ-2. ಬೆಂಗಳೂರು, 1990, ಪು. 86*

ಹತ್ತು ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಮಧ್ಯೆ ಸ್ಪರ್ಧೆ ಇರುತ್ತದೆ. ಪಾಠ ಹೇಳುವವರು ದಕ್ಷರೆಸಿನಿಕೊಳ್ಳಲು ಯತ್ನಿಸುತ್ತಿರುತ್ತಾರೆ, ವಿದ್ಯೆಯ ಗುಣಮಟ್ಟ ಎತ್ತರದಲ್ಲಿರುತ್ತದೆ. ಕಾಲೇಜ್ ಎರಡೇ ಆಗಿ ಮೈಸೂರಿನ ತರುಣರಷ್ಟೇ ವಿದ್ಯಾರ್ಥಿಗಳಾಗಿ ಒಂದು ವಿಶ್ವವಿದ್ಯಾನಿಲಯ ಆದರೆ ವಿದ್ಯೆಯ ಗುಣಮಟ್ಟ ಇಳಿದು ಹೋಗುತ್ತದೆ"[542] ಎನ್ನುವುದು ಕೆಲವರ ಅನುಮಾನವಾಗಿತ್ತು. ಆದರೆ ನಾಲ್ವಡಿಯವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಥಮ ಸೆನೆಟ್ ಸಭೆಯ ಉದ್ಘಾಟನೆ ಮಾಡುತ್ತಾ ಕಿರಿಯ ವಿಶ್ವವಿದ್ಯಾನಿಲಯದ ಉಪಯುಕ್ತತೆಯನ್ನು ಕುರಿತು ಹೀಗೆ ಹೇಳಿದರು. "ಮತ್ತೊಂದು ಅನುಕೂಲತೆ ಏನೆಂದರೆ, ಎರಡು ಕಾಲೇಜಿನ ಪ್ರಾಂಶುಪಾಲರುಗಳು ಮತ್ತು ಚುನಾಯಿತ ಪ್ರಾಧ್ಯಾಪಕರುಗಳು ಸಭೆಯ ಸದಸ್ಯರಾಗಿರುತ್ತಾರೆ. ನೈಪುಣ್ಯತೆ ಮತ್ತು ಸೌಹಾರ್ದತೆ ಬೆಳೆಸಲು ಅನುಕೂಲ ಪರಿಸರ ಉಂಟಾಗುತ್ತದೆ. ಪರೀಕ್ಷಾ ವಿಧಾನ, ಪಠ್ಯಕ್ರಮ ಮತ್ತೆಲ್ಲ ಆಡಳಿತಾತ್ಮಕ ವಿಚಾರಗಳಲ್ಲಿ ನೇರಮಾತಿಗೆ ಅವಕಾಶವಿರುತ್ತದೆ. ಎಲ್ಲಾ ಪ್ರಾಧ್ಯಾಪಕರು ವಿಶ್ವವಿದ್ಯಾನಿಲಯದ ಸದಸ್ಯರಾಗಿದ್ದು ಅವರುಗಳು ಸೆನೆಟ್‌ನಲ್ಲಿ ಸ್ಥಾನ ಪಡೆದಿರುತ್ತಾರಾದ್ದರಿಂದ ಅಧ್ಯಾಪಕ ಮತ್ತು ಅಧ್ಯಾಪಕೇತರರ ನಡುವಣ ಸಂಬಂಧ ಬಲಯುತವಾಗುತ್ತದೆ.

ಕಿರಿಯದಾದ ವಿಶ್ವವಿದ್ಯಾನಿಲಯದ ಲಕ್ಷಣವೆಂದರೆ ಅದು ವಿದ್ಯಾರ್ಥಿಗಳ ಸಾಮಾಜಿಕ ಜೀವನದ ಬಗ್ಗೆ ಹೆಚ್ಚು ಹಿಡಿತ ಸಾಧಿಸಬಹುದೆಂಬುದು. ಮೈಸೂರು, ಬೆಂಗಳೂರಿನಲ್ಲಿ ಸ್ಥಾಪಿತವಾಗುವ ವಿದ್ಯಾರ್ಥಿ ಸಂಘಗಳು ಕ್ಲಬ್ ಜೀವನೋಪಾದಿಯಲ್ಲಿ ವಿದ್ಯಾರ್ಥಿ ಉಪಾಧ್ಯಾಯರ ಸಂಬಂಧ ಬೆಳೆಯಲು ಅವಕಾಶವಾಗುತ್ತದೆ"[543] ಎಂದು ಟೀಕಾಕಾರರ ಅನುಮಾನವನ್ನು ಪರಿಹರಿಸಿದರು.

ನಾಲ್ವಡಿಯವರು ವಿಶ್ವವಿದ್ಯಾನಿಲಯದ ಧ್ಯೇಯೋದ್ದೇಶಗಳು ಏನಾಗಿರಬೇಕೆಂಬುದನ್ನು ತಮ್ಮ ಅನೇಕ ಭಾಷಣಗಳಲ್ಲಿ ವ್ಯಕ್ತಪಡಿಸಿದ್ದರು. ಉದಾಹರಣೆಗೆ 1916ರ ಸೆನೆಟ್ ಸಭೆಯ ಉದ್ಘಾಟನೆ ಮಾಡುತ್ತಾ "ಪ್ರಥಮವಾಗಿ ಶೈಕ್ಷಣಿಕ ಪ್ರಪಂಚದ ಆದರ, ಗೌರವವನ್ನು ಪಡೆಯುವಲ್ಲಿ ನಮ್ಮ ವಿಶ್ವವಿದ್ಯಾನಿಲಯ ಪ್ರಯತ್ನಿಸಬೇಕು. ಉತ್ತಮ ಮಟ್ಟದ ಬೋಧನಾಕ್ರಮ ಮತ್ತು ಪರೀಕ್ಷಾವಿಧಾನಗಳಿಂದ ಮಾತ್ರವೇ ಇದು ಸಾಧ್ಯ. ಅಲ್ಲದೆ ಯಾವುದೇ ಪ್ರಲೋಬನೆಗೆ ಒಳಗಾಗದೆ ಗುಣಮಟ್ಟ ಕಡಿಮೆಯಾಗದಂತೆ ನೋಡಿಕೊಳ್ಳಬೇಕು. ಕೇವಲ ಪದವೀಧರರನ್ನು ತಯಾರು ಮಾಡದೆ ಒಳ್ಳೆಯ ಚಾರಿತ್ರ್ಯವುಳ್ಳ, ಸಂಯಮ, ಸಂಸ್ಕೃತಿ ರೂಢಿಸಿಕೊಂಡ ಸುಸಂಸ್ಕೃತರನ್ನು ವಿಶ್ವವಿದ್ಯಾನಿಲಯ ಸಾಕ್ಷಾತ್ಕಾರಗೊಳಿಸಿದಲ್ಲಿ ಭಾರತದ ಉನ್ನತ ಶಿಕ್ಷಣದಲ್ಲಿ ಈ ವಿಶ್ವವಿದ್ಯಾನಿಲಯದ ಪಾತ್ರ ಗಮನಾರ್ಹವಾಗುತ್ತದೆ"[544] ಎಂಬ ಆಶಾಭಾವನೆಯನ್ನು ವ್ಯಕ್ತಪಡಿಸಿದ್ದರು. 1919ರ ಘಟಿಕೋತ್ಸವದಲ್ಲಿ ನಾಲ್ವಡಿಯವರು "ವಿಶ್ವವಿದ್ಯಾನಿಲಯದ ಜ್ಞಾನಪ್ರವಾಹವು

---

*543. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 138-139*

*544. ಅದೇ., ಪು. 140-141*

*545. ತ. ಸು. ಶಾಮರಾಯ., ಮೂರು ತಲೆಮಾರು, ಪು. 218*

ಜನಸಾಮಾನ್ಯನನ್ನು ಮುಟ್ಟಿ, ಅವನ ಸಂಸ್ಕೃತಿಯನ್ನು ಸಂಸ್ಕರಿಸಬೇಕೆಂದು ಆಸೆಪಟ್ಟಿದ್ದರು"[545]. ನಾಲ್ವಡಿಯವರ ಅಭಿಪ್ರಾಯದಲ್ಲಿ ವಿಶ್ವವಿದ್ಯಾನಿಲಯದ ಜ್ಞಾನವು ಕೇವಲ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಜನಸಾಮಾನ್ಯರಿಗೂ ತಲುಪಬೇಕೆಂಬುದಾಗಿತ್ತು. ವಿದ್ಯಾರ್ಥಿಗಳಲ್ಲದವರಿಗೆ ಜ್ಞಾನ ಪ್ರಸರಣೆಯಾಗಬೇಕೆಂಬುದನ್ನು ಕುರಿತು ನಾಲ್ವಡಿಯವರು "ವಿವಿಧ ಕೋರ್ಸುಗಳಿಗೆ ಮತ್ತು ಪರೀಕ್ಷೆ ನಡೆಸಲಾಗುವ ವಿಷಯಗಳಿಗೆ ಬೇರೆ ಬೇರೆ ಕಾರಣಗಳಿಂದ ಸೇರಲಾಗದ ನನ್ನ ಬಂಧುಮಿತ್ರ ಜನರಿಗೂ ಜ್ಞಾನ ಪ್ರಸರಣೆಯಾಗುವಂತೆ ವಿಶ್ವವಿದ್ಯಾನಿಲಯ ಕ್ರಮ ಕೈಗೊಳ್ಳಲಿದೆ. ಈ ಉದ್ದೇಶದಿಂದಲೇ ಯೋಜನೆಯಡಿ ಪ್ರಸರಣ ಮತ್ತು ಪ್ರಕಟಣಾ ಇಲಾಖೆಗಳ ಸ್ಥಾಪನೆಗೆ ಅವಕಾಶ ಕಲ್ಪಿಸಲಾಗಿದೆ. ತ್ವರಿತಗತಿಯಲ್ಲಿ ಈ ದಿಸೆಯಲ್ಲಿನ ಕಾರ್ಯಕ್ರಮಗಳನ್ನು ದೇಶದ ಪ್ರಾಕ್ಟಿಕ ಬೇಡಿಕೆಯರಿತು ವಿಶ್ವವಿದ್ಯಾನಿಲಯ ಮುಂದುವರಿಸುತ್ತದೆಂದು ನಂಬುತ್ತೇನೆ"[546] ಎಂದು ಹೇಳಿದರು. ಅದರಂತೆ ಯೂನಿವರ್ಸಿಟಿ ಟೀಚರ್ಸ್ ಅಸೋಸಿಯೇಷನ್ ಸ್ಥಾಪನೆಗೊಂಡು ಅನಂತರ ಅದು 'ಪ್ರಸಾರಾಂಗ' ಎಂಬ ಹೆಸರಿನಿಂದ ದೇಶೋವಿಶಾಲವಾಗಿ ಬೆಳೆದು ವಿಶ್ವವಿದ್ಯಾನಿಲಯದ ಒಂದು ಮುಖ್ಯ ಅಂಗವಾಗಿ ಕೆಲಸ ಮಾಡುತ್ತಿತ್ತು. ಅಂದು ಅದು ನಡೆಸುತ್ತಿದ್ದ ಮುಖ್ಯ ಕಾರ್ಯ ಕಲಾಪಗಳೆಂದರೆ ಪ್ರಚಾರೋಪನ್ಯಾಸಗಳು ಮತ್ತು ಅವುಗಳ ಪ್ರಕಟಣೆ. ಪ್ರಿನ್ಸಿಪಾಲ್ ಜೆ.ಸಿ. ರಾಲೋರವರು 1934ರಲ್ಲಿ ಇಂಗ್ಲೆಂಡಿನ ಆಕ್ಸ್‌ಫರ್ಡ್‌ನಲ್ಲಿ ನಡೆದ ಅಂತರ ರಾಷ್ಟ್ರೀಯ ಶೈಕ್ಷಣಿಕ ಸಮ್ಮೇಳನದಲ್ಲಿ ಈ ಚಟುವಟಿಕೆಯನ್ನು 'ಮೈಸೂರು ಪ್ರಯೋಗ'ಎಂದು ಕರೆದು ಇದು ವಿಶ್ವಕ್ಕೇ ಆದರ್ಶ ಎಂದು ಶ್ಲಾಘಿಸಿದರು[547]. ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ಬಿ.ಎಂ. ಶ್ರೀಯವರ ನೇತೃತ್ವದಲ್ಲಿ ಹಲವಾರು ಆಧುನಿಕ ವಿಷಯಗಳನ್ನು ಪುಸ್ತಕಗಳಾಗಿ ಪ್ರಕಟಿಸಿ ಸಾಮಾನ್ಯ ಜನತೆಗೆ ದೊರಕುವಂತೆ ಮಾಡಿತು. ಒಟ್ಟಾರೆ ಜನರ ಭಾಷೆಯಲ್ಲಿಯೇ ವ್ಯಾಸಂಗ ವಿಸ್ತರಣಾ ಕಾರ್ಯವನ್ನು ಆರಂಭಿಸಿದ ವಿಶ್ವವಿದ್ಯಾನಿಲಯಗಳಲ್ಲಿ ಮೈಸೂರು ಮೊದಲನೆಯದು. ಈ ಯೋಜನೆ ಯಶಸ್ವಿಗೊಂಡು ಕನ್ನಡದ ಪ್ರಚಾರೋಪನ್ಯಾಸ ಮಾಲೆಯ ಪುಸ್ತಕಗಳು ಸಾಕಷ್ಟು ಜನಪ್ರಿಯಗೊಂಡವು[548]. ಆ ಮೂಲಕ ನಾಲ್ವಡಿಯವರ ಆಶಯವಾದ "ವಿಶ್ವವಿದ್ಯಾನಿಲಯದ ಜ್ಞಾನಪ್ರವಾಹವು ಜನಸಾಮಾನ್ಯರನ್ನು ಮುಟ್ಟಿ, ಅವರ ಸಂಸ್ಕೃತಿಯನ್ನು ಸಂಸ್ಕರಿಸಬೇಕು" ಎಂಬುದು ಕಾರ್ಯತಃ ಅನುಷ್ಠಾನಕ್ಕೆ ಬಂದಿತು. ಒಟ್ಟಾರೆ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ ರಾಜ್ಯದ ಶೈಕ್ಷಣಿಕ ಅವಕಾಶಕ್ಕೆ ಹೊಸ ಆಯಾಮ ನೀಡಿತು. ಸ್ಥಳೀಯ ಪ್ರತಿಭೆಗಳಿಗೆ ಉನ್ನತ ಶಿಕ್ಷಣ, ಉದ್ಯೋಗಾವಕಾಶಗಳು ದೊರೆಯುವಂತಾದವು. ಹಾಗೆಯೇ ಹೊಸ ಚಿಂತನಶೀಲ ಬೌದ್ಧಿಕ ವರ್ಗವೊಂದು ಹುಟ್ಟಿಕೊಳ್ಳುವ ಮೂಲಕ ಸಮಾಜದ ಅಂತಃಸತ್ವವನ್ನು, ಸಾಮಾಜಿಕ ಪರಿವರ್ತನೆ, ಸಂಸ್ಕೃತಿ ರಕ್ಷಣೆ ಮುಂತಾದ ಅಂಶಗಳನ್ನು ತೀವ್ರವಾಗಿ ಚಿಂತಿಸುವಂತೆ ಮಾಡಿತು.

---

546. *ಸ್ಪೀಚಸ್ ಬೈ ಹಿಸ್ ಹೈನಸ್., ಪೂರ್ವೋಕ್ತ, ಪು. 140-141*

547. *ತ.ಸು. ಶಾಮರಾಯ., ಪೂರ್ವೋಕ್ತ, ಪು. 240-241*

548. *ಸೂರ್ಯನಾಥ್ ಯು. ಕಾಮತ್., ಪೂರ್ವೋಕ್ತ, ಪು. 58*

### *iv)* ಮಹಿಳಾ ಶಿಕ್ಷಣ

ಯಾವುದೇ ನಾಗರಿಕತೆಯ ಚೈತನ್ಯವನ್ನು ಮತ್ತು ಅದರ ಉತ್ತಮಾಂಶಗಳು ಹಾಗೂ ಅದರ ಮಿತಿಗಳನ್ನು ಅರಿಯಲು ಇರುವ ಅತ್ಯುತ್ತಮ ಮಾರ್ಗವೆಂದರೆ ಅಲ್ಲಿನ ಇತಿಹಾಸದಲ್ಲಿ ಸ್ತ್ರೀಯರ ಸ್ಥಾನಮಾನವನ್ನು ಅಧ್ಯಯನ ಮಾಡುವುದೇ ಆಗಿದೆ[549]. ಒಂದು ಹುಡುಗಿಗೆ ಶಿಕ್ಷಣ ನೀಡುವುದೆಂದರೆ ಭವಿಷ್ಯತ್ತಿನ ತಾಯಿಗೆ ಶಿಕ್ಷಣ ಒದಗಿಸಿದಂತೆ. ಆ ತಾಯಂದಿರೇ ಭವಿಷ್ಯತ್ತಿನ ಪೀಳಿಗೆಗಳ ಹಣೆಬರಹವನ್ನು ರೂಪಿಸುವರು ಎಂಬ ಮಾತು ಪ್ರಚಲಿತದಲ್ಲಿದೆ. ಆದರೆ ಆಧುನಿಕ ಪೂರ್ವ ಮೈಸೂರಿನಲ್ಲಿ ಮಹಿಳೆಯರಿಗೆ ಶಿಕ್ಷಣ ಅಗತ್ಯವೆಂಬುದು ಇಲ್ಲಿನ ಪರಂಪರೆಯಾಗಿರಲಿಲ್ಲ. ಆದರೆ ಪಾಶ್ಚಿಮಾತ್ಯ ವಿಚಾರಧಾರೆಯಿಂದ ಪ್ರಭಾವಿತರಾದ ಮುಮ್ಮಡಿ ಕೃಷ್ಣರಾಜ ಒಡೆಯರು ಅರಸು ಮನೆತನದ ಮತ್ತು ಇತರ ಉನ್ನತ ವರ್ಗದ ಹೆಣ್ಣು ಮಕ್ಕಳಿಗಾಗಿ 1833ರಲ್ಲಿ ಒಂದು ಇಂಗ್ಲಿಷ್ ಶಾಲೆಯೊಂದನ್ನು ಆರಂಭಿಸಿದರು[550]. 1880ರಲ್ಲಿ ಮಹಾರಾಣಿ ಬಾಲಿಕಾ ಪಾಠಶಾಲೆಯು ಎಂ. ವೆಂಕಟಕೃಷ್ಣಯ್ಯ ಮತ್ತು ಅಂಬಲ್ ನರಸಿಂಹ ಅಯ್ಯಂಗಾರ್ ಇವರ ಪರಿಶ್ರಮದಿಂದ ಆರಂಭಗೊಂಡಿತು. ಆರಂಭದಲ್ಲಿ ಕೇವಲ 14 ಬಾಲಿಕೆಯರಿದ್ದುದು ಇವರ ಪರಿಶ್ರಮದಿಂದಾಗಿ 14 ತಿಂಗಳಲ್ಲಿ 144ಕ್ಕೆ ಏರಿತು. ದಿವಾನರಾಗಿದ್ದ ರಂಗಾಚಾರ್ಲುರವರು 1882ರಲ್ಲಿ ಈ ಶಾಲೆಯ ಬಹುಮಾನ ವಿತರಿಸಿ ಸಮಾರಂಭದ ಅಧ್ಯಕ್ಷರಾಗಿ ಭಾಷಣ ಮಾಡುತ್ತಾ "ನಮ್ಮ ರಾಜ್ಯದ ಮುಂಚೂಣಿಯಲ್ಲಿನ ಕುಟುಂಬಗಳು ಉನ್ನತ ಇಂಗ್ಲಿಷ್ ಶಿಕ್ಷಣ ನೀಡಲು ಮಹತ್ವ ನೀಡುತ್ತಿರುವುದು ಮಹತ್ವವಾದುದು"[551] ಎಂದು ಪ್ರಶಂಶಿಸಿದರು. ಹಾಗೆಯೇ "ದೇಶೀಯ ಮುಖಂಡರಿಂದ ಸ್ಥಾಪಿತವಾದ ಮತ್ತು ಜಯಪ್ರದವಾದ ಬಾಲಿಕಾ ಪಾಠಶಾಲೆ ಇದೊಂದೇ. ಸರ್ಕಾರದವರು ಅಲ್ಲಲ್ಲಿ ಏರ್ಪಡಿಸಿದ ಬಾಲಿಕಾ ಪಾಠಶಾಲೆಗಳು ವಿಫಲವಾದವು. ಈ ಪಾಠಶಾಲೆಯನ್ನು ಏರ್ಪಡಿಸಿದ ಮುಖಂಡರಿಗೆ ಅವನ್ನು ವಹಿಸಿಕೊಟ್ಟರೆ ಆಗ ಮಾತ್ರ ಅವು ಯಶಸ್ವಿಯಾಗಿ ಬೆಳೆಯಬಲ್ಲವೆಂದು ನನಗೆ ಕಾಣುತ್ತದೆ. ಈ ರಾಜ್ಯದಲ್ಲಿ ಸ್ತ್ರೀವಿದ್ಯಾಭ್ಯಾಸವು ಸ್ವಲ್ಪವೂ ಬೇರೂರಿರುವುದಿಲ್ಲ. ಈ ಸಂಸ್ಥೆಯೊಂದೇ ಮುಂದುವರಿದಿರುವುದು"[552] ಎಂದು ಅಭಿಪ್ರಾಯಪಟ್ಟರು. ರಂಗಾಚಾರ್ಲುರವರು ಹೇಳುವಂತೆ ಸರ್ಕಾರ ಸ್ಥಾಪಿಸಿದ ಬಾಲಿಕಾ ಪಾಠಶಾಲೆಗಳು ಯಶಸ್ವಿಯಾಗಿರಲಿಲ್ಲ. ಕಾರಣ ಬಾಲಕಿಯರನ್ನು ಶಾಲೆಗೆ ಕಳುಹಿಸಲು ತಂದೆ ತಾಯಿಗಳ ಸಾಂಪ್ರದಾಯಿಕತೆ ತಡೆ ಒಡ್ಡಿತ್ತು. ಆದರೆ ಮಹಾರಾಣಿ ಬಾಲಿಕಾ ಪಾಠಶಾಲೆಯ ಮ್ಯಾನೇಜಿಂಗ್ ಕಮಿಟಿಯ ಸದಸ್ಯರಾಗಿದ್ದ ವೆಂಕಟಕೃಷ್ಣಯ್ಯನಂತಹವರು ತಮ್ಮ ಹೆಂಡತಿ ಪುಟ್ಟಲಕ್ಷ್ಮಮ್ಮಳನ್ನು ಇಂಗ್ಲಿಷ್ ವಿದ್ಯಾಭ್ಯಾಸಕ್ಕಾಗಿ ಪಾಠಶಾಲೆಗೆ ಕಳುಹಿಸಲಾರಂಭಿಸಿದ್ದರಿಂದ ಬೇರೆ

---

*549. **ಆಲ್ಟೇಕರ್ ಎ.ಎಸ್.,** ದಿ ಪೊಸಿಷನ್ ಆಫ್ ವುಮೆನ್ ಇನ್ ಹಿಂದೂ ಸಿವಿಲೈಸೇಷನ್, ನ್ಯೂಡೆಲ್ಲಿ, 1962. ಪು. 1*

*550. **ಪ್ರಬುದ್ಧ ಕರ್ನಾಟಕ,** ಸಂಪುಟ -68, ಸಂಚಿಕೆ -4, ಪು. 48*

*551. **ಉಷಾರಾವ್.,** ವುಮನ್ ಇನ್ ಎ ಡೆವಲಪಿಂಗ್ ಸೊಸೈಟಿ, ಪು. 12*

*552. **ಸುಬ್ರಹ್ಮಣ್ಯ ಕೆ.,** ಮೈಸೂರಿನ ತಾತಯ್ಯ ಕೆ.ವಿ.ವಿ. ಪ್ರೆಸ್, ಮೈಸೂರು, 1958. ಪು. 45-46*

*553. **ವಾಸುದೇವಾಚಾರ್ಯ ಕೆ.,** ನೆನಪುಗಳು, ಪು. 41*

ತಂದೆ ತಾಯಿಗಳೂ ತಮ್ಮ ಹೆಣ್ಣು ಮಕ್ಕಳನ್ನು ಶಾಲೆಗೆ ಸೇರಿಸಿದರು. ದಿವಾನರಾದ ರಂಗಾಚಾರ್ಲುರವರು ತಮ್ಮ ಹೆಣ್ಣು ಮಕ್ಕಳನ್ನು ಈ ಶಾಲೆಗೆ ಸೇರಿಸಿದ್ದರು. ಸ್ತ್ರೀಶಿಕ್ಷಣಕ್ಕೆ ಪ್ರೋತ್ಸಾಹ ನೀಡಲು ಅರಮನೆ ಮತ್ತು ಸರ್ಕಾರದ ಮೂಲಕ ನೂರಾರು ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿ ವೇತನಗಳನ್ನು, ಉಚಿತ ಊಟ, ವಸ್ತ್ರಗಳ ಸೌಕರ್ಯಗಳನ್ನು ಕಲ್ಪಿಸಲಾಗಿತ್ತು[553]. ಇದರಿಂದ ಪ್ರೇರಿತಗೊಂಡು ಮೇಲುಕೋಟೆ, ನಂಜನಗೂಡು ಮತ್ತಿತರ ಕಡೆ ಬಾಲಕಿಯರ ಶಾಲೆಗಳು ಅಸ್ತಿತ್ವಕ್ಕೆ ಬಂದವು. ಮಹಾರಾಣಿ ಬಾಲಿಕಾ ಶಾಲೆಯು ಆರಂಭದಲ್ಲಿ ಉನ್ನತ ಜಾತಿಗಳ ಹೆಣ್ಣುಮಕ್ಕಳಿಗೆ ಮಾತ್ರ ಸೀಮಿತಗೊಂಡಿದ್ದು 1891ರಲ್ಲಿ ಸರ್ಕಾರವು ತನ್ನ ಹತೋಟಿಗೆ ಪಡೆದುಕೊಂಡು 1895ರಲ್ಲಿ ಪ್ರೌಢಶಾಲೆಯನ್ನಾಗಿಸಿತು. 1901ರಲ್ಲಿ ಮಹಾರಾಣಿ ಎರಡನೆ ದರ್ಜೆ ಕಾಲೇಜಿಗೆ ಪರಿವರ್ತನೆಗೊಂಡಿತು[554].

ಮೈಸೂರಿನಲ್ಲಿ ಸ್ತ್ರೀಶಿಕ್ಷಣವನ್ನು ಕುರಿತಂತೆ ಸಾಮಾಜಿಕ ಕಟ್ಟಳೆಗಳು ಬಿಗಿಯಾಗಿದ್ದರಿಂದ ಅವುಗಳ ವಿರುದ್ಧ ಸರ್ಕಾರವು ಹೋಗಲು ಇಚ್ಛಿಸಲಿಲ್ಲ. ಹಾಗಾಗಿ ಪ್ರಾಥಮಿಕ ಹಂತದ ನಂತರದ ಸ್ತ್ರೀ ಶಿಕ್ಷಣ ಹೆಚ್ಚು ಬೆಳವಣಿಗೆಗೊಳ್ಳಲಿಲ್ಲ. ಅದಕ್ಕೆ ಪ್ರಮುಖ ಕಾರಣ ಪ್ರಾಥಮಿಕ ಶಾಲೆಯ ನಂತರದ ಶಾಲೆಗಳಲ್ಲಿ ಪುರುಷ ಅಧ್ಯಾಪಕರು ನೇಮಕಗೊಂಡಿರುತ್ತಿದ್ದುದೇ ಆಗಿತ್ತು. ಉನ್ನತ ಶಿಕ್ಷಣ ಪಡೆದ ಅರ್ಹ ಸ್ತ್ರೀ ಶಿಕ್ಷಕರು ಸಿಗದಿದ್ದುದರಿಂದ ನೇಮಕ ಮಾಡಲಾಗುತ್ತಿರಲಿಲ್ಲ. ಸ್ತ್ರೀಯರು ಉನ್ನತ ಶಿಕ್ಷಣ ಪಡೆದು ಶಿಕ್ಷಕ ವೃತ್ತಿಗೆ ಬಂದರೆ ಬೇರೆ ಬಾಲಕ ಶಾಲೆಯ ಶಿಕ್ಷಕರಿಗಿಂತ ಶೇ. 25ರಷ್ಟು ಹೆಚ್ಚು ವೇತನ ನೀಡಲಾಗುವುದೆಂದು ಸರ್ಕಾರ ಪ್ರಕಟಿಸಿತು[555]. ಸ್ತ್ರೀಯರು ಶಿಕ್ಷಕ ತರಭೇತಿ ಪಡೆಯುವುದನ್ನು ಪ್ರೋತ್ಸಾಹಿಸಲು ಮಾಸಿಕ ಸ್ಟೈಫಂಡನ್ನು ಲೋಯರ್ ಸೆಕೆಂಡರಿ ತರಭೇತಿಗೆ 8 ರಿಂದ 10 ರೂಪಾಯಿಗಳಿಗೆ ಮತ್ತು ಅಪ್ಪರ್ ಸೆಕೆಂಡರಿ ತರಭೇತಿಗೆ 12 ರೂಪಾಯಿಗಳಿಗೆ ಹೆಚ್ಚಿಸಲಾಯಿತು. ಪ್ರಾಥಮಿಕ ಶಾಲೆಗಳಿಗೆ ಬಾಲಕಿಯರ ಪ್ರವೇಶ ಹೆಚ್ಚಿಸಲು ಬಡ ವಿದ್ಯಾರ್ಥಿನಿಯರಿಗೆ ಬಟ್ಟೆ, ಪುಸ್ತಕ, ಸ್ಲೇಟ್ ಮತ್ತು ಲೇಖನಿಗಳನ್ನು ಒದಗಿಸಲಾಯಿತು[556]. 1902-03ರಲ್ಲಿ ಸರ್ಕಾರವು 2,736ರೂ.ಗಳನ್ನು 30 ಹೆಣ್ಣುಮಕ್ಕಳಿಗೆ ವಿದ್ಯಾರ್ಥಿ ವೇತನವಾಗಿ ನೀಡಿತು[557].

ವಿಶ್ವೇಶ್ವರಯ್ಯನವರು ಮಹಿಳಾ ಶಿಕ್ಷಣದ ಹಿನ್ನಡೆಗೆ ಕಾರಣವನ್ನು ತಿಳಿಸುತ್ತಾ "ಪಾಶ್ಚಾತ್ಯ ರೀತಿಯ ಸಾಮಾಜಿಕ ಜೀವನಕ್ರಮ ನಮ್ಮಲ್ಲಿ ನಿರ್ಲಕ್ಷಿಸಲ್ಪಟ್ಟಿದೆ. ಪುರುಷರು, ಮಹಿಳೆಯರು ಸಾಮಾಜಿಕವಾಗಿ ಒಟ್ಟಾಗಿ ಸೇರುವ ಪರಿಸರ ನಮ್ಮಲ್ಲಿಲ್ಲ"[558] ಎಂಬುದನ್ನು ಒತ್ತಿ ಹೇಳಿದ್ದರು. ಅದನ್ನು ಬೆಂಬಲಿಸುವಂತಹ ಒಂದು ಘಟನೆಯನ್ನು ದಿ ಮೈಸೂರು

---

554. *ಕ್ವಿಂಕೇನಿಯಲ್ ರಿಪೋರ್ಟ್, ಎಜುಕೇಷನ್ 1911-16, ಪು. 80*

555. *ಹಯವದನರಾವ್ ಸಿ. (ಸಂ.), ಪೂರ್ವೋಕ್ತ, ಸಂಪುಟ -IV, ಪು. 577*

556. *ಸದಾಶಿವ ಕೆ., ಪೂರ್ವೋಕ್ತ, ಪು. 201*

557. *ರಿವ್ಯೂ ಆಫ್ ದಿ ಪ್ರೋಗ್ರೆಸ್ ಆಫ್ ಎಜುಕೇಷನ್ ಇನ್ ದಿ ಮೈಸೂರ್ ಸ್ಟೇಟ್, ಕ್ವಿನ್‌ಕ್ವೇನಿಯಂ, 1911-16, ಬೆಂಗಳೂರು, 1918, ಪು. 80*

558. **ಕರ್ನಾಟಕ ಗೆಸೆಟಿಯರ್**, *ಮೈಸೂರು ಜಿಲ್ಲೆ, 1988, ಪು. 654*

559. *ದಿ ಮೈಸೂರು ಸ್ಟ್ಯಾಂಡರ್ಡ್, ದಿನಪತ್ರಿಕೆ: ಅಕ್ಟೋಬರ್ 21. 1905. ಪ್ಯಾಲೇಸ್ ಪೇಪರ್ ಕಟ್ಟಿಂಗ್ಸ್ 1 (b). ಮೈಸೂರು ಬ್ರಾಂಚ್ ಆರ್ಕೈವ್ಸ್, ಪು. 1*

ಸ್ಟಾಂಡರ್ಡ್ ಪತ್ರಿಕೆಯು 1905ರಲ್ಲಿ ಉಲ್ಲೇಖಿಸಿತ್ತು. ಮೈಸೂರಿನ ಲಕ್ಷಮ್ಮ ಮತ್ತು ಪುಟ್ಟಮ್ಮ ಎಂಬ ವಿದ್ಯಾರ್ಥಿನಿಯರು ಮದ್ರಾಸ್ ಡ್ರಾಯಿಂಗ್ (ಪ್ರಾಥಮಿಕ)ಪರೀಕ್ಷೆ ತೆಗೆದುಕೊಂಡಿದ್ದರು. ಪುರುಷ ವಿದ್ಯಾರ್ಥಿಗಳೊಂದಿಗೆ ಕುಳಿತು ಪರೀಕ್ಷೆ ಬರೆಯಲು ಮುಜುಗರ ಪಟ್ಟು ಸರಿಯಾಗಿ ಉತ್ತರಿಸಲಾಗದೆ ಪರೀಕ್ಷೆಯಲ್ಲಿ ಅನುತ್ತೀರ್ಣರಾದರು[559]. ಇಂತಹ ಸಾಮಾಜಿಕ ನಿರ್ಬಂಧಗಳು ಸ್ತ್ರೀಶಿಕ್ಷಣದ ಬಗ್ಗೆ ಇದ್ದರೂ ಸಹ ಮೈಸೂರಿನ ಮಹಾರಾಣಿ ಕಾಲೇಜು ದಕ್ಷಿಣ ಭಾರತದಲ್ಲೇ ಅತ್ಯಂತ ಯಶಸ್ವಿಯುತವಾದ ಶೈಕ್ಷಣಿಕ ಸಂಸ್ಥೆಯಾಗಿ ಬೆಳೆಯಿತು. ಮದ್ರಾಸ್‌ನ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರ 1903-04ರ ವರದಿಯಂತೆ "ಒಬ್ಬ ಬ್ರಾಹ್ಮಣ ಸ್ತ್ರೀ ಬಿ.ಎ. ಪರೀಕ್ಷೆಯಲ್ಲಿ ಪಾಸಾದಳು. ಮತ್ತೊಬ್ಬ ಬ್ರಾಹ್ಮಣ ಸ್ತ್ರೀ ಎಫ್.ಎ. ಪರೀಕ್ಷೆಯಲ್ಲಿ ಇಡೀ ಪ್ರಾಂತ್ಯಕ್ಕೆ ಮೊದಲನೆಯವಳಾಗಿ ಬಂದಳು. ಮೇಲಿನ ಅಭ್ಯರ್ಥಿಗಳೆಲ್ಲ ಮೈಸೂರಿನ ಮಹಾರಾಣಿ ಕಾಲೇಜಿನವರು. ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಇಬ್ಬರು ಯುರೋಪಿಯನ್ ಬಾಲಕಿಯರು ಉತ್ತೀರ್ಣರಾಗಿದ್ದಾರೆ. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ 50 ಬಾಲಕಿಯರು ಪಾಸಾಗಿದ್ದು ಒಬ್ಬ ಬ್ರಾಹ್ಮಣ ಬಾಲಕಿ ತನ್ನ ಇತರ ಎಲ್ಲ ಬಾಲಕ ಪ್ರತಿಸ್ಪರ್ಧಿಗಳನ್ನು ಮೀರಿಸಿದ್ದಾಳೆ. ಒಟ್ಟು 50 ಬಾಲಕಿಯರಲ್ಲಿ 8 ಮಹಮದೀಯ ಬಾಲಕಿಯರು, 10ಕ್ರಿಶ್ಚಿಯನ್ ಬಾಲಕಿಯರು, ಉಳಿದವರೆಲ್ಲ ಹಿಂದೂಗಳು. ಅದರಲ್ಲಿ 10 ಜನ ಬ್ರಾಹ್ಮಣ ವಿಧವೆಯರು"[560] ಎಂದು ದಿ ಹಿಂದೂ ಪತ್ರಿಕೆ ಪ್ರಕಟಿಸಿತು.

ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ 1902 ರಿಂದ ಮುಸ್ಲಿಮರು, ಕ್ರೈಸ್ತರು, ಯಹೂದಿಗಳು ಮುಂತಾದ ಪಂಗಡಗಳ ಸ್ತ್ರೀಯರು ಹಿಂದೂಗಳೊಡನೆ ವ್ಯಾಸಂಗ ಮಾಡಬಹುದೆಂದಾಯಿತು. ಪ್ರಮುಖವಾಗಿ ಕ್ರಿಶ್ಚಿಯನ್ ಬಾಲಕಿಯರಿಗೆ ಪ್ರವೇಶಾವಕಾಶ ನೀಡಿದ್ದು ಬಹುಸಂಖ್ಯೆಯ ಯೂರೇಷಿಯನ್ ಬಾಲಕಿಯರು ಸೇರಲು ಅವಕಾಶ ನೀಡಿತು. ಈ ಪ್ರವೇಶಾತಿಯ ನಿರ್ಣಯವು ಕಾಲೇಜಿನ ಮತ್ತು ಬಾಲಕಿಯರ ಕಲಿಕೆಯ ಮೇಲೆ ಹೇಗೆ ಪ್ರಭಾವ ಬೀರಿತೆಂಬುದನ್ನು ಕಾಲೇಜಿನ ಸ್ತ್ರೀ ಮೇಲ್ವಿಚಾರಕಿ ಹೇಳಿದಂತೆ "ಇತ್ತೀಚೆಗೆ ಇಂಗ್ಲಿಷ್ ಭಾಷೆಯನ್ನಾಡುವ ಬಾಲಕಿಯರು ಹೈಸ್ಕೂಲಿಗೆ ಪ್ರವೇಶ ಪಡೆದುದು ಇಲ್ಲಿನ ಹಿಂದೂ ವಿದ್ಯಾರ್ಥಿಗಳು ತಾವು ಹೈಸ್ಕೂಲ್‌ಗೆ ಪ್ರವೇಶ ಪಡೆದ ಆರಂಭಕ್ಕಿಂತ ಸುಲಭವಾಗಿ ತಮ್ಮ ಪಠ್ಯಗಳಲ್ಲಿನ ಹಾಗೂ ಉಪನ್ಯಾಸಗಳಲ್ಲಿನ ಇಂಗ್ಲಿಷನ್ನು ಅರ್ಥಮಾಡಿಕೊಳ್ಳುತ್ತಾರೆ"[561]. ಹೀಗೆ ಸ್ಥಳೀಯ ಬಾಲಕಿಯರು ಇಂಗ್ಲಿಷ್ ಬಲ್ಲ ಕ್ರಿಶ್ಚಿಯನ್ ಬಾಲಕಿಯರ ಜೊತೆಗಿನ ಸಹಭಾಗಿತ್ವದಲ್ಲಿ ಇಂಗ್ಲಿಷನ್ನು ಹೆಚ್ಚು ಸಮರ್ಥವಾಗಿ

---

*560. ದಿ ಹಿಂದೂ., ದಿನಪತ್ರಿಕೆ, ಫೆಬ್ರವರಿ 6, 1905. ಪ್ಯಾಲೆಸ್ ಪೇಪರ್ ಕಟ್ಟಿಂಗ್ಸ್ 1 (b), ಮೈಸೂರು ಬ್ರಾಂಚ್ ಆರ್ಕೈವ್ಸ್, ಪು. 1*

*561. ದಿ ಮೈಸೂರು ಸ್ಟಾಂಡರ್ಡ್, ದಿನಪತ್ರಿಕೆ, ಅಕ್ಟೋಬರ್ 21, 1905, ಪು. 1*

*562. ಸದಾಶಿವ ಕೆ., ಪು. 204*

ಅರ್ಥೈಸಿಕೊಳ್ಳುವಂತಾದರು. ಮುಸ್ಲಿಂ ಬಾಲಕಿಯರ ವಿದ್ಯಾಭ್ಯಾಸಕ್ಕೂ ಆದ್ಯತೆ ನೀಡಲಾಯಿತು. ಮೈಸೂರು ನಗರದ ಪರ್ದಾ ಧರಿಸಿ ಬರುವ ಬಾಲಕಿಯರನ್ನು ಶಾಲೆಗೆ ಕರೆತಂದು ಮನೆಗೆ ವಾಪಸ್ಸು ಬಿಡಲು ಎತ್ತಿನ ಗಾಡಿಗಳನ್ನು ಸರ್ಕಾರ ಉಚಿತವಾಗಿ ಒದಗಿಸಿತು[562].

ಮೈಸೂರಿನಲ್ಲಿ ಎ. ನರಸಿಂಹ ಅಯ್ಯಂಗಾರ್‌ರವರ ನೇತೃತ್ವದಲ್ಲಿ ವಿಧವೆಯರಿಗೆ ವಸತಿ ಗೃಹವೊಂದು ಸ್ಥಾಪನೆಗೊಂಡು ಉಚಿತ ಊಟ, ವಸತಿ ಒದಗಿಸುತ್ತಿತ್ತು. ಆ ನಂತರ ಸರ್ಕಾರವು ಇದನ್ನು ತನ್ನ ಹತೋಟಿಗೆ ತೆಗೆದುಕೊಂಡು ಮಹಾರಾಣಿ ಕಾಲೇಜಿನ ನಿಲಯದ ಕಟ್ಟಡದಲ್ಲೇ ಸ್ಥಾಪಿಸಿತು. ವಿದ್ಯಾರ್ಥಿನಿಯರ ಹಾಸ್ಟೆಲ್ ಸ್ಥಾಪನೆಯಿಂದಾಗಿ ಬೇರೆ ಊರುಗಳಿಂದ ಬಂದ ಬಾಲಕಿಯರಿಗೆ ಅನುಕೂಲವಾಯಿತು. ದಿ ಹಿಂದೂ ಪತ್ರಿಕೆಯು ಉಲ್ಲೇಖಿಸುವಂತೆ "ಲೋಯರ್ ಸೆಕೆಂಡರಿಯಲ್ಲಿ ಉತ್ತೀರ್ಣರಾದ ಹೊರ ಸ್ಥಳಗಳ ಬಾಲಕಿಯರು ಕಾಲೇಜಿಗೆ ಸೇರಲು ಮೈಸೂರಿಗೆ ಬರುತ್ತಿರುವುದು ಹೆಚ್ಚಾಗಿದೆ. ಯಾವ ದೇಶದಲ್ಲಿ ತಂದೆ ತಾಯಿಗಳು ತಮ್ಮ ಹೆಣ್ಣುಮಕ್ಕಳನ್ನು ಕೆಲವೇ ಗಂಟೆಗಳ ಕಾಲ ಶಾಲೆಗೆ ಕಳುಹಿಸಲು ಕಳವಳ ಪಡುತ್ತಿದ್ದರೋ ಅದೇ ಮಕ್ಕಳನ್ನು ಶಿಕ್ಷಣಕ್ಕಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಕಳುಹಿಸುವಂತಾಗಿದ್ದಾರೆ. ಇದೊಂದು ಪ್ರಗತಿಯೆಂದೇ ಹೇಳಬಹುದು. ಈ ವರ್ಷ ಅಂತಹ ಎಂಟು ವಿದ್ಯಾರ್ಥಿನಿಯರು ಕಾಲೇಜು ಸೇರಿದ್ದಾರೆ. ಹೌದು ಕಾಲೇಜಿಗೆ ಅಪಾರ ಹಣ ವೆಚ್ಚವಾಗುತ್ತಿದೆ. ಆದರೆ ಆರಂಭದಲ್ಲಿ ಹೀಗೆ ವಿನಿಯೋಗಿಸದಿದ್ದರೆ ಪ್ರಯೋಜನಕರವಾದ ದಿಕ್ಕಿನಲ್ಲಿ ಪ್ರಗತಿ ಸಾಧಿಸಲಾಗುವುದಿಲ್ಲ. ಮತ್ತು ಪ್ರಾಚೀನವೂ, ಕಠಿಣವೂ ಆದ ಪೂರ್ವಾಗ್ರಹದ ಗೋಡೆಗಳನ್ನು ಒಡೆದು ನಿಧಾನವಾಗಿ ಇಡೀ ಜನಾಂಗವನ್ನು ಎತ್ತಲು ಮತ್ತು ಸಾಂಪ್ರದಾಯಿಕ ಜನ ಮತ್ತು ವರ್ಗಗಳನ್ನು ಆಧುನಿಕ ಹಾದಿಯ ಶಾಲಾ ಶಿಕ್ಷಣದತ್ತ ಕೊಂಡೊಯ್ಯಲು ಈ ವೆಚ್ಚ ಅಡ್ಡಬರಲಾರದು"[563] ಎಂದು ತಿಳಿಸಿತು.

ಸ್ತ್ರೀಶಿಕ್ಷಣದಲ್ಲಿ ಅತ್ಯಂತ ಹಿಂದುಳಿದಿದ್ದ ಮತ್ತು ಸಾಂಪ್ರದಾಯಿಕತೆಯ ಪ್ರತಿರೂಪವಾದ ಅರಸು ಜನಾಂಗದ ಹೆಣ್ಣುಮಕ್ಕಳಿಗಾಗಿ 1913ರಲ್ಲಿ ನಜರ್‌ಬಾದ್ ಅರಮನೆ ಬಂಗಲೆಯ ಆವರಣದಲ್ಲಿ "ವಾಣಿವಿಲಾಸ ಅರಸು ಗರ್ಲ್ಸ್ ಸ್ಕೂಲ್" ಎಂಬ ಶಾಲೆಯನ್ನು ಪ್ರಾರಂಭಿಸಲಾಯಿತು. ಈ ಶಾಲೆಯ ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿ ಸಂತೋಷ ವ್ಯಕ್ತಪಡಿಸಿದ ನಾಲ್ವಡಿಯವರು "ನಮ್ಮ ಜನ ಸಮುದಾಯದ ಇತಿಹಾಸದಲ್ಲಿ ಇದೊಂದು ಪ್ರಮುಖ ಘಟನೆ ಮತ್ತು ಇದು ಅರಸು ಮನೆತನದ ಹೆಣ್ಣುಮಕ್ಕಳ ಶೈಕ್ಷಣಿಕ ಚಟುವಟಿಕೆಗಳ ಹೊಸಯುಗದ ಪ್ರಾರಂಭಕ್ಕೆ ನಾಂದಿಯಾಗಿದೆ. ಯಾವ ಸಮುದಾಯದ ಅರ್ಧದಷ್ಟು ಸದಸ್ಯರು ಅನಕ್ಷರಸ್ತರಾಗಿರುತ್ತಾರೋ, ಅಜ್ಞಾನಿಗಳಾಗಿರುತ್ತಾರೋ ಆ ಸಮುದಾಯ ಮುಂದುವರಿಯಲಾರದು ಮತ್ತು ನಮ್ಮ ಸಮುದಾಯವನ್ನು, ಕುರಿತು ಈ ರೀತಿಯ ಅಭಿಪ್ರಾಯ ತಳೆಯಲಾಗಿದೆ

563. *ದಿ ಹಿಂದೂ, ದಿನಪತ್ರಿಕೆ, ಫೆಬ್ರವರಿ 6, 1905, ಪು. 2*

ಎಂದು ಹೇಳಲು ಹಿಂಜರಿಕೆಯಾಗುತ್ತದೆ. ನಿಮ್ಮ ಭಾವೀ ಮಕ್ಕಳ ತಾಯಂದಿರ ಶಿಕ್ಷಣವನ್ನು ನಾವ್ಯಾರೂ ಕಡೆಗಾಣಿಸುವಂತಿಲ್ಲ. ನೀವು ಸಂದರ್ಭದ ನಿಜ ಬೇಡಿಕೆ ಅರಿತು, ಎಚ್ಚೆತ್ತು, ಈ ಶಾಲೆ ಪ್ರಾರಂಭಿಸಿರುವುದು ಸಮಯೋಚಿತವಾಗಿದೆ.......... ನಿಮಗೆ ತಿಳಿದಂತೆ ನಮ್ಮ ಮನೆತನದ ಭವಿಷ್ಯದ ಬಹುಪಾಲು ಈ ಸಂಸ್ಥೆಯ ಜಯಾಪಜಯದ ಮೇಲಿದೆ"[564] ಎಂದು ಹೇಳುವ ಮೂಲಕ ಸ್ತ್ರೀ ಶಿಕ್ಷಣದ ಮಹತ್ವವನ್ನು ಎತ್ತಿಸಾರಿದರು. ನಾಲ್ವಡಿಯವರ ಆತ್ಮದಂತಿದ್ದ ಯುವರಾಜರಾದ ಕಂಠೀರವ ನರಸಿಂಹರಾಜರೂ ಸಹ ಗಂಡಸರು ಹೆಂಗಸರನ್ನು ಅಸಡ್ಡೆಯಿಂದ ಕಾಣುವುದನ್ನು ಮಾರ್ಪಡಿಸಿಕೊಳ್ಳುವಂತೆ ತಿಳಿಸಿದ್ದರಲ್ಲದೆ "ಮಹಿಳೆಯರನ್ನು ಗಂಡಸರು ತಮ್ಮ ಸಮಭಾಗಿನಿಯರಂತೆ ಕಂಡು ದೇಶೋನ್ನತಿ ಸಾಧನೆಯ ಪ್ರಯತ್ನದಲ್ಲಿ ಅವರ ಶಕ್ತಿ ಸಾಮರ್ಥ್ಯಗಳನ್ನು ಉಪಯೋಗಿಸಿಕೊಳ್ಳದೇ ಹೋದರೆ ಅರ್ಧ ಬಲವೇ ಕಡಿಮೆಯಾದಂತಾಗುವುದು" ಎಂದು ಎಚ್ಚರಿಕೆ ಹೇಳಿದ್ದರು. ಅಲ್ಲದೆ "ನಮ್ಮ ನಾಡಿನ ಮಹಿಳೆಯರು ವಿದ್ಯಾವತಿಯರಾಗಬೇಕು ;ಸುಸಂಸ್ಕೃತರಾಗಬೇಕು; ಅವರ ಸ್ಥಿತಿಯು ಮೇಲಾಗಬೇಕು. ಸಮಾಜ ಸುಧಾರಣೆಗೆ ಅದೇ ಮುಖ್ಯಾಧಾರ ; ಎಲ್ಲ ಸಾಮಾಜಿಕ ಪ್ರಗತಿ ಸಾಧನೆಗಳಿಗೂ ಅದೇ ಮೂಲ"[565] ಎಂದು ಸ್ಪಷ್ಟವಾಗಿ ತಿಳಿಸಿದ್ದರು.

ನಾಲ್ವಡಿಯವರು ವಾಣಿವಿಲಾಸ ಅರಸು ಗರ್ಲ್ಸ್ ಸ್ಕೂಲ್‌ನ ಬಹುಮಾನ ವಿತರಣಾ ಸಮಾರಂಭದಲ್ಲಿ ಭಾಗವಹಿಸಿ 1913ರಿಂದ 1917ರವರೆಗೆ ಆ ಶಾಲೆಯಲ್ಲಾದ ಸಾಂಖ್ಯಿಕ ಬೆಳವಣಿಗೆಯನ್ನು ಕುರಿತು "1913 ರ ಏಪ್ರಿಲ್‌ನಲ್ಲಿ ಕೇವಲ 20 ವಿದ್ಯಾರ್ಥಿನಿಯರನ್ನೊಳಗೊಂಡು ಪ್ರಾರಂಭವಾದ ಶಾಲೆಗೆ ಎರಡು ವರ್ಷದ ನಂತರ ವಸತಿ ಸೌಲಭ್ಯ ಪಡೆಯುವ ವಿದ್ಯಾರ್ಥಿನಿಯರು ಸೇರಿದರು. ಈಗ ಮನೆಯಿಂದ ಬರುವ ವಿದ್ಯಾರ್ಥಿನಿಯರ ಸಂಖ್ಯೆ 25 ಇದ್ದು, ವಸತಿ ಸೌಲಭ್ಯ ಪಡೆಯುವ ವಿದ್ಯಾರ್ಥಿನಿಯರ ಸಂಖ್ಯೆ 31 ಆಗಿದ್ದು ತೃಪ್ತಿಕರ ಬೆಳವಣಿಗೆ ಎಂದೇ ಹೇಳಬಹುದು" ಎಂದು ಪ್ರಶಂಸಿಸಿದರು. ಹಾಗೆಯೇ ಹೆಣ್ಣು ಮಕ್ಕಳಿಗೆ ಕ್ರೀಡಾಶಿಕ್ಷಣದ ಮಹತ್ವವನ್ನು ಕುರಿತು "ಕ್ರೀಡೆಗೂ ಸಾಕಷ್ಟು ಗಮನ ನೀಡಲಾಗುತ್ತಿದೆ ಅಂದುಕೊಂಡಿದ್ದೇನೆ. ಮನೆಯೊಳಗೆ ಸಿಕ್ಕಿಹಾಕಿಕೊಂಡಿರುವ ನಮ್ಮ ಹೆಣ್ಣು ಮಕ್ಕಳು ಸದೃಢರಾಗಿ ಉತ್ತಮ ಜಾಣ್ಮೆ ಹೊಂದಿರಬೇಕು"[566] ಎಂದು ಹೇಳಿದರು. ಶ್ರೀಮಂತ ಅರಸು ಕುಟುಂಬಗಳು ಮನೆಪಾಠ ಹೇಳಿಸುವ ಮೂಲಕ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿದ್ದೇವೆಂದು ಭಾವಿಸಿದ ಸಂಪ್ರದಾಯವಾದಿಗಳಿಗೆ ನಾಲ್ವಡಿಯವರು "ನಾನು ಸರ್ಕಾರ ನಡೆಸುವ ಪರೀಕ್ಷೆಗಳಿಗೆ ವಿದ್ಯಾರ್ಥಿನಿಯರು ಹಾಜರಾಗುವಂತೆ ಬೆಂಬಲಿಸುವವರ ಪರವಾಗಿದ್ದೇನೆ. ಅಧ್ಯಯನಕ್ಕೆ ಅದು ಇಂಬು ಕೊಡುತ್ತದೆ ; ಯಾವುದೆ ನಿಶ್ಚಿತ ಗುರಿಯಿಲ್ಲದೆ ಅಧ್ಯಯನ ಮಾಡುವುದು ಖಂಡಿತವಾಗಿಯೂ ಅವರ ಉತ್ಸಾಹದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ" ಎಂದು ಒಬ್ಬ ಶಿಕ್ಷಣ ತಜ್ಞರಂತೆ ತಿಳಿ ಹೇಳಿದರು. ಇನ್ನೂ

---

*564. **ಸ್ಪೀಚಸ್ ಆಫ್ ಹಿಸ್ ಹೈನೆಸ್**, ಪೂರ್ವೋಕ್ತ, ಪು. 103*

*565. **ವೆಂಕಟರಾಮಯ್ಯ ಸಿ.ಕೆ.**, ದಿವಂಗತ ಶ್ರೀಮದ್ಯುವರಾಜರವರು, ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು. 1957. ಪು. 11*

*566. **ಸ್ಪೀಚಸ್ ಆಫ್ ಹಿಸ್ ಹೈನೆಸ್**, ಪೂರ್ವೋಕ್ತ, ಪು. 147*

ಮುಂದುವರಿದು "ಅರಸು ಮನೆತನದವರಲ್ಲಿ ಮನವಿ ಮಾಡುವುದೇನೆಂದರೆ ನಿಮ್ಮ ಮತಸ್ಥರ ಹಿರಿಯರು, ಕಿರಿಯರು, ಅದರಲ್ಲೂ ಕಿರಿಯರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಶ್ರಮಿಸಬೇಕು. ಕೇವಲ ಗಂಡು ಮಕ್ಕಳಿಗೆ ಶಿಕ್ಷಣ ನೀಡಿದರೆ ಸಾಲದು; ಶಿಕ್ಷಿತ ಹೆಣ್ಣು ಮಕ್ಕಳೂ ಅಷ್ಟೇ ಅನಿವಾರ್ಯವಾದವರು. ಹೆಣ್ಣು ಮಕ್ಕಳು ಅನಕ್ಷರಸ್ಥ ಮತ್ತು ಅಜ್ಞಾನಿಗಳಾಗಿರಬಹುದಾದ ಕಾಲ ಇದಲ್ಲ. ಈ ದಿನಗಳಲ್ಲಿ ಒಂದು ಮತಸ್ಥರ ಹೆಣ್ಣು ಮಕ್ಕಳು ಅಶಿಕ್ಷಿತರು ಎನ್ನುವ ಅಪವಾದಕ್ಕಿಂತ ಹೆಚ್ಚಿನ ಅಪವಾದ ಬೇರೆ ಇಲ್ಲ. ಅರಸು ಮತಸ್ಥರು ಅವರ ಜವಾಬ್ದಾರಿಯನ್ನು ಅರ್ಥ ಮಾಡಿಕೊಳ್ಳಬೇಕು ಎಂದು ನಾನು ಆಗ್ರಹಿಸುತ್ತೇನೆ ಮತ್ತು ಶೈಕ್ಷಣಿಕ ವಿಚಾರ ಸಂಬಂಧ ಬಿಗಿ ಹಿಡಿತ ಹಿಡಿದು ಮುಂದುವರಿಯಬೇಕು. ಎಲ್ಲ ಸಾಮಾಜಿಕ ಮತ್ತು ರಾಜಕೀಯ ಖಾಯಿಲೆಗಳಿಗೆ ಇದೊಂದೇ ರಾಜಮದ್ದು. ಆದ್ದರಿಂದ ಅದನ್ನು ನಿರ್ಲಕ್ಷಿಸಬಾರದು"[567] ಎಂದು ಹೇಳಿದರು. ಹೀಗೆ ನಾಲ್ವಡಿಯವರು ಅರಸು ಜನಾಂಗದಲ್ಲಿ ಹುಟ್ಟಿದ್ದರಿಂದ ಆ ಜನಾಂಗದ ಬೆಳವಣಿಗೆ ರಾಜ್ಯದ ಇತರ ಜನಾಂಗಗಳಿಗೆ ಮಾದರಿಯಾಗಬೇಕೆಂದು ಆಶಿಸಿ ಅವರಲ್ಲಿ ಶಿಕ್ಷಣದ ಮಹತ್ವವನ್ನು ಅದರಲ್ಲೂ ಸ್ತ್ರೀ ಶಿಕ್ಷಣದ ಮಹತ್ವವನ್ನು ಹಲವಾರು ಬಾರಿ ಒತ್ತಿ ಹೇಳುತ್ತಾರೆ. ಹೀಗೆ ನಾಲ್ವಡಿಯವರು ತಮ್ಮ ಸ್ಫೂರ್ತಿಯುತ ಹಾಗೂ ತೀಕ್ಷ್ಣ ವಿಷಯಗಳ ಮೂಲಕ ಜನರಲ್ಲಿದ್ದ ಸ್ತ್ರೀ ಶಿಕ್ಷಣದ ಬಗೆಗಿನ ಅಸಡ್ಡೆ, ಪೂರ್ವಾಗ್ರಹವನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಮೈಸೂರು ಅರಮನೆ ಮತ್ತು ಸರ್ಕಾರ ನೀಡಿದ ಪ್ರೋತ್ಸಾಹಗಳಿಂದಾಗಿ ಸ್ತ್ರೀಶಿಕ್ಷಣದಲ್ಲಿ ತೀವ್ರ ಬೆಳವಣಿಗೆಯುಂಟಾಯಿತು. 1899-1900ರಲ್ಲಿ ಒಟ್ಟು 215 ಶಿಕ್ಷಣ ಸಂಸ್ಥೆಗಳಿದ್ದು ವಿದ್ಯಾರ್ಥಿನಿಯರ ಸಂಖ್ಯೆ 11,678 ಆಗಿತ್ತು. 1909-1910 ರ ವೇಳೆಗೆ ಶಿಕ್ಷಣ ಸಂಸ್ಥೆಗಳ ಸಂಖ್ಯೆ 283ಕ್ಕೂ, ಒಟ್ಟು ವಿದ್ಯಾರ್ಥಿನಿಯರ ಸಂಖ್ಯೆ 21,886 ರಷ್ಟಾಯಿತು[568]. 1910-11ರಲ್ಲಿ ಗರ್ಲ್ಸ್ ಸ್ಕೂಲ್‌ಗಳು 294 ಇದ್ದು, 17,093ವಿದ್ಯಾರ್ಥಿನಿಯರಿದ್ದರು. ಅದೇ ವರ್ಷ ಬೇರೆ ಶಾಲೆಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿನಿಯರ ಸಂಖ್ಯೆ 5,881 ಆಗಿತ್ತು. 1915-16ರ ವೇಳೆಗೆ 525 ಶಾಲೆಗಳಿದ್ದು 1921-22ರಲ್ಲಿ 727 ಶಾಲೆಗಳಿದ್ದವು[569]. 1926-27ರ ವೇಳೆಗೆ ಬಾಲಕಿಯರ ಶಾಲೆಗಳ ಸಂಖ್ಯೆ 788ಕ್ಕೂ ವಿದ್ಯಾರ್ಥಿನಿಯರ ಸಂಖ್ಯೆ 37,764ಕ್ಕೇರಿತು. ಜೊತೆಗೆ ಬಾಲಕರ ಶಾಲೆಗಳಲ್ಲೂ 23,629 ವಿದ್ಯಾರ್ಥಿನಿಯರು ಅಧ್ಯಯನ ಮಾಡುತ್ತಿದ್ದರು. ಹಾಗಾಗಿ ಶಾಲೆಗೆ ಹಾಜರಾಗುತ್ತಿದ್ದ ಬಾಲಕಿಯರ ಸಂಖ್ಯೆ 61,043 ಆಗಿತ್ತು[570]. 1935-36ರ ವೇಳೆಗೆ ಗರ್ಲ್ಸ್‌ಸ್ಕೂಲ್‌ಗಳ ಸಂಖ್ಯೆ 522ಕ್ಕಿಳಿಯಿತು. ಬಾಲಕಿಯರ ಶಾಲೆಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿನಿಯರ ಸಂಖ್ಯೆ 37,393 ಆಗಿದ್ದರೆ ಸಾಮಾನ್ಯ ಶಾಲೆಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿನಿಯರ ಸಂಖ್ಯೆ 32,622 ರಷ್ಟಾಯಿತು[571]. ಹೀಗೆ ಸ್ತ್ರೀ ಶಿಕ್ಷಣದ ಮೇಲೆ ಸಮಾಜಕ್ಕಿದ್ದ ನಿರ್ಬಂಧವು ಸಡಿಲುತ್ತಾ ಹೋದಂತೆ ವಿದ್ಯಾರ್ಥಿನಿಯರು ಬಾಲಕರೊಂದಿಗೆ ಸಾಮಾನ್ಯ ಶಾಲೆಗಳಲ್ಲಿ ಹೆಚ್ಚೆಚ್ಚು ಪ್ರವೇಶ

---

567. *ಸ್ಪೀಚಸ್ ಆಫ್ ಹಿಸ್ ಹೈನೆಸ್, ಪೂರ್ವೋಕ್ತ, ಪು. 148-149*

568. *ರಿವ್ಯೂ ಆಫ್ ದಿ ಪ್ರೋಗ್ರೆಸ್ ಆಫ್ ಎಜುಕೇಷನ್ ಇನ್ ದಿ ಮೈಸೂರ್ ಸ್ಟೇಟ್, ಕ್ವಿನ್‌ಕ್ವೇನಿಯಂ, 1911-16, ಪು. 81*

569. *ಅದೇ., ಪು. 53-56*

570. *ಮೈಸೂರ್ ಅಡ್ಮಿನಿಸ್ಟ್ರೇಷನ್ ರಿಪೋರ್ಟ್,, 1926-27, ಪು. 88*

571. *ಅದೇ., 1935-36, ಪು. 130*

ಪಡೆಯಲಾರಂಭಿಸಿದರು. ಸರ್ಕಾರವು ಸಮಾಜವು ಒಪ್ಪಿಕೊಂಡ ಸಾಮಾಜಿಕ ಪರಿವರ್ತನೆಯನ್ನು ಪ್ರೋತ್ಸಾಹಿಸಲು ಬಾಲಕಿಯರ ಶಾಲೆಗಳನ್ನು ಹಂತಹಂತವಾಗಿ ಕಡಿತಗೊಳಿಸುತ್ತಾ ಹೋಯಿತು. ಹಾಗಾಗಿ 1920ರ ನಂತರ ಮೈಸೂರಿನಲ್ಲೇ ಅನೇಕ ಸ್ತ್ರೀಯರು ಪದವಿ ಪಡೆದರು. ಸರ್ಕಾರವು 1927ರ ನಂತರ ಲಿಂಗಾಧಾರಿತ ಅನರ್ಹತೆಗಳನ್ನು ತೆಗೆದು ಸ್ತ್ರೀಯರಿಗೂ ಚುನಾವಣೆಗೆ ಸ್ಪರ್ಧಿಸುವ ಮುಂತಾದ ನಾಗರಿಕ ಹಕ್ಕುಗಳನ್ನು ನೀಡಿದ್ದರಿಂದ ಸ್ತ್ರೀಯರಲ್ಲಿ ಶಿಕ್ಷಣಕ್ಕೆ, ಸಂಘಟನೆಗೆ ಸ್ಫೂರ್ತಿ ಸಿಕ್ಕಂತಾಯಿತು. ಸಂಸ್ಕೃತ ಶಾಲೆಗಳಲ್ಲಿ ಹತ್ತು ವರ್ಷದ ಮೇಲ್ಪಟ್ಟ ಹೆಣ್ಣು ಮಕ್ಕಳ ಪ್ರವೇಶಾತಿಗಿದ್ದ ನಿರ್ಬಂಧವನ್ನು ತೆಗೆದುಹಾಕಿ ಸಂಸ್ಕೃತ ಶಿಕ್ಷಣ ಪಡೆಯಲು ಸ್ತ್ರೀಯರಿಗೆ ಅವಕಾಶ ಒದಗಿಸಲಾಯಿತು. ಶಾಲೆಗೆ ಹೋಗದ ಹೆಣ್ಣುಮಕ್ಕಳು ಮತ್ತು ಗೃಹಿಣಿಯರು ವಿರಾಮ ಕಾಲದಲ್ಲಿ ಶಿಕ್ಷಣ ಪಡೆಯುವಂತಾಗಲು ಗೃಹಶಿಕ್ಷಣ ಶಾಲೆಗಳನ್ನು ಸ್ಥಾಪಿಸಲಾಯಿತು. ಈ ಶಾಲೆಗಳಲ್ಲಿ ಓದುವುದು, ಬರೆಯುವುದು, ಲೆಕ್ಕ, ಆರೋಗ್ಯ, ವಿಜ್ಞಾನ, ಚಿತ್ರಕಲೆ, ಹೆಣಿಗೆ, ಕಸೂತಿ, ಗೃಹಾಲಂಕಾರ ಮುಂತಾದ ಉಪಯುಕ್ತ ವಿದ್ಯೆಗಳನ್ನು ಕಲಿಸಲಾಗುತ್ತಿತ್ತು. ಈ ಶಾಲೆಗಳಿಗೆ ಸರ್ಕಾರವು ಅನುದಾನ ನೀಡುತ್ತಿತ್ತು. ಮಿಡ್ಲ್ ಮತ್ತು ಹೈಸ್ಕೂಲುಗಳ ಪಠ್ಯವಿಷಯವು 1922ರಲ್ಲಿ ಸುಧಾರಣೆಗೊಂಡು ಗೃಹವಿಜ್ಞಾನ, ಚಿತ್ರಕಲೆ, ಬ್ರಷ್ ಕೆಲಸ, ಸಂಗೀತ, ಹೊಲಿಗೆ, ಕಸೂತಿ, ರೋಗಿಗಳ ಶುಶ್ರೂಷೆ ಮುಂತಾದ ಹೆಣ್ಣು ಮಕ್ಕಳಿಗೆ ವಿಶೇಷವಾಗಿ ಒಲವಿರುವ ವಿಷಯಗಳನ್ನು ಸೇರಿಸಲಾಯಿತು. 1937ರಲ್ಲಿ ಎಸ್.ಎಸ್.ಎಲ್.ಸಿ. ಯೋಜನೆಯು ಸುಧಾರಿತಗೊಂಡ ನಂತರ ಪಾಕಶಾಸ್ತ್ರ, ಬಟ್ಟೆಯನ್ನು ಒಗೆಯುವ ಕಲೆ, ಕಸೂತಿ, ಸಂಗೀತ ಮತ್ತು ಚಿತ್ರಕಲೆಗಳನ್ನು ಗೃಹಕಲೆಯ ವಿಭಾಗದ ವಿಷಯಗಳನ್ನಾಗಿಸಲಾಯಿತು. ಪದವೀಧರ ಉಪಾಧ್ಯಾಯರನ್ನು ಹೊಸದಿಲ್ಲಿಯ ಲೇಡಿ ಇರ್ವಿನ್ ಕಾಲೇಜಿಗೆ ಗೃಹವಿಜ್ಞಾನದ ತರಭೇತಿಗಾಗಿ ಕಳುಹಿಸುವ ವ್ಯವಸ್ಥೆ ಮಾಡಲಾಯಿತು. ಗೃಹ ವಿಜ್ಞಾನವನ್ನು ಒಂದು ಐಚ್ಛಿಕ ವಿಷಯವನ್ನಾಗಿ ಮಾರ್ಪಡಿಸಲಾಯಿತು. ರಾಜ್ಯದಲ್ಲಿ ಹೆಣ್ಣು ಮಕ್ಕಳಿಗೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾಮಟ್ಟದಲ್ಲಿ ಶಿಕ್ಷಣವು ಉಚಿತವಾಗಿತ್ತು. ಪ್ರೌಢಶಾಲೆಗಳಲ್ಲಿ ಹೆಣ್ಣುಮಕ್ಕಳಿಗೆ ಶುಲ್ಕದಲ್ಲಿ ಅರ್ಧ ರಿಯಾಯ್ತಿ ಇತ್ತು. 1925ರಲ್ಲಿ ಮೈಸೂರು ಮಹಿಳಾ ಸಮ್ಮೇಳನ ನಡೆದ ನಂತರ ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಪ್ರಚಾರ ಸಿಕ್ಕಿ ಬೆಳವಣಿಗೆಗೆ ಕಾರಣವಾಯಿತು. ಹಾಗೆಯೇ ಬೆಂಗಳೂರಿನ ಮಹಿಳಾ ಸೇವಾ ಸಮಾಜ, ಮೈಸೂರಿನ ವನಿತಾ ಸಮಾಜ ಮುಂತಾದ ಖಾಸಗಿ ಸ್ತ್ರೀ ಸಂಘಟನೆಗಳೂ ಸಹ ಸ್ತ್ರೀ ಶಿಕ್ಷಣಕ್ಕೆ ಉತ್ತೇಜನ ನೀಡಿದವು. ಮೈಸೂರು ವಯಸ್ಕರ ಶಿಕ್ಷಣ ಸಮಿತಿಯು ಮಹಿಳೆಯರಿಗೆ ಶಿಕ್ಷಣ ವಿಸ್ತರಿಸಲು ಶ್ರಮಿಸಿತು[572].

ಹೀಗೆ ನಾಲ್ವಡಿಯವರ ಕಾಲಾವಧಿಯಲ್ಲಿ ಸರ್ಕಾರ, ಅರಮನೆ ಮತ್ತು ಬೌದ್ಧಿಕ ಸುಧಾರಕ ವರ್ಗ ಒಗ್ಗೂಡಿ

---

*572. ಸೂರ್ಯನಾಥ್ ಯು. ಕಾಮತ್., ಪೂರ್ವೋಕ್ತ, ಭಾಗ-3. ಪು. 42-43*

ನಡೆಸಿದ ಪರಿಶ್ರಮದಿಂದ ಸಮಾಜದಿಂದ ಅಸಡ್ಡೆಗೊಳಗಾಗಿದ್ದ ಸ್ತ್ರೀ ಶಿಕ್ಷಣವು ಪ್ರಾಮುಖ್ಯತೆ ಪಡೆಯಿತು. ಈ ಬೆಳವಣಿಗೆಯ ಹಂತದಲ್ಲಿ ಅನೇಕ ವಿರೋಧಗಳು ಕಾಣಿಸಿಕೊಂಡರೂ ಸಹ ರಾಜಶಕ್ತಿಯ ದೃಢ ನಿಲುವಿನಿಂದಾಗಿ, ಕಾರ್ಯಕ್ರಮಗಳಿಂದಾಗಿ ಕ್ಷೀಣಿಸುತ್ತಾ ಹೋದವು. ಜೊತೆಗೆ ಆಧುನಿಕ ಶಿಕ್ಷಣವು ನಾಗರಿಕತೆಯ ಪ್ರತೀಕವಾಗಿದ್ದರಿಂದ ಇಂಗ್ಲಿಷ್ ಶಿಕ್ಷಣ ಪಡೆದಿಲ್ಲದವರು ಅಶಿಕ್ಷಿತರು, ಅನಾಗರಿಕರೆಂಬ ಭಾವನೆ ನಗರ ಸಂಸ್ಕೃತಿಯಲ್ಲಿ ರೂಪುಗೊಂಡಿತು. ಉನ್ನತ ವರ್ಗದ ಯುವಕರು ಆಧುನಿಕ ಶಿಕ್ಷಣ ಪಡೆದಂತೆ ಆಧುನಿಕ ಶಿಕ್ಷಣ ಪಡೆದ ಯುವತಿಯರನ್ನು ತಮ್ಮ ಸಂಗಾತಿಗಳನ್ನಾಗಿ ಅಪೇಕ್ಷಿಸಲಾರಂಭಿಸಿದರು. ಇದರಿಂದಾಗಿ "ಭಾರತದ ಉನ್ನತ ವರ್ಗದ ಸ್ತ್ರೀಯರು ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆಯಲು ಆಸಕ್ತರಾದರು. ಸಾಂಪ್ರದಾಯಿಕರಾದ ಸ್ತ್ರೀಯರ ತಂದೆ ತಾಯಿಗಳು ತಮ್ಮ ಹೆಣ್ಣುಮಕ್ಕಳಿಗೆ ಇಂಗ್ಲಿಷ್ ಶಿಕ್ಷಣ ದೊರೆತರೆ ಒಳ್ಳೆಯ ವೈವಾಹಿಕ ಸಂಬಂಧಗಳು ದೊರೆಯುತ್ತವೆಂಬ ಒತ್ತಡದಿಂದಲೂ ಶಿಕ್ಷಣ ಕೊಡಿಸಲು ಮುಂದಾದರು ಮತ್ತು ವಿವಾಹವಾದ ಮೇಲೂ ಅವರು ತಮ್ಮ ಪುರುಷ ಸಂಗಾತಿಯೊಂದಿಗೆ ಬೌದ್ಧಿಕ ಕೀಳರಿಮೆ ಎಂಬ ಕಂದಕದಿಂದ ಪ್ರತ್ಯೇಕಗೊಂಡು ಬಾಧೆಗೊಳಗಾಗುವುದನ್ನು ತಪ್ಪಿಸಲು ಸಹ ಮುಂದಾದರು"[573]. ಹೀಗೆ ಉನ್ನತ ವರ್ಗಗಳು ತಮ್ಮ ಸಾಮಾಜಿಕ ಸ್ಥಾನಮಾನವನ್ನು, ಹಿತವನ್ನು ರಕ್ಷಿಸಿಕೊಳ್ಳಲು ಸ್ತ್ರೀಶಿಕ್ಷಣಕ್ಕೆ ಆರಂಭದಲ್ಲಿ ಮುಂದಾದರು. ಅನಂತರ ನಾಲ್ವಡಿ ಮುಂತಾದವರು ತಮ್ಮ ಭಾಷಣಗಳ ಮೂಲಕ ಸಮಾಜವನ್ನು ಎಚ್ಚರಿಸಿ ಸದೃಢ ಸಮಾಜದ ಬೆಳವಣಿಗೆಗೆ ಸ್ತ್ರೀ ಶಿಕ್ಷಣ ಅವಶ್ಯಕವೆಂದು ಪ್ರತಿಪಾದಿಸಿದ್ದುದು ಸಹ ಸ್ತ್ರೀ ಶಿಕ್ಷಣದ ಬೆಳವಣಿಗೆಗೆ, ಸಾಮಾಜಿಕ ಪರಿವರ್ತನೆಗೆ ಸ್ಫೂರ್ತಿ ನೀಡಿತು.

### *v) ಹಿಂದುಳಿದ ವರ್ಗಗಳಿಗೆ ಶಿಕ್ಷಣ ಮತ್ತು ಸರ್ಕಾರಿ ಹುದ್ದೆ*

ಪ್ರಾಚೀನ ಕಾಲದಿಂದಲೂ ಬ್ರಾಹ್ಮಣೇತರರಿಗೆ ಅದರಲ್ಲೂ ಬಹುಸಂಖ್ಯಾತರಾದ ಶೂದ್ರರಿಗೆ ಶಿಕ್ಷಣವನ್ನು ನಿರಾಕರಿಸಲಾಗಿತ್ತು. ಹಾಗಾಗಿ ಶೂದ್ರರು ಶಿಕ್ಷಣದಿಂದ ವಂಚಿತರಾಗಿದ್ದರು. ಆಧುನಿಕ ಶಿಕ್ಷಣವು ಪ್ರವೇಶಿಸಿದಾಗಲೂ ಶಿಕ್ಷಣದ ಸಂಪರ್ಕ ಹೊಂದಿದ್ದ ಬ್ರಾಹ್ಮಣರು ಬಹುಬೇಗ ಪಾಶ್ಚಿಮಾತ್ಯ ಶಿಕ್ಷಣದ ಮಹತ್ವವನ್ನರಿತು ಆಧುನಿಕ ಶಿಕ್ಷಣ ಪಡೆದು ಏಕಸ್ವಾಮ್ಯತ್ವ ಸಾಧಿಸಿದರು. ಆಧುನಿಕ ಶಿಕ್ಷಣವು ಸೃಷ್ಟಿಸಿದ ಸರ್ಕಾರಿ ಉದ್ಯೋಗ ಮುಂತಾದವುಗಳಲ್ಲೂ ಸ್ವಾಮ್ಯತೆ ಸಾಧಿಸಿದರು. 20ನೇ ಶತಮಾನದ ಆರಂಭದ ನಂತರ ಆಧುನಿಕ ಶಿಕ್ಷಣ ಎಂಬುದು ನಾಗರಿಕತೆಯ ಕುರುಹು ಮತ್ತು ಸರ್ಕಾರಿ ಸೇವೆಗಳ ಹೆಬ್ಬಾಗಿಲು ಎಂದು ತಿಳಿದು ಜಾಗೃತಗೊಂಡ ಬ್ರಾಹ್ಮಣೇತರರು ಆಧುನಿಕ ಶಿಕ್ಷಣ ಪಡೆಯಲು ಮುಂದಾದರು. ಅದರಲ್ಲೂ ಈಗಿನ ಉತ್ತರ ಕರ್ನಾಟಕದ ಆಗಿನ ಬೊಂಬಾಯಿ ಪ್ರಾಂತ್ಯದ ಭಾಗಗಳಲ್ಲಿ ಡೆಪ್ಯುಟಿ

---

*573. ಚಿರೋಲ್, ವ್ಯಾಲೆಂಟೀನ್., ಇಂಡಿಯನ್ ಅನ್‌ರೆಸ್ಟ್, ಮ್ಯಾಕ್‌ಮಿಲನ್ ಅಂಡ್ ಕೋ., ಲಂಡನ್, 1910, ಪು. 253*

ಚೆನ್ನಬಸಪ್ಪನವರು ಶಿಕ್ಷಣಾಧಿಕಾರಿಯಾಗಿ ಕನ್ನಡಕ್ಕೆ ಪ್ರೋತ್ಸಾಹ ಕೊಟ್ಟಂತೆ "ಭೂಮಕ್ಕಳಾದ ಲಿಂಗವಂತ ವಿದ್ಯಾರ್ಥಿಗಳು ಪಾಶ್ಚಿಮಾತ್ಯ ಶಿಕ್ಷಣವನ್ನು ಸ್ವೀಕರಿಸುವಂತೆ ಪ್ರೋತ್ಸಾಹಿಸಿದರು". ಹಾಗೆಯೇ 1868ರಲ್ಲಿ ಶ್ರೀದುರ್ಗದ ಮಹಾಸ್ವಾಮಿಗಳು ಎಲ್ಲ ಲಿಂಗಾಯಿತ ಜನರಿಗೆ ಪ್ರಕಟಣೆಯೊಂದನ್ನು ಕಳುಹಿಸಿ ಅದರಲ್ಲಿ "ಲಿಂಗಾಯಿತ ಹುಡುಗರು ಇಂಗ್ರೇಜಿ ಕಲಿತು ಶ್ಯಾಹಣೆರಾಗಿ ಸರಕಾರಿ ಕೆಲಸಗಳಲ್ಲಿ ಸೇರಬೇಕೆಂಬುವ ಉದ್ದೇಶದಿಂದ ಬೆಳಗಾಂವಿಯಲ್ಲಿ 50 ಲಿಂಗಾಯಿತರ ಹುಡುಗರನ್ನು ಇಟ್ಟು ಆ ಹುಡುಗರಿಗೆ ಅನ್ನ, ವಸ್ತ್ರ ಮೊದಲಾದವುಗಳನ್ನು ತಾವು ತಮ್ಮ ಸ್ವಂತ ಖರ್ಚಿನಿಂದ ಪೂರೈಸುವ ನಿಶ್ಚಯ ಮಾಡಿದ್ದಾರೆ" ಎಂದು ತಿಳಿಸಿದರು. ಈ ಉದ್ದೇಶಕ್ಕಾಗಿ ಬೆಳಗಾಂವಿಯಲ್ಲಿ ದೊಡ್ಡ ಮನೆಯೊಂದನ್ನು ಬಾಡಿಗೆಗೆ ಪಡೆದು ಊಟೋಪಚಾರದ ವ್ಯವಸ್ಥೆ ಮಾಡಿ ಪ್ರಾಥಮಿಕ ಹಂತದಿಂದ ಪ್ರೌಢಶಿಕ್ಷಣದವರೆಗಿನ ವಿದ್ಯಾಭ್ಯಾಸ ಕೊಡಿಸಲು ವ್ಯವಸ್ಥೆ ಮಾಡಿದ್ದರು. ಹೀಗೆ ಇಂಗ್ಲಿಷ್ ಶಿಕ್ಷಣವನ್ನು ಲಿಂಗಾಯಿತ ವಿದ್ಯಾರ್ಥಿಗಳಿಗೆ ನೀಡಿ ಅವರನ್ನು ಸರ್ಕಾರಿ ಹುದ್ದೆಗಳಿಗೆ ಸೇರಿಸುವ ಪ್ರಯತ್ನಕ್ಕೆ ಮಠಮಾನ್ಯಗಳು ಆಸಕ್ತಿ ವಹಿಸಿದ್ದುದು ಆಧುನಿಕ ಕಾಲದಲ್ಲಿ ಇಂಗ್ಲಿಷ್ ಭಾಷೆ ಮತ್ತು ಸರ್ಕಾರಿ ಹುದ್ದೆಗಳನ್ನು ಗಳಿಸುವ ಆಕರ್ಷಣೆಯನ್ನು ತಿಳಿಸುತ್ತದೆ[574]. ಅದರಲ್ಲೂ ಮೈಸೂರು ಸರ್ಕಾರ ಕೈಗೊಂಡ ಕಡ್ಡಾಯ ಪ್ರಾಥಮಿಕ ಶಿಕ್ಷಣ ಮುಂತಾದ ಕ್ರಮಗಳಿಂದ ಶಿಕ್ಷಣವು ಸಾರ್ವತ್ರಿಕಗೊಂಡಿತು. ಜಾಗೃತಗೊಂಡ ಬ್ರಾಹ್ಮಣೇತರರು ಶಿಕ್ಷಣ ಸೌಲಭ್ಯ ಗಳಿಸಲು ಮತ್ತು ಸರ್ಕಾರಿ ಸೇವೆಯಲ್ಲಿ ಪಾಲು ಪಡೆಯಲು ಸರ್ಕಾರಕ್ಕೆ ಬೇಡಿಕೆ ಸಲ್ಲಿಸಲಾರಂಭಿಸಿದರು. ಇದಕ್ಕಾಗಿ ಅವರು ಜಾತಿಯಾಧಾರಿತ ಸಂಘಗಳನ್ನು ಸ್ಥಾಪಿಸಿಕೊಳ್ಳುವ ಮೂಲಕ ಸಂಘಟಿತಗೊಂಡರು. ಹಾಗೆ ಸ್ಥಾಪಿತವಾದ ಪ್ರಮುಖವಾದ ಜಾತಿ ಸಂಘಟನೆಗಳೆಂದರೆ 1905ರಲ್ಲಿ ಆರಂಭವಾದ ವೀರಶೈವ ಮಹಾಸಭಾ, 1906ರಲ್ಲಿ ಆರಂಭವಾದ ಒಕ್ಕಲಿಗರ ಸಂಘ, ಕುರುಬರ ಸಂಘ, ಮುಸ್ಲಿಮರ ಸಂಘ, ಆದಿದ್ರಾವಿಡ ಅಭಿವೃದ್ಧಿ ಸಂಘ ಮುಂತಾದವು. ಈ ಸಂಘಗಳು ಬ್ರಾಹ್ಮಣರು ಹೊಂದಿದ್ದ ಸರ್ಕಾರಿ ಸೇವೆ ಮತ್ತು ಶಿಕ್ಷಣ ಕ್ಷೇತ್ರದ ಮೇಲಿನ ಹಿಡಿತವನ್ನು ವಿರೋಧಿಸಲು ಬ್ರಾಹ್ಮಣೇತರರು ಎಂಬ ಹೆಸರಲ್ಲಿ ಸಂಘಟನೆಗೊಂಡು ಚಳುವಳಿಯನ್ನೇ ಆರಂಭಿಸಿದರು. ಈ ಸಂಘಗಳು ತಮ್ಮ ತಮ್ಮ ಜಾತಿಗಳ ಶೈಕ್ಷಣಿಕ ಹಾಗೂ ಸಾಮಾನ್ಯ ಬೆಳವಣಿಗೆಗಾಗಿ ದುಡಿಯಲು ಪಣತೊಟ್ಟಿದ್ದವು. ವಿದ್ಯಾರ್ಥಿ ವೇತನ ನೀಡಲು, ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲು ಹಣಕಾಸನ್ನು ಸಂಗ್ರಹಿಸಿದವು. ಹಾಗೆಯೇ ಫೀ ರಿಯಾಯಿತಿ, ವಿದ್ಯಾರ್ಥಿ ವೇತನಗಳಿಗೆ ಮತ್ತು ಸರ್ಕಾರಿ ಹುದ್ದೆಗಳಿಗೆ ನೇಮಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸುತ್ತಿದ್ದವು[575]. ಹಿಂದುಳಿದ ವರ್ಗಗಳ ಪ್ರತಿನಿಧಿಗಳು ತಮಗೆ ಸಿಗಬೇಕಾದ ಸಮರ್ಪಕ ರೀತಿಯ ಅಧಿಕಾರ ಮತ್ತು ಸೌಲಭ್ಯಗಳನ್ನು ಪಡೆಯಲು ಒಗ್ಗೂಡಿದರು. 1916ರಲ್ಲಿ ಹಿಂದುಳಿದ ವರ್ಗಗಳ ಶಿಕ್ಷಣಕ್ಕಾಗಿ ಒಂದು ಲಕ್ಷ ರೂಪಾಯಿ ಮೊತ್ತವನ್ನು ತೆಗೆದಿಡಬೇಕೆಂದು ನ್ಯಾಯ ವಿಧಾಯಕ ಸಭೆಯಲ್ಲಿ ನಿರ್ಣಯವು ಮಂಡಿಸಲ್ಪಟ್ಟಿತು. ಮಹಾರಾಜರು ಈ ನಿರ್ಣಯದ ಹಿಂದಿನ ಉದ್ದೇಶವನ್ನರಿತು

---

*574.* ***ಧಾರವಾಡಕರ ರಾ. ಯ.,*** *ಹೊಸಗನ್ನಡ ಸಾಹಿತ್ಯದ ಉದಯಕಾಲ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, 1975. ಪು. 27-28*

*575.* ***ಅಬ್ದುಲ್ ಅಜೀಜ್.,*** *ದಿ ಬ್ಯಾಕ್‌ವರ್ಡ್ ಕ್ಲಾಸ್ ಮೂವ್‌ಮೆಂಟ್ ಇನ್ ಕರ್ನಾಟಕ 1918-79, ಜರ್ನಲ್ ಆಫ್ ಹಿಸ್ಟಾರಿಕಲ್ ಸ್ಟಡೀಸ್, ಸಂ. 16, ಮೈಸೂರು, 1980. ಪು. 51-52*

*576.* ***ವೀರತಪ್ಪ ಕೆ.,*** *ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ, ಬೆಂಗಳೂರು, 1977. ಪು. 7*

ಒಂದು ಲಕ್ಷ ರೂಪಾಯಿ ಮೊತ್ತವನ್ನು ತೆಗೆದಿಡಲು ಒಪ್ಪಿದರು[576]. ಇದು ಬ್ರಾಹ್ಮಣೇತರರಿಗೆ ಪ್ರೋತ್ಸಾಹ ನೀಡಿದಂತಾಯಿತು. ಬ್ರಾಹ್ಮಣೇತರರು 1917 ರಲ್ಲಿ "ಪ್ರಜಾಮಿತ್ರ ಮಂಡಲಿ" ಎಂಬ ರಾಜಕೀಯ ಸಂಸ್ಥೆಯೊಂದನ್ನು ಸ್ಥಾಪಿಸಿಕೊಂಡರು. ಬ್ರಿಟಿಷರು ಜಾರಿಗೆ ತಂದ ಆಡಳಿತ ವ್ಯವಸ್ಥೆಯಲ್ಲಿ ಕಂದಾಯ ಅಧಿಕಾರಿಗಳಿಗೆ ನೀಡಿದ ಅಪಾರ ಅಧಿಕಾರದಿಂದಾಗಿ ತಾಲ್ಲೂಕಿನ ಅಮಲ್ದಾರರೆಂದರೆ 'ತಳತ್ತಾಯಿ' ಎಂಬ ಗೌರವ ಗಳಿಸಿದವು. ಇಂತಹ ಗೌರವಾನ್ವಿತ ಹುದ್ದೆಗಳನ್ನು ಐರೋಪ್ಯರು, ಅರಸು ಪಂಗಡದವರು ಮತ್ತು ಬ್ರಾಹ್ಮಣರೇ ಹೆಚ್ಚು ಹೊಂದಿದ್ದರು. ಹೊಸದಾಗಿ ಶಿಕ್ಷಣ ಪಡೆದ ಬ್ರಾಹ್ಮಣೇತರರು ಅಂತಹ ಆಕರ್ಷಕ ಹುದ್ದೆಗಳನ್ನು ಗಳಿಸಲು ಚಳವಳಿಯನ್ನೇ ಕೈಗೊಂಡರು. ಒಟ್ಟಾರೆ ಶಿಕ್ಷಣ ಸೌಲಭ್ಯ ಮತ್ತು ಸರ್ಕಾರಿ ಹುದ್ದೆಗಳಲ್ಲಿ ಮೀಸಲಾತಿ ಪಡೆಯುವುದು ಈ ಚಳವಳಿಯ ಮೂಲ ಉದ್ದೇಶವಾಗಿತ್ತು. 1918ರ ಜೂನ್‌ನಲ್ಲಿ ಬ್ರಾಹ್ಮಣೇತರ ವರ್ಗದ ಪ್ರತಿನಿಧಿಗಳು ಒಂದು ನಿಯೋಗ ಹೋಗಿ ಮಹಾರಾಜರಿಗೆ ಮನವಿ ಪತ್ರ ಸಲ್ಲಿಸಿದರು. ಅದರಲ್ಲಿ ಅವರು ಬ್ರಾಹ್ಮಣ ವಿದ್ಯಾರ್ಥಿಗಳೊಂದಿಗೆ ಸ್ಪರ್ಧಿಸಲು ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಗಳು ಅಸಮರ್ಥರಾಗಿದ್ದಾರೆ. ಬ್ರಾಹ್ಮಣರ ಪ್ರಾಬಲ್ಯವಿರುವ ಮೈಸೂರಿನ ಅಧಿಕಾರ ವರ್ಗ ಬ್ರಾಹ್ಮಣೇತರರ ಹಿತ ರಕ್ಷಿಸಲಾರದು. ಇದನ್ನು ತಪ್ಪಿಸಲು ಬ್ರಾಹ್ಮಣೇತರರಿಗೆ ಹೆಚ್ಚಿನ ನೌಕರಿಗಳನ್ನು ಕಲ್ಪಿಸಬೇಕು ಹಾಗೂ ಸಂಸ್ಥಾನದ ಹೊರಗಿನಿಂದ ಬ್ರಾಹ್ಮಣೇತರ ವಿದ್ಯಾವಂತರನ್ನು ಕರೆಸಬೇಕು. ಬ್ರಾಹ್ಮಣೇತರರಿಗೆ ವಿದ್ಯಾರ್ಹತೆಯನ್ನು ಸಡಿಲಿಸಿ ಒಂದೇ ವರ್ಗದ ಏಕಸ್ವಾಮ್ಯವನ್ನು ಆಡಳಿತದಲ್ಲಿ ತಪ್ಪಿಸಬೇಕೆಂದು ಕೋರಿದ್ದರು[577]. ನಾಲ್ವಡಿಯವರು ಈ ನಿಯೋಗವನ್ನು ಉದ್ದೇಶಿಸಿ "ವಿಶೇಷ ಅನಾನುಕೂಲತೆಗಳನ್ನು ತಾವು ಅನುಭವಿಸುತ್ತಿರುವುದಾಗಿ ಭಾವಿಸಿರುವ ಜಾತಿ ವರ್ಗದ ಅಹವಾಲನ್ನು ಸ್ವೀಕರಿಸುವ ಈ ಸಂದರ್ಭವನ್ನು ಸ್ವಾಗತಿಸುತ್ತೇನೆ......... ನಿಮ್ಮ ದೃಷ್ಟಿಕೋನ ನನಗೆ ತಿಳಿದಿದೆ ಮತ್ತು ಆ ಕೊರತೆಗಳ ಕುರಿತು ಸಹಾನುಭೂತಿಯಿಂದ, ಎಚ್ಚರಿಕೆಯಿಂದ ವಿಚಾರ ಮಾಡಿ ಸಾಧ್ಯವಾದಷ್ಟು ಪರಿಹರಿಸಲು ಪ್ರಯತ್ನಿಸುತ್ತೇನೆ. ಎಲ್ಲಾ ವರ್ಗಗಳ ಜನರಿಗೂ ಸಾರ್ವಜನಿಕ ಸೇವೆಯಲ್ಲಿ ಪ್ರಾತಿನಿಧ್ಯ ಸರಿಯಾದ ರೀತಿ ಸಿಗಬೇಕೆಂಬುದು ನನ್ನ ತೀವ್ರ ಆಸೆಯಾಗಿದೆ. ಗತ್ಯಂತರವಿಲ್ಲದೆ ಸರ್ಕಾರಿ ಸೇವೆಯಲ್ಲಿ ಬ್ರಾಹ್ಮಣರೇ ಸಿಂಹಪಾಲು ಪಡೆದಿದ್ದಾರೆ ಮತ್ತು ಶಿಕ್ಷಣದ ಹಾಗೂ ಜ್ಞಾನದ ಪ್ರಸರಣದಿಂದ ಕ್ರಮೇಣ ಅಸಮಾನತೆ ನಿವಾರಣೆಯಾಗುತ್ತದೆ ಎಂದು ತಿಳಿದಿದ್ದೇನೆ. ಇದೇ ಸಂದರ್ಭದಲ್ಲಿ ಕಷ್ಟಪಟ್ಟು ದುಡಿದು ತನಗೆ ಸಿಕ್ಕ ಅವಕಾಶವನ್ನು ಸಂಪೂರ್ಣ ಉಪಯೋಗಿಸಿಕೊಳ್ಳುತ್ತಿರುವ ಒಂದು ವರ್ಗದವರನ್ನು ಶಿಕ್ಷಿಸಲೂ ನನಗೆ ಮನಸ್ಸಿಲ್ಲ. ಏಕೆಂದರೆ ಅಂತಹ ಸದವಕಾಶ ಎಲ್ಲರ ಮುಂದೂ ಇದೆ. ಬ್ರಾಹ್ಮಣರಲ್ಲಿ ಉಳಿದ ಜಾತಿ ಪಂಗಡಗಳಲ್ಲಿರುವಂತೆಯೇ ನಿಷ್ಠರಿದ್ದಾರೆ. ಈ ಪ್ರತಿಭಾವಂತ ಪಂಗಡದ ಪ್ರತಿನಿಧಿಗಳು ನನಗೆ ಮತ್ತು ನನ್ನ ರಾಜ್ಯಕ್ಕೆ

---

*577. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು. 296*

*- ಉಲ್ಲೇಖ : ಕುಪ್ಪುಸ್ವಾಮಿ ಬಿ., ಬ್ಯಾಕ್‌ವರ್ಡ್ ಕ್ಲಾಸ್ ಮೂವ್‌ಮೆಂಟ್ ಇನ್ ಕರ್ನಾಟಕ, ಬೆಂಗಳೂರು ವಿಶ್ವವಿದ್ಯಾನಿಲಯ, 1978, ಪು. 54*

ಈ ಹಿಂದೆ ಸಲ್ಲಿಸಿದ ಮತ್ತು ಈಗಲೂ ಸಲ್ಲಿಸುತ್ತಿರುವ ಸೇವೆಯನ್ನು ಕಿಂಚಿತ್ತೂ ಮರೆಯುವಂತಿಲ್ಲ. ಎಲ್ಲಾ ಜಾತಿವರ್ಗಗಳ ಬಗ್ಗೆ ನಿಷ್ಪಕ್ಷ ನೀತಿಯನ್ನು ಅನುಷ್ಠಾನಗೊಳಿಸುವುದು ನನ್ನ ಆಕಾಂಕ್ಷೆಯಾಗಿದ್ದು ಯಾವುದೇ ಜಾತಿ ಒಂದಕ್ಕೆ ಒತ್ತು ನೀಡದೆ ಮತ್ತೊಂದನ್ನು ಕಡೆಗಾಣಿಸದೆ, ರಾಜ್ಯದ ನಿರಂತರ ಒಳಿತಿಗೆ ಶ್ರಮಿಸುವುದು ನನ್ನ ಗುರಿ.

ರಾಜ್ಯದ ಹಿಂದುಳಿದ ವರ್ಗದವರನ್ನು ಪ್ರೋತ್ಸಾಹಿಸಲು ನನ್ನ ಸರ್ಕಾರ ಸರ್ವಪ್ರಯತ್ನ ನಡೆಸುತ್ತಿದೆ ಮತ್ತು ಪ್ರಗತಿಯಲ್ಲಿ ಹಿಂದೆ ಬಿದ್ದಿರುವ ಎಲ್ಲಾ ಜಾತಿ ವರ್ಗಗಳನ್ನು ಈ ಪ್ರಗತಿಯ ಓಟದಲ್ಲಿ ಉತ್ತೇಜನ ನೀಡುವುದನ್ನು ಮುಂದಿನ ದಿನಗಳಲ್ಲಿ ಹಿಂದೆಂದಿಗಿಂತಲೂ ಹೆಚ್ಚಾಗಿ ನೀಡುವ ನೀತಿಯನ್ನು ಜಾರಿಗೊಳಿಸುತ್ತೇವೆ"[578] ಎಂದು ಘೋಷಿಸಿದರು. ಮೇಲ್ಕಂಡ ಭಾಷಣದಲ್ಲಿ ನಾಲ್ವಡಿಯವರು ತಮ್ಮ ಎಲ್ಲ ಪ್ರಜೆಗಳಿಗೂ ಸಮಾನ ಹಕ್ಕು, ಅವಕಾಶ ಮತ್ತು ರಕ್ಷಣೆ ಒದಗಿಸಲು ಬದ್ಧರಾಗಿದ್ದರೂ ಸಹ ಆಧುನಿಕ ಶಿಕ್ಷಣ ಅಸಮರ್ಪಕವಾಗಿ ಹಂಚಲ್ಪಟ್ಟಿದ್ದುದನ್ನು ಅರಿತವರಾಗಿದ್ದು ಹಿಂದುಳಿದ ವರ್ಗಗಳಿಗೆ ಶಿಕ್ಷಣ ಸೌಲಭ್ಯ ಮತ್ತು ಸರ್ಕಾರಿ ಸೇವೆಯಲ್ಲಿ ಪಾಲನ್ನು ಒದಗಿಸುವ ಮೂಲಕ ಸಾಮಾಜಿಕ ನ್ಯಾಯವನ್ನೊದಗಿಸುವ ಬದ್ಧತೆಯನ್ನೂ ವ್ಯಕ್ತಪಡಿಸಿದ್ದಾರೆ. ಅದರಂತೆ ನಾಲ್ವಡಿಯವರು 1918ರ ಆಗಸ್ಟ್ 4ರಂದು ಬ್ರಾಹ್ಮಣೇತರರ ಬೇಡಿಕೆಗಳನ್ನು ಪರಿಶೀಲಿಸಲು ರಾಜ್ಯದ ಮುಖ್ಯ ನ್ಯಾಯಾಧೀಶರಾಗಿದ್ದ ಲೆಸ್ಲಿ ಮಿಲ್ಲರ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿದರು. ಈ ಸಮಿತಿ 1919ರಲ್ಲಿ ವರದಿಯೊಂದನ್ನು ನೀಡಿತು. ಅದರಲ್ಲಿ ಬ್ರಾಹ್ಮಣರನ್ನು ಬಿಟ್ಟು ಸರ್ಕಾರಿ ಸೇವೆಯಲ್ಲಿ ಸಾಕಷ್ಟು ಪ್ರಾತಿನಿಧ್ಯ ಪಡೆಯದೇ ಇರುವ ಬ್ರಾಹ್ಮಣೇತರರನ್ನು ಹಿಂದುಳಿದ ವರ್ಗಗಳೆಂದು ಕರೆದು ಆ ವರ್ಗಗಳಿಗೆ ಶಿಕ್ಷಣ ಸೌಲಭ್ಯ ಮತ್ತು ಸರ್ಕಾರಿ ಸೇವೆಯ ನೇಮಕಾತಿಯಲ್ಲಿ ಮೀಸಲಾತಿ ನೀಡಲು ಶಿಫಾರಸ್ಸನ್ನು ಮಾಡಿತು[579]. ಜನಗಣತಿಯ ಆಧಾರದ ಮೇಲೆ ಉನ್ನತ ಹುದ್ದೆಗಳಿಗೆ ಒಟ್ಟು ನೇಮಕಾತಿಯಲ್ಲಿ ½ ದಷ್ಟನ್ನು ಮತ್ತು ಕೆಳಗಿನ ಹುದ್ದೆಗಳಲ್ಲಿ 2/3 ರಷ್ಟನ್ನು ಅಂದಿನಿಂದ ಏಳು ವರ್ಷಗಳ ಕಾಲದೊಳಗೆ ಹಿಂದುಳಿದ ವರ್ಗಗಳಿಗೆ ಕಾದಿರಿಸಿ ತುಂಬಬೇಕೆಂದು ಶಿಫಾರಸು ಮಾಡಿತು. ಅಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗಳನ್ನು ತೆರೆಯಲು ಹಾಗೂ ಹಿಂದುಳಿದ ವರ್ಗಗಳಿಗೆ ವಿದ್ಯಾರ್ಥಿ ವೇತನಕ್ಕೋಸ್ಕರ ಎರಡು ಲಕ್ಷ ರೂಪಾಯಿಗಳನ್ನು ಆಯವ್ಯಯದಲ್ಲಿ ಒದಗಿಸಬೇಕೆಂದು ಶಿಫಾರಸು ಮಾಡಿತು[580]. ಈ ಶಿಫಾರಸ್ಸುಗಳನ್ನು ಸರ್ಕಾರ 1921ರಲ್ಲಿ ಒಪ್ಪಿ ಆಜ್ಞೆಗಳನ್ನು ಹೊರಡಿಸಿತು. ಅದರಂತೆ ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಸ್ನಾತಕೋತ್ತರ ಶಿಕ್ಷಣದವರೆಗೆ ಸುಮಾರು 8500 ವಿದ್ಯಾರ್ಥಿಗಳಿಗೆ

---

578. *ಸ್ಪೀಚಸ್ ಆಫ್ ಹಿಸ್ ಹೈನೆಸ್, ಪೂರ್ವೋಕ್ತ, ಪು. 153-155*

579. *ಮಿಲ್ಲರ್ ಕಮಿಟಿ ರಿಪೋರ್ಟ್., 1919, ಬೆಂಗಳೂರು*

580. *ಸೂರ್ಯನಾಥ್ ಯು. ಕಾಮತ್., ಪೂರ್ವೋಕ್ತ, ಪು. 203*

581. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್., ಎಜುಕೇಷನ್, ಪು. 307*

ಅನುಕೂಲವಾಗುವಂತೆ ವಿದ್ಯಾರ್ಥಿ ವೇತನಗಳನ್ನು ಸೃಷ್ಟಿಸಲಾಯಿತು[581]. ಸರ್ಕಾರಿ ಶಾಲೆಗಳಿಗೆ ಮಾತ್ರ ಸೀಮಿತವಾಗಿದ್ದ ಸ್ಕಾಲರ್‌ಶಿಪ್ ಮತ್ತು ಫೀ ರಿಯಾಯ್ತಿಗಳನ್ನು ಗ್ರಾಮೀಣ ವಿದ್ಯಾರ್ಥಿಗಳಿಗೂ ಅನುಕೂಲವಾಗಲೆಂದು ಅನುದಾನಿತ ಶಾಲೆಗಳಿಗೂ ವಿಸ್ತರಿಸಲಾಯಿತು. ಮಿಡ್ಲ್ ಸ್ಕೂಲ್‌ವರೆಗಿನ ಶಿಕ್ಷಣಕ್ಕೆ ಫೀ ರಿಯಾಯ್ತಿಯನ್ನು ಸರ್ಕಾರ ಜಾರಿಗೊಳಿಸಿತು. ಈ ವರ್ಗದ ಅಕ್ಷರಸ್ಥರ ಸಂಖ್ಯೆ 1921ರಲ್ಲಿ ಶೇ. 27.7ಇದ್ದದ್ದು 1931ರ ವೇಳೆಗೆ ಶೇ. 43.3ಕ್ಕೇರಿತು. ಹಾಗೆಯೇ ವಿದ್ಯಾರ್ಥಿ ವೇತನಗಳ ಮೊತ್ತ 1918-19ರಲ್ಲಿ 6,024ರೂಪಾಯಿಗಳಿದ್ದದ್ದು 1925-26ರ ವೇಳೆಗೆ 67,170 ರೂಪಾಯಿಗಳಿಗೇರಿತು[582]. ಅನಂತರ ಸರ್ಕಾರವು ಸ್ಥಳೀಯ ಸಂಸ್ಥೆಗಳ ನೆರವಿನಿಂದ ಪ್ರಾಥಮಿಕ ಶಾಲೆಗಳನ್ನು ಎಲ್ಲಾ ಗ್ರಾಮಗಳಲ್ಲೂ ಸ್ಥಾಪಿಸಿ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಪ್ರಯತ್ನಿಸಿದ್ದು ಪ್ರಮುಖವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಕೇಂದ್ರೀಕೃತಗೊಂಡಿದ್ದ ಬ್ರಾಹ್ಮಣೇತರರು ಅಕ್ಷರಜ್ಞಾನಿಗಳಾಗುವಂತೆ ಮಾಡಿತು. ಸರ್ಕಾರಿ ಹುದ್ದೆಗಳಲ್ಲಿ ಮೀಸಲಾತಿ ನೀಡಬೇಕೆಂದು ಮಿಲ್ಲರ್ ಕಮಿಟಿಯ ವರದಿಯ ಪ್ರತಿಫಲವಾಗಿ 1918-19ರಲ್ಲಿ ನೇಮಕಗೊಂಡ 1266 ಹುದ್ದೆಗಳಲ್ಲಿ 514ಹುದ್ದೆಗಳನ್ನು ಹಿಂದುಳಿದ ವರ್ಗಗಳಿಗೆ ಕಾದಿರಿಸಲಾಯಿತು. ಕಾದಿರಿಸಿದ ಹುದ್ದೆಗಳ ನೇಮಕಾತಿಗೆ ಸರ್ಕಾರ ತೀವ್ರ ಕ್ರಮಗಳನ್ನು ಕೈಗೊಂಡಿತು[583].ಅಲ್ಲದೆ ಹಿಂದುಳಿದ ವರ್ಗಗಳಿಗೆ ಕನಿಷ್ಠ ಅರ್ಹತೆಯಲ್ಲೂ ರಿಯಾಯಿತಿ ಒದಗಿಸಿ ಆಜ್ಞೆ ಹೊರಡಿಸಿತು. ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಯಶಸ್ವಿಯಾಗದ ಹಿಂದುಳಿದ ವರ್ಗದ ಅಭ್ಯರ್ಥಿಗಳಿಗೆ ಗೆಜೆಟೆಡ್ ಹುದ್ದೆಗಳನ್ನು ನಾಮಕರಣದ ಮೂಲಕ ನೇಮಿಸಲು ತೀರ್ಮಾನ ಕೈಗೊಂಡಿತು. ಅದರಂತೆ 1922-23ರಲ್ಲಿ ನೇಮಕಗೊಂಡ 8 ಜನ ಅಮಲ್ದಾರರಲ್ಲಿ 6 ಹುದ್ದೆಗಳಿಗೆ ಹಿಂದುಳಿದ ವರ್ಗದವರನ್ನು ನೇಮಿಸಲಾಯಿತು[584]. ಮೈಸೂರಿನ ನಾಗರಿಕ ಹುದ್ದೆಗೆ ನಡೆಯುತ್ತಿದ್ದ ಸ್ಪರ್ಧಾ ಪರೀಕ್ಷೆಗಳಲ್ಲಿ ಹೊರರಾಜ್ಯದವರ ಪೈಪೋಟಿ ತಪ್ಪಿಸಲು ಮೈಸೂರಿನವರಿಗೆ ಉದ್ಯೋಗದ ಅವಕಾಶಗಳು ಎಂಬ ತೀರ್ಮಾನ ಕೈಗೊಂಡಿತು. ಈ ಎಲ್ಲಾ ಕ್ರಮಗಳಿಂದ ಸರ್ಕಾರದ ಕೆಳದರ್ಜೆ ಮತ್ತು ಮಧ್ಯಮ ದರ್ಜೆಯ ಹುದ್ದೆಗಳಲ್ಲಿ ಹಿಂದುಳಿದ ವರ್ಗದವರು 1921ರಲ್ಲಿ ಶೇ. 30ರಷ್ಟು ಭಾಗ ಹೊಂದಿದ್ದು 1926ರ ವೇಳೆಗೆ ಶೇ. 42ಕ್ಕೇರಿದರು. ಅದೇ ಕಾಲಾವಧಿಯಲ್ಲಿ ಬ್ರಾಹ್ಮಣರ ಪ್ರಮಾಣ ಶೇ. 69.6ರಷ್ಟಿದ್ದು ಶೇ. 54.1ಕ್ಕಿಳಿಯಿತು[585]. ಔದ್ಯೋಗಿಕ ಶಿಕ್ಷಣದಲ್ಲಿ ಹಿಂದುಳಿದವರಿಗೆ ಪ್ರೋತ್ಸಾಹ ನೀಡಲು ಶೇ. 50ರಷ್ಟು ಸೀಟುಗಳನ್ನು ಮೀಸಲಿರಿಸಲಾಯಿತು.

---

582. *ಚಂದ್ರಶೇಖರ್ ಎಸ್., ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ -ಕೆಲವು ಒಳನೋಟಗಳು 1881-1940, ಅಂಕಣ ಪ್ರಕಾಶನ, ಬೆಂಗಳೂರು, ಪು. 67-68*

583. *ಪ್ರೊಸೀಡಿಂಗ್ಸ್ ಆಫ್ ದಿ ಗವರ್ನಮೆಂಟ್ ಆಫ್ ಮೈಸೂರು, ಮೇ 1920, ಜಿ.ಪಿ.ಎ. ಛೀಫ್ ಸೆಕ್ಷನ್, 9, ಪು. 8*

584. *ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರು, 1922-1923, ಬೆಂಗಳೂರು, 1923, ಪು. 4*

585. *ಪ್ರೊಸೀಡಿಂಗ್ಸ್ ಆಫ್ ದಿ ಮೈಸೂರು ಲೆಜಿಸ್ಲೇಟಿವ್ ಕೌನ್ಸಿಲ್, ಜನವರಿ 1927, ಬೆಂಗಳೂರು, 1927, ಪು. 74*

586. *ಅದೇ., ಜೂನ್, 1937, ಪು. 148-149*

ಹಿಂದುಳಿದ ವರ್ಗದವರ ಆಕರ್ಷಣೆಯ ಹುದ್ದೆ ಅಮಲ್ದಾರ ಹುದ್ದೆ. 1921ರಿಂದ 1937ರ ಅವಧಿಯಲ್ಲಿ ಬಡ್ತಿ ಪಡೆದ 70 ಜನ ಅಮಲ್ದಾರರಲ್ಲಿ 32 ಮಂದಿ ಮತ್ತು ನೇರ ನೇಮಕಾತಿಗೊಂಡ 40 ಮಂದಿಯಲ್ಲಿ 31 ಜನ ಹಿಂದುಳಿದ ವರ್ಗಕ್ಕೆ ಸೇರಿದವರಾಗಿದ್ದರು[586]. ಹೀಗೆ ನಾಲ್ವಡಿಯವರ ಸರ್ಕಾರ ಹಿಂದುಳಿದ ವರ್ಗದವರಿಗೆ ವಿಶೇಷ ಸವಲತ್ತುಗಳನ್ನು ನೀಡುವ ಮೂಲಕ ಅವರನ್ನು ಶಿಕ್ಷಣ ಮತ್ತು ಸರ್ಕಾರಿ ಹುದ್ದೆಗಳನ್ನು ಗಳಿಸುವಂತೆ ಮಾಡಿತು. ಆ ಮೂಲಕ ಬ್ರಾಹ್ಮಣ-ಬ್ರಾಹ್ಮಣೇತರ ನಡುವಿನ ಸಂಘರ್ಷವನ್ನು ತಪ್ಪಿಸಿ ಬೆಳವಣಿಗೆ ಮತ್ತು ಸಾಮಾಜಿಕ ನ್ಯಾಯ ಎಂಬ ಅಂಶಗಳ ಮೂಲಕ ಸಾಮಾಜಿಕ ಪರಿವರ್ತನೆಗೆ ದಾರಿ ಮಾಡಿಕೊಟ್ಟಿತು.

### *vi)* ಪಂಚಮರಿಗೆ ಶಿಕ್ಷಣ

ಚಾತುರ್ವರ್ಣ ವ್ಯವಸ್ಥೆಗೆ ಸೇರದ ಕೆಲ ಜಾತಿಗಳನ್ನು ಪಂಚಮರೆಂದು ಕರೆಯಲಾಗುತ್ತಿತ್ತು. ಪಂಚಮ ಶಬ್ದಕ್ಕೆ ಪರ್ಯಾಯವಾಗಿ ದಲಿತರು, ಅತಿಶೂದ್ರರು, ಅಸ್ಪೃಶ್ಯರೆಂದೂ ಕರೆಯಲಾಗುತ್ತಿತ್ತು. ಮೈಸೂರು ರಾಜ್ಯದಲ್ಲಿ ಹೊಲೆಯ, ಮಾದಿಗ, ಕೊರಚ, ಕೊರಮ, ವೊಡ್ಡ, ಲಂಬಾಣಿ, ಹಳೇಪೈಕ, ಕುಣಬಿಗಳು ಮುಂತಾದವರನ್ನು ಈ ವರ್ಗದಲ್ಲಿ ಗುರುತಿಸಲಾಗಿತ್ತು. ಪ್ರಾಚೀನ ಕಾಲದಿಂದಲೂ ಈ ವರ್ಗದವರಿಗೆ ಶಿಕ್ಷಣವನ್ನು ನಿರಾಕರಿಸಲಾಗಿತ್ತು. ಇವರು ಜಾತಿ ವ್ಯವಸ್ಥೆಯಿಂದ ಹೊರಗಿದ್ದರಿಂದ ಅಸ್ಪೃಶ್ಯರಂತೆ ಕಾಣಲಾಗುತ್ತಿತ್ತು. ಇವರು ದೇವಾಲಯಗಳಿಗೆ ಪ್ರವೇಶಿಸುವಂತಿರಲಿಲ್ಲ. ಹಾಗಾಗಿ ದೇವಸ್ಥಾನಗಳಲ್ಲೇ ಬಹುಸಂಖ್ಯಾತ ಶಾಲೆಗಳು ನಡೆಯುತ್ತಿದ್ದುದರಿಂದ ಅಸ್ಪೃಶ್ಯರು ಶಿಕ್ಷಣ ಪಡೆಯಲಾಗುತ್ತಿರಲಿಲ್ಲ. ಅಸ್ಪೃಶ್ಯರು ಶಿಕ್ಷಣ ಪಡೆಯುವುದನ್ನು ಸಮಾಜವು ಅಪರಾಧವೆಂದೇ ಪರಿಗಣಿಸುತ್ತಿತ್ತು. ಇಂತಹ ಸಮಯದಲ್ಲಿ ಜಾತಿ, ಜನಾಂಗ, ಉತ್ತಮ, ಅಧಮ ಎಂಬ ಬೇಧಭಾವವಿಲ್ಲದೆ ಸರ್ವರಿಗೂ ಶೈಕ್ಷಣಿಕ ಸಂಸ್ಥೆಗಳ ಬಾಗಿಲನ್ನು ತೆರೆದುದು ಕ್ರೈಸ್ತ ಮಿಷನರಿಗಳು. ಮೈಸೂರಿನಲ್ಲಿ ಪಂಚಮರಿಗೆ ಶಿಕ್ಷಣ ಒದಗಿಸುವಲ್ಲಿ ವೆಸ್ಲಿಯನ್ ಮಿಷನ್ ಮತ್ತು ಲಂಡನ್ ಮಿಷನ್ ಪ್ರಮುಖ ಪಾತ್ರ ವಹಿಸಿದವು. ವೆಸ್ಲಿಯನ್ ಮಿಷನ್ ಬೆಂಗಳೂರಿನಲ್ಲಿ ಅಂಚೇಪಾಳ್ಯ, ಉಕ್ಕಡ ಪಾಳ್ಯ, ಅಲಸೂರು, ದೇವನಪಲ್ಲಿ, ವನ್ನಾರ್ ಪೇಟೆ ಮುಂತಾದೆಡೆ 1864ರ ಸುಮಾರಿನಲ್ಲಿ ಪಂಚಮರಿಗಾಗಿ ಶಾಲೆ ತೆರೆಯಿತು. ಅಲಸೂರಿನ ಪಂಚಮ ಶಾಲೆಯಲ್ಲಿ 1891ರ ವೇಳೆಗೆ 56 ಪಂಚಮ ಬಾಲಕರು ಸೇರಿದ್ದರು. ವೆಸ್ಲಿಯನ್ ಶಾಲೆಗಳು ದೊಡ್ಡ ಬಳ್ಳಾಪುರ ಮತ್ತು ಚನ್ನಪಟ್ಟಣಗಳಲ್ಲೂ ಪಂಚಮಶಾಲೆಗಳನ್ನು ತೆರೆಯಿತು. 1901ರಲ್ಲಿ ವೆಸ್ಲಿಯನ್ ಮಿಷನ್ ವಯಸ್ಕರಿಗೆ ರಾತ್ರಿ ಶಾಲೆಗಳನ್ನು ತೆರೆದು ಕನ್ನಡ ಮತ್ತು ತಮಿಳಿನಲ್ಲಿ ಓದಲು ಮತ್ತು ಬರೆಯಲು

---

*587. ನಾಯ್ಡು ಬಿ.ಎನ್., ಪೂರ್ವೋಕ್ತ, ಪು. 114*

ಕಲಿಸಿಕೊಡುತ್ತಿತ್ತು[587]. ಕೋಲಾರದ ಮಾರಿಕುಪ್ಪಂ, ತುಮಕೂರಿನ ಮಾದಿಗರ ಹಟ್ಟಿ, ಮೈಸೂರಿನ ಹೊಲಗೇರಿಗಳಲ್ಲಿ ಪಂಚಮ ಶಾಲೆಗಳನ್ನು ಮಿಷನರಿಗಳು ಆರಂಭಿಸಿದವು. ಲಂಡನ್ ಮಿಷನರಿ ಸೊಸೈಟಿಯು 1891ರಲ್ಲಿ ಚಿಕ್ಕಬಳ್ಳಾಪುರದಲ್ಲಿ, 1892ರಲ್ಲಿ ಸಿದ್ಲಘಟ್ಟ ಮತ್ತು ದೇವನಹಳ್ಳಿಗಳಲ್ಲಿ ಪಂಚಮ ಶಾಲೆಗಳನ್ನು ತೆರೆದಿದ್ದರು. ಪಂಚಮರ ಹೆಣ್ಣುಮಕ್ಕಳಿಗಾಗಿ ಲಂಡನ್ ಮಿಷನ್ ಮಂಚೇನಹಳ್ಳಿಯಲ್ಲಿ ಶಾಲೆಯೊಂದನ್ನು ತೆರೆದಿತ್ತು. ಆ ಶಾಲೆಯ ಮುಖ್ಯೋಪಾಧ್ಯಾಯಿನಿಯಾಗಿದ್ದ ಜೀವಮ್ಮ ಬೀರಿದ ಪ್ರಭಾವದಿಂದಾಗಿ ಅನೇಕ ಬ್ರಾಹ್ಮಣ ಮತ್ತು ವೈಶ್ಯರು ತಮ್ಮ ಹೆಣ್ಣು ಮಕ್ಕಳನ್ನು ಪಂಚಮ ಹೆಣ್ಣು ಮಕ್ಕಳ ಶಾಲೆಗೆ ಸೇರಿಸಿದ್ದರು[588]. ಹೀಗೆ ಸರ್ಕಾರವು ಪಂಚಮರ ಶಿಕ್ಷಣಕ್ಕೆ ಗಮನ ಕೊಡುವುದಕ್ಕೆ ಮೊದಲೇ ಮಿಷನರಿಗಳು ಪಂಚಮರ ಶಿಕ್ಷಣ ಪ್ರಸರಣೆಗೆ ಮುಂದಾಗಿದ್ದವು.

ಕ್ರೈಸ್ತ ಮಿಷನರಿಗಳು ಆರಂಭಿಸಿದ ಪಂಚಮರ ಶಿಕ್ಷಣವನ್ನು ಮೈಸೂರು ಸರ್ಕಾರವೂ ಯಶಸ್ವಿಯಾಗಿ ಮುಂದುವರೆಸಿಕೊಂಡು ಹೋಯಿತು. 1890ರಲ್ಲಿ ಆನೇಕಲ್ ತಾಲ್ಲೂಕಿನ ಹಸ್ಕೂರು, ಮಾಲೂರು ತಾಲ್ಲೂಕಿನ ನರಸೀಪುರ ಎಂಬ ಎರಡು ಕಡೆ ಪಂಚಮರಿಗಾಗಿ ಸರ್ಕಾರಿ ಶಾಲೆಗಳನ್ನು ತೆರೆಯಿತು[589]. ಸರ್ಕಾರವು ದೇಶೀಯ ಖಾಸಗಿ ಶಾಲೆಗಳಿಗೂ ಅನುದಾನ ನೀಡುವ ಯೋಜನೆ ಜಾರಿಗೊಳಿಸಿದ್ದು ಅದೇ ನಿಯಮಗಳು ಹೊಲೆಯ್ರು, ಮಾದಿಗ, ಲಂಬಾಣಿ, ಕೊರಚ, ಕೊರಮ ಮತ್ತು ನಾಯಿಂದರು ಖಾಸಗಿಯಾಗಿ ಆರಂಭಿಸಿದ ಪಂಚಮ ಶಾಲೆಗಳಿಗೂ ಅನ್ವಯವೆಂದು ಮಾಡಿದ್ದು ಪಂಚಮ ಶಿಕ್ಷಣಕ್ಕೆ ಉತ್ತೇಜನ ನೀಡಿತು. ಆರು ವಿದ್ಯಾರ್ಥಿಗಳಿರುವ ಪಂಚಮ ಶಾಲೆಗಳಿಗೂ ಅನುದಾನ ನೀಡಲು ತೀರ್ಮಾನಿಸಿತು. ಹಾಗಾಗಿ 1890-91ರಲ್ಲಿ 5 ಇದ್ದ ಪಂಚಮ ಶಾಲೆಗಳ ಸಂಖ್ಯೆ 1899-1900ರ ವೇಳೆಗೆ 27ಕ್ಕೇರಿತು. ಪಂಚಮ ವಿದ್ಯಾರ್ಥಿಗಳಿಗೆ ಸ್ಲೇಟ್, ಪುಸ್ತಕಗಳನ್ನು ಉಚಿತವಾಗಿ ನೀಡಲಾಗುತ್ತಿತ್ತು. ಶಿಕ್ಷಣದಲ್ಲಿ ಪ್ರಗತಿ ತೋರಿದವರಿಗೆ ಬಟ್ಟೆಯನ್ನು ನೀಡಲಾಗುತ್ತಿತ್ತು. ಈ ಪ್ರೋತ್ಸಾಹ ಕ್ರಮಗಳಿಂದಾಗಿ 1890-91ರಲ್ಲಿ ಶೇ. 0.23ರಷ್ಟಿದ್ದ ಶಾಲೆಗೆ ಹೋಗುತ್ತಿದ್ದ ಪಂಚಮ ವಿದ್ಯಾರ್ಥಿಗಳ ಪ್ರಮಾಣ 1899-1900ರ ವೇಳೆಗೆ ಶೇ.1.48 ರಷ್ಟಾಯಿತು[590].

ನಾಲ್ವಡಿಯವರ ಆಡಳಿತದ ಆರಂಭದ ವರ್ಷವೇ ಅಂದರೆ 1901-02ರಲ್ಲಿ ಪೊಲೀಸರ ನೆರವಿನಿಂದ ಲಂಬಾಣಿಗಳಿಗಾಗಿ 11 ಶಾಲೆಗಳನ್ನು ತೆರೆಯಲಾಯಿತು. ಅವುಗಳಲ್ಲಿ 7 ಶಿವಮೊಗ್ಗ, 2 ತುಮಕೂರು ಮತ್ತು ಹಾಸನ ಹಾಗೂ ಚಿತ್ರದುರ್ಗಗಳಲ್ಲಿ ಒಂದೊಂದರಂತೆ ಸ್ಥಾಪಿಸಲಾಗಿತ್ತು[591]. ಪಂಚಮ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಕಲಿಯಲು 1906-07ರಿಂದ ವಿದ್ಯಾರ್ಥಿ ವೇತನಗಳನ್ನು ನೀಡಲಾರಂಭಿಸಿತು. ಪಂಚಮ ಶಿಕ್ಷಣ ಮತ್ತು ಶಾಲೆಗಳ ಬೆಳವಣಿಗೆಗಿದ್ದ

---

*588. ನಾಯ್ದು ಬಿ.ಎಸ್., ಪೂರ್ವೋಕ್ತ, ಪು. 115-116*

*589. ರಿವ್ಯೂ ಆಫ್ ದಿ ಪ್ರೋಗ್ರೆಸ್ ಆಫ್ ಎಜುಕೇಷನ್ ಇನ್ ಮೈಸೂರ್ ಸ್ಟೇಟ್, 1916-17 ಮತ್ತು 1921-22, ಪು. 66*
*- ಹಯವದನರಾವ್ ಸಿ. (ಸಂ)., ಮೈಸೂರ್ ಗೆಸೆಟಿಯರ್, ಸಂ. IV. ಪು. 494*

*590. ದೇವೇಗೌಡ ಎ.ಸಿ., ಮತ್ತು ಪರಮೇಶ್ವರನ್ ಟಿ.ಆರ್., ಹಿಸ್ಟರಿ ಆಫ್ ಎಜುಕೇಷನ್ ಇನ್ ಮೈಸೂರ್, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್ ಅಂಡ್ ಯೂಥ್ ಸರ್ವೀಸ್, ಕರ್ನಾಟಕ ಸರ್ಕಾರ, ಬೆಂಗಳೂರು, ಪು. 604-605*

*591. ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್, 1901-1902, ಪು. 64*

ಬಹುದೊಡ್ಡ ತೊಡಕೆಂದರೆ ಉನ್ನತ ಜಾತಿಯ ಶಿಕ್ಷಕರು ಪಂಚಮ ಶಾಲೆಗಳಲ್ಲಿ ಸೇವೆ ನಿರ್ವಹಿಸಲು ನಿರಾಕರಿಸುತ್ತಿದ್ದುದು. ಹಾಗೆಯೇ ಪಂಚಮರು ಇನ್ನಿತರ ಸರ್ಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಉನ್ನತ ಜಾತಿಗಳೊಂದಿಗೆ ಕಲೆತು ಶಿಕ್ಷಣ ಪಡೆಯಲು ಸಾಕಷ್ಟು ವಿರೋಧವಿತ್ತು. ಪಂಚಮ ವಿದ್ಯಾರ್ಥಿಗಳನ್ನು ಶಾಲೆಯ ವರಾಂಡದಲ್ಲಿ ಕೂರಿಸಲಾಗುತ್ತಿತ್ತು. 1890-91ರಲ್ಲೇ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳು ಹೊಲೆಯ, ಮಾದಿಗ ಮುಂತಾದ ಕೆಳಜಾತಿಯವರಿಗೆ ಶಿಕ್ಷಕರಾಗಲು ಅಥವಾ ಶಾಲಾ ತಪಾಸಣೆಗಾಗಿ ಬ್ರಾಹ್ಮಣರು, ಮುಸ್ಲಿಮರು ಒಪ್ಪದಿದ್ದುದನ್ನು ನೋಡಿ ಪಂಚಮರ ಶಿಕ್ಷಣ ಜವಾಬ್ದಾರಿಯನ್ನು ಕ್ರಿಶ್ಚಿಯನ್ ಮಿಷನರಿಗಳಿಗೆ ಒಪ್ಪಿಸಬೇಕೆಂದು ವರದಿ ಮಾಡಿದ್ದರು[592].

ಅನಂತರ ಮುಸ್ಲಿಂ ಶಿಕ್ಷಕರು ಮತ್ತು ನೇಟಿವ್ ಕ್ರಿಶ್ಚಿಯನ್ನರು ಪಂಚಮ ಶಾಲೆಗಳಿಗೆ ಶಿಕ್ಷಕರಾಗಿ ಬರಲು ಒಪ್ಪಿದರು. ಉದಾಹರಣೆಗೆ 1897-98ರಲ್ಲಿ ಸರ್ಕಾರವು ಒಂದು ರಾತ್ರಿ ಶಾಲೆ ಹಾಗೂ ಪಂಚಮ ಶಾಲೆಗಳನ್ನು ಸ್ಥಾಪಿಸಲು ನಿಶ್ಚಯಿಸಿ ಚಂದ್ರಶೇಖರ ಶಾಸ್ತ್ರಿ ಎಂಬುವವರಿಗೆ ಉಪಾಧ್ಯಾಯರನ್ನು ಆರಿಸಬೇಕೆಂದು ತಿಳಿಸಿತು. ಶಾಸ್ತ್ರಿಗಳು ರಾತ್ರಿ ಶಾಲೆಗೆ ರಂಗಾಚಾರ್ಯರೆಂಬುವವರನ್ನು, ಪಂಚಮರ ಶಾಲೆಗೆ ಷೇಕ್ ದಾವೂದ್ ಸಾಹೇಬರನ್ನು ಶಿಫಾರಸು ಮಾಡಿದರು. ಆ ಶಾಲೆ ಅನಂತರ ಮಂಜೂರಾಗಿ ಸಾಹೇಬರು ಉಪಾಧ್ಯಾಯರಾಗಿ ಕೀರ್ತಿ ಸಂಪಾದಿಸಿದರು[593]. 1904-05ರಿಂದ ಸರ್ಕಾರವು ಪಂಚಮ ವಿದ್ಯಾರ್ಥಿಗಳಿಗೆ ಶಾಶ್ವತವಾಗಿ ಫೀ ರಿಯಾಯ್ತಿ ಘೋಷಿಸಿತು. ಅನಂತರ ಈ ವರ್ಗಗಳಿಗೆ ಶಾಸ್ವತವಾಗಿ ಫೀ ರಿಯಾಯ್ತಿ ನೀಡಲಾಯಿತು. ಪಂಚಮರ ಶಿಕ್ಷಣ ಪ್ರೋತ್ಸಾಹಿಸಲು ಮಾಸಿಕ 2 ರೂಪಾಯಿಗಳ ಎಂಟು ವಿದ್ಯಾರ್ಥಿ ವೇತನಗಳನ್ನು ಸರ್ಕಾರ ಸೃಷ್ಟಿಸಿತು[594]. ಹೀಗೆ ಸರ್ಕಾರದ ಪ್ರೋತ್ಸಾಹ ಮತ್ತು ಸಮಾಜವು ಸಹ ಬದಲಾವಣೆಗೊಂಡಿದ್ದರಿಂದ 1900 ರ ನಂತರ ಪಂಚಮರ ಶಿಕ್ಷಣದಲ್ಲಿ ಬೆಳವಣಿಗೆಗಳಾದವು. 1900-10ರಲ್ಲಿ ಪಂಚಮರಿಗಾಗಿ 34 ಸರ್ಕಾರಿ, 31 ಅನುದಾನಿತ ಶಾಲೆಗಳಿದ್ದುದು 1910-11ರ ವೇಳೆಗೆ 67 ಸರ್ಕಾರಿ ಶಾಲೆಗಳು, 35 ಅನುದಾನಿತ ಹಾಗೂ 4 ಅನುದಾನ ರಹಿತ ಶಾಲೆಗಳು ಇದ್ದವು. 1915-16ರ ವೇಳೆಗೆ 171 ಸರ್ಕಾರಿ ಶಾಲೆಗಳು, 108 ಅನುದಾನಿತ ಶಾಲೆಗಳು, 88 ಅನುದಾನ ರಹಿತ ಶಾಲೆಗಳು ಅಸ್ತಿತ್ವದಲ್ಲಿದ್ದವು[595]. 1910-11ರ ಜನಗಣತಿಯಂತೆ ಪಂಚಮ ವಿದ್ಯಾರ್ಥಿಗಳ ಪ್ರಮಾಣ ಶೇ. 4.80 ರಷ್ಟಾಯಿತು[596].

---

592. ***ರಿವ್ಯೂ ಆಫ್ ದಿ ಪ್ರೋಗ್ರೆಸ್ ಆಫ್ ಎಜುಕೇಷನ್ ಇನ್ ಮೈಸೂರ್ ಸ್ಟೇಟ್***, *1916-17, to 1921-22, ಪು. 66*

593. ***ಗುಂಡಪ್ಪ ಡಿ.ವಿ.***, *ಜ್ಞಾಪಕ ಚಿತ್ರಶಾಲೆ, ಸಂಪುಟ -VII, ಹೃದಯಸಂಪನ್ನರು, ಕಾವ್ಯಾಲಯ ಪ್ರಕಾಶನ, ಮೈಸೂರು, 1999, ಪು. 104*

594. ***ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್ಸ್***, *1904-05, ಪು. 72, ಮತ್ತು 1905-06, ಪು. 30*

595. ***ರಿವ್ಯೂ ಆಫ್ ದಿ ಪ್ರೋಗ್ರೆಸ್ ಆಫ್ ಎಜುಕೇಷನ್ ಇನ್ ದಿ ಮೈಸೂರ್ ಸ್ಟೇಟ್ ಕ್ವಿನ್‌ಕ್ವಿನಿಯಂ***, *1911-16, ಪು. 90*

596. ***ಅದೇ.***, *ಪು. 91*

ಸರ್ಕಾರವು ದೂರದ ಪ್ರದೇಶಗಳಿಂದ ಬರುವ ಪಂಚಮರ ವಿದ್ಯಾರ್ಥಿಗಳ ಅನುಕೂಲಕ್ಕಾಗಿ 1913ರಲ್ಲಿ ಉಚಿತ ವಸತಿ ಶಾಲೆಯೊಂದನ್ನು ಮೈಸೂರಿನಲ್ಲಿ ಸ್ಥಾಪಿಸಿತು. ಆ ಶಾಲೆಯಲ್ಲಿ ಕೈಗಾರಿಕಾ ತರಬೇತಿ, ಚಾಪೆ ಹೆಣೆಯುವ, ಪ್ರಾತ್ಯಕ್ಷಿಕ ಕೃಷಿ, ಬಡಗಿ, ಕಮ್ಮಾರಿಕೆ ಮುಂತಾದವುಗಳನ್ನು ಕಲಿಸಲಾಗುತ್ತಿತ್ತು. ಊಟ ಮತ್ತು ಬಟ್ಟೆಯನ್ನು ಉಚಿತವಾಗಿ ಸರ್ಕಾರ ಒದಗಿಸಲು 4000 ರೂಪಾಯಿಗಳನ್ನು ವಾರ್ಷಿಕವಾಗಿ ನೀಡುತ್ತಿತ್ತು. ಅಲ್ಲಿನ ಕೈಗಾರಿಕಾ ವಿಭಾಗವು ತಯಾರಿಸಿದ ಅನೇಕ ವಸ್ತುಗಳಿಂದ ಆದಾಯವನ್ನು ಗಳಿಸಿತು[597]. ಈ ವಸತಿ ನಿಲಯದ 12 ವಿದ್ಯಾರ್ಥಿಗಳು ಎಲ್.ಎಸ್. ಪರೀಕ್ಷೆಗೆ ಕುಳಿತು 10 ಜನ ಪಾಸಾದರು. ಅದರಲ್ಲೊಬ್ಬ ಪ್ರಥಮ ದರ್ಜೆಯಲ್ಲಿ ಪಾಸಾದನು. ವಸತಿ ನಿಲಯಗಳಿಗೆ ಬೇಡಿಕೆ ಹೆಚ್ಚಿದಂತೆ 1918ರಲ್ಲಿ ಚಿಕ್ಕಮಗಳೂರು ಹಾಗೂ ತುಮಕೂರುಗಳಲ್ಲಿ ಬೋರ್ಡಿಂಗ್ ಶಾಲೆಗಳನ್ನು ಸ್ಥಾಪಿಸಲಾಯಿತು. 1917ರಿಂದ ಪಂಚಮರ ಶಿಕ್ಷಣಕ್ಕಾಗಿ ಸರ್ಕಾರವು ಒಂದು ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿತು. ತುಮಕೂರು ಮತ್ತು ಚಿಕ್ಕಮಗಳೂರಿನ ಪಂಚಮ ಬೋರ್ಡಿಂಗ್ ಶಾಲೆಗಳ ಅಭಿವೃದ್ಧಿಗಾಗಿ ಸರ್ಕಾರ 1917-18ರಲ್ಲಿ 50,000 ರೂ.ಗಳ ನೆರವು ನೀಡಿತು[598]. ಸೆಂಟ್ರಲ್ ಪಂಚಮ ಬೋರ್ಡಿಂಗ್ ಶಾಲೆಯನ್ನು ಪ್ರೌಢ ಶಿಕ್ಷಣ ಕೇಂದ್ರವನ್ನಾಗಿ ಮಾಡಲಾಯಿತು. ಸರ್ಕಾರವು 1915ರಲ್ಲಿ ಒಂದು ಸುತ್ತೋಲೆಯನ್ನು ಹೊರಡಿಸಿ ಸಾಮಾಜಿಕ ಅಥವಾ ಧಾರ್ಮಿಕ ನಿರ್ಬಂಧದ ಆಧಾರ ಮೇಲೆ ಪಂಚಮರನ್ನು ಸಾರ್ವಜನಿಕ ಶಾಲೆಗಳಿಗೆ ಸೇರುವುದನ್ನು ತಡೆಯಬಾರದೆಂದು ತಿಳಿಸಿತು[599]. ಈ ಸುತ್ತೋಲೆಗೆ ಪ್ರಮುಖವಾಗಿ ಶೃಂಗೇರಿಯಲ್ಲಿ ಪ್ರಬಲ ವಿರೋಧ ವ್ಯಕ್ತಗೊಂಡಿತು. ಶೃಂಗೇರಿಯ ಆಂಗ್ಲೋ-ವರ್ನಾಕ್ಯುಲರ್ ಶಾಲೆಗೆ ಹಳೆಪೈಕ ವಿದ್ಯಾರ್ಥಿಯನ್ನು ಸೇರಿಸಿದ್ದನ್ನು ಬ್ರಾಹ್ಮಣರು ಮುಂತಾದ ಉನ್ನತ ಜಾತಿಯವರು ಮತ್ತು ಮುಸ್ಲಿಮರೂ ಒಟ್ಟಾಗಿ ಪ್ರತಿಭಟಿಸಿದರು. ಸರ್ಕಾರ ಸುತ್ತೋಲೆಯನ್ನು ಹಿಂಪಡೆಯಲು ಒಪ್ಪಲಿಲ್ಲ. ಉನ್ನತ ಜಾತಿಯವರು ತಮ್ಮದೇ ಆದ ಖಾಸಗಿ ಶಾಲೆಯನ್ನು ಸ್ಥಾಪಿಸಿಕೊಳ್ಳಲು ಅನುಮತಿ ಕೇಳಿದಾಗ ಅನುದಾನರಹಿತವಾಗಿ, ಪರೀಕ್ಷೆಯ ಉದ್ದೇಶಕ್ಕಾಗಿ ಶಾಲೆಯನ್ನು ಸ್ಥಾಪಿಸಿಕೊಳ್ಳಲು ಅನುಮತಿ ನೀಡಿತು[600]. ಅಂತಿಮವಾಗಿ ಎಲ್ಲ ಸರ್ಕಾರಿ ಶಾಲೆ ಮತ್ತು ಅನುದಾನ ಪಡೆಯುವ ಶಾಲೆಗಳಲ್ಲಿ ಪಂಚಮರಿಗೆ ಪ್ರವೇಶಾವಕಾಶ ನೀಡುವಂತಾಗಲು 1919ರಲ್ಲಿ ಒಂದು ಆಜ್ಞೆಯಲ್ಲಿ "ಜಾತಿಯನ್ನಾಧರಿಸಿ ಯಾರನ್ನೂ ಸರ್ಕಾರಿ ನೆರವಿನಲ್ಲಿ ನಡೆಯುವ ಶಾಲೆಗಳಿಂದ ಹೊರಗಿಡುವಂತಿಲ್ಲವೆಂದು" ತಿಳಿಸಿತು[601]. ಆ ಮೂಲಕ ಶಾಲೆಗಳ ಪ್ರವೇಶಾತಿಗೆ ಅಸ್ಪೃಶ್ಯರಿಗಿದ್ದ ತಡೆಯನ್ನು ಶಾಸನಾತ್ಮಕವಾಗಿ ತಡೆಗಟ್ಟಲಾಯಿತು. ಈ ಆಜ್ಞೆಯನ್ನು ಹಲವು ಪ್ರಮುಖರು ವಿರೋಧಿಸಿದರು. ಪ್ರಜಾಪ್ರತಿನಿಧಿ ಸಭೆಯಲ್ಲಿ ಸರ್ಕಾರದ

597. *ಹಯವದನರಾವ್ ಸಿ. (ಸಂ.)., ಮೈಸೂರ್ ಗೆಜೆಟಿಯರ್, ಸಂ. IV, ಪು. 584*
598. *ನಾಯ್ಡು ಬಿ.ಎಸ್., ಪೂರ್ವೋಕ್ತ, ಪು. 120*
599. *ಫೈಲ್ ನಂ. 89-17, ಕ್ರಮ ಸಂಖ್ಯೆ 4, 46, 48, ಎಜುಕೇಷನ್, 1917, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು.*
600. *ಅದೇ.*
601. *ಅದೇ.*
602. *ನಾಯ್ಡು ಬಿ.ಎಸ್., ಪೂರ್ವೋಕ್ತ, ಪು. 122*

ಈ ಕ್ರಮವನ್ನು ವಿರೋಧಿಸಿದ ಸದಸ್ಯರು ಪಂಚಮರನ್ನು "ಕೀಳ್ಮಟ್ಟದ ಹೊಲಸು ಜನ"ರೆಂದೂ "ಪ್ರಾಣಿಗಳೆಂದೂ" ಕರೆದು ಸಾರ್ವಜನಿಕ ಶಾಲೆಗಳಲ್ಲಿ ಉನ್ನತ ಜಾತಿಯ ಮಕ್ಕಳ ಜೊತೆ ಜೊತೆಯಲ್ಲಿ ಶಿಕ್ಷಣ ಪಡೆಯಲು ನಿರ್ದೇಶಿಸಬಾರದೆಂಡು ಒತ್ತಾಯಿಸಿದ್ದರು. ಆದರೆ ಮೈಸೂರು ಸರ್ಕಾರ ಬಲವಾಗಿ ತಿರಸ್ಕರಿಸಿದ್ದಲ್ಲದೆ ಆಜ್ಞೆಯನ್ನು ವಿರೋಧಿಸಿ ಪಂಚಮರನ್ನು ಶಾಲೆಗೆ ಸೇರಿಸದ ಶಾಲೆಗಳ ಅನುದಾನವನ್ನು ರದ್ದುಮಾಡುವುದಾಗಿ ಬೆದರಿಸಿತು[602]. ಮಹಾರಾಜ ನಾಲ್ವಡಿಯವರು "ರೋಷಾವೇಷದಿಂದ ಕೂಡಿದ ವಿರೋಧದ ನಡುವೆಯೂ ಬಂಡೆಯಂತೆ ಸ್ಥಿರವಾಗಿ ನಿಂತರು ಮತ್ತು ಪಂಚಮ ಮಕ್ಕಳಿಗೆ ತನ್ನ ತಂದೆಯ ಸ್ಥಾನದ ಕರ್ತವ್ಯವನ್ನು ಹಿಂಜರಿಯದೆ ನಿರ್ವಹಿಸಿದರು"[603] ಹೀಗೆ ರಾಜಾಸ್ಥಾನದಿಂದ ದೊರೆತ ಬೆಂಬಲ ಮತ್ತು ಆಜ್ಞೆಯ ಪ್ರಭಾವದಿಂದ 1919-20ರಲ್ಲಿ ಸುಮಾರು 3144 ಪಂಚಮ ವಿದ್ಯಾರ್ಥಿಗಳು ಸಾರ್ವಜನಿಕ ಶಾಲೆಗಳಿಗೆ ಪ್ರವೇಶ ಪಡೆದರು. ಪಂಚಮರ ಮೇಲೆ ಶಾಲೆಯ ಪ್ರವೇಶಾತಿಗಿದ್ದ ನಿರ್ಬಂಧವು ಹಂತ ಹಂತವಾಗಿ ನಶಿಸುತ್ತಾ ಹೋಯಿತು. ಅದರಲ್ಲೂ ಸರ್ಕಾರವು ಬಟ್ಟೆಗಾಗಿ ಭತ್ಯೆ ನೀಡಲಾರಂಭಿಸಿದ್ದರಿಂದ ಪಂಚಮ ವಿದ್ಯಾರ್ಥಿಗಳು ಶುಚಿಯಾದ ಬಟ್ಟೆಗಳನ್ನು ತೊಟ್ಟು ಶಾಲೆಗೆ ಹೋಗುವಂತಾಗಿದ್ದು ಪಂಚಮರ ಬಗೆಗಿನ ಕೀಳರಿಮೆ ಹೋಗುವಂತಾಯಿತು[604]. ಪಂಚಮರನ್ನು ಸಾಮಾಜಿಕವಾಗಿ ಮತ್ತು ನೈತಿಕವಾಗಿ ಮೇಲೆತ್ತಲು ಅವರಿಗೆ ಪಂಚಮ ಶಾಲೆಗಳಲ್ಲಿ ಧಾರ್ಮಿಕ ಹಾಗೂ ನೈತಿಕ ಬೋಧನೆಗಳನ್ನು, ಭಜನೆ ಮತ್ತು ಪ್ರವಚನಗಳ ಮೂಲಕ ನೀಡಲಾಗುತ್ತಿತ್ತು[605]. ಪಂಚಮ ವಿದ್ಯಾಥಿಗಳನ್ನು ಶಾಲೆಗೆ ಸೇರಿಸುವಂತೆ ಪ್ರೋತ್ಸಾಹ ನೀಡಲು ವಿದ್ಯಾರ್ಥಿಗಳ ತಂದೆ ತಾಯಿಗಳಿಗೆ ಭತ್ಯೆ ನೀಡುವ ವಿಶೇಷ ಕ್ರಮ ಕೈಗೊಳ್ಳಲಾಯಿತು. ಪಂಚಮ ವಿದ್ಯಾರ್ಥಿಗಳ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸಿದರೆ ಅದರಿಂದಾಗುವ ಸೇವೆಯ ನಷ್ಟಕ್ಕೆ ಪರಿಹಾರವೆಂದು ಭತ್ಯೆ ಕೊಡುವುದಾಗಿತ್ತು. ಮಿಲ್ಲರ್ ಕಮಿಟಿಯೂ ಸಹ ಪಂಚಮ ಶಾಲೆಗಳಿಗೆ ಪಂಚಮ ಶಿಕ್ಷಕರನ್ನು ಹಾಗೂ ಪರಿವೀಕ್ಷಕರನ್ನು ನೇಮಿಸುವ ಮೂಲಕ ವಿಶೇಷ ಗಮನ ನೀಡಬೇಕೆಂದು ಸಲಹೆ ನೀಡಿತು. ಜೊತೆಗೆ ಪಂಚಮ ವಿದ್ಯಾರ್ಥಿಗಳಿಗೆ ಬೋರ್ಡಿಂಗ್ ಶಾಲೆ, ವಿದ್ಯಾರ್ಥಿ ವೇತನ ಮತ್ತಿತರ ಸೌಲಭ್ಯಗಳನ್ನು ನೀಡಬೇಕೆಂದು ತಿಳಿಸಿತು[606].

ಸರ್ಕಾರವು ಪಂಚಮರಿಗೆ ಇಂಗ್ಲಿಷ್ ಶಿಕ್ಷಣ ಪಡೆಯುವಂತೆ ಪ್ರೋತ್ಸಾಹಿಸಲು ವಾರ್ಷಿಕವಾಗಿ 6 ರೂಪಾಯಿಗಳಿಂದ 15 ರೂಪಾಯಿಗಳವರೆಗಿನ ವಿದ್ಯಾರ್ಥಿ ವೇತನಗಳನ್ನು 1918ರಲ್ಲಿ ನೀಡಿತು. ಪಂಚಮ ವಿದ್ಯಾರ್ಥಿಗಳಿಗೆ ದೂರದ ಊರಿಂದ ಸಂಚರಿಸಲು ರೈಲ್ವೆಯಲ್ಲಿ ರಿಯಾಯಿತಿ ನೀಡಲಾಯಿತು. ಹೀಗೆ ಸರ್ಕಾರ ಕೈಗೊಂಡ ಉದಾರ ನೀತಿಯಿಂದಾಗಿ 1920-21ರ ವೇಳೆಗೆ ಪಂಚಮರ ಶಾಲೆಗಳ ಸಂಖ್ಯೆ 739ಕ್ಕೇರಿತು. ಒಟ್ಟು 15,390

---

*603. ರೆಡ್ಡಿ ಸಿ.ಆರ್., ಇಂಪ್ರೆಷನ್ಸ್ ಆಫ್ ದಿ ಲೇಟ್ ಮಹಾರಾಜ ಕೃಷ್ಣರಾಜ ಒಡೆಯರ್ ಆಫ್ ಮೈಸೂರು, ಕ್ಯೂ.ಜೆ.ಎಂ. ಎಸ್. ಕೃಷ್ಣರಾಜ ಒಡೆಯರ್, ವಿಶೇಷ ಸಂಚಿಕೆ, ಸಂಪುಟ -31, ಬೆಂಗಳೂರು, 1940-41, ಪು. 247*

*604. ದೇವೇಗೌಡ ಎ.ಸಿ. ಮತ್ತು ಪರಮೇಶ್ವರನ್ ಟಿ.ಆರ್., ಪೂರ್ವೋಕ್ತ, ಪು. 611*

*605. ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್, 1915-16, ಪು. 74*

*606. ಸದಾಶಿವ ಕೆ., ಪೂರ್ವೋಕ್ತ, ಪು. 166*

ವಿದ್ಯಾರ್ಥಿಗಳಿದ್ದು ಅದರಲ್ಲಿ 1,839 ಬಾಲಕಿಯರಿದ್ದರು. 1924-25ರಲ್ಲಿ ಬಿ.ಎ. ಪದವಿ ವಿದ್ಯಾರ್ಥಿಗಳಿಗೆ ಮಾಸಿಕ 35 ರೂಪಾಯಿಗಳ ಎರಡು ವಿದ್ಯಾರ್ಥಿ ವೇತನಗಳನ್ನು ನೀಡಲಾಗಿತ್ತು. ಪಂಚಮರ ಶಾಲೆಗಳು 1931-32ರಲ್ಲಿ 597ಇದ್ದುದು 1940-41ರ ವೇಳೆಗೆ 417ಕ್ಕೆ ಕುಸಿದವು. ಸರ್ಕಾರವು ಪ್ರತ್ಯೇಕ ಪಂಚಮ ಶಾಲೆಗಳ ಅವಶ್ಯಕತೆಯಿಲ್ಲವೆಂದು ತೀರ್ಮಾನಿಸಿ ಸಾಮಾನ್ಯ ಶಾಲೆಗಳಲ್ಲಿ ಅವುಗಳನ್ನು ಸೇರ್ಪಡೆಗೊಳಿಸಿತು. ಕಾರಣ ಪಂಚಮ ವಿದ್ಯಾರ್ಥಿಗಳು ಪ್ರತ್ಯೇಕ ಪಂಚಮ ಶಾಲೆಗಳಲ್ಲಿ ಪ್ರವೇಶ ಪಡೆಯುವುದಕ್ಕಿಂತ ಹೆಚ್ಚಾಗಿ ಸಾಮಾನ್ಯ ಶಾಲೆಗಳಲ್ಲೇ ಹೆಚ್ಚು ಪ್ರವೇಶ ಪಡೆಯಲಾರಂಭಿಸಿದ್ದು. ಉದಾಹರಣೆಗೆ 1932-33ರಲ್ಲಿ ಒಟ್ಟು 19,277ಪಂಚಮ ವಿದ್ಯಾರ್ಥಿಗಳಿದ್ದುದು 1939-40ರ ವೇಳೆಗೆ 19,819ರಷ್ಟಾದರು. ಅದೇ ವೇಳೆಯಲ್ಲಿ ಸಾಮಾನ್ಯ ಶಾಲೆಗಳಲ್ಲಿ ಪ್ರವೇಶ ಪಡೆದಿದ್ದ ವಿದ್ಯಾರ್ಥಿಗಳ ಸಂಖ್ಯೆ 1932-33ರಲ್ಲಿ 6,315ರಷ್ಟಿದ್ದುದು 1939-40ರ ವೇಳೆಗೆ 12,704ರಷ್ಟಾದರು. ಅದೇ ವೇಳೆಗೆ ಪ್ರತ್ಯೇಕ ಪಂಚಮ ಶಾಲೆಗಳಲ್ಲಿ ಪಂಚಮ ವಿದ್ಯಾರ್ಥಿಗಳ ಸಂಖ್ಯೆ 1932-33ರಲ್ಲಿ 12,962ಇದ್ದುದು 1939-40ಕ್ಕೆ 7,115 ಆಯಿತು. ಮೇಲಿನ ಅಂಕಿ ಅಂಶಗಳಿಂದ ತಿಳಿಯುವ ಅಂಶವೆಂದರೆ ಪಂಚಮ ವಿದ್ಯಾರ್ಥಿಗಳು ಪ್ರತ್ಯೇಕ ಶಾಲೆಗಳ ಬದಲು ಸಾಮಾನ್ಯ ಶಾಲೆಗಳಲ್ಲೇ ಪ್ರವೇಶ ಪಡೆಯಲು ಬಯಸಿದ್ದುದು. ಕಾರಣ ಸಾಮಾನ್ಯ ಶಾಲೆಗಳಲ್ಲಿ ಉತ್ತಮ ನುರಿತ ಅಧ್ಯಾಪಕರು, ಕಟ್ಟಡಗಳಿಂದ ಕೂಡಿದ ಸೌಲಭ್ಯಗಳೇ ಆಗಿದ್ದವು. ಹಾಗೆಯೇ ಸಾಮಾನ್ಯ ಶಾಲೆಗಳಲ್ಲಿ ಪಂಚಮರ ಪ್ರವೇಶಕ್ಕಿದ್ದ ಮೇಲ್ಜಾತಿಗಳ ವಿರೋಧವು ತಗ್ಗಿದುದು ಸಹ ಕಾರಣ. ಇದಕ್ಕೆ ವಿರುದ್ಧವಾಗಿ 1947-48ರ ವೇಳೆಗೆ 5,886 ಪಂಚಮೇತರ ವಿದ್ಯಾರ್ಥಿಗಳು ಪಂಚಮ ಶಾಲೆಗಳಲ್ಲಿ ಪ್ರವೇಶ ಪಡೆದಿದ್ದರು. ಹೀಗೆ ಮೈಸೂರಿನಲ್ಲಿ ಪಂಚಮರ ಮೇಲಿದ್ದ ಅಸ್ಪೃಶ್ಯತೆಯ ತೀವ್ರತೆ ತಗ್ಗಿತು. ಪಂಚಮ ಮತ್ತು ಸವರ್ಣೀಯ ವಿದ್ಯಾರ್ಥಿಗಳು ಒಂದೇ ಶಾಲೆಯಲ್ಲಿ ಜೊತೆಜೊತೆಯಾಗಿ ಓದುವಂತಾಯಿತು[607].

ಸರ್ಕಾರ ಪಂಚಮರಿಗೆ ಶಾಲೆಗಳನ್ನು 1919ರಲ್ಲೇ ಮುಕ್ತವಾಗಿ ತೆರೆದರೂ ಸಹ 1931ರಲ್ಲೂ ಸಮಾಜದಲ್ಲಿ ಅಸ್ಪೃಶ್ಯತೆ ಹೇಗೆ ಸರ್ವೇಸಾಮಾನ್ಯವಾಗಿತ್ತು ಎಂಬುದನ್ನು 1931ರ ಜನಗಣತಿ ವರದಿ ಹೀಗೆ ಉಲ್ಲೇಖಿಸಿದೆ. "ಬ್ರಾಹ್ಮಣರು ಮತ್ತಿತರ ಉನ್ನತ ಜಾತಿಯವರು ಹೆಚ್ಚಾಗಿದ್ದ ಕೇರಿಗಳಲ್ಲಿ ಅಸ್ಪೃಶ್ಯರು ಓಡಾಡುವಂತಿರಲಿಲ್ಲ."ಬೇರೆ ಕೇರಿಗಳಲ್ಲೂ "ಮೇಲ್ವರ್ಗದವರು ಎದುರು ಬಂದಾಗ ಅಸ್ಪೃಶ್ಯರು ಬದಿಗೆ ಸರಿದು ಜಾಗ ಮಾಡಿಕೊಡಬೇಕಾಗಿತ್ತು...... ಅಸ್ಪೃಶ್ಯರನ್ನು ಸಮಾನರಂತೆ ನೋಡಬೇಕನ್ನುವಂಥ ಮಾತು ಕೇಳಿಯೆ ಹಲವಾರು ಸಂಪ್ರದಾಯ ನಿಷ್ಠರು ಗಾಬರಿಗೊಳ್ಳುತ್ತಾರೆ....... ಪಂಚಮರನ್ನು ಎಲ್ಲ ಶಾಲೆಗಳಿಗೆ ಸೇರಿಸಿಕೊಳ್ಳಲು ಇನ್ನೂ ಸಾಧ್ಯವಾಗಿಲ್ಲ"[608].

---

607. *ಸದಾಶಿವ ಕೆ., ಪೂರ್ವೋಕ್ತ, ಪು. 168-171*

608. *ಸೆನ್ಸಸ್ ಆಫ್ ಇಂಡಿಯಾ 1931, ಪು. 327-328*
*- ಉಲ್ಲೇಖ : ಚಂದ್ರಶೇಖರ್ ಎಸ್., ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ -ಕೆಲವು ಒಳನೋಟಗಳು 1881-1940, ಅಂಕಣ ಪ್ರಕಾಶನ, ಬೆಂಗಳೂರು, ಪು. 97*

ಪಂಚಮರ ಶಿಕ್ಷಣ ಹಾಗೂ ಅವರ ಮೇಲಿದ್ದ ಅಸ್ಪೃಶ್ಯತೆಯ ಕಳಂಕವನ್ನು ಹೋಗಲಾಡಿಸಲು ಸರ್ಕಾರದ ಜೊತೆಗೆ ಅನೇಕ ಸಂಘ ಸಂಸ್ಥೆಗಳು, ಉದಾರಿ ನಾಯಕರು ಶ್ರಮಿಸಿದರು. 1913ರಲ್ಲಿ ಸ್ಥಾಪಿತವಾದ 'ಹಿಂದೂ ದಲಿತವರ್ಗ ಮಿಷನ್' ಅನೇಕ ಗಣ್ಯರನ್ನು ಸದಸ್ಯರನ್ನಾಗಿ ಹೊಂದಿದ್ದು ಪಂಚಮರ ಶೈಕ್ಷಣಿಕ ಸಂಸ್ಥೆಗಳನ್ನು ಆರಂಭಿಸಿತು. ಈ ಸಂಸ್ಥೆ ನಡೆಸುತ್ತಿದ್ದ ಶಾಲೆಗಳಲ್ಲಿ ಬ್ರಾಹ್ಮಣ ವರ್ಗಕ್ಕೆ ಸೇರಿದ ಶಿಕ್ಷಕ ಶಿಕ್ಷಕಿಯರು ಕಾರ್ಯ ನಿರ್ವಹಿಸುತ್ತಿದ್ದರು. ಈ ಸಂಸ್ಥೆ ಅಸ್ಪೃಶ್ಯರ ಬಗೆಗಿನ ಸಮಾಜದ ನಕಾರಾತ್ಮಕ ಮನೋಭಾವನೆಯನ್ನು ಮಾರ್ಪಡಿಸಿ ಪರಿವರ್ತನೆ ತರುವಲ್ಲಿ ಶ್ರಮಿಸಿತು. ಬೇಲೂರು ಹಾಗೂ ಮೇಲುಕೋಟೆಗಳಲ್ಲಿ ಪಂಚಮ ಸಮ್ಮೇಳನಗಳನ್ನು ನಡೆಸಿ ಅವರಿಗೆ ದೇವಾಲಯ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟಿತು[609]. ಯುವರಾಜ ಕಂಠೀರವ ನರಸಿಂಹರಾಜ ಒಡೆಯರಿಂದ ಆರಂಭವಾದ ಮೈಸೂರ್ ಸಿವಿಕ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್ ಸಹ ಮೈಸೂರಿನ ಸಾಮಾ ಜಿಕ ಸುಧಾರಣಾ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸಿತು. ಡಿಪ್ರೆಸ್ಡ್ ಕ್ಲಾಸಸ್ ಎಜುಕೇಷನ್ ಮಿಷನ್ ಎಂಬ ಸಂಸ್ಥೆಯು ಆರ್. ಗೋಪಾಲಸ್ವಾಮಿ ಅಯ್ಯರ್ ಮುಂತಾದವರ ನೇತೃತ್ವದಲ್ಲಿ ಪಂಚಮರ ಶಿಕ್ಷಣ ಮತ್ತು ಅವರ ಸಂಘಟನೆಗೆ ನೆರವಾಯಿತು. ಹಾಗೆಯೇ ಪಂಚಮ ವರ್ಗದಿಂದ ಬಂದ ಮುರುಗೇಶನ್ ಪಿಳ್ಳೈರವರ ನಾಯಕತ್ವದಲ್ಲಿನ 'ಆದಿ ದ್ರಾವಿಡ ಅಭಿವೃದ್ಧಿ ಸಂಘ' ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸುವ ಮೂಲಕ ಹಲವಾರು ಸೌಲಭ್ಯ ಹಾಗೂ ರಿಯಾಯಿತಿಗಳನ್ನು ಪಂಚಮರಿಗೆ ಒದಗಿಸುವಲ್ಲಿ ಶ್ರಮಿಸಿತು. "ಆದಿ ಜಾಂಬವ ಸಂಘ" ಎಂಬ ಮತ್ತೊಂದು ಸಂಸ್ಥೆ ಪಂಚಮರಿಗೆ ಶಾಲೆಗಳು ಮತ್ತು ವಸತಿ ನಿಲಯಗಳನ್ನು ಸ್ಥಾಪಿಸಿ ಅವರ ಅಭಿವೃದ್ಧಿಗೆ ಶ್ರಮಿಸಿತು. ಮೇಲ್ಕಂಡಂತೆ ಸರ್ಕಾರ ಹಾಗೂ ಸಾರ್ವಜನಿಕ ಸಂಸ್ಥೆಗಳು ಕೈಗೊಂಡ ಕ್ರಮಗಳಿಂದಾಗಿ 1918ರಲ್ಲಿ ಮೆಟ್ರಿಕ್ಯುಲೇಶನ್, 1925ರಲ್ಲಿ ಪದವಿಯನ್ನು ಮೊದಲ ಬಾರಿಗೆ ಪಂಚಮ ವಿದ್ಯಾರ್ಥಿಗಳು ಪಡೆದರು. 1921ರಲ್ಲಿ ಸರ್ಕಾರಿ ಸೇವೆಯಲ್ಲಿ ಯಾವುದೇ ಪ್ರಾತಿನಿಧ್ಯ ಪಡೆಯದಿದ್ದ ಪಂಚಮರು 1935ರ ವೇಳೆಗೆ ಶೇ. 4.58ರಷ್ಟು ಗೆಜೆಟೆಡ್ ಮತ್ತು ಶೇ. 6.95ರಷ್ಟು ನಾನ್ ಗೆಜೆಟೆಡ್ ಹುದ್ದೆಗಳನ್ನು ಹೊಂದುವಂತಾದರು[610].

ಆಧುನಿಕ ಶಿಕ್ಷಣ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದಿಂದಾಗಿ 1920ರ ದಶಕದಲ್ಲಿ ಮನೆಪಾಠ ವ್ಯವಸ್ಥೆಯಲ್ಲಿ ಎಂತಹ ಪರಿವರ್ತನೆಗಳಾಗಿದ್ದವೆಂಬುದನ್ನು ಕುರಿತು ಎಂ.ವಿ. ಸೀತಾರಾಮಯ್ಯನವರು ತಮ್ಮ 'ಜೀವನ ನಾಟಕ' ಎಂಬ ಕೃತಿಯಲ್ಲಿ ಕೆಳಕಂಡಂತೆ ವಿವರಿಸಿದ್ದಾರೆ. ಕೆಳಜಾತಿಗಳು ಮತ್ತು ಅಸ್ಪೃ ಶ್ಯರಂತಹ ಜನ ಸಂಪರ್ಕದಿಂದ ಬಹುದೂರವಿರುತ್ತಿದ್ದ ಬ್ರಾಹ್ಮಣ ವರ್ಗದ ಪ್ರತಿನಿಧಿಯಾದ ಆನೇಕಲ್ ರಾಮರಾಯರೆಂಬುವವರು ಬ್ರಾಹ್ಮಣೇತರ

---

*609. ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಸಂ.)., ಸರ್. ಎಂ. ವಿಶ್ವೇಶ್ವರಯ್ಯ, ಪು. 65*

*610. ಚಂದ್ರಶೇಖರ್ ಎಸ್., ಪೂರ್ವೋಕ್ತ, ಪು. 80-92*

ಕೆಳಜಾತಿ ಮತ್ತು ಅಸ್ಪೃಶ್ಯ ವಿದ್ಯಾರ್ಥಿಗಳನ್ನು ಮನೆಪಾಠಕ್ಕೆ ಸೇರಿಸಿಕೊಂಡಿದ್ದರು. ರಾಮರಾಯರ ಪತ್ನಿ 'ಹೊಲೆಮಾದಿಗರು, ಹಜಾಮರು ಇವರ ಮಕ್ಕಳಿಗೆಲ್ಲ ಪಾಠ ಹೇಳುವುದೆ? ಅವರ ಮೈಲಿಗೆಯಲ್ಲ ನಮಗೆ ಬೆರೆಯುವುದಿಲ್ಲವೇ?' ಎಂದು ಪ್ರಶ್ನಿಸಿದಾಗ ರಾಮರಾಯರು "ನೋಡು ವಿದ್ಯಾದಾನ ಮಾಡುವಾಗ ಆ ಜಾತಿ ಈ ಜಾತಿ ಅಂತ ನೋಡಬಾರದು. ವಿದ್ಯೆ ಜ್ಞಾನ ಅಂದರೆ ಬೆಳಕು...... ಅವರೆಲ್ಲ ಸ್ಕೂಲಿಗೂ ಬರುತ್ತಾರಲ್ಲ?ಅಲ್ಲಿ ಮೈಲಿಗೆ ಆಗುವುದಿಲ್ಲವೆ?" ಎಂದು ಉತ್ತರಿಸಿದರು. ಆ ಮೂಲಕ ಉದಾರವಾಗಿಯಾಗಿ ಕಂಡು ಬರುತ್ತಾರೆ. ಆದರೆ "ಪುಟ್ಟಯ್ಯನ ಮಗನನ್ನು ಹಜಾರದ ಒಂದು ಮೂಲೆಯಲ್ಲಿ ಪ್ರತ್ಯೇಕವಾಗಿ ಕೂರಿಸುತ್ತೇನೆ. ಮಂಚಿಯ ಮಗನನ್ನು ಜಗಲಿಯ ಮೇಲೆ ಕೂರಿಸುತ್ತೇನೆ" ಎಂದೇಳುವ ಮೂಲಕ ಸಂಪ್ರದಾಯವಾದಿಯಾಗಿ ಕಾಣುತ್ತಾರೆ[611]. ಹೀಗೆ 20ನೇ ಶತಮಾನದ ಆರಂಭದ ಸಮಾಜವು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಆಧುನಿಕ ಪ್ರಕ್ರಿಯೆಗೆ ಒಳಗಾಗಿ ಸಾಮಾಜಿಕ ಪರಿವರ್ತನೆಗೆ ಮುಂದಾಗಿದ್ದರೂ ಸಹ ತನ್ನ ಸಂಪ್ರದಾಯಶೀಲತೆಯಿಂದ ಬಿಡುಗಡೆಗೊಳ್ಳದೆ ಬಳಲುತ್ತಿತ್ತೆಂದು ಹೇಳಬಹುದು. ಇದು ನಮ್ಮ ಸಂಶೋಧನಾ ಶೀರ್ಷಿಕೆಯ ಪರಿಕಲ್ಪನೆಯಾಗಿರುವ "ಪರಿವರ್ತನಾಶೀಲ ಸಂಪ್ರದಾಯಬದ್ಧ ಆಧುನಿಕ ಸಮಾಜ"ದ ಅತ್ಯುತ್ತಮ ಉದಾಹರಣೆಯಾಗಿ ಕಂಡುಬರುತ್ತದೆ.

### *vii)* ನಾಲ್ವಡಿ ಮತ್ತು ಪರಿಪೂರ್ಣ ಶಿಕ್ಷಣ

ಶಿಕ್ಷಣವೆಂದರೆ ಕೇವಲ ಅಕ್ಷರ ಜ್ಞಾನವಲ್ಲ. ನಿಜವಾದ ಶಿಕ್ಷಣವು ಮಾನವನನ್ನು ಬೌದ್ಧಿಕ, ದೈಹಿಕ ಮತ್ತು ನೈತಿಕವಾಗಿ ಸದೃಢಗೊಳಿಸುವುದು ಎಂಬ ಅಭಿಪ್ರಾಯವೂ ಇದೆ. ಜಗದ್ವಿಕಾಸವಾದದ ಅಂತಿಮ ಗುರಿಯಾದ ಜವಾಬ್ದಾರಿಯುತ ಪ್ರಜೆಗಳ ವ್ಯಕ್ತಿತ್ವ ರೂಪಿಕೆ ಮತ್ತು ಸಾಮಾಜಿಕ ಹಾಗೂ ರಾಜಕೀಯ ಪ್ರಜ್ಞೆಯುಳ್ಳ ಸದಸ್ಯರನ್ನು ಪ್ರಜಾಪ್ರಭುತ್ವ ಸಮಾಜಕ್ಕಾಗಿ ರೂಪಿಸುವುದು ಎಂಬ ಅಂಶವನ್ನು ಶಿಕ್ಷಣದ ಮೂಲಕ ಸಾಕಾರಗೊಳಿಸಲು ನಾಲ್ವಡಿಯವರು ಚಿಂತಿಸಿದ್ದರು. ಆ ನಿಟ್ಟಿನಲ್ಲಿ ನಾಲ್ವಡಿಯವರು ಎಂತಹ ಶಿಕ್ಷಣವನ್ನು ತಮ್ಮ ರಾಜ್ಯದ ಜನತೆಗೆ ಒದಗಿಸಬೇಕೆಂದಿದ್ದರೆಂಬುದು ಅವರ ಭಾಷಣಗಳಲ್ಲಿ ವ್ಯಕ್ತಗೊಂಡಿದೆ. "ಬಹಳ ಕಾಲದಿಂದ ಈವರೆಗೂ ಬೆಳೆಸಿಕೊಂಡು ಬಂದ ಪ್ರಾಯೋಗಿಕವಲ್ಲದ ಶಿಕ್ಷಣ ಮತ್ತು ಪ್ರಾಯೋಗಿಕ ಪ್ರಯೋಜನ ನೀಡುವ ಹೊಸ ಆವಿಷ್ಕಾರಗಳ ಪ್ರಾಯೋಗಿಕ ಉಪಯೋಗ ಪಡೆಯಲಾಗುವ ಉಪಯುಕ್ತ ಶಿಕ್ಷಣ ಇವೆರಡರ ನಡುವಣ ಹೊಂದಾಣಿಕೆ ಇರುವ ಶಿಕ್ಷಣವಿರಬೇಕೆಂಬುದು ನನ್ನ ಅತಿ ದೊಡ್ಡ ಆಕಾಂಕ್ಷೆ"[612] ಎಂದು ಹೇಳಿದ್ದರು. 1913ಕ್ಕಿಂತ ಮುಂಚಿತವಾಗಿಯೇ ನಾಲ್ವಡಿಯವರ ಆಡಳಿತದಲ್ಲಿ

---

*611. **ಸೀತಾರಾಮಯ್ಯ ಎಂ.ವಿ.**, ಜೀವನ ನಾಟಕ, ರಾಘವ ಪ್ರಕಾಶನ, ಬೆಂಗಳೂರು, 1961, ಪು. 118*

*612. **ಸ್ಪೀಚಸ್ ಆಫ್ ಹಿಸ್ ಹೈನೆಸ್.**, ಪು. 340*

*613. **ವೆಂಕಟರಾಮಯ್ಯ ಸಿ.ಕೆ.**, ದಿವಂಗತ ಶ್ರೀಮದ್ಯುವರಾಜರವರು, ಪು. 15*

ಅಪರೋಕ್ಷವಾಗಿ ಪ್ರಭಾವ ಬೀರಿದ ಯುವರಾಜ ಕಂಠೀರವ ನರಸಿಂಹ ರಾಜ ಒಡೆಯರು "ಅಪ್ರಬುದ್ಧರಾದ ಗುಮಾಸ್ತರುಗಳನ್ನು ಸಿದ್ಧಗೊಳಿಸುವ ಶಿಕ್ಷಣ ಕ್ರಮದಿಂದ ಪ್ರಯೋಜನವಾಗದೆಂದೂ, ಪಾಶ್ಚಾತ್ಯ ದೇಶಗಳಲ್ಲಿರುವಂತೆ ಕೈಗಾರಿಕೆಗಳಿಗೂ, ನಾನಾ ವೃತ್ತಿಗಳಿಗೂ ಸಾಧಕವಾಗಿ ಸುಖಜೀವನ ನಡೆಯುವ ಶಿಕ್ಷಣ ಕ್ರಮವು ಭಾರತದಲ್ಲಿ ಏರ್ಪಡಬೇಕೆಂದೂ, ಪಠ್ಯಪುಸ್ತಕಗಳನ್ನು ಕಂಠಗತ ಮಾಡಿ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ ಮಾತ್ರಕ್ಕೆ ವಿದ್ಯಾಭ್ಯಾಸವು ಪ್ರಯೋಜನಕರವೆನಿಸಲಾರದೆಂದೂ"[613] ಅಭಿಪ್ರಾಯಪಟ್ಟಿದ್ದರು. ಶಿಕ್ಷಣವು ಬೆಳವಣಿಗೆಗೊಂಡಂತೆ ಶಾಲಾ ಕಾಲೇಜುಗಳು ತುಂಬಿ ಹೋಗಿದ್ದರಿಂದ ಶಿಕ್ಷಣದ ಹೆಚ್ಚಳವನ್ನು ಕೆಲವರು ಟೀಕಿಸಲಾರಂಭಿಸಿದರು. ಆಗ ನಾಲ್ವಡಿಯವರು "ಶಿಕ್ಷಣದ ಹೆಚ್ಚಳದಿಂದ ತೊಂದರೆಯಿಲ್ಲ, ನ್ಯೂನತೆ ಇರುವುದು ಶಿಕ್ಷಣದ ಹೆಚ್ಚಳದಿಂದಲ್ಲ. ನ್ಯೂನತೆ ಇರುವುದು ತಪ್ಪು ಶಿಕ್ಷಣದಲ್ಲಿ- ಅಂದರೆ ಸರಿಯಲ್ಲದ ಶಿಕ್ಷಣದಲ್ಲಿ. ಭಾರತದಲ್ಲಿ ಶಿಕ್ಷಣದ ರೀತಿ ನೀತಿ ನಿರ್ಧರಿಸುವಲ್ಲಿ ಸರ್ಕಾರಿ ಸೇವೆಯ ಅವಶ್ಯಕತೆಯ ಪ್ರಭಾವ ಹಿಂದೊಮ್ಮೆ ಖಂಡಿತವಾಗಿ ಇತ್ತು. ಈ ಜಾಡ್ಯ -ಅಂದರೆ ಅಸಮರ್ಪಕ ಶಿಕ್ಷಣ- ಸಮಯೋಚಿತವಲ್ಲದ ಶಿಕ್ಷಣಕ್ಕೆ ಒತ್ತು ನೀಡುತ್ತಾ ಬಂದಿರುವ ಫಲ. ಈಗಾಗಲೇ ಉಳಿದ ಅನೇಕ ದೇಶಗಳು ಅದರಿಂದ ಹೊರಬಂದಿವೆ. ಆದ್ದರಿಂದ ಸವಿಸ್ತಾರ ಅರ್ಥವುಳ್ಳ ಈಗಿನ ಶಿಕ್ಷಣ ನೀತಿಯಂತೆ ಬದಲಾವಣೆಗಳಾಗಬೇಕು"[614] ಎಂದು ಅಭಿಪ್ರಾಯಪಟ್ಟಿದ್ದರು. 1926ರ ವೇಳೆಗೆ ಪಾಶ್ಚಿಮಾತ್ಯ ಪ್ರಭಾವದಿಂದ ಸಂಸ್ಕೃತ ಶಿಕ್ಷಣಕ್ಕೆ ಹೆಚ್ಚು ಬೇಡಿಕೆಯಿಲ್ಲದಂತಾಗಿ ಮಹಾರಾಜಾಸ್ ಸಂಸ್ಕೃತ ಕಾಲೇಜಿನ ಸಮಿತಿಯು ಕಾಲೇಜಿನಲ್ಲಿ ಕಲಿಸಲಾಗುವ ಕೋರ್ಸ್‌ಗಳ ಮತ್ತು ಪದವಿ ಪಡೆಯುವ ವಿದ್ಯಾರ್ಥಿಗಳ ಭವಿಷ್ಯವನ್ನು ಕುರಿತು ಕಳವಳ ವ್ಯಕ್ತಪಡಿಸಿತು. ಆಗ ನಾಲ್ವಡಿಯವರು ಕೋರ್ಸ್‌ಗಳಿಗೆ ಸಂಬಂಧಿಸಿದಂತೆ "ನಮ್ಮ ಸಂಸ್ಥೆಗಳ ಮತ್ತು ವಿಚಾರಗಳ ಮೇಲೆ ಬೀರುವ ಪಾಶ್ಚಾತ್ಯ ನಾಗರೀಕತೆ ಪ್ರಭಾವದಿಂದ ಸಂಸ್ಕೃತ ಕಾಲೇಜು ಮಾತ್ರ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆದರೆ ಒಂದು ವಿಚಾರ ಗಮನದಲ್ಲಿಡಬೇಕು. ನೂತನ ಪರಿಸ್ಥಿತಿಗನುಗುಣವಾಗಿ ಏನೇ ಬದಲಾವಣೆ ತಂದರೂ ನಮ್ಮ ಸಂಸ್ಕೃತಿಯ ಮುಖ್ಯಾಂಶಗಳಿಗೆ ಧಕ್ಕೆ ಬರದಂತೆ ಎಚ್ಚರವಹಿಸಬೇಕು. ಎರಡನೇ ವಿಚಾರಕ್ಕೆ ಸಂಬಂಧಿಸಿದಂತೆ ನನ್ನ ಸರ್ಕಾರ ನಿಮ್ಮ ಯಾವುದೇ ಮನವಿಯನ್ನು ಸಹಾನುಭೂತಿಯಿಂದ ಪರಿಗಣಿಸಲಾಗುತ್ತದೆ"[615] ಎಂದು ತಿಳಿಸಿದರು. ಆ ಮೂಲಕ ಸಂಸ್ಕೃತ ಶಿಕ್ಷಣದಂತಹ ಸಾಂಪ್ರದಾಯಿಕ ಅಂಶವೂ ಪಾಶ್ಚಿಮಾತ್ಯ ಪ್ರಭಾವದಿಂದ ಉಳಿಯಬೇಕಾದರೆ ಆಧುನಿಕ ಶಿಕ್ಷಣ ಕ್ರಮಗಳನ್ನು ಅಳವಡಿಸಿಕೊಳ್ಳಲೇ ಬೇಕೆಂದು ತಿಳಿ ಹೇಳಿದರು. ಪಠ್ಯಕ್ರಮಗಳು ಸಹಾ ಅಭಿವೃದ್ಧಿಗೊಳ್ಳುತ್ತಾ ವರ್ತಮಾನದ ಅವಶ್ಯಕತೆಗಳನ್ನು ಪೂರೈಸುವಂತಿರಬೇಕು ಎಂದು ಪ್ರತಿಪಾದಿಸುತ್ತಿದ್ದ ನಾಲ್ವಡಿಯವರು ಭಾರತ ಸರ್ಕಾರದ ಅಧಿಕಾರಿಯೊಬ್ಬರು ರಕ್ಷಣಾತ್ಮಕ ಔಷಧೋಪಚಾರಗಳ

---

*614. ಸ್ಪೀಚಸ್ ಆಫ್ ಹಿಸ್ ಹೈನೆಸ್., ಪು. 174*

*615. ಅದೇ., ಪು. 256*

*616. ಅದೇ., ಪು. 340*

ವಿಜ್ಞಾನದದಲ್ಲಿ ಆದ ಹೊಸ ಆವಿಷ್ಕಾರಗಳು ಮತ್ತು ಆರೋಗ್ಯ ಸಂಬಂಧ ವಿಷಯದ ಬೋಧನೆಯನ್ನು ಅಗತ್ಯವಾಗಿ ಮಾಡಬೇಕೆಂದು ಹೇಳಿದ ವಿಷಯವನ್ನು ಅನುಮೋದಿಸುತ್ತಾ "ಪಠ್ಯಕ್ರಮದಲ್ಲಿ ಅಂತಹ ವಿಷಯಕ್ಕೆ ಅವಕಾಶವಿಲ್ಲದಿದ್ದರೆ ಆ ಪಠ್ಯಕ್ರಮಕ್ಕೆ ಬೆಲೆಯೇ ಇಲ್ಲ....... ಹೊಸ ಆವಿಷ್ಕಾರಗಳು ಜನಜೀವನದ ರೂಪುರೇಷೆಯನ್ನೇ ಬದಲಾಯಿಸಿದ್ದು ನಾವೆಲ್ಲರೂ ಅವುಗಳ ಪ್ರಾಥಮಿಕ ವಿಷಯಗಳನ್ನಾದರೂ ತಿಳಿದಿರಬೇಕು"[616] ಎಂದು ತಿಳಿಸಿದರು. ಆ ಮೂಲಕ ಪಠ್ಯಕ್ರಮವು ಜನಜೀವನಕ್ಕೆ ಹತ್ತಿರವೂ, ಅನುಕೂಲವೂ ಆಗುವಂತಿರಬೇಕೆಂದು ಪ್ರತಿಪಾದಿಸಿದರು. ನಾಲ್ವಡಿಯವರು ಕ್ರೀಡಾ ಶಿಕ್ಷಣಕ್ಕೂ ಒತ್ತಾಸೆ ನೀಡಿದ್ದರು. ತಮ್ಮ ಭಾಷಣವೊಂದರಲ್ಲಿ "ನೀವು ಆರೋಗ್ಯವಂತರಾಗಿ ಚಟುವಟಿಕೆಯುಳ್ಳ ಸದೃಢರಾಗಬೇಕಾದಲ್ಲಿ ನಿಮ್ಮ ಶಾಲಾ ಶಿಕ್ಷಣದ ಭರದಲ್ಲಿ ಕ್ರೀಡೆ ಇತ್ಯಾದಿಗಳ ಪ್ರಾಮುಖ್ಯತೆಯನ್ನು ಮರೆಯಬಾರದು"[617] ಎಂದು ವಿದ್ಯಾರ್ಥಿಗಳಿಗೆ ತಿಳಿಹೇಳಿದ್ದರು. ಶಾರೀರಿಕ ಶಿಕ್ಷಣದ ಪ್ರಾಮುಖ್ಯತೆಯನ್ನು ಅರಿತು 1937ರ ಹೈಸ್ಕೂಲ್ ಶಿಕ್ಷಣದ ಸುಧಾರಿತ ಯೋಜನೆಯಲ್ಲಿ ಶಾರೀರಿಕ ಶಿಕ್ಷಣವನ್ನು ಕಡ್ಡಾಯವನ್ನಾಗಿಸಿದರು. ಬೆಂಗಳೂರಿನ ವೈ.ಎಂ.ಸಿ.ಎ. ಶಾರೀರಿಕ ಶಿಕ್ಷಣದ ತರಭೇತಿ ಕೇಂದ್ರದಲ್ಲಿ ಹೈಸ್ಕೂಲ್ ಶಿಕ್ಷಕರನ್ನು ಸರ್ಕಾರ ತರಭೇತಿಗೊಳಿಸಲು 1939-40 ರಿಂದ ಕಳುಹಿಸಲಾರಂಭಿಸಿತು. ಇದರಿಂದಾಗಿ ಡ್ರಿಲ್, ಕ್ರೀಡೆಗಳು, ಓಟ, ಯೋಗಾಸನ, ಕುಸ್ತಿ, ವ್ಯಾಯಾಮ ಮುಂತಾದವುಗಳನ್ನು ಶಾಲೆಗಳಲ್ಲಿ ಕಲಿಸಲಾರಂಭಿಸಿದರು[618].

ಮುಂದಿನ ಜನಾಂಗವಾದ ಮಕ್ಕಳು ಮತ್ತು ಯುವಕರಲ್ಲಿ ಸ್ನೇಹ ಸೌಹಾರ್ದಗಳನ್ನು, ಸತ್ಯಪ್ರೇಮ, ಧೈರ್ಯಸ್ಥೈರ್ಯ, ಶಿಸ್ತು ಮುಂತಾದ ಗುಣಗಳನ್ನು ವೃದ್ಧಿಗೊಳಿಸಿ ಅವರ ನಡೆನುಡಿಗಳನ್ನು ತಿದ್ದುವ ಉದ್ದೇಶದಿಂದ ಬಾಲಚಮು (ಸ್ಕೌಟ್) ವ್ಯವಸ್ಥೆಯನ್ನು ಮೈಸೂರಿನಲ್ಲಿ ಪ್ರಸಿದ್ಧಿಗೊಳಿಸಲಾಯಿತು. ಅದರಲ್ಲೂ ಯುವರಾಜ ಕಂಠೀರವರು ತಾವೇ ಸ್ಕೌಟ್ ಆಗಿ ಅದರ ಬೆಳವಣಿಗೆಗೆ ಕಾರಣರಾದರು. ಅವರು "ಮುಂದಿನ ಜನಾಂಗವಾದ ಇಂದಿನ ಮಕ್ಕಳು ನಡೆನುಡಿಗಳನ್ನು, ದೇಹಪಟುತ್ವವನ್ನು ಸಮರ್ಪಕವಾಗಿ ರೂಪಿಸುವುದಕ್ಕಾಗಿ ಸ್ಕೌಟ್ ವ್ಯವಸ್ಥೆಯನ್ನು ಉಪಯೋಗಿಸಿಕೊಳ್ಳಬೇಕೆಂದು"[619] ಹೇಳುತ್ತಿದ್ದರು. ನಾಲ್ವಡಿಯವರು 1922ರಲ್ಲಿ ಮೈಸೂರಿನ ಬಾಯ್ಸ್ ಸ್ಕೌಟ್‌ಗೆ ಧ್ವಜವನ್ನು ನೀಡುತ್ತಾ ಸ್ಕೌಟ್‌ನ ಮಹತ್ವವನ್ನು ಕುರಿತು "ಪ್ರತಿ ಶಾಲಾಬಾಲಕ ಸಂಪೂರ್ಣತೆ ಪಡೆಯಬೇಕಾದರೆ ಸ್ಕೌಟ್ ಸೇರಬೇಕು. ಎಲ್ಲಾ ಸ್ಕೌಟ್‌ಗಳೂ ಲವಲವಿಕೆಯ ಜನಪ್ರಿಯ ಬಾಲಕರನ್ನು ಮಾತ್ರವಲ್ಲದೆ ಉಳಿದ ಎಲ್ಲಾ ಬಾಲಕರನ್ನು ಅದರೆಡೆಗೆ ತರುವುದು ಅವರ ಪ್ರಮುಖ ಗುರಿ ಎಂದು ತಿಳಿಯಬೇಕಲ್ಲದೆ ದೈಹಿಕವಾಗಿ ನಿಶ್ಯಕ್ತರಾದ, ನಾಚಿಕೆ ಸ್ವಭಾವದ, ಮುಜುಗರವುಳ್ಳ ವಿದ್ಯಾರ್ಥಿಗಳನ್ನೂ ಸ್ಕೌಟ್‌ಗೆ ಸೇರಿಸಬೇಕು. ಏಕೆಂದರೆ ಅವರಿಗೆ ಸಹಾನುಭೂತಿ, ಸ್ನೇಹ ಮತ್ತು ದೈಹಿಕ ಶ್ರಮದ ಅಗತ್ಯ ಬಹಳವಾಗಿದೆ....... ಸ್ಕೌಟ್ ಮಾತಿಗಿಂತ ಕೃತಿಗೆ ಬೆಲೆ ನೀಡುವಂತದ್ದು ಆತ ಸೇರಿದಾಗಲೇ ಒಂದು

---

*617. ಸ್ಪೀಚಸ್ ಆಫ್ ಹಿಸ್ ಹೈನೆಸ್., ಪೂರ್ವೋಕ್ತ, ಪುಟ 99*

*618. ಸೂರ್ಯನಾಥ ಯು. ಕಾಮತ್., ಪೂರ್ವೋಕ್ತ, ಪು. 40-41*

*619. ವೆಂಕಟರಾಮಯ್ಯ ಸಿ.ಕೆ, ದಿವಂಗತ ಶ್ರೀಮದ್ಯುವರಾಜರವರು, ಮೈಸೂರು, 1957, ಪು. 15*

ಪ್ರಮಾಣ ಮಾಡಬೇಕಾಗುತ್ತದೆ. ಅದಾದ ನಂತರ ಯಾವ ಪ್ರಮಾಣದ ಅಗತ್ಯವಿಲ್ಲ. ಆತ ತನ್ನೆಲ್ಲಾ ಶಕ್ತಿಯನ್ನು ಸೇವೆಗೆ ಮುಡಿಪಾಗಿಡುತ್ತಾನೆ.

ಒಳ್ಳೆಯದನ್ನು ಮಾಡಲು ಪ್ರಚೋದಿತನಾದ ಒಬ್ಬ ಬಾಲಕನಾಗಲಿ ಅಥವಾ ಯುವಕನಾಗಲೀ ತನಗರಿವಿಲ್ಲದಂತೆ ಕೆಟ್ಟದ್ದನ್ನು ಬಿಡುತ್ತಾನೆ. ಪರಸೇವೆಗೆ ಮುಡಿಪಾಗಿಟ್ಟಿರುವ ಸ್ಕೌಟ್ ಅದರ ನಿಯಮದಂತೆ ತನಗಾಗಲೀ, ಪರರಿಗಾಗಲೀ ಕೆಟ್ಟದ್ದನ್ನು ಬಯಸಲಾರ"[620] ಎಂದು ತಿಳಿಸಿದರು. ಸ್ಕೌಟ್ ಚಳವಳಿಯನ್ನು ಬೆಂಬಲಿಸುವ ಮೂಲಕ ನಾಲ್ವಡಿ ಮತ್ತು ಅವರ ಸರ್ಕಾರ ನಿಸ್ಪೃಹ ಸೇವಾ ಮನೋಭಾವದ ಭಾವೀ ಪೀಳಿಗೆಯೊಂದನ್ನು ಕಟ್ಟಲು, ಬೇಧಭಾವವನ್ನು ಹೋಗಲಾಡಿಸಿ ಉತ್ತಮ ಸಮಾಜವನ್ನು ನಿರ್ಮಿಸುವ ಆಕಾಂಕ್ಷೆ ಹೊಂದಿದ್ದರು.

ಇದುವರೆಗೆ ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಶಿಕ್ಷಣ ಎಂಬ ಶೀರ್ಷಿಕೆಯಡಿಯಲ್ಲಿ ಮಾಡಿದ ಅಧ್ಯಯನಗಳಿಂದ ಕೆಲವು ತೀರ್ಮಾನಗಳಿಗೆ ಬರಬಹುದು. ಮೊದಲನೆಯದಾಗಿ ನಾಲ್ವಡಿಯವರು ಶಿಕ್ಷಣವನ್ನು ಸಮಾಜದ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವ ಸಾಂಪ್ರಾದಯಿಕ ಉದ್ದೇಶಕ್ಕಾಗಿ ಬಳಸಿಕೊಳ್ಳುವುದನ್ನು ಬಿಟ್ಟು ಸಾಮಾಜಿಕ ಪರಿವರ್ತನೆಯನ್ನು ತರುವ ಪ್ರಭಾವಶಾಲಿ ಮಾಧ್ಯಮವನ್ನಾಗಿ ಬಳಸಿಕೊಂಡರೆಂಬುದು. ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವ ಮೂಲಕ ಸಾಮಾಜಿಕ ಪರಿವರ್ತನಾ ಪ್ರಕ್ರಿಯೆಗಳನ್ನು ವಿಸ್ತಾರಗೊಳಿಸಲು ಪ್ರಯತ್ನಿಸಿದರು. ಅದಕ್ಕಾಗಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಯೋಜನೆಯನ್ನು ಜಾರಿಗೊಳಿಸಿ ಸ್ಥಳೀಯ ಸಂಸ್ಥೆಗಳಾದ ಜಿಲ್ಲಾ ಬೋರ್ಡ್, ತಾಲ್ಲೂಕು ಸಮಿತಿ ಹಾಗೂ ಗ್ರಾಮ ಸಮಿತಿಗಳ ನೆರವು ಪಡೆದು ಗ್ರಾಮೀಣ ಮಟ್ಟದವರೆಗೂ ಶಿಕ್ಷಣವನ್ನು ವಿಸ್ತರಿಸಿದರು. ಆ ಮೂಲಕ ಶಿಕ್ಷಣದ ಪ್ರಾದೇಶಿಕ ಅಸಮತೋಲನವನ್ನು ಸರಿಪಡಿಸಲು ಪ್ರಯತ್ನಿಸಿದರು. ಎರಡನೆಯದಾಗಿ ಮೈಸೂರು ಸರ್ಕಾರವು ಬೌದ್ಧಿಕ ಹಾಗೂ ಆಡಳಿತ ವರ್ಗಗಳನ್ನು ಬೇರೆ ಪ್ರದೇಶಗಳಿಂದ ಆಮದು ಮಾಡಿಕೊಳ್ಳಬೇಕಿತ್ತು. ಏಕೆಂದರೆ ಮೈಸೂರು ಸಂಸ್ಥಾನವು ಪ್ರೌಢ ಮತ್ತು ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಸ್ವಾವಲಂಬಿಯಾಗಿಲ್ಲದುದ್ದು. ಈ ಬೌದ್ಧಿಕ ದಾರಿದ್ರ್ಯವನ್ನು ಹೋಗಲಾಡಿಸಿಕೊಂಡು ಸ್ವಾವಲಂಬಿಯಾಗಲು ಮೈಸೂರು ಸರ್ಕಾರ ಎಸ್.ಎಸ್.ಎಲ್.ಸಿ. ಪರೀಕ್ಷಾ ಯೋಜನೆಯನ್ನು ಜಾರಿಗೊಳಿಸಿತು. ಇದರಿಂದಾಗಿ ಸ್ಥಳೀಯ ವಿದ್ಯಾರ್ಥಿಗಳು ಪ್ರೌಢಶಿಕ್ಷಣಕ್ಕಾಗಿ ದೂರದ ಮದ್ರಾಸ್ ಮತ್ತು ಬೊಂಬಾಯಿ ಪ್ರಾಂತ್ಯಗಳಿಗೆ ಹೋಗುವುದು ತಪ್ಪಿತು. ಸ್ಥಳೀಯರು ಹೆಚ್ಚಾಗಿ ಪ್ರೌಢಶಿಕ್ಷಣವನ್ನು ಪಡೆದು ಸರ್ಕಾರಿ ಹುದ್ದೆಗಳನ್ನು ಪಡೆಯುವಂತಾಗಿ ಮೈಸೂರಿಗರು -ಮದ್ರಾಸಿಗಳು ಎಂಬ ವರ್ಗ ಸಂಘರ್ಷಕ್ಕೆ ಆ ಮೂಲಕ ಸಾಮಾಜಿಕ ಪರಿವರ್ತನೆಗೆ ನಾಂದಿಯಾಡಿತು. ಸರ್ಕಾರ ಜಾರಿಗೆ ತಂದ ಕಡ್ಡಾಯ

---

*620. ಸ್ಪೀಚಸ್ ಆಫ್ ಹಿಸ್ ಹೈನೆಸ್, ಪೂರ್ವೋಕ್ತ, ಪು. 210-211*

ಪ್ರಾಥಮಿಕ ಶಿಕ್ಷಣ ಮತ್ತು ಪ್ರೌಢಶಿಕ್ಷಣಗಳಿಗೆ ನೀಡಿದ ಪ್ರೋತ್ಸಾಹದಿಂದ ವಿದ್ಯಾವಂತರ ಸಂಖ್ಯೆ ಹೆಚ್ಚಿ ಕಾಲೇಜು ಶಿಕ್ಷಣ ಪಡೆಯಲು ಅರ್ಹತೆ ಪಡೆದರು. ಇದು ಮೈಸೂರು ಸರ್ಕಾರವು ತನ್ನದೇ ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿಕೊಳ್ಳಲು ಮುಂದಾಗುವಂತೆ ಮಾಡಿತು. ಮೂರನೆಯದಾಗಿ ನಾಲ್ವಡಿಯವರ ಸರ್ಕಾರವು ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವ ಮೂಲಕ ತನ್ನ ಶಿಕ್ಷಣ ನೀತಿ ಮತ್ತು ಬೆಳವಣಿಗೆಯನ್ನು ನಿಯಂತ್ರಿಸುತ್ತಿದ್ದ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಬಿಡುಗಡೆಗೊಳ್ಳುವಂತದ್ದು. ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವ ಮೂಲಕ ದೇಶೀಯ ಸಂಸ್ಥಾನವೊಂದು ಪ್ರಥಮ ಬಾರಿಗೆ ವಿಶ್ವವಿದ್ಯಾನಿಲಯ ಹೊಂದಿದ ಕೀರ್ತಿ ಪಡೆಯಿತು. ಈ ವಿಶ್ವವಿದ್ಯಾನಿಲಯವು ಆಡಳಿತಜ್ಞರು, ಆರ್ಥಿಕತಜ್ಞರು, ಇಂಜಿನಿಯರುಗಳು, ಲಾಯರುಗಳು, ವಾಣಿಜ್ಯೋದ್ಯಮಿಗಳು, ಮುತ್ಸದ್ದಿಗಳನ್ನು ತರಬೇತುಗೊಳಿಸುವ ಮೂಲಕ ರಾಜ್ಯದ ಎಲ್ಲಾ ವಿಧವಾದ ಬೌದ್ಧಿಕ ಸೇವೆಯನ್ನು ಸ್ಥಳೀಯವಾಗಿ ಪಡೆಯುವಂತಾಯಿತು. ವಿಶ್ವವಿದ್ಯಾನಿಲಯದ ಜ್ಞಾನಪ್ರವಾಹವು ಜನಸಾಮಾನ್ಯರನ್ನು ಮುಟ್ಟಿ ಮೈಸೂರು ಒಂದು ಸಾಂಸ್ಕೃತಿಕ, ಬೌದ್ಧಿಕ ಕೇಂದ್ರವಾಗಿ ಬೆಳೆಯಲು ಪ್ರೇರಣೆ ನೀಡಿತು. ಮೈಸೂರು ಪ್ರಯೋಗವೆಂದೇ ಹೆಸರಾದ ಪ್ರಸರಣ ಮತ್ತು ಪ್ರಕಟಣಾ ಇಲಾಖೆಗಳು ವಿಶ್ವವಿದ್ಯಾನಿಲಯದ ಜ್ಞಾನಪ್ರವಾಹವನ್ನು ಗ್ರಾಮೀಣ ಪ್ರದೇಶದವರೆಗೂ ಕೊಂಡೊಯ್ದವು. ಇದರಿಂದಾಗಿ ಹುಟ್ಟಿಕೊಂಡ ಬೌದ್ಧಿಕ ವರ್ಗವು ಸಮಾಜದ ಸುಧಾರಣೆಗೆ, ಬೆಳವಣಿಗೆಗೆ ತನ್ನನ್ನು ತಾನೇ ತೊಡಗಿಸಿಕೊಳ್ಳುವಂತೆ ಮಾಡಿತು. ನಾಲ್ಕನೆಯದಾಗಿ ಬಹುಕಾಲ ಶಿಕ್ಷಣದಿಂದ ವಂಚಿತವಾಗಿದ್ದ ಸ್ತ್ರೀಯರಿಗೆ ಶಿಕ್ಷಣ ಕೊಡಿಸಲು ನಾಲ್ವಡಿಯವರ ಸರ್ಕಾರ ಮುಂದಾದುದು. ಈ ಚಟುವಟಿಕೆಗೆ ರಾಜಾಸ್ಥಾನ ಮತ್ತು ರಾಜ ಕುಟುಂಬದ ಸದಸ್ಯರೇ ಮುಂಚೂಣಿಯಲ್ಲಿ ನಿಂತು ಮಹಿಳಾ ಶಿಕ್ಷಣವನ್ನು ಪ್ರಗತಿಯತ್ತ ಕೊಂಡೊಯ್ದರು. ಅದರಿಂದಾಗಿ ಮೈಸೂರಿನ ಮಹಾರಾಣಿ ಕಾಲೇಜು ದಕ್ಷಿಣ ಭಾರತದಲ್ಲೇ ಅತ್ಯಂತ ಯಶಸ್ವಿಯಾದ ಶೈಕ್ಷಣಿಕ ಸಂಸ್ಥೆ ಎಂಬ ಹೆಸರು ಪಡೆಯುವಂತಾಯಿತು. ಆಧುನಿಕ ಶಿಕ್ಷಣದ ಮಹತ್ವವನ್ನರಿತು ಸಂಪ್ರದಾಯವಾದಿಗಳಾಗಿದ್ದ ಬ್ರಾಹ್ಮಣರು, ಮುಸ್ಲಿಮರು ತಮ್ಮ ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸಲಾರಂಭಿಸಿದರು. ನಾಲ್ವಡಿಯವರು "ಯಾವ ಸಮುದಾಯದ ಅರ್ಧದಷ್ಟು ಸದಸ್ಯರು ಅನರಸ್ಥರಾಗಿರುತ್ತಾರೋ, ಅಜ್ಞಾನಿಗಳಾಗಿರುತ್ತಾರೋ ಆ ಸಮುದಾಯ ಮುಂದುವರಿಯಲಾರದು" ಎಂದು ಎಚ್ಚರಿಸುವ ಮೂಲಕ ಮಹಿಳಾ ಶಿಕ್ಷಣಕ್ಕೆ ಜನ ಆದ್ಯತೆ ನೀಡಬೇಕೆಂದು ತಿಳಿಸಿದರು. ಸ್ತ್ರೀಶಿಕ್ಷಣವನ್ನು ಸಾಂಪ್ರದಾಯಿಕತೆಯ ಹಿನ್ನೆಲೆಯಲ್ಲಿ ಕಡೆಗಣಿಸಿದ್ದ ಅರಸು ಮುಂತಾದ ಪಂಗಡಗಳವರನ್ನು "ಈ ದಿನಗಳಲ್ಲಿ ಒಂದು ಮತಸ್ಥರ ಹೆಣ್ಣು ಮಕ್ಕಳು ಅಶಿಕ್ಷಿತರು ಎನ್ನುವ ಅಪವಾದಕ್ಕಿಂತ ಹೆಚ್ಚಿನ ಅಪರಾಧ ಬೇರೆ ಇಲ್ಲ" ಎಂದು ಹೇಳುವ ಮೂಲಕ ಸಾಮಾಜಿಕ ಪರಿವರ್ತನೆಗೆ, ಆಧುನಿಕತೆಯನ್ನು

ಮೈಗೂಡಿಸಿಕೊಳ್ಳಬೇಕೆಂದು ಪ್ರಚುರಿಸಿದರು. ಹೀಗೆ ನಾಲ್ವಡಿಯವರ ಸುಧಾರಣಾ ಪ್ರವೃತ್ತಿಯ ಶಿಕ್ಷಣದ ಪ್ರೋತ್ಸಾಹದಿಂದಾಗಿ ಸ್ತ್ರೀ ಶಿಕ್ಷಣದ ಬಗೆಗಿದ್ದ ಸಾಂಪ್ರದಾಯಿಕ ನಿರ್ಬಂಧ ಕಡಿಮೆಗೊಳ್ಳುತ್ತಾ ಬಂದು ಸ್ತ್ರೀ ಶಿಕ್ಷಣ ಅಭಿವೃದ್ಧಿಯತ್ತ ಸಾಗುವಂತಾಯಿತು.

ಐದನೆಯದಾಗಿ ನಾಲ್ವಡಿ ಮತ್ತು ಅವರ ಸರ್ಕಾರವು ಹಿಂದುಳಿದ ವರ್ಗಗಳಿಗೆ ಶಿಕ್ಷಣ ಮತ್ತು ಸರ್ಕಾರಿ ಹುದ್ದೆಗಳನ್ನು ನೀಡುವ ಮೂಲಕ ಆಧುನಿಕ ಶಿಕ್ಷಣ ಹಾಗೂ ಅದರ ಫಲಗಳಿಂದಾದ ಅಸಮತೋಲನವನ್ನು ಸರಿಪಡಿಸಲು ಪ್ರಯತ್ನಿಸಿದುದು. ಪ್ರಾಚೀನ ಕಾಲದಿಂದ ಶಿಕ್ಷಣದಿಂದ ವಂಚಿತವಾಗಿದ್ದ ಬಹುಸಂಖ್ಯಾತ ಬ್ರಾಹ್ಮಣೇತರ ವರ್ಗವು ಆನಂತರ ಬಂದ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆಯಲು ಹಿಂದುಳಿದು, ಅವಕಾಶಗಳಿಂದ ವಂಚಿತವಾದಾಗ ಅವರಿಗೆ ಸಾಮಾಜಿಕ ನ್ಯಾಯ ಒದಗಿಸಲು ಮುಂದಾದುದು ಮಹತ್ತರ ಕಾಳಜಿಯೆನಿಸುತ್ತದೆ. ಜಾಗೃತರಾಗಿ, ಸಂಘಟಿತರಾದ ಬ್ರಾಹ್ಮಣೆತರ ಜಾತಿಗಳು ತಮ್ಮ ಹಕ್ಕು ಬಾಧ್ಯತೆಗಳಿಗಾಗಿ, ಸೌಲಭ್ಯಗಳಿಗಾಗಿ ಬೇಡಿಕೆ ಸಲ್ಲಿಸಿದಾಗ ಸಹಾನುಭೂತಿಯಿಂದ ಪರಿಶೀಲಿಸಿದ ನಾಲ್ವಡಿಯವರು "ಪ್ರಗತಿಯಲ್ಲಿ ಹಿಂದೆ ಬಿದ್ದಿರುವ ಎಲ್ಲಾ ಜಾತಿ ವರ್ಗಗಳನ್ನು ಈ ಪ್ರಗತಿಯ ಓಟದಲ್ಲಿ ಉತ್ತೇಜನ ನೀಡುವುದನ್ನು ಮುಂದಿನ ದಿನಗಳಲ್ಲಿ ಹಿಂದೆಂದಿಗಿಂತಲೂ ಹೆಚ್ಚಾಗಿ ನೀಡುವ ನೀತಿಯನ್ನು ಜಾರಿಗೊಳಿಸುತ್ತೇವೆ" ಎಂದು ಘೋಷಿಸುವ ಮೂಲಕ ಸಮಾನತೆಯಾಧರಿತ ಆಧುನಿಕ ಕಲ್ಯಾಣ ರಾಜ್ಯವನ್ನು ಸ್ಥಾಪಿಸಲು ಮುಂದಾದರು. ಪ್ರತಿಗ್ರಾಮದಲ್ಲೂ ಶಾಲೆ, ಗ್ರಾಮೀಣ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮತ್ತು ಫೀ ರಿಯಾಯ್ತಿ ನೀಡುವ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ ಕೇಂದ್ರೀಕೃತಗೊಂಡಿದ್ದ ಬ್ರಾಹ್ಮಣೇತರರಿಗೆ ಶಿಕ್ಷಣದ ಅವಕಾಶವನ್ನೊದಗಿಸಿದರು. ಹೀಗೆ ಶಿಕ್ಷಣ ಪಡೆದ ಬ್ರಾಹ್ಮಣೇತರರು ಸರ್ಕಾರಿ ಹುದ್ದೆಗಳನ್ನು ಗಳಿಸಲು ಬ್ರಾಹ್ಮಣರೊಂದಿಗೆ ಪೈಪೋಟಿಗಿಳಿದಾಗ ನಾಲ್ವಡಿಯವರ ಸರ್ಕಾರ ಬ್ರಾಹ್ಮಣೇತರರಿಗೆ ಮೀಸಲಾತಿಯ ಮೂಲಕ ಸರ್ಕಾರಿ ಹುದ್ದೆಗಳನ್ನು ನೀಡಿ ಬ್ರಾಹ್ಮಣ-ಬ್ರಾಹ್ಮಣೇತರರ ನಡುವೆ ನಡೆಯಬಹುದಾಗಿದ್ದ ಸಾಮಾಜಿಕ ಸಂಘರ್ಷವನ್ನು ತಪ್ಪಿಸಿ ಸಾಮಾಜಿಕ ಪರಿವರ್ತನೆಗೆ ದಾರಿಮಾಡಿಕೊಟ್ಟರು.

ಆರನೆಯದಾಗಿ ಶಿಕ್ಷಣ ಪಡೆಯುವುದನ್ನು ಸಮಾಜವು ಅಪರಾಧವೆಂದೇ ಕಾಣುತ್ತಿದ್ದ ಪಂಚಮರಿಗೆ ಅಥವಾ ಅಸ್ಪೃಶ್ಯರಿಗೂ ಶಿಕ್ಷಣ ಮತ್ತು ಸರ್ಕಾರಿ ಸೇವೆಯಲ್ಲಿ ಪ್ರಾತಿನಿಧ್ಯ ನೀಡಿದ್ದು ಸಾಮಾಜಿಕ ನ್ಯಾಯದ ಬಹುದೊಡ್ಡ ಹೆಜ್ಜೆಯೆಂದೇಳಬಹುದು. ಕ್ರೈಸ್ತ ಮಿಷನರಿಗಳು ಆರಂಭಿಸಿದ ಪಂಚಮರ ಶಿಕ್ಷಣವನ್ನು ಮೈಸೂರು ಸರ್ಕಾರ ಯಶಸ್ವಿಯಾಗಿ ಮುಂದುವರಿಸಿಕೊಂಡು ಹೋಯಿತು. ಪಂಚಮ ಶಾಲೆಗಳೆಂಬ ಪ್ರತ್ಯೇಕ ಶಾಲೆಗಳನ್ನು ಸ್ಥಾಪಿಸಿ, ಫೀ ರಿಯಾಯ್ತಿ, ವಿದ್ಯಾರ್ಥಿ

ವೇತನ, ಬೋರ್ಡಿಂಗ್ ಶಾಲೆಗಳನ್ನು ಸ್ಥಾಪಿಸುವ, ಪಂಚಮ ವಿದ್ಯಾರ್ಥಿಗಳ ಪೋಷಕರಿಗೆ ಭತ್ಯೆ ನೀಡುವ ಮೂಲಕ ಪಂಚಮರ ಶಿಕ್ಷಣದ ಬೆಳವಣಿಗೆಗೆ ಕ್ರಮ ಕೈಗೊಳ್ಳಲಾಯಿತು. ಸರ್ಕಾರಿ ಶಾಲೆಗಳಿಗೆ ಪಂಚಮ ವಿದ್ಯಾರ್ಥಿಗಳ ಪ್ರವೇಶವನ್ನು ಸವರ್ಣಿಯರು ವಿರೋಧಿಸಿದಾಗ 1919ರಲ್ಲಿ, "ಜಾತಿಯನ್ನಾಧರಿಸಿ ಯಾರನ್ನೂ ಸರ್ಕಾರಿ ನೆರವಿನಿಂದ ನಡೆಯುವ ಶಾಲೆಗಳಿಂದ ಹೊರಗಿಡುವಂತಿಲ್ಲವೆಂದು" ಹೊರಡಿಸಿದ ಆಜ್ಞೆ ಆ ಕಾಲಕ್ಕೆ ಕ್ರಾಂತಿಕಾರಕವಾದದ್ದೆ. ಆಜ್ಞೆಯನ್ನು ಜನತೆ ವಿರೋಧಿಸಿದಾಗಲೂ ನಾಲ್ವಡಿಯವರು "ಬಂಡೆಯಂತೆ ಸ್ಥಿರವಾಗಿ ನಿಂತು" ಪಂಚಮರನ್ನು ಶಾಲೆಗೆ ಸೇರಿಸದ ಶಾಲೆಗಳ ಅನುದಾನವನ್ನು ರದ್ದುಗೊಳಿಸುವುದಾಗಿ ಬೆದರಿಸಿದ್ದು ಅವರ ಸಾಮಾಜಿಕ ನ್ಯಾಯದ ಬಗೆಗಿನ ಬದ್ಧತೆಯನ್ನು ರುಜುವಾತು ಪಡಿಸುವಂತಹದು. ಹೀಗೆ ನಾಲ್ವಡಿ ಮತ್ತು ಅವರ ಸರ್ಕಾರದ ಬದ್ಧತೆಯಿಂದಾಗಿ ಪಂಚಮರ ಮೇಲಿದ್ದ ಅಸ್ಪೃಶ್ಯತೆಯ ತೀವ್ರತೆ ತಗ್ಗಿತು. ಪಂಚಮ ಮತ್ತು ಸವರ್ಣೀಯ ವಿದ್ಯಾರ್ಥಿಗಳು ಒಂದೇ ಶಾಲೆಯಲ್ಲಿ ಜೊತೆಜೊತೆಯಾಗಿ ಓದುವಂತಾಯ್ತಿತು. ಅದು ನಂತರದ ಹಂತದಲ್ಲಿ ಮೇಲ್ಜಾತಿಯವರು ಪಂಚಮ ಶಾಲೆಗಳಿಗೂ ತಮ್ಮ ಮಕ್ಕಳನ್ನು ಸೇರಿಸುವಂತಾಯಿತು. ಅಂತಿಮವಾಗಿ ನಾಲ್ವಡಿಯವರು ಮಾನವನನ್ನು ಬೌದ್ಧಿಕ, ದೈಹಿಕ ಹಾಗೂ ನೈತಿಕವಾಗಿ ಸದೃಢಗೊಳಿಸುವಂತಹ ಪರಿಪೂರ್ಣ ಶಿಕ್ಷಣವನ್ನು ನೀಡುವ ಮೂಲಕ ಸ್ವಾಸ್ಥ್ಯ ಸಮಾಜವನ್ನು ನಿರ್ಮಿಸಬೇಕೆಂದು ಆಲೋಚಿಸಿದ್ದುದು. ಅವರ ಅಭಿಪ್ರಾಯದಲ್ಲಿ ಪರಿಪೂರ್ಣ ಶಿಕ್ಷಣವೆಂದರೆ ಪ್ರಾಯೋಗಿಕ ಮತ್ತು ಪ್ರಾಯೋಗಿಕವಲ್ಲದ ಉಪಯುಕ್ತ ಶಿಕ್ಷಣ ಇವೆರಡರ ನಡುವಣ ಹೊಂದಾಣಿಕೆ ಇರುವ ಶಿಕ್ಷಣವಾಗಿತ್ತು. ಹೊಸ ಆವಿಷ್ಕಾರಗಳನ್ನು ಪಠ್ಯಕ್ರಮದಲ್ಲಿ ಸೇರಿಸುತ್ತಾ ವರ್ತಮಾನದ ಅವಶ್ಯಕತೆಗಳನ್ನು ಈಡೇರಿಸುವಂತೆ ಸಿದ್ಧಗೊಳಿಸಬೇಕಿತ್ತು. ನಾಲ್ವಡಿಯವರು ಆಧುನಿಕತೆಯ ಪ್ರತಿಪಾದಕರಾಗಿದ್ದರೂ ಸಹ ದೇಶೀಯ ಸಂಸ್ಕೃತಿಯ ಮುಖ್ಯಾಂಶಗಳಿಗೆ ಧಕ್ಕೆ ಬಾರದಂತೆ ಎಚ್ಚರದಿಂದಿರಬೇಕೆಂದೂ ಹೇಳುತ್ತಿದ್ದರು. ನಾಲ್ವಡಿಯವರು ತಮ್ಮ ಭಾಷಣಗಳಲ್ಲಿ ಶಾರೀರಿಕ ಶಿಕ್ಷಣದ ಪ್ರಾಮುಖ್ಯತೆಯನ್ನು ಪ್ರತಿಪಾದಿಸಿದ್ದರಲ್ಲದೆ ಶಾಲೆಗಳಲ್ಲಿ ಶಾರೀರಕ ಶಿಕ್ಷಣವನ್ನು ಕಡ್ಡಾಯಗೊಳಿಸಿದರು. ಮಕ್ಕಳು ಮತ್ತು ಯುವಕರಲ್ಲಿ ನೈತಿಕತೆಯನ್ನು ವೃದ್ಧಿಸಲು ಜಗದ್ವಿಕಾಸವಾದದ ಅಂತಿಮ ಗುರಿಯಾದ ಜವಾಬ್ದಾರಿಯುತ ಪ್ರಜೆಗಳ ವ್ಯಕ್ತಿತ್ವ ರೂಪಿಕೆ ಮತ್ತು ಸಾಮಾಜಿಕ ಹಾಗೂ ರಾಜಕೀಯ ಪ್ರಜ್ಞೆಯುಳ್ಳ ಸದಸ್ಯರನ್ನು ರೂಪಿಸಲು ಬಾಲಚಮು (ಸ್ಕೌಟ್) ವ್ಯವಸ್ಥೆಯನ್ನು ಮೈಸೂರು ರಾಜ್ಯದಲ್ಲಿ ಪ್ರಸಿದ್ಧಿಗೊಳಿಸಿದರು. ಆ ಮೂಲಕ ಬೇಧಭಾವದಿಂದ ಮುಕ್ತರಾದ, ನಿಸ್ಪೃಹ ಸೇವಾ ಮನೋಭಾವದ ಭಾವೀ ಪೀಳಿಗೆಯೊಂದನ್ನು ಕಟ್ಟಲು, ಸ್ವಾಸ್ಥ್ಯ ಸಮಾಜವನ್ನು ರೂಪಿಸುವ ಆಕಾಂಕ್ಷೆ ಹೊಂದಿದ್ದರು. ಹೀಗೆ ಶಿಕ್ಷಣದ ಮೂಲಕ ಸಾಮಾಜಿಕ ಪರಿವರ್ತನೆ ಮತ್ತು ಬೆಳವಣಿಗೆಯನ್ನು ತರಲು ಪ್ರಯತ್ನಿಸಿದರು. ನಾಲ್ವಡಿಯವರು ಶಾಸನ ಎಂಬ ಮಾಧ್ಯಮವನ್ನು ಬಳಸಿಕೊಂಡು ಹೇಗೆ ಮೈಸೂರಿನ ಸಮಾಜವನ್ನು ಸುಧಾರಿಸಲು ಪ್ರಯತ್ನಿಸಿದರು ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ಸಮೀಕ್ಷಿಸಲಾಗಿದೆ.

# ಅಧ್ಯಾಯ - 5

## *ನಾಲ್ವಡಿ ಕೃಷ್ಣ ರಾಜ ಒಡೆಯರ್ ಮತ್ತು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಶಾಸನ*

ಆಧುನಿಕ ಕಾಲದಲ್ಲಿ ರಾಜ್ಯ ಎಂಬ ಸಂಸ್ಥೆಯು ಬದಲಾದ ಕಾಲಕ್ಕೆ ತಕ್ಕಂತೆ ಅವಶ್ಯಕ ಸುಧಾರಣೆ ಮತ್ತು ಬದಲಾವಣೆಗಳನ್ನು ತರಲು ಶಾಸನ ಎಂಬ ಅಸ್ತ್ರವನ್ನು ಬಳಸುತ್ತದೆ. ಶಾಸನಗಳನ್ನು ಪಾಲಿಸುವುದು ಸಮಾಜದ ಕರ್ತವ್ಯವಾಗಿರುತ್ತದೆ. ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಶಾಸನಗಳು ಸಮಾಜವನ್ನು ಹಿಡಿದಿಟ್ಟು ಯಥಾಸ್ಥಿತಿಯನ್ನು ಮುಂದುವರಿಸಿಕೊಂಡು ಹೋಗುವ ಉದ್ದೇಶಕ್ಕಾಗಿಯೇ ಬಳಸಲ್ಪಡುತ್ತಿದ್ದವು. ಆದರೆ ಆಧುನಿಕ ಕಾಲದಲ್ಲಿ ಶಾಸನಗಳನ್ನು ಸಾಂಪ್ರದಾಯಿಕ ಉದ್ದೇಶದ ಜೊತೆಗೆ ಸಾಮಾಜಿಕ ಬೆಳವಣಿಗೆ, ಬೆಳವಣಿಗೆಯಲ್ಲಾಗುವ ಏರುಪೇರುಗಳನ್ನು ಸರಿಪಡಿಸಲು, ಬದಲಾವಣೆಗಳನ್ನು ಸ್ಥಿರೀಕರಿಸಿ ಶಾಸನಬದ್ಧಗೊಳಿಸಿ ಸಮಾಜದ ಸಿಂಧುತ್ವವನ್ನು ಅನುಮೋದಿಸಲು ಮುಂತಾದ ಉದ್ದೇಶಗಳಿಗಾಗಿಯೂ ಬಳಸಲಾಗುತ್ತದೆ. ಒಟ್ಟಾರೆ ಬದಲಾವಣೆಯ ಪ್ರಕ್ರಿಯೆಗಳನ್ನು ಬಲವಂತವಾಗಿಯಾದರೂ ಅನುಷ್ಠಾನಕ್ಕೆ ತರುವುದು ಶಾಸನಗಳ ಜಾರಿಯ ಉದ್ದೇಶ.

ಆಧುನಿಕ ಕಾಲದಲ್ಲಿ ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಶಾಸನಗಳು ವಹಿಸಿದ ಪಾತ್ರವನ್ನು ವಿವೇಚಿಸುವ ಮೊದಲು ಆಧುನಿಕಪೂರ್ವ ಕಾಲದ ಆಡಳಿತಕ್ರಮದಲ್ಲಿ ಶಾಸನಗಳ ಪಾತ್ರವನ್ನು ಕುರಿತ ಐತಿಹಾಸಿಕ ಹಿನ್ನೆಲೆ ತಿಳಿದುಕೊಳ್ಳುವುದು ಅವಶ್ಯಕ. ಆಧುನಿಕ ಪೂರ್ವ ಕಾಲದಲ್ಲಿ ಉಂಟಾಗುತ್ತಿದ್ದ ರಾಜಕೀಯ ಅಸ್ಥಿರತೆ, ಕಚ್ಚಾಟಗಳು ಮತ್ತು ಬದಲಾವಣೆಗಳಿಗನುಗುಣವಾಗಿ ಜನಜೀವನ ಬದಲಾಗುತ್ತಿರಲಿಲ್ಲ. ಹೊಸ ರಾಜ ಅಥವಾ ವಂಶ ಅಧಿಕಾರಕ್ಕೆ ಬರಲಿ ಅಥವಾ ಪದಚ್ಯುತವಾಗಲಿ ಜನಜೀವನ ನಿರಂತರವಾಗಿ ಮುಂದುವರಿಯುತ್ತಿತ್ತು. ಹೊಸ ರಾಜವಂಶವೊಂದು ಅಧಿಕಾರಕ್ಕೆ ಬಂದೊಡನೆ ಹಿಂದಿನದೆಲ್ಲವನ್ನು ನಿರ್ನಾಮಗೊಳಿಸಿ ಹೊಸ ಸಮಾಜವನ್ನು ರೂಪಿಸುವಂತಿರಲಿಲ್ಲ. ಆದರೆ ಆಯಾಕಾಲದ ಅವಶ್ಯಕತೆಗಳಿಗನುಗುಣವಾಗಿ ಅಥವಾ ರಾಜರುಗಳ ವ್ಯಕ್ತಿವೈಶಿಷ್ಟ್ಯತೆಗೆ ತಕ್ಕಂತೆ ಅವು ಸ್ವಲ್ಪಮಟ್ಟಿನ ಬದಲಾವಣೆಯೊಡನೆ ವ್ಯಕ್ತಗೊಳ್ಳುತ್ತಿದ್ದವು. ಆದರೆ ರಾಜ್ಯತ್ವದ ಮೂಲಗುರಿ "ದುಷ್ಟಶಿಕ್ಷಣ, ಶಿಷ್ಟ ರಕ್ಷಣ"ವೇ ಆಗಿದ್ದು ಸಮಾಜವನ್ನು ಸುವ್ಯವಸ್ಥಿತವಾಗಿ ಮುನ್ನಡೆಸಿಕೊಂಡು ಹೋಗುವುದೇ ಆಗಿತ್ತು. ರಾಜತ್ವದ ಆದರ್ಶಗಳು ಮತ್ತು ಸಮಾಜದ ಸುವ್ಯವಸ್ಥೆಯ ಸ್ವರೂಪವನ್ನು ನಿರ್ಣಯಿಸಿ ನಿರೂಪಿಸುತ್ತಿದ್ದ ಗ್ರಂಥಗಳೆಂದರೆ ವೇದಗಳು, ಧರ್ಮಸೂತ್ರಗ್ರಂಥಗಳು, ಸ್ಮೃತಿಗ್ರಂಥಗಳಾದ ಮನುಸ್ಮೃತಿ, ಪರಾಶರಸ್ಮೃತಿ, ನಾರದಸ್ಮೃತಿ, ವಿಜ್ಞಾನೇಶ್ವರನ ಮಿತಾಕ್ಷರ ಮುಂತಾದವು. ಈ

ಗ್ರಂಥಗಳಲ್ಲಿ ಉಕ್ತವಾದ ನಿಯಮಗಳೇ ಕಾನೂನುಗಳಾಗಿದ್ದವು. ರಾಜ ಬಹುಮಟ್ಟಿಗೆ ಅವುಗಳನ್ನು ಕಾರ್ಯಗತಗೊಳಿಸುವವನಾಗಿದ್ದನೇ ಹೊರತು ತಾನೇ ಕಾನೂನುಗಳನ್ನು ಸೃಷ್ಟಿಸುವವನಾಗಿರಲಿಲ್ಲ[621]. ರಾಜ್ಯದ ಆಡಳಿತ ಕ್ರಮದಿಂದ ಹಿಡಿದು ಸಾಮಾಜಿಕ, ಧಾರ್ಮಿಕ ಸ್ವರೂಪ, ಶಿಕ್ಷಣ, ಸಾಹಿತ್ಯ, ಸಾಂಸ್ಕೃತಿಕ ಸ್ವರೂಪಗಳು ಈ ಗ್ರಂಥಗಳು ಪ್ರಮಾಣೀಕರಿಸಿದ ವಿಧಾನದಲ್ಲೇ ಮುಂದುವರಿಯುತ್ತಿದ್ದವು. ಪರಂಪರೆಯಿಂದ ಬಂದ ರೂಢಮೂಲವಾದ ಆಚರಣೆಗಳೂ ಕಾನೂನುಗಳಾಗಿ ಸಮಾಜವನ್ನು ಆಳುತ್ತಿದ್ದವು. ಪೂರ್ವ ಸಂಪ್ರದಾಯಗಳನ್ನು ಮೀರುವ ಮತ್ತು ಧರ್ಮ ಜಾತಿ ಮತಗಳ ಸಹಬಾಳ್ವೆಯ ನಿಯಮಗಳನ್ನು ಮೀರಿ ನಡೆಯುವವರನ್ನು ರಾಜ ತನ್ನ ದಂಡಾಧಿಕಾರ ಬಳಸಿ ಶಿಕ್ಷಿಸುತ್ತಿದ್ದನು. ನ್ಯಾಯ ತೀರ್ಮಾನದಲ್ಲಿ ರಾಜನೇ ಸರ್ವೋಚ್ಚ ನ್ಯಾಯಾಧಿಕಾರಿಯಾಗಿದ್ದ. ಆದರೆ ಈ ಅಧಿಕಾರವು ಹಲವಾರು ಸಂಘ ಸಂಸ್ಥೆಗಳಲ್ಲೂ ಹಂಚಿ ಹೋಗಿತ್ತು. ಒಂದೊಂದು ಜಾತಿ, ಕುಲ ಅಥವಾ ಪಂಗಡಗಳು ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡಿದ್ದು ಅದರ ಪ್ರತಿನಿಧಿಗಳು ಒಂದೆಡೆ ಸಭೆ ಸೇರಿ ತಮ್ಮ ಸಾಮಾಜಿಕ ಸಮಸ್ಯೆಗಳನ್ನಾಗಲಿ ಅಥವಾ ವ್ಯಾಜ್ಯಗಳನ್ನಾಗಲಿ ತೀರ್ಮಾನಿಸಿ ಕೊಳ್ಳುತ್ತಿದ್ದವು. ಇಂತಹ ಸಭೆಗಳು ಕೈಗೊಂಡ ನಿರ್ಣಯಗಳೇ ನಿಯಮಗಳಾಗಿ, ನಿರ್ಬಂಧಗಳಾಗಿ ರೂಪುಗೊಂಡು ಪ್ರಭುತ್ವದ ಮಾನ್ಯತೆಯನ್ನು ಪಡೆಯುತ್ತಿದ್ದವು. ಈ ನಿಯಮಗಳನ್ನು ಮೀರುವವರನ್ನು ಶಿಕ್ಷಿಸುವ ಅಧಿಕಾರ ಸಾಮಾಜಿಕರಿಗೆ ದೊರಕುತ್ತಿತ್ತು[622]. ಹಾಗೆಯೇ ಪ್ರಾದೇಶಿಕವಾಗಿ ಗ್ರಾಮಸಭೆ, ನಾಡಸಭೆ ಹಾಗೂ ಪಟ್ಟಣಸಭೆಗಳಿದ್ದು ತಮ್ಮ ವ್ಯಾಪ್ತಿಗೆ ಸಂಬಂಧಿಸಿದ ಧಾರ್ಮಿಕ, ಸಾಮಾಜಿಕ, ಆಡಳಿತಾತ್ಮಕ, ಆರ್ಥಿಕ ಮೊದಲಾದ ಎಲ್ಲಾ ವ್ಯವಹಾರಗಳನ್ನು ನಿರ್ಧರಿಸುತ್ತಿದ್ದವು[623]. ವೃತ್ತಿ ಆಧಾರದ ಮೇಲೆ ಗ್ರಾಮ ಮತ್ತು ಪಟ್ಟಣಗಳಲ್ಲಿ ನೇಕಾರ, ಕಮ್ಮಾರ, ಕುಂಬಾರ, ತೈಲಿಗ, ಒಕ್ಕಲಿಗ, ವರ್ತಕ ಮೊದಲಾದ ಉದ್ಯೋಗಸ್ಥರ ಸ್ವತಂತ್ರ ಪ್ರಾತಿನಿಧಿಕ ಸಂಘಗಳು ಅಥವಾ ಶ್ರೇಣಿಗಳು ಸ್ಥಾಪನೆಗೊಂಡಿದ್ದವು. ಈ ಶ್ರೇಣಿಗಳು ತಮ್ಮವೇ ಆದ ಪ್ರತ್ಯೇಕ ನಿಯಮಗಳನ್ನು ಹೊಂದಿದ್ದು ಸದಸ್ಯರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದವು[624]. ಹಾಗೆಯೇ ದೇವಾಲಯಗಳು ಮತ್ತು ಮಠಗಳು ಜನರ ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ವಿಶಿಷ್ಟವಾದ ಗೌರವದ ಸ್ಥಾನವನ್ನು ಪಡೆದಿದ್ದವು. ದೇವಾಲಯಗಳು ಧಾರ್ಮಿಕ ಕೇಂದ್ರವಲ್ಲದೆ ಶಿಕ್ಷಣ, ನ್ಯಾಯಸ್ಥಾನದ ಕೇಂದ್ರವೂ ಆಗಿದ್ದವು. ಪ್ರತಿಯೊಂದು ಕುಟುಂಬವೂ

---

621. *ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಮೈಸೂರು, 2001, ಆರನೆಯ ಮುದ್ರಣ, ಪು. 186*

622. *ಸಾಲೆತ್ತೂರೆ ಬಿ.ಎ., ದೇಸಾಯಿ ಪಾಂಡುರಂಗರಾಯರು., ಕನ್ನಡ ನಾಡಿನ ಚರಿತ್ರೆ, ಭಾಗ-1, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2003, ಪು. 92-94*

623. *ಆಲ್ತೇಕರ್ ಎ.ಎಸ್., ರಾಷ್ಟ್ರಕೂಟಾಸ್ ಅಂಡ್ ದೇರ್ ಟೈಮ್ಸ್, ಓರಿಯಂಟಲ್ ಬುಕ್ ಏಜೆನ್ಸಿ, ಪೂನಾ, 1967 ಪು. 207-209*

624. *ಷೇಕ್‌ಅಲಿ ಬಿ., ಕರ್ನಾಟಕ ಚರಿತ್ರೆ, ಸಂಪುಟ-III, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪು. 222*

*- ರೈಸ್ ಬಿ.ಎಲ್., ಮೈಸೂರ್ ಅಂಡ್ ಕೂರ್ಗ್ ಫ್ರಮ್ ಇನ್‌ಸ್ಕ್ರಿಪ್ಷನ್ಸ್, ಸಂಪುಟ-II, ಲಂಡನ್, 1897 ಪುಟ 181*

ಬೌದ್ಧ, ಜೈನ, ಶೈವ, ವೈಷ್ಣವ, ಶಾಂಕರ ಮುಂತಾದ ಯಾವುದಾದರೊಂದು ಮಠಪೀಠದ ಗುರುತ್ವಕ್ಕೆ ಒಳಪಟ್ಟಿದ್ದವು. ಈ ಮಠಗಳು ತಮ್ಮ ಮಠದ ಅನುಯಾಯಿಗಳ ಕೌಟುಂಬಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ತೀರ್ಮಾನಿಸುವ ಹಾಗೂ ಶಿಕ್ಷಾಧಿಕಾರವನ್ನು ಹೊಂದಿದ್ದವು[625].

ಆಧುನಿಕ ಪೂರ್ವ ಕಾಲದಲ್ಲಿ ಶಾಸನಗಳನ್ನು ರೂಪಿಸುವಲ್ಲಿ ರಾಜ್ಯ ಮತ್ತು ರಾಜನ ಅಧಿಕಾರ ಸೀಮಿತವಾಗಿತ್ತು. ಭಾಷ್ಯಕಾರರು ಮತ್ತು ಸಂಹಿತೆ ಸಂಗ್ರಹಕರು ರಾಜ-ಶಾಸನಗಳೆಂದು ಹೆಸರಿಸುವರಾದರೂ ಅವು ಶಾಸನಗಳಾಗಿರದೆ ವೈಯಕ್ತಿಕ ಕ್ರಮಗಳು ಮತ್ತು ಸಾಂದರ್ಭಿಕವಾಗಿ ರಾಜ ಹೊರಡಿಸಿದ ಆಜ್ಞೆಗಳೇ ಆಗಿವೆ. ರಾಜನು ಸಾಂಪ್ರದಾಯಿಕ ನಿಯಮಗಳನ್ನು ಮುಟ್ಟುವಂತಿರಲಿಲ್ಲ. ಸಾರ್ವಜನಿಕ ನೈತಿಕತೆಯಲ್ಲಿ ರಾಜನು ಸುಧಾರಣೆ ತರಬಹುದೆಂಬ ಬಗ್ಗೆ ಸ್ಮೃತಿಗ್ರಂಥಗಳು ಚಿಂತಿಸಿರಲಿಲ್ಲ. ಒಟ್ಟಾರೆ ರಾಜನಿಗೆ ಶಾಸನಾಧಿಕಾರವನ್ನು ನಿರಾಕರಿಸಲಾಗಿತ್ತು. ಆಕಸ್ಮಾತ್ ರಾಜನು ಬಲವಂತವಾಗಿ ತನ್ನ ಶಾಸನವನ್ನು ಜಾರಿಗೊಳಿಸಿದ್ದರೆ ಅವನ ಶಕ್ತಿ ಕುಂದಿದ ತಕ್ಷಣ ಆ ಶಾಸನ ಕೊನೆಗೊಳ್ಳುತ್ತಿತ್ತು. ನಾರದಸ್ಮೃತಿ ತಿಳಿಸುವಂತೆ ರಾಜನೊಬ್ಬನು ಅಕಾರಣವಾಗಿ, ಬಲವಂತವಾಗಿ ಜಾರಿಗೆ ತಂದ ಶಾಸನವನ್ನು ಹಿಂತೆಗೆದುಕೊಳ್ಳುವುದು ನಂತರ ಬಂದ ರಾಜನೊಬ್ಬನ ಕರ್ತವ್ಯವೆಂದು ಪ್ರತಿಪಾದಿಸುತ್ತದೆ[626].

ಆಧುನಿಕ ಪೂರ್ವ ಕಾಲದಲ್ಲಿ ಧರ್ಮಶಾಸ್ತ್ರಗಳು ಶ್ರೇಣಿಗಳು ಮತ್ತು ಸಂಘಗಳಂತಹ ಸಾಮಾಜಿಕ ಸಂಘಗಳಿಗೆ ವಿಶಾಲವಾದ ಸ್ವಾತಂತ್ರ್ಯ ನೀಡಿದ್ದವು[627]. ಆದರೆ ಧಾರ್ಮಿಕ, ಸಂಘಗಳು ಪೂರ್ವ ಸಂಪ್ರದಾಯವನ್ನು ಮೀರಿ ನಡೆದಾಗ ಉಂಟಾಗುತ್ತಿದ್ದ ಪ್ರಕ್ಷುಬ್ಧ ಪರಿಸ್ಥಿತಿಯನ್ನು ಹೋಗಲಾಡಿಸಲು ರಾಜ ಮಧ್ಯೆ ಪ್ರವೇಶಿಸುತ್ತಿದ್ದ ಹಾಗೂ ವಿವಾದವನ್ನು ಬಗೆಹರಿಸುತ್ತಿದ್ದ. ಅದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ ಕ್ರಿ. ಶ. 1368ರ ಬುಕ್ಕರಾಯನ ಶ್ರವಣಬೆಳಗೊಳ ಶಾಸನದಲ್ಲಿ ಉಕ್ತವಾಗಿರುವ ಜೈನ ಮತ್ತು ಶ್ರೀವೈಷ್ಣವರ ನಡುವಣ ಕಲಹ. ಒಮ್ಮೆ ಜೈನರಿಗೂ ಶ್ರೀವೈಷ್ಣವರಿಗೂ ವೈಷಮ್ಯ ಉಂಟಾಗಿ ಜೈನರು ಬುಕ್ಕರಾಯನ ಬಳಿ ದೂರುಕೊಟ್ಟರು. ಆಗ ಬುಕ್ಕರಾಯನು ಹದಿನೆಂಟು ನಾಡುಗಳ ಶ್ರೀವೈಷ್ಣವರನ್ನು, ಶ್ರೀರಂಗಂ, ತಿರುಪತಿ, ಕಂಚಿ ಮತ್ತು ಮೇಲುಕೋಟೆಗಳ ಆಚಾರ್ಯರನ್ನು ಕರೆಸಿ ಶ್ರೀವೈಷ್ಣವರ ಕೈಯನ್ನು ಜೈನರ ಕೈಲಿರಿಸಿ ವೈಷ್ಣವ ಮತ್ತು ಜೈನ ಧರ್ಮಗಳು ಒಂದೇ, ಬೇಧವಿಲ್ಲವೆಂದು ಒಪ್ಪಂದ ಮಾಡಿಸಿದನು[628]. ಆ ಮೂಲಕ ಸಕಲ ಧರ್ಮಗಳಿಗೂ ರಕ್ಷಣೆ ನೀಡುವುದು ರಾಜಧರ್ಮವೆಂದು ಸಾಬೀತು ಪಡಿಸಿದನು.

---

625. *ಸಾಲೆತ್ತೂರ ಬಿ.ಎ. ಮತ್ತು ದೇಸಾಯಿ ಪಾಂಡುರಂಗರಾಯರು., ಪೂರ್ವೋಕ್ತ, ಪು. 93*

626. *ರಾಬರ್ಟ್ ಲಿಂಗಟ್., ದಿ ಕ್ಲಾಸಿಕಲ್ ಲಾ ಆಫ್ ಇಂಡಿಯಾ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, 1999, ಪು. 225-231*

627. *ಅದೇ., ಪು. 227*

628. *ಎಪಿಗ್ರಾಫಿಯ ಕರ್ನಾಟಿಕ, ಸಂಪುಟ-II, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು,1973, ಪು. 285-286*

ಮೇಲ್ಕಂಡಂತೆ ಆಧುನಿಕ ಪೂರ್ವ ಕಾಲದಲ್ಲಿ ರಾಜ ಅಥವಾ ರಾಜ್ಯ ಪೂರ್ವ ಸಂಪ್ರದಾಯವನ್ನು ಮೀರಿದಾಗ ಮಾತ್ರ ಮಧ್ಯೆ ಪ್ರವೇಶಿಸಿ ಯಥಾಸ್ಥಿತಿಯನ್ನು ಮುಂದುವರಿಯುವಂತೆ ಮಾಡುತ್ತಿತ್ತು. ಸಾಮಾಜಿಕ ಪರಿವರ್ತನೆಯಲ್ಲಿ ರಾಜ ಅಥವಾ ಅವನ ಶಾಸನಾಧಿಕಾರವು ಯಾವುದೇ ಗುರುತರವಾದ ಪಾತ್ರವನ್ನು ವಹಿಸುತ್ತಿರಲಿಲ್ಲವೆಂದು ಹೇಳಬಹುದು. ಆದರೆ ಧರ್ಮಶಾಸ್ತ್ರಗಳಿಂದಲೇ ಸ್ವತಂತ್ರ ಮಾನ್ಯತೆ ಪಡೆದಿದ್ದ ಸಾಮಾಜಿಕ, ಧಾರ್ಮಿಕ, ಸಂಘ, ಸಂಸ್ಥೆಗಳು ಸಮಾಜದಲ್ಲಿ ಬೇರೂರಿದ ಹಾನಿಕರವಾದ ರೂಢಿ ಸಂಪ್ರದಾಯಗಳನ್ನು ಮಾರ್ಪಾಡುಗೊಳಿಸುವ ಅಥವಾ ನಿರ್ಬಂಧಗೊಳಿಸುವ ಮೂಲಕ ಸಾಮಾಜಿಕ ಪರಿವರ್ತನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದನ್ನು ಕೆಳಕಂಡ ಉದಾಹರಣೆಯ ಮೂಲಕ ತಿಳಿಯಬಹುದು. ವಿಜಯನಗರ ಸಾಮ್ರಾಜ್ಯದಲ್ಲಿ 15ನೇ ಶತಮಾನದ ವೇಳೆಗೆ ವಿವಾಹ ವ್ಯವಸ್ಥೆಯಲ್ಲಿ ಕನ್ಯಾಶುಲ್ಕ ಪದ್ಧತಿಯು ಪ್ರಬಲಗೊಂಡು ಸಮಾಜದಲ್ಲಿ ಹಾಹಾಕಾರವುಂಟಾಯಿತು. ಆ ಸಾಮಾಜಿಕ ಸಮಸ್ಯೆಯನ್ನು ವಿಮರ್ಶಿಸಲು ಪಡವೀಡು ನಾಡಿನ ಕನ್ನಡ, ತಮಿಳು, ತೆಲುಗು ಮತ್ತು ಲಾಟ ಪಂಗಡಗಳ ಎಲ್ಲ ಗೋತ್ರ, ಶಾಖೆ, ಸೂತ್ರದ ಬ್ರಾಹ್ಮಣರು ಒಂದೆಡೆ ಸಭೆ ಸೇರಿದರು. ಸಭೆಯಲ್ಲಿ ಇನ್ನು ಮುಂದೆ ಬ್ರಾಹ್ಮಣ ಸಮಾಜದಲ್ಲಿ ಎಲ್ಲ ವಿವಾಹಗಳು ಸಂಪೂರ್ಣವಾಗಿ ಕನ್ಯಾದಾನ ಪದ್ಧತಿಯಿಂದಲೇ ನಡೆಯಬೇಕೆಂದು ನಿರ್ಧರಿಸಿದರು. ಈ ನಿಯಮವನ್ನು ಉಲ್ಲಂಘಿಸಿ ಕನ್ಯಾಶುಲ್ಕವನ್ನು ಬೆಂಬಲಿಸುವವರು ರಾಜಶಾಸನಕ್ಕೆ ಗುರಿಯಾಗಿ ಜಾತಿಬಾಹಿರರಾಗಬೇಕೆಂದು ಕಟ್ಟಾಜ್ಞೆ ಮಾಡಿತು[629]. ಆ ಮೂಲಕ ಬ್ರಾಹ್ಮಣ ಸಭೆಯು ಸಮಾಜಕ್ಕೆ ಮಾರಕವಾಗಿದ್ದ ಕನ್ಯಾಶುಲ್ಕ ಪದ್ಧತಿಯನ್ನು ನಿರ್ಬಂಧಿಸಿ ಕನ್ಯಾದಾನ ಪದ್ಧತಿ ಆಚರಣೆಗೆ ಬರುವಂತೆ ಮಾಡಿತು. ಇದೊಂದು ಸಾಮಾಜಿಕ ಪರಿವರ್ತನೆ ಅಥವಾ ಬದಲಾವಣಾ ಪ್ರಕ್ರಿಯೆಯಾಗಿದ್ದು ಆ ಪ್ರಕ್ರಿಯೆಗೆ ಚಾಲನೆ ನೀಡಿದ್ದು ಒಂದು ಜಾತಿ ಸಂಘ. ಬ್ರಾಹ್ಮಣ ಸಂಘ ತಾನು ಕೈಗೊಂಡ ನಿರ್ಣಯವನ್ನು ಪ್ರಭುತ್ವದ ಅನುಮೋದನೆಯೊಂದಿಗೆ ಒಂದು ಶಾಸನವನ್ನಾಗಿಸಿತು. ಶಾಸನದ ಮೂಲಕ ಸಂಘವು ತನ್ನ ತೀರ್ಮಾನವನ್ನು ಸಾರ್ವತ್ರಿಕಗೊಳಿಸಿತು. ಧಿಕ್ಕರಿಸುವುದನ್ನು ಶಿಕ್ಷೆ ಮತ್ತು ದಂಡಾಧಿಕಾರದ ಮೂಲಕ ಪ್ರತಿಬಂಧಿಸಿತು. ಜಾತಿ ಸಂಘದ ತೀರ್ಮಾನವು ಮುಂದೆ ಪೂರ್ವ ಮರ್ಯಾದೆಯಾಗಿ ಸಾಮಾಜಿಕ ಮಾನ್ಯತೆ ಗಳಿಸಿತು.

ಮೇಲ್ಕಂಡಂತೆ ಬಹು ಪ್ರಾಚೀನ ಕಾಲದಿಂದ ರೂಪುಗೊಂಡ ನಿಯಮಗಳು, ನಿರ್ಬಂಧಗಳು ಪವಿತ್ರ ಶಾಸನಗಳೆಂದು ಧರ್ಮಶಾಸ್ತ್ರ (ಋಜುಮಾರ್ಗದ ವಿಜ್ಞಾನ) ಗ್ರಂಥಗಳಲ್ಲಿ ಅಡಕಗೊಂಡು ಮುಸ್ಲಿಂ ಆಳ್ವಿಕೆಯ ಕಾಲದಲ್ಲಿ ಸ್ವಲ್ಪಮಟ್ಟಿನ ಮಾರ್ಪಾಡುಗಳೊಂದಿಗೆ ಬ್ರಿಟಿಷರ ಆಳ್ವಿಕೆಯಲ್ಲಿ 'ಹಿಂದೂ ಲಾ' ಎಂಬಡಿಯಲ್ಲಿ ಬಳಸಲ್ಪಟ್ಟವು. ಬ್ರಿಟಿಷರು ಸಾಮಾನ್ಯ ಕಾನೂನು ಮತ್ತು ಧರ್ಮನ್ಯಾಯ ಎಂಬ ಅಂಶಗಳ ಆಧಾರದ ಮೇಲೆ 'ಹಿಂದೂ ಲಾ'ವನ್ನು ವ್ಯವಸ್ಥೆಗೊಳಿಸಿದರು.

---

*629. ಸಾಲೆತ್ತೂರ ಬಿ.ಎ. ಮತ್ತು ದೇಸಾಯಿ ಪಾಂಡುರಂಗರಾಯರು., ಪೂರ್ವೋಕ್ತ, ಪು. 94*

1920ರ ನಂತರ 'ಆಂಗ್ಲೋ-ಹಿಂದೂ ಲಾ' ಎಂಬ ಹೆಸರಲ್ಲಿ ವ್ಯವಸ್ಥೆಗೊಂಡವು. ನ್ಯಾಯಾಲಯಗಳು ಧರ್ಮಶಾಸ್ತ್ರ ಗ್ರಂಥಗಳನ್ನು ಪರಾಮರ್ಶಿಸಿ ನ್ಯಾಯದಾನ ನೀಡುತ್ತಿದ್ದವು. ಬ್ರಿಟಿಷರ ಪ್ರಭುತ್ವದಡಿಯಲ್ಲಿದ್ದ ದೇಶೀಯ ರಾಜ್ಯಗಳು ಭಾರತೀಯ ಅರಸರ ಮೂಲಕ ತಮ್ಮದೇ ಆದ ಪ್ರತ್ಯೇಕ ಶಾಸನಗಳನ್ನು ಧರ್ಮಶಾಸ್ತ್ರಗಳಡಿಯಲ್ಲಿ ರೂಪಿಸಿಕೊಂಡು ಆಡಳಿತ ನಡೆಸುತ್ತಿದ್ದರು. ಅಲ್ಲದೆ ಬ್ರಿಟಿಷರು ವ್ಯವಸ್ಥೆಗೊಳಿಸಿದ್ದ 'ಹಿಂದೂ ಲಾ'ಗಳನ್ನು ಕೆಲ ಮಾರ್ಪಾಡುಗಳೊಂದಿಗೆ ಅಳವಡಿಸಿಕೊಂಡಿದ್ದರು[630].

ಒಟ್ಟಾರೆ ಆಧುನಿಕ ಪೂರ್ವ ಕಾಲದ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ರಾಜ್ಯ ಹಾಗೂ ರಾಜನ ಅಧಿಕಾರವು ಶಾಸನ ರಚನಾ ಕ್ಷೇತ್ರದಲ್ಲಿ ಸೀಮಿತವಾಗಿತ್ತು. ಹಾಗೆಯೇ ಅವರ ಕರ್ತವ್ಯಗಳೂ ಸಹ ದುಷ್ಟ ಶಿಕ್ಷಣ, ಶಿಷ್ಟ ರಕ್ಷಣ ಹಾಗೂ ಪೂರ್ವ ಮರ್ಯಾದೆಯನ್ನು ಮುಂದುವರೆಸಿಕೊಂಡು ಹೋಗುವುದರಲ್ಲಿ ಸೀಮಿತವಾಗಿತ್ತು. ಆದರೆ 18ನೇ ಶತಮಾನದ ನಂತರ ಯೂರೋಪ್‌ನಲ್ಲಿ ಉಂಟಾದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ತಾತ್ವಿಕ, ಸಾಂಸ್ಕೃತಿಕ ಕ್ರಾಂತಿಗಳು ಅಂತಿಮವಾಗಿ ರಾಜ್ಯಾಡಳಿತ ವ್ಯವಸ್ಥೆಯ ಮೇಲೆ ಗಂಭೀರ ಪ್ರಭಾವ ಬೀರಿದವು ಹಾಗೂ ಹಲವಾರು ಮಾರ್ಪಾಡುಗಳನ್ನು ತಂದವು. ಸಾಮಾಜಿಕ, ಧಾರ್ಮಿಕ ಸಂಸ್ಥೆಗಳಲ್ಲಿದ್ದ ಹಲವಾರು ಅಧಿಕಾರಗಳು ರಾಜ್ಯದಲ್ಲಿ ಕೇಂದ್ರೀಕೃತಗೊಂಡವು. ಆ ಮೂಲಕ ರಾಜ್ಯದ ಅಧಿಕಾರಗಳು ವಿಸ್ತೃತಗೊಂಡವು ಹಾಗೆಯೇ ಕಾರ್ಯವ್ಯಾಪ್ತಿ ವ್ಯಾಪಿಸಿ ಕರ್ತವ್ಯಗಳೂ ಹೆಚ್ಚಿದವು. ಬಹಳ ಹಿಂದೆಯೇ ಅರಿಸ್ಟಾಟಲನು ಅತ್ಯುತ್ತಮವಾದ ರಾಜ್ಯವು ತನ್ನ ಪ್ರಜೆಗಳಿಗೆ ಉತ್ತಮವಾದುದನ್ನು ಸಾಧಿಸಲು ನೆರವಾಗುವಂತಹದೆಂದು ವ್ಯಾಖ್ಯಾನಿಸಿದ್ದಾನೆ. ಹಾಗೆಯೇ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಶಾಸನಗಳು ಉತ್ತಮ ಜೀವನವನ್ನು ರೂಪಿಸಬಲ್ಲವೆಂದೂ, ಉತ್ತಮ ಜೀವನದತ್ತ ಸಾಗುವ ನಡುವಿನ ಎಲ್ಲ ಅಡೆತಡೆಗಳನ್ನು ಹೋಗಲಾಡಿಸುವಲ್ಲಿ ಶಾಸನಗಳು ಸಹಾಯಕ ಹಸ್ತಗಳೆಂದು ವ್ಯಾಖ್ಯಾನಿಸಿದ್ದಾನೆ[631]. ಸಾರ್ವಜನಿಕ ಅಭಿಪ್ರಾಯಕ್ಕೆ ತಕ್ಕಂತೆ ಉತ್ತಮ ಜೀವನ ಪಥವನ್ನು ರೂಪಿಸುವಲ್ಲಿ, ಕಲ್ಯಾಣ ರಾಜ್ಯ ಸ್ಥಾಪನೆಯಲ್ಲಿ ಸಾಮಾಜಿಕ ಶಾಸನಗಳು ಪ್ರಮುಖ ಪಾತ್ರ ವಹಿಸುತ್ತವೆಂಬ ನಂಬಿಕೆ ಆಧುನಿಕ ಕಾಲದಲ್ಲಿ ಬೆಳೆಯಿತು. ಇಂಗ್ಲೆಂಡ್‌ನಲ್ಲಿ ಜನರ ಸ್ಥಿತಿಗತಿ ಹೇಗಿದೆ ಎಂಬ ಸಮೀಕ್ಷೆ ಆರಂಭವಾಗುವುದರೊಂದಿಗೆ ಕಲ್ಯಾಣ ರಾಜ್ಯದ ಪರಿಕಲ್ಪನೆ ಹುಟ್ಟಿ, ಯೂರೋಪ್, ಅಮೇರಿಕಾ ಖಂಡಗಳಿಗೂ ವ್ಯಾಪಿಸಿತು[632]. ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಭಾಗಗಳ ಬಹುಸಂಖ್ಯಾತ ದೇಶಗಳು 'ಕಲ್ಯಾಣ ರಾಜ್ಯ'(Welfare state) ಸ್ಥಾಪನೆಯನ್ನು ಸಾಧಿಸುವುದೆ ತಮ್ಮ ಗುರಿ ಎಂದು ಘೋಷಿಸುತ್ತಿದ್ದವು. ಕಲ್ಯಾಣ ರಾಜ್ಯ ಎಂಬ ಪರಿಕಲ್ಪನೆಯು ಪಾಶ್ಚಿಮಾತ್ಯ ರಾಜಕೀಯ ಚಿಂತನೆಗೆ ಹೊಸತಾಗಿ ಸೇರ್ಪಡೆಗೊಂಡ ಅಂಶವಾಯಿತು[633]. ಸಾಮಾಜಿಕ

---

*630. ರಾಬರ್ಟ್ ಲಿಂಗಟ್., ಪೂರ್ವೋಕ್ತ, ಪು. V ಮತ್ತು VI*

*631. ರತ್ನಸ್ವಾಮಿ ಎಂ., ಲೆಜಿಸ್ಲೇಷನ್ : ಪ್ರಿನ್ಸಿಪಲ್ಸ್ ಅಂಡ್ ಪ್ರಾಕ್ಟೀಸ್, ಡಿ.ಕೆ. ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, ಪು. 2-3*

*632. ಅದೇ., ಪು. 59-60*

*633. ಸದಾಶಿವ ಕೆ., ಪೂರ್ವೋಕ್ತ, ಪು. 16*

ಕಲ್ಯಾಣ (Social welfare) ಸಾಧನೆಯೇ ಕಲ್ಯಾಣ ರಾಜ್ಯದ ಗುರಿಯಾಯಿತು. ಸಾಮಾಜಿಕ ಕಲ್ಯಾಣವೆಂದರೆ ಪ್ರಜೆಗಳ ಭೌತಿಕ, ಸಾಮಾಜಿಕ, ಬೌದ್ಧಿಕ ಹಾಗೂ ನೈತಿಕ ಉನ್ನತಿಯನ್ನು ಸಾಧಿಸುವುದೆಂದರ್ಥ. ಆದರೂ ಭೌತಿಕ ಜೀವನದ ಉತ್ತಮತೆ ಸಾಧಿಸುವುದಕ್ಕೆ ಹೆಚ್ಚು ಆದ್ಯತೆ. ಅಂದರೆ ಜನರ ಸಾಮಾನ್ಯಜೀವನ ಮಟ್ಟವನ್ನು ಹೆಚ್ಚಿಸುವುದು. ಕನಿಷ್ಠ ಭೌತಿಕ ಅವಶ್ಯಕತೆಗಳಿಲ್ಲದಿದ್ದರೆ ಉತ್ತಮ ಜೀವನ ನಡೆಸುವುದು ಅಸಾಧ್ಯ. ಆದರೆ ಭೌತಿಕ ಉತ್ತಮೀಕರಣವೇ ಅಂತಿಮವಲ್ಲ ಅದು ಕಲ್ಯಾಣ ರಾಜ್ಯದ ಗುರಿಗೆ ಆರಂಭವಷ್ಟೆ[634]. ಸಾಮಾಜಿಕ ಕಲ್ಯಾಣವನ್ನು ಸಾಧಿಸಲು ಸಾಮಾಜಿಕ ಶಾಸನಗಳನ್ನು ಜಾರಿಗೆ ತರಲಾಯಿತು. ಸಾಮಾಜಿಕ ಶಾಸನಗಳೆಂದರೆ ಜನತೆಯ ಇಚ್ಛೆಯನ್ನು ಶಾಸನಗಳ ಮೂಲಕ ಅಭಿವ್ಯಕ್ತಗೊಳಿಸುವುದು ಹಾಗೂ ಅವರು ಭಾವಿಸಿದಂಥ ಸಾಮಾಜಿಕ ನ್ಯಾಯವನ್ನು ಶಾಸನಗಳ ಮೂಲಕ ಜಾರಿಗೊಳಿಸುವುದೆಂದರ್ಥ[635]. ಸಮಾಜದಲ್ಲಿ ಕೆಲವು ಸಾಂಪ್ರದಾಯಿಕ ನಂಬಿಕೆಗಳು ಮೂಢನಂಬಿಕೆಗಳಾಗಿ, ಆಚರಣೆಗಳಾಗಿ ಸಾಮಾಜಿಕ ಪರಿವರ್ತನೆಯನ್ನು ವಿರೋಧಿಸುತ್ತವೆ. ಅಂತಹ ಸಂದರ್ಭದಲ್ಲಿ ರಾಜ್ಯವು ಪರಿವರ್ತನೆ ಅವಶ್ಯವೆಂದು ಮನಗಂಡು ಅದನ್ನು ಸಾಧಿಸಲು ಸಾಮಾಜಿಕ ಶಾಸನಗಳನ್ನು ಜಾರಿಗೊಳಿಸುತ್ತದೆ. ಸಾಮಾಜಿಕ ನ್ಯಾಯ ಒದಗಿಸುವುದೇ ಸಾಮಾಜಿಕ ಶಾಸನಗಳ ಮೂಲೋದ್ದೇಶ. ಹಾಗಾಗಿ ಸಾಮಾಜಿಕ ನ್ಯಾಯ ಎಂಬುದು ಸಾಮಾಜಿಕ ಸುಧಾರಣೆ, ಸಾಮಾಜಿಕ ಕಲ್ಯಾಣ ಮತ್ತು ಸಾಮಾಜಿಕ ಶಾಸನಗಳೊಂದಿಗೆ ಸಂಬಂಧ ಹೊಂದಿರುತ್ತದೆ[636]. ಪ್ರಪಂಚದ ಎಲ್ಲ ದೇಶಗಳಲ್ಲೂ ಪ್ರಮುಖ ಸಾಮಾಜಿಕ ಸುಧಾರಣೆಗಳು ಆಗಿರುವುದು ಶಾಸನಗಳ ಮೂಲಕವೇ. ಜನಸಮುದಾಯದಲ್ಲಿ ನೆಲೆಗೊಂಡಿರುವ ಸಾಮಾಜಿಕ ಅನಿಷ್ಟಗಳನ್ನು ಹೋಗಲಾಡಿಸಿ ಸಾಮಾಜಿಕ ಸುಧಾರಣೆ ತರುವಲ್ಲಿ ಶಾಸನಗಳಿಗಿಂತ ಕ್ರಿಯಾತ್ಮಕವಾದ ಅಸ್ತ್ರ ಬೇರಿಲ್ಲ.

ಮೇಲ್ಕಂಡ ಶಾಸನಗಳ ಪಾತ್ರವನ್ನು ಕುರಿತ ಐತಿಹಾಸಿಕ ಹಿನ್ನೆಲೆಯ ಸಮೀಕ್ಷೆಯಿಂದ ಒಡಮೂಡಿದ ಚಿತ್ರಣವೆಂದರೆ ಆಧುನಿಕ ಪೂರ್ವ ಕಾಲದಲ್ಲಿ ಶಾಸನಗಳು ಸಾಮಾಜಿಕ ಪರಿವರ್ತನೆಯ ಮಾಧ್ಯಮಗಳಾಗಿ ಗೌಣ ಸ್ಥಾನಹೊಂದಿದ್ದು ಆಧುನಿಕ ಕಾಲದಲ್ಲಿ ಕ್ರಿಯಾತ್ಮಕ ಶಕ್ತಿಗಳಾಗಿ ಪರಿವರ್ತಿತವಾದವೆಂಬುದಾಗಿದೆ. ರಾಜ್ಯ ಅಥವಾ ರಾಜ ಶಾಸನಾಧಿಕಾರವನ್ನು ಕೇಂದ್ರೀಕೃತಗೊಳಿಸುತ್ತಾ ಹೋದಂತೆ ಹಾಗೂ ಅದರ ಅಧಿಕಾರ ವ್ಯಾಪ್ತಿ ಹೆಚ್ಚಿದಂತೆ ಕರ್ತವ್ಯ ಜವಾಬ್ದಾರಿಗಳು ಹೆಚ್ಚುತ್ತಾ ಹೋಗಿ ರಾಜ್ಯ ಸಮಾಜದ ಎಲ್ಲ ವ್ಯಕ್ತಿಗಳು ಹಾಗೂ ಕ್ಷೇತ್ರಗಳನ್ನು ನಿಯಂತ್ರಿಸುವುದನ್ನು ಕಾಣಬಹುದು. ರಾಜ್ಯ ತನ್ನ ಅಧಿಕಾರಗಳನ್ನು ಬಳಸಿ ತನ್ನ ವ್ಯಾಪ್ತಿಯ ಎಲ್ಲ ಕ್ಷೇತ್ರಗಳ ಬೆಳವಣಿಗೆಯನ್ನು ಸಾಧಿಸಲು, ಬೆಳವಣಿಗೆಗೆ ಅಡೆತಡೆಗಳಾಗಿರುವ ಎಲ್ಲಾ ಮೂಢನಂಬಿಕೆ ಹಾಗೂ ಆಚರಣೆಗಳನ್ನು ಹೋಗಲಾಡಿಸಲು ಶಾಸನ ಎಂಬ ಅಸ್ತ್ರವನ್ನು ಸಮರ್ಥವಾಗಿ ಬಳಸಲಾರಂಭಿಸಿತು. ಒಟ್ಟಾರೆ ಆಧುನಿಕ ರಾಜ್ಯದ ಗುರಿ ಕಲ್ಯಾಣ ರಾಜ್ಯ ಅಥವಾ ಸಾಮಾಜಿಕ

---

*634. ಜರ್ನಲ್ ಆಫ್ ಕರ್ನಾಟಕ ಯೂನಿವರ್ಸಿಟಿ, ಸಂಪುಟ-VII, 1963, ಪು. 102-104*

*635. ವುರ್ಕರ್ ಎಚ್.ಎಸ್., ಲಾ ಅಂಡ್ ಸೋಷಿಯಲ್ ವೆಲ್‌ಫೇರ್, ಬೊಂಬಾಯಿ, 1973, ಪು. 189*

*636. ಅದೇ., ಪು. 187*

ಕಲ್ಯಾಣವನ್ನು ಸಾಧಿಸುವುದೇ ಆಯಿತು. ಇದು ರಾಜ್ಯದ ಹಾಗೂ ಶಾಸನಗಳ ಪಾತ್ರವನ್ನು ಕುರಿತಂತೆ ಸಾಂಪ್ರದಾಯಿಕ ಕಾಲಕ್ಕೂ ಹಾಗೂ ಆಧುನಿಕ ಕಾಲಕ್ಕೂ ಆದ ಪರಿವರ್ತನೆ.

ಈ ಮೇಲ್ಕಂಡ ಪರಿಕಲ್ಪನೆಯ ಆಧಾರದ ಮೇಲೆ ನಾಲ್ವಡಿ ಕೃಷ್ಣರಾಜ ಒಡೆಯರ ನೇತೃತ್ವದಲ್ಲಿ ಆಧುನಿಕ ಮೈಸೂರು ಸಂಸ್ಥಾನದಲ್ಲಿ ಶಾಸನಗಳು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಹೇಗೆ ಪಾತ್ರ ವಹಿಸಿದವು ಎಂಬುದನ್ನು ವಿಶ್ಲೇಷಿಸಲಾಗುವುದು. ನಮ್ಮ ಅಧ್ಯಯನದ ಕಾಲಾವಧಿಯಲ್ಲಿ ಮೈಸೂರು ರಾಜ್ಯವು ಬ್ರಿಟಿಷ್ ಸಾಮ್ರಾಜ್ಯಶಾಹಿಯ ಅಧೀನದ ಸಂಸ್ಥಾನವಾಗಿದ್ದು ಯಾವುದೇ ಶಾಸನಗಳ ಜಾರಿಗೆ, ಮಾರ್ಪಾಡಿಗೆ ಬ್ರಿಟಿಷ್ ಸರ್ಕಾರದ ಅನುಮೋದನೆ ಪಡೆಯಬೇಕಿತ್ತು. ಇದು ಮೈಸೂರು ರಾಜ್ಯದ ಸಾಮಾಜಿಕ ಪರಿವರ್ತನೆಯ ಮುನ್ನಡೆಗೆ ಇದ್ದ ಬಾಹ್ಯ ಅಡೆತಡೆ. ಹಾಗೆಯೇ ಮೈಸೂರು ಸಂಸ್ಥಾನದ ಸಮಾಜವು ನಮ್ಮ ಸಂಶೋಧನಾ ಶೀರ್ಷಿಕೆಯಲ್ಲಿನ ಪರಿವರ್ತನಾಶೀಲ ಸಂಪ್ರದಾಯಬದ್ಧ ಆಧುನಿಕ ಸಮಾಜವೆಂಬ ಸ್ಥಿತಿಯಲ್ಲಿತ್ತು. ಇಂತಹ ಸಮಾಜದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಮೈಸೂರು ಸರ್ಕಾರ ಜಾರಿಗೆ ತರಬೇಕೆಂದು ಆಲೋಚಿಸುವ ಪ್ರಗತಿಪರ, ಆಧುನಿಕ ಶಾಸನಗಳು ಸಾಮಾಜಿಕ, ಧಾರ್ಮಿಕ ಸಮಾಜ ಹಾಗೂ ಸಂಸ್ಥೆಗಳಿಂದ ವಿರೋಧ ಎದುರಿಸಬೇಕಿತ್ತು. ಇದು ಮೈಸೂರು ಸಂಸ್ಥಾನದ ಸಾಮಾಜಿಕ ಪರಿವರ್ತನೆಯ ಮುನ್ನಡೆಗೆ ಇದ್ದ ಆಂತರಿಕ ಅಡೆತಡೆ. ಮೈಸೂರು ರಾಜ್ಯವು ಬಾಹ್ಯ ಹಾಗೂ ಆಂತರಿಕ ವಿರೋಧಗಳನ್ನು ಹೇಗೆ ಎದುರಿಸಿತು, ಆ ವಿರೋಧಗಳು ಯಾವ ಪರಿಯಾದವು ಎಂಬುದನ್ನು ವಿಶ್ಲೇಷಿಸುತ್ತಾ ಅಂತಿಮವಾಗಿ ಶಾಸನಗಳು ಹೇಗೆ ಸಾಮಾಜಿಕ ಪರಿವರ್ತನೆಯ ಮಾಧ್ಯಮಗಳಾಗಿ ಪಾತ್ರ ವಹಿಸಿದವೆಂಬುದನ್ನು ಸಮೀಕ್ಷಿಸುವುದು ಈ ಅಧ್ಯಾಯದ ಅಧ್ಯಯನದ ಉದ್ದೇಶವಾಗಿದೆ.

ರಾಜ್ಯದ ಕರ್ತವ್ಯವೆಂದರೆ ಸಾಮಾಜಿಕ ಕಲ್ಯಾಣವನ್ನು ಸಾಧಿಸುವುದು ಹಾಗೂ ಅತ್ಯುತ್ತಮ ರಾಜಕೀಯ ವ್ಯವಸ್ಥೆ ಎಂದರೆ 'ಕಲ್ಯಾಣ ರಾಜ್ಯ' ಎಂಬುದು. ಸಾಮಾಜಿಕ ಕಲ್ಯಾಣವೆಂದರೆ ಪ್ರಜೆಗಳ ಭೌತಿಕ, ಸಾಮಾಜಿಕ, ಬೌದ್ಧಿಕ ಹಾಗೂ ನೈತಿಕ ಉನ್ನತಿಯನ್ನು ಸಾಧಿಸುವುದು ಎಂಬ ಅಂಶವನ್ನು ಕುರಿತು ಈ ಹಿಂದೆಯೇ ನಾವು ಪ್ರತಿಪಾದಿಸಿದ್ದೇವೆ. ಇಂತಹ ಪ್ರತಿಪಾದನೆಯು ಪಾಶ್ಚಿಮಾತ್ಯ ದೇಶಗಳಲ್ಲಿ 1815ರಿಂದ 1914 ರ ಅವಧಿಯಲ್ಲಿ ರಾಬರ್ಟ್ ಓವೆನ್, ಫೆಚ್ಟ್, ಹೆಗಲ್, ಥಾಮಸ್ ಹಿಲ್‌ಗ್ರೀನ್ ಹಾಗೂ ಫ್ರೆಂಚ್ ಮತ್ತು ಜರ್ಮನಿಯ ಸೋಷಿಯಲ್ ಡೆಮೊಕ್ರಾಟ್‌ಗಳು ಹಾಗೂ ಆ ಕಾಲದ ಪ್ರಸಿದ್ಧ ಸಮಾಜಶಾಸ್ತ್ರಜ್ಞರಾದ ವಾರ್ಡ್, ಗಿಡ್ಡಿಂಗ್, ಹಾಬ್‌ಹೌಸ್ ಮುಂತಾದವರ ಚಿಂತನೆಯಿಂದ ಒಡಮೂಡಿದ್ದು. ಅವರು ಸಾಮಾನ್ಯವಾಗಿ ಎತ್ತಿ ಹಿಡಿದ ಅಂಶವೆಂದರೆ " ಸಮಾಜದ ಅನಿಷ್ಟಗಳನ್ನು ಹೋಗಲಾಡಿಸುವಲ್ಲಿ

ಮತ್ತು ಸಾಮಾಜಿಕ ಉತ್ತಮತೆಯನ್ನು ಬೆಳೆಸಲು ಮತ್ತು ಕಾರ್ಮಿಕರು, ಅಬಲರು ಮತ್ತು ಸಮುದಾಯದ ಬಡವರನ್ನೊಳಗೊಂಡಂತೆ ಎಲ್ಲರ ಸಂತೋಷವನ್ನು ಹೆಚ್ಚಿಸಲು ರಾಜ್ಯವು ಕಡ್ಡಾಯವಾಗಿ ಸಕಾರಾತ್ಮಕವಾದ ಸಾಧನವಾಗಿ ಪಾತ್ರವನ್ನು ವಹಿಸಬೇಕೆಂಬುದಾಗಿತ್ತು"[637]. ಇಂತಹ ರಾಜಕೀಯ ಚಿಂತನೆಗಳ ಪ್ರಭಾವವು ಪಾಶ್ಚಿಮಾತ್ಯ ಜಗತ್ತಿನಲ್ಲಿ ಅನೇಕ ಬದಲಾವಣೆಗಳಿಗೆ ದಾರಿಮಾಡಿಕೊಟ್ಟವಲ್ಲದೇ ಆ ಚಿಂತನೆಗಳು ಭಾರತವನ್ನು, ಮೈಸೂರನ್ನು ವಸಾಹತುವಿನ ಆಳ್ವಿಕೆಯ ಮೂಲಕ ಪ್ರವೇಶಿಸಿದವು. ಇಂತಹ ಚಿಂತನೆಯ ಪ್ರಭಾವಕ್ಕೆ ಒಳಗಾದ ನಾಲ್ವಡಿ ಮತ್ತು ಅವರ ಸರ್ಕಾರವು ಅಂದಿನ ಪಾಶ್ಚಿಮಾತ್ಯ ಆದರ್ಶ ವ್ಯವಸ್ಥೆಯನ್ನು ಸ್ಥಳೀಯವಾಗಿ ತಾವೂ ಸಾಧಿಸಲು ಮುಂದಾದವು. ಅದಕ್ಕಾಗಿ ಅನೇಕ ಕಾರ್ಯಯೋಜನೆಗಳನ್ನು ಕೈಗೊಂಡರು. ಆದರೆ ಅವುಗಳನ್ನು ಜನತೆ ಸ್ವಯಂ ಆಗಿ ಅನುಸರಿಸಲು ವಿಫಲವಾದಾಗ ಕಡ್ಡಾಯವಾಗಿ ಶಾಸನಗಳ ಮೂಲಕ ಜಾರಿಗೊಳಿಸಿ ತನ್ನ ಪ್ರಜೆಗಳ ಸಕಲ ಏಳ್ಗೆಯನ್ನು ಸಾಧಿಸಲು, ಸಮಾಜವನ್ನು ಪ್ರಗತಿಯತ್ತ /ಪರಿವರ್ತನೆಯತ್ತ ಕೊಂಡೊಯ್ಯಲು ಮುಂದಾದರು. ಈ ಹಿನ್ನೆಲೆಯಲ್ಲಿ ಜಾರಿಗೊಳಿಸಿದ ಶಾಸನಗಳನ್ನು ಅನುಸರಿಸಿ ಈ ಇಡೀ ಅಧ್ಯಾಯವನ್ನು 4 ಪರಿಕಲ್ಪನೆಗಳಲ್ಲಿ ವಿವರಿಸಲಾಗುವುದು. ಅವುಗಳೆಂದರೆ ;

*i) ಭೌತಿಕ ಬೆಳವಣಿಗೆಯಲ್ಲಿ ಶಾಸನಗಳು.*

*ii) ಸಾಮಾಜಿಕ ಬೆಳವಣಿಗೆಯಲ್ಲಿ ಶಾಸನಗಳು.*

*iii) ಬೌದ್ಧಿಕ ಬೆಳವಣಿಗೆಯಲ್ಲಿ ಶಾಸನಗಳು.*

*iv) ನೈತಿಕ ಬೆಳವಣಿಗೆಯಲ್ಲಿ ಶಾಸನಗಳು.*

## *i) ಭೌತಿಕ ಬೆಳವಣಿಗೆಯಲ್ಲಿ ಶಾಸನಗಳು*

ಸಾಮಾಜಿಕ ಕಲ್ಯಾಣ ಸಾಧಿಸುವಲ್ಲಿ ಜನರ ಭೌತಿಕ ಜೀವನ ಮಟ್ಟವನ್ನು ಹೆಚ್ಚಿಸುವುದಕ್ಕೇ ಮೊದಲ ಆದ್ಯತೆ. ಜನರ ಜೀವನಮಟ್ಟವನ್ನು ನಿರ್ಧರಿಸುವ ಪ್ರಮುಖ ಅಂಶಗಳೆಂದರೆ ಅವರ ಆದಾಯ, ಆದಾಯದ ಮೂಲಗಳು, ವಸತಿ ಸೌಲಭ್ಯ, ಸೇವಿಸುವ ಆಹಾರ, ಬಟ್ಟೆ, ಶಿಕ್ಷಣ, ಆರೋಗ್ಯ ಮುಂತಾದವು. ಈ ಸೌಲಭ್ಯಗಳ ಗುಣಾತ್ಮಕ ಮತ್ತು ಸಂಖ್ಯಾತ್ಮಕ ಪ್ರಮಾಣಗಳನ್ನೂ ಜೀವನಮಟ್ಟ ನಿರ್ಧರಿಸುವಾಗ ಪರಿಗಣಿಸಬೇಕಾಗುತ್ತದೆ. ನಾಲ್ವಡಿಯವರು ಎಕನಾಮಿಕ್ ಕಾನ್ಫರೆನ್ಸ್‌ನ್ನು 1911ರಲ್ಲಿ ಉದ್ಘಾಟಿಸುತ್ತಾ ಮಾಡಿದ ಭಾಷಣದಲ್ಲಿ ಆರ್ಥಿಕ ಅಸಮರ್ಥತೆಗೆ ಬಡತನ, ಅಜ್ಞಾನ ಮತ್ತು

---

*637. **ರತ್ನ ಎಸ್.ಎನ್.,** ದಿ ಡೆವಲೆಪ್‌ಮೆಂಟ್ ಆಫ್ ದಿ ವೆಲ್‌ಫೇರ್ ಸ್ಟೇಟ್ ಇನ್ ಒರಿಸ್ಸಾ 1950-60. ಎಸ್. ಚಂದ್ ಅಂಡ್ ಕಂಪನಿ ಲಿ., ನ್ಯೂಡೆಲ್ಲಿ, 1977, ಪು. 5*

ಕಡಿಮೆ ಜೀವಿಸುವ ಶಕ್ತಿಗಳೇ ಕಾರಣಗಳೆಂದು ತಿಳಿಸಿದ್ದರು. ಹಾಗೆಯೇ ಅಭಿವೃದ್ಧಿಗೊಂಡ ರಾಷ್ಟ್ರಗಳ ತಲಾ ವರಮಾನ, ಶಿಕ್ಷಣದ ಪ್ರಮಾಣ, ಹಾಗೂ ಹೆಚ್ಚು ಜೀವಿಸುವ ಶಕ್ತಿ ಇರುವುದೇ ಅವುಗಳ ಆರ್ಥಿಕ ಸಾಮರ್ಥ್ಯದ ದ್ಯೋತಕಗಳೆಂದು ಪ್ರತಿಪಾದಿಸಿದ್ದರು[638]. ಈ ಅಂಶಗಳ ಆಧಾರದ ಮೇಲೆ ಮೇಲಿನ ಶೀರ್ಷಿಕೆಯಡಿಯಲ್ಲಿ ಮೈಸೂರು ಸರ್ಕಾರವು ಭೌತಿಕ ಬೆಳವಣಿಗೆ ತರಲು ಜಾರಿಗೊಳಿಸಿದ ಶಾಸನಗಳಾವುವು, ಯೋಜನೆ ಹಾಗೂ ಕಾರ್ಯಕ್ರಮಗಳಾವುವು ಎಂಬುದನ್ನು ಇಲ್ಲಿ ಚರ್ಚಿಸಲಾಗುವುದು.

### *ಅ) ಕೃಷಿಕರ ಕಲ್ಯಾಣ ಶಾಸನಗಳು*

ಜನರ ಜೀವನಮಟ್ಟವನ್ನು ನಿರ್ಧರಿಸುವಲ್ಲಿ ಕೃಷಿ ಪ್ರಧಾನಪಾತ್ರವನ್ನು ವಹಿಸುತ್ತದೆ. ಇಂತಹ ಕೃಷಿಕ್ಷೇತ್ರದ ಮಹತ್ವವನ್ನು ಕುರಿತು ನಾಲ್ವಡಿಯವರು "ಭಾರತದ ಏಳ್ಗೆಯಲ್ಲಿ ಕೃಷಿಯ ಮಹತ್ವವನ್ನು ಮತ್ತೆ ಮತ್ತೆ ಒತ್ತಿಹೇಳಬೇಕಾಗಿಲ್ಲ. ಈ ಉದ್ಯಮವನ್ನು ¾ ಭಾಗದ ಜನ ತಮ್ಮ ಜೀವನೋಪಾಯಕ್ಕೆ ಆಶ್ರಯಿಸಿದ್ದಾರೆ, ಹೆಚ್ಚಾಗಿ ಇದು ನಮ್ಮ ಇತರ ಕೈಗಾರಿಕೆಗಳ ನಿರ್ಮಾಣದಲ್ಲಿ ಅಸ್ತಿಭಾರದಂತಿದೆ"[639] ಎಂದು ಹೇಳಿದ್ದಾರೆ. ಬಹುಸಂಖ್ಯಾತರ ಉದ್ಯೋಗ ಕ್ಷೇತ್ರವಾದ ಕೃಷಿ ಹಾಗೂ ಅದನ್ನು ನಂಬಿದ ಕೃಷಿಕರ ಅಭಿವೃದ್ಧಿಗಾಗಿ ನಾಲ್ವಡಿಯವರು ಅನೇಕ ಆಧುನಿಕ ಅಂಶಗಳನ್ನು ಅಳವಡಿಸಲು ಪ್ರಯತ್ನಿಸಿದರು. ಹಾಗೆಯೇ ನಾಲ್ವಡಿಯವರು ಕೃಷಿಕರು ಉತ್ತಮ ತಳಿಯ ಬೆಳೆ, ಜಾನುವಾರು, ಗಿಡ ಮರ, ಉಪಕರಣ ಯಾವುದೇ ಆಗಲಿ ಉತ್ತಮವಾದುದನ್ನೇ ಆಯ್ಕೆ ಮಾಡಬೇಕೆಂದು ಹೇಳುತ್ತಿದ್ದರು. ಹಾಗೂ ಅಂತಹವುಗಳನ್ನು ಕೃಷಿಕರಿಗೆ ತಲುಪಿಸುವ ವ್ಯವಸ್ಥೆ ಮಾಡುವ ಮೂಲಕ ರೈತರ ಇಳುವರಿ, ಆದಾಯವು ಹೆಚ್ಚಾಗುವಂತೆ ಮಾಡಿದರು. ರಾಜ್ಯದ ವಿವಿಧ ಕಡೆಗಳಲ್ಲಿ ಪ್ರಾಯೋಗಿಕ ಫಾರ್ಮ್‌ಗಳನ್ನು ಸ್ಥಾಪಿಸಿ ಅಲ್ಲಿ ಸುಧಾರಿತ ಬಿತ್ತನೆ ಬೀಜಗಳನ್ನು ಅಭಿವೃದ್ಧಿಗೊಳಿಸಿ ಗ್ರಾಮಸಭೆಗಳ ಮೂಲಕ ಕೃಷಿಕರಿಗೆ ತಲುಪುವಂತೆ ಮಾಡಿದರು. ಪಾಶ್ಚಿಮಾತ್ಯ ಮೂಲದ ತರಕಾರಿಗಳು, ಬೆಳೆಗಳು, ಉಪಕರಣಗಳು, ರಸಗೊಬ್ಬರಗಳನ್ನು ಸ್ಥಳೀಯರು ಬಳಸಲು ವಿರೋಧಿಸಿದಾಗ ಅದನ್ನು ಅಳವಡಿಸಿಕೊಳ್ಳುವಂತೆ ತಮ್ಮ ಭಾಷಣಗಳ ಮೂಲಕ ಮನಪರಿವರ್ತಿಸಿದರು. ಹೀಗೆ ನಾಲ್ವಡಿಯವರು ಕೃಷಿ ಕ್ಷೇತ್ರದಲ್ಲಿ ತಂದ ಆಧುನಿಕ ಅಂಶಗಳಿಂದಾಗಿ ಕೃಷಿ ಕ್ಷೇತ್ರ ಮತ್ತು ಕೃಷಿಕರು ಬೆಳವಣಿಗೆಗೊಳ್ಳುವಂತೆಯೂ ಆ ಮೂಲಕ ಜನರ ಜೀವನಮಟ್ಟವನ್ನು ಹೆಚ್ಚಿಸಿಕೊಳ್ಳುವಂತೆಯೂ ಮಾಡಿದರು. ಹಾಗೆಯೇ ಗುರಿ ಸಾಧನೆಗಾಗಿ ಇದ್ದ ಅಡೆತಡೆಗಳನ್ನು ಹೋಗಲಾಡಿಸಲು ಅನೇಕ ಶಾಸನಗಳನ್ನು ಜಾರಿಗೊಳಿಸಿದರು.

### *ಎ) ಕೃಷಿ ಸಾಲ ಸಂಬಂಧಿ ಶಾಸನಗಳು*

---

638. *ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು.* 87-88

639. *ಅದೇ., ಪು.* 223

ವಿಶ್ವದ ಕೃಷಿ ಇತಿಹಾಸವನ್ನು ಗಮನಿಸಿದಾಗ ಕೃಷಿಕರು ಸಾಲ ಪಡೆಯದೆ ತಮ್ಮ ಯಾವ ಕಾರ್ಯಗಳನ್ನು ಮಾಡಲಾರರು ಎಂಬುದು ಸಾಮಾನ್ಯ ಸಂಗತಿ. ಅಭಿವೃದ್ಧಿ ಮತ್ತು ಸಾಲ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಕೃಷಿಯ ಅಭಿವೃದ್ಧಿಗೆ ಸಾಲ ಸೌಲಭ್ಯ ಅತ್ಯಂತ ಅವಶ್ಯಕ. ಆದರೆ ಕೃಷಿಕನು ಸಾಲದ ವಿಷವರ್ತುಲದಲ್ಲಿ ಸಿಲುಕಿ ನರಳುವುದು ಮತ್ತು ಶೋಷಣೆಗೊಳಗಾಗುವುದು ಎಲ್ಲ ಪ್ರದೇಶ ಮತ್ತು ಆ ಕಾಲದಲ್ಲೂ ಕಂಡು ಬರುವ ಸತ್ಯಾಂಶ. 14ನೇ ಲೂಯಿಯು 17ನೇ ಶತಮಾನದಲ್ಲೇ ಹೇಳಿದ್ದಂತೆ "ಸಾಲ ಪಡೆದವನನ್ನು ಸಾಲ ಎತ್ತಿ ಹಿಡಿಯಲು ನೆರವಾಗುತ್ತದೆ. ಹಾಗೆಯೇ ನೇಣಿಗೇರಿದವನನ್ನು ಹಗ್ಗವು ಎತ್ತಿ ಹಿಡಿಯುತ್ತದೆ"[640]. ಲೂಯಿಯ ಈ ಹೇಳಿಕೆಯು 17ನೇ ಶತಮಾನದ ಫ್ರಾನ್ಸಿನ ಸಾಮಾನ್ಯ ಪ್ರಜೆಯ ಪರಿಸ್ಥಿತಿಯ ದ್ಯೋತಕ. ಈ ಹೇಳಿಕೆಯ ಅಂತರಾರ್ಥವೆಂದರೆ ನೇಣಿನ ಹಗ್ಗವು ನೇಣಿಗೆ ಬಿದ್ದವನನ್ನು ಹೇಗೆ ಜೀವ ತೆಗೆಯುತ್ತದೆಯೋ ಹಾಗೆ ಸಾಲವು ಸಾಲಗಾರನನ್ನು ಜೀವಶವವಾಗುವಂತೆ ಮಾಡುತ್ತದೆ ಎಂಬುದಾಗಿದೆ. ಆಧುನಿಕ ಕಾಲದ ಮೈಸೂರಿನಲ್ಲೂ ಕೃಷಿಕನ ಸ್ಥಿತಿ ಮೇಲಿನಂತೆಯೇ ಇತ್ತು. ಸಾಲ ಸೌಲಭ್ಯವು ಕೇವಲ ಖಾಸಗಿ ಹಣಲೇವಾದೇವಿಗಾರರಿಂದ, ಸಾಹುಕಾರರಿಂದ ಕೆಲವೊಮ್ಮೆ ವ್ಯಾಪಾರಿಗಳಿಂದ ದೊರೆಯುತ್ತಿತ್ತು. ಖಾಸಗಿ ಸಾಲಗಾರರು ವಿಧಿಸುತ್ತಿದ್ದ ಅಧಿಕ ಬಡ್ಡಿದರ ಮತ್ತು ಅಶಿಕ್ಷಿತ ಕೃಷಿಕರಿಂದ ಮೋಸದ ಲೆಕ್ಕಕ್ಕೆ ಸಹಿ ತೆಗೆದುಕೊಳ್ಳುವುದು ಮುಂತಾದವುಗಳಿಂದ ಕೃಷಿಕ ತನ್ನ ಜೀವಿತಾವಧಿಯನ್ನೆಲ್ಲ ಸಾಲಗಾರನಾಗಿ ಇಲ್ಲವೆ ಸಾಲ ತೀರಿಸಲು ಆಸ್ತಿಪಾಸ್ತಿ ಮಾರಿ ಭಿಕಾರಿಯಂತೆ ಬದುಕುತ್ತಾ ಕಳೆಯಬೇಕಿತ್ತು. ಮೈಸೂರು ಪ್ರದೇಶದಲ್ಲಿ ಟಿಪ್ಪುಸುಲ್ತಾನನ ಕಾಲದಲ್ಲಿ ತಕಾವಿಸಾಲ ಅಥವಾ ಮುಂಗಡಸಾಲದ ರೂಪದಲ್ಲಿ ಕೃಷಿಕನ ಕೃಷಿ ಚಟುವಟಿಕೆಗಳ ಆರಂಭದಲ್ಲಿ ನೆರವಾಗಲು ಸಾಲಸೌಲಭ್ಯ ನೀಡಲಾಗುತ್ತಿತ್ತು. ಮೈಸೂರಿನ ಅಧಿಕಾರದ ಪ್ರತಿದಾನದ ನಂತರ 1890ರಲ್ಲಿ ಮೈಸೂರು ಸರ್ಕಾರವು ತಕಾವಿಸಾಲ ಪದ್ಧತಿಯನ್ನು ಮುಂದುವರಿಸಿತು. ಆದರೆ ಈ ಪದ್ಧತಿಯಲ್ಲಿ ಇದ್ದ ನಿಧಾನಗತಿ ಮತ್ತು ಕಿರುಕುಳಗಳಿಂದಾಗಿ ಸಾಮಾನ್ಯ ರೈತ ಸಾಲ ಪಡೆಯಲು ಬಹಳ ತೊಂದರೆಪಡುತ್ತಿದ್ದ. ಹಾಗೆಯೇ ಸಾಲ ನೀಡಲು ಸರ್ಕಾರ ತೆಗೆದಿಡುತ್ತಿದ್ದ ಹಣದ ಪ್ರಮಾಣವು ರಾಜ್ಯದ ರೈತರ ಬೇಡಿಕೆಗಳಿಗೆ ಸಾಕಾಗುವಷ್ಟಿರಲಿಲ್ಲ[641]. ಇಂತಹ ಸನ್ನಿವೇಶದಲ್ಲಿ 1881ರಲ್ಲಿ ಸ್ಥಾಪಿತವಾದ ಪ್ರಜಾಪತಿನಿಧಿ ಸಭೆಯಲ್ಲಿ ಕೃಷಿ ಹಿನ್ನೆಲೆಯ ಸದಸ್ಯರು ಕೃಷಿ ಸಾಲ ಸೌಲಭ್ಯಕ್ಕೆ ಬೇಡಿಕೆ ಸಲ್ಲಿಸಲಾರಂಭಿಸಿದರು. ಆದ್ದರಿಂದ ಮೈಸೂರು ಸರ್ಕಾರವು 1890ರಲ್ಲಿ "ದಿ ಮೈಸೂರು ಲ್ಯಾಂಡ್ ಇಂಪ್ರೂವ್‌ಮೆಂಟ್ ಲೋನ್ಸ್ ಆಕ್ಟ್" ಎಂಬ ಶಾಸನವನ್ನು ಜಾರಿಗೊಳಿಸಿತು. ಈ ಶಾಸನದ ಮೂಲಕ ಕೃಷಿ ಅಭಿವೃದ್ಧಿಗಾಗಿ ಅಂದರೆ ಬಾವಿ ತೆಗೆಸಲು, ಕೆರೆ ಮುಂತಾದ ನೀರಿನ ಸಂಗ್ರಹಗಳ ನಿರ್ಮಾಣ, ಭೂಮಿಯನ್ನು ಸಾಗುವಳಿಗೊಳಿಸಲು, ಪ್ರವಾಹದಿಂದ ಭೂಮಿಯನ್ನು ರಕ್ಷಿಸಲು ಇವೇ

---

*640. **ಡಿವೆಟ್ ಕೆ.ಕೆ.,** ಇಂಡಿಯನ್ ಎಕನಾಮಿಕ್ಸ್, ದೆಹಲಿ, 1963, ಪು. 162*

*641. **ಪ್ರೊಸೀಡಿಂಗ್ಸ್ ಆಫ್ ದಿ ಟ್ವೆಲ್ಫ್ತ್ ಕಾನ್ಫರೆನ್ಸ್ ಆಫ್ ಮೈಸೂರ್,** ಪ್ರೊವಿನ್ಷಿಯಲ್ ಕೋ-ಆಪರೇಟಿವ್ ಕಾನ್ಫರೆನ್ಸ್, 1925, ಪು. 5*

ಮುಂತಾದ ಚಟುವಟಿಕೆಗಳಿಗೆ ಸಾಲ ಪಡೆಯಬಹುದಿತ್ತು[642]. ಈ ಶಾಸನದಡಿಯಲ್ಲಿರೈತ ದೀರ್ಘಾವಧಿಸಾಲ ಪಡೆದು 35ವರ್ಷಗಳಲ್ಲಿ ತೀರಿಸಬಹುದಿತ್ತು. ಅದಕ್ಕೆ ಬಡ್ಡಿಯು ಶೇ. 6.5ರಷ್ಟಿತ್ತು. 1908ರಲ್ಲಿ 90,750 ರೂಪಾಯಿಗಳನ್ನು ಈ ಶಾಸನದಡಿಯಲ್ಲಿ ಸಾಲ ನೀಡಲಾಯಿತು. 1920-21ರಿಂದ 1933-34ರ ಅವಧಿಯಲ್ಲಿ 20.5ಲಕ್ಷ ರೂಪಾಯಿಗಳನ್ನು ಭೂ ಅಭಿವೃದ್ಧಿಗಾಗಿ ಸಾಲ ನೀಡಲಾಯಿತು. 1930ರ ದಶಕದಲ್ಲುಂಟಾದ ಮಹಾ ಆರ್ಥಿಕ ಮುಗ್ಗಟ್ಟಿನ ಸಂದರ್ಭದಲ್ಲಿ ಕೃಷಿಕನಿಗೆ ನೆರವಾಗಲು ಬಡ್ಡಿಯ ದರವನ್ನು ಶೇ. 6.5ರಿಂದ ಶೇ. 5.5ಗೆ ಇಳಿಸಲಾಯಿತು[643]. ಆಧುನಿಕ ಕೃಷಿ ಸಲಕರಣೆಗಳನ್ನು ರೈತರಿಗೆ ಪೂರೈಸಲು 1910ರಲ್ಲಿ ಇಂಪ್ಲಿಮೆಂಟ್ ಡಿಪೋಗಳನ್ನು ಸ್ಥಾಪಿಸಲಾಯಿತು. ತಕಾವಿಸಾಲ ಮತ್ತು ಮೈಸೂರ್ ರೆವಿನ್ಯೂಕೋಡ್ ಎಂಬ ಶಾಸನವೂ ಸಹ ಇಂತಹ ಉಪಕರಣಗಳನ್ನು ಕೊಳ್ಳಲು ಶೇ. 5ರ ಬಡ್ಡಿ ದರದಲ್ಲಿ ಸಾಲ ಸೌಲಭ್ಯ ಒದಗಿಸಲು ಅವಕಾಶ ಮಾಡಿಕೊಟ್ಟಿತು. ಇದ ರಿಂದಾಗಿ ಸುಧಾರಿತ ಕೃಷಿ ಸಲಕರಣೆಗಳು ರೈತರಿಗೆ ದೊರಕುವಂತಾದವು[644].

ಆದರೆ ಮೈಸೂರು ಸರ್ಕಾರವು ಕೈಗೊಂಡ ಇಂತಹ ಕೃಷಿ ಸಾಲಸೌಲಭ್ಯ ನೀತಿಯು ರೈತರಲ್ಲಿದ್ದ ಬೇಡಿಕೆಗಳನ್ನು ಪೂರೈಸುವಲ್ಲಿ ಸಫಲವಾಗಲಿಲ್ಲ. ಆಗ 1893ರಲ್ಲಿ ಪ್ರಜಾಪ್ರತಿನಿಧಿ ಸದಸ್ಯರು ಕೃಷಿಬ್ಯಾಂಕುಗಳನ್ನು ಸ್ಥಾಪಿಸಬೇಕೆಂದು ಒತ್ತಾಯಿಸಿದರು. ಸರ್ಕಾರವು ಕೃಷಿಕರ ಸಾಲ ಸೌಲಭ್ಯದ ಸಮಸ್ಯೆಯನ್ನು ನಿವಾರಿಸಲು 1894ರಲ್ಲಿ ಕೃಷಿಬ್ಯಾಂಕುಗಳನ್ನು ಸ್ಥಾಪಿಸಿತು. ಈ ಬ್ಯಾಂಕುಗಳ ಸ್ಥಾಪನೆಗೆ ಬೇಕಾದ ಮೂಲ ಬಂಡವಾಳಕ್ಕಾಗಿ ಸರ್ಕಾರ 16,000 ರೂಪಾಯಿಗಳನ್ನು ಒದಗಿಸಿತು. 1894-95ರಲ್ಲಿ ಪಾಲಹಳ್ಳಿ ಮತ್ತು ಕ್ಯಾತನಹಳ್ಳಿ ಎಂಬಲ್ಲಿ ಎರಡು ಕೃಷಿ ಬ್ಯಾಂಕುಗಳು ಸ್ಥಾಪನೆಗೊಂಡವು[645].1897-98ರ ವೇಳೆಗೆ 61ಕೃಷಿಬ್ಯಾಂಕುಗಳಿದ್ದು ಸರ್ಕಾರ 12.5 ಲಕ್ಷ ರೂಪಾಯಿಗಳನ್ನು ಸಾಲವಾಗಿ ನೀಡಿತು. ಈ ಬ್ಯಾಂಕುಗಳ ಸ್ಥಾಪನೆಯಿಂದಾಗಿ ಖಾಸಗಿ ಹಣಲೇವಾದೇವಿಗಾರರು ವಿಧಿಸುತ್ತಿದ್ದ ಬಡ್ಡಿಯ ಪ್ರಮಾಣ ಬಹಳ ಮಟ್ಟಿಗೆ ತಗ್ಗಿತು[646]. 1899-1900ರಲ್ಲಿ 61 ಬ್ಯಾಂಕುಗಳು 14,86,500 ರೂಪಾಯಿಗಳನ್ನು ಸಾಲವಾಗಿ ನೀಡಿದವು. ಆದರೆ ಸಾಲ ಪಡೆದವರು ಹಿಂತಿರುಗಿಸುವಲ್ಲಿ ವಿಫಲರಾದರು. ಹಾಗಾಗಿ ಸರ್ಕಾರ ಕೃಷಿಬ್ಯಾಂಕುಗಳ ಕಾರ್ಯ ವೈಖರಿಯನ್ನು ಟೀಕಿಸಲಾರಂಭಿಸಿತು. ಸರ್ಕಾರವು 1903ರಲ್ಲಿ ಒಟ್ಟು ಸುಮಾರು 13 ಲಕ್ಷದಷ್ಟಿದ್ದ ಸಾಲವನ್ನು ವಸೂಲಿ ಮಾಡಲು ಒಂದು ಶಾಸನವನ್ನು ಜಾರಿಗೆ ತಂದಿತು. ಈ ಶಾಸನವು ಸಾಲದ ಬಾಕಿಯನ್ನು ಭೂ ಕಂದಾಯದಂತೆ ವಸೂಲಿ ಮಾಡುವ

---

642. *ದಿ ಮೈಸೂರ್ ಕೋಡ್, ಸಂಪುಟ-I, ಪು. 178*

643. *ರಿಪೋರ್ಟ್ ಆನ್‌ದಿ ಅಗ್ರಿಕಲ್ಚರಿಸ್ಟ್ಸ್ ರಿಲೀಫ್ ಕಮಿಟಿ ಇನ್ ಮೈಸೂರ್, 1935, ಪು. 13*

644. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್, ಸೀರಿಸ್ ನಂ. 2, ಅಗ್ರಿಕಲ್ಚರ್ ಡಿಪಾರ್ಟ್‌ಮೆಂಟ್, ಜಿ.ಓ. ನಂ. 5809 - ಎ & ಐ 43 - 15-24, ದಿನಾಂಕ : 12-04-1916, ಪು. 61*

645. *ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್ಸ್, 1894-95, ಪು. 76*

646. *ಅಡ್ರೆಸ್ ಆಫ್ ದಿ ದಿವಾನ್ ಟು ದಿ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, 1903, ಪು. 330*

ಅಧಿಕಾರ ನೀಡಿತು. ದಿವಾನರೇ ತಿಳಿಸುವಂತೆ 1906ರಲ್ಲೂ 13ಲಕ್ಷ ರೂಪಾಯಿ ಸಾಲ ಬಾಕಿಯಿತ್ತು. ಕೃಷಿಬ್ಯಾಂಕುಗಳು ವಿಫಲಗೊಳ್ಳುತ್ತಾ ಹೋದಂತೆ ವರ್ಷವರ್ಷವೂ ಸರ್ಕಾರ ಕೃಷಿಬ್ಯಾಂಕುಗಳನ್ನು ಮುಚ್ಚುತ್ತಾ ಬಂದಿತು. ಹಾಗಾಗಿ 1914-15ರ ವೇಳೆಗೆ ಕೇವಲ ಮೂರು ಕೃಷಿಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿದ್ದವು. ಕೃಷಿಬ್ಯಾಂಕುಗಳ ಸದಸ್ಯರಲ್ಲಿದ್ದ ಸಹಕಾರ ಮನೋಭಾವನೆಯ ಕೊರತೆ ಹಾಗೂ ಸಾಲ ನೀಡಲು ಸರ್ಕಾರ ಕೈಗೊಂಡ ಉದಾರಿ ನೀತಿಯನ್ನು ಸದಸ್ಯರು ದುರುಪಯೋಗ ಪಡಿಸಿಕೊಂಡಿದ್ದು ಈ ಬ್ಯಾಂಕುಗಳ ಅವನತಿಗೆ ಕಾರಣವಾಯಿತು[647].

ಕೃಷಿಬ್ಯಾಂಕುಗಳು ವಿಫಲಗೊಳ್ಳುತ್ತಾ ಹೋದುದನ್ನು ಗಮನಿಸಿದ ಸರ್ಕಾರ ಕೃಷಿಕರಿಗೆ ಕಡಿಮೆ ಬಡ್ಡಿದರದಲ್ಲಿ, ಸುಲಭವಾಗಿ ಮತ್ತು ಸಂದರ್ಭಕ್ಕನುಸಾರವಾಗಿ ಸಾಲ ದೊರೆಯುವಂತೆ ಮಾಡಲು ದಿ ಮೈಸೂರ್ ಕೋ ಆಪರೇಟಿವ್ ಸೊಸೈಟೀಸ್ ರೆಗ್ಯುಲೇಷನ್ ಎಂಬ ಶಾಸನವನ್ನು 1905ರಲ್ಲಿ ಜಾರಿಗೊಳಿಸಿತು[648]. ಈ ಶಾಸನದ ಮೂಲೋದ್ದೇಶ ಕೋ -ಆಪರೇಟಿವ್ ಕ್ರೆಡಿಟ್ ಸೊಸೈಟಿಗಳನ್ನು ಸ್ಥಾಪಿಸಿ ಆ ಮೂಲಕ ಕೃಷಿ ಸಾಲವನ್ನು ವಿಸ್ತೃತವಾಗಿ ಪೂರೈಸುವುದಾಗಿತ್ತು. ಇದು ಸಹಕಾರಿ ತತ್ವ ಮತ್ತು ಸಹಕಾರಿ ಆರ್ಥಿಕತೆ ಎಂಬ ಅಂಶಗಳ ಪ್ರಭಾವದಿಂದ ರೂಪಗೊಂಡಿದ್ದು ಮೈಸೂರಿನಲ್ಲಿ ಸಹಕಾರಿ ಚಳವಳಿ ಎಂದೇ ಹೆಸರಾಯಿತು[649]. 1905-06ರಲ್ಲಿ ಬೆಂಗಳೂರು, ಮೈಸೂರು, ವೈಟ್‌ಫೀಲ್ಡ್, ಹೊಳೇನರಸೀಪುರ ಮತ್ತು ಕೊಪ್ಪ ಹೀಗೆ ಐದು ಕಡೆ ಕೋ ಆಪರೇಟಿವ್ ಸೊಸೈಟಿಗಳು ಸ್ಥಾಪನೆಗೊಂಡವು. ಈ ಸೊಸೈಟಿಗಳು 362 ಸದಸ್ಯರು ಮತ್ತು 14,243ರೂಪಾಯಿಗಳ ಬಂಡವಾಳದೊಂದಿಗೆ ನಗರ ಮತ್ತು ಗ್ರಾಮೀಣ ಪ್ರದೇಶಗಳೆರಡರಲ್ಲೂ ಸ್ಥಾಪನೆಗೊಂಡವು. ಅಗ್ರಿಕಲ್ಚರಲ್ ಸೊಸೈಟಿಗಳು ಆರಂಭದಲ್ಲಿ ಉತ್ತಮ ಬಿತ್ತನೆ ಬೀಜ, ನೇಗಿಲು, ರಸಗೊಬ್ಬರ, ಕಬ್ಬಿನ ಗಾಣ ಮತ್ತು ಕೊಪ್ಪರಿಗೆ ಮುಂತಾದ ಕೃಷಿ ಉಪಯೋಗಿ ಸಲಕರಣೆಗಳನ್ನು ಪೂರೈಸುದ್ದವು[650]. 1910-11ರ ವೇಳೆಗೆ ಕೋ ಆಪರೇಟಿವ್ ಸೊಸೈಟಿಗಳ ಸಂಖ್ಯೆ 70ಕ್ಕೂ, ಸದಸ್ಯರ ಸಂಖ್ಯೆ 9,403ಕ್ಕೂ, ಹೂಡಿದ್ದ ಬಂಡವಾಳ 2,31,468ರಷ್ಟಿದ್ದುದು 1937ರ ವೇಳೆಗೆ 1862 ಸೊಸೈಟಿಗಳು 62,229ಸದಸ್ಯರು ಮತ್ತು ಬಂಡವಾಳ 55,00,845 ರೂಪಾಯಿಗಳಾಗಿತ್ತು[651].1937 ರಲ್ಲಿದ್ದ 1862 ಸೊಸೈಟಿಗಳಲ್ಲಿ 1,417ಸೊಸೈಟಿಗಳು ಕೃಷಿಕರಿಗಾಗಿ ಸ್ಥಾಪಿಸಿದ್ದವಾಗಿದ್ದವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಅಗ್ರಿಕಲ್ಚರಲ್ ಸಪ್ಲೈ ಸೊಸೈಟಿಗಳು, ಸೇಲ್ ಸೊಸೈಟಿಗಳು ಮತ್ತು ರೂರಲ್ ಕ್ರೆಡಿಟ್ ಸೊಸೈಟಿಗಳು. ಅಗ್ರಿಕಲ್ಚರಲ್ ಸೇಲ್ ಸೊಸೈಟಿಗಳು ತಮ್ಮ ಸದಸ್ಯರು ಉತ್ಪಾದಿಸಿದ ವಸ್ತುಗಳನ್ನು ಲಾಭದಾಯಕ ಬೆಲೆಗೆ ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಿದ್ದವು. ಆ ಮೂಲಕ ರೈತರನ್ನು ಮಧ್ಯವರ್ತಿಗಳ ಶೋಷಣೆಯಿಂದ ಮುಕ್ತಗೊಳಿಸಲಾಯಿತು. ಮಧ್ಯವರ್ತಿಗಳಿಂದ ಪ್ರಭಾವಿತವಾದ ಬಜಾರುಗಳ ಬೆಲೆಗಿಂತ ಈ ಸೇಲ್

---

*647. **ಸದಾಶಿವ ಕೆ.**, ಪೂರ್ವೋಕ್ತ, ಪು. 82-85*

*648. **ಅಡ್ರೆಸ್ ಆಫ್ ದಿ ದಿವಾನ್ ಟು ದಿ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ ರಿಪೋರ್ಟ್**, 1905, ಪು. 370*

*649. **ಸೆಂಟ್ರಲ್ ಬ್ಯಾಂಕಿಂಗ್ ಎನ್‌ಕ್ವೈರಿ ಕಮಿಟಿ, ಮೆಜಾರಿಟಿ ರಿಪೋರ್ಟ್**, ಪು. 111*

*650. **ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್**, 1905-06, ಪು. 37*

*651. **ಅದೇ.**, 1910-11, ಪು. 36, ಮತ್ತು 1920-21, ಪು. 30*

ಸೊಸೈಟಿಗಳಲ್ಲಿ ಶೇ. 50ರಿಂದ 60ರಷ್ಟು ಉತ್ತಮ ಬೆಲೆ ಸಿಕ್ಕಿ ಕೃಷಿಕನ ಆದಾಯ ಹೆಚ್ಚಿತು[652].

ಸಹಕಾರ ಚಳವಳಿಯು ಮೈಸೂರು ಸಂಸ್ಥಾನದ ಎಲ್ಲ ಕ್ಷೇತ್ರಗಳನ್ನು ಪ್ರವೇಶಿಸಿತು. ಜನರು ತಮ್ಮ ವೃತ್ತಿಯಾಧರಿಸಿ ನೇಯ್ಗೆಗಾರರ, ರೇಷ್ಮೆಗಾರಿಕಾ, ಶ್ರೀಗಂಧ ಮರದ ಕೆತ್ತನೆಗಾರರ, ಗಾಡಿ ತಯಾರಕರ, ಬತ್ತದ ಬೆಳೆಗಾರರ ಮುಂತಾದವರ ಪ್ರತ್ಯೇಕ ಕೋಆಪರೇಟಿವ್ ಸೊಸೈಟಿಗಳನ್ನು ಸ್ಥಾಪಿಸಿಕೊಂಡರು[653]. ದಲಿತರ ಉದ್ಧಾರಕ್ಕಾಗಿ 1926-27ರಲ್ಲಿ 189 ಸೊಸೈಟಿಗಳಿದ್ದವು. ಅವುಗಳಲ್ಲಿ ಆದಿ-ಕರ್ನಾಟಕ ಕಾಲೋನಿ ಸೊಸೈಟಿ ಎಂಬುದು ಭೂರಹಿತ ದಲಿತರಿಗೆ ಭೂಮಿ ಮತ್ತು ಮೂಲ ಬಂಡವಾಳವನ್ನು ಒದಗಿಸಿ ಕೃಷಿಯಲ್ಲಿ ತೊಡಗುವಂತೆ ಮಾಡುವ ಒಂದು ವಿಶಿಷ್ಟ ಪ್ರಯೋಗವನ್ನು ಮಾಡಿತು[654]. ಗ್ರಾಮೀಣ ಜನರು ಬಂಡವಾಳದ ಕೊರತೆ ಮತ್ತು ಸಾಲದ ವರ್ತುಲದಲ್ಲಿ ಸಿಲುಕುವುದನ್ನು ತಪ್ಪಿಸಲು, ಅವರಲ್ಲಿ ಉಳಿತಾಯದ ಪ್ರವೃತ್ತಿಯನ್ನು ಬೆಳೆಸಲು ಗ್ರಾಮೀಣ ಉಳಿತಾಯ ಬ್ಯಾಂಕ್‌ಗಳನ್ನು ಆರಂಭಿಸಿತು[655]. ಹಾಗೆಯೇ ಗ್ರಾಮೀಣ ಪ್ರದೇಶದ ಪ್ರಮುಖ ಕೈಗಾರಿಕೆಗಳಾದ ಕಬ್ಬು ಅರೆಯುವ, ಬೆಲ್ಲ ತಯಾರಿಸುವ, ಅಕ್ಕಿಮಿಲ್ಲುಗಳ ಸ್ಥಾಪನೆಗೂ ಸಹಕಾರಿ ಸಂಘಗಳು ಮುಂದಾದವು. ವ್ಯಕ್ತಿಗಳಿಗೆ ನೀಡುತ್ತಿದ್ದ ಸಾಲದಲ್ಲಿ ಶೇ. 57ರಷ್ಟನ್ನು ಉತ್ಪಾದನಾ ಉದ್ದೇಶಗಳಿಗೆ ಮತ್ತು ಶೇ. 43ನ್ನು ಹಿಂದಿನ ಸಾಲ ತೀರಿಸಲು, ಮದುವೆ ಮುಂತಾದ ಉದ್ದೇಶಗಳಿಗೂ ನೀಡಲಾರಂಭಿಸಿದ್ದು ಸಾಲಗಾರನು ಹಿಂದಿನ ತಮ್ಮ ಸಾಲಗಳಿಂದ ಮುಕ್ತರಾಗಲು ಅವಕಾಶ ನೀಡಿತು[656]. ಹೀಗೆ ಸಹಕಾರಿ ಸಂಘಗಳ ಸ್ಥಾಪನೆಯಿಂದಾಗಿ ಜನರು ಒಟ್ಟಾಗಿ ಉದ್ಯಮಗಳನ್ನು ಕೈಗೊಳ್ಳುವ ಪ್ರವೃತ್ತಿ ಹೆಚ್ಚಿತು. ಹಾಗೆಯೇ ಶತಮಾನಗಳಿಂದ ರೈತರು, ಕುಶಲ ಕರ್ಮಿಗಳು, ಹಣ ಲೇವಾದೇವಿಗಾರರ, ಮಧ್ಯವರ್ತಿ ವ್ಯಾಪಾರಿಗಳ ಮತ್ತು ಸಾಹುಕಾರರ ಹಿಡಿತದಿಂದ ಬಿಡುಗಡೆಗೊಳ್ಳಲು ಸಹಕಾರ ಸಂಘಗಳು ನೆರವಾದವು.

ಸರ್ಕಾರ ಕೈಗೊಂಡ ಇಂತಹ ಅನೇಕ ಕಾರ್ಯಕ್ರಮಗಳ ನಡುವೆಯೂ ರಾಜ್ಯದ ವಿವಿಧ ಕಡೆಗಳಲ್ಲಿ ಕೃಷಿಕರು ಸಾಲದ ಸುಳಿಗೆ ಸಿಲುಕಿ ನರಳುತ್ತಿರುವುದು ಅನೇಕ ವಿಚಾರಣೆಗಳಿಂದ ತಿಳಿದು ಬಂದಿತು. ವಿಚಾರಣಾ ವರದಿಗಳ ಪ್ರಕಾರ ಮೈಸೂರಿನಲ್ಲಿ ಸರಾಸರಿ ಕೃಷಿಕನ ಸಾಲ 50ರೂಪಾಯಿಗಳಾಗಿದ್ದವು. ಭಾರತದ ಮಟ್ಟದಲ್ಲಿ ಅಶಿಕ್ಷಿತರು ಮತ್ತು ಅಜ್ಞಾನಿಗಳಾದ ಕೃಷಿಕರನ್ನು ಸಾಲದ ಹೊರೆಯಿಂದ ತಪ್ಪಿಸಲು ಅಥವಾ ತಗ್ಗಿಸಲು ಕ್ರಮಕೈಗೊಳ್ಳಬೇಕೆಂಬ ಬೇಡಿಕೆ ಹೆಚ್ಚಾದವು. ಕೃಷಿಕರನ್ನು ಸಾಲದಿಂದ ಬಿಡುಗಡೆಗೊಳಿಸಲು ಭೂ ಅಡಮಾನ ಬ್ಯಾಂಕುಗಳು ಸಾಕಾಗುವುದಿಲ್ಲವೆಂದೂ

---

652. *ಮೈಸೂರ್ ಅಗ್ರಿಕಲ್ಚರ್ ಕ್ಯಾಲೆಂಡರ್, 1929, ಪು. 35*

653. *ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್, 1926-27, ಪು. 46*

654. *ಆನ್ಯುಯಲ್ ರಿಪೋರ್ಟ್ ಆನ್ ದಿ ಕೋ ಆಪರೇಟಿವ್ ಸೊಸೈಟೀಸ್ ಇನ್ ಮೈಸೂರು, 1926-27, ಪು. 198*

655. *ಗೌರ್ನಮೆಂಟ್ ಪ್ರೊಸಿಡಿಂಗ್ ಆರ್ಡರ್; ದಿನಾಂಕ: 22-12-1915*

656. *ಬ್ಲೂ ಬುಕ್ ಜರ್ನಲ್, 1918-19, ಸಂಪುಟ -III, ಸಂಖ್ಯೆ -3, ಪುಟ 299*

ಅಗ್ರಿಕಲ್ಚರಿಸ್ಟ್ಸ್ ರಿಲೀಫ್ ಆಕ್ಟನ್ನು ಜಾರಿಗೊಳಿಸಬೇಕೆಂದು 1926ರಲ್ಲಿ ಲೆಜಿಸ್ಲೇಟಿವ್ ಕೌನ್ಸಿಲ್‌ನ ಸದಸ್ಯರು ಒತ್ತಾಯಿಸಿದರು[657]. ಆದರೆ 1927ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಈ ಕಾಯ್ದೆಯ ಅನೇಕ ಅಂಶಗಳು ದುರ್ಬಳಕೆಗೊಳ್ಳಬಹುದೆಂದೂ, ಕೃಷಿಕರು ತಮಗೆ ಬೇಕಾದ ಕಡಿಮೆ ಮೊತ್ತದ ಸಾಲವನ್ನು ಹಣಲೇವಾದೇವಿಗಾರರಿಂದ ಪಡೆಯಲು ಸಾಧ್ಯವಾಗದೆ ಕಷ್ಟ ಅನುಭವಿಸುತ್ತಾರೆಂದು ವಿರೋಧಗಳು ಬಂದವು. ಆ ಮಸೂದೆಗೆ 91 ಮತಗಳು ವಿರೋಧವಾಗಿಯೂ, 80 ಮತಗಳು ಪರವಾಗಿ ಬಂದವು[658]. ಆದರೂ ಕೃಷಿಕರ ಹಿತದೃಷ್ಟಿಯಿಂದ ಸರ್ಕಾರವು ಶಾಸನದ ಮಹತ್ವವನ್ನರಿತು 1928ರಲ್ಲಿ "ದಿ ಮೈಸೂರ್ ಅಗ್ರಿಕಲ್ಚರಿಸ್ಟ್ಸ್ ರಿಲೀಫ್ ಆಕ್ಟ್"ನ್ನು ಜಾರಿಗೊಳಿಸಿತು. ಈ ಶಾಸನವು ಸಾಲ ತೀರಿಸಲು ವಿಫಲರಾಗಿದ್ದ ಕೃಷಿಕರಿಗೆ ಹಲವು ಕಂತುಗಳಲ್ಲಿ ಎಂಟು ವರ್ಷದ ಅವಧಿಯವರೆಗೂ ಸಾಲ ಹಿಂತಿರುಗಿಸಲು ಅವಕಾಶ ಮಾಡಿಕೊಟ್ಟಿತು. ಸಾಲದ ಹಣಕ್ಕಾಗಿ ಯಾವುದೇ ರೈತನನ್ನು ದಸ್ತಗಿರಿ ಅಥವಾ ಸೆರೆಯಲ್ಲಿಡುವಂತಿರಲಿಲ್ಲ ಹಾಗೂ ಕೇಸುಗಳ ಇತಿಹಾಸವನ್ನಾಧರಿಸಿ ಚಕ್ರಬಡ್ಡಿ ವಿಧಿಸುವುದನ್ನು ನ್ಯಾಯಾಲಯವೇ ತಿರಸ್ಕರಿಸಬಹುದಿತ್ತು[659]. ದೀರ್ಘಾವಧಿಯ ಕೃಷಿಕರ ಸಾಲಗಳನ್ನು ತೀರಿಸಲು ಭೂ ಅಡಮಾನ ಬ್ಯಾಂಕುಗಳನ್ನು 1929ರಲ್ಲಿ ಸ್ಥಾಪಿಸಲಾಯಿತು. ಈ ಬ್ಯಾಂಕುಗಳು ಕೃಷಿಕರ ಸಾಲದ ವಿಷಯದಲ್ಲಿ ರಾಜಿ ಮಾಡಿಸಿ ಸಾಲದಿಂದ ಮುಕ್ತರಾಗಲು ನೆರವು ನೀಡುತ್ತಿದ್ದವು. ಸಾಲಗಾರರ ಸಾಲವು ರಾಜಿಯ ನಂತರವೂ ಅವರ ಆಸ್ತಿಗಿಂತ ಜಾಸ್ತಿ ಇದ್ದರೆ ಅಂತಹವರು ತಮ್ಮ ಆಸ್ತಿಯನ್ನೆಲ್ಲ ಒಪ್ಪಿಸಿದರೆ ಅವರನ್ನು ದಿವಾಳಿಯೆಂದು ಘೋಷಿಸಿ ಸಾಲದ ಬಂಧನದಿಂದ ಬಿಡುಗಡೆಗೊಳಿಸಿ ಅನಂತರ ದುಡಿದು ಬದುಕಲು ಅವಕಾಶವನ್ನು ಮಾಡಿಕೊಡಲಾಯಿತು[660]. ಕೊನೆಗೆ 1936ರಲ್ಲಿ ಮೈಸೂರಿನ ಶಾಸನಸಭೆಗಳು "ದಿ ಮೈಸೂರು ಡೆಟ್‌ಕನ್‌ಸಿಲಿಯೇಷನ್ ಆಕ್ಟನ್ನು" ಅಂಗಿಕರಿಸಿದವು. ಆ ಕಾನೂನು 1937ರಲ್ಲಿ ಜಾರಿಗೆ ಬಂದಿತು. ಈ ಶಾಸನವು ಕೃಷಿಕರನ್ನು ಸಾಲದಿಂದ ಬಿಡುಗಡೆಗೊಳಿಸಲು "ಋಣಭಾರ ರಾಜಿ ಸಮಿತಿ"ಗಳನ್ನು ಸ್ಥಾಪಿಸುವಂತೆ ತಿಳಿಸಿತು. ಈ ಸಮಿತಿಯು ಬಹುಸಂಖ್ಯಾತ ಕೃಷಿಕರನ್ನು ರಾಜಿಯ ಮೂಲಕ ಸಾಲ ತೀರಿಸಲು ನೆರವಾಗಿ ಋಣಮುಕ್ತರನ್ನಾಗಿ ಮಾಡಿತು[661].

ಮೇಲ್ಕಂಡ ವಿವರಣೆಯಿಂದ ತಿಳಿದು ಬರುವ ಅಂಶಗಳೆಂದರೆ ಸರ್ಕಾರವು ಕೃಷಿಕರಿಗೆ ಸಾಲ ಸೌಲಭ್ಯ ನೀಡಲು ನೆರವಾಗುವಲ್ಲಿ ಶಾಸನಗಳನ್ನು ಹೊರಡಿಸಿದ್ದಲ್ಲದೆ ಹಣಕಾಸು ಸಂಸ್ಥೆಗಳನ್ನು ಸ್ಥಾಪಿಸಿತು. ಈ ಸಂಸ್ಥೆಗಳ ಮೂಲಕ 1920-21ರಿಂದ 1933-34ರ ಅವಧಿಯಲ್ಲಿ ಭೂ ಅಭಿವೃದ್ಧಿ ಸಾಲ ಯೋಜನೆ ಮೂಲಕ 22.5 ಲಕ್ಷ ಮತ್ತು ತಕಾವಿ ಸಾಲದ ಮೂಲಕ 17.5 ಲಕ್ಷ ರೂಪಾಯಿಗಳನ್ನು ಸಾಲವಾಗಿ ನೀಡಿತ್ತು. ಸರ್ಕಾರಿ ಸಾಲಕ್ಕೆ ಶೇ. 5.5ರಿಂದ ಶೇ. 6.5 ಬಡ್ಡಿ ದರವಾಗಿತ್ತು. ಸರ್ಕಾರ ಎಲ್ಲ ಕೃಷಿಕರಿಗೂ ಸಾಲ ಸೌಲಭ್ಯ ಕೊಡಲಾಗುತ್ತಿರಲಿಲ್ಲವಾದ್ದರಿಂದ

---

*657. **ಪ್ರೊಸೀಡಿಂಗ್ಸ್ ಆಫ್ ಮೈಸೂರ್ ಲೆಜಿಸ್ಲೇಟಿವ್ ಕೌನ್ಸಿಲ್**, ಜೂನ್ 1926, ಪು. 281*

*658. **ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರಸೆಂಟೇಟಿವ್ ಅಸೆಂಬ್ಲಿ**, ಅಕ್ಟೋಬರ್ 1927, ಪು. 148*

*659. **ದಿ ಮೈಸೂರ್ ಕೋಡ್**, ಸಂಪುಟ-II, ಪು. 110-120*

*660. **ರಿಪೋರ್ಟ್ ಆನ್ ದಿ ಅಗ್ರಿಕಲ್ಚರ್ ರಿಲೀಫ್ ಕಮಿಟಿ ಇನ್ ಮೈಸೂರ್**, 1935, ಪು. 14-15*

*661. **ದಿ ಮೈಸೂರ್ ಕೋಡ್**, ಸಂಪುಟ-I, ಪು. 426*

ಹಣಲೇವಾದೇವಿಗಾರರಿಂದಲೂ ಕೃಷಿಕರು ಸಾಲ ಪಡೆಯುತ್ತಿದ್ದರು. ಈ ಹಣಲೇವಾದೇವಿಗಾರರು ಸಾಲದ ಮೇಲಿನ ಬಡ್ಡಿದರ 24, 48, ಕೆಲವೊಮ್ಮೆ ಶೇ.100 ರಷ್ಟನ್ನು ವಿಧಿಸುತ್ತಿದ್ದರು. ಅಲ್ಲದೆ ಕೊಟ್ಟ ಸಾಲಕ್ಕಿಂತ ಹೆಚ್ಚಿನ ಮೊತ್ತದ ಪತ್ರಕ್ಕೆ ಅಶಿಕ್ಷಿತರಾದ ಕೃಷಿಕರಿಂದ ಸಹಿ ಪಡೆದು ಮೋಸ ಮಾಡುತ್ತಿದ್ದರು[662]. ಗ್ರಾಮೀಣ ಪ್ರದೇಶದ ಖಾಸಗಿ ಹಣಲೇವಾದೇವಿಗಾರರು ಮಾಸಿಕ ಶೇ.5 ರಿಂದ 6 ರಷ್ಟು ಬಡ್ಡಿ ವಿಧಿಸುತ್ತಾರೆಂದೂ, ಕೆಲವೊಮ್ಮೆ ಒಂದು ರೂಪಾಯಿಗೆ ದಿನಕ್ಕೆ ಒಂದು ಪೈಸೆಯಂತೆ ಬಡ್ಡಿ ವಿಧಿಸುತ್ತಾರೆಂದು ಶಾಸನಸಭೆಯ ಸದಸ್ಯರು ವಿಷಯವನ್ನು ಚರ್ಚಿಸಿದರು[663]. ಈ ಎಲ್ಲಾ ಸಮಸ್ಯೆಗಳನ್ನು ಸರಿಪಡಿಸಲು ಸರ್ಕಾರವು 1939ರಲ್ಲಿ "ದಿ ಮೈಸೂರ್ ಮನಿಲೆಂಡರ್ಸ್ ಆಕ್ಟ್"ನ್ನು ಜಾರಿಗೊಳಿಸಿತು. ಈ ಶಾಸನದ ಪ್ರಕಾರ ಸರ್ಕಾರ ಹಣ ಲೇವಾದೇವಿಗಾರರ ಚಟುವಟಿಕೆಗಳ ಬಗ್ಗೆ ನೋಡಿಕೊಳ್ಳಲು ರಿಜಿಸ್ಟ್ರಾರ್ ಒಬ್ಬರನ್ನು ನೇಮಿಸಿತು. ಎಲ್ಲಾ ಹಣಲೇವಾದೇವಿಗಾರರು ಸರ್ಕಾರದ ರಿಜಿಸ್ಟ್ರಾರರ ಬಳಿ ತಾವು ಯಾವ ಪ್ರದೇಶದಲ್ಲಿ ಲೇವಾದೇವಿ ಮಾಡುತ್ತೇವೆಂದು ತಿಳಿಸಿ ಅನುಮತಿ ಪಡೆಯಬೇಕಿತ್ತು. ಸರ್ಕಾರ ಹಣ ಲೇವಾದೇವಿಗಾರರಿಗೆ ಕೆಲವು ನಿಯಮಗಳನ್ನು ರೂಪಿಸಿ ಅವುಗಳನ್ನು ಪಾಲಿಸಿದರೆ ಮಾತ್ರ ಪ್ರತಿವರ್ಷ ಪರವಾನಗಿ ನೀಡುತ್ತಿತ್ತು. ಎಲ್ಲಾ ಲೇವಾದೇವಿಗಾರರು ತಾವು ಯಾರಿಗೆ, ಎಷ್ಟು ಸಾಲ ಕೊಟ್ಟಿದ್ದೇವೆಂದು ಲೆಕ್ಕದ ದಾಖಲೆ ಇಡಬೇಕಿತ್ತು ಮತ್ತು ಅದಕ್ಕೆ ಸಾಲ ಪಡೆದವರಿಂದ ಸಹಿ ಪಡೆದಿರಬೇಕಿತ್ತು. ಈ ಶಾಸನವು ಬಡ್ಡಿಯ ದರವನ್ನು ಭದ್ರತೆಯ ಸಾಲಗಳಿಗೆ ಶೇ. 9 ಹಾಗೂ ಅಭದ್ರತೆಯ ಸಾಲಗಳಿಗೆ ಶೇ. 12 ಎಂದು ನಿಗದಿಗೊಳಿಸಿತು. ಯಾವುದೇ ಕಾರಣಕ್ಕೂ ಬಡ್ಡಿಯ ಮೊತ್ತ ಮೂಲ ಅಸಲಿನ ಮೊತ್ತವನ್ನು ಮೀರಬಾರದೆಂದು ಶಾಸನ ತಿಳಿಸಿತು. ಈ ಮೇಲ್ಕಂಡ ನಿಯಮಗಳನ್ನು ಪಾಲಿಸದ ಹಣ ಲೇವಾದೇವಿಗಾರರನ್ನು ನ್ಯಾಯಾಲಯವು ಈ ಶಾಸನದಡಿಯಲ್ಲಿ ನಿರ್ದಿಷ್ಟ ಅವಧಿ ಅಥವಾ ಶಾಶ್ವತವಾಗಿ ಅವರ ಪರವಾನಗಿ ರದ್ದು ಮಾಡಿ ಆಜ್ಞೆ ಮಾಡಬಹುದಿತ್ತು. ಸಾಲಗಾರರನ್ನು ಹಿಂಸಿಸಿದ ಲೇವಾದೇವಿಗಾರರಿಗೆ ಮೂರು ತಿಂಗಳು ಸೆರೆವಾಸ ಅಥವಾ 500 ರೂಪಾಯಿ ದಂಡ ಅಥವಾ ಎರಡನ್ನೂ ನ್ಯಾಯಾಲಯ ವಿಧಿಸಬಹುದಿತ್ತು[664].

ಹೀಗೆ ಮೇಲ್ಕಂಡಂತೆ ನಾಲ್ವಡಿಯವರ ಸರ್ಕಾರವು ಕೃಷಿಕರನ್ನು ಸಾಲದ ವಿಷವರ್ತುಲದಿಂದ ಬಿಡುಗಡೆಗೊಳಿಸಲು ಶಾಸನಗಳ ಮೂಲಕ ಸಾಲ ಸೌಲಭ್ಯ ನೀಡಲು ಪ್ರಯತ್ನಿಸಿತು. ಅದರಲ್ಲೂ ಗ್ರಾಮೀಣ ಪ್ರದೇಶದ ಕೃಷಿಕರಿಗೆ ಕಡಿಮೆ ಬಡ್ಡಿ ದರದಲ್ಲಿ ಭೂ ಅಭಿವೃದ್ಧಿಗೆ ಸಾಲ ನೀಡಲಾರಂಭಿಸಿದ್ದು ಖಾಸಗಿ ಹಣ ಲೇವಾದೇವಿಗಾರರು ಸಹ ತಮ್ಮ ಬಡ್ಡಿಯ ದರವನ್ನು ತಗ್ಗಿಸಿಕೊಳ್ಳುವಂತೆ ಮಾಡಿತು. ಅಲ್ಲದೆ ಶಾಸನಗಳ ಮೂಲಕ ನಿಯಮಗಳನ್ನು ರೂಪಿಸಿ,

---

*662. ರಿಪೋರ್ಟ್ ಆನ್ ದಿ ಅಗ್ರಿಕಲ್ಚರಿಸ್ಟ್ಸ್ ರಿಲೀಫ್ ಕಮಿಟಿ ಇನ್ ಮೈಸೂರ್, 1935. ಅಗ್ರಿಕಲ್ಚರಲ್ ಫೈನಾನ್ಸ್, ಪು. 15-17*

*663. ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರಸೆಂಟೇಟಿವ್ ಅಸೆಂಬ್ಲಿ, ನಂ.14, ಪು. 273*

*664. ದಿ ಮೈಸೂರ್ ಕೋಡ್, ಸಂಪುಟ-II, ಪು. 464*

ಮೀರಿದವನ್ನು ಶಿಕ್ಷಿಸುವ ಮೂಲಕವೂ ಅವರು ಕೃಷಿಕರನ್ನು ಶೋಷಿಸುವುದನ್ನು ತಡೆಗಟ್ಟಿತು. ಹಾಗೆಯೇ ಕೃಷಿಕರ ಉತ್ಪಾದಿತ ವಸ್ತುಗಳಿಗೂ ಉತ್ತಮ ಮಾರುಕಟ್ಟೆ ಸೌಲಭ್ಯವನ್ನು ಒದಗಿಸುವ ನಿಟ್ಟಿನಲ್ಲೂ ಅನೇಕ ಶಾಸನಗಳನ್ನು ರೂಪಿಸಲಾಯಿತು. ಅವುಗಳಲ್ಲಿ ಪ್ರಮುಖವಾದುದೆಂದರೆ ;

**ಬಿ) ಕೃಷಿ ಉತ್ಪಾದನಾ ಮಾರುಕಟ್ಟೆ ಶಾಸನ**

ಕೃಷಿಕರನ್ನು ಮತ್ತು ಅವರ ಅದಾಯದ ಬಹುಭಾಗವನ್ನು ಮೋಸದಿಂದ ಪಡೆಯುತ್ತಿರುವವರು ಮಾರುಕಟ್ಟೆಗಳಲ್ಲಿನ ವ್ಯಾಪಾರಿಗಳು ಎಂಬುದನ್ನು ಸರ್ಕಾರವು ಸಹಕಾರ ಇಲಾಖೆಯ ಮೂಲಕ ಮಾರುಕಟ್ಟೆ ಸಮೀಕ್ಷೆ ನಡೆಸಿ ತಿಳಿದುಕೊಂಡಿತು. ಆ ಸಮೀಕ್ಷಾ ವರದಿಯು ಉತ್ಪಾದಕರಿಗೆ ಗರಿಷ್ಠ ಆದಾಯವು ತಲುಪಬೇಕೆಂದರೆ ಮಾರುಕಟ್ಟೆ ಹಾಗೂ ತೂಕ ಮತ್ತು ಅಳತೆಯಲ್ಲಿನ ದೋಷಗಳನ್ನು ಹೋಗಲಾಡಿಸಬೇಕೆಂದು ತಿಳಿಸಿತು[665]. ಈ ನಿಟ್ಟಿನಲ್ಲಿ ಸರ್ಕಾರವು ಸಹಕಾರಿ ಮಾರಾಟ ಸಂಘಗಳ ಮೂಲಕ ಕೃಷಿಕರ ಮತ್ತು ಉತ್ಪಾದಕರ ಉತ್ಪಾದನೆಗಳನ್ನು ಉತ್ತಮ ಬೆಲೆಗೆ ಮಾರಾಟ ಮಾಡಲು ಕ್ರಮಕೈಗೊಂಡು 1902ರಲ್ಲೇ ತೂಕ ಮತ್ತು ಅಳತೆಯ ಶಾಸನವೊಂದನ್ನು ಜಾರಿಗೊಳಿಸಲಾಯಿತು. ಮತ್ತೆ 1927ರಲ್ಲಿ ಆ ಕಾಯ್ದೆಗೆ ತಿದ್ದುಪಡಿ ತಂದು ರಾಜ್ಯದಾದ್ಯಂತ ಜಾರಿಗೊಳಿಸಲಾಗಿತ್ತು. ಈ ಕಾಯ್ದೆಯು ತೂಕ ಮತ್ತು ಅಳತೆಯ ಮಾಪಕಗಳನ್ನು ಬಳಸುವವರು ಕಡ್ಡಾಯವಾಗಿ ಅನುಮತಿ ಪಡೆಯಬೇಕೆಂದು ತಿಳಿಸಿತ್ತು[666]. ಇದರೊಂದಿಗೆ ವ್ಯಾಪಾರಿಗಳು ತೂಕ ಮತ್ತು ಅಳತೆಯ ಮೂಲಕ ಕೃಷಿಕನಿಗೆ ಮೋಸ ಮಾಡುವುದು ತಪ್ಪಿತು. ಪ್ರಜಾಪ್ರತಿನಿಧಿ ಸಭೆಯ ಸದಸ್ಯರು 1938ರಲ್ಲಿ ಕೃಷಿ ಮಾರುಕಟ್ಟೆಗಳನ್ನು ನಿಯಮಬದ್ಧಗೊಳಿಸಬೇಕೆಂದು ಬೇಡಿಕೆ ಸಲ್ಲಿಸಿದರು. ಸರ್ಕಾರವು ಆ ಬೇಡಿಕೆಯನ್ನು ಒಪ್ಪಿ 1939ರಲ್ಲಿ "ದಿ ಮೈಸೂರ್ ಅಗ್ರಿಕಲ್ಚರಲ್ ಪ್ರೊಡ್ಯೂಸ್ ಮಾರ್ಕೆಟ್ಸ್ ಆಕ್ಟ್" ಎಂಬ ಶಾಸನವನ್ನು ಜಾರಿಗೊಳಿಸಿತು. ಈ ಶಾಸನದ ಪ್ರಕಾರ ಕೃಷಿಕರು ಮತ್ತು ವ್ಯಾಪಾರಿಗಳು ಸಮವಾಗಿ ಆರು ಸದಸ್ಯರನ್ನೊಂದಿದ ಮಾರುಕಟ್ಟೆ ಸಮಿತಿಗಳು ರೂಪುಗೊಂಡವು. ಈ ಸಮಿತಿಯು ಕೊಳ್ಳುವ ಮತ್ತು ಮಾರುವ ಚಟುವಟಿಕೆಗಳನ್ನು ನಿಯಂತ್ರಿಸುತ್ತಿತ್ತು. ಸಮಿತಿಯು ದಲ್ಲಾಳಿಗಳಿಗೆ, ತೂಕ ಮಾಡುವವರು, ಅಳತೆ ಮಾಡುವವರು ಮತ್ತು ಸಂಗ್ರಹಕಾರರಿಗೆ ಪರವಾನಗಿ ಪತ್ರಗಳನ್ನು ವಿತರಿಸುತ್ತಿತ್ತು. ಸಮಿತಿಯ ತೂಕ ಮತ್ತು ಅಳತೆಯ ಸಾಧನಗಳನ್ನು ಆಗಾಗ್ಗೆ ಪರಿಶೀಲಿಸುತ್ತಿತ್ತು. ಕೊಳ್ಳುವವರ ಮತ್ತು ಮಾರುವವರ ನಡುವಿನ ಬೆಲೆ ಮುಂತಾದ ವ್ಯಾಜ್ಯಗಳನ್ನು ತೀರ್ಮಾನಿಸುತ್ತಿತ್ತು. ಈ ಮಾರುಕಟ್ಟೆ ವ್ಯಾಪ್ತಿಯಲ್ಲಿ ಯಾವುದೇ ಖಾಸಗಿ ಮಾರಾಟ ಚಟುವಟಿಕೆ ಅನುಮತಿಯಿಲ್ಲದೆ ನಡೆಸುವಂತಿರಲಿಲ್ಲ. ಈ ಶಾಸನವನ್ನು

---

*665. ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್, 1937-38, ಪು. 188*

*666. ದಿ ಮೈಸೂರ್ ಕೋಡ್, ಸಂಪುಟ-1, ಪು. 451*

ಉಲ್ಲಂಘಿಸುವವರನ್ನು ನ್ಯಾಯಾಲಯ 500 ರೂಪಾಯಿಗಳವರೆಗಿನ ದಂಡ ವಿಧಿಸುವ ಶಿಕ್ಷೆ ನೀಡಬಹುದಿತ್ತು[667]. ಈ ಶಾಸನದ ಜಾರಿಯೊಂದಿಗೆ ಕೃಷಿಕರ ಉತ್ಪಾದನೆಗಳನ್ನು ಮಧ್ಯವರ್ತಿ ವ್ಯಾಪಾರಿಗಳು ಕುಟಿಲ ಸಂಘಟನೆಯಿಂದ ಬೆಲೆ, ತೂಕ ಅಳತೆಯ ಮೂಲಕ ಮಾಡುತ್ತಿದ್ದ ಮೋಸಗಳು ತಗ್ಗಿದವು. ಕೃಷಿಕರಿಗೆ ತಮ್ಮ ಉತ್ಪಾದನೆಗಳಿಗೆ ಉತ್ತಮ ಬೆಲೆ ದೊರೆತು ಆದಾಯ ಹೆಚ್ಚಿಸಿಕೊಳ್ಳಲು ಆ ಮೂಲಕ ಜೀವನಮಟ್ಟ ಹೆಚ್ಚಿಸಿಕೊಳ್ಳಲು ಸರ್ಕಾರವು ಜಾರಿಗೊಳಿಸಿದ ಮೇಲಿನ ಶಾಸನಗಳು ಸಹಾಯ ಮಾಡಿದವು.

## *II) ಕಾರ್ಮಿಕ ಕಲ್ಯಾಣ ಶಾಸನಗಳು*

ಯೂರೋಪ್‌ನಲ್ಲಿ ಉಂಟಾದ ಕೈಗಾರಿಕಾ ಕ್ರಾಂತಿ, ಅನಂತರದ ನಗರೀಕರಣ, ವಿಸ್ತೃತಗೊಂಡ ಆರ್ಥಿಕತೆಯಿಂದಾಗಿ ಕಾರ್ಮಿಕರ ಸಂಖ್ಯೆ ಹಾಗೂ ಅವರ ಸಮಸ್ಯೆಗಳೂ ಅಧಿಕಗೊಂಡವು. ಕಾರ್ಮಿಕರ ಕಲ್ಯಾಣವನ್ನು ಕುರಿತು ಉದಾರತಾವಾದ, ಸಮಾಜವಾದ, ಸಮತಾವಾದ ಮುಂತಾದ ಚಿಂತನೆಗಳು ಪಾಶ್ಚಿಮಾತ್ಯ ದೇಶಗಳಲ್ಲಿ ಕೆಲ ಪರಿಕಲ್ಪನೆಗಳನ್ನು ಮೂಡಿಸಿದವು. ಆಗ ಕಾರ್ಮಿಕ ಕಾನೂನುಗಳ ಮೂಲಕ ಅವುಗಳನ್ನು ಸಾಧಿಸುವುದು ಕಲ್ಯಾಣ ರಾಜ್ಯದ ಗುರಿಯಾಯಿತು. ಹಾಗಾಗಿ ಕಾರ್ಖಾನೆಗಳಾಧರಿತ ಕೈಗಾರಿಕೀಕರಣವೇ ಕಾರ್ಮಿಕ ಶಾಸನ ಹಾಗೂ ಕಾರ್ಮಿಕ ಕಲ್ಯಾಣದ ಪರಿಕಲ್ಪನೆಗೆ ದಾರಿಮಾಡಿಕೊಟ್ಟಿತೆನ್ನಬಹುದು. ಮೈಸೂರು ಸಂಸ್ಥಾನದಲ್ಲಿ 19ನೇ ಶತಮಾನದ ಎರಡನೇ ದಶಕದಲ್ಲಿ ತೀವ್ರತೆಯನ್ನು ಪಡೆದುಕೊಂಡಿತು. ಆದರೆ ಆ ಹಂತದಲ್ಲಿ ಕಾರ್ಮಿಕರು ಹೆಚ್ಚು ಇದ್ದುದು ಕಾರ್ಖಾನೆಗಳಿಗಿಂತ ಗಣಿಗಾರಿಕೆ ಹಾಗೂ ಪ್ಲಾಂಟೇಷನ್‌ಗಳಲ್ಲಿ. ಕೈಗಾರಿಕೀಕರಣ ಪ್ರಕ್ರಿಯೆ ತೀವ್ರಗೊಂಡಂತೆ ಕಾರ್ಮಿಕರ ಸಂಖ್ಯೆ ಹಾಗೂ ಅವರ ಸಮಸ್ಯೆಗಳೂ ಹೆಚ್ಚಿದವು. ಪಾಶ್ಚಿಮಾತ್ಯ ದೇಶಗಳಲ್ಲಿ ಹುಟ್ಟಿದ ಕಾರ್ಮಿಕ ಶಾಸನಗಳು ಮತ್ತು ಕಲ್ಯಾಣದ ಪರಿಕಲ್ಪನೆ ಬ್ರಿಟಿಷ್ ಭಾರತ ಸರ್ಕಾರದ ಮೂಲಕ ಮೈಸೂರು ಸಂಸ್ಥಾನವನ್ನು ಪ್ರವೇಶಿಸಿದವು. ಪರಿಣಾಮವಾಗಿ ಈ ಕೆಳಕಂಡ ಶಾಸನಗಳು ಮೈಸೂರು ಸಂಸ್ಥಾನದಾದ್ಯಂತ ಜಾರಿಗೊಂಡವು.

### *ಎ) ಕೆಲಸಗಾರರ ಒಪ್ಪಂದ ಉಲ್ಲಂಘನಾ ಶಾಸನ*




667. *ದಿ ಮೈಸೂರ್ ಕೋಡ್, ಸಂಪುಟ-II, ಪು. 468-476*

ಮೈಸೂರು ಸರ್ಕಾರವು 1861ರಲ್ಲಿ ಬ್ರಿಟಿಷ್ ಭಾರತ ಸರ್ಕಾರ ಜಾರಿಗೆ ತಂದಿದ್ದ ಕೆಲಸಗಾರರ ಒಪ್ಪಂದ ಉಲ್ಲಂಘನಾ ಶಾಸನವನ್ನು ತನ್ನ ಪ್ರದೇಶದಲ್ಲೂ ಜಾರಿಗೊಳಿಸಿತು. ಉದ್ಯಮಿಗಳು ಗಣಿಗಾರಿಕೆ, ಪ್ಲಾಂಟೇಷನ್ ಹಾಗೂ ಕಾರ್ಖಾನೆಗಳಲ್ಲಿ ದುಡಿಯಲು ಬೇಕಾದ ಕಾರ್ಮಿಕರಿಗೆ ಮುಂಗಡವಾಗಿ ಹಣ ನೀಡಿ ಒಪ್ಪಂದದ ಮೇಲೆ ಸೇರಿಸಿಕೊಳ್ಳುತ್ತಿದ್ದರು. ಆ ಮುಂಗಡ ಹಣವು ಕಾರ್ಮಿಕರ ಲೆಕ್ಕಕ್ಕೆ ಸೇರುತ್ತಿತ್ತು. ಕಾರ್ಮಿಕರು ಒಪ್ಪಂದದ ದುಡಿಮೆಯ ಕಾಲದಲ್ಲಿ ಮುಂಗಡ ಹಣವನ್ನು ತೀರಿಸದೆ ಒಪ್ಪಂದವನ್ನು ಉಲ್ಲಂಘಿಸುವುದು ಅಪರಾಧವಾಗಿತ್ತು. ಇದು ಕಾರ್ಮಿಕ ಕಾನೂನೇ ಆದರೂ ಕಾರ್ಮಿಕರ ಹಿತಕ್ಕಿಂತ ಉದ್ಯಮಿಗಳ ಹಿತವನ್ನು ಕಾಯುವುದಕ್ಕಾಗಿ ರೂಪುಗೊಂಡದ್ದಾಗಿತ್ತು. ಈ ಕಾನೂನಿನ ನೆರವಿನಿಂದ ಉದ್ಯಮಿಗಳು ಅನೇಕ ವೇಳೆ ಕಾರ್ಮಿಕರನ್ನು ಶೋಷಣೆ ಮಾಡುತ್ತಿದ್ದರು. ಅಲ್ಲದೆ ಬ್ರಿಟಿಷ್ ಭಾರತ ಸರ್ಕಾರದ ನೇರ ಆಳ್ವಿಕೆಯ ಕಾಲದಲ್ಲಿ ಈ ಶಾಸನವು ರೂಪುಗೊಂಡದ್ದಾಗಿದ್ದು ಆ ಅವಧಿಯಲ್ಲಿ ಕಾರ್ಮಿಕರ ಕಲ್ಯಾಣಕ್ಕಿಂತ ಆರ್ಥಿಕ ಶೋಷಣೆಯೇ ಮುಖ್ಯ ಗುರಿಯಾಗಿತ್ತು. ಹಾಗಾಗಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು 1921ರಲ್ಲಿ ಈ ಕಾನೂನಿಗೆ ತಿದ್ದುಪಡಿ ತರಬೇಕೆಂದು, ಅದರಲ್ಲೂ ಸ್ತ್ರೀ ಕಾರ್ಮಿಕರಿಗೆ ದಸ್ತಗಿರಿ ಮತ್ತು ಸೆರೆವಾಸದಂತಹ ನಿಯಮಗಳಿಂದ ವಿನಾಯ್ತಿ ನೀಡಬೇಕೆಂದು ಒತ್ತಾಯಿಸಿದರು[668]. ಇದನ್ನರಿತ ಪ್ಲಾಂಟರುಗಳು ಸ್ತ್ರೀಯರ ಬಗೆಗಿನ ತಿದ್ದುಪಡಿ ಒಪ್ಪಿದರು ಆದರೆ ಸಾಮಾನ್ಯ ಕಾರ್ಮಿಕರ ಬಗ್ಗೆ ಉದಾರತೆ ತೋರಲಿಲ್ಲ. ಆದರೂ ಈ ತಿದ್ದುಪಡಿಯಲ್ಲಿ ನ್ಯಾಯಾಧೀಶರು ಒಪ್ಪಂದವನ್ನು ಉಲ್ಲಂಘಿಸಿದ ಕೇಸು ಸುಳ್ಳೆಂದು ಭಾವಿಸಿದರೆ ಉದ್ಯಮಿಯಿಂದ ಕಾರ್ಮಿಕರಿಗೆ ಪರಿಹಾರ ಕೊಡಿಸಬಹುದಿತ್ತು. ಒಪ್ಪಂದ ಉಲ್ಲಂಘನೆ ರುಜುವಾತಾದರೆ ನ್ಯಾಯಾಧೀಶರು ಕಾರ್ಮಿಕನು ಒಪ್ಪಂದ ಪೂರೈಸಬೇಕೆಂದು ಅಥವಾ ಹಣವನ್ನು ವಾಪಸ್ಸು ನೀಡಲು ನಿರ್ದೇಶಿಸಬಹುದಿತ್ತು. 1930ರ ಅಂತರರಾಷ್ಟ್ರೀಯ ಕಾರ್ಮಿಕ ಸಮಾವೇಶವು ಕೆಲಸಗಾರರ ಒಪ್ಪಂದ ಉಲ್ಲಂಘನಾ ಕಾಯ್ದೆಯನ್ನು ರದ್ದುಗೊಳಿಸಬೇಕೆಂದು ಶಿಫಾರಸ್ಸು ಮಾಡಿತು. ಭಾರತ ಸರ್ಕಾರವು ಶಿಫಾರಸ್ಸಿನಂತೆ ಈ ಕಾನೂನನ್ನು ರದ್ದುಗೊಳಿಸಿತು. ಮೈಸೂರಿನಲ್ಲೂ ಶಾಸನಸಭೆಗಳ ಸದಸ್ಯರ ಒತ್ತಾಯದಿಂದಾಗಿ ಹಾಗೂ ಕಾರ್ಮಿಕ ನಾಯಕರಾದ ಕೆ.ಟಿ. ಭಾಷ್ಯಂ ಮುಂತಾದವರ ಚಳವಳಿಯಿಂದಾಗಿ 1933ರಲ್ಲಿ ಈ ಕಾನೂನನ್ನು ಹಿಂತೆಗೆದುಕೊಳ್ಳಲಾಯಿತು[669]. ಆರಂಭದಲ್ಲಿ ಸರ್ಕಾರವು ಪ್ಲಾಂಟರುಗಳ ಮತ್ತು ಉದ್ಯಮಿಗಳ ಹಿತವನ್ನು ಕಾಯಲು ಬದ್ಧವಾಗಿತ್ತೇ ಹೊರತು ಕಾರ್ಮಿಕರದನ್ನಲ್ಲ. ಆದರೆ ಕಾರ್ಮಿಕರನ್ನು ಉದ್ಯಮದಾರರ ಕಪಿಮುಷ್ಟಿಯಿಂದ ಬಿಡಿಸಿ ಅವರಿಗೆ ರಕ್ಷಣೆ ನೀಡಲು ಸರ್ಕಾರ ಮುಂದಾಗಿ ಗಣಿಗಾರಿಕಾ ಕಾರ್ಮಿಕ ಶಾಸನಗಳನ್ನು ಜಾರಿಗೊಳಿಸಿತು.

---

*668. **ದಿ ಮೈಸೂರ್ ಗೆಜೆಟ್**, ಜೂನ್ 1921*

*669. **ಸದಾಶಿವ ಕೆ. ಪೂರ್ವೋಕ್ತ**, ಪು. 258-261*

### ಬಿ) ಗಣಿಗಾರಿಕಾ ಕಾರ್ಮಿಕ ಶಾಸನಗಳು

19ನೇ ಶತಮಾನದ ಉತ್ತರಾರ್ಧದಲ್ಲಿ ಗಣಿಗಾರಿಕೆಯು ಉದ್ಯಮವಾಗಿ ಮೈಸೂರು ಸಂಸ್ಥಾನದಲ್ಲಿ ಬೆಳವಣಿಗೆಗೊಂಡಿತು. ಪ್ರಮುಖವಾಗಿ ಕೋಲಾರ ಪ್ರದೇಶದಲ್ಲಿ ಈ ಗಣಿಗಾರಿಕೆ ಕೇಂದ್ರೀಕೃತಗೊಂಡಿತ್ತು. ಇಲ್ಲಿನ ಕಾರ್ಮಿಕರ ಆರ್ಥಿಕ, ಸಾಮಾಜಿಕ ಹಾಗೂ ಆರೋಗ್ಯ ಸ್ಥಿತಿಗಳು ದುಸ್ಥಿತಿಯಲ್ಲಿದ್ದವು. ಅವರ ಜೀವನವು ಏಕ ಪ್ರಕಾರವಾಗಿದ್ದು ಸದಾ ಸಾಲಕ್ಕೆ ಸಿಲುಕಿರುತ್ತಿದ್ದರು. ಗಣಿ ಕಾರ್ಮಿಕರಲ್ಲಿ ಕಂಪನಿಗೆ ಸೇರಿದವರು ಹಾಗೂ ಕಂಟ್ರಾಕ್ಟರುಗಳಿಗೆ ಸೇರಿದವರೆಂಬ ಎರಡು ವರ್ಗದವರಿದ್ದರು. ಕಂಪನಿಗೆ ಸೇರಿದ ಕಾರ್ಮಿಕರು ಶಾಸನಗಳ ವ್ಯಾಪ್ತಿಗೊಳಪಟ್ಟಿದ್ದರು. ಆದರೆ ಕಂಟ್ರಾಕ್ಟರುಗಳ ಕಾರ್ಮಿಕರಲ್ಲ. ಅಲ್ಲದೇ ವೇತನ, ಸೌಲಭ್ಯ ಯಾವುದರಲ್ಲೂ ಕಂಟ್ರಾಕ್ಟರುಗಳ ಕಾರ್ಮಿಕರು ಹೀನಸ್ಥಿತಿಯಲ್ಲಿದ್ದರು[670]. ಹಾಗಾಗಿ ಗಣಿಕಾರ್ಮಿಕರ ಹಿತರಕ್ಷಣೆಗಾಗಿ 1897ರಲ್ಲಿ ಸರ್ಕಾರವು "ದಿ ಮೈಸೂರ್ ಮೈನ್ಸ್ ರೆಗ್ಯುಲೇಷನ್" ಎಂಬ ಕಾಯ್ದೆಯನ್ನು ಜಾರಿಗೆ ತಂದಿತು. ಈ ಶಾಸನವು ಕಾರ್ಮಿಕರ ಜೀವ ಹಾಗೂ ರಕ್ಷಣೆಗೆ ಕ್ರಮ ಕೈಗೊಳ್ಳಬೇಕೆಂದೂ, ಅಪಘಾತಗಳು ಸಂಭವಿಸಿದ್ದರೆ ಸರ್ಕಾರಕ್ಕೆ ವರದಿ ಮಾಡಬೇಕೆಂದು ತಿಳಿಸಿತು. ಅಲ್ಲದೆ ಗಣಿಗಾರಿಕಾ ಪ್ರದೇಶದಲ್ಲಿ ನೈರ್ಮಲ್ಯವನ್ನು ಕಾಪಾಡಲು ಒಳಚರಂಡಿ, ಮೂತ್ರಾಲಯಗಳನ್ನು ಸದಾ ಶುಚಿಯಾಗಿಡಬೇಕೆಂದು ತಿಳಿಸಿತು. ಕಾಲರಾ ಮುಂತಾದ ಅಂಟುಜಾಡ್ಯಗಳನ್ನು ತಡೆಗಟ್ಟಲು ನಿಯಮಗಳನ್ನು ರೂಪಿಸಲಾಗಿತ್ತು. ಮತ್ತೆ ಈ ಗಣಿ ಕಾಯ್ದೆಗೆ ತಿದ್ದುಪಡಿ ಮಾಡಿ 1906ರಲ್ಲಿ ಜಾರಿಗೊಳಿಸಲಾಯಿತು. ಈ ಶಾಸನವು ಗಣಿಗಾರಿಕಾ ಪ್ರದೇಶದಲ್ಲಿ ನೈರ್ಮಲ್ಯವನ್ನು ಕಾಪಾಡಲು ಸ್ಯಾನಿಟರಿ ಬೋರ್ಡನ್ನು ನೇಮಿಸಿತು. ಕಾರ್ಮಿಕರಿಗೆಲ್ಲಾ ಚುಚ್ಚುಮದ್ದನ್ನು ಕಡ್ಡಾಯಗೊಳಿಸಲಾಯಿತು. ಆದರೆ ಈ ಶಾಸನದಲ್ಲಿ ಗಾಯಗೊಂಡ ಕಾರ್ಮಿಕರಿಗೆ ಪರಿಹಾರ ನೀಡುವ ಬಗ್ಗೆ ಹಾಗೂ ಕೆಲಸದ ಅವಧಿಯ ಬಗ್ಗೆ ಏನನ್ನೂ ಹೇಳಿರಲಿಲ್ಲ. ಆದರೆ 1928ರ ನಂತರ ಶಾಸನಸಭೆಗಳಲ್ಲಿ ಸದಸ್ಯರು ಕಾರ್ಮಿಕರ ಸೌಲಭ್ಯಗಳಿಗಾಗಿ ಬೇಡಿಕೆ ಸಲ್ಲಿಸಲಾರಂಭಿಸಿದರು. ಆಗ 1930ರ ನಂತರ ಉದ್ಯಮಿಗಳು 'ಅಟೆಂಡೆನ್ಸ್ ಬೋನಸ್' ಮತ್ತು 'ಸರ್ವಿಸ್ ಗ್ರಾಚ್ಯುಯಿಟಿ' ಸೌಲಭ್ಯಗಳನ್ನು ಗಣಿ ಕಾರ್ಮಿಕರಿಗೆ ನೀಡಿದರು. ಕಾರ್ಮಿಕರ ಸ್ಥಿತಿಗತಿ ಸಮೀಕ್ಷಿಸಲು ಎಂ.ಎ. ಶ್ರೀನಿವಾಸನ್‌ರನ್ನು ಸರ್ಕಾರ ನೇಮಿಸಿತು. ಅವರು ನೀಡಿದ ವರದಿಯಲ್ಲಿ ಕಾರ್ಮಿಕರ ಸಾಮಾನ್ಯ ಜೀವನಮಟ್ಟ ಹೆಚ್ಚಿಸಲು ಕೆಲ ಸಲಹೆಗಳನ್ನು ಸರ್ಕಾರಕ್ಕೆ ನೀಡಿತು[671]. ಆದರೆ ಕಾರ್ಮಿಕರ ವೇತನ, ಕೆಲಸದ ವೇಳೆ ಯಾವುದರ ಬಗ್ಗೆಯೂ ವರದಿಯಲ್ಲಿ ಏನನ್ನೂ ಹೇಳಲಿಲ್ಲವಾದರೂ ಸರ್ಕಾರ ಚಿನ್ನದ ಗಣಿ ಕಂಪನಿಗಳಿಗೆ ವಿರುದ್ಧವಾಗಿ ಕಾರ್ಮಿಕರಿಗೆ ಸೌಲಭ್ಯ ಒದಗಿಸಲು ಸಿದ್ಧವಿರಲಿಲ್ಲ.

---

*670. ಪ್ರೇಮ್‌ಚಂದ್ ಮಲ್ಹೋತ್ರ, ಇಂಡಿಯನ್ ಲೇಬರ್ ಮೂವ್‌ಮೆಂಟ್-ಎ ಸರ್ವೇ, ದೆಹಲಿ, 1949, ಪು. 32*

### ಸಿ) ಕಾರ್ಖಾನಾ ಕಾರ್ಮಿಕರ ಶಾಸನಗಳು

ಮೈಸೂರು ಸಂಸ್ಥಾನದಲ್ಲಿ 20ನೇ ಶತಮಾನದ ಆರಂಭದ ನಂತರ ಕೈಗಾರಿಕೆಗಳು ಅಭಿವೃದ್ಧಿಗೊಂಡಂತೆ ಅಲ್ಲಿನ ಕಾರ್ಮಿಕರ ಸಂಖ್ಯೆ ಹಾಗೂ ಅವರ ಸಮಸ್ಯೆಗಳೂ ಹೆಚ್ಚಿದವು. ಕೈಗಾರಿಕೋದ್ಯಮಿಗಳು ಮತ್ತು ಸರ್ಕಾರ ಅಪಾರ ಬಂಡವಾಳವನ್ನು ಹೂಡಿ ಯಾಂತ್ರೀಕೃತ ಕೈಗಾರಿಕೆಗಳನ್ನು ಸ್ಥಾಪಿಸಿದರು. ಅವುಗಳಲ್ಲಿ ಅಪಾರ ಸಂಖ್ಯೆಯ ಪುರುಷರು, ಸ್ತ್ರೀಯರು ಮತ್ತು ಮಕ್ಕಳು ಕಾರ್ಮಿಕರಾಗಿ ದುಡಿಯತೊಡಗಿದರು. ಯಾಂತ್ರೀಕೃತ ಕಾರ್ಖಾನೆಗಳಲ್ಲಿ ಯಂತ್ರಗಳಿಂದ ಕಾರ್ಮಿಕರಿಗಾಗುವ ಅಪಘಾತಗಳನ್ನು ತಡೆಯಲು ಯಾವುದೇ ರಕ್ಷಣಾ ಕ್ರಮಗಳನ್ನು ಕೈಗೊಂಡಿರಲಿಲ್ಲ. ಅಕಸ್ಮಾತ್ ಅಪಘಾತವಾಗಿ ಕಾರ್ಮಿಕ ಗಾಯಗೊಂಡರೆ ಅಥವಾ ಅಂಗವಿಹೀನನಾದರೆ ತಕ್ಷಣವೇ ಕೆಲಸದಿಂದ ವಜಾಗೊಳಿಸಲಾಗುತ್ತಿತ್ತು. ದಿನಂಪ್ರತಿ ಅಪಘಾತಗಳು ಸಾಮಾನ್ಯವಾಗಿದ್ದವು. ಅದಕ್ಕೆ ಯಾವುದೇ ಪರಿಹಾರವನ್ನು ಅವರಿಗೆ ನೀಡುತ್ತಿರಲಿಲ್ಲ. ಅವರಿಗೆ ನೀಡುತ್ತಿದ್ದ ವೇತನವೂ ಬಹಳ ಕಡಿಮೆಯಿತ್ತು. ಹಾಗಾಗಿ ಮೈಸೂರಿನ ಕಾರ್ಖಾನಾ ಕಾರ್ಮಿಕರು ನಗರಗಳಲ್ಲಿನ ಕೊಳಚೆ ಪ್ರದೇಶಗಳಲ್ಲಿ ವಾಸಮಾಡುತ್ತಾ ಕಷ್ಟಕರವಾದ ಜೀವನವನ್ನು ನಡೆಸುತ್ತಿದ್ದರು. ಇವುಗಳನ್ನು ಗಮನಿಸಿದ ಸರ್ಕಾರ ಕಾರ್ಖಾನಾ ಕಾರ್ಮಿಕರ ಹಿತರಕ್ಷಣೆ ಮಾಡಲು ಬ್ರಿಟಿಷರು 1881ರಲ್ಲಿ ಜಾರಿಗೆ ತಂದಿದ್ದ ಕಾರ್ಖಾನಾ ಕಾಯ್ದೆಗಳನ್ನು ತಾನೂ ಮೈಸೂರಿನಲ್ಲಿ 1892ರಲ್ಲಿ ಜಾರಿಗೆ ತಂದಿತು[672]. ಆ ಮೂಲಕ ಸರ್ಕಾರ ಕೈಗಾರಿಕೆಗಳು ಮತ್ತು ಕಾರ್ಮಿಕರ ನಡುವೆ ಮಧ್ಯೆ ಪ್ರವೇಶಿಸುವ ಅಧಿಕಾರ ಪಡೆಯಿತು. ಎಲ್ಲ ಕಾರ್ಖಾನೆಗಳನ್ನು ಪರಿವೀಕ್ಷಣೆ ಮಾಡಲು ಜಿಲ್ಲಾ ಮ್ಯಾಜಿಸ್ಟ್ರೇಟರನ್ನು ನೇಮಿಸಲಾಯಿತು. 14 ವರ್ಷದ ಕೆಳಗಿನ ಮಕ್ಕಳನ್ನು ಕಾರ್ಖಾನೆಗಳಲ್ಲಿ ಕಾರ್ಮಿಕರನ್ನಾಗಿ ನೇಮಿಸುವಂತಿಲ್ಲ ಹಾಗೂ ದಿನಕ್ಕೆ ಏಳು ಗಂಟೆಗಿಂತ ಹೆಚ್ಚು ಕಾಲ ಮಕ್ಕಳನ್ನು ದುಡಿಸಿಕೊಳ್ಳುವಂತಿಲ್ಲ ಎಂದು ಈ ಶಾಸನ ನಿರ್ದೇಶಿಸಿತು. ಕಾರ್ಮಿಕರ ಕೆಲಸದ ನಡುವೆ ಪೂರ್ಣ ಅರ್ಧ ಗಂಟೆ ಕಡ್ಡಾಯವಾಗಿ ಬಿಡುವು ನೀಡಬೇಕು, ಮಧ್ಯಾಹ್ನ 12ರಿಂದ 2ರ ನಡುವೆ ಊಟಕ್ಕೆ ಬಿಡುವು ನೀಡಬೇಕೆಂದು ಈ ಶಾಸನ ತಿಳಿಸಿತು. ಭಾನುವಾರ ರಜಾದಿನವೆಂದೂ, ಯಾರಾದರೂ ಯಂತ್ರಗಳ ರಿಪೇರಿ ಮುಂತಾದ ಕೆಲಸವನ್ನು ಭಾನುವಾರ ಮಾಡಿದರೆ ಅದಕ್ಕೆ ಪರಿಹಾರವಾಗಿ ಮುಂದಿನ ದಿನಗಳಲ್ಲಿ ರಜೆ ಕೊಡಬೇಕಿತ್ತು. ಸ್ತ್ರೀಯರನ್ನು ಅಪರಾಹ್ನ 5 ಗಂಟೆಗೆ ಮತ್ತು ರಾತ್ರಿ 8ರ ನಂತರ ಕೆಲಸಕ್ಕೆ ನೇಮಿಸಿಕೊಳ್ಳುವಂತಿರಲಿಲ್ಲ ಹಾಗೂ ಯಾವ ಸ್ತ್ರೀಯನ್ನೂ 11ಗಂಟೆಗೂ ಹೆಚ್ಚು ಕಾರ್ಖಾನೆಗಳಲ್ಲಿ ದುಡಿಸಿಕೊಳ್ಳುವಂತಿರಲಿಲ್ಲ[673]. ಹೀಗೆ ಮೊದಲ ಬಾರಿಗೆ ಈ ಶಾಸನವು ಕಾರ್ಖಾನಾ ಕಾರ್ಮಿಕರ ದುಡಿಯುವ ಅವಧಿ, ರಕ್ಷಣೆ ಮುಂತಾದವುಗಳನ್ನು ಶಾಸನಬದ್ಧಗೊಳಿಸಿತು. ಕಾರ್ಖಾನೆಗಳು ವಿದ್ಯುತ್ ಬಳಸಲಾರಂಭಿಸಿದ ನಂತರ ಅನೇಕ

---

*671. ಸದಾಶಿವ ಕೆ., ಪೂರ್ವೋಕ್ತ, ಪು. 261-268*

*672. ಅದೇ., ಪು. 256 ಮತ್ತು 271*

ಹೊಸ ಸಮಸ್ಯೆಗಳು ಕಾರ್ಖಾನಾ ಕಾರ್ಮಿಕರ ನಡುವೆ ಕಾಣಿಸಿಕೊಂಡವು. ಹಾಗೆಯೇ ಕಾರ್ಖಾನೆಗಳ ಸಂಖ್ಯೆ ಮತ್ತು ಕಾರ್ಮಿಕರ ಸಂಖ್ಯೆಯೂ ಹೆಚ್ಚಿದವು. ಸರ್ಕಾರವು 1914ರಲ್ಲಿ ಹಿಂದಿನ ಕಾರ್ಖಾನಾ ಕಾಯ್ದೆಗೆ ತಿದ್ದುಪಡಿ ತಂದು ಹೊಸ ಶಾಸನವನ್ನು ಜಾರಿಗೊಳಿಸಿತು. ಈ ಶಾಸನದ ಪ್ರಕಾರ ಎಲ್ಲ ಕಾರ್ಖಾನೆಗಳೂ ತಮ್ಮಲ್ಲಿನ ಕಾರ್ಮಿಕರ ಹೆಸರು, ವಿಳಾಸ, ಅವರ ಕೆಲಸದ ಸ್ವರೂಪ ಮುಂತಾದವುಗಳನ್ನು ಸರ್ಕಾರಕ್ಕೆ ವರದಿ ಮಾಡಬೇಕಿತ್ತು. ಕೆಲಸ ಮಾಡುವ ಕಾರ್ಖಾನೆಯ ಜಾಗವು ಶುಚಿಯಾಗಿ, ಉತ್ತಮ ಗಾಳಿ ಬೆಳಕುಗಳಿಂದ ಕೂಡಿರಬೇಕಿತ್ತು. ಶುದ್ಧ ಕುಡಿಯುವ ನೀರು, ಉತ್ತಮ ಶೌಚಾಲಯ ವ್ಯವಸ್ಥೆಯನ್ನು ಕಾರ್ಮಿಕರಿಗೆ ಒದಗಿಸಬೇಕಿತ್ತು. ಬೆಂಕಿ ಅನಾಹುತ ಮುಂತಾದ ಅವಗಢಗಳು ಸಂಭವಿಸಿದರೆ ಕಾರ್ಮಿಕರು ತಪ್ಪಿಸಿಕೊಂಡು ಹೊರಹೋಗಲು ವಿಶಾಲವಾದ ಬಾಗಿಲುಗಳ ವ್ಯವಸ್ಥೆ ಮಾಡಿರಬೇಕಿತ್ತು. ಒಟ್ಟಾರೆ ಈ ಶಾಸನವು ಕಾರ್ಮಿಕರ ರಕ್ಷಣೆಗೆ ಹೆಚ್ಚು ಆದ್ಯತೆ ನೀಡಿತ್ತು. ಕಾರ್ಮಿಕರು ಸತತವಾಗಿ ಆರು ಗಂಟೆ ಕೆಲಸ ಮಾಡಿದರೆ ಅರ್ಧ ಗಂಟೆ ಬಿಡುವು ನೀಡಬೇಕಿತ್ತು. ಯಂತ್ರದ ಸುತ್ತಲೂ ತಂತಿಯನ್ನು ಹಾಕಿ ಅಪಘಾತಗಳಾಗುವುದನ್ನು ತಡೆಯಬೇಕಿತ್ತು. ಅಪಘಾತಗಳಾಗಿ ಗಾಯ ಅಥವಾ ಸಾವುಂಟಾದರೆ ಸರ್ಕಾರಕ್ಕೆ ವರದಿ ಮಾಡಬೇಕಿತ್ತು. ಕಾರ್ಖಾನೆಯ ಮಾಲೀಕರದು ತಪ್ಪೆಂದಾದರೆ 200 ರೂಪಾಯಿಗಳವರೆಗೆ ದಂಡ ವಿಧಿಸಬಹುದಿತ್ತು[674]. ಆದರೆ ಈ ಶಾಸನವು ಅಷ್ಟು ಪರಿಣಾಮಕಾರಿಯಾಗಿ ಬಳಸಲ್ಪಡುತ್ತಿರಲಿಲ್ಲ. ಅಪಘಾತಗಳು ಹೆಚ್ಚಾದವು, ವೇತನದ ಹೆಚ್ಚಳಕ್ಕೆ ಮುಷ್ಕರಗಳು ನಡೆಯಲಾರಂಭಿಸಿದವು. ಕೊನೆಗೆ ಸರ್ಕಾರ 1925ರಲ್ಲಿ ಹಿಂದಿನ ಕಾರ್ಖಾನಾ ಕಾಯ್ದೆಗೆ ತಿದ್ದುಪಡಿ ತಂದು ಜಾರಿಗೊಳಿಸಿತು. ಕಾರ್ಖಾನೆಗಳಲ್ಲಿ 11 ವರ್ಷದ ಕೆಳಗಿನ ಮಕ್ಕಳಿಂದ ದುಡಿಸಿಕೊಳ್ಳುವಂತಿಲ್ಲವೆಂದೂ, ನೇಮಿಸಿಕೊಂಡರೂ 5 ½ ಗಂಟೆ ಮಾತ್ರ ದುಡಿಸಿಕೊಳ್ಳಬೇಕೆಂದು ತಿಳಿಸಲಾಗಿತ್ತು. ಈ ಶಾಸನವನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿದ್ದರಿಂದ 1930-31ರಲ್ಲಿ ಬಾಲ ಕಾರ್ಮಿಕರ ಸಂಖ್ಯೆ ಶೇ. 13.5ರಷ್ಟು ತಗ್ಗಿತು. ಸೀಸ, ಸತು ಬಳಸುವಂತಹ ಕಾರ್ಖಾನೆಗಳಲ್ಲಿ ಸ್ತ್ರೀಯರನ್ನು ಕಾರ್ಮಿಕರಾಗಿ ದುಡಿಯುವುದನ್ನ ಅವರ ಆರೋಗ್ಯ ಮತ್ತು ರಕ್ಷಣೆಯ ದೃಷ್ಟಿಯಿಂದ ನಿರ್ಬಂಧಿಸಲಾಯಿತು[675]. ಮೈಸೂರು ಸರ್ಕಾರವು ಕಾರ್ಖಾನಾ ಕಾರ್ಮಿಕರಿಗೆ ರಕ್ಷಣೆ ಮತ್ತು ಸೌಲಭ್ಯ ವಿಸ್ತರಿಸಲು ಹಿಂದಿನ ಕಾಯ್ದೆಗೆ ಮತ್ತೆ 1936ರಲ್ಲಿ ತಿದ್ದುಪಡಿ ತಂದಿತು. ಈ ಶಾಸನವು ಕಾರ್ಖಾನೆಯ ಸಮುಚ್ಛಯವು ಉತ್ತಮ ಗಾಳಿ, ಬೆಳಕು, ಮೂಲ ಸೌಲಭ್ಯಗಳನ್ನು ಹೊಂದಿರಬೇಕೆಂಬುದನ್ನು ಕಟ್ಟುನಿಟ್ಟುಗೊಳಿಸಲಾಯಿತು. ಕಾರ್ಮಿಕರಿಗೆ ವಿಶ್ರಾಂತಿ ಪಡೆಯಲು ಪ್ರತ್ಯೇಕ ಕೊಠಡಿಯನ್ನು ಒದಗಿಸಬೇಕು, ಸ್ತ್ರೀ ಕಾರ್ಮಿಕರು 50 ಜನರಿದ್ದರೆ ಅವರ ಆರುವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳು ಅಲ್ಲಿರಲು ಪ್ರತ್ಯೇಕ ಕೊಠಡಿಯನ್ನು ಒದಗಿಸಬೇಕಿತ್ತು. ವಯಸ್ಕ ಕಾರ್ಮಿಕರಿಗೂ ವಾರಕ್ಕೆ 54 ಗಂಟೆಗಳು ಮಾತ್ರ ದುಡಿಯಬೇಕೆಂದು ನಿಗಧಿಗೊಳಿಸಲಾಯಿತು.

---

*673. **ಸದಾಶಿವ ಕೆ., ಪೂರ್ವೋಕ್ತ**, ಪು. 272-274*

*674. **ಇಂಡಸ್ಟ್ರೀಸ್ ಅಂಡ್ ಕಾಮರ್ಸ್ ಫೈಲ್ಸ್**, ದಿ ಮೈಸೂರ್ ಫ್ಯಾಕ್ಟರೀಸ್ ರೆಗ್ಯುಲೇಷನ್ ನಂ. 128 ಆಫ್ 1915*

*675. **ರಿಪೋರ್ಟ್ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್**, 1928-29, ಪು. 9-23 ಮತ್ತು 1932-35, ಪು. 22*

ಈ ನಿಯಮಗಳನ್ನು ಮೀರಿದ ಕಾರ್ಖಾನೆಯ ಮಾಲೀಕರಿಗೆ 100ರಿಂದ ಆಗಾಗ್ಗೆ ಉಲ್ಲಂಘಿಸಿದರೆ 1,000ರೂಪಾಯಿಗಳವರೆಗೆ ದಂಡ ವಿಧಿಸಬಹುದಿತ್ತು[676]. ಹೀಗೆ ಮೈಸೂರು ಸರ್ಕಾರವು ಕಾರ್ಖಾನಾ ಕಾಯ್ದೆಗೆ ಆಗಾಗ್ಗೆ ತಿದ್ದುಪಡಿ ತಂದು ಕಾರ್ಖಾನಾ ಕಾರ್ಮಿಕರ ಆರೋಗ್ಯ, ರಕ್ಷಣೆಗೆ ಕ್ರಮಕೈಗೊಂಡಿತು.

ನಾಲ್ವಡಿಯವರ ಸರ್ಕಾರವು ಜಾರಿಗೆ ತಂದ ಮೇಲಿನ ಕಾರ್ಖಾನೆ ಕಾರ್ಮಿಕರ ಶಾಸನಗಳಲ್ಲಿ ಕಾರ್ಮಿಕರು ಅಪಘಾತಕ್ಕೀಡಾದರೆ ಪರಿಹಾರ ಪಡೆಯುವ ನಿಯಮಗಳನ್ನೊಂದಿರಲಿಲ್ಲ. ಹಾಗಾಗಿ 1929ರಲ್ಲಿ "ದಿ ವರ್ಕ್‌ಮೆನ್ಸ್ ಕಾಂಪೆನ್‌ಸೇಷನ್ ಆಕ್ಟ್" ಎಂಬ ಶಾಸನವನ್ನು ಜಾರಿಗೊಳಿಸಿ ಕಾರ್ಖಾನೆಗಳಲ್ಲಿ ಅಪಘಾತಕ್ಕೀಡಾದವರು ಪರಿಹಾರ ಪಡೆಯಲು ನೆರವಾಯಿತು. ಪರಿಹಾರದ ಮೊತ್ತವನ್ನು ನಿರ್ಧರಿಸಲು ನೇಮಕಗೊಂಡ ಸಮಿತಿಯು ಅಪಘಾತಕ್ಕೀಡಾಗಿ ಸತ್ತರೆ 24 ತಿಂಗಳ ವೇತನ ಅಥವಾ 2,000 ರೂಪಾಯಿಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಮೊತ್ತವೆಂದು ನಿರ್ಧರಿಸಿತು. ಗಾಯಗೊಂಡ ಕಾರ್ಮಿಕನಿಗೆ ಶಕ್ತನಾಗುವವರೆಗೂ ಅರ್ಧ ತಿಂಗಳ ಸಂಬಳ ಕೊಡುವಂತೆ ತೀರ್ಮಾನವಾಯಿತು. ಈ ಕಾಯ್ದೆಯು 1933ರಲ್ಲಿ ಮತ್ತು 1942ರಲ್ಲಿ ತಿದ್ದುಪಡಿಗಳನ್ನು ಕಂಡಿತು[677]. 1931-32ರಲ್ಲಿ ಒಟ್ಟು 2,167 ಅಪಘಾತಗಳಿಗೆ 73,712 ರೂಪಾಯಿಗಳನ್ನು ಪರಿಹಾರವಾಗಿ ನೀಡಲಾಯಿತು[678]. ಹೀಗೆ ಕಾರ್ಮಿಕರಿಗೆ ಪರಿಹಾರ ನೀಡುವ ಮೂಲಕ ಕಾರ್ಮಿಕರಿಗೆ ಹಾಗೂ ಅವರ ಕುಟುಂಬದವರಿಗೆ ನೆರವು ಹಾಗೂ ರಕ್ಷಣೆ ಒದಗಿಸಿದಂತಾಯಿತು. ಕಾರ್ಮಿಕರು ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಮತ್ತು ತಮ್ಮ ಹಕ್ಕು ಹಾಗೂ ಸೌಲಭ್ಯಗಳನ್ನು ಶಾಂತಿಯುತವಾಗಿ ಪಡೆಯಲು ಸಂಘಟನೆಗಳನ್ನು ಸ್ಥಾಪಿಸಿಕೊಳ್ಳಲು ಮೈಸೂರು ಸರ್ಕಾರವು 1941ರಲ್ಲಿ ದಿ ಮೈಸೂರ್ ಲೇಬರ್ ಆಕ್ಟ್ ಮೂಲಕ ಅವಕಾಶ ಮಾಡಿಕೊಟ್ಟಿತು[679]. ಹಾಗೆಯೇ ಕೆಮ್ಮನಗುಂಡಿಯ ಬಳಿಯಲ್ಲಿ, ಭದ್ರಾವತಿಯ ಕಾರ್ಖಾನೆಗೆ ಕಬ್ಬಿಣದ ಅದುರನ್ನು ಸಾಗಿಸುವ ಸಂದರ್ಭದಲ್ಲಿ ಕೆಲಸ ಮಾಡುವ ಕೂಲಿ ಮಕ್ಕಳಿಗಾಗಿ ಜಾರುಗುಪ್ಪೆ ಮುಂತಾದವುಗಳನ್ನು ಕಟ್ಟಿಸಿ ಕೊಡಲಾಯಿತು[680].

ಒಟ್ಟಾರೆ ಆಧುನಿಕ ಕಾಲಕ್ಕೆ ತಕ್ಕಂತೆ ಬೆಳವಣಿಗೆಗೊಂಡ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುತ್ತಲೇ ಅಲ್ಲಿನ ಕಾರ್ಮಿಕರ ಕಲ್ಯಾಣಕ್ಕಾಗಿ, ನಾಲ್ವಡಿ ಮತ್ತು ಅವರ ಸರ್ಕಾರ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದ್ದಲ್ಲದೆ ಅವರಿಗೆ ಮೂಲಭೂತ ಸೌಲಭ್ಯ, ಆರೋಗ್ಯ ಮತ್ತು ರಕ್ಷಣೆಗಳನ್ನೊದಗಿಸುವ ಮೂಲಕ ಅವರ ದುಡಿಮೆಯ ಶಕ್ತಿಯನ್ನು ಹಾಗೂ

---

676. *ಫ್ಯಾಕ್ಟರೀಸ್ ಮ್ಯಾನ್ಯುಯಲ್, 1942, ಗವರ್ನ್‌ಮೆಂಟ್ ಆಫ್ ಮೈಸೂರ್, ಪು. 4-25*
677. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ಲೆಜಿಸ್ಲೇಟಿವ್ ಕೌನ್ಸಿಲ್, 1928, ಪು. 73-78*
678. *ಮೈಸೂರ್ ಅಡ್ಮಿನಿಸ್ಟ್ರೇಟಿವ್ ರಿಪೋರ್ಟ್ಸ್, 1931-32, ಪು. 38*
679. *ಅದೇ., 1941-42, ಪು.15-17*
680. *ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 540*

ಜೀವನಮಟ್ಟವನ್ನು ಹೆಚ್ಚಿಸಲು ಶ್ರಮಿಸಿತ್ತೆಂದೇ ಹೇಳಬಹುದು. ಹಾಗೆಯೇ ಇಡೀ ಸಂಸ್ಥಾನದ ಪ್ರಜೆಗಳ ಭೌತಿಕ ಬೆಳವಣಿಗೆಯ ಹಿನ್ನೆಲೆಯಲ್ಲಿ ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯೀಕರಣಕ್ಕೆ ಸಂಬಂಧಿಸಿದಂತೆಯೂ ಕಾರ್ಯಯೋಜನೆಗಳನ್ನು, ಶಾಸನಗಳನ್ನು ನಾಲ್ವಡಿ ಮತ್ತು ಸರ್ಕಾರ ರೂಪಿಸಲು ಮುಂದಾದರು.

### *iii) ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯೀಕರಣದ ಶಾಸನಗಳು*

ಸಮಾಜದ ಭೌತಿಕ ಬೆಳವಣಿಗೆಯನ್ನು ಸಾಧಿಸುವಲ್ಲಿ ಮೈಸೂರು ಸಂಸ್ಥಾನದ ಆಡಳಿತಗಾರರು ಬಹು ಹಿಂದಿನಿಂದಲೂ ಪ್ರಧಾನ ಪಾತ್ರ ವಹಿಸುತ್ತಾ ಬಂದಿದ್ದಾರೆ. ಸಂಸ್ಥಾನದ ಪ್ರಜೆಗಳ ಜೀವನಾರೋಗ್ಯವನ್ನು ಕಾಪಾಡುವಲ್ಲಿ ಇವರ ಪ್ರಯತ್ನ ಬಹು ಹಿರಿದಾದದ್ದು. ಭಾರತದ ಮಟ್ಟದಲ್ಲೇ ಪ್ರಪ್ರಥಮ ಬಾರಿಗೆ ಪಾಶ್ಚಿಮಾತ್ಯ ಮಾದರಿಯ ಔಷಧೋಪಚಾರ ಕ್ರಮಗಳನ್ನು ಸಂಸ್ಥಾನದಾದ್ಯಂತ ಅಳವಡಿಸುವ ಹಾದಿಯಲ್ಲಿ ಇಲ್ಲಿನ ಆಡಳಿತಗಾರರೇ ಮುಂದಾಗಿ ನಿಂತಂತಹ ಉದಾಹರಣೆ ಬೇರೆಲ್ಲೂ ಸಿಗದು. 'ಸಿಡುಬು' ಅಂದು ಮೈಸೂರು ಸಂಸ್ಥಾನವನ್ನು ಕಾಡುತ್ತಿದ್ದ ಪಿಡುಗಾಗಿತ್ತು. ಅದರ ನಿವಾರಣೆಗೆ ಸಂಬಂಧಿಸಿದಂತೆ ಪಾಶ್ಚಿಮಾತ್ಯ ಮಾದರಿಯ ಚುಚ್ಚುಮದ್ದನ್ನು ಮೊದಲ ಬಾರಿಗೆ ಮೈಸೂರಿನಲ್ಲಿ ಪರಿಚಯಿಸಿದವರು ಫ್ರೆಂಚ್ ಪಾದ್ರಿ ಅಬೆ ಡುಬಾಯ್. ಇವರು ಸಿಡುಬು ರೋಗಕ್ಕೆಂದು ತಂದಿದ್ದ ಲಸಿಕೆಯನ್ನು (ವ್ಯಾಕ್ಸಿನ್)ವನ್ನು 1806ರಲ್ಲಿ ಮೈಸೂರು ಸಂಸ್ಥಾನದ ರಾಜಮಾತೆ ಮಹಾರಾಣಿಯವರಾಗಿದ್ದ ಲಕ್ಷ್ಮಣ್ಣಿಯವರು ಸಿಡುಬು ರೋಗ ನಿವಾರಿಸಲು ಬಳಸಬೇಕೆಂದು ಆಲೋಚಿಸಿ ಸಂಸ್ಥಾನದ ಪ್ರಜೆಗಳು ಸಾಮೂಹಿಕವಾಗಿ ದೇವಿ ಹಾಕಿಸಿಕೊಳ್ಳುವಂತೆ ಪ್ರಚಾರವನ್ನು ಕೈಗೊಂಡರು. ಆದರೆ ಮೂಢನಂಬಿಕೆಯ ಹಳ್ಳಿಗರು ಲಸಿಕೆಯನ್ನು ಸಂಶಯ ದೃಷ್ಟಿಯಿಂದ ನೋಡತೊಡಗಿದಾಗ ಸ್ವತಃ ಮಹಾರಾಣಿಯವರೇ ಮುಂದೆ ನಿಂತು ತಾವು ಸೊಸೆಯಾಗಿ ಸ್ವೀಕರಿಸಲು ನಿರ್ಧರಿಸಿದ್ದ ಕುಮಾರಿಯವರಿಗೆ ಮೊದಲು ದೇವಿ ಹಾಕಿಸಿದರು, ಆಕೆ ಸಾಯದಿದ್ದರೆ ತಾವುಗಳೂ ಸಾಯುವುದಿಲ್ಲವೆಂದು ಅವರು ಹೇಳಿದರು[681]. ಘನವಾದ ಈ ಮೇಲ್ಪಂಕ್ತಿಯ ಕಾರ್ಯದಿಂದ ಮೈಸೂರು ಸಂಸ್ಥಾನದಲ್ಲಿ ದೇವಿ ಹಾಕುವ ಕಾರ್ಯವು ಸುಸೂತ್ರವಾಗಿ ನಡೆಯಿತು. ಅಷ್ಟೇ ಅಲ್ಲದೇ ಇಡೀ ಭಾರತದಲ್ಲೇ ಈ ಕಾರ್ಯದ ಬೆಳವಣಿಗೆಯಲ್ಲಿ ಮೈಸೂರು ಸಂಸ್ಥಾನ ಮೊದಲ ಸ್ಥಾನವನ್ನು ಪಡೆದು ಪ್ರಖ್ಯಾತವಾಯಿತು. ಮೈಸೂರಿನಲ್ಲಾದ ಈ ಬೆಳವಣಿಗೆಯನ್ನು ಕುರಿತು ಲಾರ್ಡ್ ವಿಲಿಯಂ ಬೆಂಟಿಕ್‌ರವರು "ಮಹತ್ತರವಾದ ಸುಧಾರಿತ ನಿಯಮಗಳಿಂದ ಆಡಳಿತ ನಡೆಯುತ್ತಿರುವ ಮೈಸೂರು ಸರ್ಕಾರದಂತಹ ಸುಸಂಸ್ಕೃತ ಸರ್ಕಾರದವರ ನಿದರ್ಶನದಿಂದ ಭರತ ಖಂಡದ ಪ್ರಜೆಗಳ ಮನಸ್ಸಿನ ಮೇಲೆ

---

*681. ಸತ್ಯನ್ ಟಿ.ಎಸ್., ಕಾಲಕ್ಕೆ ಕನ್ನಡಿ, ಪ್ರಿಸಮ್ ಬುಕ್ಸ್ ಪ್ರೈ.ಲಿ., ಬೆಂಗಳೂರು, 2003, ಪು. 72*

ಸತ್ಪರಿಣಾಮವಾಗದಿರದು" ಎಂಬುದಾಗಿ ಅಭಿಪ್ರಾಯಪಟ್ಟರು[682]. ಇಂತಹ ಮಹತ್ವಪೂರ್ಣ ಪೂರ್ವಿಕ ಇತಿಹಾಸವನ್ನೊಳಗೊಂಡಿರುವ ಮೈಸೂರು ಸಂಸ್ಥಾನವು ಮುಂದೆ ನಾಲ್ವಡಿಯವರ ನೇತೃತ್ವದಲ್ಲಿ ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯೀಕರಣ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಲು ಮುಂದಾಗಿ, ಸಾಂಪ್ರದಾಯಿಕವಾಗಿ ಇದ್ದ ಅಡೆತಡೆಗಳನ್ನು ನಿವಾರಿಸಲು ಹಲವಾರು ಶಾಸನಗಳನ್ನು ಜಾರಿಗೊಳಿಸಿತು.

ನಾಲ್ವಡಿಯವರ ನೇತೃತ್ವದ ಮೈಸೂರು ಸಂಸ್ಥಾನವು ಸಾರ್ವಜನಿಕ ಆರೋಗ್ಯ ಮತ್ತು ನೈರ್ಮಲ್ಯೀಕರಣ ಕ್ಷೇತ್ರದಲ್ಲಿ ಬಹು ಆಸಕ್ತಿಯನ್ನು ತೋರಿತ್ತು. ಸಂಪದ್ಭರಿತ ರಾಜ್ಯದ ಆಂತರಿಕಾಂಶವೆಂದರೆ 'ಸದೃಢ ಆರೋಗ್ಯದ ಪ್ರಜೆಗಳು' ಎಂಬುದನ್ನು ಅರಿತಿದ್ದ ನಾಲ್ವಡಿಯವರು ಆರೋಗ್ಯ ಸೌಲಭ್ಯಗಳನ್ನು ಒದಗಿಸುವುದು ಪವಿತ್ರ ಕಾರ್ಯವೆಂದು ಭಾವಿಸಿದ್ದರು. ಹಾಗಾಗಿ ಅವರು "ಆಸ್ಪತ್ರೆಗಳು ದೇವಾಲಯಗಳಿದ್ದಂತೆ"[683] ಎಂದು ಹೇಳಿದ್ದರು. ಒಂದು ದೇಶದ ಆರ್ಥಿಕ ಅಸಮರ್ಥತೆಗೆ ಅಲ್ಲಿನ ಕಡಿಮೆ ಜೀವಿಸುವ ಶಕ್ತಿ (ಅಲ್ಪಾಯುಶ್ಯ)ಯೂ ಒಂದು ಕಾರಣವೆಂದು ಪ್ರತಿಪಾದಿಸುತ್ತಾ ನಾಲ್ವಡಿಯವರು "ಮೈಸೂರು ಮತ್ತು ಅದರ ಗಡಿಯಲ್ಲಿನ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಸಾವಿನ ಪ್ರಮಾಣ 1000 ಜನಸಂಖ್ಯೆಗೆ 30. ಅದೇ ಇಂಗ್ಲೆಂಡ್ ಮತ್ತು ಜರ್ಮನಿಗಳಲ್ಲಿ ಸಾವಿನ ಪ್ರಮಾಣ 1000ಕ್ಕೆ 15ರಿಂದ 18 ಅಥವಾ ಅದಕ್ಕೂ ಕಡಿಮೆ ಇದೆ"[684] ಎಂದು ತಿಳಿಸಿದ್ದರು. ಅವರ ಪ್ರತಿಪಾದನೆಯಲ್ಲಿ ಪಾಶ್ಚಿಮಾತ್ಯ ದೇಶಗಳ ಆರ್ಥಿಕಾಭಿವೃದ್ಧಿಗೆ ಅಲ್ಲಿನ ಜನರ ದೀರ್ಘಾಯುಶ್ಯವೇ ಪ್ರಮುಖ ಕಾರಣವೆಂದು, ಅದಕ್ಕೆ ಉತ್ತಮ ಆರೋಗ್ಯ ಸೌಲಭ್ಯಗಳೇ ಕಾರಣವೆಂಬುದಾಗಿ ಒಟ್ಟಾರೆ ಬಡತನಕ್ಕೆ, ಆರ್ಥಿಕ ಸಮಸ್ಯೆಗಳಿಗೆ ಸಮಾಜದ ದುಡಿಯುವ ಜನರ ಕಾರ್ಯಕ್ಷಮತೆಯ ಅಭಾವವೇ ಕಾರಣವೆಂದೂ, ಹಾಗೂ ಕಾರ್ಯಕ್ಷಮತೆಯ ನಷ್ಟಕ್ಕೆ ಮನುಷ್ಯನಿಗೆ ಬರುವ ರೋಗಗಳೆನ್ನು ತಡೆಗಟ್ಟಲು ಮಾರ್ಗವನ್ನು ಸೂಚಿಸುತ್ತಾ "ರೋಗ ತಡೆಗಟ್ಟುವ ಮುಖ್ಯ ಮಾಧ್ಯಮವೆಂದರೆ (ಸಾಧನ) ವೈದ್ಯಕೀಯ ಜ್ಞಾನವನ್ನು ಪ್ರಚುರಿಸುವುದು. ಯಾವ ಪ್ರದೇಶದಲ್ಲಿ ಹೆಚ್ಚು ರೋಗಗಳಿರುತ್ತವೋ ಅಲ್ಲಿನ ಜನರಿಗೆ ಅವುಗಳನ್ನು ತಡೆಗಟ್ಟುವುದು ಹೇಗೆಂಬುದನ್ನು ಕಲಿಸುವುದು ಹೆಚ್ಚು ಅವಶ್ಯಕ"[685] ಎಂದು ನಾಲ್ವಡಿಯವರು ತಮ್ಮ ಭಾಷಣದಲ್ಲಿ ತಿಳಿಸಿದ್ದರು. ಹೀಗೆ ಆಧುನಿಕ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುತ್ತ ಆರೋಗ್ಯ ಸುಧಾರಣೆಗೆ ಹಾಗೂ ಅನಾರೋಗ್ಯಕ್ಕೆ ಮೂಲಕಾರಣವಾದ ಅನೈರ್ಮಲ್ಯವನ್ನು ಹೋಗಲಾಡಿಸಲು ಸರ್ಕಾರದ ವತಿಯಿಂದ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಆದರೆ ಆಧುನಿಕ ವೈದ್ಯಕೀಯ ಸೌಲಭ್ಯಗಳನ್ನು ಸ್ವೀಕರಿಸಲು ನಿರಾಕರಿಸಿದ ಸಾಂಪ್ರದಾಯಿಕ ಸಮಾಜವು ಅವುಗಳನ್ನು ಒಪ್ಪಿಕೊಳ್ಳುವಂತೆ ಮಾಡಲು ಹಾಗೂ ಹೊಸ ಅಂಟುಜಾಡ್ಯಗಳನ್ನು ತಡೆಗಟ್ಟಲು ನಾಲ್ವಡಿಯವರ ಸರ್ಕಾರ ಅನೇಕ ಆರೋಗ್ಯ ಹಾಗೂ

---

682. *ವೆಂಕಟರಾಮಯ್ಯ ಸಿ.ಕೆ., ಪೂರ್ವೋಕ್ತ, ಪು.152*
683. *ಸ್ಪೀಚಸ್ ಆಫ್ ಹೈನೆಸ್, ಸಂಪುಟ-II, 1934-40, ಪು. 60*
684. *ಅದೇ., ಸಂಪುಟ-I, ಪು. 88*
685. *ಅದೇ., ಸಂಪುಟ-II, ಪು. 293*

ನೈರ್ಮಲ್ಯೀಕರಣಕ್ಕೆ ಸಂಬಂಧಿಸಿದ ಶಾಸನಗಳನ್ನೇ ಜಾರಿಗೊಳಿಸಿತು.

ಮೈಸೂರು ಸಂಸ್ಥಾನದಲ್ಲಿ 19ನೇ ಶತಮಾನದ ಅಂತ್ಯದಿಂದ ಪಾಶ್ಚಿಮಾತ್ಯ ಮಾದರಿಯ ವೈದ್ಯಕೀಯ ಸೌಲಭ್ಯ ಒದಗಿಸಲು ಹಾಗೂ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಪ್ರಯತ್ನಗಳು ತೀವ್ರಗೊಂಡವು. ಈ ನಿಟ್ಟಿನಲ್ಲಿ ಸಾಂಕ್ರಾಮಿಕ ರೋಗಗಳ ನಿವಾರಣಾ ಶಾಸನಗಳು ಜಾರಿಗೊಂಡವು.

### *ಎ) ಸಾಂಕ್ರಾಮಿಕ ರೋಗಗಳ ನಿವಾರಣಾ ಶಾಸನಗಳು*

ಮೈಸೂರು ಸಂಸ್ಥಾನದ ಜನರನ್ನು ಬಹುವಾಗಿ ಕಾಡುತ್ತಿದ್ದ ಸಾಂಕ್ರಾಮಿಕ ರೋಗಗಳೆಂದರೆ ಪ್ಲೇಗು, ಕಾಲರಾ, ಸಿಡುಬು ಮತ್ತು ಮಲೇರಿಯಾ. ಈ ರೋಗಗಳಿಂದ ಪ್ರತಿವರ್ಷ ಸಾವಿರಾರು ಜನ ಸಾವನ್ನಪ್ಪುತ್ತಿದ್ದರು. ಬೊಂಬಾಯಿ ಪ್ರಾಂತ್ಯದಲ್ಲಿ ಹರಡಿದ ಪ್ಲೇಗು ರೋಗವನ್ನು ಮೈಸೂರಿನಲ್ಲಿ ಹರಡದಂತೆ ತಡೆಯಲು 1897ರಲ್ಲಿ ಸಾಂಕ್ರಾಮಿಕ ರೋಗಗಳ ಶಾಸನವನ್ನು ಜಾರಿಗೊಳಿಸಲಾಯಿತು. ಪ್ಲೇಗನ್ನು ಹರಡಲು ರೈಲಿನ ಪ್ರಥಮ ಮತ್ತು ಎರಡನೇ ದರ್ಜೆಯ ಬೋಗಿಗಳು ಬಹುಮುಖ್ಯ ಸಾಧನಗಳಾಗಿದ್ದರಿಂದ ಅವುಗಳಿಗೆ ಔಷಧಿ ಸಿಂಪಡಣೆ ಮತ್ತು ಬಣ್ಣ ಹೊಡೆಯುವಂತೆ ಈ ಶಾಸನ ನಿರ್ದೇಶಿಸಿತು. ಪ್ಲೇಗ್‌ಗೆ ಒಳಗಾದ ರೋಗಿಗಳು ಸಾರ್ವಜನಿಕ ಜೀವನಕ್ಕೆ ಬಂದು ಹರಡದಂತೆ ಮನೆಯಲ್ಲೇ ಅಥವಾ ಸಮಾಜದ ಹೊರಗಡೆ ಇರುವಂತೆ ನಿರ್ಬಂಧ ವಿಧಿಸಿತು[686]. ಹಾಗೆಯೇ ಸರ್ಕಾರವು ಪ್ಲೇಗ್ ತಡೆಗೆ ಚುಚ್ಚುಮದ್ದು ಹಾಕುವುದನ್ನು ಪ್ರೋತ್ಸಾಹಿಸಿತು. ಆದರೆ ಜನತೆಗೆ ಚುಚ್ಚುಮದ್ದಿನ ಬಗ್ಗೆ ವಿಶ್ವಾಸವಿರಲಿಲ್ಲ. ಆಗ ಮೈಸೂರಿನ ಜನತೆ ಇನಾಕ್ಯುಲೇಷನ್ ವಿರುದ್ಧ ಹೇಗೆ ಪ್ರತಿಕ್ರಿಯಿಸಿದರೆಂಬುದನ್ನು ಡಿ.ವಿ. ಗುಂಡಪ್ಪನವರು ಹೀಗೆ ವಿವರಿಸುತ್ತಾರೆ. "ಮೈಸೂರು ಜಿಲ್ಲೆಯಲ್ಲಿ ಪ್ಲೇಗು ಮೊದಲು ತಲೆ ಹಾಕಿದಾಗ ಅದನ್ನು ತಡೆಗಟ್ಟಲು ಸರ್ಕಾರ ಜನರ ಮೇಲೆ ನಿರ್ಬಂಧ ಪಡಿಸಿದ ಉಪಾಯಗಳಲ್ಲಿ 'ಇನಾಕ್ಯುಲೇಷನ್' ಒಂದು. ಆದರೆ ಅದು ಜನ ಸಾಮಾನ್ಯಕ್ಕೆ ಸರಿಯೆಂದೆನಿಸಲಿಲ್ಲ. ಪ್ಲೇಗು ಎಂಬುದು ಮಾರಿಕಾ ದೇವತೆಯ ಒಂದು ಆಗ್ರಹ ರೂಪವೆಂದೂ, ಅದಕ್ಕೆ ಮದ್ದಿಲ್ಲವೆಂದೂ, ಪರಂಗಿ ರೀತಿಯ ಚಿಕಿತ್ಸಾ ಪ್ರಯತ್ನದಿಂದ ದೇವಿಯ ಕೋಪ ಮತ್ತಷ್ಟು ಹೆಚ್ಚೀತೆಂದೂ ಭಾವನೆಯಾಗಿತ್ತು. ಈ ಕಾರಣದಿಂದ ಅನೇಕ ಜನರು ಇನಾಕ್ಯುಲೇಷನ್ ಪ್ರಯತ್ನಕ್ಕೆ ವಿರುದ್ಧವಾಗಿ ಪ್ರತಿಭಟಿಸಿ ನಿಂತರು. ಶ್ರೀರಂಗಪಟ್ಟಣ, ಗಂಜಾಂ, ಚಿಕ್ಕಬಳ್ಳಾಪುರ ಮುಂತಾದ ಪ್ರದೇಶಗಳಲ್ಲಿ ಜನ ದಂಗೆಯೇಳುವವರೆಗೂ ಹೋಗಿದ್ದರು"[687]. ಅದೇ ರೀತಿ ಸರ್ಕಾರವು ಪ್ಲೇಗ್‌ಗೀಡಾಗಿದ್ದ ಜನರನ್ನು ಪ್ರತ್ಯೇಕಿಸಿ ಇಡುತ್ತಿದ್ದ ಕ್ಯಾಂಪ್ ಬಗ್ಗೆ ಬೇಸರಗೊಂಡಿದ್ದು ಒಮ್ಮೆ "ಪ್ಲೇಗ್ ಶೆಡ್‌ನಲ್ಲಿದ್ದ ಶವವನ್ನು ನದಿಗೆಸೆದು ಶೆಡ್ ಅನ್ನು ಕಿತ್ತೊಗೆದು ಬೆಂಕಿಯಿಟ್ಟರು ಮತ್ತು ಅದಕ್ಕೆ ಸಂಬಂಧಿಸಿದ ಅಧಿಕಾರಿಗೆ ಕಲ್ಲನ್ನೆಸೆದರು"[688]. ಆದರೂ ಸರ್ಕಾರವು ಪ್ಲೇಗ್

---

*686. ದಿ ಮೈಸೂರ್ ಕೋಡ್, ಸಂಪುಟ-1, ಪು. 220-221*

ಪೀಡಿತರಿಗೆ ಸರ್ಕಾರಿ ಪ್ಲೇಗ್ ಆಸ್ಪತ್ರೆಗಳಲ್ಲಿ ಔಷಧಿ ನೀಡುವುದು, ಪ್ಲೇಗ್‌ನಿಂದ ಸತ್ತವರ ಶವವನ್ನು ಸರ್ಕಾರಿ ವೆಚ್ಚದಿಂದ ಸುಡಿಸುವುದು ಮುಂತಾದ ಕಾರ್ಯಕ್ರಮಗಳ ಮೂಲಕ ಪ್ಲೇಗ್ ಹರಡುವುದನ್ನು ತಡೆಗಟ್ಟಲು ಪ್ರಯತ್ನಿಸಲಾಯಿತು. ಆದರೂ ಕಾಲರಾ, ಸಿಡುಬು, ಪ್ಲೇಗು ಮುಂತಾದ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಚುಚ್ಚುಮದ್ದು ಕಾಯ್ದೆಯನ್ನು ಜಾರಿಗೆ ತರಲಾಯಿತು. ಈ ಶಾಸನದ ಮೂಲಕ ಚುಚ್ಚು ಮದ್ದನ್ನು ಕಡ್ಡಾಯಗೊಳಿಸಲಾಯಿತು ಹಾಗೂ ಅದನ್ನು ಮೀರಿದವರಿಗೆ 50 ರೂಪಾಯಿಗಳವರೆಗೆ ದಂಡ ವಿಧಿಸಲಾಗುತ್ತಿತ್ತು[689]. ಈ ಶಾಸನಕ್ಕೆ ಆಗಾಗ್ಗೆ ತಿದ್ದುಪಡಿ ತರಲಾಯಿತು. ಮತ್ತು ಸಿಡುಬಿಗೂ ಚುಚ್ಚುಮದ್ದನ್ನು ಕಡ್ಡಾಯಗೊಳಿಸಲಾಯಿತು. ಇದರಿಂದಾಗಿ ಜನರಲ್ಲಿ ಚುಚ್ಚುಮದ್ದಿನ ಬಗ್ಗೆ ತಿರಸ್ಕಾರ ಮತ್ತು ವಿರೋಧಗಳು ತಗ್ಗಿದವು. ಮೊದಲನೇ ಮಹಾಯುದ್ಧದಿಂದುಂಟಾದ ಕಲುಷಿತ ವಾತಾವರಣದಿಂದಾಗಿ ಇನ್‌ಫ್ಲೂಯೆಂಜಾ ಅಥವಾ ಬೆಂಕಿಜ್ವರವು ಜಗತ್ತಿನಲ್ಲೆಲ್ಲಾ ವ್ಯಾಪಿಸಿತು. ಮೈಸೂರು ಸಂಸ್ಥಾನದಲ್ಲಿ ಈ ರೋಗ 1918ರಲ್ಲಿ ಹರಡಿ 1, 66,000 ಜನರನ್ನು ಬಲಿತೆಗೆದುಕೊಂಡಿತು. ಇನ್‌ಫ್ಲೂಯೆಂಜಾ ರೋಗದ ತಡೆಗೆ ಸರ್ಕಾರ 1,13,000 ರೂಪಾಯಿಗಳನ್ನು ವಿಶೇಷವಾಗಿ ಮಂಜೂರಾತಿ ಮಾಡಿತು[690]. ಹೀಗೆ ಸರ್ಕಾರವು ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಮತ್ತು ಆಧುನಿಕ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸಿ ಜನರ ಆರೋಗ್ಯವನ್ನು ವೃದ್ಧಿಗೊಳಿಸಲು ಕ್ರಮ ಕೈಗೊಂಡಿತು.

### *ಬಿ) ನೈರ್ಮಲ್ಯೀಕರಣವನ್ನು ಕುರಿತ ಶಾಸನಗಳು*

ಗ್ರಾಮಾಂತರ ಪ್ರದೇಶಗಳಲ್ಲಿ ನೈರ್ಮಲ್ಯದ ಬಗ್ಗೆ ಗಮನ ಹರಿಸದಿದ್ದುದರಿಂದ ಸಾಂಕ್ರಾಮಿಕ ರೋಗಗಳಿಗೆ ಜನ ಬಹುಬೇಗ ತುತ್ತಾಗುತ್ತಿದ್ದರು. ಸರ್ಕಾರವು 1898ರಲ್ಲೇ ಗ್ರಾಮೀಣ ನೈರ್ಮಲ್ಯ ಕಾಯ್ದೆಯನ್ನು ಜಾರಿಗೆ ತಂದು ಕುಡಿಯುವ ನೀರಿನ ಪೂರೈಕೆ, ಒಳಚರಂಡಿ ವ್ಯವಸ್ಥೆಗಳನ್ನು ಅಭಿವೃದ್ಧಿಗೊಳಿಸಲಾಗಿತ್ತು. ಆ ಕಾಯ್ದೆಯು ಕುಡಿಯುವ ನೀರಿನ ಮೂಲಗಳಾದ ನದಿ, ಕೆರೆ, ತೊರೆಗಳಲ್ಲಿ ಬಟ್ಟೆ ಒಗೆಯುವುದನ್ನು ನಿರ್ಬಂಧಿಸಿತ್ತು. ಸಾಂಕ್ರಾಮಿಕ ರೋಗಕ್ಕೆ ತುತ್ತಾದವರು ಆಹಾರ ಮತ್ತು ಪಾನೀಯಗಳನ್ನು ಮಾರುವಂತಿರಲಿಲ್ಲ[691]. ಈ ಶಾಸನಕ್ಕೆ 1901ರಲ್ಲಿ ತಿದ್ದುಪಡಿ ತಂದು ಗ್ರಾಮಾಂತರ ಪ್ರದೇಶಗಳಿಗೆಲ್ಲಾ ಜಾರಿಗೊಳಿಸಲಾಯಿತು.

ಸಾಂಕ್ರಾಮಿಕ ರೋಗಗಳು ಹರಡಲು ನೈರ್ಮಲ್ಯದ ಕೊರತೆಯೇ ಕಾರಣವಾಗಿದ್ದರಿಂದ ಸರ್ಕಾರವು ನೈರ್ಮಲ್ಯ ಇಲಾಖೆಯನ್ನು ಸಂಘಟಿಸಿ ಪ್ರತಿಜಿಲ್ಲೆಗೂ ಒಬ್ಬ ನೈರ್ಮಲ್ಯ ಅಧಿಕಾರಿ(Sanitary Officer) ಯನ್ನು ನೇಮಿಸಿತು. 1917ರಲ್ಲಿ ಸ್ಯಾನಿಟರಿ ಕಮಿಷನರ್ ಎಂಬ ಹುದ್ದೆಯನ್ನು ಸೃಷ್ಟಿಸಲಾಯಿತು. 1911ರಲ್ಲಿ ನಡೆದ ಅಖಿಲ ಭಾರತ ಪ್ರಥಮ ವೈದ್ಯಕೀಯ ಸಮ್ಮೇಳನವು ನೈರ್ಮಲ್ಯದ ಅಭಾವವೇ ಅನಾರೋಗ್ಯಕ್ಕೆ ಕಾರಣವೆಂದೂ, ಸುಧಾರಣೆಗೆ ಗಮನ

---

687. *ಡಿ.ವಿ. ಗುಂಡಪ್ಪ, ಜ್ಞಾಪಕ ಚಿತ್ರಶಾಲೆ, ಸಂಪುಟ-I, ಸಾಹಿತಿ ಸಜ್ಜನ ಸಾರ್ವಜನಿಕರು, ಐಬಿಎಚ್‌ಪ್ರಕಾಶನ, ಬೆಂಗಳೂರು, 1982, ಪು. 74-75*
688. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರಸೆಂಟೇಟಿವ್ ಅಸೆಂಬ್ಲಿ, 1895-1899, ಪು. 21*
689. *ದಿ ಮೈಸೂರ್ ಕೋಡ್, ಸಂಪುಟ-I, ಪು. 501*
690. *ಬ್ಲೂ ಬುಕ್ ಜರ್ನಲ್, 1918-19, ಸಂಪುಟ-III, ಸಂಖ್ಯೆ 3, ಪು. 284-287*
691. *ಸದಾಶಿವ ಕೆ. ಪೂರ್ವೋಕ್ತ, ಪು. 346-347*

ನೀಡಬೇಕೆಂದು ತಿಳಿಸಿತು. ಜನರಿಗೆ ನೈರ್ಮಲ್ಯವನ್ನು ಕುರಿತು ತಿಳುವಳಿಕೆ ನೀಡಲು ಶಿಕ್ಷಕರು, ಆರೋಗ್ಯ ಇಲಾಖೆಯ ಸಿಬ್ಬಂದಿ ಮತ್ತು ಸ್ಥಳೀಯ ಸಂಸ್ಥೆಗಳಾದ ಪುರಸಭೆಗಳು ಮತ್ತು ಗ್ರಾಮಸಮಿತಿಗಳಿಗೆ ವಹಿಸಲಾಯಿತು[692].

ಮೈಸೂರಿನ ಮಲೆನಾಡು ಪ್ರದೇಶವು ನೈಸರ್ಗಿಕ ಸಂಪತ್ತು, ಯಥೇಚ್ಛ ಮಳೆ, ನೀರಾವರಿಯಿದ್ದರೂ ಸಹ ಅಲ್ಲಿ ಕಲುಷಿತ ನೀರಿನ ಬಳಕೆಯಿಂದಾಗಿ ಕರುಳು ಬೇನೆ, ಅತಿಬೇಧಿ, ಮಲೇರಿಯಾ, ಕಾಲರಾದಂತಹ ಸಾಂಕ್ರಾಮಿಕ ರೋಗಗಳಿಂದ ಅಲ್ಲಿನ ಜನಸಂಖ್ಯೆ ಇಳಿಮುಖವಾಗುತ್ತಿತ್ತು. ನಾಲ್ವಡಿಯವರು ಮಲೆನಾಡಿನ ಸಮಸ್ಯೆಯನ್ನು ಆರ್ಥಿಕ ಸಮಸ್ಯೆಯೆಂದು ಕರೆದು "ಈ ನ್ಯೂನತೆಯನ್ನು ನಿವಾರಿಸಲು ಜನರಿಗೆ ಇಲ್ಲಿನ ಹವಾಗುಣಕ್ಕೆ ತಕ್ಕಂತೆ ಆಹಾರ ಮತ್ತು ಬಟ್ಟೆ ಧರಿಸುವಂತೆ ಶಿಕ್ಷಣ ಮತ್ತು ಬೋಧನೆಯನ್ನು ಮಾಡಬೇಕಾಗಿದೆ ; ಅರ್ಥಾತ್ ಅವರ ಜೀವನಮಟ್ಟವನ್ನು ಅಭಿವೃದ್ಧಿಗೊಳಿಸಬೇಕಾಗಿದೆ"[693] ಎಂದು ಅಭಿಪ್ರಾಯಪಟ್ಟಿದ್ದರು. ಅಲ್ಲದೆ 1914ರಲ್ಲಿ 'ಮಲೆನಾಡು ಅಭಿವೃದ್ಧಿ ಯೋಜನೆ'ಯನ್ನು ಜಾರಿಗೊಳಿಸುವ ಮೂಲಕ ಆ ಪ್ರದೇಶದ ಜನರಿಗೆ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ಹೆರಿಗೆ ಆಸ್ಪತ್ರೆ ಮತ್ತು ಚಿಕಿತ್ಸಾಲಯಗಳನ್ನು ಸ್ಥಾಪಿಸುವ ಮೂಲಕ ಆರೋಗ್ಯ ಸೌಲಭ್ಯಗಳನ್ನು ಒದಗಿಸಲಾಯಿತು. ಮಲೇರಿಯಾ ರೋಗವನ್ನು ತಡೆಗಟ್ಟಲು ಚುಚ್ಚುಮದ್ದು ಹಾಕಲು ಕಾಂಪೌಂಡರ್ ಮತ್ತು ದಾದಿಯರನ್ನು ನೇಮಿಸಲಾಯಿತು. ಒಳಚರಂಡಿ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಲಾಯಿತು[694].

ಮೈಸೂರು ಸರ್ಕಾರವು ವೈದ್ಯಕೀಯ ವ್ಯವಸ್ಥೆಯನ್ನು ಸಂಘಟಿಸಲು 1907ರಲ್ಲಿ ಪ್ರತ್ಯೇಕ ಆರೋಗ್ಯ ಇಲಾಖೆಯನ್ನು ಸ್ಥಾಪಿಸಿತು. ಆ ನಂತರ ರೋಗಗಳ ನಿವಾರಣೆಯ ಜೊತೆಗೆ ರೋಗವನ್ನು ತಡೆಗಟ್ಟಲು ಹೆಚ್ಚು ಆದ್ಯತೆ ನೀಡಿ ಹಲವಾರು ಆಸ್ಪತ್ರೆಗಳನ್ನು ಸ್ಥಾಪಿಸಲಾಯಿತು. 1867ರಲ್ಲಿ ಔಷಧಾಲಯವಾಗಿ ಪ್ರಾರಂಭಿಸಲ್ಪಟ್ಟು 1918ರಲ್ಲಿ ಮೇಲ್ದರ್ಜೆಯ ಸ್ಥಾನ ಪಡೆದು[695] ನಾಲ್ವಡಿ ಕೃಷ್ಣರಾಜ ಒಡೆಯರ ಹೆಸರಿನಲ್ಲೇ ಸ್ಥಾಪನೆಗೊಂಡ ಕೃಷ್ಣರಾಜ ಆಸ್ಪತ್ರೆಯು ಸಾರ್ವಜನಿಕ ಆಸ್ಪತ್ರೆಯಾಗಿ ಪರಿವರ್ತನೆಗೊಂಡು ಅಂದು ಇಂದು ದೊಡ್ಡಾಸ್ಪತ್ರೆ ಎಂದೇ ಕರೆಯಲ್ಪಡುತ್ತಿದೆ. ಆಗ ಈ ಆಸ್ಪತ್ರೆಯ ಆಡಳಿತ ಮಂಡಳಿಯಲ್ಲಿ ವಿಶೇಷ ತಜ್ಞರಾದ ಸರ್ಜನ್ ಇಂಗ್ಲೆಂಡಿನ ಜೆ.ಎಫ್. ರಾಬಿನ್ಸನ್ ಹಾಗೂ ಯೂರೋಪಿನಿಂದ ಬಂದಿದ್ದ ಫಿಸಿಷಿಯನ್ ಎ.ಆರ್. ಹೈಲಿಗ್‌ರವರು ಹಾಗೂ ದಾದಿಯರ ಮೇಲ್ವಿಚಾರಕಿಯಾಗಿ ಶಿಸ್ತಿಗೆ ಹೆಸರಾಗಿದ್ದ ಇಂಗ್ಲೆಂಡಿನ ಮಿಸ್ ಕೂಂಬ್ಸ್ (ಮಹಿಳಾ ಮೇಟ್ರನ್)ರವರು ಕಾರ್ಯ ನಿರ್ವಹಿಸುತ್ತಿದ್ದರು. ಈ ಆಸ್ಪತ್ರೆಯು ದಾದಿಯರ ಮೇಲ್ವಿಚಾರಣಾ ಕೊಠಡಿ, ಉತ್ತಮ ಸೌಲಭ್ಯಗಳನ್ನೊಳಗೊಂಡ ವಾರ್ಡುಗಳು, ಆಪರೇಷನ್ ಥಿಯೇಟರ್, ವಿದ್ಯುತ್ ಲಿಫ್ಟ್‌ಗಳಂತಹ[696] ಮೊದಲಾದ ಆಧುನಿಕ ಅನುಕೂಲತೆಗಳನ್ನು ಒಳಗೊಂಡಿತ್ತು. ಇಲ್ಲಿ ವಿವಿಧ

---

*692. ಸೂರ್ಯನಾಥ ಯು. ಕಾಮತ್ (ಸಂ.), ಕರ್ನಾಟಕ ರಾಜ್ಯ ಗೆಸೆಟಿಯರ್, ಭಾಗ-3, ಪು. 164*

*693. ಸ್ಪೀಚಸ್ ಬೈ ಹಿಸ್ ಹೈನೆಸ್., ಪೂರ್ವೋಕ್ತ, ಪು. 244*

*694. ಮಲ್ನಾಡ್ ಇಂಪ್ರೂವ್‌ಮೆಂಟ್ ಮ್ಯಾನ್ಯುಯೆಲ್, 1917, ಪು. 42*

*695. ಸೂರ್ಯನಾಥ ಯು. ಕಾಮತ್, ಪೂರ್ವೋಕ್ತ ಸಂಪುಟ-III, ಪು.142*

ವಿಷಯಗಳಲ್ಲಿ ಸಾರ್ವಜನಿಕರಿಗೆ ವಿಶೇಷ ಸೇವಾಸೌಲಭ್ಯಗಳನ್ನು ಕಲ್ಪಿಸಲಾಗಿತ್ತು. ಈ ಆಸ್ಪತ್ರೆಯು ಕ್ರಮೇಣ ಬೋಧಕ ಆಸ್ಪತ್ರೆಯಾಗಿ ಪರಿವರ್ತನೆಗೊಂಡು ಕೊನೆಗೆ ಮೈಸೂರು ವೈದ್ಯಕೀಯ ಕಾಲೇಜಿಗೆ ಹಸ್ತಾಂತರಗೊಂಡಿತು[697]. ಇದೇ ತರಹ ಕಣ್ಣು, ದಂತ ಮುಂತಾದವುಗಳ ಬಗ್ಗೆ ಆಧುನಿಕವಾದ ವೈದ್ಯಕೀಯ ಸೌಲಭ್ಯ ಒದಗಿಸಲು 1913ರಲ್ಲಿ ಮಿಂಟೋ ಕಣ್ಣಾಸ್ಪತ್ರೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಲಾಯಿತು. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಕ್ಷ-ಕಿರಣ ಮತ್ತು ರೋಗಲಕ್ಷಣಶಾಸ್ತ್ರ ಪ್ರಯೋಗಾಲಯಗಳ ಸೌಲಭ್ಯವನ್ನು 1911ರಲ್ಲಿ ಆರಂಭಿಸಲಾಯಿತು. ಕ್ಷಯ ರೋಗ ಪೀಡಿತರಿಗಾಗಿ ಕ್ಷಯರೋಗ ಆಸ್ಪತ್ರೆಯನ್ನು ಮೈಸೂರಿನಲ್ಲಿ ಆರಂಭಿಸಲಾಯಿತು. ಇಂತಹ ವಿಶಿಷ್ಟ ಖಾಯಿಲೆಗಳಿಗೆ ಚಿಕಿತ್ಸೆ ಪಡೆಯಲು ಮೊದಲು ಹೊರರಾಜ್ಯಗಳಿಗೆ ಹೋಗಬೇಕಾಗಿದ್ದುದು ಈ ಆಸ್ಪತ್ರೆಗಳ ಸ್ಥಾಪನೆಯಿಂದ ತಪ್ಪಿತು. ನಾಲ್ವಡಿಯವರು ವೈದ್ಯಕೀಯ ಕ್ಷೇತ್ರಕ್ಕೆ ಹೆಚ್ಚು ಮಹತ್ವ ನೀಡಿದ್ದರಿಂದಾಗಿ ಅವರ ಕಾಲದಲ್ಲಿ ಈ ಕ್ಷೇತ್ರ ಅಪಾರ ಬೆಳವಣಿಗೆಯನ್ನು ಕಂಡಿತು. ಉದಾಹರಣೆಗೆ 1900ರಲ್ಲಿ 149 ವೈದ್ಯಕೀಯ ಸಂಸ್ಥೆಗಳಿದ್ದುದು 1938ರ ವೇಳೆಗೆ 311ಕ್ಕೇರಿದವು. ಹಾಗೆಯೇ ವೈದ್ಯಕೀಯ ಇಲಾಖೆಗೆ 1910ರಲ್ಲಿ 4ಲಕ್ಷ ರೂಪಾಯಿಗಳು ವೆಚ್ಚವಾಗುತ್ತಿದ್ದುದು 1940ರ ವೇಳೆಗೆ 36.61ಲಕ್ಷಗಳಿಗೇರಿತು[698].

ಹೀಗೆ ಮೇಲೆ ವಿವರಿಸಿರುವ ಭೌತಿಕ ಬೆಳವಣಿಗೆಯ ಹಿನ್ನೆಲೆಯಲ್ಲಿ ರೂಪಿಸಲ್ಪಟ್ಟ ಶಾಸನಗಳು ಮೈಸೂರು ಸಂಸ್ಥಾನದಲ್ಲಿ ಪಾಶ್ಚಾತ್ಯ ಪ್ರಭಾವದಿಂದಾಗಿ ಮರು ರೂಪಧಾರಣೆಯಾದ ಗಣಿಗಾರಿಕೆ, ಕೈಗಾರಿಕೆಗಳ ಅಭಿವೃದ್ಧಿಯ ಫಲವಾಗಿ ಕಾಣಿಸಿಕೊಂಡಂತಹ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಜಾರಿಗೊಳಿಸಿದಂತಹವುಗಳಾಗಿದ್ದು ಅವುಗಳ ನೆರವಿನಿಂದ ಆ ಕಾನೂನಿನ ಸೀಮಿತ ಕ್ಷೇತ್ರಕ್ಕೆ ಅನ್ವಯಿಸುವ ಕೃಷಿ, ಕಾರ್ಮಿಕರ ಜೀವನ ಮಟ್ಟದಲ್ಲಿ ಉತ್ತಮತೆಯನ್ನು ಕಾಪಾಡುವಲ್ಲಿ ಸಹಕಾರಿಯಾದವು. ಹಾಗೆಯೇ ಇಡೀ ಸಂಸ್ಥಾನದ ಪ್ರಜೆಗಳ ಸಾರ್ವಜನಿಕ ಆರೋಗ್ಯ ಹಾಗೂ ನೈರ್ಮಲೀಕರಣವನ್ನು ಉತ್ತಮಗೊಳಿಸುವಲ್ಲಿ ಇದ್ದ ಸಾಂಪ್ರದಾಯಿಕ ಅಡೆತಡೆಗಳನ್ನು ನಿವಾರಿಸುವ ಹಾದಿಯಲ್ಲಿ ಜಾರಿಗೊಳಿಸಿದ ಕಾರ್ಯ ಯೋಜನೆಗಳು, ಶಾಸನಗಳು ಇಡೀ ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವ ಮೂಲಕ ಕಲ್ಯಾಣ ರಾಜ್ಯದ ಗುರಿಯತ್ತ ಸಂಸ್ಥಾನವು ಸಾಗುವಲ್ಲಿ ಸಹಕಾರಿಯಾದವು. ಇದೇ ಹಿನ್ನೆಲೆಯಲ್ಲಿ ನಾಲ್ವಡಿಯವರು ಮತ್ತು ಅವರ ಸರ್ಕಾರ ಸಾಮಾಜಿಕ ಕಲ್ಯಾಣವನ್ನು ಸಾಧಿಸುವ ಹಾದಿಯಲ್ಲಿ ರೂಪಿಸಿದ ಕಾರ್ಯ ಯೋಜನೆಗಳನ್ನು ಜಾರಿಗೊಳಿಸಿದ ಶಾಸನಗಳನ್ನು ಕುರಿತಾದ ಪರಿಶೀಲನೆಯನ್ನು ಮುಂದೆ ಮಾಡಲಾಗುವುದು.

### *ii) ಸಾಮಾಜಿಕ ಬೆಳವಣಿಗೆಯಲ್ಲಿ ಶಾಸನಗಳು*

---

*696. ಸತ್ಯನ್ ಟಿ.ಎಸ್., ಪೂರ್ವೋಕ್ತ, ಪು. 11*

*697. ಸೂರ್ಯನಾಥ್ ಯು. ಕಾಮತ್, ಪೂರ್ವೋಕ್ತ, ಪು. 142*

*698. ಮ್ಯಾನ್ಯುಯಲ್ ಆಫ್ ದಿ ಮೈಸೂರ್ ಮೆಡಿಕಲ್ ಡಿಪಾರ್ಟ್‌ಮೆಂಟ್, 1943*

ಸಾಮಾಜಿಕ ಬೆಳವಣಿಗೆ ಎಂಬುದು ಭಾವನಾತ್ಮಕವಾದುದು. ಸಾಮಾಜಿಕ ಬೆಳವಣಿಗೆಯನ್ನು ಆ ಪ್ರದೇಶದ ಸಂಸ್ಕೃತಿ ಮತ್ತು ನಾಗರಿಕತೆಗಳು ನಿರ್ಧರಿಸುತ್ತವೆ. ಸಮಾಜವು ತಾನು ಭಾವಿಸಿಕೊಂಡ ಆದರ್ಶದತ್ತ ಸಾಗುವುದೇ ಸಾಮಾಜಿಕ ಬೆಳವಣಿಗೆ ಎನ್ನಬಹುದು. ಯಾವುದೇ ಸಮಾಜವು ಎಲ್ಲಾ ಕಾಲದಲ್ಲೂ ಒಂದೇ ವಿಧವಾದ ಆದರ್ಶ ವ್ಯವಸ್ಥೆ ಅಥವಾ ಮೌಲ್ಯಗಳನ್ನು ಹೊಂದಿರುವುದಿಲ್ಲ. ಸಮಾಜವು ತನ್ನ ಮೇಲಾಗುವ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ, ಐತಿಹಾಸಿಕ ಒತ್ತಡ, ಪ್ರಭಾವಗಳಿಂದಾಗಿ ಆದರ್ಶಗಳನ್ನು, ಮೌಲ್ಯಗಳನ್ನು ಬದಲಾಯಿಸಿಕೊಳ್ಳುತ್ತಾ ಹೋಗುತ್ತದೆ. ಉದಾಹರಣೆಗೆ ಮೈಸೂರಿನ ಸಾಂಪ್ರದಾಯಿಕ ಸಮಾಜವು ಬಾಲ್ಯವಿವಾಹ, ವಿಧವಾ ವಿವಾಹಗಳನ್ನು ನಿರ್ಬಂಧಿಸುವುದು, ಸ್ತ್ರೀಯರಿಗೆ ಶಿಕ್ಷಣ, ಆಸ್ತಿ ಮುಂತಾದ ನಾಗರಿಕ ಹಕ್ಕುಗಳನ್ನು ಕೊಡದಿರುವುದು, ಅಸ್ಪೃಶ್ಯತೆ, ದೇವದಾಸಿ ಪದ್ಧತಿಗಳನ್ನು ಬೆಂಬಲಿಸುವುದು ಮುಂತಾದವನ್ನು ತನ್ನ ಸಮಾಜದ ಆದರ್ಶ ವ್ಯವಸ್ಥೆಯ ಅವಿಭಾಜ್ಯ ಅಂಶಗಳೆಂದು ಭಾವಿಸಿತ್ತು. ಆದರೆ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಭಾರತೀಯರು "ಪಾಶ್ಚಿಮಾತ್ಯ ಸಮಾಜದ ಆದರ್ಶಗಳನ್ನು" ತಾವೂ ಹೊಂದಬೇಕೆಂದು ಆಶಿಸಿದ್ದು ಭಾರತದ ಸಾಮಾಜಿಕ ಸುಧಾರಣಾ ಪ್ರಕ್ರಿಯೆಗಳಿಗೆ ದಾರಿ ಮಾಡಿಕೊಟ್ಟಿತ್ತು. ಕ್ರೈಸ್ತ ಮಿಷನರಿಗಳು ಹಿಂದೂ ಸಮಾಜದ ದುಷ್ಟ ಪದ್ಧತಿಗಳನ್ನು ಟೀಕಿಸಲಾರಂಭಿಸಿದ್ದರಿಂದ ಪಾಶ್ಚಿಮಾತ್ಯ ಶಿಕ್ಷಣ ಪಡೆದ ವಿದ್ಯಾವಂತ ಹಿಂದೂಗಳು ತಮ್ಮ ಧರ್ಮದಲ್ಲಿ, ಸಮಾಜದಲ್ಲಿ ಸುಧಾರಣೆ ತರಬೇಕೆಂದು ಆಲೋಚಿಸುವಂತೆ ಮಾಡಿತು. ಭಾರತದ ಎಲ್ಲ ಸಮಾಜ ಸುಧಾರಕರು ಪಾಶ್ಚಿಮಾತ್ಯ ಶಿಕ್ಷಣ ಅಥವಾ ಅಪರೋಕ್ಷವಾಗಿ ಪಾಶ್ಚಿಮಾತ್ಯ ಚಿಂತನೆಗಳಿಂದ ಪ್ರಭಾವಿತರಾಗಿದ್ದರು. ಈ ವಿದ್ಯಾವಂತರು ತಮ್ಮದೇ ಮತಸಂಬಂಧಿ ನಂಬಿಕೆಗಳಿಗೆ, ಆಚರಣೆಗಳಿಗೆ ವೈಚಾರಿಕವಾದ ವ್ಯಾಖ್ಯಾನ ನೀಡುತ್ತಾ ಸುಧಾರಿಸಲು ಪ್ರಯತ್ನಿಸಿದರು. ಆಗ ಸಾಂಪ್ರದಾಯಿಕ ಮತ್ತು ಆಧುನಿಕ ಮೌಲ್ಯ ಹಾಗೂ ಆದರ್ಶಗಳ ನಡುವೆ ಸಂಘರ್ಷವೇರ್ಪಟ್ಟಿತು. ಸರ್ಕಾರ ಮತ್ತು ಸುಧಾರಕರು ಸಾಮಾಜಿಕ ಸುಧಾರಣೆಯನ್ನು ಸಾಧಿಸಲು ಶಿಕ್ಷಣ ಮುಂತಾದ ಕ್ರಮಗಳ ಮೂಲಕ ಪ್ರಯತ್ನಿಸಿದರು. ಹಾಗೆಯೇ ಸಮಾಜವು ಆಧುನಿಕ ಆದರ್ಶಗಳನ್ನು ಬಲವಂತವಾಗಿ ಅಳವಡಿಸಿಕೊಳ್ಳುವಂತೆ ಮಾಡಲು ಆ ಮೂಲಕ ಸಾಮಾಜಿಕ ಪರಿವರ್ತನೆ ತರಲು ಸರ್ಕಾರವು ಶಾಸನ ಎಂಬ ಸಾಧನವನ್ನು ಬಳಸಿಕೊಂಡಿತು.

### *ಎ) ಬಾಲ್ಯ ವಿವಾಹ ನಿರ್ಬಂಧ ಶಾಸನ*

ವಿವಾಹವು ಕುಟುಂಬದಂತೆಯೇ ಸಾಮಾಜಿಕವಾಗಿ ಬಹಳ ಪ್ರಾಮುಖ್ಯತೆಯನ್ನು ಗಳಿಸಿರುವ ಸಂಸ್ಥೆ. ಮಾನವನ ಲೈಂಗಿಕ ಸ್ವಚ್ಛಂದತೆಯನ್ನು ನಿವಾರಣೆ ಮಾಡಿ ಆತನ ಲೈಂಗಿಕ ಬಯಕೆಯ ಪೂರೈಕೆಗೆ ಕ್ರಮಬದ್ಧವಾದ ವ್ಯವಸ್ಥೆಯೊಂದನ್ನು ನಿರ್ಮಿಸಲೋಸುಗ ವಿವಾಹವು ಹುಟ್ಟಿಕೊಂಡಿತು ಎನ್ನಬಹುದು. ಪಾಶ್ಚಿಮಾತ್ಯ ದೇಶಗಳಲ್ಲಿ "ವಿವಾಹವು ಸ್ತ್ರೀ- ಪುರುಷರ ನಡುವೆ ಲೈಂಗಿಕ ಹಾಗೂ ಮಾನಸಿಕ ಸಂಬಂಧವನ್ನು ದೃಢೀಕರಿಸುವ ಮತ್ತು ಸಂತಾನೋತ್ಪತ್ತಿಗಾಗಿ ಉದ್ದೇಶಪೂರ್ವಕವಾಗಿ

ಏರ್ಪಡಿಸಿಕೊಂಡ ಒಪ್ಪಂದ" ಮುಂತಾದ ಲೌಕಿಕ ಅರ್ಥದಲ್ಲಿ ವ್ಯಾಖ್ಯಾನಿಸಲಾಗಿದೆ. ಆದರೆ ಭಾರತದ ಹಿಂದೂಗಳಲ್ಲಿ ವಿವಾಹವು "ಪವಿತ್ರವಾದ ಧಾರ್ಮಿಕ ವಿಧಿ", ಪುರುಷಾರ್ಥಗಳ ಸಾಧನೆಗಾಗಿ ವಿವಾಹದ ಮೂಲಕ ಗೃಹಸ್ಥಾಶ್ರಮವನ್ನು ಸ್ವೀಕರಿಸುವುದು ಪವಿತ್ರವಾದ ಕಾರ್ಯ ಎಂಬರ್ಥದಲ್ಲಿ ಪರಿಭಾವಿಸಲಾಗಿದೆ. ವಿವಾಹವೆನ್ನುವಂತಹ ಸಂಸ್ಥೆ ಸಾರ್ವತ್ರಿಕವಾದುದಾದರೂ ಅದರ ರೂಪ ಸ್ವರೂಪಗಳಲ್ಲಿ, ವಿವಾಹದ ವಯಸ್ಸು, ಸಂಗಾತಿಗಳ ಆಯ್ಕೆಯ ಸ್ವಾತಂತ್ರ್ಯ, ವಿವಾಹ ವಿಚ್ಛೇದನ, ವಿಧವಾ ಪುನರ್‌ವಿವಾಹ ಮುಂತಾದವುಗಳಲ್ಲಿ ಭಿನ್ನತೆಯಿದೆ. ವಿವಾಹದ ವಯಸ್ಸಿನ ಹಿನ್ನೆಲೆಯಲ್ಲಿ ಕಾಣಿಸಿಕೊಂಡ ಬಾಲ್ಯವಿವಾಹ ಎಂಬುದು ಸ್ಮೃತಿಗಳ ಕಾಲದಲ್ಲಿ (ಕ್ರಿ.ಶ. 100-ಕ್ರಿ.ಶ. 900) 8 ರಿಂದ 10ವರ್ಷದ ಹುಡುಗಿಯರಿಗೆ ಮಾಡುವ ಸಂಪ್ರದಾಯ ಆರಂಭಗೊಂಡಿತು. ಮನುಸ್ಮೃತಿಯು 30 ವರ್ಷದ ಗಂಡಸು 12 ವರ್ಷದ ಹುಡುಗಿಯನ್ನು, 24 ವರ್ಷದ ಗಂಡಸು 8 ವರ್ಷದ ಹುಡುಗಿಯನ್ನು ವಿವಾಹವಾಗಬಹುದೆಂದು ತಿಳಿಸುತ್ತದೆ. ಆದರೆ ಮಧ್ಯಯುಗೀನ ಕಾಲದಲ್ಲಿ ಬಾಲ್ಯ ವಿವಾಹವು ಹೆಚ್ಚು ತೀವ್ರಗೊಂಡಿತು[699]. ಆನಂತರ ಭಾರತದ ಸಮಾಜದ ಅವಿಭಾಜ್ಯ ಅಂಗವಾಯಿತು. ಆದರೆ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರವೇಶದೊಂದಿಗೆ ಸಂಗಾತಿಗಳ ಆಯ್ಕೆ ಸ್ವಾತಂತ್ರ್ಯ, ವಿವಾಹವಾಗುವ ವ್ಯಕ್ತಿಯು ದೈಹಿಕವಾಗಿ ಹಾಗೂ ಮಾನಸಿಕವಾಗಿ ಪ್ರಬುದ್ಧರಾಗಿರಬೇಕು ಎಂಬುದು ಮುಂತಾದವು ವಿವಾಹದಲ್ಲಿ ಪ್ರಮುಖಾಂಶಗಳಾದಾಗ ಬಾಲ್ಯ ವಿವಾಹ ವ್ಯವಸ್ಥೆಯು ಒಂದು ಸಮಾಜದ ಬೆಳವಣಿಗೆಗೆ ಪಿಡುಗೆಂಬ ಭಾವನೆ ಬೆಳೆಯಿತು. ರಾಜಾರಾಮ್ ಮೋಹನ್ ರಾಯ್, ಕೇಶವ ಚಂದ್ರಸೇನ್ ಮುಂತಾದವರು ವಿರೋಧಿಸಿದ್ದರಿಂದ 1872ರಲ್ಲಿ ದಿ ನೇಟಿವ್ ಮ್ಯಾರಿಯೇಜ್ ಆಕ್ಟ್ ಎಂಬ ಶಾಸನವನ್ನು ಜಾರಿಗೆ ತಂದು ಬಾಲ್ಯ ವಿವಾಹವನ್ನು ನಿಷೇಧಿಸಿತು. ಈ ಶಾಸನವು ಜಾರಿಗೆ ಬಂದ ನಂತರವೂ ಬಾಲ್ಯ ವಿವಾಹಗಳು ನಿಲ್ಲಲಿಲ್ಲ. ಆದ್ದರಿಂದ ಬೆಹ್ರಾಮ್‌ಜಿ ಮಲಬಾರಿ ಮುಂತಾವರು ಬಾಲ್ಯವಿವಾಹ ಹಾಗೂ ಅದರಿಂದುಂಟಾಗುತ್ತಿದ್ದ ವಿಧವೆಯರ ಸಮಸ್ಯೆಯನ್ನು ತಗ್ಗಿಸಲು ಸರ್ಕಾರದ ಮೇಲೆ ಒತ್ತಡ ತಂದರು. ಭಾರತ ಸರ್ಕಾರವು 1891ರಲ್ಲಿ 'ದಿ ಏಜ್ ಆಫ್ ಕನ್ಸೆಂಟ್ ಬಿಲ್' ಎಂಬ ಶಾಸನವನ್ನು ಜಾರಿಗೆ ತಂದು 12 ವರ್ಷದವರೆಗಿನ ಹುಡುಗಿಯರನ್ನು ವಿವಾಹವಾಗುವುದನ್ನು ನಿಷೇಧಿಸಲಾಯಿತು[700].

ಬ್ರಿಟಿಷ್ ಭಾರತದ ನೇರ ಆಳ್ವಿಕೆಯ ಪ್ರದೇಶಗಳಲ್ಲಿ ಜಾರಿಗೆ ಬಂದ 'ದಿ ಏಜ್ ಆಫ್ ಕನ್ಸೆಂಟ್ ಬಿಲ್' ಅನ್ನು ಮೈಸೂರು ಸಂಸ್ಥಾನದಲ್ಲೂ ಜಾರಿಗೊಳಿಸಬೇಕೆಂದು ಸುಧಾರಣಾವಾದಿಗಳು 1891ರಲ್ಲಿ ಬೇಡಿಕೆಯಿತ್ತರು. ಆದರೆ ದಿವಾನರು ಆ ಶಾಸನದ ಅವಶ್ಯಕತೆ ಇದೆಯೇ ಎಂದು ಅನುಮಾನ ವ್ಯಕ್ತಪಡಿಸಿದರು. ಅದೇ ವರ್ಷ ಪ್ರಜಾಪ್ರತಿನಿಧಿ ಸಭೆಯಲ್ಲಿ ಸದಸ್ಯರು ಬಾಲ್ಯವಿವಾಹಗಳನ್ನು ನಿಷೇಧಿಸಬೇಕೆಂದು ಅಭಿಪ್ರಾಯಪಟ್ಟರು. ಹಾಗೆಯೇ ಆರು ತಿಂಗಳ ಬಾಲಕಿಯನ್ನು 5 ವರ್ಷದ ಹುಡುಗನಿಗೆ ಹಾಗೂ 7 ವರ್ಷದ ಹುಡುಗಿಯನ್ನು 65 ವರ್ಷದ ನಿವೃತ್ತ ಉದ್ಯೋಗಿಯೊಂದಿಗೆ

---

*699. ಆನಂದನ್ ಪಿ., ಹಿಸ್ಟರಿ ಆಫ್ ಸೋಷಿಯಲ್ ಲೆಜಿಸ್ಲೇಷನ್ ಇನ್ ತಮಿಳುನಾಡು 1885-1947, ಅಪ್ರಕಟಿತ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, 1992, ಪು. 278*

*700. ಅದೇ., ಪು. 279*

ಬಾಲ್ಯವಿವಾಹ ನಡೆಸಿದ ಉದಾಹರಣೆಗಳನ್ನು ಉಲ್ಲೇಖಿಸಿ ಅಂತಹವುಗಳನ್ನು ತಡೆಗಟ್ಟಬೇಕೆಂದು ವಾದಿಸಿದರು[701]. ಸರ್ಕಾರವು ಸದಸ್ಯರ ಬೇಡಿಕೆಯನ್ನು ಒಪ್ಪಿ ಅದರ ಬಗ್ಗೆ ಮುಖ್ಯ ಮಠಗಳಿಂದ ಅಭಿಪ್ರಾಯ ಕೇಳಿ ತೀರ್ಮಾನ ಕೈಗೊಳ್ಳುವುದಾಗಿ ತಿಳಿಸಿತು. ಮಠಾಧೀಶರೂ ಸಹ ಬಾಲ್ಯವಿವಾಹವು ಶಾಸ್ತ್ರಕ್ಕೆ ವಿರುದ್ಧವಾದುದೆಂದು ಅಭಿಪ್ರಾಯ ತಿಳಿಸಿದರು[702]. ಇವುಗಳ ಜೊತೆಗೆ 1891ರ ಜನಗಣತಿಯ ವೈವಾಹಿಕ ವಿವರಗಳೂ, ಸಾರ್ವಜನಿಕ ಅಭಿಪ್ರಾಯವನ್ನು ಬೆಂಬಲಿಸುವಂತಿದ್ದವು. ಆ ವರದಿಯ ಪ್ರಕಾರ 1891ರಲ್ಲಿ 9ವರ್ಷಕ್ಕಿಂತ ಕೆಳಗಿನ 18,000 ಹುಡುಗಿಯರು 4 ವರ್ಷಕ್ಕಿಂತ ಕೆಳಗಿನ 11,157 ಹುಡುಗಿಯರು, 5ರಿಂದ 9ವರ್ಷಗಳ ನಡುವಿನ 1,81,000 ಹುಡುಗಿಯರು ವಿವಾಹವಾಗಿದ್ದರು. ಒಟ್ಟಾರೆ 9 ವರ್ಷಕ್ಕಿಂತ ಒಳಗಿನ 1, 92,000 ವಿವಾಹವಾದ ಹುಡುಗಿಯರಲ್ಲಿ 3,560 ಜನ ಬಾಲವಿಧವೆಯರಾಗಿದ್ದರು. ಹಾಗೆಯೇ ಹುಡುಗರಲ್ಲಿ 512 ಜನ 4ವರ್ಷಕ್ಕೆ ಮೊದಲೇ, 8,173 ಜನ 4ರಿಂದ 9ವರ್ಷಗಳ ನಡುವೆ 72,831 ಜನ 10 ರಿಂದ 14 ವರ್ಷಗಳ ನಡುವೆ ಹೀಗೆ 14 ವರ್ಷಗಳ ಮೊದಲೇ ಒಟ್ಟು 81,516 ಹುಡುಗರು ವಿವಾಹವಾಗಿದ್ದರು[703]. ಮೇಲ್ಕಂಡ ವರದಿಯ ಅಂಶಗಳನ್ನರಿತ ಎಲ್ಲ ಸುಧಾರಣಾವಾದಿಗಳು ಬಾಲ್ಯವಿವಾಹವೆಂಬ ದುಷ್ಟ ಪದ್ಧತಿಯನ್ನು ಕೊನೆಗಾಣಿಸಬೇಕೆಂದು ಪ್ರತಿಪಾದಿಸಿದರು. ಎಂ. ವೆಂಕಟಕೃಷ್ಣಯ್ಯನಂತಹವರು 18 ವರ್ಷದ ಕೆಳಗಿನ ಹುಡುಗಿಯರ ವಿವಾಹಗಳನ್ನು ನಿಷೇಧಿಸಬೇಕೆಂದು ಸಲಹೆ ನೀಡಿದರು. ಹಾಗೆಯೇ ಸರ್ಕಾರವು ಸಾರ್ವಜನಿಕರ ಹಿತಾಸಕ್ತಿಯನ್ನು, ಸಾಮಾಜಿಕ ನ್ಯಾಯ ಹಾಗೂ ಕಲ್ಯಾಣವನ್ನು ಸಾಧಿಸಲು ಮಧ್ಯೆ ಪ್ರವೇಶಿಸಬೇಕೆಂದು ಒತ್ತಾಯಿಸಿದರು[704]. ಸರ್ಕಾರವು ಎಚ್ಚರಿಕೆಯಿಂದ ಮುಂದುವರಿದು 1892ರಲ್ಲಿ 8 ವರ್ಷದ ಕೆಳಗಿನ ಹೆಣ್ಣುಮಕ್ಕಳ ವಿವಾಹಗಳನ್ನು ಮತ್ತು 50ವರ್ಷದ ವಯಸ್ಕರು 16ವರ್ಷದ ಕೆಳಗಿನ ಹುಡುಗಿಯರನ್ನು ವಿವಾಹವಾಗುವಂತಿಲ್ಲ ಎಂಬುದಾಗಿ ಶಾಸನವನ್ನು ಆರಂಭದಲ್ಲಿ ತರುವುದಾಗಿ ಹೇಳಿಕೆ ನೀಡಿತು[705]. ಅಂತಿಮವಾಗಿ 1894ರಲ್ಲಿ ಸರ್ಕಾರವು ಬಾಲ್ಯವಿವಾಹ ನಿರ್ಬಂಧ ಶಾಸನವನ್ನು ಜಾರಿಗೊಳಿಸಿತು. ಈ ಶಾಸನವು 8ವರ್ಷಕ್ಕಿಂತ ಕೆಳಗಿನ ಹಾಗೂ 50 ವರ್ಷದ ಮೇಲ್ಪಟ್ಟವರು 16ವರ್ಷದ ಕೆಳಗಿನ ಹುಡುಗಿಯರನ್ನು ವಿವಾಹವಾಗುವುದನ್ನು ಪ್ರತಿಬಂಧಿಸಿತು. ಇದನ್ನು ಮೀರಿ ವಿವಾಹವಾದವರಿಗೆ ಎರಡು ವರ್ಷ ಸೆರೆವಾಸ ಮತ್ತು ದಂಡ ವಿಧಿಸಲಾಗುತ್ತಿತ್ತು. ಬಾಲ್ಯವಿವಾಹಗಳನ್ನು ಸಂಘಟಿಸಿದವರಿಗೂ ಸಹ ಒಂದು ತಿಂಗಳು ಸೆರೆವಾಸ ಮತ್ತು 1,000 ರೂಪಾಯಿ ದಂಡ ವಿಧಿಸಲಾಗುತ್ತಿತ್ತು[706]. ಭಾರತದಾದ್ಯಂತ ಈ ಶಾಸನವನ್ನು ಪ್ರಶಂಸಿಸಲಾಯಿತು. ಭಾರತದ ಇನ್ನಿತರ ರಾಜ್ಯಗಳು ಈ ಕ್ರಮವನ್ನು ಅನುಕರಿಸಬೇಕೆಂದು ಪ್ರಮುಖ ಸುಧಾರಕರು ಅಭಿಪ್ರಾಯಪಟ್ಟರು.

---

*701. ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರಸೆಂಟೇಟಿವ್ ಅಸೆಂಬ್ಲಿ, 1891, ಸಬ್ಜೆಕ್ಟ್ ನಂ.13*

*702. ಸದಾಶಿವ ಕೆ., ಪೂರ್ವೋಕ್ತ, ಪು. 212*

*703. ಸೆನ್ಸಸ್ ಆಫ್ ಇಂಡಿಯಾ, ಮೈಸೂರು, 1891. ರಿಪೋರ್ಟ್*

*704. ಹನುಮಂತಪ್ಪ ಟಿ., ಹಿಸ್ಟರಿ ಆಫ್ ಲೆಜಿಸ್ಲೇಚರ್, ಸಂಪುಟ-I, ಬೆಂಗಳೂರು, 1989, ಪು. 259*

*705. ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರಸೆಂಟೇಟಿವ್ ಅಸೆಂಬ್ಲಿ, 1890*

ಮದ್ರಾಸ್‌ನಲ್ಲಿ ಏರ್ಪಟ್ಟ 12ನೇ ಸೋಷಿಯಲ್ ಕಾನ್ಫರೆನ್ಸ್‌ನಲ್ಲಿ ಸಾಮಾಜಿಕ ಅನಿಷ್ಟಗಳನ್ನು ಹೋಗಲಾಡಿಸಲು ಕೈಗೊಂಡ ಮೈಸೂರು ಸರ್ಕಾರದ ಕ್ರಮವನ್ನು ಪ್ರಶಂಸಿಸಲಾಯಿತು[707].

ಮೈಸೂರು ಸಂಸ್ಥಾನದಲ್ಲಿ ಈ ಶಾಸನವು ಯಶಸ್ವಿಯಾಗಿ ಕಾರ್ಯ ನಿರ್ವಹಿಸಲಿಲ್ಲ. 1895ರಲ್ಲಿ ಶಾಸನದ ಮುಖ್ಯಾಂಶಗಳಿಗೆ ವಿರುದ್ಧವಾಗಿ ವಿವಾಹಗಳು ನಡೆದವು. ಸರ್ಕಾರವು ಪೊಲೀಸ್ ಮತ್ತು ನ್ಯಾಯಾಂಗದ ಅಧಿಕಾರಿಗಳಿಂದ ಅವರ ವ್ಯಾಪ್ತಿಯ ಪ್ರದೇಶಗಳಲ್ಲಾದ ಅಂತಹ ಘಟನೆಗಳ ಬಗ್ಗೆ ಮಾಹಿತಿಯನ್ನು ಕೊಡುವಂತೆ ಕೇಳಿತು[708]. 1903-04ರಲ್ಲಿ ಬಾಲ್ಯ ವಿವಾಹ ನಿರ್ಬಂಧ ಶಾಸನದಡಿಯಲ್ಲಿ 28 ಮೊಕದ್ದಮೆಗಳು ದಾಖಲಾಗಿ 57 ಜನರಿಗೆ ಶಿಕ್ಷೆಗಳಾದವು. 1904-05 ರಲ್ಲಿ 28 ಮೊಕದ್ದಮೆಗಳಲ್ಲಿ 78 ಜನ ಶಿಕ್ಷೆಗೊಳಗಾದರು[709]. 1909-10ರಲ್ಲಿ 4 ಮೊಕದ್ದಮೆಗಳಲ್ಲಿ 8 ಜನಕ್ಕೂ, 1910-11ರಲ್ಲಿ 8 ಮೊಕದ್ದಮೆಗಳಲ್ಲಿ 22 ಜನ ಶಿಕ್ಷೆಗೊಳಗಾದರು. 1929-30ರಲ್ಲಿ ಎರಡು ಮೊಕದ್ದಮೆಗಳು ದಾಖಲಾಗಿ ಎರಡಕ್ಕೂ ಶಿಕ್ಷೆ ವಿಧಿಸಲಾಯಿತು. 1935-36ರಲ್ಲಿ ಒಂದು ಮೊಕದ್ದಮೆ ದಾಖಲಾಗಿ ವಿಚಾರಣೆಯಲ್ಲಿತ್ತು. ಹೀಗೆ ವರ್ಷಗಳು ಕಳೆದಂತೆ ಈ ಶಾಸನವು ತನ್ನ ಪ್ರಭಾವವನ್ನು ಕಳೆದುಕೊಂಡಿತು. ಸರ್ಕಾರವು ಶಾಸನವನ್ನು ರೂಪಿಸುವುದರಲ್ಲಿ ಮಾದರಿಯಾಯಿತು. ಆದರೆ ಸಮಾಜದ ವಿರೋಧವನ್ನು ಕಟ್ಟಿಕೊಳ್ಳಬೇಕಾಗುತ್ತದೆಂಬ ಭಯದಿಂದ ಶಾಸನದ ನಿಯಮಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತರಲಿಲ್ಲ. 1913ರಲ್ಲಿ ಕೃಷ್ಣಮೂರ್ತಿ ಸಿ. ಎಂಬುವವರು 1911ರ ಜನಗಣತಿ ವರದಿಯಲ್ಲಿನ 5ರಿಂದ 10ವರ್ಷದ ನಡುವಿನ 3,000 ಹುಡುಗಿಯರು ವಿವಾಹವಾಗಿದ್ದು ಅದರಲ್ಲಿ 55 ಜನ ಬಾಲ ವಿಧವೆಯರಾಗಿದ್ದಾರೆ ಎಂಬ ಅಂಶವನ್ನು ಎತ್ತಿ ತೋರಿಸಿದರು. ಹಾಗೂ ಬಾಲಕ, ಬಾಲಕಿಯರ ವಿವಾಹದ ವಯೋಮಿತಿಯನ್ನು 10 ಮತ್ತು 16ಕ್ಕೆ ಹೆಚ್ಚಿಸಬೇಕೆಂದು ಒತ್ತಾಯಿಸಿದರು. ಆ ವಿಷಯದ ಮೇಲೆ ಸದನದಲ್ಲಿ ಮತದಾನ ನಡೆದಾಗ ವಿಷಯದ ಪರವಾಗಿ 68 ಮತ ಮತ್ತು ವಿರೋಧವಾಗಿ 71 ಮತಗಳು ಬಿದ್ದವು[710]. ಈ ಮೇಲಿನ ಅಂಶದಿಂದ ತಿಳಿದುಬರುವ ಅಂಶವೆಂದರೆ ಶಾಸನ ಜಾರಿಗೊಂಡ ನಂತರದ ಏಳು ವರ್ಷಗಳಲ್ಲೂ ಬಾಲ್ಯವಿವಾಹಗಳು ಹಾಗೂ ಬಾಲ ವಿಧವೆಯರು ಗುಟ್ಟಾಗಿ ಹೆಚ್ಚುತ್ತಿದ್ದುದು ಸರ್ಕಾರವು ಶಾಸನಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿರಲಿಲ್ಲ ಎಂಬುದನ್ನು ಪ್ರಸ್ತುತಪಡಿಸುತ್ತದೆ. ಹಾಗೆಯೇ ಸದನದಲ್ಲಿ ಶಾಸನವನ್ನು ತಿದ್ದುಪಡಿ ಮಾಡುವುದನ್ನು ಸಂಪ್ರದಾಯವಾದಿಗಳು ತಡೆಯುವಷ್ಟು ಪ್ರಬಲರಾಗಿದ್ದರು ಎಂಬುದು.

---

706. *ಲೆಜಿಸ್ಲೇಟಿವ್ ಫೈಲ್ಸ್ : ನಂ. 50 ಆಫ್ 1917, ವಿಷಯ ದಿ ಪ್ರಿವೆನ್ಷನ್ ಆಫ್ ಇನ್‌ಫ್ಯಾಂಟ್ ಮ್ಯಾರಿಯೇಜ್ ರೆಗ್ಯುಲೇಷನ್ X ಆಫ್ 1894*

707. *ಟ್ವೆಲ್ತ್ ಸೋಷಿಯಲ್ ಕಾನ್ಫರೆನ್ಸ್, ರೆಸೆಲ್ಯೂಷನ್ III, ಮದ್ರಾಸ್, 1898, ಪು. 375*

708. *ರೂಲ್ಸ್ ಅಂಡ್ ನೋಟಿಫಿಕೇಷನ್ಸ್, ಪಾರ್ಟ್ III, ಪು. 360*

709. *ಮೈಸೂರ್ ಅಡ್ಮಿನಿಸ್ಟ್ರೇಷನ್ ರಿಪೋರ್ಟ್, 1904-05, ಪು.16*

710. *ಹನುಮಂತಪ್ಪ ಟಿ., ಪೂರ್ವೋಕ್ತ, ಸಂಪುಟ-II, ಪು. 717*

ಬಾಲ್ಯವಿವಾಹದ ಪ್ರಶ್ನೆಯು ಮತ್ತೆ 1928ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚೆಗೆ ಬಂದಿತು. ಬೇರೆ ರಾಜ್ಯಗಳಾದ ಬರೋಡ, ಭೋಪಾಲ್, ಕಾಶ್ಮೀರ ಮತ್ತು ಇಂಪೀರಿಯಲ್ ಲೆಜಿಸ್ಲೇಟಿವ್ ಅಸೆಂಬ್ಲಿಗಳು ಬಾಲ್ಯ ವಿವಾಹದ ಬಗ್ಗೆ ಪ್ರಗತಿಪರ ಶಾಸನಗಳನ್ನು ತಂದಿದ್ದಾರೆ. ಆದರೆ ಮೈಸೂರು 1894ರಲ್ಲಿ ತಂದ ಶಾಸನವನ್ನು ತಿದ್ದುಪಡಿ ಮಾಡಿಲ್ಲ ಎಂದು ಅನೇಕ ಸದಸ್ಯರು ಟೀಕಿಸಿದರು. 1929ರಲ್ಲಿ ಬಾಲ್ಯವಿವಾಹ ನಿರ್ಬಂಧ ಶಾಸನ ಅಥವಾ ಶಾರದ ಆಕ್ಟ್ ಅನ್ನು ಭಾರತ ಸರ್ಕಾರ ಜಾರಿಗೊಳಿಸಿತು. ಈ ಶಾಸನವು ಹುಡುಗಿ ಹುಡುಗರ ವಿವಾಹದ ವಯಸ್ಸನ್ನು ಕ್ರಮವಾಗಿ 15 ಮತ್ತು 18 ಎಂದು ನಿಗದಿಗೊಳಿಸಿತು[711]. ಮೈಸೂರಿನಲ್ಲೂ ಈ ಶಾಸನವನ್ನು ಜಾರಿಗೊಳಿಸಬೇಕೆಂದು ಪುಟ್ಟಣ್ಣಚೆಟ್ಟಿ ಮುಂತಾದವರು ಒತ್ತಾಯಿಸಿದರು. ಈ ಶಾಸನವನ್ನು ಕುರಿತಂತೆ ಸಂಪ್ರದಾಯವಾದಿಗಳಿಗೂ ಸುಧಾರಣಾವಾದಿಗಳಿಗೂ ದೀರ್ಘ ಚರ್ಚೆಗಳು ನಡೆದವು. ಒಬ್ಬ ಸದಸ್ಯರು "ನಮ್ಮ ಜನದಲ್ಲಿ ಬಾಲ್ಯ ವಿವಾಹದ ಕೇಡು ತುಂಬಾ ಹೆಚ್ಚಿ ಹೋಗಿದೆ. ಇದನ್ನು ಖಂಡಿತವಾಗಿ ನಿಲ್ಲಿಸಬೇಕು. ಅದಕ್ಕೆ ಉಪಾಯವೇನೆಂದರೆ ಇನ್ನು ಮುಂದೆ ಸ್ಕೂಲ್ ಕಾಲೇಜುಗಳಿಗೆ ಸೇರಬರುವ ವಿದ್ಯಾರ್ಥಿಗಳಿಗೆ ಅವರು ವಿವಾಹಿತರಾಗಿದ್ದಲ್ಲಿ ಫ್ರೀಷಿಪ್, ಸ್ಕಾಲರ್‌ಷಿಪ್‌ಗಳನ್ನು ಕೊಡತಕ್ಕದ್ದಲ್ಲ ಮತ್ತು ಅವರಿಂದ ಫೀಜನ್ನು ದ್ವಿಗುಣವಾಗಿ ವಸೂಲ್ ಮಾಡಬೇಕು" ಎಂದು ಹೇಳಿದರು[712]. ಬಹುಸಂಖ್ಯಾತ ಬ್ರಾಹ್ಮಣರು, ವೈಶ್ಯರು ಮತ್ತು ಮುಸ್ಲಿಂ ಸದಸ್ಯರು ಶಾರದ ಆಕ್ಟನ್ನು ವಿರೋಧಿಸಿದರು. ಬ್ರಾಹ್ಮಣೇತರ ಸದಸ್ಯರಾದ ಎಚ್.ಸಿ. ದಾಸಪ್ಪ, ಟಿ.ಮರಿಯಪ್ಪ, ಎಸ್. ಸಂಜೀವಯ್ಯ ಮುಂತಾದವರು ವೈಜ್ಞಾನಿಕವಾಗಿ ಬಾಲ್ಯ ವಿವಾಹವು ಯುವ ಜನಾಂಗವನ್ನು ದೈಹಿಕವಾಗಿ ಹಾಗೂ ನೈತಿಕವಾಗಿ ಅಧಃಪತನಕ್ಕೆ ದೂಡುತ್ತದೆಂದೂ, ಸರಾಸರಿ ಜೀವಿಸುವ ಶಕ್ತಿಯನ್ನು ಕುಗ್ಗಿಸುತ್ತದೆಂದೂ, ಎಲ್ಲಕ್ಕಿಂತ ಹೆಚ್ಚಾಗಿ ಬಾಲ ವಿಧವೆಯರನ್ನು ಸೃಷ್ಟಿಸಿ ಶಾಶ್ವತವಾಗಿ ಅವರನ್ನು ದುಃಖದ ಮಡುವಿನಲ್ಲಿ ತಳ್ಳುತ್ತದೆಂದು ವಾದಿಸಿ ಶಾಸನವನ್ನು ಜಾರಿಗೊಳಿಸುವ ಮೂಲಕ ಸ್ತ್ರೀಯರನ್ನು ಉದ್ಧಾರಗೊಳಿಸಬೇಕೆಂದು ಮನವಿ ಮಾಡಿಕೊಂಡರು[713]. ಆದರೆ ಸಾಂಪ್ರದಾಯಿಕ ವರ್ಗಗಳ ಸದಸ್ಯರಾದ ವಿಶ್ವೇಶ್ವರರಾವ್, ಭಾಷ್ಯಂ ಅಯ್ಯಂಗಾರ್, ಕೃಷ್ಣರಾವ್ ಮುಂತಾದವರು ಶಾಸ್ತ್ರಕ್ಕೆ ವಿರುದ್ಧವಾದುದೆಂದೂ, ಅಲ್ಪಸಂಖ್ಯಾತ ವರ್ಗಗಳ ಆಚರಣೆಗಳಿಗೆ ಸರ್ಕಾರ ಹಸ್ತಕ್ಷೇಪ ಮಾಡಬಾರದೆಂದು ವಾದಿಸಿದರು. ಅಲ್ಲದೆ ಬಾಲ್ಯವಿವಾಹವು ಹುಡುಗಿಯರ ಕನ್ಯತ್ವವನ್ನು ಕಾಪಾಡಲು ಅವಶ್ಯವೆಂದೂ ಮತ್ತು ಅವರು ವಯಸ್ಕರಾದರೆ ನೈತಿಕ ಅಪರಾಧಗಳು ಹೆಚ್ಚುತ್ತವೆಂದು ಅಭಿಪ್ರಾಯಪಟ್ಟರು. ವೈಶ್ಯ ವರ್ಗದ ಪರವಾಗಿ ಸುಬ್ಬರಾಮ ಚೆಟ್ಟಿಯವರು ಈ ಶಾಸನವು ತಮ್ಮ ಪರ್ದಾಪದ್ಧತಿಗೆ ಮಾರಕವಾಗುತ್ತದೆಂದು ವಿರೋಧಿಸಿದರು. ಶಾಸನದ ಸಾಮಾನ್ಯ ನಿಯಮಗಳನ್ನು ಸದನದಲ್ಲಿ ಮತಕ್ಕೆ ಹಾಕಿದಾಗ 98 ಮತಗಳು ಪರವಾಗಿ ಮತ್ತು 87 ವಿರೋಧವಾಗಿದ್ದವು[714]. 1894ರ

---

*711. ಜಿ.ಓ. 2636, ಹೋಮ್ ಡಿಪಾರ್ಟ್‌ಮೆಂಟ್, ದಿನಾಂಕ 9ನೇ ಅಕ್ಟೋಬರ್ 1926*
*- ಉಲ್ಲೇಖ : ಪಿ. ಆನಂದನ್, ಪೂರ್ವೋಕ್ತ, ಪು. 280*

*712. ಡಿ.ವಿ. ಗುಂಡಪ್ಪ, ಪೂರ್ವೋಕ್ತ ಸಂಪುಟ-I, ಪು. 64-65*

*713. ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಜೂನ್ 1932, ಪು. 104, 125*

ಬಾಲ್ಯ ವಿವಾಹ ನಿರ್ಬಂಧ ಶಾಸನಕ್ಕೆ ತಿದ್ದುಪಡಿ ತಂದು ಅಪ್ರಾಪ್ತ ಬಾಲಿಕಿಯೆಂದರೆ 11 ವರ್ಷಕ್ಕೆ ಕೆಳಗಿನವರೆಂದು ಬದಲಾವಣೆ ಮಾಡಿ ಉಳಿದ ನಿಯಮಗಳಾದ 50 ವರ್ಷ ಮೇಲ್ಪಟ್ಟವರು 14ವರ್ಷದ ಕೆಳಗಿನ ಹುಡುಗಿಯರನ್ನು ವಿವಾಹವಾಗಬಾರದೆಂದು ತಿದ್ದುಪಡಿಗೊಳಿಸಲಾಯಿತು[715]. ಆದರೆ ಸಂಪ್ರದಾಯವಾದಿಗಳು ಶಾಸನಸಭೆ ಹಾಗೂ ಸಾರ್ವಜನಿಕವಾಗಿ ಈ ಶಾಸನಕ್ಕೆ ವಿರೋಧ ವ್ಯಕ್ತಪಡಿಸಿದರು. ಆ ಕಾಲದ ಸಮಾಜ ಹಾಗೂ ರಾಜಕುಟುಂಬದ ಮೇಲೆ ಅಗಾಧ ಪ್ರಭಾವ ಹೊಂದಿದ್ದ ಶೃಂಗೇರಿಯ ಜಗದ್ಗುರುಗಳಾದ ಶ್ರೀ ಚಂದ್ರಶೇಖರ ಭಾರತಿಗಳವರು ಅಂದಿನ ಪ್ರಿವಿ ಕೌನ್ಸಿಲ್‌ನ ಸದಸ್ಯರಾದ ಶ್ರೀನಿವಾಸಶಾಸ್ತ್ರಿಗಳೊಂದಿಗೆ 'ಶಾರದ ಬಿಲ್' ಬಗ್ಗೆ ಆ ಮೂಲಕ ಬಾಲ್ಯವಿವಾಹ ನಿರ್ಬಂಧದ ಬಗ್ಗೆ ವಿರೋಧ ವ್ಯಕ್ತಪಡಿಸುದುದನ್ನು ಕಾಣಬಹುದು. ಭಾರತ ಸರ್ಕಾರವು 1929ರಲ್ಲಿ ತಂದ ಬಾಲ್ಯವಿವಾಹ ನಿರ್ಬಂಧ ಕಾಯ್ದೆಗೆ 'ಶಾರದ ಬಿಲ್' ಎಂಬ ಹೆಸರನ್ನಿತ್ತಿದ್ದರು. ಶೃಂಗೇರಿಯ ಗುರುಗಳು ಶಾರದ ದೇವಿಯ ಹೆಸರನ್ನು ಶಾಸನಕ್ಕೆ ಇಟ್ಟಿರುವುದು "ಶಾರದಾ ದೇವಿಗೆ ಅತ್ಯಂತ ಅಸಮ್ಮತವಾದ ಒಂದು ಸಂದರ್ಭಕ್ಕೆ ಆಕೆಯ ಹೆಸರನ್ನೇ ಇಟ್ಟಿದ್ದಾರಲ್ಲ? ಈ ವೈಪರೀತ್ಯವನ್ನು ತಪ್ಪಿಸಬೇಕು........ ವೈಸರಾಯನ್ನು ಕಂಡು ಆತನಿಗೆ ತಿಳುವಳಿಕೆ ಕೊಟ್ಟು, ಈ ಶಾರದಾ ಮಸೂದೆ ಎಂಬ ಅಪಸ್ಮಾರವನ್ನು ನಿಲ್ಲಿಸಬೇಕು. ಈ ಉದ್ದೇಶಕ್ಕೆ ಸಹಾಯವಾಗಬೇಕೆಂದು ನಾವು ಈಗ ಹದಿನೈದು ದಿನದಿಂದ ಎಲ್ಲ ಪಾಠಪ್ರವಚನಗಳನ್ನು ನಿಲ್ಲಿಸಿ ನಮ್ಮ ಮಠದ ವಿದ್ವಾಂಸರೂ ವಿದ್ಯಾರ್ಥಿಗಳೂ ಸತತವಾಗಿ ಗಾಯತ್ರೀ ಪುರಶ್ಚರಣ ಮಾಡತಕ್ಕದ್ದೆಂದು ನಿಶ್ಚಯ ಮಾಡಿದ್ದೇವೆ. ಈ ಮಸೂದೆ ತೊಡೆದುಹೋಗುವವರೆಗೂ ನಾವು ಈ ವ್ರತವನ್ನು ನಡೆಸಬೇಕೆಂದು ಸಂಕಲ್ಪಿಸಿದ್ದೇವೆ'[716] ಎಂದು ತಿಳಿಸಿದರು. ಅದಕ್ಕೆ ಶ್ರೀನಿವಾಸ ಶಾಸ್ತ್ರಿಗಳು ಗುರುಗಳಿಗೆ "ಈ ಮಸೂದೆಗೆ 'ಶಾರದಾ ಕಾನೂನು' ಎಂದು ಹೆಸರು ಬಂದಿರುವುದು ಅದನ್ನು ಶ್ರೀ ಶಾರದಾ ದೇವಿಗೆ ಅಂಕಿತ ಮಾಡಬೇಕೆಂದಾಗಲೀ, ಅವಹೇಳನ ಮಾಡಬೇಕೆಂದಾಗಲೀ ಅಲ್ಲ. ಆ ಹೆಸರಿಗೆ ಕಾರಣ ಅದರ ಪ್ರತಿಪಾದಕರ ಹೆಸರು. ಆತನ ಹೆಸರು ಹರವಿಲಾಸ ಶಾರದಾ (HarBilas Sarada) ಎಂದು. ಆತನು ಹಿಂದೂ ಧರ್ಮದಲ್ಲಿ ಅತ್ಯಂತ ಶ್ರದ್ಧೆಯುಳ್ಳವನು; ಒಳ್ಳೆಯ ಮನುಷ್ಯ. ಆ ಕಾನೂನಿನ ಸದ್ಯದ ಪ್ರತಿಪಾದಕನು ಧರ್ಮಾಭಿಮಾನಿ. ಆತನು ಪ್ರತಿಪಾದಿಸುತ್ತಿರುವ ಕಾನೂನಿಗೆ ಜನ ಆತನ ಹೆಸರನ್ನೇ ಇಟ್ಟಿದ್ದಾರೆ" ಎಂದು ಸಮಜಾಯಿಷಿ ಹೇಳಿದರು. ಅಲ್ಲದೆ ಬಾಲ್ಯವಿವಾಹಕ್ಕೆ ಶ್ರುತಿ ಸ್ಮೃತಿಗಳಲ್ಲಿ ಆಧಾರಗಳಿಲ್ಲವೆಂದು, ಶಾಸ್ತ್ರಗಳಲ್ಲಿ ವಿಹಿತವಾಗಿರುವುದು ಋತುಮತಿಯಾದಾಕೆಯ ವಿವಾಹವೆಂದೇ, ಗೃಹ್ಯಸೂತ್ರಗಳು ಹೇಳುವುದೆಲ್ಲ ಪ್ರೌಢಳಾದವಳನ್ನು ಕುರಿತೇ ಎಂದೂ ತಿಳಿ ಹೇಳಿದರು[717].

ಒಟ್ಟಾರೆ ಬಾಲ್ಯವಿವಾಹ ನಿರ್ಬಂಧ ಶಾಸನಕ್ಕೆ ತಿದ್ದುಪಡಿ ತರುವುದನ್ನು ಕೆಲವೇ ಅಲ್ಪಸಂಖ್ಯಾತ ಗುಂಪುಗಳು

---

*714. ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಜೂನ್ 1932, ಪು. 125-127*

*715. ಲೆಜಿಸ್ಲೇಟಿವ್ ಫೈಲ್ಸ್ ನಂ. 65, ಆಫ್ 1935, ಸೀರಿಯಲ್ ನಂ. 1*

*ವಿಷಯ : ಅಮೆಂಡ್‌ಮೆಂಟ್ ಆಫ್ ದಿ ಮೈಸೂರ್ ಇನ್‌ಫ್ಯಾಂಟ್ ಮ್ಯಾರೇಜ್ ಪ್ರಿವೆನ್ಷನ್ ರೆಗ್ಯುಲೇಷನ್ X ಆಫ್ 1894*

*716. ಗುಂಡಪ್ಪ ಡಿ.ವಿ., ಜ್ಞಾಪಕ ಚಿತ್ರಶಾಲೆ, 1ರಿಂದ 8, ಹಲವರು ಸಾರ್ವಜನಿಕರು -6, ಕಾವ್ಯಾಲಯ ಪ್ರಕಾಶನ, ಮೈಸೂರು, 1999 ಪು. 147*

ಪ್ರತಿಬಂಧಿಸಿದವು. ರಾಜಮನೆತನದಿಂದ ಇದಕ್ಕೆ ಬೆಂಬಲ ಸಿಕ್ಕಿದ್ದು ಯುವರಾಜ ಕಂಠೀರವ ನರಸಿಂಹರಾಜ ಒಡೆಯರಿಂದ ಮಾತ್ರ. ಅವರು ಬಾಲ್ಯ ವಿವಾಹಕ್ಕೆ ವಿರುದ್ಧವಾಗಿ ವಾದಿಸಿ, ಹೆಣ್ಣು ಮಕ್ಕಳಿಗೆ ತೀರ ಚಿಕ್ಕ ವಯಸ್ಸಿನಲ್ಲೇ ವಿವಾಹ ಮಾಡುವುದರಿಂದ ಅವರ ಸಂತಾನವು ರೋಗರುಜಿನಗಳಿಗೆ ಗುರಿಯಾಗಿ ಅಕಾಲ ಮರಣಕ್ಕೆ ಆಹುತಿಯಾಗುವ ಭೀಕರ ಸ್ಥಿತಿಯನ್ನು ವರ್ಣಿಸಿ ಬಾಲ್ಯವಿವಾಹದ ದೆಸೆಯಿಂದ ತಾಯಿ ಮಕ್ಕಳ ಆರೋಗ್ಯವು ಹಾಳಾಗುವುದಿಲ್ಲವೆ? ಹಾಗಿದ್ದೂ ಹೆಣ್ಣು ಮಕ್ಕಳಿಗೆ ತೀರ ಬಾಲ್ಯದಲ್ಲೇ ವಿವಾಹ ಮಾಡುವ ಛಲವೇಕೆ? ಎಂದು ಪ್ರಶ್ನಿಸಿದ್ದರು[718]. ಆದರೆ ಮಹಾರಾಜರಾದ ನಾಲ್ವಡಿಯವರು ಸಾಮಾಜಿಕ ವಿಚಾರಗಳಿಗೆ ಸಂಬಂಧಪಟ್ಟಂತೆ ಅಭಿಪ್ರಾಯಗಳನ್ನು ಬಹಿರಂಗವಾಗಿ ಎಲ್ಲಿಯೂ ಹೇಳಿಕೊಂಡಿಲ್ಲ. ಹಾಗೆಯೆ ಸಾಮಾಜಿಕ ವಿಚಾರಗಳಿಗೆ ಸಂಬಂಧಪಟ್ಟಂತೆ ಸುಧಾರಣೆಗೆ ತಮ್ಮ ಭಾಷಣಗಳ ಮೂಲಕ ಜನರನ್ನು ಪರಿವರ್ತನೆಗೆ ಮುಂದಾಗುವಂತೆ ಕರೆ ನೀಡಿದ ಉದಾಹರಣೆಯಿಲ್ಲ. ಹಾಗಾಗಿ ನಾಲ್ವಡಿ ಸರ್ಕಾರವು ಬಾಲ್ಯವಿವಾಹ ನಿರ್ಬಂಧ ಶಾಸನವನ್ನು ತಿದ್ದುಪಡಿಯೊಂದಿಗೆ ಜಾರಿಗೊಳಿಸಬೇಕೆಂಬ ಬದ್ಧತೆ ಹೊಂದಿರಲಿಲ್ಲವೆಂದೇ ಹೇಳಬಹುದು. ಸಾರ್ವಜನಿಕ ಅಭಿಪ್ರಾಯವು ಸಹ ಸಾಂಪ್ರದಾಯಿಕತೆಯನ್ನು ಮೀರುವಂತಹದ್ದಾಗಿರಲಿಲ್ಲ.

### ಬಿ) ವಿಧವಾ ಪುನರ್ವಿವಾಹ ಶಾಸನ

ವಿಧವೆಯರ ಪುನರ್ ವಿವಾಹದ ಬಗ್ಗೆ ವೈದಿಕ ಕಾಲದಲ್ಲಿ ನಿರ್ಬಂಧಗಳಿರಲಿಲ್ಲ. ಆದರೆ ಸ್ಮೃತಿಕಾರರಾದ ಮನುಸ್ಮೃತಿಯಲ್ಲಿ ಕನ್ಯೆ ಒಮ್ಮೆ ವಿವಾಹಕ್ಕೊಳಗಾದರೆ ಅವಳಿಗೆ ಪುನರ್‌ವಿವಾಹವಿಲ್ಲ ಎಂದು ನಿರ್ಬಂಧಿಸಲಾಯಿತು. ಯಾಜ್ಞವಲ್ಕ್ಯನು ಸ್ತ್ರೀ ತನ್ನ ಗಂಡನ ಸಾವಿನ ನಂತರ ಮತ್ತೊಬ್ಬ ಗಂಡಿನ ಜೊತೆ ಸೇರಲು ಅವಕಾಶ ನೀಡಿದರೆ ಇಡೀ ಸಾಮಾಜಿಕ ವ್ಯವಸ್ಥೆ ಹಾಳಾಗುವ ಭಯವಿರುತ್ತದೆಂದು ವ್ಯಾಖ್ಯಾನಿಸಿದ[719]. ಹೀಗೆ ಭಾರತೀಯ ಸಮಾಜದಲ್ಲಿ ಸ್ತ್ರೀ ವಿಧವೆಯರು ಶಾಶ್ವತವಾಗಿ ದುರವಸ್ಥೆಗೀಡಾದರು. ಅದರಲ್ಲೂ ಬಾಲ್ಯವಿವಾಹ ವ್ಯವಸ್ಥೆಯು ಕಟ್ಟುನಿಟ್ಟಾದಂತೆ ವಿಧವೆಯರ ಸಂಖ್ಯೆಯೂ ಹೆಚ್ಚಿತು. ಹಾಗೆಯೇ ಸತಿ ಪದ್ಧತಿಯನ್ನು ತಡೆಗಟ್ಟಿದ್ದರಿಂದಲೂ ವಿಧವೆಯರ ಸಂಖ್ಯೆ ಹೆಚ್ಚಿತು. ಫಾದರ್ ಸಿನ್ನಾಮಿ ಉಲ್ಲೇಖಿಸುವಂತೆ "ಮೈಸೂರಿನಲ್ಲಿ ಸತಿ ಆಚರಣೆ ಕಡ್ಡಾಯವಾಗಿಲ್ಲದಿರುವುದರಿಂದ ಹೆಚ್ಚು ಸಂಖ್ಯೆಯ ವಿಧವೆಯರಿದ್ದು, ಸಂಕಟಕರವಾದ ಜೀವನವನ್ನು ನಡೆಸುತ್ತಿದ್ದಾರೆ"[720] ಹೀಗೆ ಹಿಂದೂ ಸಮಾಜದಲ್ಲಿ ವಿಧವೆಯರ ಸ್ಥಿತಿಯು ಶೋಕದ ಪ್ರತೀಕದಂತಿತ್ತು. ಅವರು ಸಾಮಾನ್ಯ ಜೀವನವನ್ನು ನಡೆಸುತ್ತಾ ಕಷ್ಟ ಮತ್ತು ಅವಮಾನಗಳ ನಡುವೆ ಬದುಕಬೇಕಿತ್ತು. ಅವರು ಆಭರಣ ತೊಡುವಂತಿರಲಿಲ್ಲ. ನಿರ್ಧಿಷ್ಟಪಡಿಸಿದ ಬಟ್ಟೆಗಳನ್ನೇ ತೊಡಬೇಕಿತ್ತು.

---

717. *ಗುಂಡಪ್ಪ ಡಿ.ವಿ., ಪೂರ್ವೋಕ್ತ, ಪು.149-150*

718. *ವೆಂಕಟರಾಮಯ್ಯ ಸಿ.ಕೆ., ದಿವಂಗತ ಶ್ರೀಮದ್ಯುವರಾಜರವರು, ಪೂರ್ವೋಕ್ತ, ಪು. XII*

719. *ಪೊರೇಷ್‌ನಾಥ್ ಬ್ಯಾನರ್ಜಿ ಬಿ.ಎ., "ದಿ ರೀಮ್ಯಾರಿಯೇಜ್ ಆಫ್ ಹಿಂದೂ ವಿಡೋಸ್", ದಿ ಕಲ್ಕತ್ತಾ ರಿವ್ಯೂ, ಸಂ. CXV, ನಂ. CCXXIX, ಜುಲೈ 1902, ಕಲ್ಕತ್ತಾ, ಪು. 101-110*

ತಲೆ ಬೋಳಿಸಬೇಕಿತ್ತು. ದಿನಕ್ಕೆ ಒಮ್ಮೆ ಊಟ ಮಾಡಬೇಕಿತ್ತು. ಶುಭ ಸಮಾರಂಭಗಳಲ್ಲಿ ಅವರನ್ನು ಅಶುಭದ ಸಂಕೇತವಾಗಿ ನೋಡಲಾಗುತ್ತಿತ್ತು[721]. ಯುವ ವಿಧವೆಯರು ತಮ್ಮ ಲೈಂಗಿಕ ಆಕಾಂಕ್ಷೆಗಳನ್ನು ಮೀರಿ ಸನ್ಯಾಸ ಜೀವನ ನಡೆಸಲಾರದೆ ಕೆಲವರು ಅನೈತಿಕ ಸಂಪರ್ಕ ಹೊಂದಿ ಗರ್ಭವತಿಯಾಗುತ್ತಿದ್ದರು. ಸಮಾಜದ ಅಪವಾದದಿಂದ ತಪ್ಪಿಸಿಕೊಳ್ಳಲು ಗರ್ಭಪಾತ ಅಥವಾ ಆತ್ಮಹತ್ಯೆಯ ದಾರಿಯನ್ನು ಹುಡುಕುತ್ತಿದ್ದರು[722]. ಹೀಗೆ ವಿಧವೆಯರು ಶಾಶ್ವತವಾದ ಹಾಗೂ ಪರಿಹಾರವಿಲ್ಲದ ಸಂಕಷ್ಟಗಳನ್ನು ಅನುಭವಿಸುತ್ತಾ ತಮ್ಮ ಇಡೀ ಜೀವನವನ್ನು ಕಳೆಯಬೇಕಿತ್ತು. ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದ ವೈಚಾರಿಕತೆಯನ್ನು ಬೆಳೆಸಿಕೊಂಡ ವಿದ್ಯಾವಂತರು, ಸುಧಾರಕರು ವಿಧವೆಯರ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿದರು. ಈಶ್ವರ ಚಂದ್ರ ವಿದ್ಯಾಸಾಗರ್‌ರವರು ವಿಧವೆಯರ ಪುನರ್ ವಿವಾಹಕ್ಕಾಗಿ ಪ್ರಚಾರವನ್ನು ನಡೆಸಿದರು. ಅದಕ್ಕಾಗಿ ಶಾಸ್ತ್ರಗ್ರಂಥಗಳಿಂದ ಆಧಾರಗಳನ್ನು ಸಂಗ್ರಹಿಸಿ ಪುನರ್ ವಿವಾಹಕ್ಕೆ ನಿರ್ಬಂಧವಿಲ್ಲದುದನ್ನು ತೋರಿಸಿಕೊಟ್ಟರು. ಸಾರ್ವಜನಿಕ ಒತ್ತಾಯವನ್ನು ಮನ್ನಿಸಿದ ಭಾರತ ಸರ್ಕಾರವು 1856ರಲ್ಲಿ ಹಿಂದೂ ವಿಧವಾ ಪುನರ್ ವಿವಾಹ ಶಾಸನವನ್ನು ಜಾರಿಗೊಳಿಸಿತು. ಈ ಶಾಸನವು ವಿಧವಾ ಪುನರ್ ವಿವಾಹಗಳನ್ನು ಶಾಸನಬದ್ಧಗೊಳಿಸಿತು. ಆದರೆ ಮೊದಲ ವಿವಾಹದ ಗಂಡನ ಆಸ್ತಿಯ ಹಕ್ಕಿಗೆ ಅವಳು ವಾರಸುದಾರಳಾಗುವಂತಿರಲಿಲ್ಲ. ಅವಳ ಮಗ ಅಥವಾ ಮಗಳಿಗೆ ಹಕ್ಕು ಇರುತ್ತಿತ್ತು[723]. ಈ ಸಾಮಾಜಿಕ ಶಾಸನವು ಜಾರಿಗೆ ಬಂದರೂ ಸಹ ವಿಧವಾ ಸಮಸ್ಯೆಯೆಂಬ ಪಿಡುಗನ್ನು ಅಳಿಸಿ ಹಾಕಲಿಲ್ಲ. ಕಾರಣ ಸಂಪ್ರದಾಯವಾದಿಗಳು ಬಲವಾಗಿ ಇದನ್ನು ವಿರೋಧಿಸಿದ್ದು. ಆದರೆ ಸುಧಾರಕರಾದ ಎಂ.ಜಿ. ರಾನಡೆ, ಕರ್ವೆ, ವೀರೇಶಲಿಂಗಂ ಮುಂತಾದವರು 'ವಿಡೋ ಮ್ಯಾರಿಯೇಜ್ ಅಸೋಸಿಯೇಷನ್'ಗಳನ್ನು ಸ್ಥಾಪಿಸುವ ಮೂಲಕ ವಿಧವೆಯರ ಸಮಸ್ಯೆಗಳ ನಿವಾರಣೆಗೆ ಚಳವಳಿಯನ್ನು ನಡೆಸಿದರು. ಕರ್ವೆಯವರು ಸ್ವತಃ ತಾವೇ, ವಿಧವೆಯರನ್ನು ವಿವಾಹವಾಗುವ ಮೂಲಕ, ಬಾಲ ವಿಧವೆಯಾದ ಸರೋಜಿನಿ ನಾಯ್ಡುರವರು ಪುನರ್‌ವಿವಾಹವಾಗುವ ಮೂಲಕ ಚಳವಳಿಯನ್ನು ತೀವ್ರಗೊಳಿಸಿದರು.

ಮೈಸೂರು ಪ್ರದೇಶದಲ್ಲಿ 1852ರ ಸುಮಾರಿನಲ್ಲೇ ಕ್ರೈಸ್ತ ಮಿಷನರಿಗಳು ವಿಧವಾ ಪುನರ್ ವಿವಾಹವನ್ನು ಬೆಂಬಲಿಸಿ ಪುಸ್ತಿಕೆಗಳನ್ನು ಪ್ರಕಟಿಸಿದ್ದರು. ಆ ಪುಸ್ತಿಕೆಯು ಥಾಮಸ್ ಹಡ್ಸನ್ ಎಂಬುವವರು ಮರಾಠಿಯಿಂದ ತರ್ಜುಮೆ ಮಾಡಿದುದಾಗಿತ್ತು. ಆನಂತರ ಮಿಷನರಿಗಳು 'ಹಿಂದೂ ವಿಧವೆಯರು' ಎಂಬ ಪುಸ್ತಕವನ್ನು ಪ್ರಕಟಿಸಿದ್ದರು[724]. ಬ್ರಹ್ಮಸಮಾಜವು 1870ರ ಸುಮಾರಿನಲ್ಲಿ ಬೆಂಗಳೂರಿನಲ್ಲಿ ಶಾಖೆಯನ್ನಾರಂಭಿಸುವುದರೊಂದಿಗೆ ಮೈಸೂರು ಸಂಸ್ಥಾನವು ಎಂ. ಜಿ. ರಾನಡೆ, ಕರ್ವೆ, ಆರ್.ಜಿ. ಭಂಡಾರ್‌ಕರ್‌ರಂತಹ ಸುಧಾರಕರ ಸಂಪರ್ಕವನ್ನು ಹೊಂದಿತು. ಕೀಲಾರ ಗಣೇಶ

---

*720. **ಸಿನ್ಹಾ ಮಿ.,** ಜೆಸ್ಯೂಟ್ಸ್ ಇನ್ ಮೈಸೂರ್, ಪು. 17*

*721. **ಸೀತಮ್ಮ ಡಿ.,** "ಕಂಡೀಷನ್ ಆಫ್ ಹಿಂದೂ ವಿಡೋಸ್, ಹೌ ಆರ್ ದೇ ಯೂಸ್‌ಫುಲ್,", ಆಂಧ್ರಪತ್ರಿಕಾ, 1911, ಪು. 68*

*722. **ಕೇಶವ ನಾರಾಯಣ ಬಿ.,** ವಿಡೋ ಮ್ಯಾರಿಯೇಜ್ ಮೂವ್‌ಮೆಂಟ್ ಇನ್ ಆಂಧ್ರ, 'ಇತಿಹಾಸ, ಜರ್ನಲ್ ಆಫ್ ಆಂಧ್ರಪ್ರದೇಶ್ ಆರ್ಕೈವ್ಸ್, ಸಂಪುಟ-II, ಜನವರಿ -ಜೂನ್, ನಂ. 1, ಪು. 147*

*723. **ಆನಂದನ್ ಪಿ.,** ಪೂರ್ವೋಕ್ತ, ಪು. 286*

ಹೆಗ್ಗೆ ಎಂಬುವವರು ಉತ್ತರ ಕನ್ನಡ ಭಾಗದಲ್ಲಿ ಹವ್ಯಾಕ ಬ್ರಾಹ್ಮಣರಲ್ಲಿ ವಿಧವಾ ಪುನರ್ ವಿವಾಹದ ಚಳವಳಿಯನ್ನಾರಂಭಿಸಿದರು. ಆರ್ಯ ಸಮಾಜವು 1922ರಲ್ಲಿ ಬೆಂಗಳೂರಿನಲ್ಲಿ ಶಾಖೆಯನ್ನಾರಂಭಿಸುವುದರೊಂದಿಗೆ ಹಾಗೂ ಅದರ ಸ್ಥಾಪಕರಾದ ಸಿ. ವೆಂಕಟವರದಅಯ್ಯಂಗಾರರು ಸ್ವತಹ ತಾವೇ ವಿಧವೆಯನ್ನು ವಿವಾಹವಾಗಿ ಚಳವಳಿಗೆ ಚಾಲನೆ ನೀಡಿದರು[725]. ಕರ್ನಾಟಕ ಪ್ರಕಾಶಿಕ ಪ್ರಕಟಣೆ ತಿಳಿಸುವಂತೆ 1866ರಿಂದ 1879ರ ಅವಧಿಯಲ್ಲಿ ಒಟ್ಟು 22 ವಿಧವಾ ಪುನರ್‌ವಿವಾಹಗಳು ಮೈಸೂರು ಪ್ರದೇಶದಲ್ಲಿ ನಡೆದವು[726]. ಡಿ.ವಿ. ಗುಂಡಪ್ಪನವರು ತಿಳಿಸುವಂತೆ ವೀರೇಶಲಿಂಗಂರವರ ನೇತೃತ್ವದಲ್ಲಿ 45 ವಿಧವಾ ವಿವಾಹಗಳು ನಡೆದವು. ಬೆಂಗಳೂರಿನಲ್ಲಿ ನಡೆದ ಅಂತಹ ಮೂರು ವಿವಾಹಗಳಲ್ಲಿ ಡಿ.ವಿ. ಗುಂಡಪ್ಪನವರು ಭಾಗವಹಿಸಿದ್ದರು. ವಿಧವಾ ವಿವಾಹಗಳನ್ನು ಬ್ರಿಟಿಷ್ ಇಂಡಿಯಾದ ಹತೋಟಿಯಲ್ಲಿದ್ದ ಬೆಂಗಳೂರಿನ ಕಂಟೋನ್ಮೆಂಟಿನಲ್ಲಿ ನಡೆಸಲಾಗುತ್ತಿತ್ತು. ಕಾರಣ 1856ರ ವಿಧವಾ ಪುನರ್‌ವಿವಾಹ ಕಾಯ್ದೆಯು ಕಂಟೋನ್ಮೆಂಟ್ ಭಾಗದಲ್ಲಿ ಜಾರಿಯಲ್ಲಿದ್ದು ಅಲ್ಲಿನ ವಿವಾಹಗಳನ್ನು ಮೈಸೂರು ಸರ್ಕಾರ ತಡೆಗಟ್ಟುವಂತಿರಲಿಲ್ಲ ಹಾಗೂ ಕಾನೂನು ಕ್ರಮ ಕೈಗೊಳ್ಳುವಂತಿರಲಿಲ್ಲ[727].

ಮೈಸೂರಿನಲ್ಲಿ ವಿಧವಾ ವಿವಾಹ ಚಳವಳಿಯು ಪ್ರಬಲಗೊಳ್ಳಲು 'ಹಿತವಾದಿ' ಎಂಬ ಕನ್ನಡ ಮಾಸಿಕ ಪತ್ರಿಕೆ ಹಾಗೂ ದೇಶಾಭ್ಯುದಯ ಸಂಘಗಳು ವಿಧವಾ ವಿವಾಹಗಳನ್ನು ಬೆಂಬಲಿಸಿ ಅನೇಕ ಕನ್ನಡ ಹೊತ್ತಿಗೆಗಳನ್ನು ಪ್ರಕಟಿಸಿದವು. ಸ್ತ್ರೀಯರ ಶಿಕ್ಷಣ ಮತ್ತು ವಿಧವೆಯರ ಉದ್ಧಾರಕ್ಕಾಗಿ ಎಂ. ವೆಂಕಟಕೃಷ್ಣಯ್ಯ ಮತ್ತು ಅರಮನೆಯ ಭಕ್ಷಿ ಅಂಬಿಲ್ ನರಸಿಂಹ ಅಯ್ಯಂಗಾರ್‌ರವರು ಮಹಾರಾಣಿ ಬಾಲಿಕಾ ಶಾಲ ಮತ್ತು ವಿಧವಾ ಅಬಲಾಶ್ರಮಗಳನ್ನು ಸ್ಥಾಪಿಸಿ ಅವುಗಳ ಬೆಳವಣಿಗೆಗಾಗಿ ಎರಡು ಲಕ್ಷ ರೂಪಾಯಿಗಳನ್ನು ದಾನ ನೀಡಿದರು. ಗುಲ್ವಾಡಿ ವೆಂಕಟರಾವ್‌ರವರು 'ಇಂದಿರಾಬಾಯಿ' ಎಂಬ ಕಾದಂಬರಿ ಬರೆದು ವಿಧವಾ ವಿವಾಹವನ್ನು ಬೆಂಬಲಿಸಿದರು. ಕೀಲಾರ ಗಣೇಶ ಹೆಗ್ಗೆಯವರು 1900-10ರ ಅವಧಿಯಲ್ಲಿ ಸಿದ್ದಾಪುರ ತಾಲ್ಲೂಕ್‌ನಲ್ಲಿ ಹವ್ಯಾಕ ಬ್ರಾಹ್ಮಣರಲ್ಲಿ ವಿಧವಾ ವಿವಾಹದ ಬಗ್ಗೆ ಅರಿವು ಮೂಡಿಸಲು ಪ್ರಯತ್ನಿಸಿದರು. ಸ್ವತಹ ತಾವೇ ವಿಧವೆಯನ್ನು ವಿವಾಹವಾದುದಲ್ಲದೆ 1912ರಲ್ಲಿ ವಿಧವಾ ವಿವಾಹವೊಂದನ್ನು ನಡೆಸಿದರು. ಆನಂತರ ಸುಮಾರು 125 ವಿಧವಾ ವಿವಾಹಗಳನ್ನು ಹವ್ಯಾಕರಲ್ಲಿ ನಡೆಸಲಾಯಿತು. ಮೈಸೂರಿನಲ್ಲಿ ನಂಜನಗೂಡು ತಿರುಮಲಮ್ಮ ಮತ್ತು ಆರ್. ಕಲ್ಯಾಣಮ್ಮರವರು ಸರಸ್ವತಿ ಎಂಬ ಮಾಸಿಕದ ಬರಹಗಳ ಮೂಲಕ ಸಾಮಾಜಿಕ ಸುಧಾರಣೆಗೆ ಕ್ರಮ ಕೈಗೊಂಡರು. ಕಲ್ಯಾಣಮ್ಮ 'ಇಂದಿರೆ' ಎಂಬ ಕನ್ನಡ ಕಾದಂಬರಿಯಲ್ಲಿ ಬಾಲ ವಿಧವೆಯರ ಸಮಸ್ಯೆಗಳನ್ನು ಬಿಂಬಿಸಿ ಸಮಾಜವನ್ನು ಎಚ್ಚರಿಸಿದರು[728]. ಹೀಗೆ ವಿಧವಾ ಸಮಸ್ಯೆ ಹಾಗೂ ವಿವಾಹ ಚಳವಳಿಗಳು

---

724. *ಸೂರ್ಯನಾಥ ಯು. ಕಾಮತ್, 'ಸೋಷಿಯಲ್ ರಿಫಾರ್ಮ್ ಮೂವ್‌ಮೆಂಟ್ಸ್', ಎಮಾನ್ಸಿಪೇಷನ್ ಆಫ್ ವುಮೆನ್ ಇನ್ ಕರ್ನಾಟಕ, ಕ್ಯೂ.ಜೆ. ಎಂ.ಎಸ್., ಸಂ. LXXV, ನಂ. 2, ಏಪ್ರಿಲ್-ಜೂನ್, 1984, ಪು. 208*

725. *ಅದೇ., ಪು. 209*

726. *ಕರ್ನಾಟಕ ಪ್ರಕಾಶಿಕ, ದಿನಪತ್ರಿಕೆ, 12ನೇ ಮೇ 1879*

727. *ಗುಂಡಪ್ಪ ಡಿ.ವಿ., ಜ್ಞಾಪಕ ಚಿತ್ರಶಾಲೆ, ಹಲವರು ಸಾರ್ವಜನಿಕರು -6, ಪು. 275-276*

ಮೈಸೂರು ಸಂಸ್ಥಾನದಲ್ಲಿ ಹರಡಿ ತಮ್ಮ ಪ್ರಭಾವವನ್ನು ಬೀರಿದವು.

ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾದ ಕೃಷ್ಣಪ್ಪ ಎಂಬುವವರು ವಿಧವಾ ಪುನರ್ ವಿವಾಹ ಕಾಯ್ದೆಯನ್ನು ಮೈಸೂರಿನಲ್ಲಿ ಜಾರಿಗೊಳಿಸಬೇಕೆಂದು ಒತ್ತಾಯಿಸಿದರು. ಅದಕ್ಕೆ ಜನಗಣತಿಯಲ್ಲಿನ ಹೆಚ್ಚುತ್ತಿರುವ ಹಿಂದೂ ವಿಧವೆಯರ ಸಂಖ್ಯೆಯನ್ನು ಎತ್ತಿ ತೋರಿಸಿದರು. ಮತ್ತೊಬ್ಬ ಸದಸ್ಯರಾದ ಸೂರಶಾಸ್ತ್ರಿ ಎಂಬುವವರು ಆ ಸಲಹೆಯನ್ನು ವಿರೋಧಿಸಿದರು. ಆದರೆ ಪ್ರಮುಖ ಧಾರ್ಮಿಕ ಮಠಗಳ ಗುರುಗಳು ಅನುಮೋದಿಸಿದರೆ ಕಾಯ್ದೆ ಜಾರಿಗೆ ತರಲು ಅಭ್ಯಂತರವಿಲ್ಲವೆಂದು ತಿಳಿಸಿದರು. ಸರ್ಕಾರವು "ಸಂಗತಿಗಳು ವಿರಳವಾಗಿರುವುದರಿಂದ ಅಂತಹ ಶಾಸನವನ್ನು ಜಾರಿಗೊಳಿಸಬೇಕಾದ ಅವಶ್ಯಕತೆಯಿಲ್ಲವೆಂದೂ ಸಾರ್ವಜನಿಕ ಬೇಡಿಯನ್ನಾಧರಿಸಿ ಶಾಸನ ತರುವುದಾಗಿ" ತಿಳಿಸಿತು[729]. 1929ರಲ್ಲಿ ಜಿ. ಚನ್ನಪ್ಪ ಎಂಬ ಸದಸ್ಯರು ವಿಧವಾ ವಿವಾಹಗಳನ್ನು ಶಾಸನಬದ್ಧಗೊಳಿಸಲು ಹಾಗೂ ಅಂತಹ ವಿವಾಹಗಳಿಂದ ಹುಟ್ಟಿದ ಮಕ್ಕಳಿಗೆ ಪಾರಂಪರಿಕ ಆಸ್ತಿಯ ಹಕ್ಕನ್ನು ನೀಡುವಂತಾಗಲು ವಿಧವಾ ಪುನರ್ ವಿವಾಹ ಶಾಸನವನ್ನು ಜಾರಿಗೊಳಿಸಲು ಬೇಡಿಕೆ ಸಲ್ಲಿಸಿದರು[730]. ಡಿ. ಸಾಕಮ್ಮನವರು ಹಿಂದೂ ಸ್ತ್ರೀಯರ ಸಮಸ್ಯೆಯನ್ನು ಕುರಿತು ಸದನದಲ್ಲಿ ಮಾತನಾಡಿದರು. ಸರ್ಕಾರವು 1929ರಲ್ಲಿ ಹಿಂದೂ ಲಾ ರಿಫಾರ್ಮ್ ಕಮಿಟಿ ಎಂಬ ಸಮಿತಿಯನ್ನು ನೇಮಿಸಿತು. ಮುಂದೆ ಜಾರಿಗೆ ತರುವ ಶಾಸನದ ಬಗ್ಗೆ ಜನರಿಗೆ ಪ್ರಚಾರ ಮಾಡಲು ಮಂಕಾಲಮ್ಮ ಮತ್ತು ಅಕ್ಕದಾಸ್ ಗಣಪತಿಭಟ್‌ರನ್ನು ರಾಜ್ಯ ಪ್ರವಾಸ ಮಾಡಿ ಪ್ರಚಾರ ಕೈಗೊಳ್ಳುವಂತೆ ಸರ್ಕಾರ ಮನವಿ ಮಾಡಿಕೊಂಡಿತು[731]. ಶಾಸನ ಸಭೆಗಳಲ್ಲಿ ದೀರ್ಘ ಚರ್ಚೆಗಳು ನಡೆದು 1936ರಲ್ಲಿ ಶಾಸನಕ್ಕೆ ಅನುಮೋದನೆ ದೊರಕಿತು. ಅಂತಿಮವಾಗಿ ಸರ್ಕಾರ 'ದಿ ಮೈಸೂರ್ ಹಿಂದೂ ವಿಡೋಸ್ ರೀ-ಮ್ಯಾರಿಯೇಜ್ ಆಕ್ಟ್' ಎಂಬ ಶಾಸನವನ್ನು 1938ರ ಜುಲೈ 7ರಂದು ಜಾರಿಗೊಳಿಸಿತು. ಈ ಶಾಸನವು ವಿಧವಾ ಪುನರ್ ವಿವಾಹಗಳನ್ನು ಶಾಸನಬದ್ಧಗೊಳಿಸಿತು. ಇಂತಹ ವಿವಾಹಗಳನ್ನು ತಡೆಯುವವರನ್ನು ಅಥವಾ ಶಾಸನವನ್ನು ಉಲ್ಲಂಘಿಸುವವರಿಗೆ ಒಂದು ವರ್ಷದವರೆಗಿನ ಸೆರೆವಾಸ ಮತ್ತು 500 ರೂಪಾಯಿಗಳ ವರೆಗಿನ ದಂಡ ವಿಧಿಸಬಹುದಿತ್ತು. ವಿಧವೆಯ ಮೊದಲ ಗಂಡನ ಆಸ್ತಿಯ ಹಕ್ಕನ್ನು ನಿರಾಕರಿಸಿ ಅವಳ ಸ್ವಂತ ಆಸ್ತಿಯ ಹಕ್ಕನ್ನು ಈ ಶಾಸನ ಮಾನ್ಯಗೊಳಿಸಿತು[732]. ಈ ಶಾಸನವು ಯಾವ ಕ್ರಾಂತಿಕಾರಕ ಬದಲಾವಣೆಯನ್ನು ತರಲಿಲ್ಲ. ಆದರೆ ಸಮಾಜಕ್ಕೆ ವಿರುದ್ಧವಾಗಿ ವಿವಾಹವಾಗುವಂತಹವರಿಗೆ ಈ ಶಾಸನ ರಕ್ಷಣೆ ನೀಡಿತು. ಸಮಾಜವು ಜಾಗೃತಗೊಂಡಿದ್ದು ಹಾಗೂ ಶಾಸನದ ಭಯದಿಂದ ಸಂಪ್ರದಾಯವಾದಿಗಳು ವಿಧವಾ ವಿವಾಹಗಳನ್ನು ಮೌನವಾಗಿ ನೋಡಬೇಕಾಯಿತು. ಸರ್ಕಾರವು

---

728. *ಸೂರ್ಯನಾಥ್ ಯು. ಕಾಮತ್, ಪೂರ್ವೋಕ್ತ, ಕ್ಯೂ.ಜೆ.ಎಂ.ಎಸ್. ಪು. 209*

729. *ಲೆಜಿಸ್ಲೇಟಿವ್ ಫೈಲ್ಸ್, ನಂ. 52 -1912*
*ವಿಷಯ: ಇಂಟ್ರೊಡಕ್ಷನ್ ಆಫ್ ದಿ ವಿಡೋ ರೀ ಮ್ಯಾರಿಯೇಜ್ ಆಕ್ಟ್ XV ಆಫ್ 1856 ಇಂಟು ಮೈಸೂರ್ (ಡಿ.ಆರ್.ಎ. 12 ಆಫ್ 1912)*

730. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಅಕ್ಟೋಬರ್ 1929, ರೆಸಲ್ಯೂಷನ್ ನಂ. 4, ಪು. 385*

731. *ಸೂರ್ಯನಾಥ್ ಯು. ಕಾಮತ್, ಕ್ಯೂ.ಜೆ.ಎಂ.ಎಸ್. ಪೂರ್ವೋಕ್ತ, ಪು. 215-216*

ವಿಧವೆಯರಿಗಾಗಿ 'ವಿಡೋ ಹೋಂ' (ಅಬಲಾಶ್ರಮ) ಸ್ಥಾಪಿಸಿ ಅವರಿಗೆ ಆ ಮೂಲಕ ಶಿಕ್ಷಣ ಸೌಲಭ್ಯಗಳನ್ನು ಒದಗಿಸಿತು. ವಿಧವೆಯರಿಗೆ ಸ್ಕಾಲರ್‌ಷಿಪ್ ಮುಂತಾದ ನೆರವು ನೀಡಲು ದೇವರಾಜ ಬಹದೂರ್ ಫಂಡ್ ಹಾಗೂ ಸರ್ಕಾರದ ಗ್ರಾಂಟುಗಳು ನೆರವಾದವು. ಹಾಗೆಯೇ ರಾಮಚಂದ್ರರಾಯ ಮುಂತಾದವರು 'ದಿ ಹಿಂದೂ ವಿಡೋ' ಎಂಬಂತಹ ಪದ್ಯಗಳಲ್ಲಿ ಹಿಂದೂ ವಿಧವೆಯರ ಮನಸ್ಸಿನೊಳಗಣ ಸಂಕಟಗಳನ್ನು ಮನೋವೇಧಕವಾದ ರೀತಿಯಲ್ಲಿ ವರ್ಣಿಸುವ ಮೂಲಕ ಸಾಂಪ್ರದಾಯಿಕ ಮನಸ್ಸನ್ನು ಸುಧಾರಿಸಲು ಪ್ರಯತ್ನಿಸಿದರು. ಜೊತೆಗೆ ಕನ್ಯೆಯರ ವಿವಾಹದ ವಯಸ್ಸನ್ನು ಹೆಚ್ಚಿಸಿದಂತೆ ಹಾಗೂ ಉದ್ಯೋಗದ ಅಭಾವದಿಂದ, ಅರ್ಥ ಸಂಪತ್ತಿನ ಪ್ರಭಾವದಿಂದ ವಿವಾಹದ ಅಪೇಕ್ಷೆ ಕಡಿಮೆಯಾದ ಮುಂತಾದ ಕಾರಣಗಳಿಂದ ಬಾಲವಿಧವೆಯರ ಸಮಸ್ಯೆಯು ಬಹುಮಟ್ಟಿಗೆ ಕಡಿಮೆಯಾಯಿತು[733].

### ಸಿ) ದೇವದಾಸಿ ಪದ್ಧತಿಯ ನಿಷೇಧ

ದೇವದಾಸಿ ಪದ್ಧತಿಯು ಭಾರತೀಯ ಸಮಾಜದಲ್ಲಿ ಧಾರ್ಮಿಕತೆಯನ್ನು ದುರುದ್ದೇಶಕ್ಕಾಗಿ ಬಳಸಿಕೊಂಡಿದ್ದಕ್ಕೆ ಅತ್ಯುತ್ತಮ ಉದಾಹರಣೆ. ದೇವದಾಸಿಯರು ದೇವಾಲಯಗಳಿಗೆ ನೃತ್ಯ ಮತ್ತು ಸಂಗೀತ ಸೇವೆ ಸಲ್ಲಿಸಲು ಅರ್ಪಿಸಲ್ಪಟ್ಟವರು. ಅವರು ದೇವಸ್ಥಾನದಲ್ಲಿ ಕೆಲವು ಧಾರ್ಮಿಕ ಮತ್ತು ಮತಾಚರಣೆಯ ಸಮಾರಂಭಗಳಲ್ಲಿ ತೊಡಗಿಸಿಕೊಂಡಿರುತ್ತಿದ್ದರು[734]. ನೂರಾರು ದೇವಾಲಯಗಳು ದೇವದಾಸಿಯರಿಗೆ ಭೂದಾನ ಮುಂತಾದ ಸೌಲಭ್ಯಗಳನ್ನು ನೀಡಿ ಪ್ರೋತ್ಸಾಹಿಸಿದವು. ದೇವದಾಸಿಯರು ಸಂಗೀತ ಮತ್ತು ನೃತ್ಯವನ್ನು ಉಳಿಸಿ ಬೆಳೆಸಿದರು. ಅದೇ ರೀತಿ ಶಿವ ಮತ್ತು ವಿಷ್ಣು ದೇವಾಲಯಗಳಿಗೆ ಅರ್ಪಿಸುತ್ತಿದ್ದ ಬಸವಿ ಪದ್ಧತಿಯು ದೇವದಾಸಿ ಪದ್ಧತಿಯ ಮತ್ತೊಂದು ಪ್ರಾಕಾರ. ಇವರು ಸಾಮಾನ್ಯವಾಗಿ ಕೆಳಜಾತಿಗಳಾದ ಹೊಲೆಯ, ಮಾದಿಗ ಮುಂತಾದವುಗಳಿಂದ ಬಂದವರಾಗಿದ್ದರು[735]. ಆರಂಭದಲ್ಲಿ ಇವರು ತಮ್ಮದೇ ಆದ ನೀತಿ ನಿಯಮಗಳನ್ನು ಹೊಂದಿದ್ದು ಸಮಾಜದಲ್ಲಿ ಘನತೆಯನ್ನು ಹೊಂದಿದ್ದರು. ಆದರೆ ಆ ನಂತರದ ಕಾಲದಲ್ಲಿ ದೇವದಾಸಿಯರ ಕರ್ತವ್ಯವು ವೇಶ್ಯೆಯರ ಮಟ್ಟಕ್ಕಿಳಿಯಿತು. ದೇವದಾಸಿ ಪದ್ಧತಿಯನ್ನು ದೇವಾಲಯದ ಪಾರುಪತ್ತೇಗಾರರು, ಅರ್ಚಕರು, ದೇವದಾಸಿಯರು ತಮ್ಮ ವೃತ್ತಿಯನ್ನು ಅನೈತಿಕ ಉದ್ದೇಶಕ್ಕೆ ದುರುಪಯೋಗಪಡಿಸಿಕೊಳ್ಳತೊಡಗಿದರು. ದೇವಸ್ಥಾನಗಳಲ್ಲಿ ದೇವರ ಮೆರವಣಿಗೆಯ ಸಂದರ್ಭದಲ್ಲಿ ಜನರ ಗುಂಪು ದೇವರ ಬಳಿ ಇರುವುದಕ್ಕಿಂತ ತಾಫಾದವರನ್ನು ಘೇರಾಯಿಸುವುದೆ ಮುಖ್ಯವಾಗಿತ್ತು. ವೈರಮುಡಿ, ಕಲ್ಯಾಣೋತ್ಸವಗಳಿಗಿಂತ ತಾಫಾ ನೋಡಲು ಬಂದವರೇ ಹೆಚ್ಚಿರುತ್ತಿದ್ದರು[736]. ದೇವದಾಸಿ ಪದ್ಧತಿಯ ದುರ್ಗತಿ ಪರಿಣಾಮವಾಗಿ ದೇವಾಲಯಗಳು, ಕ್ಷೇತ್ರಗಳು ಎಂತಹ ದುಃಸ್ಥಿತಿ ತಲುಪಿದ್ದವೆಂದರೆ ಪ್ರಸಿದ್ಧ ಕ್ಷೇತ್ರದಲ್ಲಿ ಕೊಠಾರೋತ್ಸವವೆಂಬುದು

---

732. *ದಿ ಮೈಸೂರ್ ಕೋಡ್., ಸಂಪುಟ-II, ಪು. 444-446*

733. *ಗುಂಡಪ್ಪ ಡಿ.ವಿ., ಜ್ಞಾಪಕ ಚಿತ್ರಶಾಲೆ, ಸಂಪುಟ -VI, ಹಲವರು ಸಾರ್ವಜನಿಕರು, ಪು. 277*

734. *ಥರ್ಸ್ಟನ್ ಇ., ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ, ಭಾಗ II. ಪು. 125-126*

735. *ಅನಂತಕೃಷ್ಣ ಅಯ್ಯರ್ ಅಂಡ್ ನಂಜುಂಡಯ್ಯ, ಮೈಸೂರ್ ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್, ಭಾಗ III. ಪು. 339*

ನಡೆಯುತ್ತಿದ್ದ ಹೊತ್ತಿನಲ್ಲಿ ದೇವರು ಬಿಜಮಾಡಿಸಿದ್ದ ಜಾಗದಲ್ಲಿ ಹತ್ತು ಮಂದಿ ಇದ್ದರೆ ದೇವದಾಸಿಯರಿದ್ದ ಜಾಗದಲ್ಲಿ ಸಾವಿರ ಮಂದಿ ನೆರೆದಿರುತ್ತಿದ್ದರು. ಗುಡಿಯೊಳಗಡೆ ಮಂತ್ರಘೋಷ ನಡೆಯುತ್ತಿದ್ದ ಹೊತ್ತಿನಲ್ಲಿ ಪ್ರಾಕಾರದೊಳಗಣ ಮೂಲೆ ಮೊಡಕುಗಳಲ್ಲಿ ಪ್ರಣಯ ಲೀಲೆಗಳೂ ತಸ್ಕರ ಸಾಹಸಗಳೂ ನಡೆಯುತ್ತಿದ್ದವು. ಎಷ್ಟೋ ಗುಡಿಗಳ ಒಳಗಡೆ ಕಗ್ಗತ್ತಲೂ ಕಸವೂ ತುಂಬಿ ಕಾಲಿಡುವುದೇ ಕಷ್ಟವಾಗುತ್ತಿತ್ತು[737].

ಹೀಗೆ ಅನೈತಿಕತೆಗೆ ಕಾರಣವಾದ ದೇವದಾಸಿ ಪದ್ಧತಿಯನ್ನು ತೊಡೆದುಹಾಕಲು ಮೈಸೂರು ಸರ್ಕಾರವು 1892ರಲ್ಲಿ ನಂಜನಗೂಡಿನ ಭೋಗನಂದೀಶ್ವರ ದೇವಾಲಯದ ಉತ್ಸವಕ್ಕೆ ವೃತ್ತಿನಿರತ ನೃತ್ಯಗಾರ್ತಿಯರನ್ನು (ತಾಫೆ) ತಾತ್ಕಾಲಿಕ ಸೇವೆಯ ಮೇಲೆ ಕಳುಹಿಸುವುದನ್ನು ನಿಲ್ಲಿಸಿತು. ಹಾಗೂ ನೃತ್ಯ ಕನ್ಯೆಯರು ಅಲ್ಲಿ ನೃತ್ಯ ಮಾಡುವುದನ್ನು ನಿಷೇಧಿಸಿತು[738]. ಸರ್ಕಾರವು ಸತ್ತ ದೇವದಾಸಿಯರ ಸ್ಥಾನಕ್ಕೆ ಮತ್ತೆ ನೇಮಕ ಮಾಡಬಾರದೆಂದು ತೀರ್ಮಾನಿಸಿತು. 1909ರ ಆಜ್ಞೆಯಲ್ಲಿ ದೇವದಾಸಿ ಪದ್ಧತಿಯು ತನ್ನ ಪಾವಿತ್ರ್ಯವನ್ನು ಕಳೆದುಕೊಂಡು ಅನೈತಿಕ ಪದ್ಧತಿಯಾಗಿ ಪರಿವರ್ತಿತವಾಗಿರುವುದರಿಂದ ದೇವಾಲಯಗಳಲ್ಲಿ ದೇವದಾಸಿಯರು ಯಾವ ಸೇವೆಯನ್ನೂ ಮಾಡುವಂತಿಲ್ಲವೆಂದು ತಿಳಿಸಿತು. ಮುಜರಾಯಿ ದೇವಾಲಯಗಳಲ್ಲಿ 'ಗೆಜ್ಜೆ ಪೂಜೆ' ಆಚರಣೆಯನ್ನು ನಡೆಸಬಾರದೆಂದು 1910ರಲ್ಲಿ ಸರ್ಕಾರ ಆಜ್ಞೆ ಹೊರಡಿಸಿತು. ಆಜ್ಞೆಯನ್ನು ಮೀರಿದವರಿಗೆ ಶಿಕ್ಷೆ ವಿಧಿಸಲಾಗುತ್ತಿತ್ತು[739]. ಹೀಗೆ ನಾಲ್ವಡಿಯವರ ಸರ್ಕಾರವು ನಿರ್ಭೀತರಾಗಿ ದೇವದಾಸಿ ನೇಮಕ ಪದ್ಧತಿಯನ್ನು ರದ್ದುಗೊಳಿಸಿ ಹೊರಡಿಸಿದ ಆಜ್ಞೆಯ ವಿಚಾರವಾಗಿ ಮದರಾಸು ಮೊದಲಾದ ಪ್ರಾಂತಗಳ ಪತ್ರಿಕೆಗಳಲ್ಲಿ ನಾಲ್ವಡಿಯವರ ಈ ಕಾರ್ಯಸಾಧನೆಯ ಬಗ್ಗೆ ಸಾಕಷ್ಟು ಪ್ರಶಂಸೆಗಳು ಬಂದವು. ಭಾರತೀಯರನ್ನು ಸುಲಭವಾಗಿ ಶ್ಲಾಘಿಸದ ಆಂಗ್ಲೇಯ ಮಹಾಶಯನೊಬ್ಬ "ಇದು ಧೈರ್ಯದ ಕೆಲಸ ಶ್ರೀ ಮನ್ಮಹಾರಾಜರವರು ಅತ್ಯಂತ ಧೈರ್ಯಶಾಲಿಗಳು. ಪ್ರಬಲವಾದ ಅವರ ಸ್ಥಿರ ಸಂಕಲ್ಪವು ಅವರ ಈ ಕಾರ್ಯದಿಂದ ಗೋಚರವಾಗುತ್ತದೆ" ಎಂದು ಶ್ಲಾಘಿಸಿದರು[740].

ಮೈಸೂರಿನಲ್ಲಿ ಆದ ದೇವದಾಸಿ ಪದ್ಧತಿಯ ಸುಧಾರಣೆಯ ಪ್ರಭಾವದಿಂದ ಬ್ರಿಟಿಷ್ ಇಂಡಿಯಾವಲ್ಲೂ ಅದಕ್ಕಾಗಿ ಚಳವಳಿ ಹಬ್ಬಿತು. ಬೊಂಬಾಯಿಯಲ್ಲಿ ಪ್ರಸಿದ್ಧ ಹೈಕೋರ್ಟ್ ಜಡ್ಜ್ ಆಗಿದ್ದ ನಾರಾಯಣ ಚಂದಾವರ್ಕರ್ ಮತ್ತು ಸೋಷಿಯಲ್ ರಿಫಾರ್ಮರ್ ಪತ್ರಿಕೆಯ ಸಂಪಾದಕರಾದ ಕೆ. ನಟರಾಜನ್ ಮುಂತಾದವರು ನಾಟ್ಯ ವಿರೋಧಿ ಚಳವಳಿಯನ್ನು ಆರಂಭಿಸಿದರು. ಈ ಚಳವಳಿಗಾರರು ಪ್ರತಿಜ್ಞೆಯ ಗುರುತಾಗಿ ಬಲ ಮುಂಗೈಗೆ ಕರಿಯ ದಾರವನ್ನು

---

*736. **ಗುಂಡಪ್ಪ ಡಿ.ವಿ.,** ಕಲೋಪಾಸಕರು, ಜ್ಞಾಪಕ ಚಿತ್ರಶಾಲೆ-2, ಪು. 20*

*737. **ಗುಂಡಪ್ಪ ಡಿ.ವಿ.,** ಸಾಹಿತಿ ಸಜ್ಜನ ಸಾರ್ವಜನಿಕರು, ಜ್ಞಾಪಕ ಚಿತ್ರಶಾಲೆ, ಸಂಪುಟ-I, ಪು. 153-154*

*738. **ಸೂರ್ಯನಾಥ್ ಯು. ಕಾಮತ್.,** ಪೂರ್ವೋಕ್ತ, ಭಾಗ II, ಪು. 766*

*739. **ಸದಾಶಿವ ಕೆ.** ಪೂರ್ವೋಕ್ತ, ಪು. 268-269*

ಕಟ್ಟಿಕೊಳ್ಳುತ್ತಿದ್ದರು[741] 1919ರಲ್ಲಿ ಮೈಸೂರು ಸರ್ಕಾರವು ಎಲ್ಲಾ ಜಿಲ್ಲಾ ಕಮೀಷನರುಗಳಿಗೆ ದೇವಾಲಯಗಳಲ್ಲಿ ಸೇವೆ ಸಲ್ಲಿಸುವ ಯಾವ ದೇವದಾಸಿಯರಿಗೂ ಭೂದಾನವನ್ನು ಕೊಡಬಾರದೆಂದು ಆಜ್ಞೆ ಮಾಡಿತು. ಮದ್ರಾಸ್ ಕರ್ನಾಟಕ ಪ್ರಾಂತ್ಯದಲ್ಲಿ 1927ರಲ್ಲಿ ಹಿಂದೂ ಧಾರ್ಮಿಕ ಮತ್ತು ದತ್ತಿ ಕಾಯ್ದೆಯ ಪ್ರಕಾರ ದೇವದಾಸಿ ಪದ್ಧತಿಯನ್ನು ನಿಷೇಧಿಸಲಾಯಿತು[742]. ಹಾಗೂ ಅದನ್ನು ಆಚರಿಸುವವರನ್ನು ಶಿಕ್ಷಿಸಲಾಗುತ್ತಿತ್ತು. ಹೀಗೆ ಧಾರ್ಮಿಕತೆಯ ನೆರಳಲ್ಲಿ ನಡೆಯುತ್ತಿದ್ದ ಅನೈತಿಕ ಚಟುವಟಿಕೆಗಳನ್ನು ನಾಲ್ವಡಿಯವರ ಸರ್ಕಾರ ತಡೆಗಟ್ಟಿತು. ಆ ಸ್ತ್ರೀಯರು ಶೋಷಿತರಾಗುವುದನ್ನು ತಪ್ಪಿಸಿ, ಸಮಾಜದ ಮುಖ್ಯವಾಹಿನಿಗೆ ತರುವ ಮೂಲಕ ಅವರಿಗೆ ಘನತೆ, ಗೌರವಗಳನ್ನು ದೊರಕಿಸಿದಂತಾಯಿತು.

### *ಡಿ) ಸ್ತ್ರೀಯರಿಗೆ ಹಕ್ಕುಗಳ ಪ್ರಧಾನ*

***ರಾಜಕೀಯ ಹಕ್ಕುಗಳು :*** ಆಧುನಿಕ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನವನ್ನು ಗುರುತಿಸುವಾಗ ಅವರು ಹೊಂದಿರುವ ರಾಜಕೀಯ ಹಕ್ಕುಗಳನ್ನು ಪರಿಗಣಿಸಲಾಗುತ್ತದೆ. ಸ್ತ್ರೀಯರು ಗುಂಪಾಗಿ ಹೋಗಿ 1921ರಲ್ಲಿ ದಿವಾನರಾದ ಕಾಂತರಾಜ ಅರಸ್‌ರವರನ್ನು ಭೇಟಿ ಮಾಡಿ ಸ್ತ್ರೀಯರ ಮೇಲಿರುವ ಶಾಸನಸಭೆಗಳಿಗೆ ಮತ್ತು ಸ್ಥಳೀಯ ಸಂಸ್ಥೆಗಳಾದ ಜಿಲ್ಲಾ ಬೋರ್ಡ್, ಮುನಿಸಿಪಲ್ ಬೋರ್ಡ್ ಹಾಗೂ ತಾಲ್ಲೂಕ್ ಬೋರ್ಡ್‌ಗಳಿಗೆ, ವಿಶ್ವವಿದ್ಯಾನಿಲಯದ ಸೆನೆಟ್ ಸಭೆಗೆ ಮತದಾನದ ಹಾಗೂ ಚುನಾವಣೆಗೆ ನಿಲ್ಲುವ ಹಕ್ಕಿನ ಅನರ್ಹತೆಯನ್ನು ತೆಗೆದುಹಾಕಬೇಕೆಂದು ಒತ್ತಾಯಿಸಿದರು. ಸರ್ಕಾರವು 1923ರಲ್ಲಿ ಆಡಳಿತಾತ್ಮಕ ಸುಧಾರಣಾ ಸಮಿತಿಯೊಂದನ್ನು ಡಾ. ಬ್ರಜೇಂದ್ರನಾಥ್ ಸೀಲ್‌ರವರ ಅಧ್ಯಕ್ಷತೆಯಲ್ಲಿ ನೇಮಿಸಿತು. ಸಮಿತಿಯು ಮತದಾನಕ್ಕಿದ್ದ ಅರ್ಹತೆಗಳಲ್ಲಿ ಆಸ್ತಿಯ ಹಕ್ಕನ್ನು ಅರ್ಧಕ್ಕೂ, ಶಿಕ್ಷಣದ ವಿಶೇಷ ಯಾವ ಅರ್ಹತೆಯನ್ನೂ ಸ್ತ್ರೀಯರಿಗೆ ನಿಗಿಧಿಗೊಳಿಸುವುದನ್ನು ರದ್ದು ಮಾಡಿತು. ಇದರೊಂದಿಗೆ ಸ್ತ್ರೀಯರಿಗಿದ್ದ ಮತದಾನದ ಹಕ್ಕಿನ ಅನರ್ಹತೆಗಳು ರದ್ದಾದವು. 1927ರಲ್ಲಿ ಜಿಲ್ಲಾ ಬೋರ್ಡ್‌ನ ಚುನಾವಣೆಯಲ್ಲಿ ಸ್ತ್ರೀಯರಿಗೆ ಮತದಾನದ ಹಕ್ಕನ್ನು ಕೊಡಲಾಯಿತು. ಮುನಿಸಿಪಲ್ ಕಾಯ್ದೆಗೆ 1928-29ರಲ್ಲಿ ತಿದ್ದುಪಡಿ ತರುವ ಮೂಲಕ ಸ್ತ್ರೀಯರು ಮುನಿಸಿಪಲ್ ಕೌನ್ಸಿಲ್‌ಗಳಿಗೆ ಸದಸ್ಯರಾಗುವುದಕ್ಕಿದ್ದ ತಾರತಮ್ಯ ನೀತಿಯನ್ನು ತೆಗೆದುಹಾಕಲಾಯಿತು[743]. 1881ರಿಂದ ಆರಂಭಗೊಂಡಿದ್ದ ಪ್ರಜಾಪ್ರತಿನಿಧಿ ಸಭೆಯಲ್ಲಿ ಸ್ತ್ರೀಯರು ಸ್ವತಹ ತಾವೇ ತಮ್ಮ ಸಮಸ್ಯೆಗಳನ್ನು ಹೇಳಿಕೊಳ್ಳಲು ಅವಕಾಶ ಸಿಕ್ಕಿರಲಿಲ್ಲ. ಮತದಾನದ ಹಕ್ಕು, ಚುನಾವಣೆಗೆ ಅಥವಾ ನಾಮಕರಣಗೊಳ್ಳುವ ಮೂಲಕ ಶಾಸನ ಸಭೆಗಳಿಗೆ ಪ್ರವೇಶಿಸುವ ಹಕ್ಕಿಗಾಗಿ ಬೇಡಿಕೆ ಹೆಚ್ಚಿತು. 1930ರಲ್ಲಿ ಮೊದಲ ಬಾರಿಗೆ ಕಮಲಮ್ಮ ದಾಸಪ್ಪ ಮತ್ತು ಸಾಕಮ್ಮ ಎಂಬ ಇಬ್ಬರು ಸ್ತ್ರೀಯರು ಶಾಸನಸಭೆಗೆ ಪ್ರವೇಶಿಸಿದರು. ಇದರೊಂದಿಗೆ ಸ್ತ್ರೀಯರು ಮತದಾನದ

---

*740. **ವೆಂಕಟರಾಮಯ್ಯ ಸಿ.ಕೆ.,** ಅಳಿದ ಮಹಾಸ್ವಾಮಿಯವರು, ಪೂರ್ವೋಕ್ತ, ಪು. 238-239*

*741. **ಗುಂಡಪ್ಪ ಡಿ.ವಿ.,** ಕಲೋಪಾಸಕರು, ಪೂರ್ವೋಕ್ತ, ಪು. 20*

*742. **ಸದಾಶಿವ ಕೆ.** ಪೂರ್ವೋಕ್ತ, ಪು. 369-370*

ಹಕ್ಕು ಮತ್ತು ಚುನಾವಣೆಗಳಿಗೆ ಉಮೇದುವಾರರಾಗಿ ನಿಲ್ಲುವ ಹಕ್ಕುಗಳು ದೊರೆತಂದಾದವು[744]. ಸ್ತ್ರೀ ಸದಸ್ಯರು ಮಹಿಳೆಯರ ಸಮಸ್ಯೆಗಳನ್ನು ಎತ್ತಿ ಹಿಡಿದು ಅವರ ಹಿತಾಸಕ್ತಿಗಳನ್ನು ಕಾಪಾಡಲು ತಮ್ಮ ರಾಜಕೀಯ ಅಧಿಕಾರವನ್ನು ಸಮರ್ಥವಾಗಿ ಬಳಸಿಕೊಂಡರು. 1938ರಲ್ಲಿ ಕಲ್ಯಾಣಮ್ಮನವರು ಎಲ್ಲ ಉದ್ಯೋಗಗಳಿಗೂ ಸ್ತ್ರೀಯರು ಅರ್ಹರೆಂದು ಸರ್ಕಾರ ಪರಿಗಣಿಸಬೇಕೆಂದು ಒತ್ತಾಯಿಸಿದರು. ಕಾರಣ ಆಗ ಸರ್ಕಾರವು ಶಿಕ್ಷಣ ಮತ್ತು ವೈದ್ಯಕೀಯ ಕ್ಷೇತ್ರದಲ್ಲಿ ಮಾತ್ರ ಸ್ತ್ರೀಯರಿಗೆ ಉದ್ಯೋಗಗಳನ್ನು ನೀಡುತ್ತಿತ್ತು. ಸದಸ್ಯರ ಒತ್ತಾಯ ಮತ್ತು ಬೇಡಿಕೆಗಳ ಪರಿಣಾಮವಾಗಿ ಸರ್ಕಾರ ಅನೇಕ ಹಕ್ಕುಗಳನ್ನು ನೀಡಿ ಲಿಂಗಾಧರಿತ ತಾರತಮ್ಯ ನೀತಿಯನ್ನು ಹೋಗಲಾಡಿಸಿತು[745].

**ಆಸ್ತಿಯ ಹಕ್ಕುಗಳು :** ಭಾರತೀಯ ಸಮಾಜದಲ್ಲಿ ಸ್ತ್ರೀಯನ್ನು ಗೌರವದಿಂದ ಕಂಡಿದ್ದರೂ ಸಹ ಆಕೆಗೆ ಪಿತ್ರಾರ್ಜಿತ ಆಸ್ತಿಯ ಹಕ್ಕನ್ನು ನಿರಾಕರಿಸಲಾಗಿತ್ತು. ಆರ್ಥಿಕತೆಯ ಸ್ವಾವಲಂಬನೆಯಿಲ್ಲದೆ ಸ್ತ್ರೀ ಎಲ್ಲ ಘಟ್ಟದಲ್ಲೂ ಪುರುಷನ ಕೃಪೆಯಲ್ಲಿ ಬದುಕುವಂತಾಗಿತ್ತು. 1927ರಲ್ಲಿ ಕೆ.ಟಿ. ಭಾಷ್ಯ ಅಯ್ಯಂಗಾರರು ಸದನದಲ್ಲಿ ಹಿಂದೂ ಕಾನೂನನ್ನು ಪರಿಷ್ಕರಿಸಬೇಕೆಂದು ವಾದಿಸಿದರು. ಸದನದ ಬಹುಸಂಖ್ಯಾತ ಸದಸ್ಯರು ಹಿಂದೂ ಕಾನೂನುಗಳು ಶತಮಾನಗಳ ಹಿಂದಿನ ಸಮಾಜದ ಅವಶ್ಯಕತೆಗೆ ರೂಪಿಸಿದವಾಗಿದ್ದು ಈಗಿನ ಪ್ರಸಕ್ತ ಕಾಲಕ್ಕೆ ಬದಲಾವಣೆ ಅಗತ್ಯವೆಂದು ವಾದಿಸಿದರು[746]. ಸರ್ಕಾರವು ವಾದವನ್ನು ಒಪ್ಪಿ ಹಿಂದೂ ಕಾನೂನುಗಳ ಕ್ರೋಢೀಕರಣ ಮತ್ತು ಪರಿಷ್ಕರಣೆಗಾಗಿ ಕೆ.ಎಸ್. ಚಂದ್ರಶೇಖರ ಅಯ್ಯರ್‌ರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಿತು. ಸ್ತ್ರೀಯರ ಸ್ಥಿತಿಗತಿಯ ಬೆಳವಣಿಗೆಗೆ ಬೇಕಾದ ಪರಿಷ್ಕರಣೆ ಗುರುತಿಸಲು ರುಕ್ಮಿಣಿಯಮ್ಮ ಎಂಬುವವರನ್ನು ಸಮಿತಿಯಲ್ಲಿ ನೇಮಿಸಲಾಯಿತು. ಸಮಿತಿಯು ರಾಜ್ಯಾದ್ಯಂತ ಜನರಿಂದ ಒಟ್ಟಾಗಿ ಅಥವಾ ವೈಯಕ್ತಿಕವಾಗಿ ಅಭಿಪ್ರಾಯ ಸಂಗ್ರಹಿಸಿ 1930ರಲ್ಲಿ ವರದಿ ನೀಡಿತು[747]. ವರದಿಯ ಮುಖ್ಯಾಂಶಗಳನ್ನು ಸದನವು ದೀರ್ಘವಾಗಿ ಚರ್ಚಿಸಿ ಮಹಾರಾಜ ನಾಲ್ವಡಿಯವರ ಅಂಕಿತದೊಡನೆ 1930ರ ಜೂನ್ 29ರಂದು "ದಿ ಹಿಂದೂ ಲಾ ವುಮೆನ್ಸ್ ರೈಟ್ಸ್ ಆಕ್ಟ್" ಎಂಬ ಶಾಸನವಾಗಿ ಜಾರಿಗೊಳಿಸಲ್ಪಟ್ಟಿತು. ಈ ಶಾಸನವು ಪಿತ್ರಾರ್ಜಿತ ಆಸ್ತಿಯಲ್ಲಿ ಕೆಲಭಾಗವನ್ನು ಸ್ತ್ರೀಧನವನ್ನು ಸೇರಿದಂತೆ ಹೊಂದುವ, ಅದನ್ನು ಅನುಭವಿಸುವ ಅಥವಾ ಮಾರುವ, ಅಡವಿಡುವ ಎಲ್ಲ ರೀತಿಯ ಅಧಿಕಾರವನ್ನು ನೀಡಿತು[748]. ಈ ಶಾಸನವು ಸ್ತ್ರೀಯರ ಆಸ್ತಿಯ ಹಕ್ಕನ್ನು ಮಾನ್ಯಗೊಳಿಸಿ ಅವರ ಸಾಮಾಜಿಕ ಘನತೆಯನ್ನು ಹೆಚ್ಚಿಸುವ ಉದ್ದೇಶ ಹೊಂದಿದ್ದರೂ ಸಹ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯಲು ನ್ಯಾಯಾಲಯಕ್ಕೆ ದಾವೆ ಹೂಡುವಂತಿಲ್ಲ ಮುಂತಾದ ನಿಯಮಗಳಿಂದಾಗಿ ಹಾಗೂ ಸ್ತ್ರೀಗೆ ಆಸ್ತಿಯ ಹಕ್ಕನ್ನು ಹಂಚಿಕೊಳ್ಳಲು

---

743. *ಸದಾಶಿವ ಕೆ., ಪೂರ್ವೋಕ್ತ, ಪು. 227*

744. *ವೆಂಕಟರಾಮಯ್ಯ ಸಿ.ಕೆ., ಅಳಿದ ಮಹಾಸ್ವಾಮಿಗಳು, ಪೂರ್ವೋಕ್ತ, ಪು. 314*
*- ಹನುಮಂತಪ್ಪ ಟಿ. ಹಿಸ್ಟರಿ ಆಫ್ ಲೆಜಿಸ್ಲೇಟರ್, ಸಂಪುಟ-III, ಪು.285*

745. *ಹನುಮಂತಪ್ಪ, ಪೂರ್ವೋಕ್ತ, ಪು. 288*

746. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಅಕ್ಟೋಬರ್ 1935, ಪು. 105*

747. *ರಿಪೋರ್ಟ್ ಆಫ್ ದಿ ಹಿಂದೂ ಲಾ ಕಮಿಟಿ, ಬೆಂಗಳೂರು, 1930*

ಸಮಾಜ ಸಿದ್ಧವಿರಲಿಲ್ಲವಾದ್ದರಿಂದ ಈ ಶಾಸನವು ತನ್ನ ಗುರಿಯನ್ನು ಸಾಧಿಸಲಿಲ್ಲ.

### ೯) *ಅಸ್ಪೃಶ್ಯತಾ ನಿವಾರಣೆ*

ಚಾತುರ್ವರ್ಣ ವ್ಯವಸ್ಥೆಯೊಳಗೆ ಸೇರದ ಕೆಲ ಜಾತಿಗಳನ್ನು ಪಂಚಮರು, ಅತಿಶೂದ್ರರು, ಶೋಷಿತರು, ಪರಿಶಿಷ್ಟ ಜಾತಿಗಳು ಮುಂತಾದ ಹೆಸರಿನಿಂದ ಕರೆಯಲ್ಪಟ್ಟಿದ್ದು ಅವರನ್ನು ಸಮಾಜ ಅಸ್ಪೃಶ್ಯರನ್ನಾಗಿ ಪರಿಗಣಿಸಿತ್ತು. ಎಂ.ಕೆ. ಗಾಂಧಿಯವರು ಹೇಳಿದಂತೆ ಅಸ್ಪೃಶ್ಯತೆ ಎಂಬುದು ಹಿಂದೂ ಸಮಾಜಕ್ಕಂಟಿದ ಶಾಪ, ಕಪ್ಪು ಚುಕ್ಕೆಯಾಗಿತ್ತು. ಸ್ವಾಮಿ ವಿವೇಕಾನಂದರು ಮೈಸೂರಿಗೆ ಬಂದ ನಂತರ ಹಾಗೂ ಮಹಾರಾಜರಿಗೆ ಪತ್ರಗಳ ಮೂಲಕ ಅಸ್ಪೃಶ್ಯ ವರ್ಗದ ಉದ್ಧಾರಕ್ಕಾಗಿ ಕ್ರಮಕೈಗೊಳ್ಳಬೇಕೆಂದು ಹೇಳಿದ ಹಿತವಚನಗಳ ಫಲವಾಗಿ ಮೈಸೂರು ಸರ್ಕಾರವು ಪಂಚಮರ ಕಲ್ಯಾಣಕ್ಕೆ ಮುಂದಾಯಿತು[749]. ಕ್ರೈಸ್ತ ಮಿಷನರಿಗಳು ಆರಂಭಿಸಿದ್ದ ಆಧುನಿಕ ಶಿಕ್ಷಣ ಸಂಸ್ಥೆಗಳಲ್ಲಿ ಅಸ್ಪೃಶ್ಯರು ಪ್ರವೇಶ ಪಡೆದು ಶಿಕ್ಷಣ ಪಡೆಯುವಂತಾಯಿತು. ಮೈಸೂರು ಸರ್ಕಾರವು 1889-90ರಲ್ಲಿ ಪಂಚಮ ಶಾಲೆಗಳೆಂಬ ಪ್ರತ್ಯೇಕ ಶಾಲೆಗಳನ್ನು ಸ್ಥಾಪಿಸುವ ಮೂಲಕ ಅಸ್ಪೃಶ್ಯರಿಗೆ ಶಿಕ್ಷಣ ನೀಡಲು ಮುಂದಾಯಿತು. ಹಾಗೆಯೇ ಪ್ರತೀವರ್ಷ ಅಂತಹ ಶಾಲೆಗಳನ್ನು ಹೆಚ್ಚಿಸುತ್ತಾ, ವಿದ್ಯಾರ್ಥಿ ವೇತನ, ಲೇಖನಿ, ಪುಸ್ತಕ, ಬಟ್ಟೆ ಮುಂತಾದ ಸೌಲಭ್ಯಗಳನ್ನು ಒದಗಿಸುವ ಮೂಲಕ ಅಸ್ಪೃಶ್ಯರಿಗೆ ಶಿಕ್ಷಣವನ್ನು ವಿಸ್ತರಿಸಲಾಯಿತು.

ಶೃಂಗೇರಿಯ ಆಂಗ್ಲೋ ವರ್ನಾಕ್ಯುಲರ್ ಶಾಲೆಗೆ ಹಳೇಪೈಕ ವಿದ್ಯಾರ್ಥಿಯನ್ನು ಸೇರಿಸಿದ್ದನ್ನು ಉನ್ನತ ಜಾತಿಯವರು ಒಪ್ಪದೆ ಆ ಶಾಲೆಯಿಂದ ತಮ್ಮ ಮಕ್ಕಳನ್ನು ಬಿಡಿಸಿ ಪ್ರತ್ಯೇಕ ಶಾಲೆಯನ್ನು ಸ್ಥಾಪಿಸಿಕೊಂಡರು. ಆಗ ನಾಲ್ವಡಿಯವರ ಸರ್ಕಾರವು 1915ರಲ್ಲಿ ಒಂದು ಸುತ್ತೋಲೆಯನ್ನು ಹೊರಡಿಸಿ ಸಾಮಾಜಿಕ ಅಥವಾ ಧಾರ್ಮಿಕ ನಿರ್ಬಂಧದ ಆಧಾರದ ಮೇಲೆ ಅಸ್ಪೃಶ್ಯರನ್ನು ಸಾರ್ವಜನಿಕ ಶಾಲೆಗಳಿಗೆ ಸೇರುವುದನ್ನು ತಡೆಯಬಾರದೆಂದು ತಿಳಿಸಿತು. ಆನಂತರ 1919ರಲ್ಲಿ ಒಂದು ಆಜ್ಞೆಯನ್ನು ಹೊರಡಿಸಿ ಜಾತಿಯನ್ನಾಧರಿಸಿ ಯಾರನ್ನೂ ಸರ್ಕಾರಿ ನೆರವಿನಿಂದ ನಡೆಯುವ ಶಾಲೆಗಳಿಂದ ಹೊರಗಿಡುವಂತಿಲ್ಲವೆಂದು ಹಾಗೂ ಸರ್ಕಾರಿ ಆಸ್ಪತ್ರೆ, ಕೋರ್ಟುಗಳಂತೆ ಸರ್ಕಾರಿ ಶಾಲೆಗಳಿಗೆ ಸಾರ್ವಜನಿಕರೆಲ್ಲರಿಗೂ ಪ್ರವೇಶವಿದೆಯೆಂದು ಘೋಷಿಸಿತು[750]. ಆಜ್ಞೆಗೆ ವಿರೋಧಗಳು ಎಷ್ಟೇ ಬಂದರೂ ನಾಲ್ವಡಿಯವರು 'ಬಂಡೆಯಂತೆ ಸ್ಥಿರವಾಗಿ ನಿಂತರು' ಹಾಗೂ ಅಸ್ಪೃಶ್ಯರಿಗೆ ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶಾವಕಾಶ ಸೌಲಭ್ಯವನ್ನು ಒದಗಿಸಿದರು. ಇದರೊಂದಿಗೆ ಉನ್ನತ ಜಾತಿ ಮತ್ತು ಅಸ್ಪೃಶ್ಯ ವಿದ್ಯಾರ್ಥಿಗಳು ಒಂದೆಡೆ ಕುಳಿತು ಶಿಕ್ಷಣ

---

748. *ದಿ ಮೈಸೂರ್ ಕೋಡ್, ಸಂಪುಟ-II, ಪು. 398-412*

749. *ಚಂದ್ರಶೇಖರ್ ಎಸ್., ಡೈಮೆನ್ಷನ್ಸ್ ಆಫ್ ಸೋಷಿಯೊ-ಪೊಲಿಟಿಕಲ್ ಚೇಂಜ್ ಇನ್ ಮೈಸೂರ್, 1918-1940, ಪು. 87*

ಕಲಿಯುವಂತಾಯಿತು. ಸಾರ್ವಜನಿಕವ್ವಾಗಿದ್ದ ಅಸ್ಪೃಶ್ಯತೆಯನ್ನು ತೊಡೆದು ಹಾಕಲು 1932ರಲ್ಲಿ ಪ್ರಜಾಪ್ರತಿನಿಧಿ ಸಭೆಯು ಅಸ್ಪೃಶ್ಯತಾ ಕಾನೂನನ್ನು ಜಾರಿಗೊಳಿಸಬೇಕೆಂದು ಒತ್ತಾಯಿಸಿತು. ಸರ್ಕಾರವು ಕಾರ್ಯತಹ ಸಮಸ್ಯೆಗಳಿರುವುದರಿಂದ ತಕ್ಷಣಕ್ಕೆ ಅಂತಹ ಕಾನೂನು ತರಲು ಸಾಧ್ಯವಿಲ್ಲವೆಂದು ತಿಳಿಸಿತು. ಈ ವಿಷಯವು ಸದನದಲ್ಲಿ ಮಂಡಿಸಲ್ಪಟ್ಟಾಗ 111 ಮತಗಳು ಪರವಾಗಿಯೂ ಮತ್ತು 59 ಮತಗಳು ವಿರುದ್ಧವಾಗಿ ಚಲಾಯಿಸಲ್ಪಟ್ಟವು. ನಾಲ್ವಡಿಯವರ ಸರ್ಕಾರವು ಅಸ್ಪೃಶ್ಯರ ಸಮಸ್ಯೆಯನ್ನು ಹಂತ ಹಂತವಾಗಿ ಹೋಗಲಾಡಿಸಲು ಮುಂದಾಯಿತು. 1933ರಲ್ಲಿ ಎಲ್ಲ ಸರ್ಕಾರಿ ಅಧಿಕಾರಿಗಳಿಗೂ ಆಜ್ಞೆಯೊಂದನ್ನು ಹೊರಡಿಸಿ ಅಸ್ಪೃಶ್ಯರಿಗೆ ಎಲ್ಲ ಕೆರೆಗಳನ್ನು ಬಳಸಿಕೊಳ್ಳಲು ಅವಕಾಶ ಮಾಡಿಕೊಡಬೇಕೆಂದು ನಿರ್ದೇಶನ ನೀಡಿತು[751]. ಅದೇ ರೀತಿ ಬೆಂಗಳೂರು, ತುಮಕೂರು ಮತ್ತು ಕೋಲಾರದ ಜಿಲ್ಲಾ ಬೋರ್ಡ್‌ಗಳಿಗೂ ಸಹ ಅವುಗಳ ಹತೋಟಿಯಲ್ಲಿರುವ ಕೆರೆ ಬಾವಿಗಳನ್ನು ಅಸ್ಪೃಶ್ಯರಿಗೆ ತೆರೆಯುವಂತೆ ತಿಳಿಸಿತು[752]. ಭಾರತದ ಮಟ್ಟದಲ್ಲಿ ಅಸ್ಪೃಶ್ಯತಾ ನಿವಾರಣೆಯು ಕಾಂಗ್ರೆಸ್‌ನ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಮುಖ್ಯಾಂಶವಾಗಿ ಕಾಂಗ್ರೆಸ್ ಮತ್ತು ಅನೇಕ ನಾಯಕರು ಜನರಲ್ಲಿ ಅರಿವು ಮೂಡಿಸಲು ಪ್ರಯತ್ನಿಸಿದರು. ಸಂಡೂರು ಮತ್ತು ತಿರುವಾಂಕೂರು ಸಂಸ್ಥಾನಗಳಲ್ಲಿ ದೇವಸ್ಥಾನ ಪ್ರವೇಶದ ಶಾಸನವು ಜಾರಿಗೆ ಬಂದಿದ್ದರಿಂದ ಪ್ರಭಾವಿತರಾದ ನಾಲ್ವಡಿಯವರು 1936ರಲ್ಲಿ ಅರಮನೆಯ ದಸರಾ ದರ್ಬಾರಿಗೆ ಸ್ಥಳೀಯ ಸಂಸ್ಥೆಗಳ ಅಸ್ಪೃಶ್ಯ ಸದಸ್ಯರಿಗೆ ಪ್ರವೇಶಾವಕಾಶ ನೀಡಿದರು[753]. ಸ್ಥಳೀಯ ಸಂಸ್ಥೆಗಳಲ್ಲಿ ಸರ್ಕಾರವು ಮುಜರಾಯಿ ದೇವಸ್ಥಾನಗಳನ್ನು ಅಸ್ಪೃಸ್ಯರ ಪ್ರವೇಶಕ್ಕೆ ತೆರೆಯಬೇಕೆನ್ನುವ ನಿರ್ಣಯಗಳನ್ನು ಕೈಗೊಂಡವು. ನಿರ್ಣಯಗಳನ್ನು ತಾತ್ವಿಕವಾಗಿ ಒಪ್ಪಿಕೊಂಡ ಸರ್ಕಾರ ಅನಂತರ ಸಂಪ್ರದಾಯವಾದಿಗಳ ವಿರೋಧ ಹಾಗೂ ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಬದ್ಧತೆಯಿಲ್ಲದೆ ನಿರ್ಣಯವನ್ನು ಹಿಂತೆಗೆದುಕೊಂಡಿತು[754]. ನಾಲ್ವಡಿಯವರ ಕಾಲಾನಂತರ 1943ರಲ್ಲಿ ಮೈಸೂರು ಸರ್ಕಾರವು ನಾಗರಿಕ ಕುಂದುಕೊರತೆಗಳ ನಿವಾರಣ ಶಾಸನವನ್ನು ಜಾರಿಗೊಳಿಸಿತು. ಈ ಶಾಸನವು ಹಿಂದೂ ಸಮಾಜದ ಶೋಷಿತ ವರ್ಗವಾದ ಅಸ್ಪೃಶ್ಯರನ್ನು ಸಾರ್ವಜನಿಕ ಕಛೇರಿಗಳು, ಕೆರೆ, ಬಾವಿ, ನದಿ, ತೊರೆ, ರಸ್ತೆ, ಸಾರಿಗೆ ಸಾಧನಗಳು, ಸಾರ್ವಜನಿಕರಿಗೆಲ್ಲ ತೆರೆದ ಪರವಾನಗಿ ಪಡೆದ ಪ್ರದೇಶಗಳಲ್ಲಿ ಮುಕ್ತವಾಗಿ ಪ್ರವೇಶಿಸಲು, ಬಳಸಲು ಅವಕಾಶ ಮಾಡಿಕೊಟ್ಟಿತು. ಜಾತಿ ಅಥವಾ ವರ್ಗದ ಆಧಾರದ ಮೇಲೆ ವ್ಯಕ್ತಿಯನ್ನು ತಾರತಮ್ಯವಾಗಿ ನೋಡುವುದನ್ನು ಈ ಶಾಸನ ನಿವಾರಿಸಿತು[755]. 1928ರಿಂದ ಶಾಸನಸಭೆಗಳಲ್ಲಿ ಮಂಡಿತವಾದ ಅಸ್ಪೃಶ್ಯರ ದೇವಾಲಯ ಪ್ರವೇಶ ಶಾಸನ ಜಾರಿಯ ಬೇಡಿಕೆಯು ಅಂತಿಮವಾಗಿ 1948ರಲ್ಲಿ ಅಸ್ಪೃಶ್ಯರಿಗೆ ಹಿಂದೂ ದೇವಾಲಯಗಳಲ್ಲಿ ಪ್ರವೇಶ ನೀಡುವ ಶಾಸನ

---

750. *ಫೈಲ್ ನಂ. 89-17, ಕ್ರಮಸಂಖ್ಯೆ 4, 46, 48, ಎಜುಕೇಷನ್, 1917, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು*

751. *ಸದಾಶಿವ ಕೆ. ಪೂರ್ವೋಕ್ತ, ಪು. 382*

752. *ಪ್ರೊಸಿಡಿಂಗ್ಸ್ ಆಫ್ ಮೈಸೂರ್ ಲೆಜಿಸ್ಲೇಟಿವ್ ಕೌನ್ಸಿಲ್, ಜೂನ್ 1939, ಪು. 392*

753. *ಚಂದ್ರಶೇಖರ್ ಎಸ್., ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು 1881-1940, ಬೆಂಗಳೂರು, 1983, ಪು. 99*

754. *ಅದೇ.*

ಜಾರಿಗೊಂಡಿತು. ಇದರೊಂದಿಗೆ ಅಸ್ಪೃಶ್ಯರು ಕೆರೆ, ಬಾವಿ, ನದಿ, ಬೆಟ್ಟಗಳು, ದೇವಸ್ಥಾನದ ಬೀದಿಗಳು, ದೇವಾಲಯಗಳಿಗೂ ಪ್ರವೇಶಿಸುವ ಅವಕಾಶ ಪಡೆದರು[756]. ಹೀಗೆ ಹಂತ ಹಂತವಾಗಿ ಅಸ್ಪೃಶ್ಯತೆಯ ಬಗೆಗಿನ ಮನೋಭಾವವನ್ನು ಹೋಗಲಾಡಿಸಲು ಹಾಗೂ ಅಂತಿಮವಾಗಿ ಶಾಸನಬದ್ಧವಾಗಿ ಅಸ್ಪೃಶ್ಯತೆಯನ್ನು ನಿವಾರಿಸಲು ಮೈಸೂರು ಸರ್ಕಾರೆ ಪ್ರಯತ್ನಿಸಿತು.

ಮೇಲ್ಕಂಡಂತೆ ನಾಲ್ವಡಿಯವರ ನೇತೃತ್ವದ ಮೈಸೂರು ಸರ್ಕಾರವು ತನ್ನ ಶಾಸನಾಧಿಕಾರವನ್ನು ಬಳಸಿ ಸಮಾಜದ ಎಲ್ಲ ಕ್ಷೇತ್ರಗಳ ಬೆಳವಣಿಗೆಯನ್ನು ಸಾಧಿಸಲು ಪ್ರಯತ್ನಿಸಿತು. ಸಾಮಾಜಿಕ ಹಾಗೂ ಧಾರ್ಮಿಕ ವಿಷಯಗಳಲ್ಲಿ ಸಮಾಜವು ಹೆಚ್ಚು ಸಂಪ್ರದಾಯಬದ್ಧವಾಗಿದ್ದು ಆ ಕ್ಷೇತ್ರದಲ್ಲಿನ ಸಾಮಾಜಿಕ ಪರಿವರ್ತನೆಗೆ ವಿರೋಧ ತೀವ್ರವಾಗಿತ್ತು. ಅಲ್ಲದೆ ಮಹಾರಾಜರಾದ ನಾಲ್ವಡಿಯವರು ಸ್ವತಹ ಅತ್ಯಂತ ಸಂಪ್ರದಾಯಸ್ಥ ಧರ್ಮಾವಲಂಬಿಯಾಗಿದ್ದುದು ಸಾಮಾಜಿಕ ಧಾರ್ಮಿಕ ಸುಧಾರಣಾ ಪ್ರಕ್ರಿಯೆಯನ್ನು ಮುಂದಗೊಳಿಸಲು ಕಾರಣವಾಯಿತು. ನಾಲ್ವಡಿಯವರು ಎಲ್ಲಿಯೂ ಬಹಿರಂಗವಾಗಿ ಸಾಮಾಜಿಕ ವಿಚಾರಗಳಿಗೆ ಸಂಬಂಧಿಸಿದಂತೆ ಹೇಳಿಲ್ಲ. ಆದರೂ ಅವರು ಆರ್ಥಿಕತೆಯ ಆಧುನಿಕತೆಗೆ ನೀಡಿದಷ್ಟು ಪ್ರೋತ್ಸಾಹವನ್ನು ಸಾಮಾಜಿಕ ವಿಚಾರಗಳಲ್ಲಿ ಕಾಣಲಾಗುವುದಿಲ್ಲ. ಆ ಹಿನ್ನಲೆಯಲ್ಲಿ ನಾಲ್ವಡಿಯವರು ಸಾಮಾಜಿಕ ವಿಚಾರಗಳಲ್ಲಿ ಸಂಪ್ರದಾಯಸ್ಥರಾಗಿದ್ದರೆಂದೆ ಹೇಳಬಹುದು. ಹಾಗೆಯೇ ಮೈಸೂರು ಸಂಸ್ಥಾನದ ಬೌದ್ಧಿಕ ವರ್ಗ ಅಥವಾ ಗಣ್ಯವರ್ಗವು ಭಾರತದ ಮಟ್ಟದಲ್ಲಿ ನಡೆಯುತ್ತಿದ್ದ ಸಾಮಾಜಿಕ ಚಳವಳಿಯ ಮಾದರಿಯಲ್ಲಿ ಚಳವಳಿಗಳನ್ನು ಸಂಘಟಿಸುವ ಬದಲು ಒಂದು ನಿರ್ದಿಷ್ಟ ಪಂಥ ಅಥವಾ ಜಾತಿಯ ಹಿತಾಸಕ್ತಿಗಳನ್ನು ಸಾಧಿಸಲು ಮುಂದಾದುದು ಮೈಸೂರು ಸಂಸ್ಥಾನದ ಸಾಮಾಜಿಕ ಸುಧಾರಣಾ ಚಳವಳಿಯ ದಿಕ್ಕುದೆಸೆಯನ್ನೇ ಬದಲಾಯಿಸಿದವು.

### *iii) ಬೌದ್ಧಿಕ ಬೆಳವಣಿಗೆಯಲ್ಲಿ ಶಾಸನಗಳು*

ಕ್ರಿಯಾಶೀಲವಾದ, ಪ್ರಗತಿಪರವಾದ ಬೌದ್ಧಿಕ ವರ್ಗವು ಒಂದು ಸಮಾಜದ ಬೆಳವಣಿಗೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತದೆ. ಪ್ರಪಂಚದ ಆಗುಹೋಗುಗಳಿಗೆ, ಬೆಳವಣಿಗೆಗೆ ಸದಾ ತೆರೆದುಕೊಂಡಿರುವ ಈ ಬೌದ್ಧಿಕ ವರ್ಗವು ತಾವು ಬದುಕುವ ಸಮಾಜದಲ್ಲೂ ಸಾಮಾಜಿಕ ಪರಿವರ್ತನೆಗೆ, ಬೆಳವಣಿಗೆಗೆ ನೆರವಾಗುತ್ತವೆ. ಆರ್ನಾಲ್ಡ್ ಟಾಯ್ನ್‌ಬೀ ತಿಳಿಸಿರುವಂತೆ ಯಾವುದೇ ಸಮಾಜ ಎಲ್ಲಿಯವರೆಗೆ ತನಗೆ ಬಂದ ಸವಾಲುಗಳನ್ನು ಸೃಜನ ರೀತಿಯಲ್ಲಿ

---

*755. ದಿ ಮೈಸೂರ್ ಕೋಡ್., ಸಂಪುಟ-II, ಪು. 551-553*

*756. ಅದೇ., ಸಂಪುಟ-III, ಪು. 127-129*

ಎದುರಿಸುವ ಸಾಮರ್ಥ್ಯವನ್ನು ಪಡೆದುಕೊಂಡಿರುತ್ತದೋ ಅಲ್ಲಿಯವರೆಗೆ ಅದು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುತ್ತದೆ. ಸಮಾಜದ ಮೇಲೆ ಎರಗುವ ಸವಾಲುಗಳನ್ನು ಅರ್ಥ ಮಾಡಿಕೊಳ್ಳುವ ಹಾಗೂ ಎದುರಿಸುವ ಸಾಮರ್ಥ್ಯ ಎಲ್ಲರಿಗೂ ಇರುವುದಿಲ್ಲ. ಕ್ರಿಯಾಶೀಲ ಅಲ್ಪಸಂಖ್ಯಾತವರ್ಗ ಸವಾಲುಗಳನ್ನು ಗ್ರಹಿಸಬಲ್ಲರು ಮತ್ತು ಜವಾಬುಗಳನ್ನು ನೀಡಬಲ್ಲರೆಂದು ತಮ್ಮ ಸವಾಲು ಮತ್ತು ಜವಾಬು ಸಿದ್ಧಾಂತದಲ್ಲಿ ಪ್ರತಿಪಾದಿಸಿದ್ದಾರೆ[757]. ನಮ್ಮ ಅಧ್ಯಯನ ಕಾಲಾವಧಿಯಲ್ಲಿ ಆಧುನಿಕ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆದು ರೂಪುಗೊಂಡ ಬೌದ್ಧಿಕ ವರ್ಗವು ಅರ್ನಾಲ್ಡ್ ಟಾಯನ್‌ಬೀ ಉಲ್ಲೇಖಿಸಿದ ಕ್ರಿಯಾಶೀಲ ಅಲ್ಪಸಂಖ್ಯಾತ ವರ್ಗವಾಗಿ ಕಾರ್ಯ ನಿರ್ವಹಿಸುವುದನ್ನು ಕಾಣಬಹುದು. ಈ ಅಧ್ಯಾಯದಲ್ಲಿ ನಾಲ್ವಡಿಯವರು ಶಾಸನಗಳ ಮೂಲಕ ಇಂತಹ ಬೌದ್ಧಿಕ ವರ್ಗವನ್ನು ವಿಸ್ತೃತವಾಗಿ ಬೆಳೆಸಲು ಹೇಗೆ ಪ್ರಯತ್ನಿಸಿದರು ಎಂಬುದನ್ನು ಸಮೀಕ್ಷಿಸುವುದಾಗಿದೆ.

ಆಧುನಿಕ ಪ್ರಪಂಚದಲ್ಲಿ ಶಿಕ್ಷಣದ ಸಾರ್ವತ್ರೀಕರಣದ ಮೂಲಕ ಸಮಾಜವನ್ನು ಬೌದ್ಧಿಕ ಉನ್ನತಿಯತ್ತ ಕೊಂಡೊಯ್ಯುವುದನ್ನು ಆಧುನಿಕ ರಾಜ್ಯಗಳು ಆದರ್ಶವೆಂದು ಭಾವಿಸಿವೆ. ಅದಕ್ಕಾಗಿ ಶಾಲಾ ಕಾಲೇಜುಗಳನ್ನು ಮತ್ತು ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸುವ ಮೂಲಕ ಸಂಶೋಧನೆ, ಹೊಸ ಆವಿಷ್ಕಾರಗಳಿಗೆ ಪ್ರೋತ್ಸಾಹಿಸಲಾಗುತ್ತಿದೆ. ಸಾಮಾಜಿಕ ಬೆಳವಣಿಗೆಯಲ್ಲಿ ಶಿಕ್ಷಣದ ಪಾತ್ರ ಪ್ರಮುಖವಾದುದು. ಇಂತಹ ಶಿಕ್ಷಣವನ್ನು ಸಮಾಜವು ಸಾರ್ವತ್ರಿಕವಾಗಿ ನೀಡಲು ಅಥವಾ ಪಡೆಯಲು ಅವಕಾಶ ಮಾಡಿಕೊಡದಿದ್ದರೆ ರಾಜ್ಯವು ತನ್ನ ಪರಮಾಧಿಕಾರವಾದ ಶಾಸನದ ಮೂಲಕ ಬಲವಂತವಾಗಿಯಾದರೂ ನೀಡಲು ಮುಂದಾಗುತ್ತದೆ. ಈ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನದಲ್ಲಿ ಶಾಸನಗಳು ಬೌದ್ಧಿಕ ಬೆಳವಣಿಗೆಗೆ ಹೇಗೆ ನೆರವಾದವು ಎಂಬುದನ್ನು ಕೆಳಕಂಡಂತೆ ತಿಳಿಯಬಹುದು.

ಆಧುನಿಕ ಪಾಶ್ಚಿಮಾತ್ಯ ಶಿಕ್ಷಣದ ಪ್ರವೇಶದಿಂದಾಗಿ ವಿವಿಧ ಜಾತಿಗಳಲ್ಲಿ ಊರ್ಧ್ವಮುಖಿ ಚಲನೆ ಕಂಡುಬಂದಿತು. ಶಿಕ್ಷಣವು ಉನ್ನತ ಜಾತಿಯಾದ ಬ್ರಾಹ್ಮಣರಿಗೆ ಸೀಮಿತವೆಂಬ ನಿರ್ಬಂಧ ಇಲ್ಲದಂತಾಯಿತು. ಕ್ರೈಸ್ತ ಮಿಷನರಿಗಳು ಯಾವುದೇ ಜಾತಿ ಅಥವಾ ಜನಾಂಗ ಎಂಬುದನ್ನು ಪರಿಗಣಿಸದೆ ಎಲ್ಲರಿಗೂ ತೆರೆದವು. ಅದರಲ್ಲೂ ಶೋಷಿತ ಜಾತಿಗಳಿಗೆ ತಮ್ಮ ಸ್ಥಾನವನ್ನು ವೃದ್ಧಿಸಿಕೊಳ್ಳುವುದಕ್ಕೆ ಮತ್ತು ಸಾಮಾಜಿಕ ದಬ್ಬಾಳಿಕೆಯಿಂದ ತಪ್ಪಿಸಿಕೊಳ್ಳಲು ಆಧುನಿಕ ಶಿಕ್ಷಣವು ಉತ್ತಮ ಅವಕಾಶ ಒದಗಿಸಿತು. ಆದರೂ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಹಾಗೂ ಬೌದ್ಧಿಕ ವರ್ಗವನ್ನು ವಿಸ್ತರಿಸಲು ಮೈಸೂರು ಸಮಾಜದಲ್ಲಿದ್ದ ಅನೇಕ ಅಡೆತಡೆಗಳು ಕಾರಣವಾಗಿದ್ದವು. ಶಿಕ್ಷಣ ಒದಗಿಸುವುದು ರಾಜ್ಯದ ಕರ್ತವ್ಯವೆಂಬುದು ಗಟ್ಟಿಗೊಂಡಂತೆ ಮೈಸೂರು ಸರ್ಕಾರವು ಶಿಕ್ಷಣವನ್ನು ವಿಸ್ತರಿಸಲು ಶಾಸನಗಳನ್ನು

---

*757. ಟಾಯ್ನ್‌ಬೀ ಎ.ಜೆ., ದಿ ಸ್ಟಡಿ ಆಫ್ ಹಿಸ್ಟರಿ, ಸಂಪುಟ - VI, ಪು. 281*

ಜಾರಿಗೊಳಿಸಿತು.

*ಎ) ಕಡ್ಡಾಯ ಪ್ರಾಥಮಿಕ ಶಿಕ್ಷಣ ಶಾಸನಗಳು*

ಮೈಸೂರು ಸಂಸ್ಥಾನದ ಅಭಿವೃದ್ಧಿಗೆ ಅಲ್ಲಿನ ಅವಿದ್ಯೆ ಮತ್ತು ಅಜ್ಞಾನಗಳೇ ತಡೆಯಾಗಿದ್ದವು. ಅವಿದ್ಯೆಯಿಂದಾಗಿ ರಾಜ್ಯದ ಜನರ ಸಾಮರ್ಥ್ಯವೂ ತಗ್ಗಿತ್ತು. ಪ್ರಪಂಚ ಮಟ್ಟದ ಪೈಪೋಟಿಗೆ ರಾಜ್ಯವನ್ನು, ಇಲ್ಲಿನ ಜನರನ್ನು ಅಣಿಗೊಳಿಸಲು ಶಿಕ್ಷಣವನ್ನು ಸಾರ್ವತ್ರಿಗೊಳಿಸಬೇಕಾದ್ದು ಅವಶ್ಯವಾಗಿತ್ತು. ಬೌದ್ಧಿಕ ಬೆಳವಣಿಗೆಯಲ್ಲಿ ಮೂಲಭೂತವಾದ ಪ್ರಾಥಮಿಕ ಶಿಕ್ಷಣದ ಮಹತ್ವವನ್ನು ಮೈಸೂರು ಸರ್ಕಾರವು ಅರಿತಿದ್ದು ಅದರ ವಿಸ್ತರಣೆಗಾಗಿ ಕ್ರಮ ಕೈಗೊಂಡಿತು. ಶಾಸನ ಸಭೆಯಲ್ಲಿ 1901ರಲ್ಲೇ ಶಿಕ್ಷಣವನ್ನು ಕಡ್ಡಾಯಗೊಳಿಸಬೇಕೆಂಬ ಬೇಡಿಕೆ ಬಂದಿತು[758].

ಮೈಸೂರು ಸರ್ಕಾರವು ಶಿಕ್ಷಣವನ್ನು ವಿಸ್ತರಿಸಲು 1908ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಉಚಿತವೆಂದು ಘೋಷಿಸಿತು. ಹಾಗೂ ಬರೋಡಾ ಜಾರಿಗೆ ತಂದಿದ್ದ ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ನನುಸರಿಸಿ 1913 ರಲ್ಲಿ ಮೈಸೂರು ಸರ್ಕಾರವು ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ನು ಜಾರಿಗೊಳಿಸಿತು. ಈ ಶಾಸನವು 7ರಿಂದ 11 ವರ್ಷದವರೆಗಿನ ಹುಡುಗರನ್ನು ಅವರ ತಂದೆ ತಾಯಿಗಳು ಅಥವಾ ಪೋಷಕರು ಅಧಿಕೃತ ಶಾಲೆಗಳಿಗೆ ಕಡ್ಡಾಯವಾಗಿ ಪ್ರಾಥಮಿಕ ಶಿಕ್ಷಣ ಕಲಿಯಲು ಕಳುಹಿಸಬೇಕೆಂದು ತಿಳಿಸಿತು. ಹುಡುಗನ ಮನೆಯಿಂದ ಒಂದು ಮೈಲಿ ಸುತ್ತಳತೆಯಲ್ಲಿ ಅಂಗೀಕೃತ ಶಾಲೆಗಳಿಲ್ಲದಿದ್ದರೆ ಆಗ ಕಡ್ಡಾಯ ಹಾಜರಾತಿಯಿಂದ ರಿಯಾಯಿತಿ ನೀಡಲಾಗುತ್ತಿತ್ತು. ಹಾಗೆಯೇ ಖಾಯಿಲೆಗಳಿಂದಾಗಿ, ಮನೆಗೆಲಸ, ಕೃಷಿ ಸಹಾಯಕ್ಕೆಂದು ಹುಡುಗರು ಹೋದಾಗ ಹಾಜರಾತಿಗೆ ರಿಯಾಯಿತಿಯಿತ್ತು. ಆದರೆ ಅಧಿಕೃತ ಅಧಿಕಾರಿಯಿಂದ ಪರವಾನಗಿ ಪಡೆಯಬೇಕಿತ್ತು[759]. ಈ ಕಾಯ್ದೆಯ ನಿಯಮಗಳನ್ನು ಪಾಲಿಸುವಂತೆ ಮಾಡಲು ಒಬ್ಬ ಅಧ್ಯಕ್ಷ ಮತ್ತು ಐದು ಸದಸ್ಯರ ಶಾಲಾ ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿ ಹಾಜರಾತಿ ದಾಖಲೆ ಪರಿಶೀಲಿಸಿ, ಪಾಲಕರಿಗೆ ಎಚ್ಚರಿಕೆ ಕೊಡುತ್ತಿತ್ತು. ಕಡ್ಡಾಯ ವಯೋಮಿತಿಯ ಬಾಲಕರ ಪಟ್ಟಿಯನ್ನು ಆಗಾಗ್ಗೆ ಪರಿಷ್ಕರಿಸಿ ಈ ಯೋಜನೆಯಡಿಯಲ್ಲಿ ಸೇರಿಸುತ್ತಿತ್ತು. ಪಾಲಕರು ಶಾಸನದ ಪ್ರಕಾರ ಹುಡುಗರನ್ನು ಶಾಲೆಗೆ ಕಳುಹಿಸದಿದ್ದರೆ ನ್ಯಾಯಾಧೀಶರು ಎರಡು ರೂಪಾಯಿಯವರೆಗೆ ದಂಡ ವಿಧಿಸಿ ಎಚ್ಚರಿಕೆ ನೀಡುತ್ತಿದ್ದರು. ಪಾಲಕರು ಮತ್ತೆ ಮತ್ತೆ ಶಾಸನೋಲ್ಲಂಘನೆ ಮುಂದುವರೆಸಿದರೆ ಹತ್ತು ರೂಪಾಯಿವರೆಗೆ ದಂಡ ವಿಧಿಸಬಹುದಿತ್ತು[760]. ಈ ಯೋಜನೆಯನ್ನು ಆರಂಭದಲ್ಲಿ 15 ಆಯ್ದ ಕೇಂದ್ರಗಳಲ್ಲಿ ಆನಂತರ 27 ಕೇಂದ್ರಗಳಲ್ಲಿ ಜಾರಿಗೊಳಿಸಲಾಯಿತು. ಈ ಯೋಜನೆಯು

---

758. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, 1901*

759. *ಮ್ಯಾನ್ಯುಯಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್, ಸೀರಿಸ್-V, ಎಜುಕೇಷನ್, ಭಾಗ-1, 1917, ಪು. 82-83*

ಜನರಲ್ಲಿ ಪ್ರಚಾರಗೊಂಡು ತಮ್ಮ ಪ್ರದೇಶಗಳನ್ನು ಈ ಕಾಯ್ದೆಯಡಿಗೊಳಪಡಿಸಬೇಕೆಂದು ಜನ ಒತ್ತಾಯಿಸುವಂತಾಯಿತು. ಅದರಿಂದಾಗಿ 1921-22ರ ವೇಳೆಗೆ 240 ಕೇಂದ್ರಗಳಲ್ಲಿ 44,009 ಮಕ್ಕಳು ವಿದ್ಯಾಭ್ಯಾಸ ಪಡೆಯುವಂತಾಯಿತು. ಸುಮಾರು 1658ಕೇಸುಗಳಲ್ಲಿ ಎಚ್ಚರಿಕೆ ನೀಡಿ 38 ಕೇಸುಗಳಿಗೆ ದಂಡ ವಿಧಿಸಲಾಯಿತು[761]. ಈ ಶಾಸನವು ಪ್ರಾಥಮಿಕ ಶಿಕ್ಷಣವನ್ನು ಎಲ್ಲರಿಗೂ ಉಚಿತವೆಂದು ಘೋಷಿಸಿತು. ಸರ್ಕಾರವು ಈ ಶಾಸನದ ಮೂಲಕ ಶಾಲೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಮಂಜೂರು ಮಾಡಲು, ಕಟ್ಟಡಗಳನ್ನು ನಿರ್ಮಿಸಲು ಅವಕಾಶವಾಯಿತು. ಹೊಸ ಅನುದಾನ ಸಂಹಿತೆ ರಚಿತವಾಗಿ ಅನುದಾನ ಪಡೆವ ಶಾಲೆಗಳ ನಿರ್ವಹಣಾ ಹೊಣೆಯನ್ನು ಶಾಲಾ ಸಮಿತಿಗಳಿಗೆ ವಹಿಸಲಾಯಿತು. ಹೊಸ ಶಾಲೆಗಳನ್ನು ತೆರೆಯಲು ಹಿಂದಿನ ನಿಯಮದಂತೆ ಕನಿಷ್ಠ 25 ವಿದ್ಯಾರ್ಥಿಗಳಿರಬೇಕಿತ್ತು. ಆದರೆ ಈ ಕಾಯ್ದೆಯು ನಿಯಮವನ್ನು ಸಡಿಲಿಸಿ ಕನಿಷ್ಠ 15 ವಿದ್ಯಾರ್ಥಿಗಳಿದ್ದರೂ ಶಾಲೆ ತೆರೆಯಲು ಅವಕಾಶ ಒದಗಿಸಿತು[762]. ಸರ್ಕಾರವು 1914ರಲ್ಲಿ ಒಂದು ಸಾವಿರ ಅನುದಾನಿತ ಶಾಲೆಗಳಿಗೆ ಮಂಜೂರಾತಿ ನೀಡಿತು. ಯಶಸ್ವಿಗೊಂಡ ಅನುದಾನಿತ ಶಾಲೆಗಳನ್ನು ಸರ್ಕಾರಿ ಶಾಲೆಗಳನ್ನಾಗಿ ಪರಿವರ್ತಿಸಲಾಯಿತು. ಶಿಕ್ಷಣಕ್ಕಾಗಿ ಸರ್ಕಾರ ಹೆಚ್ಚು ಸಂಪನ್ಮೂಲಗಳನ್ನು ವಿನಿಯೋಗಿಸಿತು[763]. ಈ ಕಾಯ್ದೆಯ ಪ್ರಭಾವದಿಂದ ಜನಸಾಮಾನ್ಯರಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿ ಬೆಳೆದು ಗ್ರಾಮಗ್ರಾಮಗಳಲ್ಲೂ ಶಾಲೆಗಳು ತೆರೆಯಲ್ಪಟ್ಟು ಶಿಕ್ಷಣ ಗ್ರಾಮದತ್ತಲೂ ಪಸರಿಸುವಂತಾಯಿತು. ಶಾಲೆಗಳಲ್ಲಿ ಹಿಂದೆ ಬೋಧಿಸುತ್ತಿದ್ದ ಅಮರಕೋಶ, ಗಣಿತ ಮತ್ತು ನೀತಿಶಾಸ್ತ್ರಗಳ ಜೊತೆಗೆ ಆಧುನಿಕ ಶಿಕ್ಷಣದ ವಿಷಯಗಳಾದ ಇತಿಹಾಸ, ಭೂಗೋಳಶಾಸ್ತ್ರ ಮತ್ತು ವಿಜ್ಞಾನ ವಿಷಯಗಳನ್ನು ಬೋಧಿಸುವಂತಾಯಿತು[764]. ಹಣದ ಅಭಾವ ಮತ್ತು ಶಿಕ್ಷಕರ ಕೊರತೆಯಿಂದಾಗಿ ಈ ಯೋಜನೆ ಯಶಸ್ವಿಯುತವಾಗಲಿಲ್ಲ. ಆದರೂ ನಾಲ್ವಡಿಯವರು ಈ ಶಾಸನ ಹಾಗೂ ಯೋಜನೆಯ ಮೂಲಕ ಶಿಕ್ಷಣವನ್ನು ಗ್ರಾಮೀಣ ಪ್ರದೇಶಗಳನ್ನೊಳಗೊಂಡಂತೆ ಎಲ್ಲರಿಗೂ ಸಾರ್ವತ್ರಿಕಗೊಳಿಸಲು ಪ್ರಯತ್ನಿಸಿದರು.

1913ರ ಕಡ್ಡಾಯ ಪ್ರಾಥಮಿಕ ಶಿಕ್ಷಣ ಶಾಸನ ಹಾಗೂ ಯೋಜನೆಯು ವೈಫಲ್ಯಗೊಂಡಿದ್ದರಿಂದ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಿಂದ ಹಾಗೂ ಸಾರ್ವಜನಿಕರಿಂದ ಮತ್ತೊಂದು ಶಾಸನಕ್ಕೆ ಬೇಡಿಕೆ ಬಂದಿತು. ಸರ್ಕಾರವು ಒಪ್ಪಿ 1930ರಲ್ಲಿ ಮತ್ತೊಂದು ಪ್ರಾಥಮಿಕ ಶಿಕ್ಷಣ ಶಾಸನವನ್ನು ಜಾರಿಗೆ ತಂದಿತು. ಈ ಶಾಸನದ ಪ್ರಕಾರ ಪ್ರಾಥಮಿಕ ಶಾಲೆಗಳ ನಿರ್ವಹಣೆ ಸ್ಥಳೀಯ ಸಂಸ್ಥೆಗೊಳಪಟ್ಟಿತು. ಶಿಕ್ಷಣ ಸೌಲಭ್ಯಗಳನ್ನು ಹತ್ತು ವರ್ಷಗಳಲ್ಲಿ ಒದಗಿಸಿ ಅನಂತರ ಅಂತ್ಯದಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಲಾಗುವುದೆಂಮು ಈ ಶಾಸನದಲ್ಲಿ ತಿಳಿಸಲಾಗಿತ್ತು. ಅದರಂತೆ ಎಲ್ಲ

*760. **ಸದಾಶಿವ ಕೆ.**, ಪೂರ್ವೋಕ್ತ, ಪುಟ 144-145*

*761. **ರಿಪೋರ್ಟ್ ಆಫ್ ದಿ ಕಮಿಟಿ ಫಾರ್ ಎಜುಕೇಷನಲ್ ರಿಫಾರ್ಮ್ ಇನ್ ಮೈಸೂರ್**, 1953, ಪು. 27*

*762. **ಜಯಪ್ಪ ಗೌಡ ಡಿ.ಎಸ್.**, ಪೂರ್ವೋಕ್ತ, ಪು. 96*

*763. **ಹಯವದನರಾವ್ ಸಿ. (ಸಂ.)**, ಮೈಸೂರ್ ಗೆಜೆಟಿಯರ್, ಸಂಪುಟ-IV, ಪು. 505*

*764. **ದಿ ಮೈಸೂರ್ ಬ್ಲೂ ಬುಕ್ ಜರ್ನಲ್ 1918-19**, ಸಂಪುಟ-III, ಸಂಖ್ಯೆ 4, ಪು. 59*

ಪ್ರಾಥಮಿಕ ಶಾಲೆಗಳ ನಿರ್ವಹಣೆ, ವಿಸ್ತರಣೆಯ ಅಧಿಕಾರವನ್ನು ಎಂಟು ಜಿಲ್ಲಾ ಬೋರ್ಡುಗಳಿಗೆ ಮತ್ತು ನಾಲ್ಕು ಮುನಿಸಿಪಾಲಿಟಿಗಳಿಗೆ ವಹಿಸಲಾಯಿತು. ಈ ಸ್ಥಳೀಯ ಸಂಸ್ಥೆಗಳಿಗೆ ಶೈಕ್ಷಣಿಕ ತೆರಿಗೆಯನ್ನು ವಸೂಲಿ ಮಾಡುವ ಅಧಿಕಾರವನ್ನು ನೀಡಲಾಯಿತು. ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಅಧಿಕಾರ ವಿಕೇಂದ್ರೀಕರಣ ನೀತಿಯನ್ನು ಅನುಸರಿಸಿದ್ದು ಅತ್ಯಂತ ಪ್ರಗತಿಪರ ಚಿಂತನೆಯಾಗಿತ್ತು. ಆದರೆ ಸ್ಥಳೀಯ ಸಂಸ್ಥೆಗಳು ಹಣಕಾಸಿನ ಅಭಾವದಿಂದ ಹಾಗೂ ಸರ್ಕಾರ ಹಣಕಾಸಿನ ನೆರವು ನೀಡುವ ಭರವಸೆಯನ್ನು ಉಳಿಸಿಕೊಳ್ಳಲಾರದೆ ಈ ಯೋಜನೆ ಯಶಸ್ವಿಗೊಳ್ಳಲಿಲ್ಲ[765]. ಮತ್ತೆ ಮೈಸೂರು ಸರ್ಕಾರವು ಪ್ರಾಥಮಿಕ ಶಾಲೆಗಳ ಮೇಲೆ ಹತೋಟಿ ಪಡೆಯಲು 1941ರಲ್ಲಿ ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ನು ಜಾರಿಗೊಳಿಸಿತು. ಈ ಕಾಯ್ದೆಯ ಪ್ರಕಾರ ಮೈದಾನ ಪ್ರವೇಶದಲ್ಲಿ 500 ಮತ್ತು ಮಲೆನಾಡಿನಲ್ಲಿ 300 ಜನಸಂಖ್ಯೆಯನ್ನು ಹೊಂದಿದ ಪ್ರತಿ ಗ್ರಾಮಗಳಿಗೂ ಶಾಲೆಯೊಂದನ್ನು ಸರ್ಕಾರವೇ ಸ್ಥಾಪಿಸಬೇಕೆಂದಾಯಿತು. ನಾಲ್ಕು ವರ್ಷಗಳ ಅವಧಿಯಲ್ಲಿ 1,000 ಶಾಲೆಗಳನ್ನು ಸ್ಥಾಪಿಸುವ ಉದ್ದೇಶ ಹೊಂದಲಾಗಿತ್ತು. ಈ ಕಾಯ್ದೆ ಜಾರಿಯೊಂದಿಗೆ ಮೈಸೂರು ಸರ್ಕಾರವು ಪ್ರಾಥಮಿಕ ಶಿಕ್ಷಣ ಒದಗಿಸುವುದು ರಾಜ್ಯದ ಜವಾಬ್ದಾರಿ ಎಂಬ ನೀತಿಯನ್ನು ಅಧಿಕೃತಗೊಳಿಸಿತು[766]. ಹೀಗೆ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ಆ ಮೂಲಕ ಜನರಲ್ಲಿ ಬೌದ್ಧಿಕ ಉನ್ನತಿಯನ್ನು ಸಾಧಿಸಲು ಪ್ರಯತ್ನಿಸಿದರು.

ಪ್ರಾಥಮಿಕ ಶಿಕ್ಷಣ ವಿಸ್ತಾರಗೊಂಡಂತೆ ಪ್ರೌಢಶಿಕ್ಷಣಕ್ಕೆ ಬೇಡಿಕೆ ಹೆಚ್ಚಿತು. ಆದರೆ ಮೈಸೂರು ಸಂಸ್ಥಾನದಲ್ಲಿದ್ದ ಎಲ್ಲ ಪ್ರೌಢಶಾಲೆಗಳು ಮದ್ರಾಸ್ ವಿಶ್ವವಿದ್ಯಾನಿಲಯದ ನಿಯಂತ್ರಣಕ್ಕೆ ಒಳಪಟ್ಟಿದ್ದವು. ಹಾಗಾಗಿ ಇಲ್ಲಿನ ವಿದ್ಯಾರ್ಥಿಗಳು ಮದ್ರಾಸ್ ಸರ್ಕಾರ ನಡೆಸುತ್ತಿದ್ದ ಪರೀಕ್ಷೆಗೆ ಕೂರಬೇಕಾಗಿತ್ತು. ಹೆಚ್ಚಿನ ಮೈಸೂರಿನ ವಿದ್ಯಾರ್ಥಿಗಳಿಗೆ ಪರೀಕ್ಷೆಗೆ ಕೂರಲು ಅನುಮತಿ ದೊರೆಯುತ್ತಿರಲಿಲ್ಲ. ಈ ತೊಡಕನ್ನು ನಿವಾರಿಸಲು ಮೈಸೂರು ಸರ್ಕಾರವು 1912ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷಾ ಯೋಜನೆಯನ್ನು ಅಂಗೀಕರಿಸಿತು. ಇದರಿಂದಾಗಿ ಹೆಚ್ಚು ಮೈಸೂರಿನ ವಿದ್ಯಾರ್ಥಿಗಳಿಗೆ ಅವಕಾಶ ದೊರೆಯುವಂತಾಯಿತು. ರಾಜ್ಯದಲ್ಲೇ ಪರೀಕ್ಷೆಗಳನ್ನು ನಡೆಸಲಾರಂಭಿಸಿದ್ದರಿಂದ ಹೆಚ್ಚು ವಿದ್ಯಾರ್ಥಿಗಳು ಪರೀಕ್ಷೆ ತೆಗೆದುಕೊಳ್ಳುವಂತಾಯಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಇಂಗ್ಲಿಷ್‌ಭಾಷೆ, ಅಂಕಗಣಿತ, ಇತಿಹಾಸ, ಭೂಗೋಳಶಾಸ್ತ್ರ ವಿಷಯಗಳು ಕಡ್ಡಾಯವಾಗಿದ್ದವು. ಇವುಗಳ ಜೊತೆಗೆ ವಿದ್ಯಾರ್ಥಿಗಳು ವಿಜ್ಞಾನ, ಕೃಷಿ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದ ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಬೇಕಾಗಿತ್ತು[767]. ಹೀಗೆ ಸ್ಥಳೀಯ ವಿದ್ಯಾರ್ಥಿಗಳು ಹೊಸ ಹೊಸ ಜ್ಞಾನ ಶಾಖೆಗಳನ್ನು ಅಧ್ಯಯನ ಮಾಡಲಾರಂಭಿಸಿದ್ದರಿಂದ ಹೊಸ ಸ್ಥಳೀಯ ಬೌದ್ಧಿಕ ವರ್ಗ ಮೈಸೂರಿನಲ್ಲಿ

765. *ರಿಪೋರ್ಟ್ ಆನ್ ದಿ ಕಮಿಟಿ ಫಾರ್ ಎಜುಕೇಷನಲ್ ರಿಫಾರ್ಮ್ ಇನ್ ಮೈಸೂರ್, ಪು. 21-22*

766. *ಪ್ರೊಸೀಡಿಂಗ್ಸ್ ಆಫ್ ಮೈಸೂರ್ ರೆಪ್ರೆಸೆಂಟೇಟಿವ್ ಅಸೆಂಬ್ಲಿ, ಅಕ್ಟೋಬರ್, 1941, ಪು. 44*

ರೂಪುಗೊಂಡಿತು. ಪ್ರೌಢಶಿಕ್ಷಣದ ಬೆಳವಣಿಗೆಯು ಪ್ರತ್ಯೇಕ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಗೆ ದಾರಿಮಾಡಿಕೊಟ್ಟಿತು.

*ಬಿ) ಮೈಸೂರು ವಿಶ್ವವಿದ್ಯಾನಿಲಯ ಕಾಯ್ದೆ*

ಮೈಸೂರಿನಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣ, ಪ್ರೌಢಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹದಿಂದಾಗಿ ಹೆಚ್ಚಿನ ವಿದ್ಯಾರ್ಥಿಗಳು ಕಾಲೇಜು ಶಿಕ್ಷಣ ಪಡೆಯಲು ಅರ್ಹರಾದರು. ಆದರೆ ಮೈಸೂರಿನ ಕಾಲೇಜುಗಳು ಮತ್ತು ಅವು ನಡೆಸುತ್ತಿದ್ದ ಪದವಿ ಪರೀಕ್ಷೆಗಳಿಗೆ ಮದ್ರಾಸ್ ವಿಶ್ವವಿದ್ಯಾನಿಲಯದ ಮನ್ನಣೆಯ ಅಗತ್ಯವಿದ್ದುದರಿಂದ ಮೈಸೂರಿನಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳು ಬೆಳೆಯಲು ಅವಕಾಶವಿರಲಿಲ್ಲ. ಹಾಗಾಗಿ ಮೈಸೂರು ಸರ್ಕಾರವು 1916ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಕಾಯ್ದೆಯನ್ನು ಜಾರಿಗೊಳಿಸುವ ಮೂಲಕ ಮೈಸೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿತು[768]. ವಿಶ್ವೇಶ್ವರಯ್ಯನವರು ಪ್ರಜಾಪ್ರತಿನಿಧಿ ಸಭೆಯಲ್ಲಿ ವಿಶ್ವವಿದ್ಯಾನಿಲಯದ ಕಾಯ್ದೆಯನ್ನು ಮಂಡಿಸಿದ ಸಂದರ್ಭದಲ್ಲಿ ವಿಶ್ವವಿದ್ಯಾನಿಲಯದ ಧ್ಯೇಯೋದ್ದೇಶಗಳನ್ನು ಕುರಿತು ಈ ರೀತಿ ಹೇಳಿದ್ದರು "ಮೈಸೂರು ವಿಶ್ವವಿದ್ಯಾನಿಲಯದ ನಿರ್ಧಿಷ್ಟ ಗುರಿಗಳೆಂದರೆ ಪ್ರಜೆಗಳ ಬೌದ್ಧಿಕ ಸಾಮರ್ಥ್ಯವನ್ನು ಅಭಿವೃದ್ಧಿಗೊಳಿಸುವುದರ ಜೊತೆಗೆ ಅವರ ಕಾರ್ಯನಿರ್ವಹಣಾ ಚಾತುರ್ಯಗಳನ್ನು ಹೆಚ್ಚಿಸುವುದಾಗಿದೆ. ನಮ್ಮ ರಾಜ್ಯದ ಭವಿಷ್ಯದ ಅಗತ್ಯಗಳಿಗೆ ತಕ್ಕಂತೆ ಅತ್ಯುತ್ತಮ ವ್ಯಾಪಾರಸ್ಥರು, ವಾಣಿಜ್ಯೋದ್ಯಮಿಗಳು, ಆರ್ಥಿಕ ತಜ್ಞರು, ಲಾಯರುಗಳು, ಆರೋಗ್ಯ ಮತ್ತು ನೈರ್ಮಲ್ಯ ತಜ್ಞರು, ಇಂಜಿನಿಯರುಗಳು, ಮುತ್ಸದ್ದಿಗಳನ್ನು ತಯಾರುಮಾಡಿ ರಾಜ್ಯದ ಅಗತ್ಯಗಳಿಗೆ ಸಿದ್ಧಗೊಳ್ಳುವಂತೆ ತರಬೇತುಗೊಳಿಸುವುದಾಗಿದೆ"[769]. ನಾಲ್ವಡಿಯವರೂ ಸಹ ವಿಶ್ವವಿದ್ಯಾನಿಲಯದ ಸೆನೆಟ್ ಪ್ರಾರಂಭೋತ್ಸವದಲ್ಲಿ "ಮೈಸೂರಿನ ವಿಶೇಷ ಆಕಾಂಕ್ಷೆಗಳನ್ನು ತಲುಪುವ ಹಾಗೂ ರಾಜ್ಯದ ಬೌದ್ಧಿಕ, ಭೌತಿಕ ಪ್ರಗತಿ ಮತ್ತದರ ಮುಂದಿನ ಪರಿಣಾಮಗಳನ್ನು ಮನಗಂಡು ಸ್ಥಾಪಿಸಲಾದ ಸಂಸ್ಥೆಯಾಗಿದೆ"[770] ಎಂದು ವಿಶ್ವವಿದ್ಯಾನಿಲಯದ ಸ್ಥಾಪನೆಯ ಉದ್ದೇಶವನ್ನು ಕುರಿತು ಹೇಳಿದ್ದರು.

ಮೇಲಿನ ಧ್ಯೇಯೋದ್ದೇಶಗಳೊಂದಿಗೆ ಆರಂಭಗೊಂಡ ಮೈಸೂರು ವಿಶ್ವವಿದ್ಯಾನಿಲಯವು ಮದ್ರಾಸ್ ವಿಶ್ವವಿದ್ಯಾನಿಲಯದ ನಾಲ್ಕು ವರ್ಷಗಳ ಪದವಿ ಶಿಕ್ಷಣಕ್ಕೆ ಬದಲು ಮೂರು ವರ್ಷಗಳ ಪದವಿ ಶಿಕ್ಷಣವನ್ನು ಜಾರಿಗೊಳಿಸಿತು. ಆರಂಭದಲ್ಲಿ ಬಿ.ಎ. ಮತ್ತು ಬಿ.ಎಸ್ಸಿ. ಪದವಿಗಳು ಆರಂಭಗೊಂಡು 1919-20ರಲ್ಲಿ ಎಂ. ಎ. ಪದವಿ ಪರೀಕ್ಷೆಗಳು ನಡೆಯುವಂತಾದವು. ಸಂಸ್ಥಾನದ ಅವಶ್ಯಕತೆಗಳನ್ನರಿತು 1917ರಲ್ಲಿ ಎಂಜಿನಿಯರಿಂಗ್

---

767. *ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು. 103*

768. *ದಿ ಮೈಸೂರ್ ಯೂನಿವರ್ಸಿಟಿ ಕ್ಯಾಲೆಂಡರ್, 1918-19, ಪು. 18*

769. *ಸರ್. ಎಂ. ವಿಶ್ವೇಶ್ವರಯ್ಯ., ನನ್ನ ವೃತ್ತಿ ಜೀವನದ ನೆನಪುಗಳು, ಪು. 93*

770. *ಸ್ಪೀಚಸ್ ಆಫ್ ಹಿಸ್ ಹೈನೆಸ್., ಪೂರ್ವೋಕ್ತ, ಪು. 136*

ಕಾಲೇಜನ್ನೂ, 1924ರಲ್ಲಿ ವೈದ್ಯಕೀಯ ಕಾಲೇಜನ್ನೂ ಸ್ಥಾಪಿಸಲಾಯಿತು. ಕಾಲೇಜು ಶಿಕ್ಷಣವನ್ನು ಗ್ರಾಮೀಣ ಪ್ರದೇಶಗಳಲ್ಲಿ ವಿಸ್ತರಿಸಲು ಶಿವಮೊಗ್ಗ, ತುಮಕೂರು ಮುಂತಾದೆಡೆ ಆರು ಇಂಟರ್‌ಮೀಡಿಯೆಟ್ ಕಾಲೇಜುಗಳನ್ನು ಸ್ಥಾಪಿಸಲಾಯಿತು[771]. ನಾಲ್ವಡಿಯವರು 1919ರ ಘಟಿಕೋತ್ಸವದಲ್ಲಿ ಮಾತನಾಡುತ್ತಾ "ವಿಶ್ವವಿದ್ಯಾನಿಲಯದ ಜ್ಞಾನ ಪ್ರವಾಹವು ಜನಸಾಮಾನ್ಯನನ್ನು ಮುಟ್ಟಿ, ಅವನ ಸಂಸ್ಕೃತಿಯನ್ನು ಸಂಸ್ಕರಿಸಬೇಕು"[772] ಎಂದು ಹೇಳಿದ್ದರು. ಅದಕ್ಕಾಗಿ ಜ್ಞಾನ ಪ್ರವಾಹವನ್ನು ಜನ ಸಾಮಾನ್ಯರಿಗೆ ತಲುಪಿಸಲು ಪ್ರಸರಣ ಮತ್ತು ಪ್ರಕಟಣಾ ವಿಭಾಗವನ್ನು ಸ್ಥಾಪಿಸಲಾಗಿತ್ತು. ಅದರ ಮೂಲಕ ಪ್ರಚಾರೋಪನ್ಯಾಸ ಹಾಗೂ ಪ್ರಕಟಣೆಯ ಮೂಲಕ ವಿಶ್ವವಿದ್ಯಾನಿಲಯದ ಮಟ್ಟದ ಬೌದ್ಧಿಕ ಜ್ಞಾನವು ಜನ ಸಾಮಾನ್ಯರಿಗೂ ತಲುಪುವಂತಾಯಿತು. ದೇಶೀಯ ಭಾಷೆ ಕನ್ನಡದಲ್ಲಿಉನ್ನತ ಜ್ಞಾನವನ್ನು ಪ್ರಸರಿಸಲು ಕನ್ನಡ ಗ್ರಂಥಮಾಲೆ ಬಿ.ಎಂ.ಶ್ರೀಯವರ ನೇತೃತ್ವದಲ್ಲಿ ಹಲವಾರು ಪುಸ್ತಕಗಳನ್ನು ಪ್ರಕಟಿಸಿತು[773]. ಹೀಗೆ ನಾಲ್ವಡಿಯವರ ಸರ್ಕಾರವು ಕೈಗೊಂಡ ಶೈಕ್ಷಣಿಕ ಯೋಜನೆಗಳು ಹಾಗೂ ಜಾರಿಗೊಳಿಸಿದ ಶಾಸನಗಳ ಪ್ರಭಾವದಿಂದ ಪ್ರಾಥಮಿಕ ಮಟ್ಟದಿಂದ ವಿಶ್ವವಿದ್ಯಾನಿಲಯ ಮಟ್ಟದವರೆಗಿನ ಶಿಕ್ಷಣ ಸೌಲಭ್ಯವು ಸ್ಥಳೀಯವಾಗಿ ದೊರೆಯುವಂತಾಯಿತು. ಅದರಲ್ಲೂ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ ರಾಜ್ಯದ ಶೈಕ್ಷಣಿಕ ಅವಕಾಶಕ್ಕೆ ಹೊಸ ಆಯಾಮ ನೀಡಿತು. ಮತ್ತು ಸ್ಥಳೀಯ ಪ್ರತಿಭೆಗಳಿಗೆ ಉನ್ನತ ಶಿಕ್ಷಣ, ಉದ್ಯೋಗಾವಕಾಶಗಳು ದೊರೆಯುವಂತಾದವು. ಜೊತೆಗೆ ಹೊಸ ಚಿಂತನಾಶೀಲ ಬೌದ್ಧಿಕ ವರ್ಗವೊಂದು ಉದಯಿಸಿ ಮೈಸೂರಿನ ಸಮಗ್ರ ಏಳ್ಗೆಗೆ ನೆರವಾಗುವಂತಾಯಿತು.

### iv) ನೈತಿಕ ಬೆಳವಣಿಗೆಯಲ್ಲಿ ಶಾಸನಗಳು

ನೈತಿಕತೆಯು ಒಂದು ಸಂಸ್ಕೃತಿಯ ಶ್ರೇಷ್ಠತೆ ಅಥವಾ ಅಧಃಪತನವನ್ನು ಸೂಚಿಸುವ ಮಾನದಂಡ. ಸಂಸ್ಕೃತಿಯು ಕಾಲಾನುಕಾಲಕ್ಕೆ ಮೌಲ್ಯಗಳನ್ನು ರೂಪಿಸುತ್ತಾ ಅದನ್ನಾಧರಿಸಿದ ನೈತಿಕಾಂಶಗಳನ್ನು ರೂಪಿಸಿ ಅವುಗಳನ್ನು ಪಾಲಿಸುವಂತೆ ವ್ಯಕ್ತಿ ಮತ್ತು ಸಮಾಜದ ಮೇಲೆ ಪ್ರಭಾವ ಬೀರುತ್ತಾ ಬರುತ್ತದೆ. ನೈತಿಕತೆಯನ್ನು ಪಾಲಿಸುವಲ್ಲಿ ವ್ಯಕ್ತಿ ಅಥವಾ ಸಮಾಜ ತಿರಸ್ಕಾರ ಮನೋಭಾವನೆ ಹೊಂದಿದರೆ ಸಾಮಾಜಿಕ ವಿಘಟನೆಗೆ, ಅಸ್ವಾಸ್ಥ್ಯ ಸಮಾಜದ ರೂಪಿಕೆಗೆ ಕಾರಣವಾಗುತ್ತದೆ. ಅಂತಹ ಸಮಯದಲ್ಲಿ ಸರ್ಕಾರ ಅಥವಾ ಪ್ರಭುತ್ವ ಶಕ್ತಿಯು ಸಾಮಾಜಿಕ ವ್ಯವಸ್ಥೆಯನ್ನು ಸರಿಯಾದ ಹಾದಿಯಲ್ಲಿ ಕೊಂಡೊಯ್ಯಲು ಶಾಸನಗಳನ್ನು ಬಳಸುವುದು ಅನಿವಾರ್ಯ ಹಾದಿ. ನಮ್ಮ ಅಧ್ಯಯನದ ಕಾಲಾವಧಿಯಲ್ಲಾದ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದುಂಟಾದ ನಗರೀಕರಣ, ಕೈಗಾರಿಕೀಕರಣ, ಆಧುನೀಕರಣ ಮುಂತಾದ ಪ್ರಕ್ರಿಯೆಗಳು

---

*771. **ಸೂರ್ಯನಾಥ್ ಯು. ಕಾಮತ್**, ಕರ್ನಾಟಕ ಗೆಸೆಟಿಯರ್, ಪೂರ್ವೋಕ್ತ, ಭಾಗ-3, ಪು. 53-54*

*772. **ಶಾಮರಾಯ ತ.ಸು.**, ಮೂರು ತಲೆಮಾರು, ಪು. 238*

*773. **ಸೂರ್ಯನಾಥ್ ಯು. ಕಾಮತ್**, ಪೂರ್ವೋಕ್ತ, ಭಾಗ-3, ಪು. 58*

ಇಲ್ಲಿನ ಸಾಂಸ್ಕೃತಿಕ ಮೌಲ್ಯಗಳ ಉಲ್ಲಂಘನೆಗೆ ಆ ಮೂಲಕ ನೈತಿಕ ಉಲ್ಲಂಘನೆಗೆ ದಾರಿ ಮಾಡಿಕೊಟ್ಟವು. ಅಂತಹ ವಿಷಮ ಪರಿಸ್ಥಿತಿಯಲ್ಲಿ ನಾಲ್ವಡಿಯವರ ಸರ್ಕಾರವು ನೈತಿಕತೆಯನ್ನು ಕಾಪಾಡಲು ಅನೇಕ ಶಾಸನಗಳನ್ನು ಜಾರಿಗೊಳಿಸಿತು. ಈ ಶೀರ್ಷಿಕೆ ಯಲ್ಲಿ ಶಾಸನಗಳು ಹೇಗೆ ನೈತಿಕತೆಯನ್ನು ಬೆಳೆಸಲು ಸಹಾಯಕವಾದವು, ಅವುಗಳ ಜಾರಿಗೆ ಸಮಾಜದ ಪ್ರತಿಕ್ರಿಯೆ ಏನೆಂಬುದನ್ನು ಕುರಿತು ಮುಂದೆ ಚರ್ಚಿಸಲಾಗುವುದು.

ನೈತಿಕ ಜೀವನಕ್ಕೆ ಮಾದರಿಯಾಗಿದ್ದ ನಾಲ್ವಡಿಯವರು ನೈತಿಕತೆಯ ಮಹತ್ವವನ್ನು ಹಲವಾರು ಬಾರಿ ಉಲ್ಲೇಖಿಸಿದ್ದಾರೆ. 1919ರಲ್ಲಿ ಬನಾರಸ್ ವಿಶ್ವವಿದ್ಯಾನಿಲಯದ ಘಟಿಕೋತ್ಸವದ ಉದ್ಘಾಟನೆಯಲ್ಲಿ "ಬನಾರಸ್ ವಿಶ್ವವಿದ್ಯಾನಿಲಯವು ಐಕ್ಯತೆ ಮತ್ತು ನವೀನತೆ ಒಳಗೊಂಡಿರುವ ವಿಸ್ತೃತ ಸಂಸ್ಕೃತಿಯನ್ನೊಳಗೊಂಡ ಭಾರತವನ್ನು ಮತ್ತು ನೈತಿಕ ಹಾಗೂ ಚಾರಿತ್ರ್ಯ ವೃದ್ಧಿಗೊಳಿಸುವಂತಹ ಶಿಕ್ಷಣದ ಮೂಲಕ ವಿಸ್ತೃತ ಅರ್ಥ ನೀಡುವ ಪ್ರಜೆಗಳನ್ನು ತಯಾರಿಸುವ ದಿಸೆಯಲ್ಲಿ ಮುಂದುವರಿಯಬೇಕು" ಎಂದು ಅಭಿಪ್ರಾಯಪಟ್ಟಿದ್ದರು. ಅದೇ ಸಂದರ್ಭದಲ್ಲಿ ನಿಮ್ಮ ಬದುಕಿನಲ್ಲಿ ನೈಜ ಸಂಸ್ಕೃತಿ ಜೊತೆಗೆ ಧರ್ಮವನ್ನು ಸಮ್ಮಿಳನಗೊಳಿಸುವ ಪ್ರಯತ್ನಕ್ಕೆ ಮುಂದಾಗಬೇಕು. ದೇವರಿಗೆ ಮತ್ತು ಸಹಜೀವಿಗಳಿಗೆ ನಿಮ್ಮ ಕರ್ತವ್ಯ ಅರಿತು ದೌರ್ಬಲ್ಯವಿಲ್ಲದ ಅಭಿಮಾನ, ಕಪಟವಿಲ್ಲದ ವಿಧೇಯತೆ, ಅವೆಲ್ಲಕ್ಕಿಂತ ಮಿಗಿಲಾಗಿ ಕಾಯಾ ವಾಚಾ ಮನಸಾ ಶೀಲ ಪೋಷಣೆಗೆ ಗಮನ ಕೊಡಬೇಕು[774]. ಎಂದು ಕರೆ ನೀಡಿದ್ದರು. ನಾಲ್ವಡಿಯವರ ದೃಷ್ಟಿಯಲ್ಲಿ ವಿಶ್ವವಿದ್ಯಾನಿಲಯವು "ಕೇವಲ ಪದವೀಧರರನ್ನು ತಯಾರು ಮಾಡದೆ ಉತ್ತಮ ಚಾರಿತ್ರ್ಯವುಳ್ಳ ಸಂಯಮ, ಸಂಸ್ಕೃತಿ ರೂಢಿಸಿಕೊಂಡ ಸುಸಂಸ್ಕೃತರನ್ನು ರೂಪಿಸುವುದಾಗಿತ್ತು"[775]. ಹೀಗೆ ನಾಲ್ವಡಿಯವರು ನೈತಿಕತೆಗೆ ಆದ್ಯತೆ ನೀಡಿ ತಮ್ಮ ಭಾಷಣಗಳಲ್ಲಿ ಪ್ರತಿಪಾದಿಸಿದ್ದಾರೆ ಹಾಗೂ ಅನೈತಿಕತೆಗೆ ದಾರಿ ಮಾಡುವ ಸಾಮಾಜಿಕ ಪಿಡುಗುಗಳನ್ನು ಶಾಸನದ ಮೂಲಕ ತೊಡೆದುಹಾಕಲು ಶ್ರಮಿಸಿದರು.

ಆಧುನಿಕ ಪೂರ್ವ ಕಾಲದ ಸಮಾಜವು ಮೌಲ್ಯಾದರ್ಶಗಳೆಂದು ನಂಬಿದ್ದ ಅನೇಕ ವ್ಯವಸ್ಥೆಗಳನ್ನು ಪಾಶ್ಚಿಮಾತ್ಯ ಪ್ರಭಾವಕ್ಕೊಳಗಾದ ಸುಧಾರಣಾವಾದಿಗಳು ಸಾಮಾಜಿಕ ಅನಿಷ್ಟಗಳೆಂದೂ, ಸಾಮಾಜಿಕ ಬೆಳವಣಿಗೆಗೆ ಮಾರಕಗಳೆಂದೂ ಟೀಕಿಸುವಂತಾಯಿತು. ಉದಾಹರಣೆಗೆ ದೇವಾಲಯ ಸಂಸ್ಕೃತಿಯಲ್ಲಿ ಧಾರ್ಮಿಕತೆಯ ಸಂಕೇತವಾಗಿದ್ದ ದೇವದಾಸಿ ಪದ್ಧತಿಯು ಆಧುನಿಕ ಕಾಲದಲ್ಲಿ ಸಾಮಾಜಿಕ ಅನಿಷ್ಟವೆಂದು ಗುರುತಿಸಲ್ಪಟ್ಟಿತು. ಆ ನಂತರದ ಕಾಲದಲ್ಲಿ ದೇವದಾಸಿ ಪದ್ಧತಿಯನ್ನು ದೇವಾಲಯದ ಪಾರುಪತ್ತೆಗಾರರು, ಅರ್ಚಕರು, ಸ್ವತಃ ದೇವದಾಸಿಯರು ತಮ್ಮ ವೃತ್ತಿಯನ್ನು ಅನೈತಿಕ ಉದ್ದೇಶಕ್ಕೆ ಬಳಸಿಕೊಳ್ಳಲಾರಂಭಿಸಿದರು. ಡಿ.ವಿ. ಗುಂಡಪ್ಪನವರು ಉಲ್ಲೇಖಿಸುವಂತೆ "ಗುಡಿಯೊಳಗಡೆ ಮಂತ್ರಘೋಷ

---

*774. ಸ್ಪೀಚಸ್ ಆಫ್ ಹಿಸ್ ಹೈನೆಸ್, ಪು. 172-176*

*775. ಅದೇ., ಪು. 140-141*

ನಡೆಯುತ್ತಿದ್ದ ಹೊತ್ತಿನಲ್ಲಿ ಪ್ರಾಕಾರದೊಳಗಣ ಮೂಲೆ ಮೊಡಕುಗಳಲ್ಲಿ ಪ್ರಣಯ ಲೀಲೆಗಳು ತಸ್ಕರ ಸಾಹಸಗಳು ನಡೆಯುತ್ತಿದ್ದವು."[776] ಹೀಗೆ ಅನೈತಿಕತೆಗೆ ಕಾರಣವಾದ ದೇವದಾಸಿ ಪದ್ಧತಿಯನ್ನು ಮೈಸೂರು ಸರ್ಕಾರ 1910ರಲ್ಲಿ ಮುಜರಾಯಿ ದೇವಾಲಯಗಳಲ್ಲಿ 'ಗೆಜ್ಜೆ ಪೂಜೆ' ಆಚರಣೆಯನ್ನು ನಡೆಸಬಾರದೆಂದು ಆಜ್ಞೆಯನ್ನು ಹೊರಡಿಸುವ ಮೂಲಕ ದೇವದಾಸಿ ಪದ್ಧತಿಯನ್ನು ನಿವಾರಿಸಲು ಕ್ರಮ ಕೈಗೊಂಡರು[777].

ಧೂಮಪಾನ ಸೇವನೆ ಪ್ರಾಚೀನ ಕಾಲದಿಂದ ರೂಢಿಯಲ್ಲಿರುವ ಒಂದು ಕೆಟ್ಟ ಹವ್ಯಾಸ. ಹೆಚ್ಚು ಧೂಮಪಾನವು ಶ್ವಾಸಕೋಶ ಸಂಬಂಧ ಕ್ಯಾನ್ಸರ್ ಮತ್ತಿತರ ರೋಗಗಳಿಗೆ ಮೂಲಕಾರಣ. ಗಾಂಧೀಜಿ ತಿಳಿಸಿರುವಂತೆ "ಧೂಮಪಾನವನ್ನು ನಾನು ಒಂದು ದುರ್ಗುಣವೆಂದು ಭಾವಿಸಿದ್ದೇನೆ. ಈ ಹವ್ಯಾಸವು ಒಮ್ಮೆ ವ್ಯಕ್ತಿಯನ್ನು ಆವರಿಸಿತೆಂದರೆ ಅದರಿಂದ ಬಿಡಿಸಿಕೊಳ್ಳುವುದು ಬಹುಕಷ್ಟ. ಇದೊಂದು ದುಬಾರಿ ದುರ್ಗುಣ"[778] ಎಂದಿದ್ದಾರೆ. ಹೀಗೆ ಧೂಮಪಾನವು ಇಡೀ ಸಮಾಜದ ವ್ಯಕ್ತಿಗಳ ದೈಹಿಕ ಆರೋಗ್ಯ ಮತ್ತು ನೈತಿಕ ನಡತೆಯ ಮೇಲೆ ಕೆಟ್ಟ ಪರಿಣಾಮ ಬೀರುವುದರಿಂದ ಧೂಮಪಾನವನ್ನು ಅಪ್ರಾಪ್ತ ಬಾಲಕರು ಬಳಸುವುದನ್ನು ನಿಷೇಧಿಸಲು ಶಾಸನವನ್ನು ಜಾರಿಗೊಳಿಸಬೇಕೆಂದು ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರು 1910ರಲ್ಲಿ ಬೇಡಿಯಿತ್ತರು. ಸರ್ಕಾರವು 1911ರಲ್ಲಿ "ತರುಣರ ಧೂಮಪಾನ ನಿರ್ಬಂಧ ಕಾಯ್ದೆಯನ್ನು ಜಾರಿಗೊಳಿಸಿತು. ಈ ಶಾಸನವು ಯಾವುದೇ ವ್ಯಕ್ತಿಯು 16 ವರ್ಷದ ಕೆಳಗಿನ ತರುಣರಿಗೆ ಹೊಗೆಸೊಪ್ಪನ್ನು ಮಾರುವುದನ್ನು (ತಂದೆ ತಾಯಿಗಳು, ಪೋಷಕರಿಂದ ಬರಹದ ಅನುಮತಿ ತರದ ಹೊರತು) ಅಪರಾಧವೆಂದೂ, ನಿಯಮವನ್ನು ಮೀರಿದವರಿಗೆ ಮೊದಲ ಬಾರಿಯಾದರೆ 20 ರೂಪಾಯಿ, ಎರಡನೇ ಬಾರಿಯಾದರೆ 50 ರೂಪಾಯಿ, ಮತ್ತೆ ಪುನರಾವರ್ತಿಸಿದರೆ 100 ರೂಪಾಯಿ ದಂಡ ವಿಧಿಸಬಹುದೆಂದು ತಿಳಿಸಿತು. ಪೊಲೀಸ್ ಅಧಿಕಾರಿಯು 16 ವರ್ಷದ ಕೆಳಗಿನ ತರುಣರು ಸಾರ್ವಜನಿಕ ಬೀದಿಗಳಲ್ಲಿ ಧೂಮಪಾನ ಅಥವಾ ಹೊಗೆಸೊಪ್ಪು ಅಗಿಯುವುದನ್ನು ಕಂಡರೆ ಅಂತಹ ತರುಣರ ತಂದೆತಾಯಿಗಳಿಗೆ, ಪೋಷಕರಿಗೆ ಅಥವಾ ಶಾಲಾ ಮುಖ್ಯಸ್ಥರಿಗೆ ನೋಟಿಸ್ ನೀಡಬೇಕೆಂದು ತಿಳಿಸಿತ್ತು. ತಪ್ಪು ಮಾಡಿದ ತರುಣರಿಗೆ ಈ ಶಾಸನದ ಪ್ರಕಾರ ನ್ಯಾಯಾಧೀಶರು ಒಂದು ರೂಪಾಯಿ ದಂಡ ಅಥವಾ ಆರು ಛಡಿ ಏಟಿನ ಶಿಕ್ಷೆ ನೀಡಬಹುದಾಗಿತ್ತು[779]. ಅದರಂತೆ ಈ ಶಾಸನವು 1912-13ರಲ್ಲಿ ಜಾರಿಗೊಂಡು 45 ಕೇಸುಗಳಲ್ಲಿ 41ತರುಣರಿಗೆ ಎಚ್ಚರಿಕೆ ನೀಡಿ 4 ಜನರನ್ನು ಶಿಕ್ಷಿಸಲಾಯಿತು[780]. 1935-36 ರಲ್ಲಿ 232 ಕೇಸುಗಳಲ್ಲಿ ಎಲ್ಲ ತಂದೆತಾಯಿಯರಿಗೂ ಎಚ್ಚರಿಕೆ ನೀಡಿ 10 ತರುಣರಿಗೆ ಶಿಕ್ಷಿಸಲಾಯಿತು[781]. ಹೀಗೆ ತರುಣರು ಧೂಮಪಾನ ಸೇವನೆಯನ್ನು ಹವ್ಯಾಸವಾಗಿ ಬೆಳೆಸಿಕೊಳ್ಳುವುದನ್ನು ಆ ಮೂಲಕ ಅನಾರೋಗ್ಯಕ್ಕೀಡಾಗುವುದನ್ನು ತಡೆಗಟ್ಟಲು ಈ

---

*776. ಗುಂಡಪ್ಪ ಡಿ.ವಿ., ಜ್ಞಾಪಕ ಚಿತ್ರಶಾಲೆ, ಸಂಪುಟ-1, ಸಾಹಿತಿ ಸಜ್ಜನ ಸಾರ್ವಜನಿಕರು, ಪು. 153-154*

*777. ಸದಾಶಿವ ಕೆ., ಪೂರ್ವೋಕ್ತ, ಪು. 269*

*778. ಗಾಂಧಿ ಎಂ.ಕೆ., ಡ್ರಿಂಕ್ಸ್, ಡ್ರಗ್ಸ್ ಅಂಡ್ ಗ್ಯಾಂಬ್ಲಿಂಗ್, ಪು. 155*

ಶಾಸನದ ಮೂಲಕ ಕ್ರಮಕೈಗೊಳ್ಳಲಾಯಿತು.

ಭಾರತೀಯರು ಪ್ರಾಚೀನ ಕಾಲದಿಂದಲೂ ಸುರಾಪಾನ, ಸೋಮಪಾನಗಳೆಂಬ ಮದ್ಯಗಳನ್ನು ಬಳಸುತ್ತಿದ್ದರು. ಆದರೆ ಪಾಶ್ಚಿಮಾತ್ಯರ ಸಂಪರ್ಕದಿಂದ ರೂಢಿಗೆ ಬಂದ ವಿದೇಶಿ ಮದ್ಯಗಳು ದೇಹಕ್ಕೆ ಹಾನಿಕಾರಕವಾದವು. ಅಲ್ಲದೆ ಮದ್ಯಪಾನವನ್ನು ಭಾರತೀಯರು ಕೆಟ್ಟ ಹವ್ಯಾಸವಾಗಿ ಬೆಳೆಸಿಕೊಂಡರು. ಹಾಗಾಗಿ ಮಿತಿ ಮೀರಿದ ಮದ್ಯಪಾನವು ಸಾಮಾಜಿಕ ಸಮಸ್ಯೆಯಾಗಿ ವೈಯಕ್ತಿಕವಾಗಿ ವ್ಯಕ್ತಿಗಳನ್ನು ಮತ್ತು ಅವರ ಕುಟುಂಬಗಳನ್ನು ಅಧಃ ಪತನಕ್ಕೆ ದೂಡಿತು. ಹಾಗಾಗಿ ಗಾಂಧೀಜಿಯವರು "ಕುಡಿತಕ್ಕೆ ಯಾರು ವಶವಾಗುತ್ತಾರೋ ಅವರು ತಮ್ಮನ್ನು ತಾವು ಹಾಳುಮಾಡಿಕೊಳ್ಳುವುದಲ್ಲದೆ ಅವರ ಜನರನ್ನೂ ಹಾಳುಗೆಡವುತ್ತಾರೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಮದ್ಯಪಾನವು ಒಬ್ಬನನ್ನುದೈಹಿಕವಾಗಿ, ನೈತಿಕವಾಗಿ, ಬೌದ್ಧಿಕವಾಗಿ ಮತ್ತು ಆರ್ಥಿಕವಾಗಿ ಅವನತಿಗೀಡುಮಾಡುತ್ತದೆ"[782] ಎಂದು ಹೇಳುವ ಮೂಲಕ ಮದ್ಯಪಾನವನ್ನು ವಿರೋಧಿಸಿದ್ದರು. ಮೈಸೂರು ಪ್ರದೇಶದಲ್ಲಿ ಟಿಪ್ಪುಸುಲ್ತಾನನು ತನ್ನ ರಾಜ್ಯದಲ್ಲಿ ಮದ್ಯಪಾನವನ್ನು ನಿಷೇಧಿಸಿದ್ದನು. ಮದ್ಯ ತಯಾರಕರ ಜೊತೆ ಒಪ್ಪಂದ ಮಾಡಿಕೊಳ್ಳುವ ಮೂಲಕ ತನ್ನ ಮದ್ಯಪಾನ ನಿಷೇಧ ಆಜ್ಞೆಯನ್ನು ಯಶಸ್ವಿಗೊಳಿಸಿದ್ದನು[783]. ಆದರೆ ಆ ನಂತರ ಬಂದ ಪ್ರತ್ಯಕ್ಷ ಹಾಗೂ ಪರೋಕ್ಷ ಬ್ರಿಟಿಷ್ ಆಳ್ವಿಕೆಗಳ ಫಲವಾಗಿ ಮದ್ಯಪಾನ ಬಳಕೆ ಹೆಚ್ಚಿತು. 1900ರ ನಂತರ ಅನೇಕ ಸಾರ್ವಜನಿಕ ನಾಯಕರು ಮೈಸೂರು ಸರ್ಕಾರದ ಮದ್ಯಪಾನ ನೀತಿಯನ್ನು ಟೀಕಿಸಲಾರಂಭಿಸಿದರು. 1915ರ ಎಕನಾಮಿಕ್ ಕಾನ್ಫರೆನ್ಸ್‌ನಲ್ಲಿ ಮದ್ಯಪಾನ ಬಳಕೆಯನ್ನು ತಗ್ಗಿಸಲು ಸರ್ಕಾರ ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಲಾಯಿತು[784]. ಭಾರತ ರಾಷ್ಟ್ರೀಯ ಕಾಂಗ್ರೆಸ್ ತನ್ನ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಮದ್ಯಪಾನ ನಿಷೇಧವನ್ನು ಪ್ರಮುಖ ಕಾರ್ಯಕ್ರಮವನ್ನಾಗಿ ಮಾಡಿಕೊಂಡಿದ್ದು ಒಂದು ಸಾಮೂಹಿಕ ಚಳವಳಿಯಾಗಿ ರೂಪುಗೊಳ್ಳಲು ಕಾರಣವಾಯಿತು. ಎಚ್.ಸಿ. ದಾಸಪ್ಪ ಮುಂತಾದ ನಾಯಕರ ಒತ್ತಡದಿಂದಾಗಿ ಸರ್ಕಾರವು 1930ರಲ್ಲಿ ಪ್ರಾಯೋಗಿಕವಾಗಿ ಚನ್ನಪಟ್ಟಣ ತಾಲ್ಲೂಕಿನಲ್ಲಿ ಮದ್ಯಪಾನ ನಿಷೇಧವನ್ನು ಜಾರಿಗೊಳಿಸಿತು. ಕಾಂಗ್ರೆಸ್ ತನ್ನ ಸ್ವಾತಂತ್ರ್ಯ ಹೋರಾಟದ ಒಂದು ಅಂಶವಾಗಿ ಮದ್ಯಪಾನ ಮಾರಾಟದ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು, ಈಚಲು ಮರವನ್ನು ಕಡಿಯುವ ಮೂಲಕ ಜಾಗೃತಿ ಮೂಡಿಸಲು ಪ್ರಯತ್ನಿಸಿತು[785]. ಸರ್ಕಾರವು ಮದ್ಯಪಾನ ನಿಷೇಧದ ಮೊದಲ ಹಂತವಾಗಿ ಮದ್ಯಪಾನ ಅಂಗಡಿಗಳನ್ನು ಕೆಲದಿನ ಮತ್ತು ನಿರ್ಧಿಷ್ಟ

---

779. *ದಿ ಮೈಸೂರ್ ಕೋಡ್, ಸಂಪುಟ-I, ಪು. 643-644*

780. *ಮೈಸೂರ್ ಅಡ್ಮಿನಿಸ್ಟ್ರೇಷನ್ ರಿಪೋರ್ಟ್, 1912-13, ಪು. 20*

781. *ಅದೇ., 1935-36, ಪು. 18*

782. *ಗಾಂಧಿ ಎಂ.ಕೆ., ಕೀಟು ಹೆಲ್ತ್, ಅಹ್ಮದಾಬಾದ್, 1961, ಪು. 34-36*

783. *ಶಾಸ್ತ್ರಿ ಕೆ.ಎನ್.ವಿ., ಆ್ಯನ್ ಎಸ್ಸೇ ಆನ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಟೀಪು, ಪು. 271*

784. *ಸದಾಶಿವ ಕೆ., ಪೂರ್ವೋಕ್ತ, ಪು. 400*

ಅವಧಿಯಲ್ಲಿ ಮಾತ್ರ ತೆರೆಯುವಂತೆ ಕ್ರಮ ಕೈಗೊಂಡಿತು. ಅದರಲ್ಲೂ ಕಾರ್ಮಿಕ ವರ್ಗವು ಕಷ್ಟಪಟ್ಟು ದುಡಿದ ಮಾಸಿಕ ವೇತನದ ಹಣವನ್ನು ಕುಡಿತಕ್ಕೆ ಹಾಳುಮಾಡುವುದನ್ನು ತಡೆಯಲು ಕಾರ್ಮಿಕರು ಹೆಚ್ಚಿರುವ ಬೆಂಗಳೂರು, ಮೈಸೂರು, ಭದ್ರಾವತಿ, ಕೋಲಾರ ಚಿನ್ನದ ಗಣಿಪ್ರದೇಶ, ದಾವಣಗೆರೆ, ಮಂಡ್ಯಗಳಲ್ಲಿ ವೇತನದ ದಿನ ಮದ್ಯಪಾನ ಅಂಗಡಿಗಳನ್ನು ಮುಚ್ಚುವಂತೆ ಆದೇಶಿಸಿತು. ಅಲ್ಲದೆ ಕೈಗಾರಿಕಾ ಪ್ರದೇಶದಲ್ಲಿ ಕೆಲಸದ ದಿನಗಳಲ್ಲಿ ಬೆಳಿಗ್ಗೆ 11.30ರಿಂದ ಮಧ್ಯಾಹ್ನ 1.30ರವರೆಗೆ ಮದ್ಯಪಾನ ಅಂಗಡಿಗಳನ್ನು ಮುಚ್ಚುವಂತೆ ಹಾಗೂ ಭಾನುವಾರ ಮಾತ್ರ ಬೆಳಿಗ್ಗೆ 11.30ರಿಂದ ಸಂಜೆ 4 ಗಂಟೆಯವರೆಗೆ ತೆರೆದಿರುವಂತೆ ನಿರ್ದೇಶಿಸಿತು[786]. ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯ ಕೈಗಾರಿಕಾ ಉದ್ಯಮಿಯ ಬಳಿ ವೇತನದ ದಿನವನ್ನು ತಿಳಿದು ಆ ದಿನ ಮದ್ಯಪಾನದ ಅಂಗಡಿಗಳನ್ನು ಮುಚ್ಚುವಂತೆ ವ್ಯವಸ್ಥೆ ಮಾಡಿದರು. ಹೀಗೆ ಸಾರ್ವಜನಿಕ ಪ್ರತಿಭಟನೆ ಮತ್ತು ಸರ್ಕಾರದ ನೀತಿಗಳಿಂದಾಗಿ ಸಾರಾಯಿ ಅಂಗಡಿಗಳ ಸಂಖ್ಯೆ 1908-09ರಲ್ಲಿ 859 ಇದ್ದುದು 1938-39ರ ವೇಳೆಗೆ 537ಕ್ಕೆ ಇಳಿಯಿತು. ಹಾಗೆಯೇ ಹೆಂಡದ ಅಂಗಡಿಗಳ ಸಂಖ್ಯೆ 1908-09ರಲ್ಲಿ 3526 ಇದ್ದುದ್ದು 1938-39ರ ವೇಳೆಗೆ 2308ಕ್ಕೆ ಇಳಿದವು[787]. ಕುಡಿತವನ್ನು ತಗ್ಗಿಸಲು ಶಾಲೆ, ದೇವಸ್ಥಾನ, ಉತ್ಸವದ ಸ್ಥಳಗಳಲ್ಲಿ ಅಂಗಡಿಗಳನ್ನು ತೆರೆಯುವುದನ್ನು ನಿಷೇಧಿಸಿತು. ಮೈಸೂರಿನ ಹಲವಾರು ಸಂಘ ಸಂಸ್ಥೆಗಳ ಮೂಲಕ ಜಾತ್ರೆ, ಉತ್ಸವಗಳಲ್ಲಿ ಜನರಲ್ಲಿ ಪಾನ ನಿರೋಧವನ್ನು ಜಾಗೃತಿಗೊಳಿಸಲು ಪ್ರವಚನ, ಪ್ರಚಾರಗಳನ್ನು ಕೈಗೊಳ್ಳಲಾಯಿತು. 1938ರಲ್ಲಿ ಕ್ಲೋಸ್‌ಪೇಟೆ ತಾಲ್ಲೂಕ್‌ನಲ್ಲಿ ಪ್ರಾಯೋಗಿಕವಾಗಿ ಜಾರಿಗೆ ತಂದ ಮದ್ಯಪಾನ ನಿಷೇಧವು ಯಶಸ್ವಿಯಾಯಿತು. ಸರ್ಕಾರ 50,000 ರೂಪಾಯಿಗಳ ಆದಾಯವನ್ನು ಕಳೆದುಕೊಂಡು ಪಾನನಿಷೇಧಕ್ಕೆ ಮುಂದಾಯಿತು[788]. ಅಂತಿಮವಾಗಿ ಮೈಸೂರು ಸರ್ಕಾರವು 1948ರಲ್ಲಿ ಪಾನನಿಷೇಧ ಕಾಯ್ದೆಯನ್ನು ಜಾರಿಗೊಳಿಸಿತು. ಈ ಶಾಸನವು ಹೆಂಡ, ಸಾರಾಯಿಗಳನ್ನು ಉತ್ಪಾದನೆ ಮತ್ತು ಮಾರಾಟ ಮಾಡುವುದನ್ನು, ವೈದ್ಯಕೀಯ, ಕೈಗಾರಿಕಾ, ವೈಜ್ಞಾನಿಕ ಉದ್ದೇಶಕ್ಕಲ್ಲದೆ ಸಾಗಿಸುವುದನ್ನು ನಿಷೇಧಿಸಿತು. ಸಾರ್ವಜನಿಕ ಸ್ಥಳಗಳಲ್ಲಿ ಕುಡಿತದ ಅಮಲಿನಲ್ಲಿರುವವರನ್ನು ಈ ಶಾಸನದ ಪ್ರಕಾರ ಬಂಧಿಸಿ ಆರು ತಿಂಗಳವರೆಗೆ ಸೆರೆವಾಸ ಅಥವಾ ಸಾವಿರ ರೂಪಾಯಿ ದಂಡ ವಿಧಿಸಬಹುದಾಗಿತ್ತು[789]. ಹೀಗೆ ಮೈಸೂರು ಸರ್ಕಾರವು ಶಾಸನಗಳ ಮೂಲಕ ಮದ್ಯಪಾನವನ್ನು ಸಂಪೂರ್ಣವಾಗಿ ನಿಷೇಧಿಸಲಾಗದಿದ್ದರೂ ಅದರ ಬಳಕೆಯಲ್ಲಿ ನಿರ್ಬಂಧ ತರಲಾಯಿತು. ಆ ಮೂಲಕ ಜನರು ನೈತಿಕ ಜೀವನ ನಡೆಸಲು ಅನುಕೂಲ ಮಾಡಿಕೊಡಲಾಯಿತು. ಕಾರ್ಮಿಕರು ವೇತನದ

---

785. *ಸೂರ್ಯನಾಥ್ ಯು. ಕಾಮತ್, ಕರ್ನಾಟಕ ಗೆಸೆಟಿಯರ್, ಭಾಗ-II, ಪು. 784*

786. *ಮೈಸೂರ್ ಇನ್‌ಫರ್‌ಮೇಷನ್ ಬುಲೆಟಿನ್, ಜುಲೈ 1939, ಪು. 186*

787. *ಅದೇ., ಜೂನ್ 1940, ಪು. 180*

788. *ಅದೇ., ಮೇ 1940, ಪು. 158*

ಹಣವನ್ನು ಅವರು ಮತ್ತುಅವರ ಕುಟುಂಬಕ್ಕಾಗಿ ಬಳಸುವಂತಾಯಿತು.

ನಾಗರಿಕತೆ ಬೆಳೆದಂತೆ ಅನೇಕ ಸಾಮಾಜಿಕ ಸಮಸ್ಯೆಗಳು ತೀವ್ರಗೊಳ್ಳುತ್ತವೆ. ಅಂತಹವುಗಳಲ್ಲಿ ವೇಶ್ಯಾವಾಟಿಕೆಯೂ ಒಂದು. ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ಆರಂಭಗೊಂಡ ಇದು ಅನಂತರ ಒಂದು ವೃತ್ತಿಯಾಗಿ, ಸಮಸ್ಯೆಯಾಗಿ ಸಮಾಜದ ಮುಂದೆ ನಿಂತಿತು. ಬೆಂಗಳೂರು ಮತ್ತು ಮೈಸೂರು ಮುನಿಸಿಪಾಲಿಟಿ ವಲಯಗಳಲ್ಲಿ ಲೈಂಗಿಕ ಸಂಬಂಧಿ ರೋಗಗಳ ಸಂಖ್ಯೆ ಹೆಚ್ಚಿದಂತೆ ವೇಶ್ಯಾವಾಟಿಕೆಯನ್ನು ಹತೋಟಿಯಲ್ಲಿಡಲು ಶಾಸನ ತರಬೇಕೆಂಬ ಬೇಡಿಕೆ ಬರಲಾರಂಭಿಸಿತು. 1931ರಲ್ಲಿ ಜೆ.ಆರ್. ಐಸಾಕ್ ಎಂಬುವವರು ವೇಶ್ಯಾವಾಟಿಕೆಯನ್ನು ತಡೆಯಲು ಶಾಸನ ಜಾರಿಗೆ ತರಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು. ಸರ್ಕಾರವು ವೇಶ್ಯಾವಾಟಿಕೆಯನ್ನು ಹತೋಟಿಗೆ ತರಲು ಕೆಲ ಕ್ರಮಗಳನ್ನು ರೂಪಿಸಿ ಅವುಗಳ ಅನುಮೋದನೆಗೆ ಸದನದ ಮುಂದಿಟ್ಟಿತು. ಆದರೆ ಸದನದಲ್ಲಿ ಸರ್ಕಾರದ ಕ್ರಮಗಳಿಗೆ ಬಹುಮತ ದೊರೆಯಲಿಲ್ಲ[790]. ಆದರೆ ಕ್ಯಾಪ್ಟನ್ ವೈ.ವಿ. ಅಯ್ಯ ಎಂಬ ಸದಸ್ಯರು ವೇಶ್ಯಾವಾಟಿಕೆಯು ಸಾರ್ವಜನಿಕ ಮೂತ್ರಾಲಯಗಳಂತೆ ಅವಶ್ಯಕವೆಂದು ಹೇಳಿದ ನಿರ್ಣಯವು ಬಹುಮತ ಗಳಿಸಿತು. ಆ ಮೂಲಕ ಸದನ ಅಂತಹ ಶಾಸನದ ಅವಶ್ಯಕತೆಯಿಲ್ಲವೆಂದು ನಿರ್ಧರಿಸಿತು. ಮತ್ತೆ 1935ರಲ್ಲಿ ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ಸದಸ್ಯರು ಮುಗ್ಧ ಹೆಣ್ಣುಮಕ್ಕಳನ್ನು ವೇಶ್ಯಾವಾಟಿಕೆಗೆ ಬಲವಂತವಾಗಿ ಬಳಸಿಕೊಳ್ಳುತ್ತಿರುವುದನ್ನು ತಡೆಯಲು ಶಾಸನವನ್ನು ಜಾರಿಗೆ ತರಬೇಕೆಂದು ಒತ್ತಾಯಿಸಿದರು. ಬೆಂಗಳೂರಿನಲ್ಲಿ ಸುಮಾರು 63 ವೇಶ್ಯಾಗೃಹಗಳು ಮುಕ್ತವಾಗಿ ನಡೆಯುತ್ತಿದ್ದು ಇತರ 40 ವೇಶ್ಯಾಗೃಹಗಳು ಗುಪ್ತವಾಗಿ ನಡೆಯುತ್ತಿವೆಯೆಂದು ನಿರ್ಣಯದಲ್ಲಿ ಅಂಕಿಅಂಶ ತಿಳಿಸಿದರು. ಹಾಗೆಯೇ ಇದರಿಂದಾಗಿ ಜನರು ನೈತಿಕವಾಗಿ ಅಧಃಪತನಗೊಳ್ಳುತ್ತಿರುವುದಲ್ಲದೆ ಆರೋಗ್ಯವನ್ನು ಹಾಳುಮಾಡಿಕೊಳ್ಳುತ್ತಿದ್ದಾರೆ ಅದನ್ನು ತಪ್ಪಿಸಲು ಸರ್ಕಾರ ಶಾಸನವನ್ನು ಜಾರಿಗೊಳಿಸಬೇಕೆಂದು ಒತ್ತಾಯಿಸಿದರು[791]. ಸರ್ಕಾರವು 1936ರಲ್ಲಿ ಅನೈತಿಕ ವೇಶ್ಯಾವಾಟಿಕೆಯನ್ನು ಧಮನ ಮಾಡುವ ಶಾಸನವನ್ನು ಜಾರಿಗೊಳಿಸಿತು. ಈ ಶಾಸನವು ಯಾರಾದರೂ ಸಾರ್ವಜನಿಕ ರಸ್ತೆ, ಅಥವಾ ಸ್ಥಳಗಳಲ್ಲಿ ವೇಶ್ಯಾವಾಟಿಕೆಯ ಹಿನ್ನೆಲೆಯಲ್ಲಿ ಯಾರನ್ನಾದರೂ ಆಕರ್ಷಿಸಲು ಪ್ರಯತ್ನಿಸಿ ಸಾರ್ವಜನಿಕರಿಗೆ ತೊಂದರೆ ಉಂಟು ಮಾಡಿದರೆ ಅಂತಹವರನ್ನು ಎರಡು ತಿಂಗಳ ಸೆರೆವಾಸ, 200 ರೂಪಾಯಿವರೆಗಿನ ದಂಡ ವಿಧಿಸುವ ಶಿಕ್ಷೆ ವಿಧಿಸಬಹುದಿತ್ತು. ಹಾಗೆಯೇ ಯಾವುದೇ ವ್ಯಕ್ತಿ ಒಂದು ಹುಡುಗಿಯನ್ನು ವೇಶ್ಯಾವಾಟಿಕೆಗೆ ಬಳಸುವ ಉದ್ದೇಶಕ್ಕಾಗಿ ಪ್ರಚೋದನೆ ನೀಡಿದರೆ,

---

*789. **ದಿ ಮೈಸೂರ್ ಕೋಡ್**, ಸಂಪುಟ-III, ಪು. 135-149*

*790. **ಹನುಮಂತಪ್ಪ ಟಿ., ಹಿಸ್ಟರಿ ಆಫ್ ಲೆಜಿಸ್ಲೇಚರ್**, ಸಂಪುಟ-III, ಪು. 289-290*

*791. **ಪ್ರೊಸೀಡಿಂಗ್ಸ್ ಆಫ್ ಮೈಸೂರ್ ಲೆಜಿಸ್ಲೇಟಿವ್ ಕೌನ್ಸಿಲ್**, ಜೂನ್ 1935-36, ಪು. 468-469*

ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗಿಸುತ್ತಿದ್ದರೆ ಅಂತಹವರಿಗೆ ಎರಡು ವರ್ಷ ಸೆರೆವಾಸ, 500 ರೂಪಾಯಿ ದಂಡ ಅಥವಾ ಎರಡನ್ನೂ ವಿಧಿಸುವ ಶಿಕ್ಷೆ ನೀಡಬಹುದಿತ್ತು. ಯಾವುದೇ ವ್ಯಕ್ತಿ ಸ್ತ್ರೀಯ ಇಚ್ಛೆಗೆ ವಿರುದ್ಧವಾಗಿ ವೇಶ್ಯಾವೃತ್ತಿಗಾಗಿ ವೇಶ್ಯಾಗೃಹದಲ್ಲಿ ಇರಿಸಿಕೊಂಡವರಿಗೂ ಮೇಲಿನ ಶಿಕ್ಷೆಯನ್ನೇ ವಿಧಿಸಲಾಗುತ್ತಿತ್ತು. ಈ ಶಾಸನವು ವೇಶ್ಯಾವಾಟಿಕೆಯನ್ನು ಸಂಪೂರ್ಣವಾಗಿ ತೊಲಗಿಸುವ ಉದ್ದೇಶಕ್ಕಿಂತ ತಡೆಗಟ್ಟುವ ಉದ್ದೇಶಕ್ಕಾಗಿ ರೂಪುಗೊಂಡಿತ್ತು. ಆದರೂ ಬಲವಂತವಾಗಿ ವೇಶ್ಯಾವೃತ್ತಿಗೆ ತಳ್ಳಲ್ಪಡುತ್ತಿದ್ದ ಹುಡುಗಿಯರು ಮತ್ತು ಸ್ತ್ರೀಯರಿಗೆ ಈ ಶಾಸನದಿಂದ ರಕ್ಷಣೆ ದೊರಕಿತು. ಹಾಗೆಯೇ ಸಾರ್ವಜನಿಕ ಪ್ರದೇಶಗಳಲ್ಲಿ ಅಸಭ್ಯವಾಗಿ ನಡೆದುಕೊಳ್ಳುವುದನ್ನು ಈ ಶಾಸನ ಪ್ರತಿಬಂಧಿಸಿತು. ಒಟ್ಟಾರೆ ಜನರ ನೈತಿಕ ಜೀವನವನ್ನು ಸುಧಾರಿಸುವ, ಆ ಮೂಲಕ ಸ್ವಾಸ್ಥ್ಯ ಸಮಾಜ ನಿರ್ಮಾಣ ಈ ಶಾಸನದ ಉದ್ದೇಶವಾಗಿತ್ತು.

ಮೇಲ್ಕಂಡಂತೆ ನಾಲ್ವಡಿಯವರ ಸರ್ಕಾರವು ಭೌತಿಕ , ಬೌದ್ಧಿಕ, ಸಾಮಾಜಿಕ ಹಾಗೂ ನೈತಿಕ ಜೀವನವನ್ನು ಕಾಪಾಡಲು, ಸುಧಾರಿಸಲು ಕೈಗೊಂಡ ಕ್ರಮಗಳನ್ನು ಸಮೀಕ್ಷಿಸಿದಾಗ ಒಡಮೂಡುವ ತೀರ್ಮಾನಗಳು ಇಂತಿವೆ. ಮೊದಲನೆಯದಾಗಿ ನಾಲ್ವಡಿಯವರ ಕಾಲದ ವೇಳೆಗೆ ಶಾಸನವು ಸಮಾಜವನ್ನು ಯಥಾಸ್ಥಿತಿಯಲ್ಲಿಡುವ ಸಾಧನಕ್ಕಿಂತ ಸಾಮಾಜಿಕ ಪರಿವರ್ತನೆಯ ಪ್ರಮುಖ ಮಾಧ್ಯಮವಾಗಿ ಕಾರ್ಯ ನಿರ್ವಹಿಸುವಂತಾಯಿತು. ಎರಡನೆಯದಾಗಿ ಆಧುನಿಕ ಕಾಲದಲ್ಲಿ ಹುಟ್ಟಿಕೊಂಡ ಸಾಮಾಜಿಕ ಕಲ್ಯಾಣವನ್ನು ಸಾಧಿಸುವುದು ಕಲ್ಯಾಣ ರಾಜ್ಯದ ಗುರಿ ಎಂಬ ಚಿಂತನೆಯು ರಾಜ್ಯದ ಅಧಿಕಾರ ಹಾಗೂ ಕರ್ತವ್ಯ ವ್ಯಾಪ್ತಿಯನ್ನು ಹೆಚ್ಚಿಸಿತು. ಹಾಗಾಗಿ ಪ್ರಜೆಗಳ ಭೌತಿಕ, ಬೌದ್ಧಿಕ, ಸಾಮಾಜಿಕ ಹಾಗೂ ನೈತಿಕ ಉನ್ನತಿಯನ್ನು ಸಾಧಿಸುವ ಮೂಲಕ ಕಲ್ಯಾಣ ರಾಜ್ಯವು ತನ್ನ ಅಂತಿಮ ಗುರಿಯಾದ ಸಾಮಾಜಿಕ ಕಲ್ಯಾಣವನ್ನು ಸಾಧಿಸಲು ಮುಂದಾಯಿತು. ಅದಕ್ಕಾಗಿ ಕೃಷಿಕರಿಗೆ ಸಾಲ ಸೌಲಭ್ಯ, ಮಾರುಕಟ್ಟೆ ಸೌಲಭ್ಯ, ಹೊಸದಾಗಿ ರೂಪುಗೊಂಡ ಕಾರ್ಖಾನೆ ಹಾಗೂ ಗಣಿ ಕಾರ್ಮಿಕರಿಗೆ ಮೂಲ ಸೌಲಭ್ಯ ಹಾಗೂ ಜೀವರಕ್ಷಣೆಗೆ ಆದ್ಯತೆ ಒದಗಿಸಲು ಕಾರ್ಮಿಕ ಶಾಸನಗಳನ್ನು ಜಾರಿಗೊಳಿಸಿತು. ಮಾನವನು ಉತ್ತಮ ಜೀವನವನ್ನು ನಡೆಸಲು ಆರೋಗ್ಯ ಮತ್ತು ನಿರ್ಮಲ ವಾತಾವರಣವು ಅವಶ್ಯವೆಂದು ಭಾವಿಸಿ ಆರೋಗ್ಯ ಮತ್ತು ನೈರ್ಮಲ್ಯೀಕರಣ ಸಂಬಂಧಿ ಶಾಸನಗಳನ್ನು ಹೊರಡಿಸಿತು. ಮೂರನೆಯದಾಗಿ ಭೌತಿಕ ಬೆಳವಣಿಗೆಗೆ ಕ್ರಮಕೈಗೊಂಡ ಸರ್ಕಾರವು ಸಾಮಾಜಿಕ ಬೆಳವಣಿಗೆಗೆ ಅಡ್ಡಿಯಾಗಿದ್ದ ಸಾಮಾಜಿಕ ಪಿಡುಗುಗಳಾದ ಬಾಲ್ಯವಿವಾಹವನ್ನು ನಿರ್ಬಂಧಿಸಿತು. ವಿಧವಾ ಪುನರ್ವಿವಾಹವನ್ನು ಪ್ರೋತ್ಸಾಹಿಸಲು, ದೇವದಾಸಿ

ಪದ್ಧತಿಯನ್ನು ನಿಷೇಧಿಸಲು, ಸ್ತ್ರೀಯರಿಗೆ ರಾಜಕೀಯ ಹಕ್ಕು, ಆಸ್ತಿಯ ಹಕ್ಕುಗಳನ್ನು ಒದಗಿಸಲು, ಅಸ್ಪೃಶ್ಯತೆ ಯನ್ನು ಹೋಗಲಾಡಿಸಲು ಹಲವಾರು ಶಾಸನಗಳನ್ನು ಹಾಗೂ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ನಾಲ್ಕನೆಯದಾಗಿ ರಾಜ್ಯದ ಸಮಗ್ರ ಬೆಳವಣಿಗೆಗೆ ಬೌದ್ಧಿಕ ವರ್ಗದ ಅವಶ್ಯಕತೆಯನ್ನರಿತು ಅದರ ಬೆಳವಣಿಗೆಗೆ ಕಡ್ಡಾಯ ಪ್ರಾಥಮಿಕ ಶಿಕ್ಷಣ, ಪ್ರೌಢಶಿಕ್ಷಣ, ಎಸ್.ಎಸ್.ಎಲ್.ಸಿ. ಯೋಜನೆ, ಮೈಸೂರು ವಿಶ್ವವಿದ್ಯಾನಿಲಯ ಕಾಯ್ದೆ ಮುಂತಾದ ಶಾಸನಗಳನ್ನು ಜಾರಿಗೊಳಿಸುವ ಮೂಲಕ ಕ್ರಮ ಕೈಗೊಂಡಿತು. ಐದನೆಯದಾಗಿ ಒಂದು ಸಂಸ್ಕೃತಿಯ ಶ್ರೇಷ್ಠತೆ ಅಥವಾ ಅಧಃಪತನವನ್ನು ಸೂಚಿಸುವ ಮಾನದಂಡವಾದ ನೈತಿಕತೆಯನ್ನು ಉಳಿಸಲು ಮತ್ತು ಬೆಳೆಸಲು ದೇವದಾಸಿ ಪದ್ಧತಿ ನಿಷೇಧ, ಧೂಮಪಾನ, ಮದ್ಯಪಾನಗಳನ್ನು ನಿಷೇಧಿಸಲು, ವೇಶ್ಯಾವಾಟಿಕೆಯಂತಹ ಅನೈತಿಕ ಚಟುವಟಿಕೆಗಳನ್ನು ತಡೆಗಟ್ಟಲು ಹಲವಾರು ಶಾಸನಗಳನ್ನು ಜಾರಿಗೊಳಿಸಿತು. ಒಟ್ಟಾರೆ ಒಂದು ಸದೃಢ ಸಮಾಜ ಮತ್ತು ರಾಜ್ಯದ ರೂಪಿಕೆಗೆ ಭೌತಿಕ, ಸಾಮಾಜಿಕ, ಬೌದ್ಧಿಕ ಹಾಗೂ ನೈತಿಕ ಬೆಳವಣಿಗೆಗಳು ಅವಶ್ಯವೆಂಬುದನ್ನು ಮೈಸೂರು ಸರ್ಕಾರವು ಅರಿತಿದ್ದು ಅವುಗಳ ಸಾಧನೆಗಾಗಿ ಶಾಸನಗಳನ್ನು ಸಮರ್ಥವಾಗಿ ಬಳಸಿಕೊಂಡಿತೆಂದು ಹೇಳಬಹುದು. ಹಾಗೆಯೇ ಮುಂದಿನ ಅಧ್ಯಾಯದಲ್ಲಿ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಯ ಕೆಲ ಪ್ರಾಕಾರಗಳು, ಸಾಮಾಜಿಕ ಪರಿವರ್ತನೆ ತರುವಲ್ಲಿ ಹೇಗೆ ಪಾತ್ರವಹಿಸಿದವೆಂಬುದನ್ನು ತಿಳಿಯಬಹುದಾಗಿದೆ. ಹಾಗೂ ಅಂತಹ ಪರಿವರ್ತನಾ ಪ್ರಕ್ರಿಯೆಯಲ್ಲಿ ನಾಲ್ವಡಿಯವರು ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಅಂಶಗಳಲ್ಲಿ ಸಮನ್ವಯ ತರಲು ಹೇಗೆ ಪ್ರಯತ್ನಿಸಿದರೆಂಬ ಅಂಶಗಳ ಬಗ್ಗೆ ತಿಳಿಯಬಹುದಾಗಿದೆ.

## ಅಧ್ಯಾಯ - 6

# ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ಸಾಮಾಜಿಕ ಪರಿವರ್ತನೆಯ ಮಾಧ್ಯಮವಾಗಿ ಸಂಸ್ಕೃತಿ

"ಮಾನವನೆಂಬುದು ಎಂದೆತಹ ಅದ್ಭುತ ಸೃಷ್ಟಿ" (What a piece of work is man) ಎಂಬ ಉದ್ಗಾರವನ್ನು ವಿಲಿಯಂ ಷೇಕ್ಸ್‌ಪಿಯರ್‌ನು ತನ್ನ 'ಹ್ಯಾಮ್ಲೆಟ್' ನಾಟಕದಲ್ಲಿನ ನಾಯಕ ಹ್ಯಾಮ್ಲೆಟ್‌ನ ಮುಖಾಂತರ ಹೊರಡಿಸಿದ್ದಾನೆ. ನಿಜ, ಮಾನವನ ಅಮೋಘವಾದ ವೈಚಾರಿಕತೆ, ಅನಂತವಾದ ಮೇಧಾಶಕ್ತಿ, ಆತನ ರೂಪ, ಚಲನ ವಲನ, ಅಭಿವ್ಯಕ್ತಿ, ಕಾರ್ಯವೈಖರಿ - ಎಲ್ಲವೂ ಮೋಹಕವಾದುದು. ಆತ ಜಗತ್ತಿನ ಸೌಂದರ್ಯ ! ಪ್ರಾಣಿ ಪ್ರಪಂಚದ ಮುಕುಟಮಣಿ! ಆದರೆ ಈ ಅದ್ಭುತ ಮಾನವನ ಸಾಮರ್ಥ್ಯದ ಹಿಂದಿನ ಚಾಲಕ ಶಕ್ತಿಯಾದರೂ ಯಾವುದು?.... ?... ?.... ಹೀಗೆ ಈ ಮಾನವನ ಯಶಸ್ಸಿನ ರಹಸ್ಯವನ್ನು ಕುರಿತಂತೆ ಏಳುವ ಪ್ರಶ್ನೆಗಳಿಗೆಲ್ಲಾ ಉತ್ತರವೆಂದರೆ "ಸಂಸ್ಕೃತಿ". ಸಂಸ್ಕೃತಿಯು ಮಾನವನಿಂದ ಸೃಷ್ಟಿಸಲ್ಪಡುತ್ತದೆ. ಹಾಗೆಯೇ ಸಂಸ್ಕೃತಿಯು ಮಾನವನನ್ನು ಸೃಷ್ಟಿಸುತ್ತದೆ. ಮಾನವನು ನೈಸರ್ಗಿಕ ಪರಿಸರದಲ್ಲಿ ಅಸಹಾಯಕವಾದ ಬಲಿಪಶುವಿನಂತೆ ಬದುಕದೆ ನೈಸರ್ಗಿಕ ಪರಿಸರಕ್ಕೆ ಸಮನಾಂತರವಾಗಿ ಸಾಮಾಜಿಕ ಪರಿಸರವನ್ನು ರೂಪಿಸುತ್ತಾ ಹೊಸ ಹೊಸ ನಿಯಮಗಳು, ಆಚರಣೆಗಳು, ವರ್ತನಾರೀತಿಗಳು, ಮೌಲ್ಯಗಳನ್ನು ರೂಪಿಸುತ್ತಾ ತನ್ನ ಜೀವನವನ್ನು ಕ್ರಮಬದ್ಧಗೊಳಿಸಿಕೊಳ್ಳುವನಲ್ಲದೆ ಪರಿಸರವನ್ನು ತನ್ನ ಅಗತ್ಯಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳುವ ಪ್ರಯತ್ನದ ಕ್ರಿಯಾಶೀಲ ಶಕ್ತಿಯೇ ಸಂಸ್ಕೃತಿಯಾಗಿದೆ. ಹೀಗೆ ಸಂಸ್ಕೃತಿಯು ಮಾನವನ ಹಿಂದಿನ, ಈಗಿನ ಸಾಮಾಜಿಕ ಜೀವನವನ್ನು ಸಾಧ್ಯವಾಗಿಸುತ್ತಾ ಬಂದಿದೆ. ತಲೆತಲಾಂತರದಿಂದ ಮುಂದುವರೆದುಕೊಂಡು ಬಂದಿರುವ ಸಂಸ್ಕೃತಿ ಇಲ್ಲದಿರುತ್ತಿದ್ದರೆ ಪ್ರಾಣಿಗಳ ಪ್ರಪಂಚದಲ್ಲಿ ಕಾಣುವಂತೆ ಪ್ರತಿಯೊಂದು ಮಾನವ ಪೀಳಿಗೆಯೂ ಕೂಡ ಕೇವಲ ತನ್ನ ಜೈವಿಕ ಅಸ್ತಿತ್ವಕ್ಕಾಗಿ ಹೋರಾಟ ಮಾಡಿಕೊಂಡಿರಬೇಕಾಗುತ್ತಿತ್ತು. ಹಾಗಾಗಿ ಸಂಸ್ಕೃತಿಯಲ್ಲಿನ ನಾನಾ ಅಂಶಗಳನ್ನು ತಿಳಿಯುವುದು ಕುತೂಹಲವೆಂತೋ ಅವಶ್ಯಕವಾದುದೂ ಹೌದು. ಆದರೂ ಮಾನವನ ಸಮಸ್ತ ಜೀವನದ ಚಿತ್ರಣವನ್ನೊಳಗೊಂಡಿರುವ 'ಸಂಸ್ಕೃತಿಯ' ಕಲ್ಪನೆಯನ್ನು ಅರ್ಥಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ. ಅದು ಬಹು ವಿಸ್ತೃತವಾದ ಅರ್ಥವ್ಯಾಪ್ತಿಯನ್ನು ಒಳಗೊಂಡಿದೆ. ಮೆಕೈವರ್ ಮತ್ತು ಪೇಜ್‌ರವರು ಹೇಳುವಂತೆ "ಸಂಸ್ಕೃತಿಯು ನಮ್ಮ ಜೀವನ ಶೈಲಿಯ, ಮೌಲ್ಯಗಳ, ಭಾವನಾತ್ಮಕ ಬಂಧನಗಳ ಹಾಗೂ ಬೌದ್ಧಿಕ ಸಾಧನೆಗಳ ಪ್ರಪಂಚವೇ ಆಗಿದೆ"[792]. ಸಂಸ್ಕೃತಿಯು ಮಾನವನ ಸಮೂಹ ಜೀವನದ ಅಭಿವ್ಯಕ್ತಿ. ಸಂಸ್ಕೃತಿ ಮತ್ತು ಸಮಾಜ ಒಂದೇ ನಾಣ್ಯದ ಎರಡು

---

*792. ಶಂಕರರಾವ್. ಚಿ.ನ., ಸಮಾಜಶಾಸ್ತ್ರ, ಸಂಪುಟ. 1, ಜೈಭಾರತ್ ಪ್ರಕಾಶನ, ಮಂಗಳೂರು ಪು. 208*

ಮುಖಗಳಿದ್ದಂತೆ. ಹಾಗಾಗಿ ಸಂಸ್ಕೃತಿಯ ಅಧ್ಯಯನವೆಂದರೆ ಸಮಾಜದ ಅಧ್ಯಯನವೇ ಆಗಿದೆ. ಸಂಸ್ಕೃತಿಯು ವ್ಯಕ್ತಿಯ ವ್ಯಕ್ತಿತ್ವವನ್ನು ಬೆಳೆಸುವುದಲ್ಲದೆ ಆತನ ಆಂತರಿಕ ಶಕ್ತಿ ಸಾಮರ್ಥ್ಯಗಳನ್ನು ಬಹಿರಂಗಗೊಳಿಸಲು ವೇದಿಕೆಯನ್ನೂ ರೂಪಿಸುತ್ತದೆ. ಸಂಸ್ಕೃತಿಯು ಸಂಗ್ರಹಕಾರಕ ಲಕ್ಷಣವನ್ನೊಂದಿರುವಂತೆ ಇತರರಿಗೆ ಹಂಚಲ್ಪಡುವ ಗುಣವನ್ನೂ ಹೊಂದಿದೆ. ಈ ಗುಣವು ಒಂದೊಂದು ಪ್ರದೇಶದಲ್ಲೂ ವಿಭಿನ್ನ ಸಂಸ್ಕೃತಿಗಳು ಮೂಡಲು ಕಾರಣ. ಸಂಸ್ಕೃತಿಯ ಚಲನಾತ್ಮಕ ಗುಣದಿಂದಾಗಿ ಒಂದು ಸಂಸ್ಕೃತಿಯು ಭೌತಿಕವಾಗಿಯೋ, ಅಭೌತಿಕವಾಗಿಯೋ ಮತ್ತೊಂದು ಸಂಸ್ಕೃತಿಯೊಳಗೆ ಪ್ರವಹಿಸುವ ಕ್ರಿಯೆಯನ್ನು 'ಸಾಂಸ್ಕೃತಿಕ ಪರಿವರ್ತನೆ' ಎನ್ನಬಹುದು[793]. ಈ ಪರಿವರ್ತನೆಯು ಅಲ್ಲಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ ವ್ಯವಸ್ಥೆ, ಸಂರಚನೆ, ವಿಜ್ಞಾನ, ತಂತ್ರಜ್ಞಾನ, ತಾತ್ವಿಕತೆ, ಕಲೆ ಮತ್ತು ವಾಸ್ತುಶಿಲ್ಪ, ಸಾಹಿತ್ಯ, ಸಂಗೀತ, ಭಾಷೆ, ವೇಷಭೂಷಣ, ಮೌಲ್ಯಗಳು ಮುಂತಾದ ಸಂಸ್ಕೃತಿಯ ಅಂಶಗಳಲ್ಲಿ ಬದಲಾವಣೆಯನ್ನು ತರುತ್ತದೆ. ಈ ಅಧ್ಯಾಯದಲ್ಲಿ ನಾಲ್ವಡಿಯವರ ಆಡಳಿತಾವಧಿಯಲ್ಲಿ ಮೈಸೂರಿನ ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜದೊಳಗೆ ಪಾಶ್ಚಿಮಾತ್ಯ ಸಂಸ್ಕೃತಿಯ ಅಂಶಗಳು ಭೌತಿಕವಾಗಿಯೋ, ಅಭೌತಿಕವಾಗಿಯೋ ಒಳನುಸುಳಿ ಹೇಗೆ ಇಲ್ಲಿನ ಸಂಸ್ಕೃತಿಯಲ್ಲಿ ಪರಿವರ್ತನೆಯನ್ನು ತಂದವೆಂಬುದನ್ನು ಅಧ್ಯಯನ ಮಾಡುವುದು ಈ ಅಧ್ಯಾಯದ ಮೂಲಗುರಿಯಾಗಿದೆ. ಈ ಅಧ್ಯಾಯವನ್ನು ಅಧ್ಯಯನದ ದೃಷ್ಟಿಯಿಂದ ಸ್ಥೂಲವಾಗಿ 7 ವಿಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳೆಂದರೆ

*i) ಭಾಷೆ*

*ii) ಸಾಹಿತ್ಯ*

*iii) ನಾಟಕರಂಗ*

*iv) ಸಂಗೀತ*

*v) ಚಿತ್ರಕಲೆ*

*vi) ಕಲೆ ಮತ್ತು ವಾಸ್ತುಶಿಲ್ಪ*

*vii) ನಗರ ಸಂಸ್ಕೃತಿ*

---

*793. **ಶಂಕರರಾವ್. ಚ.ನ.**, ಸಮಾಜಶಾಸ್ತ್ರ, ಸಂಪುಟ. 1, ಪು. 239*

### *i)* ಭಾಷೆ

ಭಾಷೆ ಸಮಾಜದ ಒಂದು ಬಹುಮುಖ್ಯವಾದ ಹಾಗೂ ಭಾವನಾತ್ಮಕವಾದ ಅಂಶವಾಗಿದೆ. ಭಾಷೆ ಮಾನವನ ದೊಡ್ಡ ಆಸ್ತಿ. ಸಂಸ್ಕೃತಿಯ ವಾಹಕವೂ ಕೂಡ ಭಾಷೆಯೇ ಆಗಿದೆ. ಪ್ರಾಣಿಗಳಿಗೆ ಭಾಷೆಗಳಿಲ್ಲ ಆದುದರಿಂದ ಅವುಗಳಿಗೆ ಮಾನವನ ರೀತಿಯ ಸಮಾಜಿಕ, ಸಾಂಸ್ಕೃತಿಕ ಜೀವನವಿಲ್ಲ. ಮಾನವನು ಸಮಸ್ತ ಸೃಷ್ಟಿಯ ಅತ್ಯಂತ ಎತ್ತರದ ಜೀವಿ ಎಂದು ಪರಿಗಣಿಸಲ್ಪಟ್ಟಿರುವುದು ಆತನು ಸೃಷ್ಟಿಸಿದ ಭಾಷೆಯಿಂದ ಎಂಬುದನ್ನು ಮರೆಯುವಂತಿಲ್ಲ. ಭಾಷೆಯ ಮೂಲಕ ಕುಟುಂಬದ ಒಳಗೆ ಮತ್ತು ಸಮಾಜದ ನಾನಾ ಸ್ತರಗಳಲ್ಲಿ ಸಾಮಾಜೀಕರಣ ಕ್ರಿಯೆ ನಡೆಯುತ್ತಾ ಇರುತ್ತದೆ. ಹಾಗಾಗಿ ಭಾಷೆಯು ಎಲ್ಲಾ ಸಮಾಜಗಳಲ್ಲೂ ಬಹುಮುಖ್ಯವಾದ 'ಸಂಕೇತ ವ್ಯವಸ್ಥೆ'ಯಾಗಿದೆ. ಅಕ್ಷರ ಪೂರ್ವ ಸಮಾಜಗಳಲ್ಲಿ ಭಾಷೆಯು ಮಾತಿನ ಸ್ವರೂಪದಲ್ಲಿ ಮಾತ್ರ ಇರುವುದರಿಂದ ಅವರ ಸಂಸ್ಕೃತಿಯು ತುಂಬಾ ಇತಿಮಿತಿಗಳಿಂದ ಕೂಡಿರುತ್ತದೆ. ಆದರೆ ಆಧುನಿಕ ಸಮಾಜದಲ್ಲಿ ಭಾಷೆಯು ಲಿಖಿತ ರೂಪದಲ್ಲಿದ್ದು ಸಂಗ್ರಹಿತ ಜ್ಞಾನವಾಗಿ ಪುಸ್ತಕಗಳ ರೂಪದಲ್ಲಿ ಸಾಂಕೇತಿಸಲ್ಪಟ್ಟಿದೆ. ಯಾವುದೇ ಭಾಷೆಯ ಪುಸ್ತಕಗಳ ಸಂಗ್ರಹಣೆಯು ಶ್ರೀಮಂತ ಸಂಸ್ಕೃತಿಯೊಂದರ ಕೀಲಿಕೈ ಇದ್ದಂತೆ. ಭಾಷೆಯ ಒಂದು ರೂಪವಾದ 'ಮಾತು' ಎಂಬುದು ತಲೆಬಾಗುವುದು, ವಂದಿಸುವುದು, ಕೈಜೋಡಿಸಿ ಪ್ರಾರ್ಥಿಸುವುದು, ಹಸ್ತಲಾಘವ ನೀಡುವುದು. ಚುಂಬಿಸುವುದು, ಮುಖ ಕೆಂಪೇರುವುದು, ಕೆಂಗಣ್ಣು ಬಿಡುವುದು - ಮುಂತಾದ ಭಾವಾಭಿನಯಗಳನ್ನು ಒಳಗೊಂಡಿರುತ್ತದೆ. ಇವೆಲ್ಲವೂ ಸಂಬಂಧಿತ ಸಂಸ್ಕೃತಿಯಲ್ಲಿ ಸಾಂಕೇತಿಕ ಅರ್ಥವೀಯುತ್ತವೆ[794]. ಪ್ರತಿಯೊಂದು ಪ್ರದೇಶವೂ ಸಹ ಸ್ಥಳೀಯವಾಗಿ ತಮ್ಮದೇ ಆದ ಭಾಷೆಯನ್ನು ಹೊಂದಿರುತ್ತದೆ. ಹಾಗೆಯೇ ಮೈಸೂರು ಸಂಸ್ಥಾನದ ಪ್ರಧಾನ ಭಾಷೆ ಕನ್ನಡವಾಗಿದೆ. ಕಾಲ ಕಾಲಕ್ಕೆ ಕನ್ನಡ ಭಾಷೆಯು ಪ್ರಾಕೃತ, ಸಂಸ್ಕೃತ, ಪರ್ಷಿಯನ್ ಭಾಷೆಗಳ ಪ್ರಭಾವಕ್ಕೊಳಗಾಗಿದೆ. ಹಾಗೆಯೇ ಕ್ರೈಸ್ತಧರ್ಮ ಹಾಗೂ ಬ್ರಿಟಿಷರ ಆಳ್ವಿಕೆಯೊಂದಿಗೆ ಇಂಗ್ಲಿಷ್ ಭಾಷೆ ಮೈಸೂರು ಪ್ರದೇಶಕ್ಕೆ ಪ್ರವೇಶಿಸಿತು. ನಮ್ಮ ಅಧ್ಯಯನ ಕಾಲದಲ್ಲಿ ಇಂಗ್ಲಿಷ್ ಭಾಷೆಯ ಪ್ರಭಾವವು ಮೈಸೂರು ಸಂಸ್ಥಾನದಲ್ಲಿ ಹೆಚ್ಚಿತು. ನಾಲ್ವಡಿ ಮತ್ತು ಅವರ ಸರ್ಕಾರದಿಂದ ಇಂಗ್ಲಿಷ್ ಭಾಷೆಯ ಬೆಳವಣಿಗೆಗೆ ಪ್ರೋತ್ಸಾಹ ದೊರೆತಿತು. ಈ ಶೀರ್ಷಿಕೆಯಡಿಯಲ್ಲಿ ಇಂಗ್ಲಿಷ್ ಭಾಷೆಯ ಪ್ರಭಾವದಿಂದ ಸ್ಥಳೀಯ ಭಾಷೆ ಕನ್ನಡ ಹಾಗೂ ಸಮಾಜದಲ್ಲುಂಟಾದ ಪರಿಣಾಮ ಮತ್ತು ಪರಿವರ್ತನೆಗಳನ್ನು ಸಮೀಕ್ಷಿಸುವುದು ಈ ಅಧ್ಯಯನದ ಗುರಿಯಾಗಿದೆ.

ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆ ಸಮಗ್ರ ಭಾರತದ ಮಟ್ಟದಲ್ಲಿ ಬೇರು ಬಿಡಲಾರಂಭಿಸಿದಾಗ 'ಇಂಗ್ಲಿಷ್' ಎಂಬ ಪಾಶ್ಚಾತ್ಯ ಸಂಸ್ಕೃತಿಯನ್ನೊತ್ತ ಭಾಷೆ ಆಡಳಿತ ಭಾಷೆಯಾಗಿ ಭಾರತದ ಮಟ್ಟದಲ್ಲಿ ಸುಸ್ಥಾಪಿತವಾಯಿತು.

---

*794. ಶಂಕರರಾವ್. ಚ.ನ., ಸಮಾಜಶಾಸ್ತ್ರ, ಸಂಪುಟ. I, ಪು. 216*

ಆಡಳಿತ ವ್ಯವಸ್ಥೆಯನ್ನು ಕ್ರಮಬದ್ಧಗೊಳಿಸಿದ ಬ್ರಿಟಿಷರು ಅದನ್ನು ಸುಗಮವಾಗಿ ತಮ್ಮಿಚ್ಛೆಯಂತೆ ನಡೆಸಿಕೊಂಡು ಹೋಗಲು ಭಾರತೀಯರನ್ನೇ ದುಡಿಯುವ ಆಳುಗಳನ್ನಾಗಿ ಮಾಡಲು ನಿರ್ಧರಿಸಿ, ಅದಕ್ಕೆ ಅನುಕೂಲವೂ ಅನುರೂಪವೂ ಆದ ವಿದ್ಯಾಭ್ಯಾಸ ಪದ್ಧತಿಯನ್ನು ಜಾರಿಗೆ ತಂದರು. ಅದರಲ್ಲಿ ಅತ್ಯಂತ ಮುಖ್ಯವಾದದ್ದು ಮತ್ತು ಬಹುಕಾಲ ಪರಿಣಾಮಕಾರಿಯಾದದ್ದು - ಇಂಗ್ಲಿಷ್ ಭಾಷೆಯ ಕಲಿಕೆ ಮತ್ತು ಇಂಗ್ಲಿಷ್ ಭಾಷೆಯನ್ನೇ ಶಿಕ್ಷಣ ಮಾಧ್ಯಮವನ್ನಾಗಿ ಅಂಗೀಕರಿಸಿದ್ದು[795].

1799ರಲ್ಲಿ ಟಿಪ್ಪುವಿನ ಪತನಾನಂತರ ಮೈಸೂರು ಸಂಸ್ಥಾನದಲ್ಲಿ ಬ್ರಿಟಿಷರ ಆಡಳಿತ ಮುಂದಾದಾಗ ಇಂಗ್ಲಿಷ್ ಭಾಷೆ ಸ್ವಾಭಾವಿಕವಾಗಿಯೇ ಆಡಳಿತ ಭಾಷೆಯಾಯಿತು. ಪರಿಣಾಮವಾಗಿ ಸರ್ಕಾರದ ಆಡಳಿತ ವ್ಯವಹಾರಗಳೆಲ್ಲ ಪರ್ಷಿಯನ್ ಭಾಷೆಯಿಂದ ಇಂಗ್ಲಿಷ್ ಭಾಷೆಗೆ ಬದಲಾವಣೆ ಹೊಂದಿತು. ಇದರಿಂದ ಸರ್ಕಾರಿ ಕಾಗದ ಪತ್ರಗಳು ಆಂಗ್ರೇಜಿಕರಣಗೊಳ್ಳತೊಡಗಿ ಇಂಗ್ಲಿಷ್ ಭಾಷೆಯ ಕಲಿಕೆಗೆ ಹೆಚ್ಚು ಮಹತ್ವ ದೊರಕಿತು. ಬ್ರಿಟಿಷರೊಂದಿಗೆ ವ್ಯವಹರಿಸಲು ಹಾಗೂ ಆಡಳಿತ ನಿರ್ವಹಣೆಗಾಗಿ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಇಂಗ್ಲಿಷ್ ಕಲಿಸಲಾಯಿತು[796]. ಅದೇ ಪರಂಪರೆ ಮೈಸೂರು ರಾಜಮನೆತನದಲ್ಲಿ ಮುಂದುವರೆದು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲಕ್ಕೆ ಉತ್ತುಂಗ ಶಿಖರವನ್ನು ತಲುಪಿ ಇಂಗ್ಲಿಷ್ ಭಾಷೆಯನ್ನು ಮಾತೃಭಾಷೆಯನ್ನಾಗಿ ಹೊಂದಿದವರಿಂದಲೇ ರಾಜಕುಮಾರರಿಗೆ (ನಾಲ್ವಡಿ ಮತ್ತು ಸಹೋದರರಿಗೆ) ಇಂಗ್ಲಿಷ್ ಭಾಷೆ ಮತ್ತು ಶಿಕ್ಷಣವನ್ನು ಕಲಿಸಬೇಕೆನ್ನುವ ಮಟ್ಟವನ್ನು ಮುಟ್ಟಿತು[797]. ಹೀಗೆ ಉತ್ತಮ ರೀತಿಯ ಇಂಗ್ಲಿಷ್ ಶಿಕ್ಷಣವನ್ನು ಪಡೆದ ನಾಲ್ವಡಿಯವರು ತಮ್ಮ 8ನೇ ವಯಸ್ಸಿನಲ್ಲೆ ಸೊಗಸಾದ ರೀತಿಯಲ್ಲಿ ಇಂಗ್ಲಿಷ್ ಭಾಷೆಯನ್ನಾಡುತ್ತಿದ್ದರೆಂದು ವೀರ್ ಸಾಹೇಬರಿಂದ ಪ್ರಶಂಸೆಯನ್ನು ಪಡೆದರು[798]. ತಮ್ಮ ಪಟ್ಟಾಭಿಷೇಕ ಮಹೋತ್ಸವದ ವೇಳೆಗೆ ಲಾರ್ಡ್ ಕರ್ಜನ್‌ರವರ ಅಮೋಘ ಭಾಷಣವನ್ನು ಮೀರಿಸುವಂತಹ ರೀತಿಯಲ್ಲಿ, ವಿಶೇಷ ಸಂಕೀರ್ಣ ಪದಗಳ ಸಮುಚ್ಚಯದ ವಾಕ್ಯಗಳ ಬಳಕೆಯೊಂದಿಗೆ ಮಾತನಾಡುವಷ್ಟು ಈ ಭಾಷೆಯ ಮೇಲೆ ಪ್ರೌಢಿಮೆಯನ್ನು ಬೆಳೆಸಿಕೊಂಡರು[799]. ನಂತರ ತಮ್ಮ ಜೀವಿತಾವಧಿಯವರೆಗೂ ಮೈಸೂರು ಸಂಸ್ಥಾನದಾದ್ಯಂತ ಸಂಚರಿಸಿ ಇಂಗ್ಲಿಷ್ ಭಾಷೆಯಲ್ಲೇ ಪ್ರಧಾನವಾಗಿ ಪ್ರಜೆಗಳನ್ನು ಕುರಿತು ಭಾಷಣಗಳನ್ನು ಮಾಡುವ ಮೂಲಕ ಈ ಭಾಷೆಯ ಕಲಿಕೆಗೆ, ಬೆಳವಣಿಗೆಗೆ, ಅಳವಡಿಕೆಗೆ ಪ್ರೋತ್ಸಾಹದಾಯಕರಾಗಿ ನಿಂತರು. ಅಷ್ಟೇ ಅಲ್ಲದೆ 1833ರಲ್ಲಿ ತಮ್ಮ ತಾತ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಆರಂಭವಾದ ಇಂಗ್ಲಿಷ್ ಶಾಲೆಯ ಸ್ಥಾಪನೆಯ ಪರಂಪರೆಯನ್ನು, 1854ರ ಹಾಲಿಫಾಕ್ಸ್ ವರದಿಯ[800] ಅಂಶಗಳ

---

795. ***ಕುವೆಂಪು.***, *ನೆನಪಿನ ದೋಣಿಯಲ್ಲಿ (ಆತ್ಮ ಕಥೆ), ಪು. 20*
796. ***ಸೂರ್ಯನಾಥ್ ಯು. ಕಾಮತ್.***, *ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-3, ಪು. 385*
797. ***ಹಯವದನರಾವ್. ಸಿ. (ಸಂ).***, *ಮೈಸೂರ್ ಗೆಜೆಟಿಯರ್, ಸಂಪುಟ-II, ಭಾಗ - IV, ಪು. 2997*
798. ***ವೆಂಕಟರಾಮಯ್ಯ ಸಿ. ಕೆ.***, *ಆಳಿದ ಮಹಾಸ್ವಾಮಿಯವರು, ಪು. 33-34*
799. ***1902ರ ಆಗಸ್ಟ್ 2 ವೆಸ್ಟರ್ನ್ ಡೈಲಿ ಮರ್ಕ್ಯುರಿ ದಿನಪತ್ರಿಕೆ,*** *ಪ್ಯಾಲೆಸ್ ಪೇಪರ್ ಕಟಿಂಗ್ಸ್, ಪು. 2-3*
800. ***ಹಯವದನರಾವ್. ಸಿ. (ಸಂ).***, *ಮೈಸೂರ್ ಗೆಜೆಟಿಯರ್, ಸಂಪುಟ-IV, ಅಡ್ಮಿನಿಸ್ಟ್ರೇಟಿವ್, ಪು. 494*

ಮುಂದುವರಿಕೆಯನ್ನು ತಮ್ಮ ಆಡಳಿತಾವಧಿಯಲ್ಲಿ ಪ್ರೋತ್ಸಾಹಿಸಲು ಶಾಲೆಗಳು, ಕಾಲೇಜುಗಳು ಮತ್ತು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿ[801] ಶಿಕ್ಷಣದ ವ್ಯಾಪ್ತಿಯೊಳಗೆ ಇಂಗ್ಲಿಷ್ ಭಾಷೆಯನ್ನು ಅಳವಡಿಸುವಂತಹ ಕಾರ್ಯಯೋಜನೆಗಳನ್ನು ರೂಪಿಸಿ ಮೈಸೂರು ಸಂಸ್ಥಾನದಾದ್ಯಂತ ಪಾಶ್ಚಾತ್ಯ ಇಂಗ್ಲಿಷ್ ಭಾಷೆಯ ಬೆಳವಣಿಗೆಗೆ ಪ್ರೋತ್ಸಾಹದಾಯಕರಾಗಿ ನಿಂತರು.

ಪಾಶ್ಚಾತ್ಯ ಇಂಗ್ಲಿಷ್ ಭಾಷೆ ಮೈಸೂರು ಸಂಸ್ಥಾನದಲ್ಲಿ ಬೆಳವಣಿಗೆಗೊಳ್ಳುವಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ, ಮೈಸೂರಿನ ಒಡೆಯರು ಎಷ್ಟು ಕಾರಣರೋ ಕ್ರೈಸ್ತ ಮಿಷನರಿಗಳು ಸಹ ಅಷ್ಟೇ ಪ್ರಮುಖರಾಗಿದ್ದಾರೆ. ಕ್ರೈಸ್ತ ಧರ್ಮದ ಪ್ರಚಾರವನ್ನು ಸ್ಥಳೀಯರಲ್ಲಿ ಮನವರಿಕೆ ಮಾಡಿಕೊಡುವ ಹಿನ್ನೆಲೆಯಲ್ಲಿ ಅನಿವಾರ್ಯವೆನಿಸಿದ ಇಂಗ್ಲಿಷ್ ಭಾಷೆಯನ್ನು ಅಭಿವೃದ್ಧಿಪಡಿಸುವ ಹಾದಿಯಲ್ಲಿ ಹಲವಾರು ಮಿಷನರಿಗಳು ಕೆಲಸ ಮಾಡಿದವು. ಅವುಗಳಲ್ಲಿ ವೆಸ್ಲಿಯನ್ ಮಿಷನ್ ಪ್ರಮುಖ ಹಾಗೂ ಮೊದಲನೆಯದಾಗಿದ್ದು 1840 ರಿಂದ 1854ರ ಅವಧಿಯಲ್ಲಿ ಜಿಲ್ಲೆಯ ಮುಖ್ಯ ಭಾಗಗಳಲ್ಲಿ ವೆಸ್ಲಿಯನ್ ಮಿಷನ್ ಶಾಲೆಗಳನ್ನು ತೆರೆಯಿತು[802]. ಆ ಮೂಲಕ ಸ್ಥಳೀಯವಾಗಿ ಇಂಗ್ಲಿಷ್ ಭಾಷೆಯ ಬೆಳವಣಿಗೆಗೆ ಕಾರಣೀಭೂತವಾಯಿತು, ತನ್ನ ಧ್ಯೇಯವನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸಿತು.

ಮೈಸೂರು ಸಂಸ್ಥಾನದ ಜನಸಮೂಹಕ್ಕೆ ಪಾಶ್ಚಾತ್ಯ ಇಂಗ್ಲಿಷ್ ಭಾಷೆಯ ಕಲಿಕೆಯ ಅನಿವಾರ್ಯತೆ ಹೆಚ್ಚಾಗಿ ಕಾಣಿಸಿಕೊಂಡಿದ್ದು ಬ್ರಿಟಿಷರು ತಮ್ಮ ಆಡಳಿತ ವ್ಯವಸ್ಥೆಗೆ ಆಡಳಿತಶಾಹಿಯನ್ನು ನೇಮಿಸಿಕೊಳ್ಳಲು ಇಂಗ್ಲಿಷ್ ಶಿಕ್ಷಣವನ್ನು ಮಾನದಂಡವಾಗಿ ಅಂಗೀಕರಿಸಿದಾಗ. ಅಲ್ಲದೆ ಇಂಗ್ಲಿಷ್ ಭಾಷೆ ಬಲ್ಲವರು ಹೆಚ್ಚು ಸ್ಥಳೀಯವಾಗಿ ಸಿಗದಿದ್ದಾಗ ಆ ಕೊರತೆಯನ್ನು ನೀಗಿಸಲು ಪಕ್ಕದ ಮದ್ರಾಸ್ ಪ್ರಾಂತ್ಯದಿಂದ ಅಧಿಕಾರಿಗಳನ್ನಾಗಿ ಬರಮಾಡಿಕೊಳ್ಳಲಾರಂಭಿಸಿದಾಗ. ಪರಿಣಾಮವಾಗಿ ಸ್ಥಳೀಯವಾಗಿ ಸಂಸ್ಕೃತ, ಕನ್ನಡ ಕಲಿತು ವಿದ್ವಾಂಸರೆನಿಸಿಕೊಂಡು ಇದುವರೆಗೂ ಪ್ರಧಾನ ಆಡಳಿತ ಹುದ್ದೆಗಳನ್ನು ಅನುಭವಿಸುತ್ತಿದ್ದ 'ವೈದಿಕರು' ನಡೆಸುತ್ತಿದ್ದ ಪಾರಂಪರ್ಯ 'ಸುಖ ಜೀವನಕ್ಕೆ' ಸಂಚಕಾರ ಬಂದಿತು. ಅವರ ಸಂಸ್ಕೃತ ವಿದ್ಯಾಭ್ಯಾಸ ಸಡಿಲಗೊಂಡು ವೇದಾಧ್ಯಯನ, ಶಾಸ್ತ್ರಾಭ್ಯಾಸಗಳ ಆಕರ್ಷಣ ಶಕ್ತಿ ಕಡಿಮೆಗೊಳ್ಳುತ್ತಾ ಬಂದಿತು. ನೆಮ್ಮದಿಯ ಜೀವನವೆಂದರೆ 'ಲೌಕಿಕ ಜೀವನ' ಎಂಬ ಹೊಸ ನಂಬಿಕೆ ಈ ಜನರಲ್ಲಿ ಮೂಡಿತು. ಇದರಿಂದ ವಸ್ತು-ವಿಚಾರಗಳ ಮೌಲ್ಯಗಳು ತಲೆಕೆಳಗಾಗಿ ವೈದಿಕ ಸಮಾಜವಷ್ಟೇ ಅಲ್ಲದೆ ಸಮಸ್ತ ಸಮಾಜದಲ್ಲೂ ಪ್ರಾಚೀನ ರಚನೆಗಳು ಸಡಿಲಗೊಂಡವು. ಆಚಾರ-ವಿಚಾರ, ಸಮಯ-ಸಂಪ್ರದಾಯಗಳೆಲ್ಲ ತಪತಪನೆ ಉರುಳಲಾರಂಭಿಸಿದವು.

---

*801. ಶಾಮರಾವ್ ಎಂ., ಮಾಡರ್ನ್ ಮೈಸೂರ್, ಸಂ. II, ಪು. 277*

*802. ನಾಯ್ಡು. ಬಿ. ಎಸ್., ಇಂಟೆಲೆಕ್ಚುಯಲ್ ಹಿಸ್ಟರಿ ಆಫ್ ಕಲೋನಿಯಲ್ ಇಂಡಿಯಾ, ಪು. 48-49*

ಇಂತಹ ಪರಿವರ್ತನೆಯ ಚಂಡಮಾರುತವನ್ನು ಎದುರಿಸುವ ಶಕ್ತಿ ಸಹಜವಾಗಿ ವೈದಿಕ ಸಮಾಜ ವರ್ಗಕ್ಕೆ ಇಲ್ಲದಂತಾಯಿತು. ಈಸ್ಟ್ ಇಂಡಿಯಾ ಕಂಪನಿ ಸರ್ಕಾರದ ಐವತ್ತು ವರ್ಷಗಳ ಪ್ರಭುತ್ವದಲ್ಲಿ ಪಾಶ್ಚಾತ್ಯ ನಾಗರಿಕತೆಯ ಪ್ರಭಾವ, ಆಂಗ್ಲ ಭಾಷಾಧ್ಯಯನದ ಆಕರ್ಷಣೆ ಕಲ್ಪನಾತೀತವೆನಿಸಿತು[803]. ಇದರ ಪ್ರಭಾವದಿಂದ ಚತುರ್ವೇದ ವೇದಾರ್ಥ ತತ್ವಜ್ಞಾನಿಗಳೆಲ್ಲ ಜೀವನದ ಭದ್ರತೆಯ ಕಡೆಗೆ ಹೊರಳಿ 'ಹೂಣ ಭಾಷಾಭ್ಯಾಸ'ವನ್ನು ಅಪೇಕ್ಷಿಸಲಾರಂಭಿಸಿದರು. ಇದರಿಂದ ವಿದ್ಯೆಯು ಜೀವಿತದ 'ಸಾಧನೆ' ಎಂಬ ಕಲ್ಪನೆ ಬದಲಾಗಿ 'ಸಂಪಾದನೆ' ಎಂಬುದಾಗಿ ಪರಿವರ್ತನೆಗೊಂಡಿತು[804]. ಮಹಾಮಹಾ ವಿದ್ವಾಂಸರ ಮನೆಗಳಲ್ಲೇ ಸಂಸ್ಕೃತ ವಿದ್ವತ್ತಿಗೆ ಈ ಕಾಲದಲ್ಲಿ ಒಂದು ಪಾವು ಅಕ್ಕಿಕಾಳು ಸಹ ಗೀಟುವುದಿಲ್ಲ. ನೀನು ಬುದ್ಧಿವಂತ; ಇಂಗ್ಲಿಷ್ ಓದು[805] ಎಂದು ತಮ್ಮ ಕಿರಿಯರನ್ನು ಪ್ರೇರೇಪಿಸುವಂತಾದರು. ಪರಿಣಾಮವಾಗಿ "ಆಂಗ್ಲ ವಿದ್ಯಾಭ್ಯಾಸ ಮಾಡುವುದರಿಂದಲೇ ನಮ್ಮ ಮೋಕ್ಷ" ಎಂದು ತಿಳಿದು ಇಂಗ್ಲಿಷ್ ಭಾಷೆ, ಶಿಕ್ಷಣದ ಕಲಿಕೆಯತ್ತ ಧಾವಿಸತೊಡಗಿದರು. ಇದರಿಂದ "ಆಂಗ್ಲೋ-ವರ್ನಾಕ್ಯುಲರ್ ಸ್ಕೂಲ್"ಗಳು ತುಂಬಿದವು! ಆಂಗ್ಲ ಶಾಲೆಯ ಮೆಟ್ಟಿಲು ಹತ್ತುವುದೆಂದರೆ ಪರಮಪದ ಸೋಪಾನ ಹತ್ತಿದಂತೆಂಬ ಭಾವನೆ ಎಲ್ಲೆಲ್ಲೂ ವ್ಯಾಪಿಸಿ[806] ಸಂಪ್ರದಾಯದ ತಡೆಗೋಡೆಯಂತಿದ್ದ ಸಮುದ್ರಯಾನ ನಿಷಿದ್ಧವೆಂದಾರ್ಭಟಿಸುತ್ತಿದ್ದವರ ಸದ್ದನ್ನಡಗಿಸಿ ಸುಧಾರಕರಾಗಿ,[807] ಸಮುದ್ರವನ್ನು ದಾಟಿ ಸಾವಿರಾರು ಮೈಲಿ ಸಂಚರಿಸತೊಡಗಿದರು. ಹೀಗೆ ಪಾಶ್ಚಾತ್ಯ ಇಂಗ್ಲಿಷ್ ಭಾಷೆಯು ಮೈಸೂರು ಸಂಸ್ಥಾನವನ್ನು ಪ್ರವೇಶಿಸಿ ಭಾರತೀಯ ಸಂಸ್ಕೃತಿಯ ಪ್ರತೀಕವೆನಿಸಿಕೊಂಡಿದ್ದ ಸಮಾಜದ ಸಂಪ್ರದಾಯ ವರ್ಗಕ್ಕೆ ಸೇರಿದ್ದ 'ಸಂಸ್ಕೃತ' ತಮ್ಮ ಜೀವಾಳವೆಂದು ಬೇರೆಯವರು ಅದನ್ನು ಕಲಿಯಲು ಅರ್ಹರಲ್ಲವೆಂದೂ, ಪ್ರಾಚೀನ ಕಾಲದಿಂದಲೂ ಉಳಿಸಿ ಬೆಳೆಸಿಕೊಂಡು ಬಂದಿದ್ದ ವೈದಿಕರೇ ತಮ್ಮ ತಾಳೆವಾಲೆ ಗ್ರಂಥಗಳನ್ನು ಮೂಟೆಕಟ್ಟಿ ಅಟ್ಟದ ಮೇಲಿಟ್ಟು[808] ಆಧುನಿಕ / ಪಾಶ್ಚಿಮಾತ್ಯ ಭಾಷೆ ಮತ್ತು ಸಂಸ್ಕೃತಿಗೆ ತಮ್ಮನ್ನು ತಾವು ತೆರೆದುಕೊಳ್ಳುವಂತಹ ಪರಿವರ್ತನೆಯನ್ನು ತರುವಲ್ಲಿ ಪ್ರಧಾನ ಪಾತ್ರವಹಿಸಿತು.

ಇಂತಹ ಪ್ರಭಾವ ಮತ್ತು ಪರಿವರ್ತನೆ ಕೇವಲ ವೈದಿಕ ಬ್ರಾಹ್ಮಣರ ವರ್ಗಕ್ಕೆ ಸೀಮಿತಗೊಳ್ಳಲಿಲ್ಲ. ಕ್ರೈಸ್ತಧರ್ಮ ಪ್ರಚಾರಕರ ಪ್ರಭಾವದಿಂದ ಮಲೆನಾಡಿನ ಹಳ್ಳಿಗಳಲ್ಲೊಂದಾದ ಕುಪ್ಪಳ್ಳಿಗೂ ಪ್ರವೇಶಿಸಿ ಬ್ರಾಹ್ಮಣೇತರ ವರ್ಗದ ಪ್ರತಿನಿಧಿ ಎನಿಸಿಕೊಳ್ಳುವ ಕುವೆಂಪುರಂತಹವರ ಉದಯಕ್ಕೂ ದಾರಿಮಾಡಿಕೊಟ್ಟಿತು. ಆ ಮಲೆನಾಡಿನ ಕಾಡಿನ ಮೂಲೆಯ

---

*803. ಶರ್ಮ. ತಿ. ತಾ., ನನ್ನ ಜೀವನ ಮತ್ತು ಧ್ಯೇಯ, ಮೈಸೂರು, ಪು. 23*

*804. ಅದೇ., ಪು. 24*

*805. ಶರ್ಮ. ತಿ. ತಾ., ನನ್ನ ಜೀವನ ಮತ್ತು ಧ್ಯೇಯ, ಪು. 129*

*806. ಅದೇ., ಪು. 24*

*807. ಅದೇ., ಪು. 34*

*808. ಅದೇ., ಪು. 2 4*

ಉಪ್ಪರಿಗೆಯ 'ಐಗಳ' ಶಾಲೆಯಲ್ಲಿ ಹುಡುಗರಿಗೆ ಅಕ್ಷರ ಕಲಿಸಿ, ಕನ್ನಡದಲ್ಲಿ ತುಸು ಬರೆಯಲು, ಓದಲು ಹೇಳಿಕೊಡಲಾಗುತ್ತಿತ್ತು. ಆದರೆ ಇನ್ನು ಮುಂದೆ ಕನ್ನಡ ಸಾಕೆ? ಇಂಗ್ಲಿಷ್‌ನವರ ಆಳ್ವಿಕೆಯಲ್ಲಿ ಇಂಗ್ಲಿಷ್ ಕಲಿಯದಿದ್ದರೆ ಆದೀತೆ? ಆದರೆ ಇಂಗ್ಲಿಷ್ ಹೇಳಿಕೊಡುವವರಾರು? ದೊರೆಗಳ ಭಾಷೆಯನ್ನು? ಎಂಬಿತ್ಯಾದಿ ಪ್ರಶ್ನೆಗಳು ಅಲ್ಲಿನ ಜನರ ಮನದಾಳದಲ್ಲಿ ಉದ್ಭವಿಸುವಂತಾಗುವಲ್ಲಿ ಕ್ರೈಸ್ತ ಮಿಷನರಿಗಳ ಪಾತ್ರ ಹಿರಿದಾದದ್ದು. ಮತ ಪ್ರಚಾರ ಮತ್ತು ಮತಾಂತರದ ಉದ್ದೇಶದಿಂದ ಸಹ್ಯಾದ್ರಿಯ ಕಡೆಗೆ ಕಾಲಿಟ್ಟ ಪಾದ್ರಿಗಳು ಮೊದಲು ಕನ್ನಡ ಭಾಷೆಗೆ ಭಾಷಾಂತರಗೊಂಡಿದ್ದ ಬೈಬಲ್ಲನ್ನು ಓದಲು ಹಂಚಿ, ನಿಮ್ಮನ್ನು ಬ್ರಾಹ್ಮಣರ ದಾಸ್ಯದಿಂದ ಪಾರು ಮಾಡುತ್ತೇವೆಂದು ಬೋಧಿಸಿ, ಶೂದ್ರರ ಮಕ್ಕಳಿಗೆ ಉಚಿತ ನವೀನ ವಿದ್ಯಾಭ್ಯಾಸ, ಊಟ, ವಸತಿ, ಬಟ್ಟೆ ನೀಡುವ ಮೂಲಕ ಸ್ಥಳೀಯ ಜನರ ಗೌರವ ಕೃತಜ್ಞತೆಗಳನ್ನು ಸೂರೆಗೊಂಡು ನಂತರ ಕುಪ್ಪಳಿಯ ಉಪ್ಪರಿಗೆಯ ವಿದ್ಯಾಸಂಸ್ಥೆಗೆ ಒಬ್ಬ ಇಂಗ್ಲಿಷ್ ಬಲ್ಲ ಕ್ರೈಸ್ತ ತರುಣನನ್ನು ಮೇಷ್ಟರನ್ನಾಗಿ ಕಳುಹಿಸುವ ಕೃಪೆ ಮಾಡಿದರು. ಪಾದ್ರಿಗಳೇ ಬರದಿದ್ದಲ್ಲಿ ಆ ಹಳ್ಳಿಗರು ಇನ್ನಷ್ಟು ವರ್ಷಗಳೇ ಕಾಯಬೇಕಿತ್ತು ಇಂಗ್ಲಿಷ್ ಕಲಿಯಲು ? ಕ್ರೈಸ್ತ ತರುಣನ ಆಗಮನದ ತರುವಾಯ 'ಐಗಳು' ಎಂಬ ನಾಮ ಸಂಪೂರ್ಣವಾಗಿ ಅಳಿಸಿಹೋಗಿ, 'ಮೇಷ್ಟರು' ಎಂಬ ಬಿರುದು ಪಟ್ಟಕ್ಕೇರಿತು ಮತ್ತು ಪಾಶ್ಚಾತ್ಯ ಪ್ರಭಾವದ ಆಧುನಿಕ ಪ್ರಪಂಚಕ್ಕೆ ಪ್ರವೇಶಿಸಿತು. ಕುಪ್ಪಳ್ಳಿಯ ಉಪ್ಪರಿಗೆಯ ಶಾಲೆ[809]. ಬ್ರಾಹ್ಮಣೇತರರಲ್ಲಿ ಇಂಗ್ಲಿಷ್ ಕಲಿಕೆ, ಸಾಂಸ್ಕೃತಿಕ ಉನ್ನತಿ ಹಾಗೂ ಸರ್ಕಾರಿ ಉದ್ಯೋಗಗಳಿಗೆ ರಹದಾರಿ ಎಂಬುದು ಮನವರಿಕೆಯಾದುದನ್ನು ಕುರಿತು ಕುವೆಂಪುರವರು ಮಕ್ಕಳಾಗಿದ್ದ ನಮ್ಮ ಬದುಕಿನ ಮೇಲೆ ಅವರ ಕೈಗೂಡಿದ ಆ ಆಕಾಂಕ್ಷೆ ಮಹತ್ ಪ್ರಭಾವಶಾಲಿಯಾಗಿ ಪರಿಣಮಿಸಿತು. ಮಕ್ಕಳನ್ನು ಓದುವುದಕ್ಕೆ ಹಾಕಬೇಕು ಎಂಬ ಪ್ರಜ್ಞೆ, ಅವರಲ್ಲಿ ಉದಿಸುವಂತೆ ಮಾಡಿತು. ಅವರಿಗೆ ಬುದ್ಧಿ ಸ್ಪಷ್ಟವಾಗಿರದಿದ್ದರು, ಬ್ರಿಟಿಷರ ಆಳ್ವಿಕೆಯಲ್ಲಿ ಮುಂದೆ ಅವರ ಭಾಷೆಯಾಗಿದ್ದ ಇಂಗ್ಲಿಷನ್ನು ಕಲಿಯದಿದ್ದರೆ, ತಮ್ಮ ಮಕ್ಕಳು ಮುಂದುವರಿಯುವುದು ಸಾಧ್ಯವಿಲ್ಲ ಎಂಬ ಭಾವನೆ ಅವರ ಹೃದಯದಲ್ಲಿ ಮೂಡಿ ಮನವರಿಕೆಯಾಗಿತ್ತು. ತತ್‌ಫಲವಾಗಿ ನಾವು ತೀರ್ಥಹಳ್ಳಿಯ ಪೇಟೆಯ ಇಸ್ಕೂಲಿಗೆ ಸೇರುವಂತಾಯಿತು[810]. ಎಂದಿದ್ದಾರೆ.

---

*809. **ಕುವೆಂಪು.**, ನೆನಪಿನ ದೋಣಿಯಲ್ಲಿ (ಆತ್ಮ ಕಥೆ), ಪು. 21*

*810. **ಕುವೆಂಪು.**, ನೆನಪಿನ ದೋಣಿಯಲ್ಲಿ (ಆತ್ಮ ಕಥೆ), ಪು. 25*

ಹೀಗೆ ಮೈಸೂರು ಸಂಸ್ಥಾನದ ಎಲ್ಲ ವರ್ಗ / ಕೋಮಿನವರ ಹೃದಯವನ್ನಾವರಿಸಿದ ಪಾಶ್ಚಾತ್ಯ ಸಂಸ್ಕೃತಿಯ ಭಾಗವಾದ ಇಂಗ್ಲಿಷ್ ಭಾಷೆಯು ಕೇವಲ ಕಲಿಕೆಯಷ್ಟಕ್ಕೇ ಸೀಮಿತಗೊಳ್ಳದೆ ಜನಸಾಮಾನ್ಯರ ಆಡುಭಾಷೆಯಾಗಿದ್ದ ಕನ್ನಡ ಭಾಷೆಯೊಳಗೂ ಪ್ರವೇಶಿಸಿ ಕನ್ನಡೀಕರಣಗೊಂಡು ಹಲವು ಪರಿಣಾಮಗಳನ್ನುಂಟು ಮಾಡಿತು. ಸಹಜವಾಗಿ ಈ ಹೊಸ ಭಾಷೆಯ ಪ್ರಭಾವ ಮೊಟ್ಟಮೊದಲು ಕಂಡುಬಂದದ್ದು ಆಡಳಿತ ಮತ್ತು ನ್ಯಾಯಾಲಯಗಳಲ್ಲಿ. ಸಾಮಾನ್ಯ ಮನುಷ್ಯ, ಅಧಿಕಾರಿಗಳು, ಹಳ್ಳಿಗರು, ನಗರವಾಸಿಗಳು, ಮಹಾರಾಜರು - ಎಲ್ಲರೂ ಬ್ರಿಟಿಷ್ ಆಡಳಿತ ಹಾಗೂ ನ್ಯಾಯಾಡಳಿತ ವ್ಯವಸ್ಥೆಗಳ ಪ್ರಭಾವಕ್ಕೊಳಗಾದವರೇ. ಆಗ ಅನೇಕ ಶಬ್ದಗಳು - ಕಂಪನಿ, ಕೋರ್ಟ್, ಆರ್ಡರ್ ಇಂತಹವು ದಿನನಿತ್ಯದ ಭಾಷೆಯೊಳಕ್ಕೆ ಬಂದು ಸೇರತೊಡಗಿದವು. ಕೆಲವೊಮ್ಮೆ ಅವು ಸ್ವಲ್ಪ ಮಟ್ಟಿಗೆ ಮಾರ್ಪಟ್ಟವು. 'ಕಂಪನಿ' ಶಬ್ದವು ಕುಂಪಣಿ,[811] 'ಬೈಸಿಕಲ್' ಬೀಸೆಕಲ್ಲು[812], 'ಕಮ್ಯಾಂಡರ್' ಕುಮಂದಾರಿ ಆದನು[813]. ಕಾಲಕಳೆದಂತೆ ಆಡಳಿತ, ನ್ಯಾಯಾಲಯ ಮತ್ತು ಶಿಕ್ಷಣ ವ್ಯವಸ್ಥೆಗಳು ತಮ್ಮ ಪ್ರಭಾವವಲಯವನ್ನು ವಿಸ್ತರಿಸಿಕೊಂಡಂತೆ ಕನ್ನಡಕ್ಕೆ ಬಂದ ಇಂಗ್ಲಿಷ್ ಶಬ್ದಗಳು ಆ ಕಾಲದ ಪ್ರಾಥಮಿಕ ಶಾಲಾ ಉಪಾಧ್ಯಾಯರ (ಹಳ್ಳಿಗಾಡಿನಲ್ಲಿ) ಬಾಯಲ್ಲೂ ತದ್ಭವಗಳ ರೂಪದಲ್ಲಿ ನುಡಿಯಲಾರಂಭಿಸಿದವು. ಮ್ಯಾಪ್ (map) 'ಮ್ಯಾಕೆ' ಆಯಿತು! ಕೋಟ್ (coat) 'ಗೋಟ್' ಆಯಿತು! ಛಾರ್ಜು (Charge) 'ಚಾರ್ಜ್' ಆದ! ರೆಜಿಸ್ಟರ್ (Register) ನಿಜಸ್ತ್ರೀ ಆದಳು![814].

ಈ ಪ್ರಕ್ರಿಯೆ ಮುಂದುವರೆದು ಸ್ಕೂಲ್, ಕಾಲೇಜ್, ಲಾಯರ್, ರಿಕಾರ್ಡ್, ಅಜರ್ನ್‌ಮೆಂಟ್, ಫೀಸ್, ಮಿಸ್ಟೇಕ್ ಇಂತಹ ಶಬ್ದಗಳು ಬಳಕೆಯಲ್ಲಿ ಕನ್ನಡ ಶಬ್ದಗಳೇ ಆದವು. ಹೊಸ ಸಂಗತಿಗಳನ್ನು ಕಂಡುಕೊಂಡಂತೆ ಮತ್ತು ವಸ್ತುಗಳನ್ನು ಸೃಷ್ಟಿ ಮಾಡಿದಂತೆ ಇಂಗ್ಲಿಷ್ ಭಾಷೆ ಬೆಳೆಯಿತು. ಹಾಗೆಯೇ ಕನ್ನಡ ಭಾಷೆಯು ನಿಸ್ಸಂಕೋಚವಾಗಿ ಹೊಸ ಶಬ್ದಗಳನ್ನು ತಾನೂ ಅಳವಡಿಸಿಕೊಂಡಿತು. ಜ್ಞಾನದ ಎಲ್ಲ ಕ್ಷೇತ್ರಗಳೂ ತಮ್ಮ ಶಬ್ದ ಭಂಡಾರದ ಶ್ರೀಮಂತಿಕೆಗೆ ಇಂಗ್ಲಿಷ್ ಭಾಷೆಗೆ ಬಹುಮಟ್ಟಿಗೆ ಋಣಿಯಾಗಿವೆ. ವಿದ್ಯಾವಂತರು ಮಾತನಾಡುವಾಗ ಹಲೋ, ಥ್ಯಾಂಕ್ಸ್, ಸಾರಿ,

---

*811. **ಶರ್ಮ. ತಿ. ತಾ.**, ನನ್ನ ಜೀವನ ಮತ್ತು ಧ್ಯೇಯ, ಪು. 23*

*812. **ಕುವೆಂಪು**, ಮಲೆಗಳಲ್ಲಿ ಮದುಮಗಳು, ಪು. 153*

*813. **ವೆಂಕಟರಾಮಯ್ಯ. ಸಿ. ಕೆ.**, ಆಳಿದ ಮಹಾಸ್ವಾಮಿಯವರು, ಪು. 103*

*ನೋಡಿ : ನಾಲ್ವಡಿಯವರ ಬಳಿ ಸೇವೆಯಲ್ಲಿದ್ದ ಪುಟ್ಟನಂಜಪ್ಪ ಎಂಬಾತನು ತಾನು ಇಪ್ಪತ್ನಾಲ್ಕು ಘಂಟೆಗಳ ಕಾಲ 'ಕುಮಂದಾರಿ' ಕೆಲಸ (ಕಮ್ಯಾಂಡರ್) ಮಾಡಿದುದಾಗಿ ಹೆಮ್ಮೆಯಿಂದ ಹೇಳುತ್ತಿದ್ದನಂತೆ. ಕುಮಂದಾರಿ ಶಬ್ದವು ಕಮ್ಯಾಂಡರ್ ಎಂಬ ಇಂಗ್ಲಿಷ್ ಭಾಷೆಯ ಪದದ ಅಪಭ್ರಂಶವಾಗಿತ್ತು. ನಾಲ್ವಡಿಯವರು ಇಂತಹ ಶಬ್ದಗಳನ್ನು ಬಾಲ್ಯದಿಂದಲೇ ಕೇಳಿ ಸಂತೋಷಗೊಳ್ಳುತ್ತಿದ್ದರು ಮತ್ತು ಅದನ್ನು ಪ್ರೋತ್ಸಾಹಿಸುತ್ತಿದ್ದರು. ಹೀಗೆ ಕೆಳಹಂತದ ನೌಕರರವರೆಗೂ ಇಂಗ್ಲಿಷ್ ಶಬ್ದಗಳ ಬಳಕೆ ಆರಂಭಗೊಂಡುದನ್ನು ಕಾಣಬಹುದು.*

*814. **ಶರ್ಮ. ತಿ. ತಾ.**, ಪೂರ್ವೋಕ್ತ, ಪು. 113*

ಜಂಟ್ಲ್‌ಮನ್ ಶಬ್ದಗಳು ಶಿಷ್ಟಾಚಾರವನ್ನು ಸೂಚಿಸುವ ಶಬ್ದಗಳಾದವು. ಕನ್ನಡದ ವಾಕ್ಯರಚನೆಯಲ್ಲಿ ಬದಲಾವಣೆಗಳಾದವು. ಉದಾಹರಣೆಗೆ ಹಿಂದೆ 'ರಾಮನೂ, ಕೃಷ್ಣನೂ' ಎಂದು ಬರೆಯುತ್ತಿದ್ದ ಕಡೆ ಇಂಗ್ಲಿಷ್‌ನ ಪ್ರಭಾವದಿಂದಾಗಿ 'ರಾಮ ಮತ್ತು ಕೃಷ್ಣ' ಎಂದು ಬರೆಯಲಾರಂಭವಾಯಿತು. ರೇಡಿಯೋ, ಫ್ಯಾನು, ಕಾಲೇಜು ಇತ್ಯಾದಿಯಾಗಿ ನೇರ ಸ್ವೀಕರಣದಿಂದಾಗಿ ಕೆಲವು ಪದಗಳು ಬಂದರೆ ಟಾರ್ಚ್ಣೆ, ಅಣುಬಾಂಬ್ ಇತ್ಯಾದಿ ಅರ್ಧಮರ್ಧ ಇಂಗ್ಲಿಷ್ ರೂಪಗಳೊಡನೆ ಕೆಲವು ಪದಗಳು ಬಂದವು[815]. ಗ್ರಾಮಾಂತರ ಪ್ರದೇಶಗಳಲ್ಲಿ ಇಂಗ್ಲಿಷ್ ಕಲಿಯದ ಜನರು ಆಡಳಿತ ವ್ಯವಹಾರವೆಲ್ಲ ಆಂಗ್ಲೀಕರಣಗೊಂಡು, ಕಾಯ್ದೆ ಕಾನೂನುಗಳೆಲ್ಲ ಇಂಗ್ಲಿಷ್‌ನಲ್ಲೇ ಬರೆಯಲ್ಪಟ್ಟದ್ದರಿಂದ ಅವುಗಳ ಸೂಕ್ಷ್ಮತೆಯನ್ನರಿಯದೆ ಅನೇಕ ಬಾರಿ ತಪ್ಪುಗಳನ್ನೆಸಗುವುದು ಸಾಮಾನ್ಯ ಸಂಗತಿಯಾಯಿತು. ಉದಾಹರಣೆಗೆ ಮಾಸ್ತಿಯವರು ಮೈಸೂರು ಸಂಸ್ಥಾನಾಡಳಿತದಲ್ಲಿ ರೆವಿನ್ಯೂ ಅಧಿಕಾರಿಯಾಗಿ ಕೋಲಾರದ ಬಳಿಯ ಇತ್ತಣ ಮಲ್ಲಸಂದ್ರ ಗ್ರಾಮಕ್ಕೆ ಹೋಗಿ ಜಮಾಬಂದಿ ಪರಿವೀಕ್ಷಣೆ ನಡೆಸುತ್ತಿದ್ದಾಗ ಆ ಗ್ರಾಮದ ರೈತನೊಬ್ಬ ಮಾಡಿದ್ದ ತಪ್ಪಿಗೆ ಸಂಬಂಧಿಸಿದಂತೆ ವಿಚಾರಣೆ ಮಾಡುವಾಗ ರೈತನು ಮುಗ್ಧನಾಗಿ "ನಿಮ್ಮ ರೂಲ್ಸು ಗೀಲ್ಸು ಎಲ್ಲಾ ಇಂಗ್ಲಿಷಿನಲ್ಲಿದೆ ಸ್ವಾಮಿ; ನಾವೇನು ತಿಳ್ಕೋಳ್ಳೊದು? ಎಂದು ಪ್ರಶ್ನಿಸಿದ"[816]. ಹೀಗೆ ಅನ್ಯದೇಶೀಯ ಭಾಷೆ ಇಂಗ್ಲಿಷ್ ಜನಸಾಮಾನ್ಯರನ್ನು ಅದರಲ್ಲೂ ಗ್ರಾಮೀಣ ಜನರನ್ನು ಅಧೀರರನ್ನಾಗಿಸಿತ್ತು.

ಮೈಸೂರು ಸಂಸ್ಥಾನದಲ್ಲಿ ಇಂಗ್ಲಿಷ್ ಭಾಷೆಗೆ ಎಂತಹ ಪ್ರಾಮುಖ್ಯತೆ ಸಿಕ್ಕಿತೆಂದರೆ "ಆಳುವವರ ಭಾಷೆಯ ವಿಚಾರದಲ್ಲಿ ಅತ್ಯಂತ ದಾಸ್ಯದ ಮನೋಧರ್ಮ ರೂಢಮೂಲವಾಗಿ ಬಿಟ್ಟಿತ್ತು! ಐರೋಪ್ಯ ವೇಷಭೂಷಣ ಹಾಕಿಕೊಂಡ ಎಂತಹ ಬೆಪ್ಪನನ್ನು ಮೇಧಾವಿ ಎಂದು ಗೌರವಿಸಿದಂತೆ, ಇಂಗ್ಲಿಷ್ ಭಾಷೆಯಲ್ಲಿ ಮಾತನಾಡುವವನನ್ನು ಅದ್ಭುತ ಜ್ಞಾನಿ ಎಂದು ಶ್ಲಾಘಿಸುತ್ತಿದ್ದರು"[817] ಇಂಗ್ಲಿಷ್ ಅಧ್ಯಾಪಕರು ಇಂಗ್ಲಿಷ್ ಪಾಠ ಮಾಡುವಾಗ ಕನ್ನಡದ ಪ್ರಯೋಗ ನಿಷಿದ್ಧವಾಗಿತ್ತು. ಹಾಗೇನಾದರೂ ಕನ್ನಡದಲ್ಲಿ ಮಾತನಾಡಿದರೆ ಬೋಧನೆಯ ಪವಿತ್ರತೆಗೇ ಭಂಗವೆಂದು ಭಾವಿಸಲಾಗುತ್ತಿತ್ತು. ಕನ್ನಡದಲ್ಲಿ ಮಾತನಾಡುವುದು ಅವಮಾನಕರವೆಂದೂ ಸರ್ವರೂ ಒಪ್ಪಿಕೊಂಡ ನಿರ್ಣಾಯಕ ವಿಷಯವಾಗಿತ್ತು[818]. ಸಾಮಾನ್ಯವಾಗಿ ಮೊದಲನೆಯ ಪೀರಿಯಡ್ಡುಗಳೆಲ್ಲ ರಾಜಭಾಷೆಯಾದ ಇಂಗ್ಲಿಷಿಗೆ ಮೀಸಲಾಗಿರುತ್ತಿದ್ದವು. ಕನ್ನಡಕ್ಕೆ ಕೊನೆ ಕೊನೆಯ ಗಂಟೆಗಳನ್ನು ಮೀಸಲಿರಿಸಿದ್ದು ಕನ್ನಡ ಕಾಟಾಚಾರ ಮಾತ್ರದ ವಿಷಯವೆಂದು ಪರಿಗಣಿಸಲ್ಪಟ್ಟಿತ್ತು[819].

---

*815. **ಸೂರ್ಯನಾಥ್ ಕಾಮತ್., (ಸಂ).,** ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ - 3, ಪು. 385*

*816. **ಮಾಸ್ತಿ ವೆಂಕಟೇಶ ಅಯ್ಯಂಗಾರ್,** ಭಾವ - 2 (ಆತ್ಮ ಕಥೆ), ಪು. 38*

*817. **ಕುವೆಂಪು.,** ನೆನಪಿನ ದೋಣಿಯಲ್ಲಿ, ಪು. 136-137*

*818. **ಕುವೆಂಪು.,** ನೆನಪಿನ ದೋಣಿಯಲ್ಲಿ, ಪು. 108*

*819. **ಅದೇ.,** ಪು. 189*

ಹೀಗೆ ಪ್ರೌಢಶಿಕ್ಷಣದ ಮಟ್ಟದಲ್ಲಿ ಹಿಯ್ಯಾಳಿಕೆಗೆ ಗುರಿಯಾಗಿದ್ದ ಕನ್ನಡ ಭಾಷಾಶಿಕ್ಷಣವು ಪ್ರಾಥಮಿಕ ಮಟ್ಟದಲ್ಲಿ ಹೇಗಿತ್ತು ಎಂಬುದನ್ನು ಕುವೆಂಪುರವರು ಹೀಗೆ ವರ್ಣಿಸಿದ್ದಾರೆ. "ಆಗ ಕನ್ನಡವು ಸ್ಕೂಲುಗಳಲ್ಲಿ ವಿದ್ಯಾರ್ಥಿಗಳು ಅವಶ್ಯವಾಗಿ ಸಹಿಸಬೇಕಾಗಿದ್ದ ಒಂದು ಭಾಷಾವಸ್ತುವಾಗಿತ್ತು ಅಷ್ಟೆ. ಅದನ್ನು ಪಾಠ ಹೇಳುತ್ತಿದ್ದ ಉಪಾಧ್ಯಾಯರು ವೇಷಭೂಷಣಗಳಲ್ಲಿಯಾಗಲಿ ಪಾಠ ಹೇಳುತ್ತಿದ್ದ ರೀತಿಯಲ್ಲಾಗಲಿ ತರುಣ ಹೃದಯಗಳಿಗೆ ಯಾವ ನೂತನ ದೃಷ್ಟಿಯನ್ನು ಕೊಡಬಲ್ಲವಾಗಿರಲಿಲ್ಲ. ಅವರ ಪ್ರವಚನದಲ್ಲಿ ಭಾವಪುಷ್ಟಿಯೂ ಇರುತ್ತಿರಲಿಲ್ಲ, ಬುದ್ಧಿಪುಷ್ಟಿಯೂ ಇರುತ್ತಿರಲಿಲ್ಲ. ತರಗತಿಗಳಲ್ಲಿ ಬರಿಯ ಗಲಾಟೆ, ಹಾಸ್ಯ ಪರಿಹಾಸ್ಯ, ಉಪಾಧ್ಯಾಯರಿಗೆ ಕಿರುಕುಳ! ಕನ್ನಡ ಓದಿದರೇನು? ಬಿಟ್ಟರೇನು? ಎಂಬ ತಾತ್ಸಾರ. ಕನ್ನಡದಲ್ಲಿ ಫೆಯಿಲ್ಲಾದರೂ ಪಾಸು ಮಾಡುತ್ತಾರೆ ಎಂಬ ಮೊಂಡು ಕೆಚ್ಚು! ಪಠ್ಯಪುಸ್ತಕಗಳನ್ನು ಕೊಂಡುಕೊಳ್ಳುವಾಗಲೂ ಇಂಗ್ಲಿಷ್ ಪುಸ್ತಕಗಳಿಗೇ ಪ್ರಧಾನಮಾನ್ಯತೆ. ಕನ್ನಡ ಪುಸ್ತಕಗಳನ್ನು ಆಮೇಲೆ ಕೊಂಡರಾಯಿತು. ದುಡ್ಡು ಉಳಿದರೆ! ಕೊಂಡುಕೊಳ್ಳದಿದ್ದರೂ ಚಿಂತೆಯಿಲ್ಲ. ಯಾರ ಹತ್ತಿರವಾದರೂ ಇದ್ದ ಪುಸ್ತಕ ಒಂದು ಚೂರು ನೋಡಿದರಾಯಿತು. ಆ ಪುಸ್ತಕಗಳಲ್ಲಿ ಇರುವುದೂ ಮಹಾ ಅಷ್ಟಕ್ಕಷ್ಟೇ! ಒಂದು ವೇಳೆ ದುಡ್ಡು ಉಳಿದರೂ ಕಾಫಿ ತಿಂಡಿಗೆ ಖರ್ಚು ಮಾಡುವ ಬುದ್ಧಿ! ಹಾಳು ಕನ್ನಡದ ಪುಸ್ತಕಕ್ಕೆ ಯಾಕೆ ದುಡ್ಡು ದಂಡ ಮಾಡಬೇಕು? ಚೆನ್ನಾಗಿ ಅಚ್ಚು ಮಾಡಿದ್ದು ಒಳ್ಳೆಯ ಸೊಗಸಾದ ರಟ್ಟು ಹಾಕಿದ್ದು, ಆಕರ್ಷಕವಾಗಿ, ನಮ್ಮ ಗೌರವವನ್ನು ಸೂರೆಗೊಳ್ಳುವಂತಿದ್ದ ಇಂಗ್ಲಿಷ್ ಪಠ್ಯಪುಸ್ತಕಗಳನ್ನು ಮೊದಲು ಕೊಂಡದ್ದಾಯಿತು"[820] ಹೀಗೆ ಶಿಕ್ಷಣ ವ್ಯವಸ್ಥೆಯಲ್ಲಿ ಅಲಕ್ಷ್ಯಕ್ಕೀಡಾಗಿದ್ದ ಕನ್ನಡವು ಅನಾಗರಿಕರ, ಗ್ರಾಮೀಣರ ಭಾಷೆಯಂತಾಗಿತ್ತು.

ಹೀಗೆ ಇಂಗ್ಲಿಷ್ ಎಂಬ ಪಾಶ್ಚಾತ್ಯ ಭಾಷೆ ಮೈಸೂರು ಸಮಾಜದ ವಿವಿಧ ಜನವರ್ಗಗಳ ಮೇಲೆ ವಿಭಿನ್ನವಾದ ಪ್ರಭಾವವನ್ನು ಬೀರಿತು. ಇಂಗ್ಲಿಷ್ ಭಾಷೆ ಮತ್ತು ಶಿಕ್ಷಣ ಪಡೆದ ಹಲವಾರು ವಿದ್ಯಾವಂತರಲ್ಲೇ ಇಂಗ್ಲಿಷ್ ಬಗ್ಗೆ ವೈವಿಧ್ಯಮಯವಾದ ಮನಃಸ್ಥಿತಿ ರೂಪುಗೊಳ್ಳುವಂತೆ ಮಾಡಿತು. ಮೊದಲನೆಯದಾಗಿ "ಇಂಗ್ಲಿಷ್ ನಮಗೆ ಇಷ್ಟವೋ ಅನಿಷ್ಟವೋ, ಪ್ರಪಂಚದ ಜ್ಞಾನ ಭಂಡಾರಕ್ಕೆಲ್ಲ ಇಂದು ಕೀಲಿಕೈಯಾಗಿ ಪರಿಣಮಿಸಿದೆ"[821] ಎಂಬ ನಂಬಿಕೆ ಉಳ್ಳವರು. ಎರಡನೆಯದಾಗಿ "ಇಂಡಿಯಾ ದೇಶವನ್ನು ಶೋಷಣೆ ಮಾಡಿ ದಬ್ಬಾಳಿಕೆ ನಡೆಸುತ್ತಿದ್ದ ಇಂಗ್ಲಿಷರ ಮೇಲೆ ನನಗೆ ಎಷ್ಟು ದ್ವೇಷವಿದ್ದಿತೊ ಅದಕ್ಕೆ ದ್ವಿಗುಣಿತ ತ್ರಿಗುಣಿತವಾಗಿ ಇಂಗ್ಲಿಷ್ ಭಾಷೆಯ ಮೇಲೆ ನನಗೆ ಗೌರವ ಮಮತೆಗಳಿದ್ದುವು..... ಇಂಗ್ಲಿಷ್ ಜನವೆಂತೊ ಅಂತೆ ಇಂಗ್ಲಿಷ್ ಮಾತನಾಡುವವರೂ 'ಪೂಜ್ಯ'ರಾಗಿ ಬಿಟ್ಟರು. 'ದೊರೆ'ಗಳಾದರು. 'ಸಾಹೇಬ'ರೂ ಆದರು. ಆ ಕಾರಣದಿಂದಲೂ ಆ ಭಾಷೆ ನನ್ನಂತಹ ಎಳೆಯರ ಮೇಲೆ ತನ್ನ ಪ್ರಭುತ್ವಾಧಿಕಾರ ಸ್ಥಾಪಿಸಿ, ಪೂಜ್ಯ ಸ್ಥಾನವನ್ನು

---

*820. ಅದೇ., ಪು. 93-94*

*821. ಮೂರ್ತಿರಾವ್ ಎ. ಎನ್., ಚಿತ್ರಗಳು ಪತ್ರಗಳು, ಡಿ.ವಿ.ಕೆ. ಮೂರ್ತಿ, ಮೈಸೂರು, 2001. ಪು. 85*

ಗಿಟ್ಟಿಸಿಕೊಂಡು ಬಿಟ್ಟಿತು!"[822] ಎನ್ನುತ್ತಾ ಆ ಭಾಷೆಯ ಬಗ್ಗೆ ಗೌರವ, ಪ್ರೀತಿ ಬೆಳೆಸಿಕೊಂಡವರು. ಮೂರನೆಯದಾಗಿ ಆಗ ವಿದ್ಯೆ ಕಲಿತ ಜನಕ್ಕೆ ಇಂಗ್ಲಿಷು ತುಂಬಾ ಮೋಹಕವಾಗಿತ್ತು. ಅವರ ಮನಸ್ಸಿನಲ್ಲಿ ಉದಯಿಸಿದ ಭಾವನೆಗಳು ಇಂಗ್ಲಿಷ್‌ನ ಸಂಪರ್ಕದಿಂದ ಬಂದವಾಗಿದ್ದವು. ಆ ಭಾವನೆಗಳಿಗೆ ಇಂಗ್ಲಿಷ್ ಒಪ್ಪುವಷ್ಟು ಚೆನ್ನಾಗಿ ಕನ್ನಡ ಒಗ್ಗಿಬರಲಾರದು ಎಂಬ ಅಭಿಪ್ರಾಯ ಹೊಂದಿದವರು. ಇಂಗ್ಲಿಷ್ "ಪದ್ಯ ರಚನೆ ಮಾಡುವ ಹುಚ್ಚು ಬಹುಮಂದಿಗೆ ಹಿಡಿದಿತ್ತು. ಆ ಹುಚ್ಚು ಹೇಗೋ ನನಗೂ ಅಂಟಿತು"[823] ಎನ್ನುವ ಮೂಲಕ ಸ್ಥಳೀಯ ಜನರಿಗೆ ತಾವು ಓದಿದ ಇಂಗ್ಲಿಷ್ ಕಾವ್ಯ, ನಾಟಕ, ಸಾಹಿತ್ಯಗಳಲ್ಲಿನ ಮುಖ್ಯಾಂಶಗಳನ್ನು ದೇಶೀಯ ಭಾಷಾ ಸಾಹಿತ್ಯದಲ್ಲೆ ಬರೆದು ಸಾಮಾಜಿಕ ಋಣ ತೀರಿಸಿದವರು. ನಾಲ್ಕನೆಯದಾಗಿ ಇಂಗ್ಲಿಷ್ ಭಾಷೆ, ಶಿಕ್ಷಣದ ಬಗ್ಗೆ ಅಪಾರ ವ್ಯಾಮೋಹ ಬೆಳೆಸಿಕೊಂಡು ತಮ್ಮ ಪ್ರಾದೇಶಿಕ, ಮಾತೃಭಾಷೆಯಾದ ಕನ್ನಡದ ಬಗ್ಗೆ ತಾತ್ಸಾರ ಹೊಂದಿದ್ದವರು. "ಅವರು ಕನ್ನಡವೂ ಒಂದು ಭಾಷೆಯೇ?" ಎಂದು ಪ್ರಶ್ನಿಸಿ ತಿರಸ್ಕಾರ ಸೂಚಿಸಿದ್ದೂ ಉಂಟು. ವಿಶ್ವವಿದ್ಯಾನಿಲಯದ ಪದವೀಧರರಾಗಿ ದೊಡ್ಡ ದೊಡ್ಡ ಹುದ್ದೆಗಳಲ್ಲಿದ್ದ ಅವರು ಸಾರ್ವಜನಿಕ ಸಭೆಗಳಲ್ಲಿ ತಾವು ಕನ್ನಡದಲ್ಲಿ ಮಾತನಾಡುವುದಿಲ್ಲವೆಂದು ನಿರಾಕರಿಸಿದುದಲ್ಲದೆ ಅದು ತಮ್ಮ ಸ್ಥಾನಮಾನಗಳಿಗೆ ಸಲ್ಲದ ಹೀನ ಕಾರ್ಯವೆಂದು ಧ್ವನಿ ಬರುವಂತೆ ವ್ಯವಸ್ಥಾಪಕರಿಗೆ ತಿಳಿಸಿದ್ದ ನಿದರ್ಶನಗಳಿದ್ದವು[824]. ಕನ್ನಡದ ಕಣ್ವ, ಕನ್ನಡದ ಆಚಾರ್ಯ, ಕನ್ನಡದ ರಕ್ಷಾಮಣಿ ಎಂಬ ಬಿರುದುಗಳಿಸಿದ್ದ ಬಿ.ಎಂ. ಶ್ರೀಕಂಠಯ್ಯನವರನ್ನು ಕುರಿತಂತೆ ಕುವೆಂಪುರವರು "ವೇಷಭೂಷಣ ಮಾತುಕತೆ ಎಲ್ಲದರಲ್ಲಿಯೂ ಭಾರತೀಯತ್ವಕ್ಕಿಂತಲೂ ಆಂಗ್ಲೇಯತ್ವವೆ ಅವರ ವ್ಯಕ್ತಿತ್ವದ ಹೊರಭಂಗಿಯಾಗಿತ್ತು. ಸಾರ್ವಜನಿಕ ವೇದಿಕೆಯಲ್ಲಾಗಲಿ ಕನ್ನಡ ಸಂಘ ಸಂಸ್ಥೆಗಳಾಗಲಿ ಕಡೆಗೆ ಕಾಲೇಜು ವಿದ್ಯಾರ್ಥಿಗಳೊಡನೆಯೆ ಆಗಲಿ ಕನ್ನಡದಲ್ಲಿ ಮಾತನಾಡಿ ವ್ಯವಹರಿಸುವುದು ತಮ್ಮ ಅಂತಸ್ತಿಗೆ ತಕ್ಕುದಲ್ಲವೆಂಬಂತೆ ವರ್ತಿಸುತ್ತಿದ್ದರು"[825] ಎಂದಿದ್ದಾರೆ. ಐದನೆಯದಾಗಿ ಇಂಗ್ಲಿಷ್ ಭಾಷೆಯ ಶಿಕ್ಷಣದ ಮೂಲಕವೇ ಪಾಶ್ಚಾತ್ಯ ಆಡಳಿತದ ದಬ್ಬಾಳಿಕೆಯನ್ನು ಮನಗಂಡು ರಾಷ್ಟ್ರಾಭಿಮಾನ, ಪ್ರಾದೇಶಿಕಾಭಿಮಾನ ಮತ್ತು ಭಾಷಾಭಿಮಾನವನ್ನು ಬೆಳೆಸಿಕೊಂಡು ಇಂಗ್ಲಿಷ್ ಭಾಷೆಯ ಪ್ರಭಾವದಿಂದ ಸಂಪೂರ್ಣ ಜರ್ಝರಿತವಾಗುತ್ತಾ ಹೋದ ಕನ್ನಡ ಭಾಷೆಯನ್ನು ಉಳಿಸಿ ಬೆಳೆಸಲು ಸಂಘ, ಸಂಸ್ಥೆಗಳನ್ನು ಕಟ್ಟಿಕೊಂಡು ಹೋರಾಡಲು ಮುಂದಾದವರು.

---

*822. **ಕುವೆಂಪು.,** ನೆನಪಿನ ದೋಣಿಯಲ್ಲಿ, ಪು. 129-130*

*823. **ಗುಂಡಪ್ಪ ಡಿ.ವಿ.,** ಜ್ಞಾಪಕ ಚಿತ್ರಶಾಲೆ, ಸಂ. 1, ಪು. 18-19*

*824. **ವೆಂಕಟರಾಮಯ್ಯ ಸಿ.ಕೆ.,** ಕೆಲವು ನೆನಪುಗಳು, ಪ್ರಬುದ್ಧ ಕರ್ನಾಟಕ, ಚಿನ್ನದ ಸಂಚಿಕೆ, ಸಾಹಿತ್ಯ ಸಂಪುಟ, ಮೈಸೂರು, 1969, ಪು. 28*

*825. **ಕುವೆಂಪು.,** ನೆನಪಿನ ದೋಣಿಯಲ್ಲಿ, ಪು. 337-338*

ಈ ವರ್ಗದ ಕೆಲವರು ಸ್ವರಾಜ್ಯದ ಹಿನ್ನೆಲೆಯಲ್ಲಿ ಬ್ರಿಟಿಷರು ಸೋತ ರಾಜ್ಯಗಳ ಮೇಲೆ ತಮ್ಮ ವೇಷಭಾಷೆಗಳ ಮುದ್ರೆಯನ್ನು ಒತ್ತುವ ಮೂಲಕ ಸಾಂಸ್ಕೃತಿಕ ಸಾಮ್ರಾಜ್ಯಶಾಹಿ ನೀತಿಯನ್ನು ಅನುಸರಿಸುತ್ತಿದ್ದಾರೆಂದು ಕಿಡಿಕಾರುತ್ತಿದ್ದರು. ನಿವೃತ್ತ ನ್ಯಾಯಾಧೀಶರಾದ ಕೆ. ಎಸ್. ಚಂದ್ರಶೇಖರಯ್ಯನವರು ಪರದೇಶ ಪ್ರಭಾವದಿಂದಾಗಿ ದೇಶೀಯ ಭಾಷೆ ಮತ್ತು ಸಂಸ್ಕೃತಿಗಳು ಹೇಗೆ ವಿನಾಶಕ್ಕೆ ಕಾರಣವಾದವು ಎಂದು ತಮ್ಮ ಭಾಷಣದಲ್ಲಿ ಹೀಗೆ ಹೇಳಿದ್ದಾರೆ "ವಿದೇಶ ರಚನೆ, ವಿದೇಶ ಸಂಪ್ರದಾಯ ಮತ್ತು ವಿದೇಶ ಭಾವೋದ್ರೇಕಪೂರಿತವಾದ ಪರಭಾಷೆಯನ್ನು ಶಾಲೆಗಳಲ್ಲಿ ಶಿಕ್ಷಣಕ್ಕಾಗಿ ಉಪಯೋಗಿಸಿ, ಪ್ರೌಢಶಿಕ್ಷಣವನ್ನೆಲ್ಲ ಆ ಪರಭಾಷೆಯ ಮೂಲಕವೇ ಕೊಡಲು ಮೊದಲು ಮಾಡಿದ ದಿನದಿಂದ ಸರ್ವನಾಶಕ್ಕೆ ಮೊದಲಾಯಿತು. ಅದರಿಂದಾದ ಅನಾಹುತಗಳಲ್ಲೆಲ್ಲಾ ದೇಶಭಾಷೆಗಳು ಸಂಪೂರ್ಣವಾಗಿ ಹಾಳಾದುದೊಂದು. ಆಂಗ್ಲ ವಿದ್ಯಾಪಾರಂಗತರಿಗೂ ಆಂಗ್ಲ ವಾಸನಾರಹಿತರಾದ ಸಾಮಾನ್ಯ ಜನರಿಗೂ ಸೌಹಾರ್ದ ಎಲ್ಲದರಲ್ಲೂ ಎಣ್ಣೆ ಸೀಗೆಕಾಯಿಯಂತಹ ಸಂಬಂಧ ಬಂದೊದಗಿತು. ಅಲ್ಲದೆ ಸಾಹಿತ್ಯ, ಸಂಸ್ಕೃತಿ ಬೆಳವಣಿಗೆಗೆ ಅಡ್ಡಿಗಳು ಬಂದೊದಗಿದವು. ಈ ವ್ಯಾಧಿತ್ವವನ್ನು ನಿಗ್ರಹಿಸಲು ರಾಜ ಚಿಕಿತ್ಸೆಯೆಂದರೆ ಕನ್ನಡ, ಭಾಷೆ, ಸಂಸ್ಕೃತಿಗೆ ಪೋಷಣೆ ನೀಡುವುದು"[826]. ಹೀಗೆ ವಿದ್ಯಾವಂತ ವರ್ಗದಲ್ಲಿ ಕನ್ನಡದ ಬಗ್ಗೆ ಕಾಳಜಿ ಹೆಚ್ಚಿತು ಹಾಗೂ ಕರ್ನಾಟಕದ ಏಕೀಕರಣದ ಕರೆ ಎಲ್ಲೆಡೆ ಕೇಳಿ ಬರತೊಡಗಿತು.

ಹೀಗೆ ಕನ್ನಡಿಗರೆಲ್ಲ ಒಂದಾಗಬೇಕೆಂಬ ಕರ್ನಾಟಕ ಏಕೀಕರಣ ಚಳವಳಿಯು ವಿವಿಧ ಆಡಳಿತ ಘಟಕಗಳಲ್ಲಿ ಹಂಚಿಹೋಗಿದ್ದವರಿಗೆಲ್ಲ ಪ್ರೇರಕ ಕೇಂದ್ರ ಮತ್ತು ಸ್ಫೂರ್ತಿಯುತ ಶಕ್ತಿ ಮೈಸೂರು ಮತ್ತು ಅಲ್ಲಿನ ಮಹಾರಾಜ ನಾಲ್ವಡಿ ಕೃಷ್ಣರಾಜರಾಗಿದ್ದರು. ಮೈಸೂರು ರಾಜ್ಯದಿಂದ ಹೊರಗಿದ್ದ ಕನ್ನಡಿಗರೂ ನಾಲ್ವಡಿಯವರ ಬಗ್ಗೆ ರಾಜಭಕ್ತಿ ಹೊಂದಿದ್ದರು. ಅವರೆಲ್ಲ ನಾಲ್ವಡಿ ಕೃಷ್ಣರಾಜರನ್ನು 'ಕನ್ನಡ ರಾಜ್ಯ ರಮಾರಮಣ' ಮತ್ತು 'ಕರ್ನಾಟಕ ಏಕೀಕರಣ ಭಾವನೆಯ ರೂಪನಿರ್ಮಾಣ ರಾಶಿಯಾತ' ಎಂದು ಭಾವಿಸಿದ್ದರು[827]. ನಾಲ್ವಡಿಯವರೂ ಸಹ ದೇಶೀಯ ಭಾಷೆ ಕನ್ನಡದ ಅಧ್ಯಯನಕ್ಕೆ ವಿಶ್ವವಿದ್ಯಾನಿಲಯದಲ್ಲಿ ಆದ್ಯತೆ ನೀಡುವುದಾಗಿ ಮತ್ತು ಪ್ರಕಟಣಾಂಗದ ಮೂಲಕ ಉತ್ತಮ ಕನ್ನಡ ಕೃತಿಗಳ ಪ್ರಕಟಣೆಗೆ ಪ್ರೋತ್ಸಾಹ ನೀಡಿದರು[828]. ಕನ್ನಡ ಭಾಷೆಯ ಬೆಳವಣಿಗೆಗೆ ನೆರವಾಗಲು ಸರ್ಕಾರದ ಬೆಂಬಲದಿಂದ 1915ರಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತನ್ನು ರಚಿಸಲಾಯಿತು. 1916ರಿಂದ ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆ ಎಂಬ ನಿಯತಕಾಲಿಕೆಯನ್ನು ಪ್ರಕಟಿಸಲಾರಂಭಿಸಲಾಯಿತು. ಒಂದು ಕಾಲದಲ್ಲಿ ಕೇವಲ ಇಂಗ್ಲಿಷ್ ಭಕ್ತರಂತೆ

---

*826. **ವಿಶ್ವಕರ್ಣಾಟಕ**, ದಿನಪತ್ರಿಕೆ, 24-7-1927*

*827. **ವಿಶ್ವಕರ್ಣಾಟಕ**, ದಿನಪತ್ರಿಕೆ, 24-7-1927*

*828. **ಸ್ಪೀಚಸ್ ಆಫ್ ಹಿಸ್ ಹೈನೆಸ್.**, ಪು. 157*

ಇದ್ದು ಆನಂತರ ಕನ್ನಡ ಸೇವಾ ದೀಕ್ಷೆಯನ್ನು ಕೈಗೊಂಡ ಬಿ.ಎಂ.ಶ್ರೀಯವರು ಕನ್ನಡ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳನ್ನು ಪ್ರಸ್ತಾಪಿಸುತ್ತಾ "ಕನ್ನಡ ಬಹಳ ಶೋಚನೀಯವಾದ ಸ್ಥಿತಿಗೆ ಇಳಿದಿದೆ; ಅದಕ್ಕೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನವನ್ನು ದೊರಕಿಸಿಕೊಳ್ಳಬೇಕು; ಅದರ ಸಾಹಿತ್ಯಸಂಪತ್ತನ್ನು ಹೆಚ್ಚಿಸಬೇಕು;" ಎಂದು ಹೇಳುವ ಮೂಲಕ ದೇಶೀಯ ಭಾಷೆ ಕನ್ನಡದ ಕಲಿಕೆಗೆ ಪ್ರೋತ್ಸಾಹ ನೀಡಿದರು[829]. ಹೀಗೆ ಬಿ.ಎಂ.ಶ್ರೀ., ಕುವೆಂಪು, ಮುಂತಾದ ಕನ್ನಡ ಸಾಹಿತಿಗಳು ತಮ್ಮ ಇಂಗ್ಲಿಷ್ ಮೋಹವನ್ನು ತ್ಯಜಿಸಿ ಹೊಸಗನ್ನಡ ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿ ಇಂಗ್ಲಿಷ್ ಗಳಿಸಿದ ಸ್ಥಾನವನ್ನು ಕನ್ನಡಕ್ಕೆ ಮರಳಿ ದೊರಕಿಸಿ ಕೊಡಲು ಶ್ರಮಿಸಿದರು. ಪ್ರಿನ್ಸಿಪಾಲರಾಗಿದ್ದ ಪಾಶ್ಚಿಮಾತ್ಯ ವಿದ್ವಾಂಸ ಹ್ಯಾಂಪ್ಸನ್‌ರಂತಹವರು "ಅರಿಯದ ಭಾಷೆಯ ಮುಖಾಂತರ ಜ್ಞಾನವನ್ನು ಚಿಕ್ಕಮಕ್ಕಳ ತಲೆಯಲ್ಲಿ ತುರುಕಬೇಕೆಂದು ಯತ್ನ ಮಾಡುವುದು ಪಾಪ"[830] ಹೀಗೆ ಪಾಶ್ಚಿಮಾತ್ಯ ಸಂಸ್ಕೃತಿ ಮತ್ತು ಅದರ ಒಂದು ಅಂಶವಾದ ಇಂಗ್ಲಿಷ್ ಭಾಷೆಯ ಪ್ರಭಾವದಿಂದುಂಟಾದ ಅನೇಕ ಬೆಳವಣಿಗೆಗಳು ಅಂತಿಮವಾಗಿ ಕನ್ನಡದ ಜನರನ್ನು ಒಂದುಗೂಡಿಸುವಂತಾಯಿತು. ಹೀಗೆ ಮೇಲ್ಕಂಡಂತೆ ದೇಶೀಯ ಭಾಷೆ ಕನ್ನಡದ ಮೇಲೆ ಇಂಗ್ಲೀಷ್ ಭಾಷೆಯ ಪ್ರಭಾವವನ್ನು ಸಮೀಕ್ಷಿಸಿದ ನಂತರ ಮುಂದಿನ ಸಾಹಿತ್ಯ ಎಂಬ ಶೀರ್ಷಿಕೆಯಲ್ಲಿ ಮೈಸೂರು ಸಂಸ್ಥಾನದ ಸಾಹಿತ್ಯ ವಲಯದಲ್ಲಿ ಇಂಗ್ಲಿಷ್ ಸಾಹಿತ್ಯವು ಎಂತಹ ಪರಿವರ್ತನೆಯನ್ನು ತಂದಿತೆಂಬುದನ್ನು ಅಧ್ಯಯನ ಮಾಡಲಾಗುವುದು.

### *ii)* ಸಾಹಿತ್ಯ

"ಅನುಭವದ ಸುಂದರವಾದ ಅಭಿವ್ಯಕ್ತಿಯೇ ಸಾಹಿತ್ಯ" ಎಂಬುದು ಸಾಹಿತ್ಯದ ಬಗೆಗಿನ ಪ್ರಮುಖ ವ್ಯಾಖ್ಯಾನ. ವ್ಯಕ್ತಿಯ ಅನುಭವಗಳು ಆತ ಜೀವಿಸುವ ಸಮಾಜದಲ್ಲಿ, ಸುತ್ತಲಿನ ವಾತಾವರಣ, ಸನ್ನಿವೇಶಗಳಿಂದ ರೂಪುಗೊಳ್ಳುತ್ತವೆ. ಅನುಭವಗಳು ಆಯಾ ಕಾಲದ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಅಂಶಗಳಿಂದಲೂ ಪ್ರೇರಿತವಾಗುತ್ತವೆ. ಹೀಗೆ ವ್ಯಕ್ತಿ ಗಳಿಸಿದ ಅನುಭವಗಳಿಗೆ ತನ್ನ ಕಲ್ಪನೆಯನ್ನು ಹೊಂದಿಸಿ ಅಭಿವ್ಯಕ್ತಗೊಳಿಸುವ ಮೂಲಕ ಸಾಹಿತ್ಯ ಸೃಷ್ಟಿಯಾಗುತ್ತದೆ. ಬದಲಾವಣೆ ಜಗದ ನಿಯಮ ಎಂಬಂತೆ ಸಾಹಿತ್ಯವೂ ಕಾಲಕಾಲಕ್ಕೆ ಹೊಸ ರೂಪ, ಭಾವ, ಚಿಂತನೆಗಳನ್ನು ಅಳವಡಿಸಿಕೊಳ್ಳುತ್ತಾ ಬದಲಾವಣೆಯನ್ನು ಕಾಣುತ್ತದೆ. ಕನ್ನಡ ಸಾಹಿತ್ಯವೂ ಸಹ ಇತಿಹಾಸದ ಆರಂಭದ ಕಾಲದಿಂದಲೂ ಹಲವು ಭಾಷೆಗಳ ಸಂಪರ್ಕದಿಂದ ಪ್ರಭಾವಕ್ಕೊಳಗಾಗುತ್ತಾ ಬಂದಿರುವುದನ್ನು ಕಾಣಬಹುದು. ಈ ಶೀರ್ಷಿಕೆಯಡಿಯಲ್ಲಿ ಕನ್ನಡ ಸಾಹಿತ್ಯದ ಮೇಲೆ ಪಾಶ್ಚಿಮಾತ್ಯ ಪ್ರಭಾವವನ್ನು ಸಮೀಕ್ಷಿಸುವ ಮೊದಲು ಇತಿಹಾಸದ ವಿವಿಧ ಹಂತಗಳಲ್ಲಿ

---

829. *ರಾಮೇಗೌಡ ಮತ್ತು ಪ್ರಧಾನ್ ಗುರುದತ್ (ಸಂ)., ಬಿ. ಎಂ. ಶ್ರೀ ನೂರರ ನೆನಪು., ಮೈಸೂರು, 1983, ಪು. 211*

830. *ವಿಶ್ವಕರ್ನಾಟಕ, ದಿನಪತ್ರಿಕೆ, ದಿನಾಂಕ : 6-2-1927*

ಕನ್ನಡ ಸಾಹಿತ್ಯವು ಬೇರೆ ಸಾಹಿತ್ಯಗಳಿಂದ ಹೇಗೆ ಪ್ರಭಾವಿತವಾಗಿ ಬದಲಾವಣೆ ಕಂಡಿತು ಎಂಬುದನ್ನು ತಿಳಿದುಕೊಳ್ಳುವುದು ಅವಶ್ಯಕ.

ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಆರಂಭದ ಪ್ರೇರಕ ಶಕ್ತಿ. ಪ್ರಾಚೀನ ಕಾಲದಲ್ಲಿ ಸಂಸ್ಕೃತವು ಪ್ರಭಾವಿ ಭಾಷೆಯಾಗಿದ್ದು ತನ್ನ ಅನೇಕ ವಿಶಿಷ್ಟವಾದ ಸಂಸ್ಕೃತಿಯ ಅಂಶಗಳನ್ನು ಕನ್ನಡ ಸಾಹಿತ್ಯವು ಅಳವಡಿಸಿಕೊಳ್ಳುವಂತೆ ಮಾಡಿತು. ಯಾವುದೇ ಸಾಹಿತ್ಯವು ಹೊಸ ಸಂಪರ್ಕ, ಸಂಬಂಧಗಳಿಂದಲೇ ಬೆಳೆಯುತ್ತಾ ಹೋಗುವುದು. ಕನ್ನಡ ಸಾಹಿತ್ಯವು ತನ್ನ ಬೆಳವಣಿಗೆಯ ಇತಿಹಾಸದಲ್ಲಿ ಮೂರು ನಾಲ್ಕು ಘಟ್ಟಗಳನ್ನು ಅಥವಾ ಚಳವಳಿಗಳನ್ನು ಕಂಡಿತು. ಮೊದಲನೆಯ ಘಟ್ಟದಲ್ಲಿ ಜೈನ ಕವಿಗಳ ನೇತೃತ್ವದಲ್ಲಿ ಪ್ರೌಢವಾದ ಹಳಗನ್ನಡ ಶೈಲಿಯಲ್ಲಿ ಚಂಪುಗಳ ರಚನೆಯಾಯಿತು. ಅನಂತರ ವಚನ ಚಳವಳಿಕಾರರು ಹಳಗನ್ನಡವನ್ನು ಹಿಮ್ಮೆಟ್ಟಿಸಿ ಆಗ್ಗೆ ಬಳಕೆಯಲ್ಲಿದ್ದ ಹೊಸಗನ್ನಡವನ್ನು ಬಳಸಿಕೊಂಡು ಸಂಸ್ಕೃತ ಛಂದಸ್ಸು, ಚಂಪು ಶೈಲಿಗಳನ್ನು ತಗ್ಗಿಸಿ ದೇಶವೃತ್ತಗಳು ಮತ್ತು ಹಾಡುಗಬ್ಬಗಳನ್ನು ಬಳಸಿಕೊಂಡು ಸಾಹಿತ್ಯ ರಚಿಸಿದರು. ಜನಸಾಮಾನ್ಯರಿಗೆ ಅರ್ಥವಾಗುವಂತೆ ರಗಳೆ, ಷಟ್ಪದಿ, ವಚನ ಶೈಲಿಗಳನ್ನು ಬಳಸಿದರು. ಆ ಮೂಲಕ ಈ ಹಂತದಲ್ಲಿ ಸಂಸ್ಕೃತದ ಮಾರ್ಗವನ್ನು ಹೊಸಗನ್ನಡದ ಸರಳತೆಯೊಂದಿಗೆ ಸಮನ್ವಯಗೊಳಿಸಬೇಕೆಂಬ ಪ್ರಯತ್ನ ನಡೆಯಿತು. ಆದರೆ ಅಂಡಯ್ಯನಂತಹವರು 'ಕಬ್ಬಿಗರ ಕಾವ್ಯ'ದಂತಹ ಕೃತಿಗಳ ಮೂಲಕ 13ನೇ ಶತಮಾನದಲ್ಲೇ ಸಂಸ್ಕೃತವನ್ನು ಬಿಟ್ಟು ದೇಶೀಯ ತದ್ಭವಗಳನ್ನೇ ಉಪಯೋಗಿಸಿಕೊಂಡು ಸಾಹಿತ್ಯ ರಚನೆ ಮಾಡಲು ಮುಂದಾದರು. ಇದರಿಂದ ಜನರಿಗೆ ಸುಲಭವಾದ ರಗಳೆಯ ಕಾವ್ಯಗಳು, ಷಟ್ಪದಿ ಗ್ರಂಥಗಳು, ವಚನಗಳು ರೂಪುಗೊಂಡವು. ಈ ಸಾಹಿತ್ಯಗಳು ಜನರ ಭಾಷೆ ಮತ್ತು ಆಡುಮಾತುಗಳನ್ನು ಬಳಸಿಕೊಂಡವಾಗಿದ್ದವು. ಮಾತಿನ ಭಾಷೆಗೆ ಸಮೀಪದಲ್ಲಿಯೇ ಹಾಡುಗಳನ್ನು ಕಟ್ಟಿದ ದಾಸಕೂಟದವರು ಕನ್ನಡ ಸಾಹಿತ್ಯವನ್ನು ಜನಸಾಮೀಪ್ಯದ ಭಾಷೆಯನ್ನಾಗಿಸಿದರು. ಈ ಪ್ರಕ್ರಿಯೆ ಕ್ರಿಸ್ತಶಕ 17ನೇ ಶತಮಾನದವರೆಗೂ ಮುಂದುವರಿಯಿತು ಆದರೆ 17 ರಿಂದ 19ನೇ ಶತಮಾನದವರೆಗೆ ಇಲ್ಲಿನ ರಾಜಕೀಯದಲ್ಲಿ ಕಾಣಿಸಿಕೊಂಡ ದೌರ್ಬಲ್ಯ, ಅಸಾರತೆ, ಅನ್ಯಾಕ್ರಮಣಗಳಿಂದ ಸಾಹಿತ್ಯ ಕ್ಷೇತ್ರವೂ ಬರಡಾಯಿತು. ಹಿಂದಿನ ಸಾಹಿತ್ಯ ಕೃತಿಗಳನ್ನು ಜನ ಅರೆಮರೆತು ಹಸ್ತಪ್ರತಿಗಳಲ್ಲಿ ಉಳಿಯುವಂತಾಯಿತು. 19ನೇ ಶತಮಾನದ ಆರಂಭದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಗದ್ಯಕ್ಕೆ ಪ್ರಾಶಸ್ತ್ಯ ಬಂದಿತು. ಸಂಸ್ಕೃತದಿಂದ ಅನುವಾದಗಳು ಗದ್ಯದ ರೂಪದಲ್ಲಿ ಬಂದವು. ಹತ್ತನೇ ಚಾಮರಾಜ ಒಡೆಯರ್‌ರಿಗೆ ನಾಟಕಗಳ ಬಗ್ಗೆ ಹೆಚ್ಚು ಒಲವಿದ್ದರಿಂದ ಸಂಸ್ಕೃತ ಮತ್ತು ಇಂಗ್ಲಿಷಿನಿಂದ ನಾಟಕಗಳು ಕನ್ನಡಕ್ಕೆ ಬಹುಸಂಖ್ಯೆಯಲ್ಲಿ ಅನುವಾದಗೊಂಡವು. ಆ ಕಾಲದ ಮುಖ್ಯ ಕವಿ ಮುದ್ದಣ (ನಂದಳಿಕೆ

ಲಕ್ಷ್ಮೀನಾರಾಣಪ್ಪ) ಆಗಿನ ಜನಮನವನ್ನು ಪ್ರತಿಬಿಂಬಿಸುವ ಹಾಗೆ 'ಪದ್ಯಂ ಛದ್ಯಂ, ಗದ್ಯಂ ಹೃದ್ಯಂ' ಎಂದು ತನ್ನ 'ಶ್ರೀ ರಾಮಾಶ್ವಮೇಧ' ದಲ್ಲಿ ಹಳಗನ್ನಡ ಗದ್ಯದಲ್ಲಿ ತನ್ನ ಪ್ರತಿಭೆಯನ್ನು ತೋರಿಸಿದ[831]. ಹೀಗೆ ಸಾಹಿತ್ಯ ಹಳೆಯದನ್ನು ತೊರೆದು ಹೊಸದನ್ನು ಸ್ವೀಕರಿಸುತ್ತಾ ಬೆಳವಣಿಗೆಗೊಂಡಿತು. ಆಯಾ ಕಾಲಕ್ಕನುಗುಣವಾಗಿ ಹಿಂದಿನದರ ಬಗ್ಗೆ ಬೇಸರ ಬಂದಾಗ, ಅದು ತಮ್ಮ ಅಭಿವ್ಯಕ್ತಿಗೆ ಸಾಲದೆನಿಸಿದಾಗ ಕವಿಗಳು ಹೊಸ ರೂಪಗಳನ್ನು ಸೃಷ್ಟಿಸಿಕೊಳ್ಳಲು ಅಥವಾ ಮರೆತುಹೋಗಿದ್ದ ರೂಪಗಳನ್ನು ಪುನರುಜ್ಜೀವನಗೊಳಿಸಿಕೊಳ್ಳಲು ಪ್ರಯತ್ನಿಸಿರುವುದನ್ನು ಕಾಣಬಹುದು.

ಇಂಗ್ಲಿಷ್ ಪ್ರಭಾವದಿಂದ ಉದಯಿಸಿದ ನವೋದಯ ಸಾಹಿತ್ಯದ ಹೊಸಗಾಳಿ ಬಂಗಾಳ, ಮಹಾರಾಷ್ಟ್ರಗಳಿಗೆ ಹೋಲಿಸಿದರೆ ಮೈಸೂರು ರಾಜ್ಯಕ್ಕೆ ಪ್ರವೇಶಿಸಿದುದು ತಡವಾಗಿ. ಇದಕ್ಕೆ ಪ್ರಮುಖ ಕಾರಣ ಕನ್ನಡಿಗರ, ವಿಶೇಷತಃ ಮೈಸೂರಿನಲ್ಲಿದ್ದವರ ಸಂಪ್ರದಾಯಪ್ರಿಯತೆ. ಆಸ್ಥಾನವೆಂಬ ಕೋಟೆಯಲ್ಲಿ ನೆಲೆನಿಂತ ಮೈಸೂರಿನ ಕವಿ, ಲೇಖಕರು ಭಾರತದಲ್ಲಿ ಆಗ ಬೀಡುತ್ತಿದ್ದ ನವೋದಯದ ಹೊಸಗಾಳಿಯನ್ನು ಬರಮಾಡಿಕೊಳ್ಳಲು ಸಮರ್ಥರಾಗದೇ ಸಂಪ್ರದಾಯನಿಷ್ಠ ಸಾಹಿತ್ಯವನ್ನು ರಚಿಸಿದರು[832]. ಆಸ್ಥಾನದ ಮಹಾವಿದ್ವಾಂಸರೆನಿಸಿಕೊಳ್ಳಲು ಸಂಪ್ರದಾಯ ಶರಣತೆ, ಆಸ್ಥಾನದಲ್ಲಿ ಗೌರವ, ಘನತೆ, ಗಾಂಭೀರ್ಯಗಳನ್ನು ಮೀರಬಾರದೆಂಬ ಅಭಿಪ್ರಾಯಗಳನ್ನು ಹೊಂದಿದ್ದರು. ಸಂಸ್ಕೃತದಲ್ಲಿ ಬರೆದು ಪಾಂಡಿತ್ಯವನ್ನೂ, ಕನ್ನಡದಲ್ಲಿ ನಾಟಕಗಳನ್ನು ಬರೆದು ರಾಜರ ಆದರವನ್ನು ಸಂಪಾದಿಸುವ ಉದ್ದೇಶ ಹೊಂದಿದ್ದರು. ಹಾಗಾಗಿ ಹೊಸತನದ ಅಭಾವ ಮತ್ತು ಹಳೆಯದನ್ನೇ ಅನುಸರಿಸುವ ಪ್ರವೃತ್ತಿ ಹೆಚ್ಚಿತ್ತು[833].

19ನೆಯ ಶತಮಾನದ ಕೊನೆಯಲ್ಲಿ ಪಾಶ್ಚಿಮಾತ್ಯ ಮುಖ್ಯವಾಗಿ ಇಂಗ್ಲಿಷ್ ಸಾಹಿತ್ಯ ಮತ್ತು ವಿಚಾರಗಳ ಪ್ರಭಾವಕ್ಕೊಳಗಾದದ್ದು ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಘಟ್ಟ. ಬಿ.ಎಂ.ಶ್ರೀಕಂಠಯ್ಯನವರು ಹೇಳಿದಂತೆ "ಇಂಗ್ಲಿಷರ ಆಳ್ವಿಕೆಯಲ್ಲಿ ಪಾಶ್ಚಾತ್ಯರ ನಾಗರಿಕತೆ, ಐಹಿಕ ಸಾಧನ ಸಂಪತ್ತು, ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ, ಮತ ಮುಂತಾದವುಗಳಿಗೆ ಸಂಬಂಧಪಟ್ಟ ನವೀನ ಜ್ಞಾನದ ಸೆಳೆತಕ್ಕೆ ಮಿಕ್ಕ ದೇಶಭಾಷೆಗಳಂತೆಯೇ ಕನ್ನಡವೂ ಸಿಕ್ಕಿ ಒಂದು ಹೊಸ ದೇಶಾಭಿಮಾನ, ಹೊಸರುಚಿಯನ್ನು ಕಲಿತು, ಹೊಸ ರೀತಿಗಳಲ್ಲಿ ಕಾವ್ಯಗಳ ಸೃಷ್ಟಿ ಆರಂಭಗೊಂಡಿತು. ಭಾಷಾಂತರಗಳೂ, ಅನುಕರಣೆಗಳೂ, ಸ್ವಂತ ಕವಿತೆಗಳೂ, ಹೊಸ ಕಾವ್ಯರೂಪಗಳೂ, ಹೊಸ ಛಂದಸ್ಸುಗಳೂ, ಹೊಸ ಅಭಿಪ್ರಾಯಗಳೂ ಸಂಪ್ರದಾಯವನ್ನು

---

*831. ಅನಂತನಾರಾಯಣ ಎಸ್., ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ಡಿ. ವಿ. ಕೆ. ಮೂರ್ತಿ, ಮೈಸೂರು, 2000. ಪು. 2-3*

*832. ಶ್ರೀನಿವಾಸ ಹಾವನೂರು., ಹೊಸಗನ್ನಡದ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2000, ಎರಡನೇ ಆವೃತ್ತಿ, ಪು. 28*

*833. ಅನಂತನಾರಾಯಣ ಎಸ್., ಪೂರ್ವೋಕ್ತ, ಪು. 11*

ಲಕ್ಷ್ಯಕ್ಕೆ ತಾರದೆ ಸ್ವಾತಂತ್ರ್ಯಪ್ರಿಯರಾದ ಗ್ರಂಥಕರ್ತರಿಂದ ದೇಶದಲ್ಲೆಲ್ಲಾ ಸುಲಭವಾದ ವ್ಯವಹಾರ ಭಾಷೆಯಲ್ಲಿ ಹರಡಲಾರಂಭಿಸಿದವು"[834].

ಆರಂಭದಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯದ ಪ್ರೇರಣೆ ದೊರೆತು ಕನ್ನಡದ ಜೈನ, ವೀರಶೈವ ಮತ್ತು ಬ್ರಾಹ್ಮಣ ಸಾಹಿತ್ಯಗಳು ಸಂಗಮಗೊಂಡಂತೆ ಹೊಸಯುಗದಲ್ಲಿ ಪಶ್ಚಿಮದ ಪ್ರತಿಭೆಯ ಮೂಲಕ ಕ್ರೈಸ್ತ ಮತದ ಅಟ್ಲಾಂಟಿಕ್, ಫ್ಯಾಸಿಫಿಕ್ ಸಮುದ್ರಗಳೂ ಕನ್ನಡದ ಸಮೀಪಕ್ಕೆ ಬರುವಂತಾಯಿತು[835]. ಕನ್ನಡ ನೆಲದ ಮೇಲೆ ಕಾಲಿಟ್ಟ ಕ್ರೈಸ್ತ ಮಿಷನರಿಗಳು ಹೊಸ ಶಿಕ್ಷಣ ವ್ಯವಸ್ಥೆ ಜಾರಿಗೆ ತಂದಂತೆ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಕಟ್ಟುವಲ್ಲಿ ಮತ್ತು ಪ್ರಸಾರ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದವು. ರಾಬರ್ಟ್ ಕಾಲ್ಡ್‌ವೆಲ್‌ನು 1856ರಲ್ಲಿ 'ಎ ಕೆಂಪ್ಯಾರೆಟಿವ್ ಗ್ರಾಮರ್ ಆಫ್ ದ್ರವಿಡಿಯನ್ ಲ್ಯಾಂಗ್ವೇಜಸ್'ನ್ನು, ವಿಲಿಯಂ ರೀವ್ಸ್ 1832ರಲ್ಲಿ ಕನ್ನಡ-ಇಂಗ್ಲಿಷ್ ಡಿಕ್ಷನರಿಯನ್ನು, ಕಿಟ್ಟೆಲ್‌ನು 1894ರಲ್ಲಿ ತನ್ನ ಪ್ರಸಿದ್ಧ ಕನ್ನಡ-ಇಂಗ್ಲಿಷ್ ಡಿಕ್ಷನರಿಯನ್ನು ಹೊರತಂದರು. ಜಾನ್‌ಗ್ಯಾರೆಟ್‌ನು 1868ರಲ್ಲಿ ಕೇಶೀರಾಜನ 'ಶಬ್ಧಮಣಿ ದರ್ಪಣ'ವನ್ನು ಸಂಪಾದಿಸಿ ಪ್ರಕಟಿಸಿದರು. ಬಿ.ಎಲ್. ರೈಸ್‌ರವರು ಪಂಪ ರಾಮಾಯಣದ ಮೊದಲ ಐದು ಖಂಡಗಳನ್ನು, ಅಮರಕೋಶವನ್ನು ಸಂಪಾದಿಸಿದರು. ಇ.ಪಿ.ರೈಸ್ ಪ್ರಥಮಬಾರಿಗೆ 'ಎ ಹಿಸ್ಟರಿ ಆಫ್ ಕೆನರೀಸ್ ಲಿಟರೇಚರ್' ಎಂಬ ಕನ್ನಡ ಸಾಹಿತ್ಯ ಇತಿಹಾಸವನ್ನು ಕುರಿತಂತೆ ಕೃತಿ ಹೊರತಂದರು. ಹೀಗೆ ಸಾಹಿತ್ಯ ಕ್ಷೇತ್ರದ ಮೇಲೆ ಆದ ಸಂಶೋಧನೆಗಳ ಜೊತೆಗೆ ಮಾರ್ಕ್ ವಿಲ್ಕ್ಸ್, ರೈಸ್, ಜೇಮ್ಸ್ ಬರ್ಗೆಸ್ ಮುಂತಾದವರು ಕರ್ನಾಟಕ ಇತಿಹಾಸದ ಮೇಲೆ ಮಾಡಿದ ಸಂಶೋಧನೆಗಳಿಂದ ಕನ್ನಡಿಗರಲ್ಲಿದ್ದ ಕನ್ನಡತ್ವವು ಜಾಗೃತಗೊಳ್ಳಲು, ಕನ್ನಡ ಭಾಷೆ, ಸಂಸ್ಕೃತಿಯ ಬೆಳವಣಿಗೆಗೆ ಮುಂದಾಗುವಂತೆ ಪ್ರೇರೇಪಿಸಿದವು[836].

ಆಧುನಿಕ ಕನ್ನಡದ ಸಾಹಿತ್ಯದ ಉಗಮಕ್ಕೆ ಪ್ರೇರಣೆ ನೀಡಿದ ಮುಖ್ಯಾಂಶಗಳಲ್ಲಿ ಆಧುನಿಕ ಶಿಕ್ಷಣ ಪ್ರಮುಖವಾದುದು. ಆಧುನಿಕ ಇಂಗ್ಲಿಷ್ ಶಿಕ್ಷಣವು ಹೊಸ ಸಾಹಿತ್ಯ ಪ್ರಪಂಚವನ್ನು ಪರಿಚಯಿಸುವ ಮೂಲಕ ಹೊಸ ಜೀವನ ದೃಷ್ಟಿಯನ್ನು ಒದಗಿಸಿತು. ಹೈಸ್ಕೂಲುಗಳಲ್ಲಿ ವಿದ್ಯಾರ್ಥಿಗಳಿಗೆ ಇಂಗ್ಲೆಂಡ್‌ನ ಇತಿಹಾಸ ಮತ್ತು ಚಾಸರ್‌ನಿಂದ ಆನಂತರದ ಐದು ಶತಮಾನಗಳ ಇಂಗ್ಲಿಷ್ ಸಾಹಿತ್ಯವನ್ನು ಕಡ್ಡಾಯವಾಗಿ ವಿದ್ಯಾರ್ಥಿಗಳು ಅಭ್ಯಸಿಸಬೇಕಾಗಿತ್ತು. ಹಾಗಾಗಿ ಪ್ರಸಿದ್ಧ ಗ್ರೀಕ್ ದುರಂತಗಳು, ಷೇಕ್ಸ್‌ಪಿಯರ್‌ನ ಕೃತಿಗಳು, ಮಿಲ್ಟನ್, ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್ ಮುಂತಾದವರ ಪದ್ಯಗಳು, ಜೇನ್ ಆಸ್ಟೆನ್, ಸ್ಕಾಟ್, ಥ್ಯಾಕರೆ ಮುಂತಾದವರ ಕಾದಂಬರಿಗಳು ಪಠ್ಯಪುಸ್ತಕಗಳಾದವು. ವಿದ್ಯಾರ್ಥಿಗಳು

834. *"ಶ್ರೀ" : ಕನ್ನಡ ಕೈಪಿಡಿ, ಸಂಪುಟ. 2, ಪು. 469*

835. *ಧಾರವಾಡಕರ. ರಾ.ಯ., ಹೊಸಗನ್ನಡ ಸಾಹಿತ್ಯದ ಉದಯಕಾಲ, ಪು. 65*

836. *ಇಂದಿರಾ ಬಿ.ಪಿ., ಸೋಷಿಯಲ್ ಕಂಟೆಂಟ್ ಇನ್ ಮಾಡರ್ನ್ ಕನ್ನಡ ಲಿಟರೇಚರ್ (1895-1950), ಅಪ್ರಕಟಿತ ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, 1993, ಪು. 41-42*

ಎಲ್ಲವನ್ನು ಪ್ರಶ್ನಿಸುವ ಮತ್ತು ವಿಶ್ಲೇಷಿಸುವ ಕ್ರಮವನ್ನರಿತರು. ಅದರಲ್ಲೂ ದೈವತ್ವದ ಹಕ್ಕಿನ ಸಿದ್ಧಾಂತವನ್ನೂ ಪ್ರಶ್ನಿಸುವ ಕ್ರಾಂತಿಕಾರಿ ವಿಚಾರಧಾರೆ ಸ್ಥಳೀಯರ ಕಣ್ಣು ತೆರೆಸಿತು. ಇಂಗ್ಲಿಷ್ ಸಾಹಿತ್ಯವು ಸಾಹಿತ್ಯ ಮತ್ತು ಜೀವನಗಳ ನಡುವಿನ ಗಾಢ ಸಂಬಂಧದ ಬಗ್ಗೆ ಹೊಸ ದೃಷ್ಟಿ ನೀಡಿತಲ್ಲದೆ ಸಾಹಿತ್ಯವು ಸಮಾಜದಲ್ಲಿ ಘಟಿಸುವ ಘಟನೆಗಳನ್ನು ಮತ್ತು ಮಾನವನ ಭಾವನೆಗಳನ್ನು ಸೂಕ್ಷ್ಮವಾಗಿ ಅಭಿವ್ಯಕ್ತಿಸುವ ಸಾಧನವೆಂಬ ಭಾವನೆ ಬಂದಿತು. ಇಂಗ್ಲಿಷ್ ಶಿಕ್ಷಣದಿಂದ ಬೌದ್ಧಿಕ ಮಧ್ಯಮ ವರ್ಗವು ರೂಪುಗೊಂಡಿತು. ಈ ವರ್ಗವು ಪಾಶ್ಚಿಮಾತ್ಯ ವೈಚಾರಿಕ ಚಿಂತನೆ ಬೆಳೆಸಿಕೊಂಡು, ವ್ಯಕ್ತಿ ಲಕ್ಷಣದ ಆಧಾರದ ಮೇಲೆ ಪ್ರಾಪಂಚಿಕ ಆಗುಹೋಗುಗಳ ಬಗ್ಗೆ ಆದ್ಯತೆ ನೀಡಲಾರಂಭಿಸಿತು. ಮಧ್ಯಮ ವರ್ಗದ ಪ್ರಶ್ನಿಸುವ ಪ್ರವೃತ್ತಿ ಮತ್ತು ವ್ಯಕ್ತಿ ಸ್ವಾತಂತ್ರ್ಯವಾದಗಳು ಹೊಸ ಕನ್ನಡ ಸಾಹಿತ್ಯದ ರೂಪಿಕೆಗೆ ಮುಖ್ಯ ಪ್ರೇರಕ ಶಕ್ತಿಗಳಾದವು[837].

ಮೈಸೂರು ಸಂಸ್ಥಾನದಲ್ಲಿ ಪಾಶ್ಚಿಮಾತ್ಯ ಶಿಕ್ಷಣ ಪಡೆದ ಹೊಸ ಪೀಳಿಗೆಯು ಸಾಹಿತ್ಯ ರಚನೆಯಲ್ಲೂ ಹೊಸ ವಿಚಾರಗಳನ್ನು ತರಬೇಕೆಂದು ಹವಣಿಸಿತು. ಅದಕ್ಕಾಗಿ ಬೇರೆ ಬಾಷೆಗಳಿಂದ ವಸ್ತು, ವಿಚಾರಗಳನ್ನು ಪಡೆದ ಹಾಗೆಯೇ ಪೌರಾಣಿಕತೆ ಮತ್ತು ಹಳೆಯ ಶೈಲಿಗಳನ್ನೂ ಬಿಟ್ಟುಕೊಡದೆ ಜೊತೆ ಜೊತೆಯಾಗಿ ಹೊಯ್ದರು. 1870 ರಿಂದ 1920ರ ಅವಧಿಯನ್ನು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮೊದಲ ಘಟ್ಟವೆಂದು ಗುರುತಿಸಲಾಗಿದೆ. ಈ ಅವಧಿಯಲ್ಲಿ ಇಂಗ್ಲಿಷ್, ಬೆಂಗಾಳಿ, ಮತ್ತು ಮರಾಠಿ ಸಾಹಿತ್ಯ ಹೊಸ ಹರವನ್ನು ಒದಗಿಸಿದವು.

ಮುಮ್ಮಡಿಯವರ ಕಾಲವಲ್ಲಿ ಸಂಸ್ಕೃತ ಭಾಷೆಯ ಅನುವಾದಗಳು ಹೆಚ್ಚಿದ್ದರೆ ಹತ್ತನೇ ಚಾಮರಾಜ ಒಡೆಯರ ವೇಳೆಗೆ ಕನ್ನಡದ ಅಭ್ಯಾಸವನ್ನು ವ್ಯಾಪಕಗೊಳಿಸಲು "ಕರ್ಣಾಟಕ ಬಾಷೋಜ್ಜೀವಿನಿ ಪಾಠಶಾಲೆ" ಆರಂಭ ಮುಂತಾದ ಅಂಶಗಳಿಂದಾಗಿ ಕನ್ನಡ ಗ್ರಂಥಗಳ ರಚನೆಗೆ ಪ್ರೋತ್ಸಾಹ ದೊರಕಿತು. ಅಲ್ಲದೆ ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದ ಮಾಡುವ ಕಾರ್ಯ ಆರಂಭಗೊಂಡಿತು. ಅರಮನೆಯ ರಂಗಭೂಮಿಗೆಂದು ಬಸವಪ್ಪಶಾಸ್ತ್ರಿಯು ಷೇಕ್ಸ್‌ಪಿಯರ್‌ನ 'ಒಥೆಲೋ'ವನ್ನು 'ಶೂರಸೇನ ಚರಿತ್ರೆ'ಎಂದು ಅನುವಾದಿಸಿದ. ಆರಂಭದಲ್ಲಿ ವಿಷೇಷತಃ ಶೇಕ್ಸ್‌ಪಿಯರ್‌ನ ನಾಟಕಗಳನ್ನು ಅನುವಾದಿಸಲಾಯಿತು. ಅವುಗಳಲ್ಲಿ ಪ್ರಮುಖವಾದವು ಎಂ. ಎಲ್. ಶ್ರೀಕಂಠೇಗೌಡನ 'ಮ್ಯಾಕ್‌ಬೆತ್' ದ ಅನುವಾದವಾಗಿ 'ಪ್ರತಾಪ ರುದ್ರದೇವ' (1895), 'ಮಿಡ್ ಸಮ್ಮರ್ ನೈಟ್ಸ್'ನ ಅನುವಾದವಾಗಿ 'ಪ್ರಮಿಳಾರ್ಜುನೀಯ' ಪ್ರಕಟಗೊಂಡವು. ಶ್ರೀಕಂಠೇಗೌಡರು 'ಎ ಸಿಲಿಕನ್ ಸಮ್ಮರ್' ಎಂಬುದನ್ನು 'ಕನ್ಯಾವಿತಂತು'ವಾಗಿಯೂ 'ಲಿಟ್ಲ್ ಮರ್ಚೆಂಟ್'ಎಂಬುದನ್ನು 'ಚಿಕ್ಕ ಬಣಜಿಗರು' ಎಂಬುದಾಗಿ ಕಥಾನುವಾದ ಮಾಡಿದರು. ಎ. ಆನಂದರಾವ್ ಎಂಬ ಪದವೀಧರ ವಕೀಲರು

---

*837. ಅದೇ., ಪು. 40-41*

'ರಾಮವರ್ಮ ಲೀಲಾವತಿ ಚರಿತ್ರೆ' (ರೋಮಿಯೋ ಅಂಡ್ ಜ್ಯೂಲಿಯಟ್) ಮತ್ತು 'ಪಾಂಚಾಲಿ ಪರಿಣಯ' (ಮರ್ಚೆಂಟ್ ಆಫ್ ವೆನಿಸ್) ಎಂಬ ಶೇಕ್ಸ್‌ಪಿಯರ್‌ನ ಕೃತಿಗಳನ್ನು ಅನುವಾದ ಮಾಡಿದರು[838].

ಪಾಶ್ಚಾತ್ಯ ಶಿಕ್ಷಣ ಪಡೆದ ಸರ್ಕಾರಿ ನೌಕರರು, ಶಾಲಾ ಕಾಲೇಜುಗಳಲ್ಲಿ ಅಧ್ಯಾಪನ ವೃತ್ತಿಯಲ್ಲಿದ್ದವರು, ಭಾಷಾಂತರ ಶಾಖೆಯಲ್ಲಿದ್ದವರು ಸಾಹಿತ್ಯ ದುಡಿಮೆಯಲ್ಲಿ ಹೆಚ್ಚು ತೊಡಗಿಕೊಂಡರು. ಇತಿಹಾಸ, ವಿಜ್ಞಾನ ಮುಂತಾದ ವಿಷಯಗಳನ್ನು ಬೋಧಿಸುತ್ತಿದ್ದವರು ತಮ್ಮ ತಮ್ಮ ವಿಷಯಗಳ ಮೇಲೆ ಕನ್ನಡದಲ್ಲಿ ಪುಸ್ತಕ ಬರೆಯಲು ಒಲವು ಬೆಳೆಸಿಕೊಂಡರು. ವಿದ್ಯಾವಂತರು ಪತ್ರಿಕೋದ್ಯಮದ ಮೂಲಕ ಗದ್ಯ ಸಾಹಿತ್ಯದಲ್ಲಿ ಪ್ರಚಲಿತ ವಿಷಯಗಳನ್ನು ಕುರಿತು ಬರೆಯಲು ಬಳಸಿಕೊಂಡರು. ಮೈಸೂರಿನ ಹಲವು ಪದವೀಧರರು 'ಗ್ರಾಜುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್'ಸ್ಥಾಪಿಸಿಕೊಳ್ಳುವ ಮೂಲಕ ಮುದ್ರಿತ ಗ್ರಂಥಗಳ ಪ್ರಸರಣೆಗೆ ಕ್ರಮ ಕೈಗೊಂಡರು. ಎಂ. ಎಸ್. ಪುಟ್ಟಣ್ಣನವರು 'ಕಿಂಗ್‌ಲಿಯರ್' ಕೃತಿಯ ರೂಪಾಂತರವಾಗಿ 'ಹೇಮಚಂದ್ರರಾಜವಿಲಾಸ'ವನ್ನು ರಚಿಸಿದರು. ಇದು ಹಿಂದಿನ ಇಂಗ್ಲಿಷ್ ನಾಟಕಗಳ ಅನುವಾದಕರು ಬಳಸುತ್ತಿದ್ದ ಪದ್ಯಗದ್ಯ ಮಿಶ್ರಿತ ಕನ್ನಡದ ಬದಲು ಪೂರ್ಣ ಗದ್ಯದಲ್ಲಿ ರಚಿತವಾದುದು ಇದರ ವೈಶಿಷ್ಟ್ಯ. ಆರ್. ಅಣ್ಣಾಜಿರಾಯರು ಷೇಕ್ಸ್‌ಪಿಯರ್‌ನ 'ಟು ಜಂಟ್ಲ್‌ಮನ್ ಆಫ್ ವೆರೋನ'ವನ್ನು 'ಕುಸುಮಾಕರೆ' ಎಂದೂ, ಡಿಕನ್ಸ್‌ನ 'ಆಲಿವರ್ ಟ್ವಿಸ್ಟ್' ಮತ್ತು ಫೀಲ್ಡಿಂಗ್‌ನ ಟಾಮ್‌ಜೋನ್ಸ್‌ಗಳನ್ನು ಅನುವಾದಿಸಿದರು[839].

ಬಿ.ಎಂ.ಶ್ರೀಕಂಠಯ್ಯನವರ ಇಂಗ್ಲಿಷ್ ಗೀತೆಗಳು 192 1ರಲ್ಲಿ ಪ್ರಕಟಗೊಳ್ಳುವುದರೊಂದಿಗೆ ನವೋದಯ ಸಾಹಿತ್ಯದ ಪರಂಪರೆ ಆರಂಭಗೊಂಡಿತೆಂದು ಹೇಳಬಹುದು. ಹಾಗಾಗಿ ಇಂಗ್ಲಿಷ್ ಗೀತೆಗಳನ್ನು ಯುಗ ಪ್ರವರ್ತಕ ಕೃತಿ, ಆಧುನಿಕ ಕನ್ನಡ ಕಾವ್ಯದ ಉಗಮಸ್ಥಾನ ಎಂದೆಲ್ಲ ಕರೆಯಲಾಗಿದೆ. ಈ ಕೃತಿಯ ಉದ್ದೇಶ ಇಂಗ್ಲಿಷ್ ಕಾವ್ಯ ಮಾರ್ಗವನ್ನು ಕನ್ನಡಿಗರಿಗೆ ಸ್ವಲ್ಪ ಮಟ್ಟಿಗೆ ಪರಿಚಯಿಸುವುದು ಎಂದು ಬಿ.ಎಂ.ಶ್ರೀ ಹೇಳಿದ್ದಾರೆ. ಈ ಕೃತಿಯಲ್ಲಿ ಕಂಡುಬರುವುದು ಇಂಗ್ಲೆಂಡಿನ 19ನೆಯ ಶತಮಾನದ ಭಾವನಾಸ್ವಾತಂತ್ರ್ಯವಾದ (Romanticism) ಮತ್ತು ಅದರ ಗುಣಗಳಿರುವ ಇತರ ಶತಮಾನಗಳ ಕೆಲವು ಕವನಗಳು. ಈ ಕೃತಿ ಶಾಸ್ತ್ರೀಯ ಛಂದಸ್ಸಿನ ಹಿಡಿತದಿಂದ ಕನ್ನಡ ಕಾವ್ಯವನ್ನು ಬಿಡುಗಡೆಗೊಳಿಸಿತು. ಇಲ್ಲಿನ ಕಿರುಗವನಗಳ ವಸ್ತು ಅನುದಿನದ ಘಟನೆಗಳು ಮತ್ತು ಸಾಮಾನ್ಯ ಜನರಿಗೆ ಒದಗಬಹುದಾದ ಅನುಭವಗಳನ್ನಾಧರಿಸಿದವು. ಶ್ರೀಯವರದು 19ನೆಯ ಶತಮಾನದ ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಮತ್ತು ವಿಮರ್ಶಕರ, ಅದರಲ್ಲೂ ಪ್ರಧಾನವಾಗಿ ವರ್ಡ್ಸ್‌ವರ್ತ್‌ನ ದೃಷ್ಟಿಕೋನವನ್ನು ಅಭಿವ್ಯಕ್ತಿಸುವುದಾಗಿತ್ತು. ಹೀಗೆ ಬಿ.ಎಂ.

---

*838. ಶ್ರೀನಿವಾಸ ಹಾವನೂರ., ಪೂರ್ವೋಕ್ತ, ಪು. 261-271*

*839. ಶ್ರೀನಿವಾಸ ಹಾವನೂರ., ಪೂರ್ವೋಕ್ತ, ಪು. 274-284*

ಶ್ರೀಯವರ ಪ್ರಯತ್ನದಿಂದಾಗಿ ಬದುಕಿನೊಂದಿಗೆ ಸಂಬಂಧ ಕಳೆದುಕೊಂಡು ಪಂಡಿತರ ಕಸರತ್ತಾಗಿದ್ದ ಕನ್ನಡ ಕಾವ್ಯವು ಮತ್ತೆ ಬದುಕಿನೊಂದಿಗೆ ಬೆಸೆದುಕೊಳ್ಳುವಂತೆ ಮಾಡಲು ಪ್ರಯತ್ನಿಸಿದರು[840]. ಕವಿಗಳು ಬರೆಯುವುದು ಕೇವಲ ಪಂಡಿತರಿಗಾಗಿ ಅಲ್ಲ. ಅವರು ಬರೆಯುವುದು ಸಾಮಾನ್ಯ ಜನರು ಓದಲಿಕ್ಕಾಗಿ. ಆದುದರಿಂದ ಕವಿಯು "ಸಾಮಾನ್ಯ ಜನರು ಆಡುವಂತೆ ತನ್ನ ಅಭಿವ್ಯಕ್ತಿಯನ್ನು ನಡೆಸಬೇಕು"[841] ಎಂದು ಹೇಳಿದ ವರ್ಡ್ಸ್‌ವರ್ತ್‌ನ ಚಿಂತನೆಗಳ ಒಲವು ಬಿ. ಎಂ. ಶ್ರೀಯವರ ಮೂಲಕ ಕನ್ನಡ ಸಾಹಿತ್ಯವನ್ನು ತಲುಪಿತು. ಬಿ. ಎಂ. ಶ್ರೀಯವರು ಗ್ರೀಕರ ರುದ್ರನಾಟಕದ ರೀತಿಯನ್ನು ಕನ್ನಡಕ್ಕೆ ಪರಿಚಯಿಸಲು ಗದಾಯುದ್ಧ ನಾಟಕವನ್ನು ಅಳವಡಿಸಿಕೊಂಡರು. ಪಾರ್ಸೀಯನ್ನು 'ಪಾರಸಿಕರು' ಎಂದು ಅನುವಾದಿಸಿದರು. ಏಜಾಕ್ಸ್ ನಾಟಕದ ನೆರಳಿನಲ್ಲಿ 'ಅಶ್ವತ್ಥಾಮನ್' ಎಂಬ ರುದ್ರನಾಟಕವನ್ನು ಬರೆದರು[842].

ಬಿ. ಎಂ. ಶ್ರೀಯವರ ಪ್ರಯೋಗಗಳನ್ನು, ಸಾಹಿತ್ಯ ಸ್ಫೂರ್ತಿಯನ್ನು ಅನೇಕರು ಅರಗಿಸಿಕೊಂಡರು. ಅವರಲ್ಲಿ ಪ್ರಮುಖರೆಂದರೆ ಮಾಸ್ತಿ, ಕುವೆಂಪು, ಎಂ. ವಿ. ಸೀತಾರಾಮಯ್ಯ, ಜಿ. ಪಿ. ರಾಜರತ್ನಂ ಮುಂತಾದವರು. ಇವರೆಲ್ಲರ ಪ್ರಯೋಗಕ್ಕೆ ಎಡೆ ಸಿಕ್ಕಿದ್ದು ಮೈಸೂರು ಮಹಾರಾಜ ಕಾಲೇಜಿನ ಕರ್ಣಾಟಕ ಸಂಘದಲ್ಲಿ. ಮಾಸ್ತಿಯವರು ಸಾಹಿತ್ಯ ವಿಮರ್ಶೆಯ ಕಾರ್ಯ ಎಂಬ ಲೇಖನ ಬರೆಯುವ ಮೂಲಕ ವಿಮರ್ಶಾತ್ಮಕ ಚಿಂತನೆಗೆ ಅನುವು ಮಾಡಿಕೊಟ್ಟರು. ಅದು ಪಾಶ್ಚಾತ್ಯ ವಿಮರ್ಶಕರಿಂದ ಬಂದುದಾಗಿದ್ದು ಅದರಲ್ಲೂ ಮ್ಯಾಥ್ಯೂ ಆರ್ನಾಲ್ಡ್‌ನ 'ದಿ ಫಂಕ್ಷನ್ಸ್ ಆಫ್ ಕ್ರಿಟಿಸಿಸಂ' ಎಂಬ ಲೇಖನದಿಂದ ಪ್ರಭಾವಿತವಾಗಿತ್ತು.

ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವದ ಮೂಲಕ ಅನೇಕ ಹೊಸ ಹೊಸ ಸಾಹಿತ್ಯ ರೂಪಗಳು ಕನ್ನಡದಲ್ಲಿ ಕಾಣಿಸಿಕೊಂಡವು. ಪ್ರಮುಖವಾಗಿ ಗದ್ಯ ಸಾಹಿತ್ಯ ರೂಪದಲ್ಲಿ ಕಾದಂಬರಿ, ಸಣ್ಣಕತೆ, ನಾಟಕಗಳು, ಪತ್ರಿಕಾ ಸಾಹಿತ್ಯ ಕಾಣಿಸಿಕೊಂಡವು. ಹಾಗೆಯೇ ಪದ್ಯ ಸಾಹಿತ್ಯದಲ್ಲಿ ಭಾವಗೀತೆ, ಸಾನೆಟ್, ಪ್ರಗಾಥ, ಸರಳ ರಗಳೆ ಮುಂತಾದ ರೂಪಗಳು ಅಳವಡಿಸಲ್ಪಟ್ಟವು. ಕಾವ್ಯದ ವಿವಿಧ ರೂಪಗಳಲ್ಲಿ ಮುಖ್ಯ ರೂಪವಾದ ಭಾವಗೀತೆಯು ಕವಿಯ ವೈಯಕ್ತಿಕ ಭಾವಗಳನ್ನು ನೇರವಾಗಿ ಅಭಿವ್ಯಕ್ತಗೊಳಿಸುವುದಕ್ಕಾಗಿ ಬಳಸಲ್ಪಟ್ಟಿತು[843] ಜಿ. ಪಿ. ರಾಜರತ್ನಂ ಅವರು ಭಾವಗೀತೆಯಲ್ಲಿ ಗ್ರಾಮ್ಯವೆನ್ನಬಹುದಾದ ಭಾಷೆಯಲ್ಲಿ ಕುಡುಕ ರತ್ನನ ಭಾವಗಳನ್ನು ತಮ್ಮ ರತ್ನನ ಪದಗಳಲ್ಲಿ ಹೇಳಿದ್ದು ಒಂದು ಹೊಸ ರೀತಿ. ಇಂಗ್ಲಿಷ್‌ನ ಸಾನೆಟ್ ಅನ್ನು ಕನ್ನಡದಲ್ಲಿ ಮೊದಲು ಬಳಸಿದ ಗೋವಿಂದಪೈ ಅವರು 'ಚತುರ್ದಶಪದಿ'

---

*840. ರಾಮೇಗೌಡ ಮತ್ತು ಪ್ರಧಾನ್ ಗುರುದತ್ (ಸಂ)., ಬಿಎಂಶ್ರೀ : ನೂರರ ನೆನಪು, ಪು. 251-255*

*841. ಅನಂತನಾರಾಯಣ ಎಸ್., ಪೂರ್ವೋಕ್ತ, ಪು. 81*

*842. ಅದೇ., ಪು. 84*

*843. ಅನಂತನಾರಾಯಣ ಎಸ್., ಪೂರ್ವೋಕ್ತ, ಪು. 163*

ಎಂದು ಕರೆದರು. ಒಂದೇ ವಿಚಾರ, ಒಂದೇ ಚಿಂತನ ಆರಂಭದಿಂದ ಕೊನೆಯವರೆಗೂ ಇರುವಂತೆ ರೂಪಿಸುವ ಭಾವಗೀತೆಯ ರೂಪಕವಾದ ಸಾನೆಟ್ ಸಹ ಬಳಕೆಗೆ ಬಂದಿತು. ಕನ್ನಡ ಸಾಹಿತಿಗಳು ತಾವು ಗಳಿಸಿದ ಪಾಶ್ಚಿಮಾತ್ಯ ಸಾಹಿತ್ಯದ ಚಿಂತನೆಗಳನ್ನು ಅಭಿವ್ಯಕ್ತಗೊಳಿಸಲು ಕನ್ನಡದ ಸಾಹಿತ್ಯ ರೂಪಗಳು ಸಾಲದೆನಿಸಿದಾಗ ಇಂಗ್ಲಿಷ್ ಸಾಹಿತ್ಯ ರೂಪಗಳನ್ನು ಅಳವಡಿಸಿಕೊಂಡರು ಅಥವಾ ತಮ್ಮವೇ ಆದ ಮರೆತುಹೋಗಿದ್ದ ರೂಪಗಳನ್ನು ಪುನರುಜ್ಜೀವನಗೊಳಿಸಿಕೊಂಡರು.

ಭಾರತದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಹೋರಾಟವೂ ನವೋದಯ ಸಾಹಿತ್ಯದ ಬೆಳವಣಿಗೆಗೆ ಪ್ರೇರಕ ಶಕ್ತಿಯಾಯಿತು. ಕುವೆಂಪುರವರು ಬಂಗಾಳದಲ್ಲಿ ನಡೆಯುತ್ತಿದ್ದ ಕ್ರಾಂತಿಕಾರಿಗಳ ವೀರಾಂದೋಲನಕ್ಕೆ ಸಂಬಂಧಿಸಿದಂತೆ 'ಪಾಂಚಜನ್ಯ' ಎಂಬ ಕವನವನ್ನು ರಚಿಸಿ ವಿಶ್ವಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಿಸಿದರು. ಅವರ ಕಲ್ಕಿ, ಕುಮಾರವ್ಯಾಸ, ರಕ್ತಧುನಿ, ಕ್ರಾಂತಿಕಾಳಿ ಮುಂತಾದ ಕವನಗಳು ಅಂದಿನ ಸತ್ಯಾಗ್ರಹದ ಸ್ವಾತಂತ್ರ್ಯ ಸಂಗ್ರಾಮಕ್ಕೆ ರಣಮಂತ್ರಗಳಾಗಿ ಪರಿಣಮಿಸಿದವು. ಪಾಂಚಜನ್ಯ ಕವನವು ಸಭೆ ಸಮಾರಂಭಗಳಲ್ಲಿ ಮಾತ್ರವಲ್ಲದೆ ಜೈಲಿನ ಒಳಗೂ ಮೊಳಗುತ್ತಿತ್ತು[844]. ಅಂದಿನ ಪತ್ರಿಕೆಗಳಾದ ವೃತ್ತಾಂತ ಚಿಂತಾಮಣಿ, ಕನ್ನಡದ ಕೇಸರಿ, ವಿಶ್ವಕರ್ನಾಟಕ, ತಾಯಿನಾಡು ಮುಂತಾದವು ಸ್ವಾತಂತ್ರ್ಯ ಚಳವಳಿಗೆ ಸಂಬಂಧಿಸಿದ ದೈನಂದಿನ ವರದಿಗಳನ್ನು, ಸಾಮಾನ್ಯ ಜನರ ಕಷ್ಟಗಳನ್ನು ಕುರಿತು ಬರೆಯಲಾರಂಭಿಸಿದವು.

ಸಾಮಾಜಿಕ ಸಮಸ್ಯೆಗಳನ್ನಾಧರಿಸಿದ ವಾಸ್ತವಿಕಾಂಶಗಳನ್ನುಳ್ಳ ಕಾದಂಬರಿಗಳು ಪ್ರಮುಖವಾಗಿ ಶಿವರಾಮಕಾರಂತ, ಕುವೆಂಪುರವರಿಂದ ರೂಪುಗೊಂಡವು. ಸಾಮಾಜಿಕ ಕಾಳಜಿ ಹೊಂದಿದ ಸಣ್ಣಕತೆಗಳನ್ನು ಮಾಸ್ತಿ ವೆಂಕಟೇಶ ಅಯ್ಯಂಗಾರ್ ರಚಿಸಿದರು. ಕನ್ನಡ ಸಾಹಿತ್ಯದಲ್ಲಿ ಹೊಸ ರೀತಿಯ ಬರವಣಿಗೆಗೆ ಮುಂದಾದ ಕುವೆಂಪುರಂತಹವರನ್ನು ಸಂಪ್ರದಾಯವಾದಿಗಳು ಟೀಕಿಸಲಾರಂಭಿಸಿದರು[845]. ಹೀಗೆ ಸಾಂಪ್ರದಾಯಿಕ ಹಾಗೂ ಆಧುನಿಕ ಬರಹಗಾರರ ನಡುವೆ ಬೌದ್ಧಿಕ ಸಂಘರ್ಷ ಏರ್ಪಡಲು ಕಾರಣವಾಯಿತು.

ಆಧುನಿಕ ಸಾಹಿತ್ಯದಲ್ಲಿ ಆದರ್ಶವಾದ ಮತ್ತು ಮಾನವತಾವಾದ ಪ್ರಮುಖ ಪ್ರೇರಕ ಶಕ್ತಿಗಳಾಗಿದ್ದವು. ಕುವೆಂಪುರವರು ಒಟ್ಟಾರೆ ಆಧುನಿಕ ಬರವಣಿಗೆಯ ಕಾಲವನ್ನು 'ನವೋದಯ ಕಾಲ' ವೆಂದು ಕರೆದರು.

ಪಾಶ್ಚಿಮಾತ್ಯ ಸಾಹಿತ್ಯ ಮತ್ತು ಸಂಸ್ಕೃತಿಗಳ ಪ್ರಭಾವದ ಮೂಲಕ ರೂಪುಗೊಂಡ ಸ್ವಭಾಷಾ ಮತ್ತು ಸ್ವಸಂಸ್ಕೃತಿಗಳ ಪ್ರಜ್ಞೆಯೊಂದಿಗೆ ಹೊಸಗನ್ನಡ ಸಾಹಿತ್ಯದ ಉದಯವಾಯಿತು. ಈ ಹೊಸಗನ್ನಡದ ಸ್ಥೂಲ

---

*844. **ಕುವೆಂಪು.**, ನೆನಪಿನ ದೋಣಿಯಲ್ಲಿ, ಪು. 654-55*

*845. **ಅದೇ.**, ಪು. 646*

ಲಕ್ಷಣಗಳೆಂದರೆ. ಗದ್ಯಕ್ಕೆ ಪ್ರಾಶಸ್ತ್ಯ ನೀಡಿದುದು. ನವೋದಯ ಪೂರ್ವ ಕಾಲದಲ್ಲಿ ಸಾಹಿತ್ಯವನ್ನು ರಸವಿರಲಿ, ಬಿಡಲಿ; ಭಾವವಿರಲಿ ಬಿಡಲಿ ಪದ್ಯದ ಬಂಧದಲ್ಲಿಯೇ ರೂಪಿಸಬೇಕೆಂಬ ಹಠವಿತ್ತು. ಆದರೆ 19ನೆಯ ಶತಮಾನದ ಅಂತ್ಯದಿಂದ ಪದ್ಯಕ್ಕೆ ಪ್ರಾಧಾನ್ಯತೆ ಕಡಿಮೆಯಾಗಿ ಗದ್ಯ ಪ್ರಾಮುಖ್ಯತೆಯನ್ನು ಗಳಿಸಿತು. ಕನ್ನಡ ಪದ್ಯದಲ್ಲಿ ಪ್ರಾಸ ಎಷ್ಟರಮಟ್ಟಿಗೆ ಅನಿವಾರ್ಯವಾಗಿತ್ತೆಂದರೆ - ಪ್ರಾಸವಿಲ್ಲದ ಹಾಡು ತಾಸು ಹೇಳಿದರೇನು ? ಎನ್ನುವಂತಿತ್ತು. ಹೊಸಗನ್ನಡದ ಉದಯ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ರೀತಿಯನ್ನು ಗಮನಿಸಿದ ಕನ್ನಡ ಕವಿಗಳು ಈ ಪ್ರಾಸದ ಶೃಂಖಲೆಯನ್ನು ತೊಡೆದು ಹಾಕಲು ಪ್ರಯತ್ನಿಸಿದರು. ಪ್ರಾಸದ ಇರುವಿಕೆಯ ಪರ, ವಿರೋಧ ಚರ್ಚೆಗಳು ತೀವ್ರಗೊಂಡು ಪ್ರಾಸ ತ್ಯಾಗ ಮಾಡಿದವರನ್ನು ನಪುಂಸಕರೆಂದು ಕರೆಯುವಂತಾಯಿತು. ಆದರೂ ಗೋವಿಂದ ಪೈರಂತಹವರು ಪ್ರಾಸ ತ್ಯಾಗವನ್ನು ಆರಂಭಿಸಿದರು[846]. ಕನ್ನಡದ ಮೇಲಾದ ಪಾಶ್ಚಿಮಾತ್ಯ ಪ್ರಭಾವ, ಕ್ರೈಸ್ತ ಮಿಷನರಿಗಳ ಪ್ರಯತ್ನ ಮತ್ತು ಹೊಸ ವಿಚಾರಗಳ ಮೂಲಕವಾಗಿ ಹೊಸ ವಿಧವಾದ ಗದ್ಯಶೈಲಿ ಕನ್ನಡದಲ್ಲಿ ಕಣ್ ತೆರೆಯಿತು. ಹೊಸ ಗದ್ಯವು ಶಾಸ್ತ್ರೀಯ ವಿಚಾರಕ್ಕಿಂತ ಭಾವ ಮತ್ತು ವಿಚಾರಗಳನ್ನು ಅಭಿವ್ಯಕ್ತಗೊಳಿಸಲು ಆದ್ಯತೆ ನೀಡಿತು. ಅನವಶ್ಯಕವಾದ ಶಬ್ದಚಮತ್ಕೃತಿಯ ಬದಲು ನೇರವಾದ ಭಾಷೆಯ ಮೂಲಕ ಹೇಳುವ ಗದ್ಯ ಭಾಷೆ ರೂಪುಗೊಂಡಿತು. ಇದರೊಂದಿಗೆ ಕನ್ನಡ ಭಾಷೆ ಅರಮನೆಯ ಭಟ್ಟಂಗಿಗಳ ಪರಾಕು ಭಾಷೆಯಾಗದೆ, ಶಿಕ್ಷಕರ, ತತ್ವಜ್ಞರ ಹದವರಿತ ನೇರ ಭಾಷೆಯಾಯಿತು. ಅದೂ ಅಲ್ಲದೆ ಪರಿಚ್ಛೇದ ಕಲ್ಪನೆ, ವಿರಾಮ ಚಿಹ್ನೆಗಳೂ ಈ ಕಾಲದಲ್ಲಿ ಮೂಡಿಬಂದವು. ಪದ್ಯ ಸಾಹಿತ್ಯದಲ್ಲೇನೋ, ಯತಿ ಎಂಬುದೊಂದಿತ್ತು. ಗಮಕಿ ಅಲ್ಲಿ ಉಸಿರನ್ನು ತೆಗೆದುಕೊಳ್ಳಬಹುದಿತ್ತು. ಆದರೆ, ಗದ್ಯಕ್ಕೆ ಅಂಥ ವಿರಾಮ ಸ್ಥಾನಗಳಿರಲಿಲ್ಲ. ಆದ್ದರಿಂದ ಗದ್ಯದ ಓಟ ಉಸಿರುಗಟ್ಟಿದಂತಾಗುತ್ತಿತ್ತು. ವಿರಾಮ ಚಿಹ್ನೆಗಳು ಈ ಸಮಸ್ಯೆಯನ್ನು ಹೋಗಲಾಡಿಸಿ ಸಾಹಿತ್ಯದ, ಬರವಣಿಗೆಯ ಒಂದು ಭಾಗವೇ ಆದವು[847].

ಹೊಸಗನ್ನಡ ಉದಯಕಾಲದ ಮತ್ತೊಂದು ವೈಶಿಷ್ಟ್ಯವೆಂದರೆ ಸಾಹಿತ್ಯವನ್ನು ವಸ್ತು ನಿಷ್ಠತೆಗೆ ಬದಲು, ವ್ಯಕ್ತಿನಿಷ್ಠ ಭಾವನೆಗಳ ಅಭಿವ್ಯಕ್ತಿಗಳಿಗೆ ಆದ್ಯತೆ ನೀಡಿದ್ದು. ಇದರಿಂದಾಗಿ ಕವಿಗಳು, ಸಾಹಿತಿಗಳು ತಮ್ಮ ವ್ಯಕ್ತಿತ್ವ ಹಾಗೂ ಸಮಕಾಲೀನ ಪ್ರಶ್ನೆಗಳನ್ನು ಸಾಹಿತ್ಯದಲ್ಲಿ ಒಡಮೂಡಿಸುವಂತಾಯಿತು. ಆವರೆಗೆ ಕಾವ್ಯ ವಸ್ತುಗಳಾಗಿದ್ದ ಕಮಲ, ಕೋಗಿಲೆ, ಮಂದಾನಿಲಗಳು ಕಾಲುಗಾಡಿ, ರೊಕ್ಕದ ಮಹಿಮೆ, ಬಡಶಿಕ್ಷಕನ ಬಡಬಡಿಕೆ, ಗತಪತ್ನೀವಿಲಾಸ, ವಿಷಮ ವಿವಾಹ ಮುಂತಾದವು ಕಾವ್ಯ ವಸ್ತುಗಳಾದವು[848]. ಹೊಸಗನ್ನಡ ಉದಯಕಾಲದ ಪ್ರಜ್ಞಾವಂತರು ಕನ್ನಡವನ್ನು ಬೇರೆ ಭಾಷೆಗಳೊಂದಿಗೆ ತುಲನೆ ಮಾಡಿ ಕನ್ನಡ ಅಲಕ್ಷಿತವಾಗಿರುವುದನ್ನು ಗಮನಿಸಿ ಅದನ್ನು ಸಮೃದ್ಧಿಗೊಳಿಸಲು ಕಂಕಣ

---

*846. ಧಾರವಾಡಕರ. ರಾ.ಯ., ಪೂರ್ವೋಕ್ತ, ಪು. 46-54*

*847. ಅದೇ., ಪು. 68*

*848. ಅದೇ., ಪು. 55-56*

ತೊಟ್ಟರು.

ಮಹಾರಾಜರಾಗಿದ್ದ ನಾಲ್ವಡಿಯವರೂ ಸಹ ದೇಶೀಯ ಭಾಷೆ ಕನ್ನಡ ಹಾಗೂ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಒಲವನ್ನೊಂದಿದ್ದರು. ಕನ್ನಡ ಭಾಷೆಯ ಬೆಳವಣಿಗೆಗೆ ನೆರವಾಗಲು ಸರ್ಕಾರದ ಬೆಂಬಲದಿಂದ 1915ರಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಲು ನೆರವಾದರು. 1916ರಿಂದ ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆ ಎಂಬ ನಿಯತಕಾಲಿಕವನ್ನು ಹೊರತರಲಾಯಿತು. ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ ಕನ್ನಡ ಭಾಷೆಯ ಬೆಳವಣಿಗೆಗೆ ಅಸ್ತಿಭಾರವಾಯಿತು. ವಿಶ್ವವಿದ್ಯಾನಿಲಯದ ಶಾಖೆಯಾಗಿ ಆರಂಭವಾದ ಪ್ರಸರಣ ಮತ್ತು ಪ್ರಕಟಣಾ ವಿಭಾಗವು ಪ್ರಚಾರೋಪನ್ಯಾಸ ಮತ್ತು ವಿವಿಧ ವಿಷಯಗಳನ್ನು ಕುರಿತಂತೆ ಪ್ರಕಟಣೆಗಳನ್ನಾರಂಭಿಸಿತು. ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯು ಬಿ. ಎಂ. ಶ್ರೀಯವರ ನೇತೃತ್ವದಲ್ಲಿ ಹಲವಾರು ಆಧುನಿಕ ವಿಷಯಗಳನ್ನು ಪುಸ್ತಕಗಳಾಗಿ ಪ್ರಕಟಿಸಿ ಸಾಮಾನ್ಯ ಜನರಿಗೆ ತಲುಪುವಂತೆ ಮಾಡಲಾಯಿತು[849]. ಆ ಮೂಲಕ ನಾಲ್ವಡಿಯವರು ಆಶಿಸಿದ್ದಂತೆ "ವಿಶ್ವವಿದ್ಯಾನಿಲಯದ ಜ್ಞಾನ ಪ್ರವಾಹವು ಜನಸಾಮಾನ್ಯನನ್ನು ಮುಟ್ಟಿ ಅವನ ಸಂಸ್ಕೃತಿಯನ್ನು ಸಂಸ್ಕರಿಸಬೇಕು"[850] ಎಂಬುದು ಕಾರ್ಯತಹ ನೆರವೇರಿತು. ಹೀಗೆ ಜ್ಞಾನದ ಮೂಲಕ ಸಂಸ್ಕಾರಗೊಂಡ ಕನ್ನಡದ ಮನಸ್ಸುಗಳು ಆಧುನಿಕ ಕನ್ನಡ ಸಾಹಿತ್ಯದ ರಚನೆ ಮತ್ತು ಪ್ರಸರಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ ಮತ್ತು ಮೈಸೂರು ಮಹಾರಾಜ ಕಾಲೇಜಿನ ಕನ್ನಡ ಸಂಘ ಸಂಸ್ಥೆಗಳು ಸಾಹಿತ್ಯಾಭಿಮಾನವನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸಿದವು. ಹೊಸ ಸಾಹಿತ್ಯದ ಮುನ್ನಡೆಗೆ ಸಹಾಯಕವಾಗುವಂತೆ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘವು 'ಪ್ರಬುದ್ಧ ಕರ್ನಾಟಕ' ಎಂಬ ತ್ರೈಮಾಸಿಕ ಪತ್ರಿಕೆಯನ್ನು ಆರಂಭಿಸಿತು. ಹೊಸಗನ್ನಡದ ಆರಂಭದ ಕವಿಗಳು, ಸಾಹಿತಿಗಳಿಗೆ, ಅವರ ಬರವಣಿಗೆಗಳು ಪ್ರಕಟಗೊಳ್ಳಲು ಇದು ಅವಕಾಶ ಮಾಡಿಕೊಟ್ಟಿತು[851]. ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಸಾಹಿತ್ಯಕ್ಕೆ ನೀಡುತ್ತಿದ್ದ ಪ್ರೋತ್ಸಾಹದ ಬಗ್ಗೆ ನಾಲ್ವಡಿಯವರು ಆಸಕ್ತಿ ಹೊಂದಿದ್ದಲ್ಲದೆ ಬೋಧನೆಯನ್ನು ಕನ್ನಡದಲ್ಲಿ ಮಾಡುತ್ತಿರುವುದನ್ನು ಪ್ರಶಂಸಿಸಿದರು[852]. ಹೀಗೆ ಕನ್ನಡ ಭಾಷೆ, ಸಾಹಿತ್ಯಗಳನ್ನು ಬೆಂಬಲಿಸುವ ಮೂಲಕ ಕನ್ನಡಿಗರನ್ನು ಸಂಘಟಿಸುವ ಪ್ರೇರಕಶಕ್ತಿ ನಾಲ್ವಡಿಯವರಾದರು. ನಾಲ್ವಡಿಯವರ ಆಡಳಿತದ 25 ವರ್ಷಗಳ ನೆನಪಿಗಾಗಿ ಸಂಘಟಿಸಲ್ಪಟ್ಟ ರಜತೋತ್ಸವ ಸಮಾರಂಭದ ಸಲುವಾಗಿ ಸ್ಥಾಪಿಸಿದ ಸಾಹಿತ್ಯದ ಪದಕಗಳನ್ನು ಹೊಸಗನ್ನಡ

---

*849. **ಸೂರ್ಯನಾಥ್ ಯು. ಕಾಮತ್.**, ಪೂರ್ವೋಕ್ತ, ಭಾಗ - 3, ಪು. 58*

*850. **ಸ್ಪೀಚಸ್ ಆಫ್ ಹಿಸ್ ಹೈನೆಸ್**, ಪು. 141*

*851. **ಶಾಮರಾಯ. ತ. ಸು.**, ಮೂರು ತಲೆಮಾರು, ಪು. 230*

*852. **ಸ್ಪೀಚಸ್ ಆಫ್ ಹಿಸ್ ಹೈನೆಸ್**, ಪು. 138-139*

*853. **ಕುವೆಂಪು.**, ನೆನಪಿನ ದೋಣಿಯಲ್ಲಿ, ಪು. 625*

ಸಾಹಿತ್ಯದ ರೂವಾರಿಗಳಾದ ಬಿ.ಎಂ.ಶ್ರೀ ಮತ್ತು ಕುವೆಂಪು[853] ರವರಿಗೆ ನೀಡುವ ಮೂಲಕ ಸಾಹಿತ್ಯ ಚಟುವಟಿಕೆಗಳಿಗೆ ಬೆಂಬಲಿಸಿದರು.

### *iii) ನಾಟಕರಂಗ*

ನಾಟಕರಂಗವು ಪ್ರತಿಯೊಂದು ರಾಷ್ಟ್ರದ ಸಂಸ್ಕೃತಿಯ ದ್ಯೋತಕ. ನಾಟಕ ಎಂಬುದು ಕೇವಲ ಒಂದು ಕಲೆಯಾಗಿರದೆ, ಅನೇಕ ಕಲೆಗಳ ಮೊತ್ತವಾಗಿದೆ. ಅದಕ್ಕೇ ಅದು ಪಂಡಿತರಿಗೆ ಪಾಮರರಿಗೆ ಇಬ್ಬರಿಗೂ ರಂಜನೆ ನೀಡುವಂತಹವಾಗಿದೆ. ಜಗತ್ತಿನ ರಂಗಭೂಮಿಯ ಆದ್ಯಪ್ರವರ್ತಕರು ಭಾರತೀಯರು ಮತ್ತು ಗ್ರೀಕರು. ಅರಿಸ್ಟಾಟಲನ ಪ್ರಸಿದ್ಧವಾದ ಹೇಳಿಕೆಯಂತೆ 'ನಾಟಕ' ಎನ್ನುವುದ "ಒಂದು ಕ್ರಿಯೆಯ ಅನುಕರಣ". ಸಂಸ್ಕೃತದ 'ನಾಟಕ'ವಾದರೂ 'ನೃತ್' ಧಾತುವಿನಿಂದ ರೂಪ ತಾಳಿದ್ದು ಅದರ ಮೂಲ ಅರ್ಥ ಕುಣಿತ. ಕುಣಿತವೂ ಒಂದು ಬಗೆಯ ಅನುಕರಣವೇ[854]. ಭಾರತದ ಸಂಸ್ಕೃತ ನಾಟಕಗಳು ಕ್ರಿಸ್ತಶಕದ ಆರಂಭದ ಕಾಲದಲ್ಲೇ ಉಚ್ಛ್ರಾಯ ಸ್ಥಿತಿಯಲ್ಲಿದ್ದವು. ಕರ್ನಾಟಕದಲ್ಲಿ ಸಾಂಪ್ರದಾಯಿಕ ಅಥವಾ ಜನಪದ ನಾಟಕಗಳಿಗೆ ಸಾಮಾನ್ಯವಾಗಿ ಬಯಲಾಟ ಎಂಬ ಹೆಸರಿದೆ. ಮತ್ತೆ ಬಯಲಾಟಗಳನ್ನು ಪ್ರಾದೇಶಿಕವಾಗಿ ಮೂಡಲಪಾಯ ಅಥವಾ ದೊಡ್ಡಾಟ ಮತ್ತು ಪಡುವಲಪಾಯ ಅಥವಾ ಯಕ್ಷಗಾನ ನಾಟಕ ಎಂದೂ ವರ್ಗೀಕರಿಸಲಾಗಿದೆ[855]. ಕರ್ನಾಟಕದಲ್ಲಿ ನಾಟಕ ಪರಂಪರೆಯು ಕ್ರಿಸ್ತಶಕೆಯ ಆರಂಭದ ಶಿಲಪ್ಪದಿಗಾರಂ ಎಂಬ ತಮಿಳು ಕೃತಿಯಲ್ಲಿ 'ಕರ್ನಾಟ'ದ ನಟಿಯರು ಹಾಗೂ ನರ್ತಕಿಯರು ವೇಷಭೂಷಣಗಳಿಂದ ಅಲಂಕೃತರಾಗಿ ನೃತ್ಯ-ಸಂಗೀತಗಳೊಡನೆ ಅರಸನಿಗೆ ಮನರಂಜನೆ ನೀಡಿದರೆಂದು ಹೇಳಲಾಗಿದೆ. ಕ್ರಿಸ್ತಶಕ 9ನೇ ಶತಮಾನದ ಕವಿರಾಜಮಾರ್ಗ ಕೃತಿಯು ಆ ಕಾಲದಲ್ಲಿ ದೇಶೀಯ ನಾಟಕಗಳಿದ್ದುದನ್ನು ತಿಳಿಸಿ ಅದನ್ನು 'ನಾಳ್ಪಗರಣ' ಎಂದು ಕರೆದಿದೆ. ಅಲ್ಲದೆ ನಾಳ್ಪಗರಣದಲ್ಲಿ ಬೆದಂಡೆ, ಚತ್ತಾಣ, ಬಾಜನೆಗಬ್ಬ ಹಾಗೂ ಮೇಳಪಾಡುಗಳೆಂಬ ಬಗೆಗಳುಂಟೆಂದು ತಿಳಿಸಿದೆ. ಹೀಗೆ ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ವಿವಿಧ ಪ್ರಕಾರದ ನಾಟಕಗಳು ಇದ್ದವು[856]. ಆದರೆ ಚಿಕ್ಕದೇವರಾಯನ ಆಸ್ಥಾನದಲ್ಲಿದ್ದ ಸಿಂಗರಾರ್ಯನು ಸುಮಾರು 1680ರಲ್ಲಿ ರಚಿಸಿದ ಮಿತ್ರವಿಂದಾ ಗೋವಿಂದ (ಸಂಸ್ಕೃತ ರತ್ನಾವಳಿ ನಾಟಕದ ರೂಪಾಂತರ)ವೇ ಕನ್ನಡದಲ್ಲಿ ಉಪಲಬ್ಧವಿರುವ ಮೊದಲ ನಾಟಕವೆಂದು ಹೆಸರಾಗಿದೆ. ಮುಮ್ಮಡಿ ಕೃಷ್ಣರಾಜರು ನಾಟಕರಂಗಕ್ಕೆ ನೀಡಿದ ಪೋಷಣೆಯಿಂದಾಗಿ ಕರ್ನಾಟಕದಲ್ಲಿ ಸಾಂಪ್ರದಾಯಿಕ ಅಥವಾ ದೇಶೀಯ ನಾಟಕಗಳು ಉಚ್ಛ್ರಾಯ

---

*854. **ರಾಮನಾಥ್ ಎಚ್.ಕೆ.,** ಕನ್ನಡ ರಂಗಭೂಮಿಯ ವಿಕಾಸ, ಅಭಿನಯ ಪ್ರಕಾಶನ, ಮೈಸೂರು. 1990. ಪು. XI*

*855. **ರಾಜೇಂದ್ರ, ಡಿ.ಕೆ.,** ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1980, ಪು. 23*

*856. **ರಾಮನಾಥ್ ಎಚ್.ಕೆ.,** ಪೂರ್ವೋಕ್ತ, ಪು. 14*

*857. **ವೆಂಕಟರಾಮಯ್ಯ. ಸಿ.ಕೆ.,** "ಕನ್ನಡ ನಾಟಕಗಳ ಮೇಲೆ ಸಂಸ್ಕೃತ ನಾಟಕಗಳ ಪ್ರಭಾವ". ಭಾರತೀಯ ಕಲಾದರ್ಶನ, ಪು. 335*

ಸ್ಥಿತಿಯನ್ನು ಮುಟ್ಟಿದವು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಗಿರಿಭಟ್ಟರ ತಮ್ಮಯ್ಯನವರು 1848ರಲ್ಲಿ ರಂಗಕ್ಕೆ ತಂದ ದ್ರೌಪದೀ ಸ್ವಯಂವರ ಎಂಬ ನಾಟಕವೇ ಕನ್ನಡದಲ್ಲಿ ಸ್ವತಂತ್ರವಾಗಿ ರಚಿತವಾದ ಮೊಟ್ಟಮೊದಲನೆಯ ನಾಟಕವೆಂದು ಹೇಳಲಾಗಿದೆ[857]. ಆರಂಭದಿಂದಲೂ ಪ್ರಾಕೃತ ಮತ್ತು ಹೆಚ್ಚಾಗಿ ಸಂಸ್ಕೃತ ನಾಟಕಗಳಿಂದ ಕನ್ನಡ ನಾಟಕರಂಗವು ಪ್ರಭಾವಿತವಾಗಿತ್ತು. ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಹಾಗೂ ಪುರಾಣಗಳ ವಸ್ತುಗಳು ಜನಪದ ನಾಟಕಗಳ ಪ್ರಧಾನ ವಸ್ತು ವಿಷಯಗಳಾಗಿದ್ದವು. ನಾಟ್ಯ ಶಾಸ್ತ್ರಕ್ಕನುಸಾರವಾಗಿ ರಚಿತವಾದ ಸಂಸ್ಕೃತ ನಾಟಕಗಳಲ್ಲಿನ ಗಾನ ನೃತ್ಯಗಳು ಕನ್ನಡದ ಬಯಲಾಟಗಳಲ್ಲೂ ಬಳಕೆಯಾಗಿದ್ದವು. ರಾಜಾಶ್ರಯವನ್ನು ಪಡೆದಿದ್ದ ನಾಟಕಗಳು ಸಾಮಾನ್ಯವಾಗಿ ವಿಶೇಷ ಸಮಾರಂಭಗಳಲ್ಲಿ, ದೇವತೆಗಳ ಉತ್ಸವ ಹಾಗೂ ಅರಸರ ವಿವಾಹ ಮಹೋತ್ಸವಗಳಲ್ಲಿ ಪ್ರದರ್ಶಿತವಾಗುತ್ತಿದ್ದವು.

ನಾಟಕಗಳ ಬಗ್ಗೆ ಅಪಾರ ಒಲವನ್ನೊಂದಿದ್ದ ಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಬಸವಪ್ಪ ಶಾಸ್ತ್ರಿಗಳು 'ಅಭಿಜ್ಞಾನ ಶಾಕುಂತಲ', 'ವಿಕ್ರಮೋರ್ವಶೀಯ' ಮತ್ತು 'ರತ್ನಾವಳಿ' ನಾಟಕಗಳನ್ನು ರಚಿಸಿದರು. ಆಸ್ಥಾನ ವಿದ್ವಾಂಸರಾಗಿದ್ದ ಕವಿ ತಿಲಕ ಅಯ್ಯಾಶಾಸ್ತ್ರಿಗಳು, ಅನಂತ ನಾರಾಯಣ ಶಾಸ್ತ್ರಿಗಳು, ಸುಬ್ಬಾಶಾಸ್ತ್ರಿಗಳು ಮೊದಲಾದವರು 'ಉತ್ತರರಾಮ ಚರಿತ', ನಾಗಾನಂದ, ಮೃಚ್ಛಕಟಿಕ ಮೊದಲಾದ ನಾಟಕಗಳನ್ನು ರಚಿಸಿದರು. ಈ ನಾಟಕಗಳನ್ನು ಪ್ರದರ್ಶಿಸಲು ಅರಮನೆಯ ಆಶ್ರಯದಲ್ಲಿ 'ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ' ಎಂಬ ನಾಟಕ ಮಂಡಲಿ ಸ್ಥಾಪಿತವಾಯಿತು. ನಾಟಕಗಳಿಗೆ ಮೈಸೂರು ಅರಸರಿಂದಲೂ, ಮಹಾರಾಣಿಯವರಿಂದಲೂ ಅಪಾರ ಪ್ರೋತ್ಸಾಹ ದೊರೆತಿದ್ದರಿಂದ ಸ್ಫೂರ್ತಿಗೊಂಡ ಬಸವಪ್ಪಶಾಸ್ತ್ರಿಗಳು ಷೇಕ್ಸ್‌ಪಿಯರ್ ಮಹಾಕವಿಯ ಓಥೆಲೋ ನಾಟಕವನ್ನು 'ಶೂರಸೇನ' ಎಂಬ ಹೆಸರಿನಲ್ಲಿ ಅನುವಾದಿಸಿದರು. ಕ್ರಮೇಣ ಅರಮನೆಯ ನಾಟಕ ಮಂಡಳಿ 'ಶಾಕುಂತಲಾ ನಾಟಕ ಮಂಡಳಿ' ಎಂಬ ಹೆಸರಿನಿಂದ ಮೈಸೂರು- ಬೆಂಗಳೂರು, ಮದರಾಸು, ಬಳ್ಳಾರಿ ಮೊದಲಾದೆಡೆ ನಾಟಕಗಳನ್ನು ಪ್ರದರ್ಶಿಸಿ ಅಪಾರ ಜನಮನ್ನಣೆಗೆ ಪಾತ್ರವಾಯಿತು. ಅರಮನೆಯ ಕಂಪನಿಯಿಂದಲೇ ಇಬ್ಭಾಗವಾದ ಮತ್ತೊಂದು ಕಂಪನಿ 'ಶ್ರೀ ಚಾಮುಂಡೇಶ್ವರಿ ಕರ್ನಾಟಕ ಸಭಾ' ಎಂಬ ಹೆಸರಿನಿಂದ ಸ್ಥಾಪಿತವಾಯಿತು[858].

ನಾಲ್ವಡಿ ಕೃಷ್ಣರಾಜ ಒಡೆಯರು ಬಾಲಕರಾಗಿದ್ದಾಗಿನಿಂದಲೂ ನಾಟಕಗಳನ್ನು ವೀಕ್ಷಿಸುವುದರಲ್ಲಿ ಅಪಾರ ಆಸಕ್ತಿ ಹೊಂದಿದ್ದರು. ಅವರ ಟ್ಯೂಟರ್ ಆಗಿದ್ದ ಎಸ್. ಎಂ. ಫ್ರೇಜರ್‌ರವರು ಕಾಂತರಾಜ ಅರಸ್‌ರವರಿಗೆ ಬರೆದ

858. ***ಸೀತಾರಾಮಯ್ಯ ಹ. ವೆಂ.,*** *ಕನ್ನಡ ರಂಗಭೂಮಿ : ಅಂದು, ಇಂದು, ಪ್ರಬುದ್ಧ ಕರ್ನಾಟಕ, ಸಂಪುಟ. 57, ಸಂಚಿಕೆ. 3, 1975, ಪು. 21-22*

859. ***ಬಸವರಾಜು ಕೆ. (ಸಂ).,*** *ಸ್ಪೀಚಸ್ ಆಫ್ ಸರ್ದಾರ್ ಸರ್ ಎಂ. ಕಾಂತರಾಜ ಅರಸು (ದಿವಾನ್ ಆಫ್ ಮೈಸೂರು 1919-1922), ಸಂಪುಟ - 1, ಮೈಸೂರ್, 1935, ಪು. 335-336*

ಪತ್ರದಲ್ಲಿ "ಮಹಾರಾಜರು ಅರಮನೆಯಲ್ಲಿ ನಡೆಯುವ ದೇಶೀಯ ನಾಟಕಗಳನ್ನು ವೀಕ್ಷಿಸುವುದರಿಂದ ಅವರ ವಿದ್ಯಾಭ್ಯಾಸಕ್ಕೆ ತೊಡಕುಂಟಾಗುತ್ತದೆ ಹಾಗೂ ನಾಟಕವನ್ನು ವೀಕ್ಷಿಸಲು ಬೆಳಗಿನ ಜಾವ ಎರಡು ಗಂಟೆಯವರೆಗೂ ಎಚ್ಚರದಿಂದಿರುವುದು ಮಹಾರಾಜರಿಗೆ ಆರೋಗ್ಯಕರವಲ್ಲ"[859] ಎಂದು ತಿಳಿಸಿದ್ದರು. ಆದರೆ ದೇಶೀಯ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಮಹಾರಾಜರನ್ನು ಕಲಾಪೋಷಕರೆಂದು, ಕಲೆ, ಸಾಹಿತ್ಯ, ಸಂಸ್ಕೃತಿ ಪೋಷಿಸುವುದು ರಾಜತ್ವದ ಪ್ರಧಾನ ಕರ್ತವ್ಯವೆಂಬ ಭಾವನೆ ಇದ್ದಿತು. ಕಲಾಕಾರರಿಗೆ ತಮ್ಮ ಕಲೆಯನ್ನು ರಾಜರ ಮುಂದೆ ಪ್ರದರ್ಶಿಸಿ ಪ್ರಶಂಸೆ ಪಡೆಯುವುದೇ ಜೀವನದ ಉದ್ದೇಶವೆಂದು ಭಾವಿಸಿದ್ದರು. ಹಾಗಾಗಿ ಆನಂತರವೂ ಅರಮನೆಯೊಳಗೆ ನಾಟಕ ಪ್ರದರ್ಶನಗಳು ಮುಂದುವರಿದವು. ನಾಲ್ವಡಿಯವರು ಮಹಾರಾಜರಾದ ಮೇಲೆಯೂ ನಾಟಕಗಳನ್ನು ವೀಕ್ಷಿಸುವ ಮೂಲಕ, ಹಣಕಾಸಿನ ನೆರವು, ಬಹುಮಾನಗಳನ್ನು ನೀಡುವ ಮೂಲಕ ಪ್ರೋತ್ಸಾಹಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸ್ಥಾಪಿತವಾಗಿದ್ದ ದಶಾವತಾರ ಆಟದ ತಂಡವನ್ನು 1914ರವರೆಗೂ ಅರಮನೆಯ ಇಲಾಖೆಗಳ ಅಧೀನದಲ್ಲಿ ಮುಂದುವರಿಸಿ ಕೊನೆಗೆ ನಿವೃತ್ತಿ ವೇತನ ನೀಡಿ ಆ ತಂಡದ ಸದಸ್ಯರನ್ನು ಪೋಷಿಸಿದರು[860]. ಸ್ವತಂತ್ರ ಕನ್ನಡ ನಾಟಕ ರಚಿಸಿದ ಗಿರಿಭಟ್ಟ ತಮ್ಮಯ್ಯ 1916ರಲ್ಲಿ ನಿಧನರಾದಾಗ ಮಹಾರಾಜ ನಾಲ್ವಡಿಯವರು ಅವರ ಹೆಂಡತಿ ಗೌರಮ್ಮಳಿಗೆ ಮಾಸಿಕ ಆರು ರೂಪಾಯಿ ನಿವೃತ್ತಿ ವೇತನ ಮತ್ತು ಶವಸಂಸ್ಕಾರದ ವೆಚ್ಚಕ್ಕೆ 50 ರೂಪಾಯಿಗಳನ್ನು ನೀಡಿದರು. ರತ್ನಾವಳಿ ಥಿಯೇಟರ್ ಕಂಪನಿಯ ವರದಾಚಾರ್ 1922ರಲ್ಲಿ ನಾಲ್ವಡಿಯವರ ಸಮ್ಮುಖದಲ್ಲಿ ಜಗನ್ಮೋಹನ ಅರಮನೆಯಲ್ಲಿ ನಾಟಕ ಪ್ರದರ್ಶನ ನೀಡಿದರು. ಅದಕ್ಕಾಗಿ 500 ರೂಪಾಯಿಗಳ ಬಹುಮಾನ ನೀಡಲಾಯಿತು[861]. ಗುಬ್ಬಿ ಕಂಪನಿಯ ನಾಟಕಗಳಲ್ಲಿ ಒಳ್ಳೆ ಹೆಸರು ಗಳಿಸಿದ ಸದಾರಮೆಯಲ್ಲಿನ ವೀರಣ್ಣನವರ ಅಭಿನಯದ ಆದಿಮೂರ್ತಿ, ಸಾಬಿ ಮತ್ತು ಕಳ್ಳನ ಪಾತ್ರಗಳ ವಿಚಾರವು ಜನಜನಿತವಾಗಿ ನಾಲ್ವಡಿ ಕೃಷ್ಣರಾಜರಿಗೂ ತಿಳಿದು ಅರಮನೆಯಿಂದ ಸರ್ದಾರ್ ಗೋಪಾಲರಾಜೇ ಅರಸರನ್ನು ನಾಟಕ ನೋಡಲು ಕಳುಹಿಸಿದರು. ಅವರು ನಾಟಕವನ್ನು ಬಹುವಾಗಿ ಮೆಚ್ಚಿ ಅರಮನೆಯಲ್ಲಿ ಆಡಿಸಬೇಕೆಂದು ಬಹುವಾಗಿ ಪ್ರಯತ್ನಿಸಿದರು. ಆದರೆ ಆ ನಾಟಕದಲ್ಲಿ ಸ್ತ್ರೀಯರು ಪಾತ್ರವನ್ನು ವಹಿಸುವರೆಂಬ ಕಾರಣಕ್ಕೆ ಅರಮನೆಯಲ್ಲಿ ಆಡಲು ಕೆಲವರು ಅವಕಾಶ ಕೊಡಲಿಲ್ಲ[862]. ಆದರೆ ರಂಗಾಚಾರ್ಲು ಮೆಮೋರಿಯಲ್ ಹಾಲಿನಲ್ಲಿ ವೀರಣ್ಣನವರಿಗೆ ಸನ್ಮಾನ ಮಾಡಿಸಿ ಮೂರು ತೊಲ ಬಂಗಾರದ ಮೆಡಲನ್ನು ಗೋಪಾಲರಾಜೇ ಅರಸರ ಮೂಲಕ ಕೊಡಿಸಲಾಯಿತು. ಮತ್ತೆ 1923ರಲ್ಲಿ ಮೈಸೂರಿಗೆ ಬಂದ ಗುಬ್ಬಿ ಕಂಪನಿಗೆ ನಾಟಕಗಳನ್ನು ಅರಮನೆಯಲ್ಲಿ ಪ್ರದರ್ಶನ

---

---

*860. ಸೆಲೆಕ್ಷನ್ಸ್ ಫ್ರಮ್ ದಿ ರೆಕಾರ್ಡ್ಸ್ ಆಫ್ ದಿ ಮೈಸೂರ್ ಪ್ಯಾಲೇಸ್, ಸಂಪುಟ-1 ಡಿವಿಷನಲ್ ಆರ್ಕೈವ್ಸ್ ಆಫೀಸ್, ಮೈಸೂರು, 1993. ಪು. 174-186*

*861. ಅದೇ., ಪು. 219-220*

*862. ಸಿಂಧುವಳ್ಳಿ ಅನಂತಮೂರ್ತಿ ಮತ್ತು ಎಚ್. ಕೆ. ರಾಮನಾಥ್ (ಸಂ)., ಕರ್ನಾಟಕ ರಂಗಭೂಮಿ ನೆನ್ನೆ ಇಂದು ನಾಳೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು 1984, ಪು. 55*

ನೀಡಬೇಕೆಂದು ನಾಲ್ವಡಿಯವರಿಂದ ನಿರೂಪ ಬಂದಿತು. ಸದಾರಮೆ, ಕಬೀರ್‌ದಾಸ್, ಪ್ರಭಾಮಣಿ ವಿಜಯ, ಗುಲೇಬಕಾವಲಿ ನಾಟಕಗಳನ್ನಾಡಿದ ನಂತರ ಚೌ-ಚೌ ನಾಟಕಗಳನ್ನಾಡಬೇಕೆಂದು, ಪ್ರತಿ ದೃಶ್ಯದಲ್ಲಿಯೂ ವೀರಣ್ಣನವರ ಪಾತ್ರವಿರಬೇಕೆಂದು ಮಹಾರಾಜರಿಂದ ನಿರೂಪ ಬಂದಿತು. ಅದರಲ್ಲಿನ ವೀರಣ್ಣನವರ ವೈವಿಧ್ಯಮಯ ಪಾತ್ರಗಳನ್ನು ಮೆಚ್ಚಿ ನಾಲ್ವಡಿಯವರು ಗಂಡಭೇರುಂಡ ಪಕ್ಷಿಯನ್ನು ಮುದ್ರಿಸಿದ ಬಂಗಾರದ ಪದಕವನ್ನು ಅವರಿಗೆ ನೀಡಿ 'ವರ್ಸಟೈಲ್ ಕಮೆಡಿಯನ್' ಎಂದು ಕರೆದು ಗೌರವಿಸಿದ್ದರು[863]. ಗುಬ್ಬಿ ಕಂಪನಿಗೆ ಕುರುಕ್ಷೇತ್ರ ನಾಟಕಕ್ಕಾಗಿ 'ತಾರಾ' ಎಂಬ ಆನೆಯನ್ನು ಮಾವಟಿಗನ ಸಮೇತ ಕೃಷ್ಣರಾಜ ಒಡೆಯರು ಬಹುಮಾನವಾಗಿ ಕಳುಹಿಸಿದ್ದರು[864]. ನಾಲ್ವಡಿ ಕೃಷ್ಣರಾಜ ಒಡೆಯರು ಆಧುನಿಕ ನಾಟಕಗಳನ್ನು ಪ್ರೋತ್ಸಾಹಿಸುವ ಮೂಲಕ ನಾಟಕರಂಗದ ಬೆಳವಣಿಗೆಗೆ ನೆರವಾಗಿದ್ದರು. ಹೀಗೆ ನಾಟಕರಂಗದ ಬೆಳವಣಿಗೆಗೆ ಹಾಗೂ ಸುಧಾರಣೆಗೆ ಮೈಸೂರು ಆಸ್ಥಾನದಿಂದ ಅಪಾರ ಪ್ರೋತ್ಸಾಹ ದೊರೆತಿತು. ಅರಮನೆಯ ಪ್ರೋತ್ಸಾಹದಿಂದ ಸ್ಫೂರ್ತಿಗೊಂಡ ಅನೇಕ ಶ್ರೀಮಂತರು, ಕಲಾಸಕ್ತರು ಹಲವಾರು ನಾಟಕ ಮಂಡಳಿಗಳ ಸ್ಥಾಪನೆಗೆ ಮುಂದಾದರು. ನಾಟಕರಂಗವು ಜನಪ್ರಿಯಗೊಂಡಂತೆ ಅದನ್ನು ಆಕರ್ಷಿಸಲು, ಆಸಕ್ತಿದಾಯಕವನ್ನಾಗಿಸಲು ಪಾಶ್ಚಿಮಾತ್ಯ ಹಾಗೂ ದೇಶೀಯ ನಾಟಕಗಳ ಹಲವಾರು ಅಂಶಗಳನ್ನು ಅಳವಡಿಸಿಕೊಳ್ಳಲಾಯಿತು.

### *ಕನ್ನಡ ನಾಟಕರಂಗದ ಮೇಲೆ ಪಾಶ್ಚಿಮಾತ್ಯ ಪ್ರಭಾವ*

ಬ್ರಿಟಿಷರು ವ್ಯಾಪಾರ ಮತ್ತು ರಾಜಕೀಯ ಅಧಿಕಾರಗಳಿಗಾಗಿ ಭಾರತದಲ್ಲಿ ನೆಲಸಿದ ತರುವಾಯವೇ ಭಾರತದ ನಾಟಕರಂಗವು ಪುನರುಜ್ಜೀವನಗೊಂಡಿತು. ಬ್ರಿಟಿಷರು ನಗರಗಳಲ್ಲಿ ಹೆಚ್ಚಾಗಿ ವಾಸ ಮಾಡುತ್ತಿದ್ದುದರಿಂದ ನಮ್ಮಲ್ಲಿ ಆಧುನಿಕ ನಾಟಕರಂಗವು ನಗರದಲ್ಲಿ ಹೆಚ್ಚಾಗಿ ನೆಲೆಗೊಂಡಿತು. ಇಲ್ಲಿ ನೆಲೆಸಿದ ಬ್ರಿಟಿಷರು ತಮ್ಮ ಮನರಂಜನೆಗಾಗಿ ತಾವೇ ಇಂಗ್ಲಿಷ್ ನಾಟಕಗಳನ್ನು ಆಡುತ್ತಿದ್ದರು. ಕೆಲವು ಸಲ ಇಂಗ್ಲೆಂಡಿನಿಂದ ನಾಟಕ ತಂಡಗಳನ್ನು ಕರೆಯಿಸಿಕೊಳ್ಳುತ್ತಿದ್ದರು. ಆ ಪ್ರದರ್ಶನಗಳಿಗೆ ಸಾಮಾನ್ಯ ಭಾರತೀಯರಿಗೆ ಪ್ರವೇಶವಿರುತ್ತಿರಲಿಲ್ಲ. ಹಾಗಾಗಿ ಭಾರತೀಯರು ತಮಗಾಗಿ ಬೇರೆ ನಾಟ್ಯ ಗೃಹಗಳನ್ನು ಕಟ್ಟಿಕೊಂಡು ಇಂಗ್ಲಿಷ್ ನಾಟಕಗಳನ್ನು ಅನುವಾದ ಮಾಡಿ ಆಡಲಾರಂಭಿಸಿದರು. ಮೊದಲ ಬಾರಿಗೆ ಬಂಗಾಳಿಯರು 1831ರಲ್ಲಿ ಜೂಲಿಯಸ್ ಸೀಜರ್ ನಾಟಕವನ್ನೇ ಆಡಿದರು. ಅನಂತರ ಭಾರತೀಯ ಸಂಸ್ಕೃತಿ ಜಾಗೃತಗೊಂಡಂತೆ ಭಾರತೀಯ ನಾಟಕ ಮತ್ತು ಪಾಶ್ಚಿಮಾತ್ಯ ನಾಟಕಗಳ ಗುಣಗಳನ್ನು

---

*863. ಸಿಂಧುವಳ್ಳಿ ಅನಂತಮೂರ್ತಿ ಮತ್ತು ಎಚ್. ಕೆ. ರಾಮನಾಥ್ (ಸಂ)., ಪೂರ್ವೋಕ್ತ, ಪು. 57*

*864. ಅದೇ., ಪು. 59*

*865. ಶ್ರೀರಂಗ., ಕನ್ನಡ ರಂಗಭೂಮಿ, ನಡೆದು ಬಂದ ದಾರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 1987. ಪು. 395-396*

ಮೈಗೂಡಿಸಿಕೊಂಡು ಭಾರತೀಯ ನಾಟಕರಂಗ ಒಂದು ದೃಷ್ಟಿಯಿಂದ ಆಂಗ್ಲೋ-ಇಂಡಿಯನ್ ಕೂಸಿನ ರೀತಿ ಬೆಳೆಯಿತು[865]. ಇದರಿಂದಾಗಿ ವೃತ್ತಿಪರ ನಾಟಕ ತಂಡಗಳು, ಒಂದು ಸ್ಥಿರ ನಾಟ್ಯಗೃಹ, ಪ್ರೇಕ್ಷಕರಿಗೆ ಪ್ರವೇಶಧನ, ರಂಗಸ್ಥಳದಲ್ಲಿ ಸುತ್ತಿಕೊಂಡು ಮೇಲೇಳುವ ಚಿತ್ರಿತ ಸುರುಳು ಪರದೆಗಳು, ಮೂರು ಕಡೆ ಮುಚ್ಚಿದ, ಚಿತ್ರ ಚೌಕಟ್ಟಿನ ರಂಗಭೂಮಿ (Prosceinium stage) ಮುಂತಾದ ಪಾಶ್ಚಾತ್ಯ ಶೈಲಿಗಳು ಭಾರತೀಯ ನಾಟಕರಂಗಕ್ಕೆ ಸೇರಲ್ಪಟ್ಟವು[866]. ಹೀಗೆ ಬಂಗಾಳದಲ್ಲಿ ಆರಂಭಗೊಂಡ ಪಾಶ್ಚಿಮಾತ್ಯ ಪ್ರಭಾವದ ಆಧುನಿಕ ನಾಟಕರಂಗವು ಬೊಂಬಾಯಿ ಪ್ರಾಂತ್ಯದ ಮೂಲಕ ಉತ್ತರ ಕರ್ನಾಟಕ ಹಾಗೂ ಮೈಸೂರು ಸಂಸ್ಥಾನವನ್ನು ತಲುಪಿತು.

ಪಾಶ್ಚಿಮಾತ್ಯ ಪ್ರಭಾವವು ಹೆಚ್ಚು ವಿಸ್ತರಿಸಲು ಇಲ್ಲಿನ ಇಂಗ್ಲಿಷ್ ನೆರವಾಯಿತು. ಕಾಲೇಜು ಹಂತದ ವಿದ್ಯಾರ್ಥಿಗಳು ಇಂಗ್ಲಿಷ್ ನಾಟಕಗಳ ವಾಚನದಿಂದ ನಾಟಕ ಸಾಹಿತ್ಯದ ಬಗ್ಗೆ ಅಭಿರುಚಿಯನ್ನು ಬೆಳೆಸಿಕೊಂಡರು. ಪಠ್ಯವಿಷಯವಾಗಿ ಗೊತ್ತುಮಾಡುತ್ತಿದ್ದ ಪಾಶ್ಚಾತ್ಯ ನಾಟಕಗಳ ಮೂಲಕ ಪಾಶ್ಚಿಮಾತ್ಯ ನಾಟಕಗಳ ವಸ್ತು, ರಚನಾ ವಿಧಾನ, ಶೈಲಿ ಹಾಗೂ ಪಾತ್ರ ವೈವಿಧ್ಯಗಳತ್ತ ವಿದ್ಯಾವಂತರ ಗಮನ ಹರಿಯಿತು. ಉದಾಹರಣೆಗೆ ಮೊದಲ ಮಹಾಯುದ್ಧದ ಅವಧಿಯಲ್ಲಿ ಮಲೆನಾಡಿನ ತೀರ್ಥಹಳ್ಳಿಯ ಶಾಲೆಯೊಂದರಲ್ಲಿ ಬಾಲಕ ಕುವೆಂಪು ಮತ್ತವರ ಸಂಗಡಿಗರು 'ದಿ ಮರ್ಚೆಂಟ್ ಆಫ್ ವೆನಿಸ್' ನಾಟಕವನ್ನು ಮೂಲ ಇಂಗ್ಲಿಷ್‌ನಲ್ಲಿ ಆಡಿ ಸಂಗ್ರಹವಾದ ಹಣವನ್ನು ಯುದ್ಧನಿಧಿಗೆ ಕಳುಹಿಸಿದ್ದರು[867].

ಮೈಸೂರು ಸಂಸ್ಥಾನದಲ್ಲಿ ಪಾಶ್ಚಿಮಾತ್ಯ ಪ್ರಭಾವವನ್ನು ಅಳವಡಿಸಿಕೊಂಡ ಎರಡು ವಿಧದ ಗುಂಪುಗಳು ಹುಟ್ಟಿಕೊಂಡವು. ಅವುಗಳೆಂದರೆ ವೃತ್ತಿಪರ ನಾಟಕರಂಗ ಹಾಗೂ ಹವ್ಯಾಸಿ ಅಥವಾ ವಿಲಾಸಿ ನಾಟಕರಂಗ. ವೃತ್ತಿಪರ ನಾಟಕರಂಗ ಪ್ರವೇಶಿಸುವ ಮೊದಲು ಗ್ರಾಮದ ಮುಖಂಡರು ಗ್ರಾಮಗಳ ಜನರ ಮನರಂಜನೆಗಾಗಿ ಬಯಲಾಟದ ಮೇಳಗಳನ್ನು ಆಹ್ವಾನಿಸಿ ಅವರಿಗೆ ವೀಳ್ಯ (ಸಂಭಾವನೆ) ಕೊಟ್ಟು ಕಳುಹಿಸುತ್ತಿದ್ದರು. ಆದರೆ ಪಾಶ್ಚಿಮಾತ್ಯ ಶೈಲಿಯ ಚಿತ್ರಚೌಕಟ್ಟಿನ ರಂಗಭೂಮಿ, ರಂಗಸಂಗೀತ ಮುಂತಾದವುಗಳನ್ನು ಅಳವಡಿಸಿಕೊಂಡು ಬಾಲಿವಾಲ ಮೊದಲಾದ ಪಾರ್ಸಿ ವೃತ್ತಿ ನಾಟಕ ಮಂಡಲಿಗಳು ಮೈಸೂರಿಗೆ ಬಂದು ಅಪಾರ ಹಣ ಮಾಡಲಾರಂಭಿಸಿದ್ದನ್ನು ನೋಡಿದ ಸ್ಥಳೀಯರು ತಾವೂ ವೃತ್ತಿನಾಟಕ ಮಂಡಲಿಗಳನ್ನು ಸ್ಥಾಪಿಸಿ ಪ್ರೇಕ್ಷಕರಿಗೆ ಪ್ರವೇಶಧನ ವಿಧಿಸಲಾರಂಭಿಸಿದರು. ಇದರೊಂದಿಗೆ ಮೈಸೂರಿನಲ್ಲಿ ನಾಟಕ ಪ್ರದರ್ಶನವು ಒಂದು ಉದ್ಯಮವಾಯಿತು. ಪ್ರೇಕ್ಷಕರನ್ನು ಆಕರ್ಷಿಸಲು ಹಲವಾರು

---

*866. ಕೃಷ್ಣಮೂರ್ತಿ ವಿ.ಜಿ., ಎರಡು ರುದ್ರನಾಟಕಗಳು, ಬಿ.ಎಂ.ಶ್ರೀ ನೂರರ ನೆನಪು ಪು. 309*

*867. ಕುವೆಂಪು., ನೆನಪಿನ ದೋಣಿಯಲಿ, ಪು. 41*

ಬದಲಾವಣೆಗಳನ್ನು ತರಲಾಯಿತು. ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಗೊಂಡ ನಾಟಕಗಳಲ್ಲಿನ ಕಂದವೃತ್ತ, ಸಂಸ್ಕೃತ ನಾಟಕ ರಚನಾ ನಿಯಮಗಳು ಆಧುನಿಕ ನಾಟಕರಂಗಕ್ಕೆ ಹೊಂದಿಕೊಳ್ಳುವುದಿಲ್ಲವೆಂಬುದನ್ನು ಅರಿತು ಪಾಶ್ಚಿಮಾತ್ಯ ತಂತ್ರಗಳನ್ನು ಪ್ರಯೋಗಿಸಿ ಸಂಸ್ಕೃತ ನಾಟಕಗಳನ್ನು ಅಳವಡಿಸಿಕೊಳ್ಳುವ ಹಾಗೂ ಪೌರಾಣಿಕ ವಸ್ತುಗಳ ಮೇಲೆ ನಾಟಕಗಳನ್ನು ರಚಿಸುವ ಪ್ರಯತ್ನಕ್ಕೆ ವಿದ್ವಾಂಸರು ಮುಂದಾದರು. ಚಿತ್ರ ಚೌಕಟ್ಟಿನ ರಂಗಭೂಮಿಗೆ ತಕ್ಕಂತೆ ಅಂಕಗಳನ್ನು ದೃಶ್ಯಗಳಾಗಿ ವಿಂಗಡಿಸಿ ಸರಳ ರಗಳೆಯಲ್ಲಿ ಇಲ್ಲವೆ ಆಧುನಿಕ ಗದ್ಯದಲ್ಲಿ ನಾಟಕಗಳನ್ನು ರಚಿಸುವ ಕ್ರಮ ಪ್ರಾರಂಭವಾಯಿತು[868]. ಲೆಬಿಡಾಫ್ ಎಂಬ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿ ಪರಿಚಯಿಸಿದ ಯೂರೋಪಿನ ಮಾದರಿಯ ನಾಟಕಶಾಲೆ, ಚಿತ್ರಚೌಕಟ್ಟಿನ ರಂಗಭೂಮಿ, ನಾಟಕ ಕೃತಿ ಹಾಗೂ ಅಭಿನಯ ವಿಧಾನಗಳನ್ನು ಪ್ರಾದೇಶಿಕ ಪರಿಸರಕ್ಕೆ ಒಂದಿಷ್ಟು ಬದಲಾಯಿಸಿಕೊಂಡ ವೃತ್ತಿಪರ ನಾಟಕ ತಂಡಗಳು ಸಂಗೀತ ಪ್ರಧಾನ ನಾಟಕಗಳನ್ನು ಪ್ರದರ್ಶಿಸುತ್ತಾ ವಿದ್ವಾಂಸರು, ಜನಸಾಮಾನ್ಯರು ಎಲ್ಲರನ್ನೂ ರಂಜಿಸಿದವು. ಅವು ರಂಗಭೂಮಿಯ ವೈಭವ, ಐಂದ್ರಜಾಲಿಕ ರಂಗಸಜ್ಜು, ಅಭಿನಯ ವೈವಿಧ್ಯತೆಗಳ ಮೂಲಕ ಜನಾಕರ್ಷಣೀಯವಾದವು. ಪ್ರಸಿದ್ಧ ಚಿತ್ರಕಾರರಿಂದ ಚಿತ್ರಿಸಲ್ಪಟ್ಟ ಪರದೆಗಳು ಮೇಲಕ್ಕೆ ಸುತ್ತಿಕೊಂಡು ಹೋಗುವಂತೆ ಮಾಡಿ ಗ್ರಾಮಾಂತರ ಜನ ಬಾಯಿಬಿಟ್ಟು ನೋಡುವಂತೆ ಮಾಡಿದರು. ಪಾರ್ಸಿ ನಾಟಕಗಳ ಪ್ರಭಾವದಿಂದ ಆಧುನಿಕ ನಾಟಕರಂಗಕ್ಕೆ ಕಟ್‌ಸೀನ್ ಅಥವಾ ಟ್ರಾನ್ಸ್‌ಫರ್ ಸೀನ್ ಪ್ರಯೋಗ 1900ರ ವೇಳೆಗೆ ಮೈಸೂರು ಭಾಗವನ್ನು ಪ್ರವೇಶಿಸಿತು[869]. ಪೌರಾಣಿಕ ನಾಟಕಗಳಲ್ಲಿನ ಅತಿಮಾನುಷ ಸನ್ನಿವೇಶಗಳನ್ನು ಬಿಂಬಿಸಲು ಆಧುನಿಕ ತಂತ್ರಗಳನ್ನು ಅಳವಡಿಸಿಕೊಳ್ಳಲಾಯಿತು. ರಂಗದ ಮೇಲೆ ಮಾಯಾಜಾಲವನ್ನು ಸೃಷ್ಟಿಸಲು ವಿದ್ಯುತ್ ಬೆಳಕನ್ನು ಬಳಸಿಕೊಳ್ಳಲಾಯಿತು. ವರದಾಚಾರ್ಯರು ಹಾಗೂ ಗುಬ್ಬಿ ವೀರಣ್ಣನವರು ಡೈನಮೋ ವಿದ್ಯುತ್ ಉತ್ಪಾದನಾ ಯಂತ್ರಗಳನ್ನು ಬಳಸಿಕೊಂಡು ವಿದ್ಯುತ್ ಬೆಳಕನ್ನು ತಂದು ಬಳಸಿಕೊಂಡರು. ಪ್ರೇಕ್ಷಕರನ್ನು ಬೆರಗುಗೊಳಿಸಲು ರಂಗದ ಮೇಲೆ ಡಿಮ್ಮರ್ ಬಳಸಿ, ಫೇಡ್ ಇನ್ (ಬೆಳಕಿನ ಸೃಷ್ಟಿ) ಮತ್ತು ಫೇಡ್ ಔಟ್ (ಕತ್ತಲ ಸೃಷ್ಟಿ) ವಿಧಾನಗಳಿಂದ ದೃಶ್ಯ ಬದಲಾವಣೆಯ ಪದ್ಧತಿಯನ್ನು ತಂದರು. ಆರ್. ನಾಗೇಂದ್ರರಾಯರು ಫ್ಲಡ್‌ಲೈಟ್ ಮತ್ತು ಸೈಡ್‌ಲೈಟ್‌ಗಳನ್ನು ಬಳಕೆಗೆ ತಂದರು[870]. ಇವುಗಳನ್ನು ಪ್ರಮುಖವಾಗಿ ಪೌರಾಣಿಕ ಕತೆಗಳಾದ ಲಂಕಾದಹನ, ಭೂಕೈಲಾಸ, ಸಂಪೂರ್ಣ ರಾಮಾಯಣ, ದಶಾವತಾರ, ಕೃಷ್ಣಲೀಲಾ, ಎಡೆಯೂರು ಸಿದ್ಧಲಿಂಗೇಶ್ವರ ಮಹಾತ್ಮೆ ಮುಂತಾದ ನಾಟಕಗಳಲ್ಲಿ ಬಳಸಿಕೊಂಡು ಗ್ರಾಮಾಂತರ ಜನರನ್ನು ರಂಜಿಸಲು ವೃತ್ತಿಪರ ನಾಟಕ ತಂಡಗಳು ಪ್ರಯತ್ನಿಸಿದವು. ವೃತ್ತಿ ನಾಟಕ ತಂಡಗಳು ಹೊಟ್ಟೆಯ

---

*868. ರಾಮನಾಥ್ ಎಚ್.ಕೆ., ಪೂರ್ವೋಕ್ತ, ಪು. 29*

*869. ಅದೇ., ಪು. 236*

*870. ರಾಮನಾಥ್., ಎಚ್.ಕೆ. ಪೂರ್ವೋಕ್ತ, ಪು. 229-251*

ಪಾಡಿಗಾಗಿ ನಾಟಕವನ್ನು ವೃತ್ತಿಯನ್ನಾಗಿ ಆರಿಸಿಕೊಂಡ ನಟರನ್ನೊಂದಿದ್ದವು. ಆದರೆ ವಿಲಾಸಿ ನಾಟಕ ತಂಡಗಳ ನಟರು ಪಾಶ್ಚಾತ್ಯ ನಾಟಕರಂಗದ ಪ್ರಭಾವಕ್ಕೊಳಗಾದ ಕಾಲೇಜು ಅಧ್ಯಾಪಕರು, ವಿದ್ಯಾರ್ಥಿಗಳು, ವಕೀಲರು ಮುಂತಾದ ವಿದ್ಯಾವಂತ ವರ್ಗವನ್ನೊಳಗೊಂಡಿತ್ತು. ಇವರು 20ನೇ ಶತಮಾನದ ಪ್ರಾರಂಭದಿಂದಲೇ ಪಾಶ್ಚಿಮಾತ್ಯ ನಾಟಕ ಕೃತಿಗಳಲ್ಲಿನ ಸರಳ ರಗಳೆಯ ಹಾಗೂ ಗದ್ಯರೂಪದ ಸಂಭಾಷಣೆ, ವಸ್ತು ಹಾಗೂ ನಾಟಕ ರಚನಾ ವಿಧಾನಗಳಿಂದ ಪ್ರಭಾವಿತರಾಗಿ ಪಾಶ್ಚಿಮಾತ್ಯ ಶೈಲಿಯ ನಾಟಕಗಳನ್ನು ರಚಿಸಿ, ರಂಗಭೂಮಿಯಲ್ಲಿ ಅಳವಡಿಸಿದರು. ವಿಲಾಸಿ ನಾಟಕ ಸಂಘಗಳು ಪಾಶ್ಚಿಮಾತ್ಯ ಶೈಲಿಯ ಗದ್ಯನಾಟಕಗಳನ್ನು ನೀಲಿ ಕರ್ಟನ್‌ಗಳು ಇಲ್ಲವೆ 'ಹೌಸ್ ಫ್ಲಾಟ್'ಗಳನ್ನು ಬಳಸಿಕೊಂಡು, ಸರಳ ರಂಗಸಜ್ಜಿಕೆ, ಬೆಳಕಿನ ಪ್ರಾಮುಖ್ಯ, ಮೇಳಗಾನ ಇವುಗಳಿಂದ ಪ್ರೇಕ್ಷಕರನ್ನು ಆಕರ್ಷಿಸುತ್ತಿದ್ದವು[871]. ಆಧುನಿಕ ನಾಟಕಗಳನ್ನು ಆಡುತ್ತಿದ್ದ ಪ್ರಮುಖ ವಿಲಾಸಿ ನಾಟಕ ಸಂಘಗಳೆಂದರೆ: ಬೆಂಗಳೂರಿನ ಅಮೆಚ್ಯೂರ್ ಡ್ರಮಾಟಿಕ್ ಅಸೋಸಿಯೇಷನ್, ಮೈಸೂರಿನ ಮಹಾರಾಜಾ ಕಾಲೇಜು ನಾಟಕ ಸಂಘ ಹಾಗೂ ಲಿಟರರಿ ಮತ್ತು ಡ್ರಮಾಟಿಕ್ ಅಸೋಸಿಯೇಷನ್ ಮುಂತಾದವು. ಪಾಶ್ಚಿಮಾತ್ಯ ದೇಶಗಳಲ್ಲಿನ ನಾಟಕಕಾರರು ಸಮಕಾಲೀನ ಸಮಾಜದ ಸ್ಥಿತಿಗತಿಗಳನ್ನು, ಲೋಪದೋಷಗಳನ್ನು ಎತ್ತಿ ಹಿಡಿಯುವ, ಸಮಸ್ಯೆಗಳನ್ನು ಪ್ರೇಕ್ಷಕರ ಮುಂದಿಡುವ ವಸ್ತುಗಳನ್ನಾಧರಿಸಿದ ನಾಟಕಗಳನ್ನು ರಂಗಭೂಮಿಗೆ ತಂದರು. ಈ ನಾಟಕಗಳು ಸಮಾಜವನ್ನು ಸುಧಾರಿಸುವ ಉದ್ದೇಶ ಹೊಂದಿದ್ದವು[872]. ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋಗಿದ್ದ ಕೈಲಾಸಂ ಅವರು ಲಂಡನ್ ಪಟ್ಟಣದ ನಾಟಕರಂಗದ ಪ್ರದರ್ಶನಗಳನ್ನು ನೋಡಿ ಅಲ್ಲಿನ ಸಾಮಾಜಿಕ ನಾಟಕಗಳ ಸಂಗೀತ ರಹಿತವಾಗಿ ಸರಳ ರಂಗಸಜ್ಜಿಕೆಯೊಂದಿಗೆ ಅಭಿನಯಿಸುವ ಪದ್ಧತಿಯಿಂದ ಪ್ರಭಾವಿತರಾಗಿ 1915ರಲ್ಲಿ ಮೈಸೂರಿಗೆ ಹಿಂತಿರುಗಿದರು.

ಮೈಸೂರು ಸಂಸ್ಥಾನದಲ್ಲಿ "ನಾವು ಸಾಮಾಜಿಕ ನಾಟಕಗಳನ್ನಾಡುವ ಪ್ರಯೋಗ ಮಾಡಬೇಕು. ಈ ಸಂಗೀತ ನಾಟಕಗಳು ಸಾಕು" ಎಂಬ ಅಭಿಪ್ರಾಯ ಕೆಲವರಲ್ಲಿ ಬಂದಿತ್ತು. ನಾಟಕ ಮಂಡಳಿಯೊಂದು ಉತ್ತಮ ಸಾಮಾಜಿಕ ನಾಟಕಕ್ಕೆ ಬಹುಮಾನ ಕೊಡುವುದಾಗಿ ಹೇಳಿ ನಾಟಕ ಸ್ಪರ್ಧೆಯೊಂದನ್ನೇರ್ಪಡಿಸಿತು. ಆ ಸ್ಪರ್ಧೆಯಲ್ಲಿ ಕೈಲಾಸಂರವರು ರಚಿಸಿದ 'ಟೊಳ್ಳುಗಟ್ಟಿ' ನಾಟಕ ಮೊದಲ ಬಹುಮಾನ ಗಳಿಸಿತು. ಇದರೊಂದಿಗೆ ಸಾಮಾಜಿಕ ನಾಟಕಗಳ ರಚನೆಗೆ ಚಾಲನೆ ದೊರೆತಿತು[873].

---

*871. ಅದೇ., ಪು. 283-287*

*872. ಶ್ರೀರಂಗ., ಕನ್ನಡ ರಂಗಭೂಮಿ ನಡೆದು ಬಂದ ದಾರಿ, ಪು. 399-400*

*873. ತಿ. ತಾ. ಶರ್ಮ., ನನ್ನ ಜೀವನ ಮತ್ತು ಧ್ಯೇಯ, ಪು. 160*

*874. ರಾಮನಾಥ್ ಎಚ್.ಕೆ., ಪೂರ್ವೋಕ್ತ, ಪು. 288-289*

ಹಾಗಾಗಿ 1920 ದಶಕದ ನಂತರ ಕಾಲೇಜು ಮತ್ತು ಶಾಲೆಗಳ ವಾರ್ಷಿಕೋತ್ಸವಗಳಲ್ಲಿ ಕೈಲಾಸಂ, ಶ್ರೀರಂಗ ಮತ್ತಿತರರ ಸಾಮಾಜಿಕ ನಾಟಕಗಳನ್ನು ನೀಲಿಕರ್ಟನ್ ಅಥವಾ ಸಾಧಾರಣ ಮನೆಯ ಸೀನರಿಗಳನ್ನು ಬಳಸಿ ಕಡಿಮೆ ಖರ್ಚಿನಲ್ಲಿ ನಾಟಕಗಳು ಪ್ರದರ್ಶಿತವಾದವು. ನಾಟಕಗಳಲ್ಲಿ ಸಂಭಾಷಣಾಶೈಲಿ, ವೇಷಭೂಷಣ, ರಂಗಸಜ್ಜಿಕೆ ಎಲ್ಲವೂ ವಾಸ್ತವಿಕತೆಯನ್ನು ಪ್ರತಿಬಿಂಬಿಸುವಂತಿರುತ್ತಿತ್ತು[874].

ಹಳೆಯ ಪ್ರಾಕಾರದ ನಾಟಕಗಳು ಪ್ರಯೋಗ ಯೋಗ್ಯವಲ್ಲವೆಂದು ಭಾವಿಸಿದ ನಾಟಕಕಾರರು 1920-40ರ ನಡುವೆ ವಿಲಾಸಿ ನಾಟಕರಂಗವನ್ನು ಉದ್ದೇಶವಿರಿಸಿಕೊಂಡು ಕೆಲ ನಾಟಕಗಳನ್ನು ರಚಿಸಿದರು. ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರು ಹಾಗೂ ಪ್ರಾಧ್ಯಾಪಕರಾಗಿದ್ದ ಇವರು ಗ್ರೀಕ್ ಮಾದರಿಯ ನಾಟಕಗಳನ್ನು ಹಾಗೂ ಇಂಗ್ಲೆಂಡ್ ಮತ್ತು ಫ್ರಾನ್ಸ್ ದೇಶಗಳ ರಂಗಭೂಮಿಯಲ್ಲಿದ್ದ ರೀತಿಯ ಪ್ರಹಸನಗಳನ್ನು ಕನ್ನಡಕ್ಕೆ ತಂದರು. ಅವುಗಳೆಲ್ಲವೂ ಭಾಷಾಂತರಗಳು ಇಲ್ಲವೆ ರೂಪಾಂತರಗಳು. ಹಾಗೆ ಪಾಶ್ಚಾತ್ಯ ಪ್ರಭಾವದಿಂದ ಸೃಷ್ಟಿಯಾದ ಪ್ರಮುಖ ನಾಟಕಗಳೆಂದರೆ ಅಶ್ವತ್ಥಾಮನ್, ರಕ್ತಾಕ್ಷಿ, ಆಷಾಢಭೂತಿ ಮುಂತಾದವು. ಭಾರತೀಯ ನಾಟಕ ಸಂಪ್ರದಾಯಕ್ಕೆ ಭಿನ್ನವಾದ ರುದ್ರನಾಟಕ (tragedy) ಪ್ರಾಕಾರವನ್ನು ಬಿ. ಎಂ. ಶ್ರೀ. ಮೊದಲು ಕನ್ನಡಿಗರಿಗೆ 'ಅಶ್ವತ್ಥಾಮನ್' ಕೃತಿಯ ಮೂಲಕ ಪರಿಚಯಿಸಿದರು. ಇದಕ್ಕೆ ಮೊದಲು ಎ. ಆನಂದರಾವ್ 'ರೋಮಿಯೋ ಅಂಡ್ ಜೂಲಿಯಟ್' ಎಂಬ ದುಃಖಾಂತ್ಯದ ನಾಟಕವನ್ನು 'ರಾಜವರ್ಮ ಲೀಲಾವತಿ ಚರಿತ್ರೆ' ಎಂದು ಅನುವಾದಿಸಿದ ನಾಟಕದಲ್ಲಿ ನಾಟಕವನ್ನು ವಿಷಾದದಲ್ಲಿ ಅಂತ್ಯಗೊಳಿಸುವ ಬದಲು ಪ್ರಾಣಹತ್ಯೆ ಮಾಡಿಕೊಂಡ ನಾಯಕ-ನಾಯಕಿಯರನ್ನು ಸಿದ್ಧಪುರುಷನೊಬ್ಬನು ಅವರನ್ನು ಎಬ್ಬಿಸಿ ನಾಟಕವು ಹರ್ಷಾಂತಗೊಳ್ಳುವಂತೆ ಮಾಡಿದ್ದನು. ಇದಕ್ಕೆ ಕಾರಣ ಭರತಮುನಿಯ ನಾಟ್ಯಶಾಸ್ತ್ರದ ನಿಯಮಗಳಿಗೆ ಕಟ್ಟುಬಿದ್ದು ನಾಟಕ ವಿಷಾದದಲ್ಲಿ ಅಂತ್ಯಗೊಳ್ಳುವುದನ್ನು ಅನುಮೋದಿಸದ ಸಂಪ್ರದಾಯಬದ್ಧವಾದ ಪ್ರೇಕ್ಷಕ ಮನಸ್ಸುಗಳಿದ್ದುದೇ ಆಗಿತ್ತು[875]. ಬಿ.ಎಂ.ಶ್ರೀಯವರ ತರುವಾಯ ಸೋಹರಾಬ್ ಮತ್ತು ರುಸ್ತುಂ, ರಕ್ತಾಕ್ಷಿ, ಸಾಕ್ರೆಟೀಸನ ಮರಣ ಮುಂತಾದ ರುದ್ರನಾಟಕಗಳು ಕನ್ನಡಕ್ಕೆ ಬಂದವು. ಕುವೆಂಪುರವರು 1929ರಲ್ಲಿ ಷೇಕ್ಸ್‌ಪಿಯರ್‌ನ 'ಟೆಂಪೆಸ್ಟ್' ಎಂಬ ನಾಟಕವನ್ನು 'ಬಿರುಗಾಳಿ' ಎಂಬ ಹೆಸರಿನಲ್ಲಿ ಭಾವಾನುವಾದ ಮಾಡಿ ಮಹಾರಾಜ ಕಾಲೇಜಿನ ವಾರ್ಷಿಕೋತ್ಸವದಲ್ಲಿ ಪ್ರದರ್ಶಿಸಿದರು. ಈ ನಾಟಕವು ಕಟ್ಟುನಿಟ್ಟಾದ ಭಾಷಾಂತರವಾಗಿರದೆ, ದೃಶ್ಯಗಳನ್ನು, ಪಾತ್ರಗಳನ್ನು ಕರ್ನಾಟಕದ ವಾತಾವರಣಕ್ಕೆ ಹೊಂದಿಕೊಳ್ಳುವಂತೆ ಮತ್ತು ಮಾತುಕತೆ, ಸಂವಾದಗಳು ಸ್ವಾರಸ್ಯವಾಗಿದ್ದು ಮೂಲಕ್ಕಿಂತ ವಿಭಿನ್ನವಾಗಿದ್ದವು[876].

---

*875. **ರಾಮೇಗೌಡ ಮತ್ತು ಪ್ರಧಾನ್ ಗುರುದತ್ (ಸಂ)**, ಬಿ. ಎಂ. ಶ್ರೀ ನೂರರ ನೆನಪು, ಪು. 311*

*876. **ಕುವೆಂಪು.**, ನೆನಪಿನ ದೋಣಿಯಲ್ಲಿ, ಪು. 634*

*877. **ಅದೇ.**, ಪು. 592*

ಕುವೆಂಪುರವರ ಕ್ರಾಂತಿಭಾವದ ಸರಳ ರಗಳೆಯ 'ಜಲಗಾರ' ನಾಟಕವನ್ನು ಸ್ಕೌಟುದಳದ ವಾರ್ಷಿಕೋತ್ಸವದಲ್ಲಿ ಪ್ರಯೋಗಿಸಲ್ಪಟ್ಟಿತು. ಈ ನಾಟಕವು ಬ್ರಾಹ್ಮಣರನ್ನು ಅವಹೇಳನ ಮಾಡುವುದಕ್ಕೆ ಬರೆಯಲಾಗಿದೆ ಎಂದು ಟೀಕೆಗಳು ಬಂದವು[877]. ಹೀಗೆ ಪಾಶ್ಚಿಮಾತ್ಯ ಪ್ರಭಾವದಿಂದ ರಚಿತವಾದ ನಾಟಕಗಳು ಸಾಮಾಜಿಕ ವ್ಯವಸ್ಥೆಯ ಲೋಪದೋಷಗಳನ್ನು ಎತ್ತಿಹಿಡಿಯುವ, ವಿರೋಧಿಸುವ, ಸುಧಾರಿಸುವ ಉದ್ದೇಶಗಳನ್ನು ಪ್ರೇಕ್ಷಕರ ಮೂಲಕ ತಲುಪಿಸುವ ಪ್ರಯತ್ನ ಮಾಡಿದವು.

### *iv) ಸಂಗೀತ*

ಸಂಗೀತ ಎಂಬುದು ಎಲ್ಲರಿಗೂ ಆಹ್ಲಾದ ನೀಡುವ ಧ್ವನಿವಿಶೇಷ ಹಾಗೂ ವಿದ್ಯೆ. ಸಾಮಾನ್ಯವಾಗಿ ಎಲ್ಲರಿಗೂ ಒಂದಲ್ಲ ಒಂದು ವಿಧದ ಸಂಗೀತದಲ್ಲಿ ಅಭಿರುಚಿ ಇದ್ದೇ ಇರುತ್ತದೆ. ಸಂಗೀತಕ್ಕೆ ದೇಶ, ಭಾಷೆ, ಜಾತಿ ಭೇದವಿಲ್ಲ ಅದು ವಿಶ್ವಕ್ಕೆ ಸೇರಿದ್ದು. ವಿಶ್ವವನ್ನೇ ಚೇತನಗೊಳಿಸುವ ವಿಶ್ವಮಾನ್ಯತೆ ಸಂಗೀತಕ್ಕಿದೆ. ಸಂಗೀತವು ಭಾರತೀಯರ ಪ್ರಾಚೀನ ಕಲಾಮಾಧ್ಯಮವಾಗಿದ್ದು ಭಾರತೀಯ ಸಂಸ್ಕೃತಿಯ ಅಂತಃಸತ್ವದಲ್ಲಿ ಸೇರಿಹೋಗಿದೆ. ಭಾರತೀಯ ಸಂಗೀತದ ಮೇಲೆ ಪರ್ಷಿಯಾ ದೇಶದ ಸಂಗೀತ ಪದ್ಧತಿಯ ಪ್ರಭಾವದಿಂದಾಗಿ ಉತ್ತರಭಾರತದ ಸಂಗೀತದ ಸ್ವರೂಪವು ಮಾರ್ಪಟ್ಟು ಉತ್ತರ ಭಾರತದ ಸಂಗೀತವು ಹಿಂದೂಸ್ಥಾನಿ ಸಂಗೀತವೆಂದು, ದಕ್ಷಿಣ ಭಾರತದ ಸಂಗೀತವು ಕರ್ನಾಟಕ ಸಂಗೀತವೆಂದು ಎರಡು ವಿಭಾಗಗಳು ಬೆಳವಣಿಗೆಗೊಂಡವು[878]. ಮೈಸೂರು ಸಂಸ್ಥಾನದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ಚಾಮರಾಜ ಒಡೆಯರ ಕಾಲದಲ್ಲಿ ಸಂಗೀತಕ್ಕೆ ಅಪಾರ ಪ್ರೋತ್ಸಾಹ ಇತ್ತು. ನಾಲ್ವಡಿ ಕೃಷ್ಣರಾಜ ಒಡೆಯರ ತಂದೆ ಚಾಮರಾಜ ಒಡೆಯರಿಗೆ ಸಂಗೀತದಲ್ಲಿ ಅಪಾರ ಆಸಕ್ತಿ ಇದ್ದುದಲ್ಲದೆ ಸ್ವತಃ ಅವರೇ ಸುಶ್ರಾವ್ಯವಾಗಿ ಪಿಟೀಲನ್ನು ನುಡಿಸುತ್ತಿದ್ದರು. ಅವರಿಗೆ ಪಾಶ್ಚಾತ್ಯ ಸಂಗೀತದಲ್ಲೂ ಆಸಕ್ತಿ ಇದ್ದು ತಮ್ಮ ಮಗಳಾದ ಜಯಲಕ್ಷ್ಮಣ್ಣಿಯವರಿಗೆ ಕರ್ನಾಟಕ ಸಂಗೀತದ ಜೊತೆಗೆ ಪಿಯಾನೋ ವಾದ್ಯವನ್ನು ಕಲಿಸಲು ಏರ್ಪಾಡು ಮಾಡಿದ್ದರು. ಹಾಗಾಗಿ ನಾಲ್ವಡಿಯವರು ಬಾಲಕರಾಗಿದ್ದಾಗಿನಿಂದಲೂ ಸಂಗೀತದ ಬಗ್ಗೆ ತೀವ್ರಾಸಕ್ತಿ ಹೊಂದುವಂತಾಯಿತು[879]. ನಾಲ್ವಡಿಯವರು ವೀಣೆಯನ್ನು ವೀಣೆಶ್ಯಾಮಣ್ಣ ಅನಂತರ ವೀಣೇ ಶೇಷಣ್ಣನವರಿಂದ ಕಲಿತರು. ಪಿಟೀಲು ವಾದನವನ್ನು ಪಾಶ್ಚಿಮಾತ್ಯ ವಿದ್ವಾಂಸರಿಂದ ಕಲಿತರು. ಅಲ್ಲದೆ ಹಿಂದೂಸ್ಥಾನಿ ಸಂಗೀತ ಹಾಗೂ ನಾಗಸ್ವರವಾದನಗಳ್ನು ಕಲಿತಿದ್ದರು[880]. ಹೀಗೆ ನಾಲ್ವಡಿ ಕೃಷ್ಣರಾಜ ಒಡೆಯರು ಸಂಗೀತ ಪ್ರೇಮಿಗಳಾಗಿದ್ದುದು ಮಾತ್ರವಲ್ಲದೆ ಸ್ವತಃ ಗಾಯಕರಾಗಿ ಸಂಗೀತ ಕಲೆಯನ್ನು ಅತಿಶಯವಾಗಿ ಬೆಳೆಸಲು ಶ್ರಮಿಸಿದರು. ಇವರು ಕರ್ನಾಟಕ ಸಂಗೀತ, ಹಿಂದೂಸ್ಥಾನೀ ಸಂಗೀತ ಮತ್ತು ಪಾಶ್ಚಿಮಾತ್ಯ ಸಂಗೀತ ಈ

---

*878. ರಾಮರತ್ನಂ ವಿ., ಮೈಸೂರು ಒಡೆಯರು ಮತ್ತು ಕರ್ನಾಟಕ ಸಂಗೀತ, ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2000, ಪು. V*

*879. ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪು. 41*

*880. ಸಂಪತ್ಕುಮಾರಾಚಾರ್ಯ. ವಿ ಎಸ್. ಮತ್ತು ಎಂ. ಎಲ್. ಶಿವಶಂಕರ, ಸಂಗೀತ ಮತ್ತು ಕಲೆಗೆ ಮೈಸೂರು ಒಡೆಯರ ಪ್ರೋತ್ಸಾಹ- ಕೊಡುಗೆ, ಪು. 18*

ಮೂರರಲ್ಲೂ ಸಮಾನವಾದ ಆಸಕ್ತಿ ಹಾಗೂ ಪರಿಣತಿಯನ್ನು ಹೊಂದಿದ್ದರು. ನಾಲ್ವಡಿಯವರು ಗಾಯನವಲ್ಲದೆ ವೀಣೆ, ಕೊಳಲು, ಪಿಟೀಲು, ಮೃದಂಗ, ನಾಗಸ್ವರ, ಸಿತಾರ್, ಪಿಯಾನೋ ಮತ್ತು ಸ್ಯಾಕ್ಸೋಫೋನ್ ಈ ಎಂಟು ವಾದ್ಯಗಳನ್ನು ಸುಶ್ರಾವ್ಯವಾಗಿ ನುಡಿಸುತ್ತಿದ್ದರು. ನಾಲ್ವಡಿಯವರು ಸಂಗೀತದಲ್ಲಿ ಎಂತಹ ಪರಿಣಿತರಾಗಿದ್ದರೆಂದರೆ ಯಾವುದೇ ಸಂಗೀತ ಪ್ರಾಕಾರದಲ್ಲಾಗುವ ಶೃತಿ, ಸ್ವರ, ರಾಗ, ತಾಳ, ಲಯ, ಭಾವಗಳಲ್ಲಿ ಕಿಂಚಿತ್ ದೋಷವಾದರೆ ಅದನ್ನು ಕೂಡಲೇ ಗ್ರಹಿಸುವಷ್ಟು ಪ್ರಬುದ್ಧರಾಗಿದ್ದರು. ಅಂತಹ ಅನೇಕ ಉದಾಹರಣೆಗಳಿದ್ದು ಅವುಗಳಲ್ಲಿ ಪ್ರಮುಖವಾದುದೆಂದರೆ ಮಿರ್ಜಾ ಇಸ್ಮಾಯಿಲ್‌ರು ಸಿ. ಆರ್. ರೆಡ್ಡಿಯವರಿಗೆ ತಿಳಿಸಿದಂತೆ ಒಮ್ಮೆ ಮಹಾರಾಜರು ಪ್ರಸಿದ್ಧ ಕಂಪನಿಯೊಂದು ಹೊರತಂದಿದ್ದ ಗ್ರಾಮೋಫೋನ್ ರೆಕಾರ್ಡ್‌ನಲ್ಲಿನ ಸೂಕ್ಷ್ಮದೋಷವೊಂದನ್ನು ಗುರುತಿಸಿದಾಗ ಆ ಕಂಪನಿ ತನ್ನ ಎಲ್ಲಾ ರೆಕಾರ್ಡ್‌ಗಳನ್ನೂ ಮಾರುಕಟ್ಟೆಯಿಂದ ವಾಪಾಸು ಪಡೆಯುವಂತಾಯಿತು[881]. ಒಮ್ಮೆ ಇಂಗ್ಲಿಷ್ ಬ್ಯಾಂಡ್‌ನವರು ನುಡಿಸಿಕೊಂಡು ಬರುತ್ತಿದ್ದ ಮಾರ್ಚ್‌ಸಾಂಗ್‌ವೊಂದನ್ನು ಅರ್ಗನ್‌ರೂಮ್‌ನಲ್ಲಿ ದರ್ಬಾರಿಗಾಗಿ ಅಲಂಕೃತರಾಗುತ್ತಿದ್ದ ಮಹಾರಾಜರು ದೂರದಿಂದಲೇ ಕೇಳಿಸಿಕೊಂಡು ಅಪಸ್ವರವೊಂದನ್ನು ಗುರುತಿಸಿ ಅನಂತರ ಅವರನ್ನು ಕರೆಸಿ ಆಗ ಅಲ್ಲಿದ್ದ ಅವರ ಗುರು ಸ್ಮಿತ್‌ರ ಎದುರಲ್ಲೇ ಕ್ಲಾರಿಯೋನೆಟ್ ಕಲಾವಿದ ನುಡಿಸಿದ ಅಪಸ್ವರವನ್ನು ಎತ್ತಿ ತೋರಿಸಿದ್ದರು[882]. ನಾಲ್ವಡಿ ಕೃಷ್ಣರಾಜ ಒಡೆಯರು ಸಂಗೀತದಲ್ಲಿ ಹೊಂದಿದ್ದ ಪ್ರೌಢಿಮೆ ಹಾಗೂ ಅವರ ಉದಾರ ಪ್ರೋತ್ಸಾಹ, ಪೋಷಣೆಗಳಿಂದಾಗಿ ದೇಶದ ಉದ್ದಾಮ ಸಂಗೀತಗಾರರು, ಕಲಾವಿದರು ಮೈಸೂರು ಆಸ್ಥಾನದತ್ತ ಧಾವಿಸಿ ಬಂದರು. ಹಾಗಾಗಿ ನಾಲ್ವಡಿಯವರ ಕಾಲದಲ್ಲಿ ಮೈಸೂರು ಸಾಂಸ್ಕೃತಿಕ ಕೇಂದ್ರವಾಗಿ ಹೆಸರಾಗಿತ್ತು.

ಇವರ ಆಸ್ಥಾನದಲ್ಲಿ ಕರ್ನಾಟಕ ಸಂಗೀತದ ಅನೇಕ ದಿಗ್ಗಜರಿದ್ದರು. ಅವರಲ್ಲಿ ಪ್ರಮುಖರೆಂದರೆ ವೀಣೇ ಶೇಷಣ್ಣ, ವಾಸುದೇವಾಚಾರ್ಯ, ವೀಣೆಸುಬ್ಬಣ್ಣ, ಬಿಡಾರ ಕೃಷ್ಣಪ್ಪ, ಪಿಟೀಲ್ ಚೌಡಯ್ಯ, ದೊರೆಸ್ವಾಮಿ ಅಯ್ಯಂಗಾರ್, ಮೃದಂಗದ ಮುತ್ತುತೇವರ್, ಪುಟ್ಟಸ್ವಾಮಯ್ಯ, ಭೈರವಿ ಕೆಂಪೇಗೌಡ, ಮಳವಳ್ಳಿ ಸುಬ್ಬಣ್ಣ ಮುಂತಾದವರು. ಮೈಸೂರು ಆಸ್ಥಾನದಲ್ಲಿದ್ದ ಸುಪ್ರಸಿದ್ಧ ವಿದ್ವಾಂಸರಾದ ಬಿಡಾರಂ ಕೃಷ್ಣಪ್ಪ, ವೀಣೆ ಶೇಷಣ್ಣ, ಮೈಸೂರು ವಾಸುದೇವಾಚಾರ್ಯ, ವೀಣೆ ವೆಂಕಟಗಿರಿಯಪ್ಪ, ದೊರೆಸ್ವಾಮಿ ಅಯ್ಯಂಗಾರ್, ಟಿ. ಚೌಡಯ್ಯ ಮುಂತಾದವರು ಭಾರತದಲ್ಲೆಲ್ಲಾ ಸಂಚರಿಸಿ ಸಂಗೀತ ಕಛೇರಿಗಳ ಮೂಲಕ ತಮ್ಮ ಕಲೆಯನ್ನು ಪ್ರದರ್ಶಿಸಿ ಮೈಸೂರಿಗೆ ಕೀರ್ತಿ ತಂದರು[883].

---

*881. ಶ್ರೀ ಕೃಷ್ಣರಾಜ ಮೆಮೋರಿಯಲ್ ನಂಬರ್ ಆಫ್ ದಿ ಕ್ಯೂ. ಜೆ. ಎಂ. ಎಸ್., ವಿಶೇಷ ಸಂಚಿಕೆ, ಬೆಂಗಳೂರು, 1940-41, ಪು. 246*

*882. ಕೃಷ್ಣಮೂರ್ತಿ ಎಸ್., ಸಂಗೀತ ಸಮಯ, ಡಿ. ವಿ. ಕೆ. ಮೂರ್ತಿ, ಮೈಸೂರು, 2002, ಪು. 20-21*

*883. ನಂಜರಾಜ ಅರಸು ಪಿ. ವಿ., (ಸಂ) ನಾಲ್ವಡಿ ಕೃಷ್ಣರಾಜ ಒಡೆಯರ್ - ಒಂದು ದರ್ಶನ, ಪು. 178*

ನಾಲ್ವಡಿಯವರು ಕರ್ನಾಟಕ ಸಂಗೀತಕ್ಕೆ ಪ್ರೋತ್ಸಾಹ ನೀಡಿದಂತೆ ಹಿಂದೂಸ್ಥಾನಿ ಸಂಗೀತಕ್ಕೂ, ಸಂಗೀತಗಾರರಿಗೆ ಆಶ್ರಯ ನೀಡಿದ್ದರು. ಆಗ್ರಾ ಘರಾನೆಯ ನಿಸ್ಸಾರ್ ಹುಸೇನ್ ನಾಲ್ವಡಿಯವರ ಆಸ್ಥಾನದಲ್ಲಿ ಬಂದು ನೆಲೆಸಿದ್ದರು. ಫಯಾಸ್ ಹುಸೇನ್‌ಖಾನ್ ಮೈಸೂರಿನಲ್ಲಿ ಅನೇಕ ವರ್ಷ ನೆಲೆನಿಂತಿದ್ದು 'ಆಫ್ತಾಬ್-ಇ-ಮುಜುಕಿ' (ಸಂಗೀತ ಭಾಸ್ಕರ) ಎಂಬ ಬಿರುದು ಪಡೆದಿದ್ದರು. ಶ್ರೇಷ್ಠ ಸಿತಾರ್ ವಾದಕ ಅಫೀಜ್‌ಖಾನರಿಗೆ ಕೃಷ್ಣರಾಜರು 'ಆಫ್ತಾಬ್-ಇ-ಸಿತಾರ್' ಬಿರುದನ್ನು ನೀಡಿದ್ದರು. ಅನೇಕ ಹಿಂದೂಸ್ಥಾನಿ ಸಂಗೀತ ದಿಗ್ಗಜರು ನಾಲ್ವಡಿಯವರ ಆಸ್ಥಾನಕ್ಕೆ ಬಂದು ತಮ್ಮ ಕಲೆಯನ್ನು ಪ್ರದರ್ಶಿಸಿದರು. ಅವರಲ್ಲಿ ಜೈಪುರದ ರಹಿಮತ್ ಹುಸೇನ್‌ಖಾನ್, ಷಂಸುದ್ದೀನ್‌ಖಾನ್, ಇಂದೂರಿನ ಜಮಾಲ್‌ಖಾನ್, ಇನಾಯತ್‌ಖಾನ್, ಉದಯಪುರದ ಬೋರಾಖಾನ್, ಬರ್ಹಾಂಪುರದ ವಜೀರ್‌ಖಾನ್, ಬೊಂಬಾಯಿಯ ಕೃಷ್ಣಬಾಯಿ, ದೆಹಲಿಯ ಮಹಮದ್‌ಖಾನ್ ಮುಖ್ಯರು[884]. ದೆಹಲಿಯ ಸಿತಾರ್‌ವಾದಕ ಬರ್ಕತುಲ್ಲಾಖಾನ್ ಆಸ್ಥಾನದಲ್ಲಿ ಸಂಗೀತ ಗೋಷ್ಠಿ ನಡೆಸಿದ್ದಕ್ಕೆ 1,000 ರೂಪಾಯಿ ನಗದು, 250 ರೂಪಾಯಿ ರೈಲ್ವೆ ವೆಚ್ಚ, ಶಾಲು, ಪೇಟ ಮುಂತಾದವನ್ನು ಖಿಲ್ಲತ್ ಆಗಿ ನೀಡಲಾಯಿತು[885]. ಠುಮರಿ ಗಾಯನದಲ್ಲಿ ಪರಿಣಿತರಾಗಿದ್ದ ಗೋಹರ್‌ಜಾನ್‌ರನ್ನು ಆಸ್ಥಾನ ವಿಧೂಷಿಯನ್ನಾಗಿ ನೇಮಿಸಿ ಮಾಸಿಕ 500 ರೂಪಾಯಿ ವೇತನ ಮತ್ತು ದಿಲ್‌ಕುಷ್ ಎಂಬ ಉಚಿತ ವಸತಿ ಗೃಹವನ್ನು ಒದಗಿಸಲಾಯಿತು[886]. ಹೀಗೆ ನಾಲ್ವಡಿಯವರು ಉದಾರವಾಗಿ ಸಂಗೀತಗಾರರನ್ನು ಪೋಷಿಸಿದ್ದರಿಂದ ಭಾರತದ ವಿವಿಧ ಭಾಗದಿಂದ ಸಂಗೀತಗಾರರು ಮೈಸೂರಿನತ್ತ ಬಂದರು. ಇದರೊಂದಿಗೆ ನಾಲ್ವಡಿಯವರು ಉತ್ತರ ಮತ್ತು ದಕ್ಷಿಣ ಸಂಗೀತ ಪ್ರಾಕಾರಗಳನ್ನು ಮೈಸೂರಿನ ಸಂಗೀತಗಾರರು ಸಮನ್ವಯ ಮಾಡಿಕೊಳ್ಳುವಂತೆ ಮಾಡಿದರು.

ನಾಲ್ವಡಿಯವರು ಕಲೆಗಳನ್ನು ಕುರಿತಂತೆ ಪ್ರಗತಿಪರರೂ, ಪ್ರಯೋಗಶೀಲರೂ ಆಗಿದ್ದು ಸಂಗೀತದಲ್ಲಿ ಪ್ರಯೋಗಗಳನ್ನು ತರಲು ಅರಮನೆಯ ಚಂದ್ರಶಾಲೆಯ ತೊಟ್ಟಿಯಲ್ಲಿ ಸಂಗೀತ ಶಾಲೆಯನ್ನು ಸ್ಥಾಪಿಸಿ, ಆಸಕ್ತಿಯುಳ್ಳ ಸಾರ್ವಜನಿಕರು ಸಂಗೀತವನ್ನು ಕಲಿಯಲು ಅವಕಾಶ ಮಾಡಿಕೊಟ್ಟಿದ್ದರು. 1924ರಲ್ಲಿ ಅರಮನೆಯ ಸಂಗೀತ ಶಾಲೆಯಲ್ಲಿ 16 ಹಿರಿಯ ಹಾಗೂ ಕಿರಿಯ ವಿದ್ವಾನರು ಹಾಗೂ 21 ವಿದ್ಯಾರ್ಥಿಗಳಿದ್ದರು. ಈ ಶಾಲೆ ಸಂಜೆ 5 ರಿಂದ 7 ರವರೆಗೂ

---

*884. ನಂಜರಾಜ ಅರಸು ಪಿ. ವಿ., (ಸಂ) ನಾಲ್ವಡಿ ಕೃಷ್ಣರಾಜ ಒಡೆಯರ್ - ಒಂದು ದರ್ಶನ, ಪು. 179*

*885. ಸೆಲೆಕ್ಷನ್ಸ್ ಫ್ರಂ ದಿ ರೆಕಾರ್ಡ್ಸ್ ಆಫ್ ದಿ ಮೈಸೂರ್ ಪ್ಯಾಲೇಸ್, ಸಂಪುಟ-I, ಪು. 99-101*

*886. ಅದೇ., ಪು. 115*

*887. ಅದೇ., ಪು. 123*

*888. ಕೃಷ್ಣಮೂರ್ತಿ ಎಸ್., ಸಂಗೀತ ಸಮಯ, ಪು. 24*

ನಡೆಯುತ್ತಿತ್ತು. ಆರಂಭದ ಒಂದು ಘಂಟೆ ಮಹಾರಾಜರಿಂದ ಆಯ್ಕೆಗೊಂಡ ಕಿರಿಯ ವಿದ್ವಾನರು ಕರ್ನಾಟಕ, ಹಿಂದೂಸ್ಥಾನಿ ಮತ್ತು ಪಾಶ್ಚಿಮಾತ್ಯ ಪ್ರಾಕಾರದ ರಾಗ, ಸ್ವರಗಳನ್ನು ಅಭ್ಯಸಿಸಬೇಕಿತ್ತು. ಆರರಿಂದ ಏಳು ಒಂದು ಘಂಟೆ ಕಿರಿಯ ವಿದ್ವಾನರು ವಿದ್ಯಾರ್ಥಿಗಳಿಗೆ ಕಲಿಸಬೇಕಿತ್ತು[887]. ಈ ಶಾಲೆಯಲ್ಲಿ ಹೊಸ ಹೊಸ ರಾಗ ಸ್ವರಗಳನ್ನು ಅಭಿವೃದ್ಧಿಗೊಳಿಸಲು, ಹಳೆಯ ಪಾಠಗಳನ್ನು ಪರಿಷ್ಕರಿಸುವುದಕ್ಕೆ ವೀಣೆ ಶೇಷಣ್ಣ ಹಾಗೂ ವಾಸುದೇವಾಚಾರ್ಯರ ನೇತೃತ್ವದಲ್ಲಿ ಆಯೋಜಿಸಲಾಗಿತ್ತು[888].

ಸಂಗೀತದಲ್ಲಿ ಹೊಸ ವಾದ್ಯಗಳನ್ನು ಪರಿಚಯಿಸುವುದು, ಹೊಸ ಪ್ರಯೋಗಗಳನ್ನು ಮಾಡುವುದೆಂದರೆ ನಾಲ್ವಡಿಯವರಿಗೆ ಅಪಾರ ಹುರುಪು. 1902ರಲ್ಲಿ ನಾಲ್ವಡಿಯವರ ಪಟ್ಟಾಭಿಷೇಕ ಮಹೋತ್ಸವ ಸಂದರ್ಭದಲ್ಲಿ ಬಂದಿದ್ದ ಬಾಲಿವಾಲ ಕಂಪನಿ ಅರಮನೆಯ ಚಂದ್ರಶಾಲೆ ತೊಟ್ಟಿಯಲ್ಲಿ 18 ನಾಟಕಗಳನ್ನಾಡಿ ಮಹಾರಾಜರಿಂದ 18,000 ರೂಪಾಯಿಗಳನ್ನು ಬಹುಮಾನವಾಗಿ ಪಡೆಯಿತು. ಆಗ ಆ ಕಂಪನಿಯು ನಾಟಕದಲ್ಲಿ ಹಾರ್ಮೋನಿಯಂ ಬಳಸಿದ್ದುದನ್ನು ನೋಡಿದ ಮೈಸೂರಿನವರು ತಾವೂ ಹಾರ್ಮೋನಿಯಂ ಬಳಸಲಾರಂಭಿಸಿದರು. ಅದಕ್ಕೆ ಮೊದಲು ಜೋಡಿ ತಂಬೂರಿಗಳನ್ನು ಶೃತಿಗಾಗಿ ಬಳಸುತ್ತಿದ್ದರು[889]. ನಾಲ್ವಡಿಯವರು 'ಥೆರಮಿನ್' ಎಂಬ ವಾದ್ಯವನ್ನು ಜರ್ಮನಿಯಿಂದ ತರಿಸಿ ಅದನ್ನು ದೊರೆಸ್ವಾಮಿ ಅಯ್ಯಂಗಾರ್‌ರು ನುಡಿಸುವಂತೆ ಮಾಡಿದರು. 'ದಲಜಿತ್' ಎಂಬ ವಾದ್ಯವನ್ನು ತಿಟ್ಟೆ ಕೃಷ್ಣಯ್ಯಂಗಾರ್ಯರು ನುಡಿಸುವಂತೆ ಮಾಡಿದರು[890]. ಅರಮನೆಗೆ ಬಂದ ಪಾಶ್ಚಾತ್ಯ ಸಂಗೀತ ವಿದ್ವಾಂಸನೊಬ್ಬ 'ಗ್ಲಾಸ್ ತರಂಗ್' ಎಂಬ ವಾದ್ಯವನ್ನು ನುಡಿಸಿದನು. ಆ ವಾದ್ಯವನ್ನು ಅಭ್ಯಾಸ ಮಾಡಲು ಚಿಕ್ಕರಾಮರಾಯರೆಂಬುವರಿಗೆ ಒಪ್ಪಿಸಿ ವಾದ್ಯವನ್ನು ಅರಮನೆಯಿಂದ ಕಳುಹಿಸಿದರು. ಅವರು ಕೇವಲ ಎರಡೂವರೆ ತಿಂಗಳಲ್ಲಿ ಅಭ್ಯಾಸಮಾಡಿ ಆ ವಾದ್ಯವನ್ನು ಅರಮನೆಯಲ್ಲಿ ನುಡಿಸಿದರು[891]. ನಾಲ್ವಡಿಯವರು ತಮ್ಮ ಅಂತಃಪುರದಲ್ಲಿ ಪೌರ್ವಾತ್ಯ ಪಾಶ್ಚಿಮಾತ್ಯ ಸಂಗೀತ ಕ್ರಮಗಳ ಸಮಸ್ತ ವಾದ್ಯಗಳನ್ನು ಇಟ್ಟಿದ್ದರು. ಅತ್ಯಂತ ಉತ್ಕೃಷ್ಟವಾದ ವಿದ್ಯುತ್‌ಶಕ್ತಿಯ ಸಹಾಯದಿಂದ ನುಡಿಸುವವ 'ಆರ್ಗನ್' ಎಂಬ ವಾದ್ಯವೂ ಇತ್ತು[892]. ಹೀಗೆ ಅನೇಕ ಹೊಸ ವಾದ್ಯಗಳನ್ನು ಮೈಸೂರಿನ ಸಂಗೀತ ವಲಯಕ್ಕೆ ಪರಿಚಯಿಸುವಲ್ಲಿ ನಾಲ್ವಡಿಯವರು ಶ್ರಮಿಸಿದರು.

ನಾಲ್ವಡಿಯವರು ಪಾಶ್ಚಿಮಾತ್ಯ ಸಂಗೀತದಲ್ಲಿ ಆಳವಾದ ಜ್ಞಾನ, ಅಪಾರ ಆಸಕ್ತಿ ಹೊಂದಿದ್ದರೂ ಅರಮನೆಯ

---

889. *ವಾಸುದೇವಾಚಾರ್ಯ ಕೆ., ನೆನಪುಗಳು, ಪು. 60-61*

890. *ಕೃಷ್ಣಮೂರ್ತಿ ಎಸ್., ಪೂರ್ವೋಕ್ತ, ಪು. 27*

891. *ಸಂಪತ್ಕುಮಾರಾಚಾರ್ಯ, ವಿ. ಎಸ್., ಪೂರ್ವೋಕ್ತ, ಪು. 33*

892. *ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪು. 416*

893. *ಸಂಜರಾಜ ಅರಸು ಪಿ.ವಿ., (ಸಂ)., ನಾಲ್ವಡಿ ಕೃಷ್ಣರಾಜ ಒಡೆಯರ್ ಒಂದು ದರ್ಶನ, ಪು. 180*

ಬ್ಯಾಂಡ್‌ಮಾಸ್ಟರ್ ಡಫ್ರಿಸ್ ಅವರಿಂದ ಶಿಕ್ಷಣವನ್ನು ಪಡೆದು ಅನಂತರ ಬಂದ ಶಿಕ್ಷಕ ಫಕ್ಸ್ ಮತ್ತು ಓಟೋ ಸ್ಮಿತ್‌ರವರುಗಳಲ್ಲಿ ಅದನ್ನು ಮುಂದುವರಿಸಿದರು. ಹೊಸ ಸಂಗೀತ ಗ್ರಂಥಗಳನ್ನು, ಸಂಗೀತ ರಚನೆಗಳ ಪ್ರಕಟಣೆ, ಧ್ವನಿಮುದ್ರಿಕೆಗಳನ್ನು ಕೊಂಡು ಗ್ರಂಥಭಂಡಾರದಲ್ಲಿ ಸಂಗ್ರಹಿಸಿದರು. ನಾಲ್ವಡಿ ಮತ್ತು ಸೋದರ ಕಂಠೀರವರು ಪಾಶ್ಚಿಮಾತ್ಯ ಸಂಗೀತದಲ್ಲಿ ಶಿಕ್ಷಣ ಪಡೆದು ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪಾಸಾದರು[893]. ನಾಲ್ವಡಿಯವರಿಗೆ ಪಾಶ್ಚಿಮಾತ್ಯ ಸಂಗೀತವನ್ನು ಸಾಧ್ಯವಾದ ಸಂದರ್ಭಗಳಲ್ಲಿ ದೇಶೀಯ ಸಂಗೀತ ಪದ್ಧತಿಗೆ ಅಳವಡಿಸಿಕೊಳ್ಳಬೇಕೆಂಬ ಅಭಿಲಾಷೆಯಿತ್ತು. ಇದಕ್ಕಾಗಿ ಅನೇಕ ಯುವಕರಿಗೆ ಪಾಶ್ಚಿಮಾತ್ಯ ಸಂಗೀತ ಕಲಿಸಲು ವಿದ್ವಾಂಸರನ್ನು ನೇಮಿಸಿದ್ದರು. ವೆಂಕಟಗಿರಿಯಪ್ಪನವರಿಗೆ ಇಂಗ್ಲಿಷ್ ಬ್ಯಾಂಡಿನ ನಿರ್ದೇಶಕ ಢಫ್ರಿಸ್‌ರಿಂದ ಪಾಶ್ಚಾತ್ಯ ಸಂಗೀತ ಕಲಿಸಿದರು. ವರ್ಷದೊಳಗೆ ಪಾಶ್ಚಿಮಾತ್ಯ ಸಂಗೀತ ಕಲಿತ ವೆಂಕಟಗಿರಿಯಪ್ಪ ಪಾಶ್ಚಿಮಾತ್ಯ ಸಂಗೀತದ ಸಂಕೇತಗಳನ್ನು ಬಳಸಿ, ಕರ್ನಾಟಕ ಸಂಗೀತದ ರಚನೆಗಳನ್ನು ಕ್ರಮಬದ್ಧವಾಗಿ ಸುಮಾರು ಇಪ್ಪತ್ತು ಸಂಪುಟಗಳಲ್ಲಿ ಬರೆದರು. ಇದನ್ನು ಮೆಚ್ಚಿದ ನಾಲ್ವಡಿ ವೆಂಕಟಗಿರಿಯಪ್ಪನವರನ್ನು ಇಂಗ್ಲಿಷ್ ಬ್ಯಾಂಡ್‌ನ ಮುಖ್ಯಸ್ಥರನ್ನಾಗಿ ನೇಮಕ ಮಾಡಿದರು. ನಾಲ್ವಡಿಯವರು ತಮ್ಮ ಮನಸ್ಸಿನಲ್ಲಿ ಮೂಡಿಬಂದ ಹೊಸ ಹೊಸ ಪ್ರಯೋಗಗಳನ್ನು ವೆಂಕಟಗಿರಿಯಪ್ಪನವರ ಮೂಲಕ ಅಳವಡಿಸಲು ಬಳಸಿಕೊಂಡರು[894]. ಪಾಶ್ಚಿಮಾತ್ಯ ಸಂಗೀತವನ್ನು ಹೀಗೆ ಕಲಿತವರನ್ನೆಲ್ಲಾ ಅರಮನೆಯ ಬ್ಯಾಂಡಿನಲ್ಲಿ ನೇಮಿಸಿಕೊಂಡರು. ಯೂರೋಪಿಯನ್ ವಾದ್ಯಗೋಷ್ಠಿಯನ್ನು ಪರಿಷ್ಕರಿಸಿ ರೀಡ್‌ಬ್ಯಾಂಡ್ ಮತ್ತು ಕ್ಯಾವಲ್ರೀ ಬ್ಯಾಂಡ್ ಎಂದು ಬೇರ್ಪಡಿಸಿದರು. ಭಾರತದಲ್ಲಿ ಮೊಟ್ಟ ಮೊದಲಿಗೆ ಕರ್ನಾಟಕ ಸಂಗೀತದ ಬ್ಯಾಂಡ್‌ನ್ನು ಸ್ಥಾಪಿಸಿದರು. ಪಾಶ್ಚಿಮಾತ್ಯ ಸಂಗೀತದ ಮಹಾ ಪುರುಷ ಭೇತೋವನ್ನನ ಆರಾಧನಾ ಶತಮಾನೋತ್ಸವವನ್ನು 1927ರಲ್ಲಿ ಏರ್ಪಡಿಸಿ ಅತ್ಯಂತ ಅದ್ದೂರಿಯಿಂದ ಅದನ್ನು ಆಚರಿಸಿ ಸಂಗೀತ ಪ್ರಿಯರನ್ನು ತಣಿಸಿದರು[895]. ದೊಡ್ಡ ಗಡಿಯಾರ ಏಳು ಹೊಳೆಯುವುದಕ್ಕೆ ಸರಿಯಾಗಿ ದರ್ಬಾರು ಪ್ರಾರಂಭವಾಗುತ್ತಿತ್ತು. ಇಂಗ್ಲಿಷ್ ಬ್ಯಾಂಡಿನವರು ನುಡಿಸಿದ 'ಕಾಯೌ ಶ್ರೀ ಗೌರಿ ಕರುಣಾಲಹರಿ' ನಾಡಗೀತೆ ಮೊಳಗುತ್ತಿದ್ದಂತೆ ನಾಲ್ವಡಿಯವರು ಸಿಂಹಾಸನಾರೋಹಣ ಮಾಡುತ್ತಿದ್ದರು[896]. ಸ್ಯಾಕ್ಸೋಫೋನ್ ವಾದ್ಯದಲ್ಲಿ ಕರ್ನಾಟಕ ಸಂಗೀತವನ್ನು ನುಡಿಸುವಂತೆ ಸಂಗೀತ ವಿದ್ವಾಂಸರನ್ನು ಪ್ರೇರೇಪಿಸಿದರು. ಇದನ್ನು ಅಭ್ಯಾಸ ಮಾಡಿ ಕಛೇರಿ ಮಾಡಿದ ಮೊದಲಿಗರೆಂದರೆ ಲಕ್ಷ್ಮಿನರಸಿಂಹಯ್ಯನವರು. ನಾಲ್ವಡಿಯವರು ಕೆ. ವಾಸುದೇವಾಚಾರ್ಯರಿಂದ ಪಾಶ್ಚಿಮಾತ್ಯ ಶೈಲಿಯಲ್ಲಿ ಚಿಟ್ಟೆ ಸ್ವರಗಳನ್ನು ರಚಿಸಿ ಅರಮನೆ ಬ್ಯಾಂಡಿನಲ್ಲಿ ಕೇಳಿ ಸಂತೋಷಪಡುತ್ತಿದ್ದರು[897]. ಹೀಗೆ ನಾಲ್ವಡಿಯವರು

---

*894. ಕೃಷ್ಣಮೂರ್ತಿ ಎಸ್., ಸಂಗೀತ ಸಮಯ, ಪು. 67-68*

*895. ಸಂಜರಾಜ ಅರಸ್ ಪಿ.ವಿ. ಪೂರ್ವೋಕ್ತ, ಪು. 180*

*896. ಕೃಷ್ಣಮೂರ್ತಿ ಎಸ್., ಸಂಗೀತ ಸಮಯ, ಪು. 19*

*897. ಸಂಪತ್ಕುಮಾರಾಚಾರ್ಯ, ವಿ.ಎಸ್., ಪೂರ್ವೋಕ್ತ, ಪು. 22-23*

ಪಾಶ್ಚಿಮಾತ್ಯ ಹಾಗೂ ಪೌರ್ವಾತ್ಯ ಸಂಗೀತಗಳನ್ನು ಸಮನ್ವಯಗೊಳಿಸಲು ಪ್ರಯತ್ನಿಸಿದರು.

ಭಾರತೀಯ ಸಂಗೀತವನ್ನು ಪಾಶ್ಚಿಮಾತ್ಯರು ತಾತ್ಸಾರದಿಂದ ಮತ್ತು ಕೀಳೆಂದು ಕಾಣುತಿದ್ದುದನ್ನು ಹೋಗಲಾಡಿಸಲು ಹಾಗೂ ಮೈಸೂರು ಸಂಸ್ಥಾನದ ಸಂಗೀತವನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ಯಲು ನಾಲ್ವಡಿ ಮತ್ತು ಅವರ ಸೋದರ ಕಂಠೀರವರು ಪ್ರಯತ್ನಿಸಿದರು. ನಾಲ್ವಡಿಯವರು ಊಟಿಗೆ ಹೋಗುವಾಗ ಮೈಸೂರಿನ ಸಂಗೀತಗಾರರನ್ನು ಕರೆದುಕೊಂಡು ಹೋಗಿ ಅಲ್ಲಿನ ಪಾಶ್ಚಿಮಾತ್ಯರಿಗೆ ದೇಶೀಯ ಸಂಗೀತವನ್ನು ಪರಿಚಯಿಸುತ್ತಿದ್ದರು. 1908ರಲ್ಲಿ ಜಪಾನಿಗೆ ಹೋದಾಗ ಗೋವಿಂದರಾವ್ ತೆಂಬೆಯವರನ್ನು ಜಪಾನಿಗೆ ಕರೆದುಕೊಂಡು ಹೋಗಿ ಅಲ್ಲಿ ಸಂಗೀತ ಕಛೇರಿಗಳನ್ನು ನಡೆಸಿ ಜಪಾನಿಯರಿಗೆ ಭಾರತೀಯ ಸಂಗೀತವನ್ನು ಪರಿಚಯಿಸಿದರು[898]. ಯುವರಾಜ ಕಂಠೀರವರು ಭಾರತೀಯ ಸಂಗೀತಕ್ಕೂ ಪಾಶ್ಚಿಮಾತ್ಯ ಸಂಗೀತಕ್ಕೂ ಸಾಮರಸ್ಯವನ್ನು ಕಲ್ಪಿಸಿ ಭಾರತೀಯ ಸಂಗೀತ ಕೃತಿಗಳನ್ನು ಪಾಶ್ಚಿಮಾತ್ಯ ವಾದ್ಯಗಳಲ್ಲಿ ನುಡಿಸುವಂತೆ ಮಾಡಲು ಪಾಶ್ಚಿಮಾತ್ಯ ಸಂಗೀತ ಲಿಪಿಯಲ್ಲಿ ಬರೆಯಿಸಿ ಅಚ್ಚು ಹಾಕಿಸಿ ಪಾಶ್ಚಾತ್ಯ ವಾದ್ಯಗಾರರಿಗೆ ಹಂಚಲು ಅಪಾರ ಹಣ ವೆಚ್ಚ ಮಾಡುತ್ತಿದ್ದರು. 1937ರಲ್ಲಿ ಲಂಡನ್ ನಗರದ ಕಲಾವಿದರು 'ಫಾಕ್ಸ್‌ಟ್ರಾಟ್', ವಾಲ್ಟ್ಸ್ ಮುಂತಾದ ನರ್ತನಗಳನ್ನು ಮಾಡಿದಾಗ ಮೈಸೂರಿನಿಂದ ಹೋದ ಅರಮನೆ ವಿದ್ವಾಂಸರು ಸಿತಾರ, ತಬಲ ಮುಂತಾದ ಪಕ್ಕವಾದ್ಯಗಳನ್ನು ನುಡಿಸಿದರು. ಇದರಿಂದಾಗಿ ಇಂಗ್ಲಿಷರು ಭಾರತೀಯ ಸಂಗೀತವನ್ನು ಮೆಚ್ಚಲಾರಂಭಿಸಿದರು. ಲಂಡನ್ನಿನ ಎಲ್ಲ ಪತ್ರಿಕೆಗಳು ಮೈಸೂರಿನ ಸಂಗೀತಗಾರರನ್ನು ಮತ್ತು ಯುವರಾಜರನ್ನು ಹೊಗಳಿದವು[899]. ಅಮೇರಿಕಾ ಖಂಡ ಮತ್ತು ಯೂರೋಪ್‌ನಲ್ಲಿ ಪ್ರಖ್ಯಾತನಾಗಿದ್ದ ಲಿಯೋಪಾಲ್ಡ್ ಸ್ಟಕೌಸ್ಕಿ ಅವರಿಗೆ ವೀಣಾವಾದನದಲ್ಲಿ ಅಭಿರುಚಿ ಬೆಳೆಯುವಂತೆ ಮಾಡಿದರು. ವೆಂಕಟಗಿರಿಯಪ್ಪನವರು ರಚಿಸಿದ 'ನಗಮ' ಪ್ರಕಾರದ ಒಂದು ರಚನೆಯನ್ನು ಯುವರಾಜ ಕಂಠೀರವ ನರಸಿಂಹರಾಜ ಒಡೆಯರ ಪುತ್ರಿ ವಿಜಯಾದೇವಿ ಇಂಗ್ಲೆಂಡಿನ ಬಿ.ಬಿ.ಸಿ.ಯಲ್ಲಿ ಪ್ರಸಾರವಾಗುವಂತೆ ಮಾಡಿದರು[900]. ಹೀಗೆ ನಾಲ್ವಡಿಯವರ ಕಾಲದಲ್ಲಿ ಭಾರತೀಯ ಸಂಗೀತವನ್ನು ವಿಶ್ವಮಟ್ಟಕ್ಕೆ ಕೊಂಡೊಯ್ಯಲು ಪ್ರಯತ್ನಿಸಲಾಯಿತು.

ನಾಲ್ವಡಿಯವರು ಮೇಲ್ಕಂಡಂತೆ ಉತ್ತರದ ಹಿಂದೂಸ್ಥಾನಿ, ದಕ್ಷಿಣದ ಕರ್ನಾಟಕ ಸಂಗೀತ ಹಾಗೂ ಪಾಶ್ಚಿಮಾತ್ಯ ಸಂಗೀತಗಳನ್ನು ಮೈಸೂರಿನ ಸಂಗೀತಗಾರರ ಮೂಲಕ ಸಮನ್ವಯಗೊಳಿಸಲು ಪ್ರಯತ್ನಿಸಿದರು. ಆ ಕಾಲಕ್ಕೆ ಸಾಹಿತ್ಯ, ಸಂಗೀತ ಕ್ಷೇತ್ರಗಳಲ್ಲಿನ ವಿದ್ವಾಂಸರು ಸಂಪ್ರದಾಯ ಹಿನ್ನೆಲೆಯಲ್ಲಿ ಬಂದವರಾಗಿದ್ದು ಹೊಸ ಬದಲಾವಣೆಗಳನ್ನು ಒಪ್ಪಲು ಸಿದ್ಧರಿರಲಿಲ್ಲ. ಆದರೆ ಸಾಂಸ್ಕೃತಿಕ ನಾಯಕರಾದ ನಾಲ್ವಡಿಯವರೇ ಪರಿವರ್ತನೆಗೆ

---

898. *ವೆಂಕಟರಾಮಯ್ಯ ಸಿ.ಕೆ., ದಿವಂಗತ ಶ್ರೀಮದ್ಯುವರಾಜರವರು, ಪು. 285*

899. *ವೆಂಕಟರಾಮಯ್ಯ ಸಿ.ಕೆ., ದಿವಂಗತ ಶ್ರೀಮದ್ಯುವರಾಜರವರು, ಪು. 286-291*

900. *ಕೃಷ್ಣಮೂರ್ತಿ ಎಸ್., ಸಂಗೀತ ಸಮಯ, ಪು. 73-74*

ಮುಂದಾದಾಗ ಎಲ್ಲರೂ ಅವರನ್ನು ಅನುಸರಿಸುವುದು ಅವಶ್ಯವಾಯಿತು. ಹೀಗೆ ಸುಧಾರಿತಗೊಂಡ ಸಂಗೀತ ಪ್ರಾಕಾರಗಳನ್ನು ಅರಮನೆಯ ಆಸ್ಥಾನಿಕರು ಮಾತ್ರ ಸವಿಯುವುದಕ್ಕೆ ಬದಲು ಸಾರ್ವಜನಿಕರು ಆಸ್ಥಾನದ ಸಂಗೀತವನ್ನು ಕೇಳಿ ಆನಂದಿಸಲು ಅನುಕೂಲವಾಗುವಂತೆ ಅರಮನೆಯ ಕೋಟೆ ಪ್ರವೇಶ ದ್ವಾರಗಳಲ್ಲಿ ಧ್ವನಿವರ್ದಕಗಳನ್ನು ಅಳವಡಿಸಲಾಯಿತು. ನಗರದ ಅನೇಕ ಬಡಾವಣೆಗಳಲ್ಲಿ ಅರಮನೆಯ ಬ್ಯಾಂಡ್ ಮೇಳವು ಸಂಗೀತ ಕಛೇರಿಗಳನ್ನು ನಡೆಸಿ ಸಂಗೀತ ಪ್ರೇಮಿಗಳನ್ನು ರಂಜಿಸುತ್ತಿತ್ತು. 'ಕ್ಯಾಲಿಫೋನ್' ವಾದ್ಯದ ಸವಿಯು ಪ್ರಜೆಗಳಿಗೆ ಲಬಿಸುವಂತಾಗಲು ಅವರು ಏರ್ಪಾಡು ಮಾಡಿಸಿ ಭಾರತೀಯ ಸಂಗೀತವು ಅದರಲ್ಲಿ ನುಡಿದು ಮೈಸೂರು ನಗರವಾಸಿಗಳಿಗೆ ಕೇಳುವ ವ್ಯವಸ್ಥೆ ಮಾಡಿಸಿದರು. ಅರಮನೆಯ 'ಆರ್ಕೆಸ್ಟ್ರಾ' ಎಂಬ ಸಂಗೀತವನ್ನು ಅನೇಕ ಹಳ್ಳಿಯವರಿಗೆ ಕೂಡ ಕೇಳಿಸುವ ವ್ಯವಸ್ಥೆ ಮಾಡಿಸಿದ್ದರು[901]. ಮೈಸೂರಿನ ಕ್ಷಯರೋಗದ ಆಸ್ಪತ್ರೆಯ ರೋಗಿಗಳ ಮಾನಸಿಕ ಚಿಕಿತ್ಸೆಗಾಗಿ ವಾರದಲ್ಲಿ ಒಂದು ದಿನ ಅವರಿಗೆ ಸಂಗೀತ ಕಛೇರಿಗಳನ್ನು ಏರ್ಪಡಿಸಲಾಯಿತು[902]. ಆನಂತರ ಬಂದ ರೇಡಿಯೋದ ಮೂಲಕ ಸಂಗೀತವನ್ನು ಜನಸಾಮಾನ್ಯರಿಗೆ ಮುಟ್ಟಿಸುವಂತೆ ಮಾಡಿದರು. 1900 ರ ಸುಮಾರಿಗೆ ಬಂದ ಗ್ರಾಮೊಫೋನ್ ರೆಕಾರ್ಡಿನ ಮೂಲಕ ಪ್ರಸಿದ್ಧ ಸಂಗೀತಗಾರರ ಸಂಗೀತವನ್ನು ಧ್ವನಿಮುದ್ರಣ ಮಾಡಲಾಯಿತು. ಹೀಗೆ ನಾಲ್ವಡಿಯವರು ಹಿಂದೂಸ್ಥಾನಿ, ಕರ್ನಾಟಿಕ್ ಹಾಗೂ ಪಾಶ್ಚಿಮಾತ್ಯ ಸಂಗೀತಗಳನ್ನು ಹೊಸ ಹೊಸ ಪ್ರಯೋಗಗಳಿಗೊಳಪಡಿಸುವ ಮೂಲಕ ಮೈಸೂರು ಸಂಗೀತವಲಯದಲ್ಲಿ ಹಲವಾರು ಬದಲಾವಣೆಗಳಿಗೆ ದಾರಿಮಾಡಿಕೊಟ್ಟರು. ಹೊಸ ಅಭಿರುಚಿಯ ಸಂಗೀತ ಪ್ರೇಮಿಗಳು ಹುಟ್ಟಿಕೊಳ್ಳುವಂತೆ ಮಾಡಿ ಸಂಗೀತವನ್ನು ಆಸ್ಥಾನದಿಂದ ಜನಸಾಮಾನ್ಯರತ್ತ ಹಾಗೆಯೇ ವಿಶ್ವಮಟ್ಟದತ್ತ ಕೊಂಡೊಯ್ದರೆಂದು ಹೇಳಬಹುದು.

### *v) ಚಿತ್ರಕಲೆ*

ವಿಜಯನಗರದ ಕಾಲದ ನಂತರ ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ದೊರೆತದ್ದು ಮೈಸೂರು ಸಂಸ್ಥಾನದಲ್ಲಿ, ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಭಿತ್ತಿ ಚಿತ್ರಗಳೇ ಅಲ್ಲದೆ ಚಿತ್ರಗಾರರು ಹಸ್ತಲಿಖಿತ ಪುಸ್ತಕಗಳಿಗೆ ಚಿತ್ರಗಳನ್ನು ರಚಿಸುತ್ತಿದ್ದರು. ಈ ಬಗೆಯ ವರ್ಣಮಯ ಚಿತ್ರಾಲಂಕೃತ ಪುಸ್ತಕದ ಅತ್ಯುತ್ತಮ ಉದಾಹರಣೆಯೆಂದರೆ ಶ್ರೀ ತತ್ವನಿಧಿ. ಈ ಗ್ರಂಥವು 1888 ವರ್ಣಚಿತ್ರಗಳನ್ನು, 458 ರೇಖಾಚಿತ್ರಗಳನ್ನು ಒಳಗೊಂಡಿದೆ. ಈ ಚಿತ್ರಗಳು ಒಳ್ಳೆಯ

---

*901. ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪು. 413-414*

*902. ಸಂಪತ್ಕುಮಾರಾಚಾರ್ಯ ವಿ.ಎಸ್., ಪೂರ್ವೋಕ್ತ, ಪು. 18-19*

*903. ಸೂರ್ಯನಾಥ್ ಯು. ಕಾಮತ್ (ಸಂ)., ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-3, ಪು. 409*

ವರ್ಣಶೋಭೆಯಿಂದ ಕೂಡಿದವಾಗಿದ್ದು ಉತ್ತಮ ಕಲಾಕೃತಿಗಳಾಗಿವೆ. 1875ರಲ್ಲಿ ಮೈಸೂರಿನ ಜಗನ್ಮೋಹನ ಬಂಗಲೆಯನ್ನು ಚಿತ್ರಶಾಲೆಯಾಗಿ ಮಾರ್ಪಡಿಸಿ ಭಿತ್ತಿಚಿತ್ರ ಹಾಗೂ ವರ್ಣಚಿತ್ರಗಳಿಂದ ಅಲಂಕರಿಸಲಾಯಿತು. ರಾಜವಂಶದ ಗಣ್ಯರು, ಮುಮ್ಮಡಿ ಕೃಷ್ಣರಾಜರ ಹುಲಿ ಶಿಕಾರಿ, ಪಶುಪ್ರಾಣಿಗಳ ಮುಂತಾದ ದೃಶ್ಯಗಳನ್ನೊಳಗೊಂಡಿವೆ. ಅಂದಿನ ಪ್ರಮುಖ ಚಿತ್ರಕಾರರೆಂದರೆ ವೀರಣ್ಣ, ಮಲ್ಲಪ್ಪ, ಬಸವಣ್ಣ ಮುಂತಾದವರು[903]. ಅನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಚಿತ್ರಕಲೆಗೆ ಅಪಾರ ಪ್ರೋತ್ಸಾಹ ದೊರೆತಿತು. ಸ್ವತಃ ನಾಲ್ವಡಿಯವರಿಗೆ ಚಿತ್ರಕಲೆಯಲ್ಲಿ ಆಸಕ್ತಿಯಿದ್ದಿತು. ಅವರಿಗೆ ಚಿತ್ರಕಲೆಯಲ್ಲಿ ರೇಖಾಚಿತ್ರ ಲೇಖನದ ಬಗ್ಗೆ ಶಿಕ್ಷಣ ದೊರೆತದ್ದರಿಂದ ಅವರ ಚಿತ್ರಕಲಾ ಚಾತುರ್ಯ ಪರಿಸ್ಫುಟಗೊಂಡಿತು. ಅವರು ಪ್ರಾಣಿಗಳ ಅದರಲ್ಲೂ ಕುದುರೆ ಮತ್ತು ನಾಯಿಗಳ ಚಿತ್ರಗಳನ್ನು ಬಾಲ್ಯದಿಂದಲೂ ಬರೆಯುತ್ತಿದ್ದರು[904]. ಅಲ್ಲದೆ ನಾಲ್ವಡಿಯವರು ಅನೇಕ ಕಲಾವಿದರಿಗೆ ಪ್ರೋತ್ಸಾಹವನ್ನು ನೀಡುವ ಮೂಲಕ ಚಿತ್ರಕಲೆಯನ್ನು ಬೆಳೆಸಿದರು. ಅರಮನೆಯ ಕಲಾವಿದರಾದ ದುರ್ಗದ ಕೃಷ್ಣಪ್ಪನವರ ಮಗ ಕೆ. ವೆಂಕಟಪ್ಪ ಬಾಲ್ಯದಲ್ಲಿ ಬರೆದಿದ್ದ ಪಾಶ್ಚಿಮಾತ್ಯ ಚಿತ್ರದ ಪ್ರತಿಕೃತಿಯನ್ನು ಕಂಡು ಅಭಿನಂದಿಸಿದ ನಾಲ್ವಡಿಯವರು ನೂರು ರೂಪಾಯಿ ಬಹುಮಾನ ನೀಡಿದ್ದರು. ಅನಂತರ ಅವರಿಗೆ ಇಂಗ್ಲಿಷ್ ಮತ್ತು ಹಿಂದೂಸ್ಥಾನಿ ಭಾಷೆಗಳಲ್ಲಿ ಶಿಕ್ಷಣ ಕೊಡಿಸಿ, ಅರಮನೆಯಿಂದ ವಿದ್ಯಾರ್ಥಿವೇತನ ನೀಡಿ ಮದ್ರಾಸಿನ ಚಿತ್ರಕಲಾ ಪರೀಕ್ಷೆಯಲ್ಲಿ ಡಿಪ್ಲೊಮಾವನ್ನು ಗಳಿಸುವಂತೆ ಮಾಡಿದರು. ಉನ್ನತ ವ್ಯಾಸಂಗಕ್ಕಾಗಿ ಕಲ್ಕತ್ತಾ ಕಲಾಶಾಲೆಗೆ ಕಳುಹಿಸಿ ಅಲ್ಲಿ ಪ್ರಸಿದ್ಧ ಕಲಾವಿದರಾದ ಪರ್ಸಿಬ್ರೌನ್ ಮತ್ತು ಅವನೀಂದ್ರನಾಥ ಠಾಗೂರರ ಬಳಿ ಏಳು ವರ್ಷಗಳ ಕಾಲ ಇದ್ದು ಬೌದ್ಧ, ರಜಪೂತ ಹಾಗೂ ಮೊಗಲ್ ಸಂಪ್ರದಾಯಗಳನ್ನು ಅಭ್ಯಾಸ ಮಾಡುವಂತೆ ಮಾಡಿದರು[905]. 1916ರಲ್ಲಿ ಹಿಂತಿರುಗಿದ ವೆಂಕಟಪ್ಪನವರನ್ನು ಅರಮನೆಯ ಕಲಾಕಾರರನ್ನಾಗಿ ನೇಮಿಸಿಕೊಂಡು ಅವರಿಂದ ವರ್ಣರಹಿತ, ಉಬ್ಬುತಗ್ಗುಗಳಿಂದ ಕೂಡಿದ, ಸೂಕ್ಷ್ಮ ರೇಖಾ ವಿನ್ಯಾಸವನ್ನೊಳಗೊಂಡ ಪ್ಲಾಸ್ಟರ್ ರಿಲೀಫ್‌ಗಳನ್ನು ಅರಮನೆಯಲ್ಲಿ ರಚಿಸುವಂತೆ ಮಾಡಿದರು. ಜೊತೆಗೆ ವೆಂಕಟಪ್ಪನವರು ಜಲವರ್ಣಗಳನ್ನ ಬಳಸಿ ನಿಸರ್ಗ ಚಿತ್ರಗಳನ್ನು, ದಂತ ಫಲಕದ ಮೇಲೆ ಜಲವರ್ಣದ ರೂಪಚಿತ್ರಗಳನ್ನು, ಕಾವ್ಯಕಥಾ ಚಿತ್ರಗಳನ್ನು ಬರೆದರು. ಮೈಸೂರಿನ ಜಗನ್ಮೋಹನ ಕಲಾಶಾಲೆಯಲ್ಲಿನ ಇವರ ವೀಣಾ ಹುಚ್ಚು, ರಾಧಾ ಹರಿಣಿ, ಅರ್ಧನಾರೀಶ್ವರ, ಶಿವರಾತ್ರಿ ಮತ್ತು ನೀಲಗಿರಿಯ ದೃಶ್ಯಗಳು ಇಂದಿಗೂ ಕಲಾಭಿಮಾನಿಗಳನ್ನು ಆಕರ್ಷಿಸುತ್ತಿವೆ[906]. ನಾಲ್ವಡಿಯವರು ಹೊಸ

---

*904. **ವೆಂಕಟರಾಮಯ್ಯ ಸಿ.ಕೆ.**, ಆಳಿದ ಮಹಾಸ್ವಾಮಿಯವರು, ಪು. 77-78*

*905. **ವೆಂಕಟರಾಮಯ್ಯ ಸಿ.ಕೆ.**, ಆಳಿದ ಮಹಾಸ್ವಾಮಿಗಳು, ಪು. 416*

*906. **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ**, ಪು. 1360*

*907. **ತಿಪ್ಪೇಸ್ವಾಮಿ ಪಿ. ಆರ್.**, ನಾಲ್ವಡಿ ಕೃಷ್ಣರಾಜ ಒಡೆಯರ ಕಲಾ ಸೇವೆ, ಮಾನವಿಕ ಕರ್ನಾಟಕ, ಸಂಪುಟ 15, ಸಂಚಿಕೆ 3, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1985, ಪು. 3*

ಅರಮನೆಯನ್ನು ಚಿತ್ರಗಳಿಂದ ಅಲಂಕರಿಸಲು ರಾಜಾ ರವಿವರ್ಮನನ್ನು 1904ರಲ್ಲಿ ಆಹ್ವಾನಿಸಿದರು. ರಾಜಾರವಿವರ್ಮರು ಹೊಸ ಅರಮನೆಯ ಕಲಾ ನಿರ್ದೇಶಕರಾಗಿ ಮೈಸೂರಿನಲ್ಲಿದ್ದು ಒಂಬತ್ತು ತೈಲ ಚಿತ್ರಗಳನ್ನು, ಮಹಾರಾಜರ ಪೂರ್ಣ ಆಕಾರದ ತೈಲ ಚಿತ್ರವೊಂದನ್ನು ರಚಿಸಿದರು. ಅರಮನೆಯ ಅಲಂಕಾರದ ವರ್ಣ ಸಂಯೋಜನೆ ಇವರ ನೇತೃತ್ವದಲ್ಲಿ ನಡೆಯಿತು. ಇಂಗ್ಲೆಂಡಿನ ರಾಜಕುಮಾರ ಮೈಸೂರಿಗೆ ಭೇಟಿ ನೀಡಿದಾಗ ರವಿವರ್ಮ ಖೆಡ್ಡಾ ಕಾರ್ಯಾಚರಣೆಯ ವೇಳೆ ರಚಿಸಿದ ಅನೇಕ ದೃಶ್ಯಗಳನ್ನು ಇಂಗ್ಲೆಂಡಿನ ರಾಜಕುಮಾರ ಮತ್ತು ಐರೋಪ್ಯ ಕಲಾವಿದರು ಮೆಚ್ಚಿದರು[907]. ನಾಲ್ವಡಿಯವರು 1906ರಲ್ಲಿ ರಾಜಾ ರವಿವರ್ಮರು ಬರೆದಿದ್ದ ಐದಾರು ಅಡಿ ಎತ್ತರದ ಶ್ರೀಕೃಷ್ಣ ದೌತ್ಯ ಚಿತ್ರಪಟವೊಂದನ್ನು ವಸ್ತು ಪ್ರದರ್ಶನದಲ್ಲಿಟ್ಟಿದ್ದಾಗ ಶ್ರೀ ಕೃಷ್ಣನ ಒಂದು ತೋಳು ಹೆಚ್ಚು ಉದ್ದವಾಗಿದೆ ಎಂಬುದನ್ನು ಗುರುತಿಸಿ ಸರಿಪಡಿಸಿದ್ದರು. ಆಗ ರಾಜಾ ರವಿವರ್ಮರು ನಾಲ್ವಡಿಯವರ ಪರಾಮರ್ಶ ಬುದ್ಧಿಯನ್ನು ಶ್ಲಾಘಿಸಿದ್ದರು[908]. ಹೀಗೆ ನಾಲ್ವಡಿಯವರಲ್ಲಿ ಚಿತ್ರಕಲೆಯ ಬಗ್ಗೆ ಆಳವಾದ ಜ್ಞಾನವಿತ್ತು.

ನಾಲ್ವಡಿಯವರ ಕಾಲದಲ್ಲಿ ಪಾಶ್ಚಿಮಾತ್ಯ ಚಿತ್ರಕಲೆಯನ್ನಾಧರಿಸಿದ ಅನೇಕ ಕೃತಿಗಳು ಬೆಳಕು ಕಂಡವು. ಅವುಗಳನ್ನು ಬಹುಪಾಲು ಪಾಶ್ಚಿಮಾತ್ಯರು ಹಾಗೂ ದೇಶೀಯ ಕಲಾಕಾರರು ರಚಿಸಿದರು. ದೇಶೀಯ ಚಿತ್ರಕಲೆಯ ಮೇಲೆ ಪಾಶ್ಚಾತ್ಯ ಪ್ರಭಾವದಿಂದಾಗಿ ದೃಶ್ಯನಿಷ್ಠೆಯ ವಾತಾವರಣ, ಉದ್ದ ಅಗಲ ಆಳದ ಭ್ರಮೆ ಮುಂತಾದ ಅಂಶಗಳಲ್ಲಿ ಪಾಶ್ಚಿಮಾತ್ಯ ತಂತ್ರಗಳು ಅಳವಡಿಕೆಯಾದವು. ಈ ಕಲಾಕಾರರು ಸಾಂಪ್ರದಾಯಿಕ ಶೈಲಿಯ ಚಿತ್ರಗಳಲ್ಲೂ ಈ ತಂತ್ರಗಳನ್ನು ಅಳವಡಿಸಿಕೊಂಡರು. ಮೈಸೂರು ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ ಪಾಶ್ಚಿಮಾತ್ಯ ಚಿತ್ರಶೈಲಿಯನ್ನು ಪಠ್ಯ ವಿಷಯವಾಗಿ ಸೇರಿಸಿದ ಮೇಲೆ ಆ ತತ್ವ ಮತ್ತು ಶೈಲಿಯಲ್ಲಿ ತರಬೇತಾದ ಕಲಾವಿದರ ಒಂದು ಹೊಸ ಪೀಳಿಗೆಯೇ ಹುಟ್ಟಿಕೊಂಡಿತು. ಇದರಿಂದಾಗಿ ಸಾಂಪ್ರದಾಯಿಕ ಚಿತ್ರಕಲೆ ಹಿಂದೆ ಬಿದ್ದಿತು ಮತ್ತು ಹಲವಾರು ಪರಿವರ್ತನೆಗಳನ್ನು ಕಂಡಿತು. ಹೊಸ ಪೀಳಿಗೆಯ ತರುಣರು ಮದ್ರಾಸ್ ಚಿತ್ರಕಲಾ ಶಾಲೆ, ಬೊಂಬಾಯಿಯ ಜೆ. ಜೆ. ಕಲಾಶಾಲೆಗಳಲ್ಲಿ ಉನ್ನತ ಶಿಕ್ಷಣ ಪಡೆಯಲು ಹೋದರು. ಇನ್ನೂ ಕೆಲವರು ಪಾಶ್ಚಿಮಾತ್ಯ ದೇಶಗಳಿಗೇ ಹೋಗಿ ಶಿಕ್ಷಣ ಪಡೆದರು[909].

ನಾಲ್ವಡಿಯವರ ಆಸ್ಥಾನದಲ್ಲಿ ಹಲವಾರು ಪಾಶ್ಚಿಮಾತ್ಯ ಕಲಾವಿದರು ಬಂದು ರಾಜಾಶ್ರಯ ಪಡೆದರು. ರಾಜಾಶ್ರಯ ಪಡೆದ ಪ್ರಮುಖರೆಂದರೆ ಜರ್ಮನಿಯ ಜಿಲಾದೀನ್ ಉಡ್‌ವಿಲ್, ಇಂಗ್ಲೆಂಡಿನ ಸ್ಟರ್ಲಿಂಗ್, ಇಟಲಿಯ

---

*908. **ವೆಂಕಟರಾಮಯ್ಯ ಸಿ.ಕೆ.,** ಆಳಿದ ಮಹಾಸ್ವಾಮಿಗಳು, ಪು. 417-418*

*909. **ಸೂರ್ಯನಾಥ್ ಯು. ಕಾಮತ್, (ಸಂ),** ಪೂರ್ವೋಕ್ತ, ಪು. 409*

*910. **ದಯಾನಂದ ಪಟೇಲ್ ಟಿ.,** ವಾಸ್ತುಶಿಲ್ಪ, ಮೂರ್ತಿಶಿಲ್ಪ - ಚಿತ್ರಕಲೆ, ನಾಲ್ವಡಿ ಕೃಷ್ಣರಾಜ ಒಡೆಯರ್ ಒಂದು ದರ್ಶನ, ಪು. 174*

*911. **ತಿಪ್ಪೇಸ್ವಾಮಿ ಪಿ.ಆರ್.,** ಪೂರ್ವೋಕ್ತ, ಪು. 3*

ಕೊಲ್‌ಟನ್, ವೈಕ್‌ಸ್ಲರ್, ರಷ್ಯಾದ ನಿಕಾಲಾಸ್ ರೋರಿಚ್ ಮುಂತಾದವರು[910]. ವಿದೇಶಿ ಚಿತ್ರಕಾರರಾದ ವೈಕ್‌ಸ್ಲರ್ ಮತ್ತು ಜರಾಲ್ಡೀನರು ರಚಿಸಿದ ನಾಲ್ವಡಿಯವರ ರೂಪಚಿತ್ರಗಳು ಅಮೋಘವಾಗಿವೆ. ನಾಲ್ವಡಿಯವರ ವಿವಾಹ ಮಹೋತ್ಸವದ ಚಿತ್ರವನ್ನು ವೈಕ್‌ಸ್ಲರ್ ಬಹುಶ್ರಮದಿಂದ ರೂಪಿಸಿದ್ದಾನೆ[911]. ಹೊರರಾಜ್ಯವಾದ ತಿರುವಾಂಕೂರಿನ ರಾಜರವಿವರ್ಮ ಮತ್ತು ಅವರ ತಮ್ಮ ರಾಮವರ್ಮ ಸಹ ಪ್ರಮುಖರು. ಮೈಸೂರಿನ ಪ್ರಸಿದ್ಧ ಚಿತ್ರಕಾರರಾದ ಕೆ. ಕೇಶವಯ್ಯ, ವೈ. ನಾಗರಾಜು, ಎಸ್. ನಂಜುಂಡಸ್ವಾಮಿ, ವೈ. ಸುಬ್ರಹ್ಮಣ್ಯರಾಜು, ಎಸ್. ಆರ್. ಅಯ್ಯಂಗಾರ್, ಶಂಕರರಾಜು, ಎಸ್. ಎನ್. ಸ್ವಾಮಿ ಮುಂತಾದವರು ರಚಿಸಿದ ತೈಲ ಚಿತ್ರಗಳು ಅರಮನೆಯ ಕಲ್ಯಾಣ ಮಂಟಪದಲ್ಲಿ ಜನರನ್ನು ರಂಜಿಸುತ್ತಿವೆ.

ಅರಮನೆಯ ಕಲಾವಿದರಾಗಿದ್ದ ಎಂ. ಎ. ಅಜೀಜ್ ಹಿರಿಯ ವರ್ಣಚಿತ್ರಕಾರರಾಗಿದ್ದು ಜಲವರ್ಣ ಮತ್ತು ತೈಲವರ್ಣಗಳಲ್ಲಿ ಸಿದ್ಧಿಗಳಿಸಿದ್ದರು. ಇವರ ಜಲವರ್ಣದ ಕೃತಿಗಳು ತೈಲವರ್ಣವೆಂಬಂತೆ ಭಾಸವಾಗಿ ಸಜೀವವಾಗಿ ತೋರುತ್ತವೆ. ಎಸ್. ಜಿ. ಟಂಕಸಾಲೆ ಶುದ್ಧ ಜಲವರ್ಣದಲ್ಲಿ ಸರಳವೂ, ಸೊಬಗಿನಿಂದಲೂ, ವೈಭವ ವರ್ಣ ವಿನ್ಯಾಸಗಳಿಂದ ಕೂಡಿದ ನಿಸರ್ಗ ಚಿತ್ರ ರಚನೆಯಲ್ಲಿ ಹೆಸರಾಗಿದ್ದರು. ಮತ್ತೊರ್ವ ವರ್ಣ ಚಿತ್ರಕಾರರಾದ ಎನ್. ಜಿ. ಪಾವಂಜೆಯವರು ತಮ್ಮ ಚಿತ್ರಗಳಲ್ಲಿನ ವರ್ಣ ಬಳಕೆಯಲ್ಲಿ ಪ್ರಸಿದ್ಧ ಪಾಶ್ಚಿಮಾತ್ಯ ಕಲಾವಿದರಾದ ರೇಬ್ರಾಂಟ್, ಬೆಟಿಯನ್‌ರನ್ನು ಅನುಸರಿಸಿದಂತೆ ಭಾಸವಾಗುತ್ತದೆ. ಎಂ. ವೀರಪ್ಪನವರು ಚಿತ್ರಕಲೆಯನ್ನು ನಿತ್ಯ ಬಳಕೆಯಲ್ಲಿ ಮಕ್ಕಳ ಮನೋವಿಕಾಸಕ್ಕಾಗಿ ಬಳಸುವಂತೆ ಮಾಡಿದರು. ವೈ. ನಾಗರಾಜುರವರು ಅರಮನೆಯಲ್ಲಿನ ಬೃಹದಾಕಾರದ ದಸರಾ ಮೆರವಣಿಗೆಯ ಚಿತ್ರಗಳನ್ನು ರಚಿಸಿದರು. ನಾಲ್ವಡಿಯವರು 1927ರಲ್ಲಿ ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್ ಮೊದಲಾದ ರಾಷ್ಟ್ರಗಳಿಗೆ ಪ್ರವಾಸ ಹೋದಾಗ ವೈ. ನಾಗರಾಜುರವರನ್ನು ಕರೆದೊಯ್ದು ಆ ದೇಶಗಳ ಚಿತ್ರಕಲೆ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟರು. ರೇಖಾಚಿತ್ರ, ತೈಲಚಿತ್ರ, ಜಲವರ್ಣ ಚಿತ್ರಗಳಲ್ಲಿ ಸಹಜ ಸುಂದರವಾಗಿ ಚಿತ್ರಿಸುತ್ತಿದ್ದ ಕಲಾವಿದ ನಂಜುಂಡಸ್ವಾಮಿಯವರು ಕನ್ನಡ ನಾಡಿನ ರೇಬ್ರಾಂಟ್ ಎಂದೇ ಕರೆಯಲ್ಪಟ್ಟಿದ್ದರು[912].

ನಾಲ್ವಡಿಯವರ ಕಾಲದಲ್ಲಿ ಮೈಸೂರಿನಲ್ಲಿ ದೇಶೀಯ ಕಲಾ ಶೈಲಿಯೊಂದು ಬೆಳವಣಿಗೆಗೊಂಡಿತು. ಅಪಾರ ಸಂಖ್ಯೆಯಲ್ಲಿ ಈ ಶೈಲಿಯ ಚಿತ್ರಪಟಗಳು ಸಾರ್ವಜನಿಕ ಕಛೇರಿ, ಪ್ರಮುಖ ಮನೆ, ಧಾರ್ಮಿಕ ಕೇಂದ್ರ, ಶೈಕ್ಷಣಿಕ ಸಂಸ್ಥೆಗಳಲ್ಲಿ ಕಂಡುಬರುತ್ತವೆ. ನಾಲ್ವಡಿಯವರಿಗೆ ದೇಶ ವಿದೇಶಗಳಿಂದ ಉಡುಗೊರೆಯಾಗಿ ಬಂದ ಅಪೂರ್ವ ಕಲಾ ವಸ್ತುಗಳನ್ನೆಲ್ಲ ಕಲೆಹಾಕಿ ಜಗನ್ಮೋಹನ ಚಿತ್ರಶಾಲೆಯಲ್ಲಿ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿದರು. 1932 ರಿಂದ

---

*912. ದಯಾನಂದ ಪಟೇಲ್ ಟಿ., ಪೂರ್ವೋಕ್ತ, ಪು. 174-175*

*913. ತಿಪ್ಪೇಸ್ವಾಮಿ ಪಿ. ಆರ್., ಪೂರ್ವೋಕ್ತ, ಪು. 2-3*

1937 ರವರೆಗೆ ಪ್ರತೀವರ್ಷ ಮೈಸೂರು ದಸರಾದ ಕಲಾ ಪ್ರದರ್ಶನದಿಂದ ಉತ್ತಮ ಚಿತ್ರಗಳನ್ನು ಕೊಳ್ಳುವ ಮೂಲಕ ಚಿತ್ರಕಲೆಯನ್ನು ಬೆಂಬಲಿಸಿದರು[913]. ಅತ್ಯುತ್ತಮ ಚಿತ್ರಗಳನ್ನು ತಮ್ಮ ಅಂತಃಪುರದಲ್ಲಿ ಇಟ್ಟುಕೊಳ್ಳುತ್ತಿದ್ದರು. ಹೀಗೆ ನಾಲ್ವಡಿಯವರ ಕಾಲದಲ್ಲಿ ಸಾಂಪ್ರದಾಯಿಕ ಹಾಗೂ ಪಾಶ್ಚಿಮಾತ್ಯ ಶೈಲಿಗಳೆರಡೂ ಪೋಷಿತಗೊಂಡವು. ಮೈಸೂರಿನ ಪ್ರಮುಖ ಸ್ಮಾರಕಗಳಲ್ಲಿ ಸುಂದರವಾಗಿ ಬಳಸಲ್ಪಟ್ಟು ಇಂದಿಗೂ ಜನರಿಗೆ ಆನಂದವನ್ನೀಯುತ್ತಿವೆ. ಆದರೆ ಆ ಕಾಲದಲ್ಲಿ ವಂಗೀಯ ಮತ್ತು ಪಾಶ್ಚಿಮಾತ್ಯ ಕಲಾಶೈಲಿಗಳನ್ನು ಅಳವಡಿಸಿಕೊಂಡು ರಚಿಸಿದ ರಾಜಾರವಿವರ್ಮನ ಚಿತ್ರಗಳನ್ನು ಕುರಿತಂತೆ ಸಂಪ್ರದಾಯವಾದಿಗಳು ಟೀಕಿಸುತ್ತಿದ್ದರು. ಪಾಶ್ಚಾತ್ಯ ಕಲೆಯು 'ನಯನಾಕರ್ಶಕ' ವೆಂದೂ ಭಾರತೀಯ ಕಲೆ 'ಆತ್ಮಾಕರ್ಷಕ' ವೆಂದೂ ವ್ಯಾಖ್ಯಾನಿಸುತ್ತಿದ್ದರು. "ಶುದ್ಧವಾದ ಕಲೆ ಪ್ರೇಕ್ಷಕನ ಬಹಿರಿಂದ್ರಿಯ, ಅಂತರಿದ್ರಿಯಗಳೆರಡನ್ನೂ ಸಂಯಮಗೊಳಿಸಬೇಕು. ಪಾಶ್ಚಾತ್ಯ ಕಲೆ ಈ ನಿಸರ್ಗ ನಿಯಮಕ್ಕೆ ವಿರುದ್ಧ. ಭಾರತದ ಕಲೆಯಾದರೋ ಪ್ರೇಕ್ಷಕನ ಬಹಿರಿಂದ್ರಿಯಗಳನ್ನು ಧಮನ ಮಾಡುತ್ತದೆ; ಅಂತರಿಂದ್ರಿಯಗಳನ್ನು ಸಂಯಮಗೊಳಿಸುತ್ತದೆ; ಆತ್ಮವನ್ನೇಳಿಸುತ್ತದೆ"[914] ಎಂಬ ಅಭಿಪ್ರಾಯವನ್ನು ಹೊಂದಿದ್ದರು. ಆ ಮೂಲಕ ಸಂಪ್ರದಾಯವಾದಿಗಳು ದೇಶೀಯ ಕಲಾ ಪ್ರಾಕಾರಗಳ ಮೇಲಿನ ಪಾಶ್ಚಿಮಾತ್ಯ ಪ್ರಭಾವವನ್ನು ವಿರೋಧಿಸುತ್ತಿದ್ದರು. ಆದರೆ ನಾಲ್ವಡಿಯವರು ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಕಲಾ ಪ್ರಕಾರಗಳನ್ನು ಸಮನ್ವಯಗೊಳಿಸುವ ಮೂಲಕ ಪರಿವರ್ತನೆ ತರಲು ಮುಂದಾದರೆಂದು ಹೇಳಬಹುದು.

### *vi) ಕಲೆ ಮತ್ತು ವಾಸ್ತುಶಿಲ್ಪ*

ಪ್ರಾಚೀನ ಕಾಲದಿಂದಲೂ ಭಾರತೀಯ ಕಲೆ ಮತ್ತು ವಾಸ್ತುಶಿಲ್ಪಗಳಲ್ಲಿ ದ್ರಾವಿಡ-ವೇಸರ, ಇಸ್ಲಾಮಿಕ್ ಮುಂತಾದ ಶೈಲಿಗಳು ಪರಸ್ಪರ ಪ್ರಭಾವ ಬೀರಿರುವುದನ್ನು ಕಾಣಬಹುದು. 18ನೇ ಶತಮಾನದಲ್ಲೇ ಹೈದರ್, ಟಿಪ್ಪು ಕಾಲದ ಕಲಾ ಸ್ಮಾರಕಗಳಲ್ಲಿ ಇಂಡೋ-ಇಸ್ಲಾಮಿಕ್ ಶೈಲಿಗಳು ಮೈಸೂರು ಪ್ರದೇಶದಲ್ಲಿ ಬಳಕೆಯಾಗಿದ್ದವು. ಶ್ರೀರಂಗಪಟ್ಟಣದ ದರಿಯಾದೌಲತ್ ಅರಮನೆ, ಬೆಂಗಳೂರು ಕೋಟೆಯಲ್ಲಿರುವ ಟಿಪ್ಪುವಿನ ಅರಮನೆಗಳಲ್ಲಿನ ಮರದಿಂದ ನಿರ್ಮಾಣಗೊಂಡ ಮಹಡಿಯ ಮೆಟ್ಟಿಲುಗಳು, ಉಪ್ಪರಿಗೆಗಳು ಫ್ರೆಂಚ್ ಇಂಜಿನಿಯರುಗಳ ಸಲಹೆಯ ಮೇರೆಗೆ ನಿರ್ಮಾಣಗೊಂಡಿರಬಹುದೆಂಬ[915] ಅಭಿಪ್ರಾಯವು ಪಾಶ್ಚಿಮಾತ್ಯ ಪ್ರಭಾವದ ಆರಂಭವನ್ನು ಸೂಚಿಸುವುದಾಗಿದೆ.

---

*914. **ತಿ. ತಾ. ಶರ್ಮ.,** ನನ್ನ ಜೀವನ ಮತ್ತು ಧ್ಯೇಯ, ಪು. 162*

*915. **ಸೂರ್ಯನಾಥ್ ಯು. ಕಾಮತ್.,** ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-3, ಪು. 399-400*

*916. **ಇಶ್ವಾರ್ ಟಿ. ಪಿ.,** ಮೈಸೂರ್ ದಿ ರಾಯಲ್ ಸಿಟಿ, ಬೆಂಗಳೂರು, 1991, ಪು. 9*

*917. **ಅದೇ.,** ಪು. 56*

ಟಿಪ್ಪುವಿನ ಅವಸಾನದೊಂದಿಗೆ ಬ್ರಿಟಿಷರು ಮೈಸೂರು ಸಂಸ್ಥಾನದಲ್ಲಿ ಶಾಶ್ವತವಾಗಿ ನೆಲೆಸುವುದು ಅವಶ್ಯವಾಯಿತು. ಹಾಗಾಗಿ 19ನೇ ಶತಮಾನದ ಆರಂಭದ ಮೈಸೂರಿನ ಕಟ್ಟಡಗಳು ಬ್ರಿಟಿಷ್ ರೆಸಿಡೆಂಟರು, ಕಮಿಷನರುಗಳು, ಟ್ಯೂಟರ್‌ಗಳು ತಮ್ಮ ಇಚ್ಛೆಗನುಗುಣವಾಗಿ ನಿರ್ಮಿಸಿದವಾಗಿವೆ. ಅವರು ಭಾರತೀಯ ವಾಸ್ತುಶೈಲಿಯನ್ನು ಅಭಿಮಾನಿಸುವವರಾಗಿರಾದೆ ತಮ್ಮದೇ ದೇಶೀಯ ಶೈಲಿಯ ಕಟ್ಟಡಗಳ ನಿರ್ಮಾಣದ ಬಗ್ಗೆ ಆಸಕ್ತಿ ತೋರಿದರು. ಅವರಿಗೆ ಕಛೇರಿ ಅಥವಾ ವಾಸಿಸುವ ಮನೆಗಳು ಒಂದು ರೀತಿಯಲ್ಲಿ ತಮ್ಮ ದೇಶದ ಮಾದರಿಯ "ಮನೆಗಳಿಗೆ ಹಿಂತಿರುಗಿದ ಭಾವನೆ" ಹೊಂದಲು ನಿರ್ಮಿಸಿದವು[916]. ವೆಲ್ಲಿಂಗ್‌ಟನ್ ಲಾಡ್ಜ್ ಕಟ್ಟಡವು ಈಸ್ಟ್ ಇಂಡಿಯಾ ಕಂಪನಿಯ 'ಫ್ಯಾಕ್ಟರಿ' ಕಟ್ಟಡದ ಮಾದರಿಯಲ್ಲಿ ನಿರ್ಮಾಣಗೊಂಡಿದ್ದು ಕರ್ನಲ್‌ವೆಲ್ಲೆಸ್ಲಿ 1799 ರಿಂದ 1801ರವರೆಗೆ ವಾಸವಾಗಿದ್ದ[917]. ಇದು ಆರಂಭದ ಕಮಿಷನರುಗಳ ವಾಸಸ್ಥಾನವಾಗಿತ್ತು. ಇಲವಾಲದ ಬಳಿಯ 'ರೆಸಿಡೆನ್ಸಿ ಬಿಲ್ಡಿಂಗ್' ಬ್ರಿಟಿಷ್ ಮಾದರಿಯ ಅತ್ಯಂತ ಹಳೆಯ ಕಟ್ಟಡ. ಇದನ್ನು ಮೈಸೂರಿನ ರೆಸಿಡೆಂಟ್ ಆರ್ಥರ್ ಕೋಲ್ 1806ರಲ್ಲಿ ರಚಿಸಿದ. ಇದು ಕೋಲ್‌ನ ತಂದೆ ಲಾರ್ಡ್ ಎನ್ನಿಸ್ಕಿಲ್ಲೆನ್ ಐರ್ಲೆಂಡ್‌ನ ಹಳ್ಳಿಯಲ್ಲಿ ನಿರ್ಮಿಸಿದ್ದ ಮನೆಯ ರಚನಾ ಶೈಲಿಯ ಅನುಕರಣೆಯಾಗಿತ್ತು. ಇದು ಪ್ರಮುಖ ಅತಿಥಿಗಳಿಗಾಗಿ ಮತ್ತು ಬೇಟೆ ತಂಡಗಳಿಗಾಗಿ ವಸತಿ ಗೃಹವಾಗಿ ಬಳಕೆಯಾಗುತ್ತಿತ್ತು[918]. ಬ್ರಿಟಿಷ್ ಮಾದರಿಯಲ್ಲಿ ನಿರ್ಮಾಣಗೊಂಡ ಮತ್ತೊಂದು ಕಟ್ಟಡವೆಂದರೆ 'ಗವರ್ನಮೆಂಟ್ ಹೌಸ್'. ಇದು ಕರ್ನಲ್ ವಿಲ್ಕ್ಸ್‌ನಿಂದ 1805ರಲ್ಲಿ ಪೂರ್ಣಗೊಂಡಿತು. ಈ ಕಟ್ಟಡವು 'ಟಸ್ಕನ್ ಡೋರಿಕ್' ಶೈಲಿಯನ್ನೊಳಗೊಂಡಿದ್ದು ವಿಶಾಲವಾದ ಐವತ್ತು ಎಕರೆ ಉದ್ಯಾನವನ್ನೊಂದಿದ್ದು, ಅಲಂಕೃತವಾದ ಕಮಾನುಗಳನ್ನುಳ್ಳ ಎರಡು ದಿಗ್ವಿಜಯದ ಹೆಬ್ಬಾಗಿಲುಗಳನ್ನು ಹೊಂದಿದೆ[919]. ಹೀಗೆ ಮೈಸೂರಿನ ಆರಂಭದ ಬ್ರಿಟಿಷ್ ಅಧಿಕಾರಿಗಳ ನಿರ್ಮಾಣಗಳು ಪಾಶ್ಚಿಮಾತ್ಯ ಗಾಥಿಕ್ ಶೈಲಿ, ಗ್ರೀಕೋ ರೋಮನ್ನರ ಅನುಕರಣ ರೂಪವಾದ ಪುನರುಜ್ಜೀವನ ಶೈಲಿಗಳನ್ನೊಳಗೊಂಡಿದ್ದವು. ಬೆಂಗಳೂರಿನಲ್ಲಿ ವಾಸ್ತುಶಿಲ್ಪಿಯಾದ ರಿಚರ್ಡ್ ಸ್ಯಾಂಕಿ ಅಠಾರ ಕಛೇರಿ ಮತ್ತು ಮ್ಯೂಸಿಯಂಗಳನ್ನು ಗ್ರೀಕೋ-ರೋಮನ್ ಶೈಲಿಯಲ್ಲಿ ನಿರ್ಮಿಸಿದರು. ಇದು ಮೈಸೂರಿನ ಸಾರ್ವಜನಿಕ ಕಟ್ಟಡಗಳ ನಿರ್ಮಾಣದಲ್ಲಿ ಮುಂದೆ ಅವಿಭಾಜ್ಯ ಅಂಶವಾಗಿ ಸೇರಿಕೊಂಡಿತು.

ಮೈಸೂರು ಒಡೆಯರು ದೇಶೀಯ ಶೈಲಿ ಹಾಗೂ ಯೂರೋಪಿನ ಪುರಾತನ ಶೈಲಿಗಳನ್ನು ಮಿಶ್ರಣಗೊಳಿಸಿ ಕಲೆ ಮತ್ತು ವಾಸ್ತುಶಿಲ್ಪವನ್ನು ಬೆಳೆಸಿದರು. ಈ ಆಧುನಿಕ ಶೈಲಿಯು ಇಂಡೋ-ಸಾರ್ಸನಿಕ್ ಶೈಲಿ ಎಂದು ಕರೆಯಲ್ಪಟ್ಟಿದೆ. ಮುಖ್ಯವಾಗಿ ಹಳೇ ಮೈಸೂರು ಸಂಸ್ಥಾನದಲ್ಲಿ ಐರೋಪ್ಯ ಶೈಲಿ ಜನಪ್ರಿಯವಾಯಿತು. ಇದರಿಂದ ದೇಶೀಯ ವಾಸ್ತುಶಿಲ್ಪಕ್ಕೆ ಹೊಸ ಆಯಾಮ ಸೇರಿಕೊಂಡಂತಾಯಿತು. ಸಾರ್ವಜನಿಕ ಕಾಮಗಾರಿ ಇಲಾಖೆಯಲ್ಲಿದ್ದ ಐರೋಪ್ಯ

---

*918. ಇಬ್ಬಾರ್ ಟಿ. ಪಿ., ಮೈಸೂರ್ ದಿ ರಾಯಲ್ ಸಿಟಿ, ಪು. 58*

*919. ಅದೇ., ಪು. 54*

*920. ದಯಾನಂದ ಪಟೇಲ್. ಟಿ., ವಾಸ್ತುಶಿಲ್ಪ - ಮೂರ್ತಿಶಿಲ್ಪ - ಚಿತ್ರಕಲೆ, ನಾಲ್ವಡಿ ಕೃಷ್ಣರಾಜ ಒಡೆಯರ್ ಒಂದು ದರ್ಶನ, ಪು. 167*

ಇಂಜಿನಿಯರುಗಳು ತಮಗೆ ಪರಿಚಿತವಾದ ಅಯೋನಿಕ್, ಡೋರಿಕ್, ಕೊರಿಂತಿಯನ್, ಗಾಥಿಕ್, ರಿನೇಸಾನ್ಸ್, ಅಮೇರಿಕನ್ ಮುಂತಾದ ವಿವಿಧ ವಿದೇಶಿ ಶೈಲಿಗಳನ್ನು ಈ ನಾಡಿಗೆ ಎರವಲು ತಂದರು. ಐರೋಪ್ಯ ವಾಸ್ತುಶೈಲಿಯಲ್ಲೇ 'ಗಂಡು ಶೈಲಿ' ಎಂದು ಹೆಸರಾದ ಡೋರಿಕ್ ಮಾದರಿಯ ಕಂಬ ಸಾಲುಗಳನ್ನು ಕಟ್ಟಡಗಳಲ್ಲಿ ಅಳವಡಿಸಲಾಯಿತು. ಇವು ಅಲಂಕರಣದಲ್ಲಿ ಕಡಿಮೆಯಿದ್ದರೂ ಸೊಗಸಾದ ನೋಟಕ್ಕೆ ಹೆಸರಾಗಿವೆ. ಈ ಕಂಬಗಳು ಇಟ್ಟಿಗೆ ಗಾರೆಯಿಂದ ನಿರ್ಮಾಣಗೊಂಡಿದ್ದು ಬುಡದಲ್ಲಿ ದಪ್ಪಗಿದ್ದು ಮೇಲೆ ಹೋದಂತೆ ತೆಳುವಾಗಿದ್ದು ದೂರಕ್ಕೆ ಇವು ಅದ್ಭುತವಾಗಿ ಕಾಣುತ್ತವೆ. ಈ ಕಂಬ ಸಾಲುಗಳು ಮೈಸೂರಿನ ಜಯಲಕ್ಷ್ಮೀ ಮಹಲ್, ಲಲಿತಮಹಲ್, ಚೆಲುವಾಂಬ ಮಹಲ್, ಕೃಷ್ಣರಾಜೇಂದ್ರ ಆಸ್ಪತ್ರೆ ಮುಂತಾದ ಕಟ್ಟಡಗಳಲ್ಲಿ ಬಳಕೆಯಾಗಿವೆ[920].

ನಾಲ್ವಡಿಯವರ ಕಾಲದ ವಾಸ್ತುಶಿಲ್ಪ ಕಟ್ಟಡಗಳಲ್ಲಿ ರೋಮನ್ ಕಮಾನುಗಳು, ಕಮಾನು ಸರಣಿಗಳು, ಗೊಮ್ಮಟ ಮಾದರಿಗಳು ಪದೇ ಪದೇ ಬಳಕೆಗೊಂಡಿವೆ. ಇಟ್ಟಿಗೆ, ಜಲ್ಲಿ, ಕಲ್ಲಿನ ಗಾರೆಗಳ ಬಳಕೆಯಿಂದಾಗಿ ಕಟ್ಟಡಗಳ ಹೊರ ಮೈ ನಾಜೂಕಾಗ ತೊಡಗಿತು. ಸ್ಥಳೀಯ ಸ್ಥಪತಿಗಳು ಶುದ್ಧ ಗ್ರೀಕ್ ಶೈಲಿಯ ಕುಸುರಿ ಕೆಲಸವನ್ನು ಕುಶಲತೆಯಿಂದ ಮತ್ತು ಪರಿಶ್ರಮದಿಂದ ಅಳವಡಿಸಿಕೊಂಡಿರುವುದನ್ನು ಕಾಣಬಹುದು. ನಾಜೂಕಿನ ಕೆಲಸಗಳಿಗೆ ನಯಗಾರೆ ಹೆಚ್ಚು ಬಳಸಲಾರಂಭವಾಯಿತು[921] ಐರೋಪ್ಯ ಶೈಲಿಯಲ್ಲೇ ಅತ್ಯಂತ ಪ್ರಮುಖವಾದ ಗಾಥಿಕ್ ಶೈಲಿಯ ಅನುಕರಣೆ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದ ವಾಸ್ತುಶೈಲಿಯ ಪ್ರಮುಖ ಲಕ್ಷಣ. ಈ ಶೈಲಿಯಲ್ಲಿ ಎತ್ತರವಾಗಿ ಬೆಳೆದು ನಿಂತ ಉಪ್ಪರಿಗೆ ಕಟ್ಟಡಗಳನ್ನು, ದೊಡ್ಡ ದೊಡ್ಡ ಮಹಲುಗಳನ್ನು ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ನೋಡಬಹುದು. ಗಾಥಿಕ್ ಶೈಲಿಯ ಮುಖ್ಯ ಲಕ್ಷಣಗಳಾದ ಕಿಟಕಿ, ಬಾಗಿಲುಗಳ ಮೇಲೆ ಎಲೆ ಮೊನಚಿನಂತಹ ಚೂಪಾದ ಕಮಾನುಗಳು, ಎತ್ತರದ ಮಹಡಿಯ ಮೇಲಿನ ತುದಿ ಗೋಪುರಗಳು, ಹೆಚ್ಚಿನ ಚಿತ್ತಾರ ಕೆಲಸ, ಜ್ಯಾಮಿತಿ ವಿನ್ಯಾಸದ ಅಲಂಕರಣೆ, ಬಣ್ಣದ ಬಳಕೆ ಮುಂತಾದವನ್ನು ಬೆಂಗಳೂರಿನ ಅರಮನೆ, ನ್ಯಾಯಾಲಯ, ಮೈಸೂರಿನ ಚೆಲುವಾಂಬ ಮಹಲ್, ಲಲಿತಮಹಲ್ ಮುಂತಾದ ಕಟ್ಟಡಗಳಲ್ಲಿ ನೋಡಬಹುದು. ನಾಲ್ವಡಿಯವರ ಕಾಲದ ಕಟ್ಟಡಗಳಲ್ಲಿ ಪುನರುಜ್ಜೀವನ ಶೈಲಿಯ ಪ್ರಭಾವವನ್ನು ಕಾಣಬಹುದು. ಈ ಶೈಲಿಯಲ್ಲಿ ಕಟ್ಟಡದ ಮುಖಭಾಗ ಮತ್ತು ಒಳಾಂಗಣದಲ್ಲಿ ಹೆಚ್ಚಿನ ಕುಸುರಿ ಕೆಲಸವಿದ್ದು 'ಬಾರೋಕ್' ಹಾಗೂ 'ರೊಕೊಕೊ' ಅಲಂಕರಣ ಕ್ರಮಗಳನ್ನು ಅನುಸರಿಸಲಾಗಿದೆ. ಕಟ್ಟಡಗಳಲ್ಲಿ ಉಬ್ಬಿದ ದಂಡೆ, ಹೂಬಳ್ಳಿ ವಿನ್ಯಾಸಗಳನ್ನು ಗಾರೆಯಲ್ಲಿ ರೂಪಿಸಿ ಅವುಗಳ ಚೆಲುವನ್ನು ಹೆಚ್ಚಿಸಲು ಆದ್ಯತೆ ನೀಡಲಾಯಿತು. ವಾಸ್ತುವಿನ ಸೊಗಸು, ಲಾವಣ್ಯವನ್ನು ಹೆಚ್ಚಿಸಲು ಗೋಳಾಕಾರದ ಛಾವಣಿ, ಬಣ್ಣದ ಗಾಜುಗಳ ಅಳವಡಿಕೆ ಮುಂತಾದ

---

*921. ದಯಾನಂದ ಪಟೇಲ್. ಟಿ., ಪೂರ್ವೋಕ್ತ, ಪು. 167*

*922. ಅದೇ., ಪು. 168-169*

*923. ಇಶ್ವಾರ್. ಟಿ.ಪಿ., ಮೈಸೂರ್ ದಿ ರಾಯಲ್ ಪ್ಯಾಲೆಸ್, ಪು. 19*

ಅಂಶಗಳನ್ನು ಅಳವಡಿಸಲಾಯಿತು. ಇವು ಜಯಲಕ್ಷ್ಮೀ ವಿಲಾಸ ಮಹಲ್, ಕೃಷ್ಣರಾಜೇಂದ್ರ ಆಸ್ಪತ್ರೆ, ಲಲಿತ ಮಹಲ್ ಮುಂತಾದ ಕಟ್ಟಡಗಳಲ್ಲಿ ಪ್ರಮುಖವಾಗಿ ಕಂಡುಬರುತ್ತವೆ[922].

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದ ವಾಸ್ತುಶಿಲ್ಪ ಕಟ್ಟಡಗಳಲ್ಲಿ ಅತ್ಯಂತ ಸುಂದರವೂ, ಭವ್ಯವೂ ಆಗಿ ರಾರಾಜಿಸುತ್ತಿರುವ ಮೈಸೂರು ಅರಮನೆ (ಅಂಬಾವಿಲಾಸ ಅರಮನೆ) ಪ್ರಮುಖವಾದುದು. ಇದು ಹಿಂದೂ, ಮುಸ್ಲಿಂ ಹಾಗೂ ಐರೋಪ್ಯ ಮೂರು ಶೈಲಿಗಳ ಸಂಗಮದಿಂದ ರೂಪುಗೊಂಡದ್ದಾಗಿದೆ. ಇದರ ರಚನಕಾರ ಹೆನ್ರಿ ಇರ್ವಿನ್. ಇವನು ಶಿಮ್ಲಾದ ವೈಸರಾಯ್ ಭವನ ಹಾಗೂ ಮದ್ರಾಸ್‌ನ ನ್ಯಾಷನಲ್ ಆರ್ಟ್ ಗ್ಯಾಲರಿಗಳನ್ನು ರಚಿಸಿದವನು[923]. ಮೈಸೂರಿನ ಹಳೆಯ ಅರಮನೆಯು 1897ರಲ್ಲಿ ಬೆಂಕಿಗಾಹುತಿಯಾಗಿದ್ದರಿಂದ ಅದೇ ವರ್ಷ ಈ ಮೈಸೂರು ಅರಮನೆಯನ್ನು ನಿರ್ಮಿಸಲು ಆರಂಭಿಸಿ 1911-12ರಲ್ಲಿ ಒಟ್ಟು 41.50 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲಾಯಿತು. ಇದು ಹೊರ ನೋಟಕ್ಕೆ ಮೊಗಲ್ ಶೈಲಿಯ ಗಾಂಭೀರ್ಯತೆಯನ್ನು ಹೊಂದಿದ್ದು ಇದರ ಮಧ್ಯಗೋಪುರ 145 ಅಡಿಗಳಷ್ಟು ಎತ್ತರದ್ದಾಗಿದೆ[924]. ಈ ಅರಮನೆಯ ನಿರ್ಮಾಣದಲ್ಲಿ ಬೇಲೂರು, ಹಳೇಬೀಡು ಮುಂತಾದ ದೇವಾಲಯಗಳನ್ನು ನಿರ್ಮಿಸಿದ ಶಿಲ್ಪಶ್ರೇಷ್ಠರ ಮನೆತನದವರು, ಉತ್ತರ ಭಾರತ ಶಿಲ್ಪಿಗಳು ಮುಂತಾದವರು ವಿಚಾರ ವಿನಿಮಯ ಮಾಡಿಕೊಂಡು ಇದನ್ನು ನಿರ್ಮಿಸಲಾಯಿತು. ಇದು ಕಲ್ಲಿನಿಂದ ನಿರ್ಮಿತವಾದ ಮೂರು ಅಂತಸ್ತುಗಳ ಕಟ್ಟಡ. ಹೊಯ್ಸಳ ರೀತಿಯಲ್ಲಿ ಬಿಡಿಸಿರುವ ಬಳ್ಳಿಗಳು, ಸುರಳಿಗಳು, ಪಕ್ಷಿಗಳು, ಪ್ರಾಣಿಗಳು, ನಾನಾ ಭಂಗಿಯ ಮೂರ್ತಿಗಳು ಆಕರ್ಷಕವಾಗಿವೆ. ಇವುಗಳ ನಿಲುವು ಮತ್ತು ಮಾಟದಲ್ಲಿ ಗಾಥಿಕ್ ಶೈಲಿಯ ಪ್ರಭಾವವನ್ನು ಕಾಣಬಹುದು. ಇದರ ನಿರ್ಮಾಣ ಹಂತದಲ್ಲಿ ಕಲಾವಿದರೊಬ್ಬರು ಇದನ್ನು ಅತಿ ದೊಡ್ಡದಾದ ಕಲಾಶಿಕ್ಷಣ ಶಾಲೆಯೆಂದು ಕರೆದಿದ್ದರು. ಅಲ್ಲದೆ ಚಾಲುಕ್ಯ ಸಂಪ್ರದಾಯ ಮತ್ತು ದ್ರಾವಿಡ ಸಂಪ್ರದಾಯಗಳಲ್ಲಿ ಕೆತ್ತಿರುವ ಕಲ್ಲು ಮತ್ತು ಮರದ ಕೆತ್ತನೆ ಆ ಕಲೆಯನ್ನು ಪುನರುಜ್ಜೀವನಗೊಳಿಸಿದಂತಾಯಿತು ಎಂದಿದ್ದರು[925]. ಮೈಸೂರು ಅರಮನೆಯು ಸಾಂಸ್ಕೃತಿಕ ಹಾಗೂ ಆಡಳಿತ ಹೃದಯ ಕೇಂದ್ರವಾಗಿದ್ದರಿಂದ ಅದು ಸಾಮಾನ್ಯ ಜನರಿಗೆ ಸುಲಭವಾಗಿ ಕಾಣುವಂತಿರಬೇಕು ಎಂಬ ಹಿನ್ನೆಲೆಯಲ್ಲಿ ಇದರ ನಿರ್ಮಾಣ ಕಾರ್ಯ ನಡೆಯಿತು. ಅರಮನೆ ನಿರ್ಮಾಣ ಕಾಲಕ್ಕೆ ಜನರು ಪ್ರವಾಹದಂತೆ ಬಂದು ವೀಕ್ಷಿಸುತ್ತಿದ್ದರು. ಅದು ಜನರ ಅರಮನೆ ಎಂಬಂತೆ ಜನಾಭಿಪ್ರಾಯ ಮೂಡಿತು[926]. ಕಟ್ಟಡದ ಗೋಡೆ ಹಾಗೂ ಕಂಬಗಳ ಬೋದಿಗೆಗಳ

---

*924. ಇಸ್ರಾರ್. ಟಿ.ಪಿ., ಮೈಸೂರ್ ದಿ ರಾಯಲ್ ಪ್ಯಾಲೆಸ್, ಪು. 23-24*

*925. ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪು. 421*

*926. ಇಸ್ರಾರ್ ಟಿ.ಪಿ., ಪೂರ್ವೋಕ್ತ, ಪು. 35*

*927. ದಯಾನಂದ ಪಟೇಲ್ ಟಿ., ಪೂರ್ವೋಕ್ತ, ಪು. 171*

ಮೇಲೆ ಬಳಪದ ಕಲ್ಲಿನಿಂದ ಮಾಡಿದ ಹೊಯ್ಸಳ ಶೈಲಿಯ ಕೆತ್ತನೆ ಮನೋಹರವಾಗಿವೆ. ಎರಡನೆಯ ಅಂತಸ್ತಿನಲ್ಲಿ ಅಂಬಾವಿಲಾಸವೆಂಬ ಅಂತಃಪುರ, ಸಂಗೀತಶಾಲೆ, ದರ್ಬಾರ್‌ಹಾಲ್‌ಗಳಿವೆ. ಅಂಬಾವಿಲಾಸದ ಬಾಗಿಲುಗಳೆರಡು ಬೆಳ್ಳಿಯ ತಗಡನ್ನು ಹೊದಿಸಿ ದಶಾವತಾರ ಚಿತ್ರಗಳನ್ನು ಕೆತ್ತಲಾಗಿದೆ. ಅಂಬಾವಿಲಾಸದ ಮರದ ಕಮಲ, ಎಲೆಗಳ ಕೆತ್ತನೆ ಅಮೋಘವಾಗಿದೆ. ಅರಮನೆಯ ಕಲ್ಯಾಣ ಮಂಟಪದ ಭಿತ್ತಿಗಳಲ್ಲಿ ಸ್ವರ್ಣಚಿತ್ರಗಳಿಂದ ನಿರ್ಮಿಸಲಾಗಿದೆ[927]. ಒಟ್ಟಾರೆ ಮೈಸೂರು ಅರಮನೆಯು ಸಾಂಪ್ರದಾಯಿಕ ಹಾಗೂ ಆಧುನಿಕಗಳ ಮತ್ತು ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಕಲೆ ಮತ್ತು ವಾಸ್ತುಶೈಲಿಗಳ ಸಂಗಮವೆನ್ನಬಹುದು.

ನಾಲ್ವಡಿಯವರು ಐರೋಪ್ಯ ಶೈಲಿಯನ್ನು ಅನುಕರಿಸುವಂತೆ ಮಾಡಲು ಮೈಸೂರಿನ ಕೆಲವು ಪ್ರತಿಷ್ಠಿತ ಸ್ಥಪತಿಗಳನ್ನು ಇಂಗ್ಲೆಂಡ್, ಫ್ರಾನ್ಸ್ ಮುಂತಾದ ದೇಶಗಳಿಗೆ ಪ್ರವಾಸ ಹೋಗಲು ಅವಕಾಶ ಮಾಡಿಕೊಟ್ಟರು. ಈ ಕಾಲದ ನಗರದ ಪ್ರತಿಷ್ಠರು, ಶ್ರೀಮಂತರು ಐರೋಪ್ಯ ವಾಸ್ತುಶೈಲಿಗೆ ಮಾರು ಹೋಗಿ ಅಂತಹದೇ ನಿರ್ಮಾಣಗಳಲ್ಲಿ ತೊಡಗುವಂತಾಯಿತು. ಹಾಗೆಯೇ ಇನ್ನು ಕೆಲವರು ದೇಶೀಯ ಹಾಗೂ ಐರೋಪ್ಯ ಎರಡೂ ಶೈಲಿಗಳನ್ನು ಮಿಶ್ರಣ ಮಾಡಿ ಕಟ್ಟಡ ನಿರ್ಮಿಸಿದರು. ಜಾರ್ಜಿಯನ್ ಹಾಗೂ ರೀಜೆನ್ಸಿ ಶೈಲಿಗಳ ಮಾದರಿಯಲ್ಲಿ ಮನೆಗಳು ಮೈಸೂರು ನಗರದಲ್ಲಿ ಹೆಚ್ಚಾದವು. ಐರೋಪ್ಯರು ಹಾಕಿಕೊಟ್ಟ ಮಾದರಿಗಳಲ್ಲೇ ಕಟ್ಟಡಗಳು ನಿರ್ಮಾಣಗೊಂಡಿದ್ದರಿಂದ ಮೈಸೂರಿನ ಸ್ಥಳೀಯ ಸ್ಥಪತಿಗಳಿಗೆ ತಮ್ಮ ಸ್ವಂತ ಪ್ರತಿಭೆಯನ್ನು ಬಳಸಲು ಅವಕಾಶವಾಗಲಿಲ್ಲ. ಮೈಸೂರಿನಲ್ಲಿ 'ಮಂಕಿ-ಟಾಪ್' ಬಂಗಲೆಗಳು ವಿಶಿಷ್ಟ ವಾಸ್ತುಶೈಲಿಯಾಗಿ ರೂಪುಗೊಂಡವು. ಛಾವಣಿ ಹಾಗೂ ಚಜ್ಜಾಗಳಿಗೆ ಮಂಗಳೂರಿನ ಹೆಂಚುಗಳನ್ನು ಬಳಸುವುದು ಸಾಮಾನ್ಯವಾಯಿತು[928].

ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ 25 ವರ್ಷ ಪೂರೈಸಿದ ಸಿಲ್ವರ್ ಜ್ಯೂಬಿಲಿ ಸಮಾರಂಭದ ನಂತರ ಮೈಸೂರನ್ನು ಸುಂದರಗೊಳಿಸಬೇಕೆಂಬ ಪ್ರಜ್ಞೆ ತೀವ್ರಗೊಂಡಿತು. ಹಾಗಾಗಿ ಈ ಕಾಲದಲ್ಲಿ ಕನ್ನಂಬಾಡಿ ಅಣೆಕಟ್ಟೆ ಬಳಿಯ ಬೃಂದಾವನ ಮುಂತಾದ ಉದ್ಯಾನವನಗಳು, ರಸ್ತೆಗಳು ರೂಪುಗೊಂಡವು. 1927ಲ್ಲಿ ನಾಲ್ವಡಿಯವರ ಆಡಳಿತದ ರಜತ ಮಹೋತ್ಸವಕ್ಕೆ ಕಾಣಿಕೆಯಾಗಿ ಅರಮನೆಯ ಅಧಿಕಾರಿ ವರ್ಗದವರೆಲ್ಲರೂ ಸೇರಿ ಮೈಸೂರಿನ ಅರಮನೆಯ ಉತ್ತರ ದ್ವಾರಕ್ಕೆ ಎದುರಾಗಿ ಇಂಗ್ಲೆಂಡ್‌ನ ಬಿಗ್‌ಬೆನ್ ಮಾದರಿಯಲ್ಲಿ ಗಡಿಯಾರ ಗೋಪುರನ್ನು ನಿರ್ಮಿಸಲಾಯಿತು.

---

*928. ಇಬ್ರಾರ್ ಟಿ.ಪಿ., ಪೂರ್ವೋಕ್ತ, ಪು. 12-13*

*929. ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪು. 299*

*930. ಸೀತಾರಾಮಯ್ಯ ವಿ.ಸೀ., ಜೀವನ ನಾಟಕ, ಪು. 22*

ನಾಲ್ವಡಿಯವರು ಅಂದಿನ ಸಮಾರಂಭದ ಸಂಜೆ ಗಡಿಯಾರದ ವಿದ್ಯುಚ್ಛಕ್ತಿಯ ಯಂತ್ರ ಸಾಧನವನ್ನು ಒತ್ತುವ ಮೂಲಕ ಗಡಿಯಾರದ ಉದ್ಘಾಟನೆ ಮಾಡಿದರು[929]. ಈ ಗಡಿಯಾರ ಸ್ಥಾಪನೆಗೆ ಮೊದಲು ಜನರು ವೇಳೆ ತಿಳಿಯಲು ಅರಮನೆ ಅಥವಾ ಅರಸು ಶ್ರೀಮಂತರ ಮನೆಯ ಪಹರೆಗಾರರು ಬಾರಿಸುತ್ತಿದ್ದ ಜಾಗಟೆಗಳನ್ನೇ ನಂಬಿದ್ದರು[930].

ನಗರಗಳನ್ನು ವ್ಯವಸ್ಥಿತ ರೀತಿಯಲ್ಲಿ ಬೆಳೆಸಲು ನಾಲ್ವಡಿಯವರು ಮೈಸೂರು, ಬೆಂಗಳೂರು ನಗರಗಳಲ್ಲಿ ನಗರಾಭಿವೃದ್ಧಿ ಮಂಡಳಿಗಳನ್ನು ಸ್ಥಾಪಿಸಿದರು. ಈ ಮಂಡಳಿಗಳ ಮುಖ್ಯ ಜವಾಬ್ದಾರಿ ನಗರದ ಬಡಾವಣೆಗಳು ಯೋಜನಾಬದ್ಧವಾಗಿ ಬೆಳೆಯುವಂತೆ ನೋಡಿಕೊಳ್ಳುವುದಾಗಿತ್ತು. ನಗರಗಳಲ್ಲಿನ ಕೊಳಚೆ ಪ್ರವೇಶಗಳನ್ನು ಉತ್ತಮಪಡಿಸಿ ಅವರಿಗೆ ಪ್ರತ್ಯೇಕ ವಸತಿ ಸೌಕರ್ಯ ಕಲ್ಪಿಸುವುದು ಮಂಡಳಿಗಳ ಜವಾಬ್ದಾರಿಯಾಗಿತ್ತು[931]. ಮೈಸೂರಿನಲ್ಲಿನ ಚಾಮರಾಜಪುರಂ ಬಡಾವಣೆ, ಲಕ್ಷ್ಮೀಪುರಂ ಬಡಾವಣೆ, ಚಟ್ನಹಳ್ಳಿ ಬಡಾವಣೆ ಮತ್ತು ಒಂಟಿಕೊಪ್ಪಲು ಬಡಾವಣೆಗಳನ್ನು ಅಭಿವೃದ್ಧಿಗೊಳಿಸಲಾಯಿತು. ನಗರದಲ್ಲಿ ಬಡವರಿಗಾಗಿ ಮಾದರಿ ಮನೆಗಳು ನಿರ್ಮಾಣಗೊಂಡವು. ಮಧ್ಯಮ ವರ್ಗದವರಿಗೆ ಮನೆ ಕಟ್ಟಲು ಶೇ. 3ರ ಬಡ್ಡಿಯಲ್ಲಿ 200 ರಿಂದ 600 ರೂಪಾಯಿ ಸಾಲ ನೀಡಲಾಯಿತು[932]. ಯುವರಾಜ ಕಂಠೀರವ ನರಸರಾಜ ಒಡೆಯರು 1925ರಲ್ಲಿ ಲಂಡನ್ ನಗರಕ್ಕೆ ಭೇಟಿ ನೀಡಿದಾಗ ಅಲ್ಲಿ ಐದನೇ ಜಾರ್ಜ್ ದೊರೆ ಮತ್ತು ಅವರ ಕುಟುಂಬದವರು ಬಡವರಿಗೆ, ಮಧ್ಯಮ ವರ್ಗದವರಿಗೆ ಮನೆಗಳನ್ನು ಕಟ್ಟಿಸಿ ಸುಲಭ ಬೆಲೆಗೆ ಮಾರುವ ಅಥವಾ ಬಾಡಿಗೆಗೆ ಕೊಡುವ ವ್ಯವಸ್ಥೆ ಮಾಡಿದ್ದುದನ್ನು ನೋಡಿ ಬಂದರು. ಮೈಸೂರಿಗೆ ವಾಪಾಸ್ಸಾದ ನಂತರ ಒಂದು ನಿಧಿಯನ್ನು ಕೂಡಿಸಿ ರಾಜಾರಾಂ ಅಗ್ರಹಾರದಲ್ಲಿ ಮಾದರಿ ಮನೆಗಳನ್ನು ನಿರ್ಮಿಸಿದರು[933]. ಹೀಗೆ ನಾಲ್ವಡಿಯವರು ಹಿಂದೂ, ಮುಸ್ಲಿಂ ಮತ್ತು ಐರೋಪ್ಯ ಶೈಲಿಗಳನ್ನು ಬಳಸಿ ನಿರ್ಮಿಸಿದ ಕಟ್ಟಡಗಳು ಮೈಸೂರನ್ನು ಸುಂದರಗೊಳಿಸಿದವು. ಸಾಂಪ್ರದಾಯಿಕ ಕಲೆ ಮತ್ತು ವಾಸ್ತುಶಿಲ್ಪವನ್ನು ಅರಮನೆಗೆ ಬಳಸುವ ಮೂಲಕ ಅಳಿದುಹೋಗಿದ್ದ ಕಲೆಗೆ ಕಾಯಕಲ್ಪ ನೀಡಿ ಮುಂದಿನ ತಲೆಮಾರುಗಳಿಗೆ ಪರಂಪರೆಯ ರೂಪದಲ್ಲಿ ಕಲೆ ಮತ್ತು ವಾಸ್ತುಶಿಲ್ಪವನ್ನು ಕೊಂಡೊಯ್ಯಲಾಯಿತು. ಜನತೆಗೆ ಸೌಂದಾರ್ಯಭಿರುಚಿ ಬೆಳೆಯುವಂತೆ ಮಾಡಿ ಉತ್ತಮ ಕಟ್ಟಡಗಳನ್ನು ನಿರ್ಮಿಸಲು ಅಪರೋಕ್ಷವಾಗಿ ಸಹಕರಿಸಿದರು. ವಿಶ್ವದಲ್ಲೇ ಮೈಸೂರು ಎಂದರೆ ಅರಮನೆಗಳ ನಗರಗಳ ಎಂದು ಖ್ಯಾತಿ ಗಳಿಸುವಂತಾಯಿತು.

### *vii) ನಗರ ಸಂಸ್ಕೃತಿ*

ಆಧುನಿಕತೆಯ ಪ್ರಮುಖ ಲಕ್ಷಣವೇ ನಗರಗಳು ಮತ್ತು ಅಲ್ಲಿನ ನಗರ ಸಂಸ್ಕೃತಿ. ಪಾಶ್ಚಿಮಾತ್ಯ ಪ್ರಭಾವದ ಹಿನ್ನೆಲೆಯ ಆಧುನಿಕತೆಯು ಮೈಸೂರು ಸಂಸ್ಥಾನದ ವಿಸ್ತಾರವಾದ ಗ್ರಾಮಾಂತರ ಪ್ರದೇಶಗಳಿಗಿಂತ ಹೆಚ್ಚಾಗಿ ನಗರಗಳ

---

931. *ಕರ್ನಾಟಕ - ಕನ್ನಡ ವಿಷಯ ವಿಶ್ವಕೋಶ, ಪು. 1545*
932. *ಜಯಪ್ಪಗೌಡ, ಡಿ.ಎಸ್., ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು, ಪು. 226*
933. *ವೆಂಕಟರಾಮಯ್ಯ ಸಿ.ಕೆ., ದಿವಂಗತ ಶ್ರೀಮದ್ಯುವರಾಜರವರು, ಪು. 169*
934. *ಸೂರ್ಯನಾಥ್ ಕಾಮತ್ (ಸಂ)., ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ - 2, ಪು. 581-582*

ಮತ್ತು ನಗರವಾಸಿಗಳ ಮೇಲಾಯಿತು[934]. ಪಾಶ್ಚಿಮಾತ್ಯ ಮೂಲದ ಆಧುನಿಕ ಎನಿಸಿಕೊಳ್ಳುವ ಭಾಷೆ, ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನ, ಆರ್ಥಿಕತೆ, ರಾಜಕೀಯ ಪ್ರಜ್ಞೆ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದವುಗಳೆಲ್ಲ ನಗರಗಳಿಗೆ ಮೊದಲು ಆಗಮಿಸಿದ್ದು. ಹಾಗಾಗಿ ಇಂತಹ ನಗರಗಳಲ್ಲಿ ಮೈಸೂರು ಸಂಸ್ಥಾನದ ಸಂಸ್ಥಾನದ ಗ್ರಾಮೀಣ ಪ್ರದೇಶಗಳಿಗಿಂತ ಭಿನ್ನವಾದ ಸಂಸ್ಕೃತಿ ಬೆಳವಣಿಗೆಗೊಂಡಿತು. ಅದೇ ನಗರ ಸಂಸ್ಕೃತಿ. ನಮ್ಮ ಅಧ್ಯಯನದ ಕಾಲಾವಧಿಯಲ್ಲಿ ನಗರ ಸಂಸ್ಕೃತಿಯಲ್ಲಾದ ಕೆಲವು ಪರಿವರ್ತನೆಗಳನ್ನು ಮತ್ತು ಬೆಳವಣಿಗೆಗಳನ್ನು ಅಧ್ಯಯನ ಮಾಡುವುದು ನಗರ ಸಂಸ್ಕೃತಿ ಎಂಬ ಶೀರ್ಷಿಕೆಯಲ್ಲಿನ ಮುಖ್ಯ ಉದ್ದೇಶ.

ನಗರಗಳ ಬೆಳವಣಿಗೆಗೆ ಪ್ರಮುಖ ಕಾರಣ ಕೈಗಾರಿಕೆ, ವ್ಯಾಪಾರ ವಾಣಿಜ್ಯ ಮುಂತಾದ ಆರ್ಥಿಕಾಂಶಗಳಲ್ಲಿ ಆಗುವ ಆಧುನಿಕತೆಯೇ ಆಗಿದೆ. ಕೈಗಾರಿಕೀಕರಣ ಹಾಗೂ ವಾಣಿಜ್ಯೀಕರಣ ಚಟುವಟಿಕೆಗಳು ನಗರೀಕರಣ ಪ್ರಕ್ರಿಯೆಯನ್ನು ತೀವ್ರಗೊಳಿಸುತ್ತವೆ. ಮೈಸೂರು ಸಂಸ್ಥಾನದಲ್ಲಿ 1800ರ ನಂತರ ಬ್ರಿಟಿಷರ ಪ್ರಭಾವದಿಂದಾಗಿ ಆಡಳಿತ ಹುದ್ದೆಗಳಿಗೆ ಇಂಗ್ಲಿಷ್ ಭಾಷೆ ಬಲ್ಲವರನ್ನು ನೇಮಿಸಿಕೊಳ್ಳಲಾರಂಭಿಸಿದ್ದರಿಂದ ಸ್ಥಳೀಯರೂ ಇಂಗ್ಲಿಷ್ ಶಿಕ್ಷಣಕ್ಕೆ ಆದ್ಯತೆ ನೀಡಲಾರಂಭಿಸಿದರು. ದೂರದ ಗ್ರಾಮೀಣ ಪ್ರದೇಶಗಳಿಂದಲೂ ಇಂಗ್ಲಿಷ್ ಶಿಕ್ಷಣವನ್ನರಸಿ ನಗರಗಳಿಗೆ ಬರಲಾರಂಭಿಸಿದರು. ಹೀಗೆ ಬಂದ ವಿದ್ಯಾರ್ಥಿಗಳಿಗೆ ಪ್ರಮುಖವಾಗಿ ಬ್ರಾಹ್ಮಣ ವರ್ಗದಲ್ಲಿ 'ವಾರಾನ್ನ' ಸಂಸ್ಕೃತಿಯ ಮೂಲಕ ಅನುಕೂಲಸ್ಥರು ಬಡ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟರು[935]. ಮಾಸ್ತಿಯವರೂ ಸಹ ವಾರಾನ್ನದ ಹುಡುಗನಾಗಿ ವಾರದ ಒಂದೊಂದು ದಿನ ಒಬ್ಬೊಬ್ಬರ ಮನೆಯಲ್ಲಿ ಊಟ ಮಾಡಿ ಓದಿದುದನ್ನು ವಿವರಿಸಿದ್ದಾರೆ. ವಾರಾನ್ನಕ್ಕೆ ಒಂದೇ ಜಾತಿ ಪಂಗಡದ ವಿದ್ಯಾರ್ಥಿಗಳನ್ನೇ ಆಯ್ಕೆ ಮಾಡಿಕೊಳ್ಳುತ್ತಿದ್ದರೆಂಬುದಕ್ಕೆ ಮಾಸ್ತಿಯವರು ಶ್ರೀ ವೈಷ್ಣವ ಬ್ರಾಹ್ಮಣರ ಮನೆಯಲ್ಲಿ ಆಶ್ರಯ ಪಡೆದುದನ್ನು ಉದಾಹರಿಸಬಹುದು[936]. ಹೀಗೆ ನಗರದಲ್ಲಿ ನೆಲೆಸಿದ ಬ್ರಾಹ್ಮಣರು ದೂರದ ಗ್ರಾಮೀಣ ಪ್ರದೇಶಗಳಿಂದ ಬಂದ ಬಡ ಮಕ್ಕಳಿಗೆ ವಾರಾನ್ನದ ಮೂಲಕ ಪೋಷಿಸುವ ವಾರಾನ್ನ ಸಂಸ್ಕೃತಿಯನ್ನು ಬೆಳೆಸಿದರು. ಆನಂತರ ಬ್ರಾಹ್ಮಣೇತರ ವರ್ಗಗಳು ತಮ್ಮ ಜಾತಿಯ ಮಕ್ಕಳಿಗೆ ಆಧುನಿಕ ಶಿಕ್ಷಣ ಪಡೆಯುವಂತಾಗಲು ಲಿಂಗಾಯಿತರು, ಒಕ್ಕಲಿಗರು ತಮ್ಮ ತಮ್ಮ ಜಾತಿಯ ಹಾಸ್ಟೆಲ್‌ಗಳನ್ನು ಸ್ಥಾಪಿಸಿದರು. ಈ ಹಾಸ್ಟೆಲ್‌ಗಳಿಗೆ ಗ್ರಾಮೀಣ ಪ್ರದೇಶ ಹಾಗೂ ನಗರದ ಶ್ರೀಮಂತರಿಂದ ಆಹಾರ ದಿನಸಿ, ಹಣ ದೇಣಿಗೆ ಎತ್ತಿ ನಡೆಸಲಾರಂಭಿಸಿದರು. ಕುವೆಂಪುರವರು ಮಲೆನಾಡಿನ ಒಕ್ಕಲಿಗರಾಗಿದ್ದು ಹಾರ್ಡ್ವಿಕ್ ಶಾಲೆಯಲ್ಲಿ ಓದುತ್ತಿದ್ದುದರಿಂದ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡಿರಬಹುದೆಂಬ ಹಿನ್ನೆಲೆಯಲ್ಲಿ ಮೈಸೂರಿನ ಒಕ್ಕಲಿಗರ ಹಾಸ್ಟೆಲ್‌ಗೆ

---

*935. **ಸತ್ಯನ್ ಟಿ.ಎಸ್.**, ಕಾಲಕ್ಕೆ ಕನ್ನಡಿ, ಪು. 8*

*936. **ಮಾಸ್ತಿ ವೆಂಕಟೇಶ ಅಯ್ಯಂಗಾರ್**, ಭಾವ-1, ಪು. 131-141*

*937. **ಕುವೆಂಪು.**, ನೆನಪಿನ ದೋಣಿಯಲ್ಲಿ, ಪು. 92*

ಸೇರಿಸಿಕೊಳ್ಳುವುದಿಲ್ಲ[937]. ಆನಂತರ ಅವರು ಪ್ರತ್ಯೇಕ ರೂಮಿನಲ್ಲಿದ್ದುಕೊಂಡು ಹೋಟೆಲ್‌ನಲ್ಲಿ ಊಟ ಮಾಡುತ್ತಾ ಕಷ್ಟಕರ ಜೀವನವನ್ನು ನಡೆಸುವುದನ್ನು ಕಾಣಬಹುದು. ದೂರದ ಊರುಗಳಿಂದ ಬಂದ ವಿದ್ಯಾರ್ಥಿಗಳಿಗೆ ನಾಲ್ವಡಿಯವರ ಸರ್ಕಾರ ಹಾಸ್ಟೆಲ್ ಸೌಲಭ್ಯಗಳನ್ನು ಒದಗಿಸುವ ಮೂಲಕ ಅವರ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸಿತು.

ನಗರ ಸಂಸ್ಕೃತಿಯಲ್ಲಿ ಕಾಣಿಸಿಕೊಂಡ ಮತ್ತೊಂದು ಬೆಳವಣಿಗೆಯೆಂದರೆ ಹೋಟೆಲ್ ಉದ್ಯಮ ಆರಂಭಗೊಂಡದ್ದು. ಭಾರತೀಯ ಸಂಸ್ಕೃತಿಯಲ್ಲಿ ಹಸಿದು ಬಂದವರಿಗೆ ಅನ್ನವಿಡಬೇಕು ಎಂಬುದು ಸಾಮಾನ್ಯ ನಂಬಿಕೆ. ಹಾಗಾಗಿ 'ಅನ್ನ ವಿಕ್ರಯ' ನಿಷಿದ್ಧವೆಂಬ ಭಾವನೆ ಬೆಳೆಯಿತು. ಆದರೆ ನಗರಗಳು ಬೆಳೆದಂತೆ, ಜನಸಂಖ್ಯೆ ಹೆಚ್ಚಿದಂತೆ, ದೂರದೂರದ ಊರುಗಳಿಂದ ವ್ಯಾಪಾರ, ವಾಣಿಜ್ಯ, ಶಿಕ್ಷಣ ಮುಂತಾದ ಉದ್ದೇಶಗಳಿಗಾಗಿ ಬಂದ ಜನಕ್ಕೆ ಆಹಾರವನ್ನೊದಗಿಸಲು ಹೋಟೆಲ್‌ಗಳು ಅವಶ್ಯವಾದವು. "ಕಲಿಯುಗದಲ್ಲಿ ಅನ್ನ ಮಾರುವ ಕಾಲವೂ ಬರುತ್ತೆ. ರಸ್ತೆಯ ಮೂಲೆ ಮೂಲೆಯಲ್ಲಿ ಅನ್ನ ಮಾರುತ್ತಾರೆ" ಎಂದು ಕೈವಾರ ನಾರಣಪ್ಪ ಕಾಲಜ್ಞಾನದಲ್ಲಿ ಎಂದೋ ನುಡಿದದ್ದು ಬೆಂಗಳೂರಿನಲ್ಲಿ ಹತ್ತೊಂಬತ್ತನೇ ಶತಮಾನದ ಕೊನೆಗೆ ನಿಜವಾಗತೊಡಗಿತು. ಅಲ್ಲಿಯವರೆಗೂ ಮನೆಬಿಟ್ಟು ಹೊರಗೆ ಊಟ-ತಿಂಡಿ ಮಾಡಬೇಕಾದರೆ ತಮ್ಮ ಜಾತಿಯ ನೆಂಟರೋ-ಇಷ್ಟರೋ ಅಲ್ಲೇ ಮಾಡಬೇಕಿತ್ತು. ಧಾತು ಸಂವತ್ಸರದ ಕ್ಷಾಮದಲ್ಲಿ ವೆಂಕಟಾಚಲಯ್ಯಂಗಾರ್ ಎಂಬುವವರು ಹಸಿವು ತಾಳಲಾರದೆ ತಮ್ಮ ಜಾತಿಯವರಲ್ಲದ ಯಾರದೋ ಮನೆಯಲ್ಲಿ ಊಟ ಮಾಡಿದ್ದರಿಂದ ಅದನ್ನು ತಿಳಿದ ಅವರ ಜನ ಅವರನ್ನು ಜಾತಿಯಿಂದ ಬಹಿಷ್ಕಾರ ಹಾಕಿದ[938] ಒಂದು ಉದಾಹರಣೆ ಮಾಸ್ತಿ ವೆಂಕಟೇಶ ಅಯ್ಯಂಗಾರರ ಆತ್ಮಕಥನವಾದ ಭಾವ-1ರಲ್ಲಿ ವಿವರಿಸಿದ್ದಾರೆ. ಹೀಗೆ ಆಹಾರ ಸ್ವೀಕಾರದ ವಿಷಯದಲ್ಲಿ ಸಂಪ್ರದಾಯ ಸಮಾಜವು ಜಾತಿ ನಿಷ್ಠವಾಗಿತ್ತು. ಆದರೆ ಬೆಂಗಳೂರಿನ ಕಂಟೋನ್ಮೆಂಟ್ ಭಾಗದಲ್ಲಿ ಪಾಶ್ಚಿಮಾತ್ಯರು ಹೆಚ್ಚಾಗಿ ನೆಲೆಸಿದ್ದರಿಂದ ಅಲ್ಲಿ 1880 ರ ಮೊದಲೇ ಹೋಟೆಲ್‌ಗಳು ಹುಟ್ಟಿಕೊಂಡವು. ಆಧುನಿಕ ಮಾದರಿಯ ಮೊದಲ ಊಟದ ವಸತಿ ಗೃಹವನ್ನು ಬ್ರಾನ್ಸ್‌ಸನ್ಸ್ ಎಂಬ ಮಹಿಳೆ 1887ರಲ್ಲಿ ಸ್ಥಾಪಿಸಿದಳು. ಅದರ ಹೆಸರು ಬ್ರೌನ್ಸ್‌ಸನ್ಸ್ ವೆಸ್ಟ್‌ಎಂಡ್ ಎಂದು[939]. ಮೈಸೂರು ಸಂಸ್ಥಾನಕ್ಕೆ ಸೇರಿದ ಬೆಂಗಳೂರು ನಗರ ಭಾಗದಲ್ಲೂ 1890 ರ ನಂತರ ಹೋಟೆಲುಗಳು ಸ್ಥಾಪನೆಗೊಂಡವು. ಈ ಭಾಗದಲ್ಲಿ ಮೊದಲು ಹೋಟೆಲ್ ಸ್ಥಾಪಿಸಿದವರು ಅವನಿ ನರಸಿಂಗರಾಯರೆಂಬ ಬ್ರಾಹ್ಮಣರು. ಅನ್ನವಿಕ್ರಯ ಬ್ರಾಹ್ಮಣರಿಗೆ ನಿಷಿದ್ಧವೆಂದು ಶಾಸ್ತ್ರಗಳು ಹೇಳಿದರೂ ಸಹ ಜೀವನ

---

938. *ಮಾಸ್ತಿ ವೆಂಕಟೇಶ ಅಯ್ಯಂಗಾರ್., ಭಾವ-1, ಪು. 94*

939. *ಚಂದ್ರಮೌಳಿ ಕೆ., ಬೆಂಗಳೂರಿನ ನೋಟಗಳು, ಪು. 348*

940. *ಗುಂಡಪ್ಪ ಡಿ.ವಿ., ಜ್ಞಾಪಕ ಚಿತ್ರಶಾಲೆ, ಸಂಪುಟ 7, ಹೃದಯ ಸಂಪನ್ನರು, ಪು. 114-115*

941. *ಸೂರ್ಯನಾಥ್ ಯು. ಕಾಮತ್ (ಸಂ)., ಇತಿಹಾಸ ದರ್ಶನ, ಸಂ. 5, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, 1990, ಪು. 189-192*

ನಡೆಸಲು ವೃತ್ತಿಯನ್ನಾಗಿಸಿಕೊಂಡರು. ಚಿಕ್ಕಪೇಟೆ, ದೊಡ್ಡಪೇಟೆ ಸೇರುವ ಮೂಲೆಯಲ್ಲಿ 'ಅವನಿಯವರ ಹೋಟೆಲು' ಸ್ಥಾಪನೆಗೊಂಡಿತು[940]. ಈ ಹೋಟೆಲ್ ಉದ್ಯಮ ಸ್ಥಾಪನೆಗೊಳ್ಳಲು 1890ರ ದಶಕದಲ್ಲಿ ಕಾಣಿಸಿಕೊಂಡ ಪ್ಲೇಗ್ ಪಿಡುಗಿನಿಂದಾಗಿ ಸರ್ಕಾರಿ ನೌಕರರು ತಮ್ಮ ಕುಟುಂಬದವರನ್ನು ತಮ್ಮ ಊರುಗಳಿಗೆ ಕಳುಹಿಸಿ ತಾವು ಮಾತ್ರ ಅನಿವಾರ್ಯವಾಗಿ ನಗರದಲ್ಲೇ ಉಳಿಯುವಂತಾಗಿ ಅವರಿಗೆ ಊಟ ತಿಂಡಿಯ ವ್ಯವಸ್ಥೆಗಾಗಿ ಹೋಟೆಲ್‌ಗಳು ಆರಂಭವಾದವು[941]. ವೆಂಕಣ್ಣನ ಹೋಟೆಲು 1905-06ರ ಸುಮಾರಿನಲ್ಲಿ ಆರಂಭಗೊಂಡ ಮತ್ತೊಂದು ಬ್ರಾಹ್ಮಣರ ಹೋಟೆಲು. ವೆಂಕಣ್ಣನ ಹೋಟೆಲ್‌ನಲ್ಲಿ ಮರದ ಹಲಗೆಯ ತಡಿಕೆಗಳಿಂದ ಮೂರುಭಾಗ ಮಾಡಲಾಗಿತ್ತು. ಮೊದಲ ವಿಭಾಗ ಅಡಿಗೆ ಕೋಣೆಯ ಬಾಗಿಲ ಬಳಿಯಿದ್ದು 'ಬ್ರಾಹ್ಮಣರಿಗೆ' ಎಂದು ಚೀಟಿ ಹಾಕಲಾಗಿತ್ತು. ಎರಡನೆಯದು 'ಲೌಕಿಕ ಬ್ರಾಹ್ಮಣರಿಗೆ' ಮೂರನೆಯದು 'ಬ್ರಾಹ್ಮಣೇತರರಿಗೆ'. ವೆಂಕಣ್ಣನ ಹೋಟೆಲ್‌ಗೆ ಮೊದಲೇ ಹಣ ನೀಡಿ ಹೆಸರನ್ನು ರಿಜಿಸ್ಟರ್ ಮಾಡಿಸಿರಬೇಕಿತ್ತು. ಸ್ವತಃ ವೆಂಕಣ್ಣನವರೇ ಬಂದ ಗಿರಾಕಿಗಳನ್ನು ನೀವು ಬ್ರಾಹ್ಮಣರೋ? ಸ್ನಾನವಾಗಿದೆಯೋ? ಎಂದು ಪ್ರಶ್ನಿಸುತ್ತಿದ್ದರು. ಹಣೆಯ ಮೇಲೆ ವಿಭೂತಿ ಯಾಕಿಲ್ಲ? ಎಂದು ಅಲ್ಲೇ ಡಬ್ಬದಲ್ಲಿದ್ದ ವಿಭೂತಿ ಹಚ್ಚಿಕೊಂಡ ಮೇಲೆಯೆ ಒಳ ಪ್ರವೇಶ. ಸಮಾಜದಲ್ಲಿ ಹೋಟೆಲ್‌ಗೆ ಹೋಗಿ ತಿನ್ನುವುದು ಕೇವಲ ಪರಸ್ಥಳದವರಿಗೆ ಎಂಬ ಭಾವನೆ ಇದ್ದಿತು. ಹಿರಿಯರು ಇದ್ದಾಗ ಕಿರಿಯರು ಹೋಟೆಲ್‌ನಲ್ಲಿ ಕಾಣಿಸಿಕೊಳ್ಳದೆ ತಪ್ಪಿಸಿಕೊಂಡು ಓಡಿ ಹೋಗುತ್ತಿದ್ದರು[942].

ಅಪ್ಪಣ್ಣ ಎನ್ನುವವರು 1898ರಲ್ಲಿ ಮತ್ತೊಂದು ಹೋಟೆಲ್ ಆರಂಭಿಸಿ ವ್ಯಾಪಾರ ಬೆಳೆದಂತೆ 'ಹಿಂದೂ ಕಾಫಿ ಕ್ಲಬ್' ಎಂಬ ಹೆಸರಿನಲ್ಲಿ ಹೋಟೆಲ್ ಆರಂಭಿಸಿದರು. ಇದು 1908ರ ಸುಮಾರಿನಲ್ಲಿ ಒಂದು ಸಾಂಸ್ಕೃತಿಕ ಕೇಂದ್ರವಾಗಿ ಪ್ರತಿ ಸಂಜೆ ವಿದ್ವಾಂಸರು, ಸಂಗೀತಗಾರರು, ಶಿಕ್ಷಕರು ಸೇರಿ ಮಿತ್ರಗೋಷ್ಠಿ ನಡೆಸುತ್ತಿದ್ದರು. ಆ ಗೋಷ್ಠಿಗೆ 'ಇಂಡಿಪೆಂಡೆಂಟ್ ಬೋರ್ಡ್' ಎಂದು ಹೆಸರಿಟ್ಟು ಸ್ವರಾಜ್ಯ, ಸ್ವದೇಶಿ ವಿಷಯಗಳು ಸೇರಿದಂತೆ ಎಲ್ಲ ವಿಷಯಗಳೂ ಚರ್ಚೆಯಾಗುತ್ತಿದ್ದವು[943]. ಅಪ್ಪಣ್ಣನ ಹೋಟೆಲ್ 1958ರಲ್ಲಿ ತನ್ನ 60ನೇ ವರ್ಷಾಚರಣೆ ಸಮಾರಂಭಕ್ಕೆ ವಿಶ್ವೇಶ್ವರಯ್ಯನವರನ್ನು ಕರೆಸಿ ಆಚರಿಸಿತು.

ಮೈಸೂರು ಸಂಸ್ಥಾನದ ನಗರಗಳು, ಪಟ್ಟಣಗಳು ಬೆಳೆದಂತೆ, ಕೈಗಾರಿಕೆಗಳು, ವ್ಯಾಪಾರಗಳು ಹೆಚ್ಚಿದಂತೆ ನಗರಗಳ ಜನಸಂಖ್ಯೆ ಹೆಚ್ಚಿತು. ಇಂಥ ಪಟ್ಟಣಗಳಿಗೆ ಬರುವ ಪ್ರಯಾಣಿಕರ ಸೌಕರ್ಯಕ್ಕಾಗಿ ಚೊಕ್ಕಟವಾದ ಹೋಟೆಲುಗಳ ಅವಶ್ಯಕತೆ ತುಂಬಾ ಅವಶ್ಯವೆನಿಸಿತು. ಪಾಶ್ಚಿಮಾತ್ಯ ದೇಶಗಳಲ್ಲಿ ಹೋಟೆಲ್ ಉದ್ಯಮವು ಪ್ರವಾಸೋದ್ಯಮಕ್ಕೆ ಪೂರಕವೆಂಬ ಭಾವನೆ ಬೆಳೆದು, ಸ್ವಿಟ್ಜರ್‌ಲ್ಯಾಂಡ್ ಮೊದಲಾದ ದೇಶಗಳಲ್ಲಿ ಸರ್ಕಾರವೇ ಹೋಟೆಲುಗಳನ್ನು ಪ್ರಾರಂಭಿಸಿತು.

---

*942. ಗುಂಡಪ್ಪ ಡಿ.ವಿ., ಪೂರ್ವೋಕ್ತ, ಪು. 114-119*

*943. ಗುಂಡಪ್ಪ ಡಿ.ವಿ., ಪೂರ್ವೋಕ್ತ, ಪು. 124-125*

*944. ಜಯಪ್ಪಗೌಡ ಡಿ.ಎಸ್., ಪೂರ್ವೋಕ್ತ, ಪು. 168*

ಆ ಹಿನ್ನೆಲೆಯಲ್ಲಿ ವಿಶ್ವೇಶ್ವರಯ್ಯನವರ ಕಾಲದ ಮೈಸೂರು ಸರ್ಕಾರವು ಪ್ರಮುಖ ಪಟ್ಟಣಗಳಲ್ಲಿ 'ಮಾಡರನ್ ಹಿಂದೂ ಹೋಟೆಲ್'ಗಳನ್ನು ಸ್ಥಾಪಿಸುವ ಕಾರ್ಯಯೋಜನೆಯೊಂದನ್ನು ಕೈಗೊಂಡಿತು. ಹೋಟೆಲ್ ಉದ್ಯಮಗಳನ್ನು ಸ್ಥಾಪಿಸುವವರಿಗೆ ಸಹಾಯ ಧನ ನೀಡುವ ಹಾಗೂ ಕಡಿಮೆ ಬಡ್ಡಿದರದಲ್ಲಿ ಸಾಲ ನೀಡುವ ಕ್ರಮಬಂದಿತು. ಬೆಂಗಳೂರು, ಮೈಸೂರು, ತುಮಕೂರು ಮುಂತಾದ ಐದು ಕಡೆ ಇಂತಹ ಹೋಟೆಲ್‌ಗಳು ಸ್ಥಾಪನೆಗೊಂಡವು[944]. ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣೇತರ ಚಳವಳಿ ತೀವ್ರಗೊಂಡು ಸರ್ಕಾರಿ ಹುದ್ದೆಗಳಿಗೆ ಸರ್ಕಾರ ಮೀಸಲಾತಿ ಆರಂಭಿಸಿದ್ದರಿಂದ ಬ್ರಾಹ್ಮಣರ ಉದ್ಯೋಗದ ಏಕಸ್ವಾಮ್ಯತೆಗೆ ಭಂಗ ಬಂದಿತು. ಆಗ "ಬ್ರಾಹ್ಮಣರಿಗೆ ಉದ್ಯೋಗ ದೊರೆಯುವ ಕಾಲ ಹೋಯಿತು. ಇನ್ನು ಅವರಿಗೆ ಜೀವನಕ್ಕೆ ಕಷ್ಟ ಬರುತ್ತದೆ. ದಿನೇ ದಿನೇ ಆ ಕಷ್ಟ ಹೆಚ್ಚುತ್ತದೆ. ಆ ಕಷ್ಟವನ್ನು ಅವರು ಎದುರಿಸಬೇಕಾದರೆ, ಬೇರೆ ಜೀವಿಕಾ ವೃತ್ತಿಗಳನ್ನು ಅಭ್ಯಾಸ ಮಾಡಿಕೊಳ್ಳಬೇಕು"[945] ಎಂದು ಕೆಲವರು ಹೇಳಲಾರಂಭಿಸಿದರು. ಕಾಂಗ್ರೆಸ್‌ನ ಅಧ್ಯಕ್ಷರಾಗಿದ್ದ ಸೆಟ್ಲೂರರು ಸಹ ಬ್ರಾಹ್ಮಣರು ಹೆಚ್ಚಾಗಿ ಸ್ವತಂತ್ರ ವೃತ್ತಿ ಕೈಗೊಂಡು ಜೀವಿಸಬೇಕೆಂದು ನೇರವಾಗಿ ಕರೆ ನೀಡಿದರು[946]. ಇದರಿಂದಾಗಿ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿದ್ದ ಜಾತಿ ನಿರ್ದೇಶಿತ ಉದ್ಯೋಗ ವ್ಯವಸ್ಥೆ ಬದಲಾವಣೆಗೊಂಡಿತು.

ನಗರಗಳಲ್ಲಿನ ಪ್ರಮುಖ ಕೈಗಾರಿಕಾ, ವಾಣಿಜ್ಯ ಉದ್ಯಮಿಗಳು, ಅಧಿಕಾರಿಗಳು ಬಿಡುವಿನ ವೇಳೆಯಲ್ಲಿ ಒಂದೆಡೆ ಕಲೆತು ವಿಚಾರ ವಿನಿಮಯ ಮಾಡಿಕೊಳ್ಳಲು ಅನುಕೂಲವಾಗುವಂತೆ ಮಾಡಲು ಬೆಂಗಳೂರಿನಲ್ಲಿ 1917ರಲ್ಲಿ ಸೆಂಚುರಿ ಕ್ಲಬ್, ಮಹಿಳೆಯರ ಕ್ಲಬ್ ಹಾಗೂ ಮೈಸೂರಿನಲ್ಲಿ ಕಾಸ್ಮೋಪಾಲಿಟನ್ ಕ್ಲಬ್‌ಗಳನ್ನು ಸ್ಥಾಪಿಸಲಾಯಿತು. ಇದರೊಂದಿಗೆ ಕ್ಲಬ್ ಸಂಸ್ಕೃತಿ ನಗರ ಸಂಸ್ಕೃತಿಯ ಒಂದು ಭಾಗವಾಯಿತು[947].

ಮೈಸೂರು ಸಂಸ್ಥಾನದಲ್ಲಿ ಪಾಶ್ಚಿಮಾತ್ಯ ಪ್ರಭಾವದಿಂದಾಗಿ ಜನರ ವೇಷ ಭೂಷಣಗಳಲ್ಲಿ ಹಲವಾರು ಬದಲಾವಣೆಗಳಾದವು. ಕುವೆಂಪುರವರು ಉಲ್ಲೇಖಿಸಿರುವಂತೆ ನಗರದ "ವೇಷಭೂಷಣ ನಮ್ಮ ಹಳ್ಳಿಗರ ರೀತಿಯಿಂದ ಪ್ರತ್ಯೇಕವಾಗಿದ್ದು, ಪಟ್ಟಣದ ನಾಗರಿಕತೆಯ ಶೋಭೆಯಿಂದ ನಮ್ಮ ಶ್ಲಾಘನೆಗೆ ಒಳಗಾಗಿ ಆಕರ್ಷಣೀಯವಾಗಿತ್ತು."[948]

---

945. ***ಗುಂಡಪ್ಪ ಡಿ.ವಿ.***, *ಪೂರ್ವೋಕ್ತ, ಹಲವರು ಸಾರ್ವಜನಿಕರು, ಸಂ. 6, ಪು. 254*

946. ***ಬಿಜೋರ್ನ್ ಹೆಟ್ನೆ.***, *ದಿ ಪೊಲಿಟಿಕಲ್ ಎಕಾನಮಿ ಆಫ್ ಇಂಡೈರೆಕ್ಟ್ ರೂಲ್ - ಮೈಸೂರ್, 1881-1947, ಪು. 183*

947. ***ಜಯಪ್ಪಗೌಡ ಡಿ.ಎಸ್.***, *ಪೂರ್ವೋಕ್ತ, ಪು. 168*

948. ***ಕುವೆಂಪು.***, *ನೆನಪಿನ ದೋಣಿಯಲ್ಲಿ, ಪು. 22*

949. ***ಚಂದ್ರಶೇಖರ್ ಎಸ್.***, *ದಕ್ಷಿಣಭಾರತ: ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಪು. 24-25*

950. ***ವೆಂಕಟರಾಮಯ್ಯ ಸಿ.ಕೆ.***, *ಆಳಿದ ಮಹಾಸ್ವಾಮಿಯವರು, ಪು. 83-84*

ಮೈಸೂರಿನ ವೇಷಭೂಷಣಗಳ ಪರಿವರ್ತನೆಗೆ ವಸಾಹತು ಆಡಳಿತ ಹಾಗೂ ಪಾಶ್ಚಿಮಾತ್ಯರ ನಡುವಿನ ಸಂಪರ್ಕಗಳು ಕಾರಣವಾದವು. ಜನರು ಸಾರ್ವಜನಿಕವಾಗಿ ಒಂದು ವಸ್ತ್ರ ಧರಿಸಿದರೆ ಖಾಸಗಿಯಾಗಿ ತಮ್ಮದೇ ಆದ ವಸ್ತ್ರಗಳನ್ನು ತೊಡುವ ರೂಢಿ ಬಂದಿತು[949]. ಸ್ವತಃ ನಾಲ್ವಡಿಯವರೇ ಬಾಲ್ಯದಿಂದಲೂ ಅಂಗಿ ಷರಾಯಿ, 'ಫೆಲ್ಟ್' ಟೋಪಿ ಧರಿಸುವುದರಲ್ಲಿ ಆಸಕ್ತರಾಗಿದ್ದರು[950]. ಅನಂತರ ಮೈಸೂರಿನ ವೇಷ ಭೂಷಣಗಳಿಗೆ ಸಂಕೇತವಾಗಿ ಕೋಟು, ಪ್ಯಾಂಟು ಮುಂತಾದ ಪಾಶ್ಚಿಮಾತ್ಯ ಅಂಶಗಳ ಜೊತೆಗೆ ಮೈಸೂರು ಪೇಟವನ್ನು ಧರಿಸುವ ಮೂಲಕ ವೇಷಭೂಷಣಗಳ ಪರಿವರ್ತನೆಗೆ ಚಾಲನೆ ನೀಡಿದರು. ಮೈಸೂರಿನ ಸರ್ಕಾರಿ ಅಧಿಕಾರಿಗಳಿಗೆ ನಿರ್ದಿಷ್ಟವಾದ ಉಡುಪನ್ನು ನಿಯಮಬದ್ಧಗೊಸಲಾಗಿತ್ತು. ಸರ್ಕಾರದ ಇಲಾಖೆಯ ಭಾಗವಾಗಿದ್ದ ವಿಶ್ವವಿದ್ಯಾನಿಲಯದ ಅಧ್ಯಾಪಕರೆಲ್ಲಾ ಸರ್ಕಾರಿ ನೌಕರರಾಗಿದ್ದರಿಂದ ಕೋಟು, ಪಂಚೆ ಅಥವಾ ಷರಾಯಿ ಪೇಟ ಹಾಕಿಕೊಂಡೇ ಕಾಲೇಜಿಗೆ ಹೋಗಬೇಕೆಂಬ ಕಟ್ಟುನಿಟ್ಟಾದ ನಿಯಮವಿತ್ತು[951]. 1916-17ರ ಸುಮಾರಿನಲ್ಲಿ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಶೇ. 8-10 ಜನ ಮಾತ್ರ ಷರಾಯಿ ತೊಟ್ಟು ಉಳಿದವರು ಲುಂಗಿ ಸುತ್ತಿಕೊಂಡು ಅಂಗಿ ಹಾಕಿಕೊಂಡು ಬರು ತ್ತಿದ್ದರು. ತಲೆಯ ಮೇಲೊಂದು ಟೋಪಿ, ಕೆಲವರು 'ಕ್ರಿಸ್ಟೀಸ್ ಲಂಡನ್' ಎಂಬ ಕಂಪನಿಯವರು ತಯಾರಿಸುತ್ತಿದ್ದ ಫೆಲ್ಟ್ ಟೋಪಿಯನ್ನೂ, ಬಹುಪಾಲು ಜನ ಹಾಸನದ ಟೋಪಿಯನ್ನು ಧರಿಸುತ್ತಿದ್ದರು[952].

ಪ್ರಸಿದ್ಧ ವಿದ್ವಾಂಸರಾಗಿದ್ದ ಬಿ. ಎಂ. ಶ್ರೀಕಂಠಯ್ಯ, ಎನ್. ಎಸ್. ಸುಬ್ಬರಾಯರು ಬಟ್ಟೆಬರೆಗಳ ವಿಷಯದಲ್ಲಿ ಬಹಳ ಕಟ್ಟುನಿಟ್ಟಾಗಿದ್ದು ಗರಿಮುರಿಯಾದ ಸೂಟು, ರುಮಾಲುಗಳನ್ನು ಧರಿಸಿಕೊಂಡು ಬರುತ್ತಿದ್ದರು. ಕಾಲೇಜಿನ ಅಧ್ಯಾಪಕರು ಪಾಠ ಹೇಳಲು ಹೋಗುವಾಗ ಗೌನು ಹಾಕಿಕೊಂಡೇ ಹೋಗುವುದು ಪದ್ಧತಿ ಮಾತ್ರವಾಗಿರದೆ ನಿಯಮವೂ ಆಗಿತ್ತು[953]. ವಿಶ್ವೇಶ್ವರಯ್ಯನವರು ದಿವಾನರಾದ ಮೇಲೆ ಅಧಿಕಾರಿಗಳಲ್ಲಿ, ವಿದ್ಯಾವಂತರಲ್ಲಿ ವೇಷಭೂಷಣಗಳಲ್ಲಿ ಆಕರ್ಷಣೆ ಹೆಚ್ಚಿತು. ಪ್ರಜಾಪ್ರತಿನಿಧಿ ಸಭೆಯ ತರುಣ ಸದಸ್ಯರಾದ ಹೊಸಕೊಪ್ಪ ಕೃಷ್ಣರಾಯರು "ಆಗಿನ ಫ್ಯಾಷನ್ ಪ್ರಕಾರ ಉಡುಪು ಧರಿಸಿದ್ದರು. ಅದು ಸೊಗಸಾದ ಉಣ್ಣೆಯ ಸೂಟು, ಮೈಗೊಪ್ಪುವಂತೆ ಹೊಲೆದದ್ದು; ನೆಕ್‌ಟೈ, ಜರಿ ಮಾವಿನಕಾಯಿ ತುಂಬಿದ ಪೊರೆಯಂಥ ಬಿಳಿಯ ಪೇಟ, ಜೇಬಿನಿಂದ ಮೇಲಕ್ಕೆದ್ದು ಕಾಣುವ ರೇಷ್ಮೆಯ ಕರವಸ್ತ್ರ,

---

*951. ಕುವೆಂಪು., ನೆನಪಿನ ದೋಣಿಯಲ್ಲಿ, ಪು. 650*

*952. ಮೂರ್ತಿರಾವ್ ಎ.ಎನ್., ಚಿತ್ರಗಳು ಪತ್ರಗಳು, ಪು. 37-38*

*953. ಮೂರ್ತಿರಾವ್ ಎ.ಎನ್., ಚಿತ್ರಗಳು ಪತ್ರಗಳು, ಪು. 43*

*954. ಗುಂಡಪ್ಪ ಡಿ.ವಿ., ಜ್ಞಾಪಕಚಿತ್ರಶಾಲೆ, ಸಂ. 1, ಪು. 173*

*955. ಕುವೆಂಪು, ನೆನಪಿನ ದೋಣಿಯಲ್ಲಿ, ಪು. 90*

ವೆಸ್ಟ್‌ಕೋಟಿನ ಜೇಬಿನಲ್ಲಿ ಗಡಿಯಾರ ಅದರಿಂದ ಇನ್ನೊಂದು ಜೇಬಿಗೆ ಸೇರಿದ ಚಿನ್ನದ ಸರಪಳಿ, ಕೈಯಲ್ಲಿ ಉಂಗುರ"[954] ಧರಿಸಿ ಬಂದಿದ್ದರು. ಸಿ. ಆರ್. ರೆಡ್ಡಿಯವರು ಮಲೆನಾಡಿನ ಇಂಗ್ಲಾಂದಿ ಗ್ರಾಮಕ್ಕೆ ಭೇಟಿ ನೀಡಿದುದನ್ನು ಕುರಿತು ಕುವೆಂಪುರವರು "ಅವರ ವೇಷಭೂಷಣ, ರೀತಿಗಳು ಹಳ್ಳಿಗರನ್ನು ದಿಗ್‌ಭ್ರಮೆಗೊಳಿಸುವಂತಿದ್ದವು. ಕ್ರಾಪು, ಕನ್ನಡಕ, ಟೈ, ಅತ್ಯಂತ ಬೆಲೆ ಬಾಳುವ ಮಿರುಗು ಬಟ್ಟೆಯ ಕೋಟು, ಷರಾಯಿ, ಬೂಟ್ಸು, ಆಕ್ಸ್‌ಫರ್ಡ್ ಇಂಗ್ಲಿಷ್, ಎಲ್ಲವೂ ಆಕ್ಸ್‌ಫರ್ಡ್"[955] ಎಂದು ಉಲ್ಲೇಖಿಸಿದ್ದಾರೆ. ಯಂಗ್ ಇಂಡಿಯಾ ಪತ್ರಿಕೆಯು ಮೈಸೂರಿನ ಅಧಿಕಾರಿಗಳ ವರ್ಣನೆ ಮಾಡುತ್ತಾ "ನಖಕಂಠ ಪರ್ಯಂತವೂ ವಿದೇಶಿ ಉಡುಪನ್ನು ಧರಿಸಿರುವರೆಂಬುದೊಂದು ವಿಷಯ, ನಖಶಿಖವಲ್ಲ, ವಿದೇಶಿ ಉಡುಪೆನ್ನುವುದು ಕಂಠದವರೆಗೂ ಬಂದಿದೆ ತಲೆಯ ಮೇಲೆ ಹೊದೆಯುವುದು ವಿದೇಶಿ ಮಾಲಾದರೂ ಮೈಸೂರಿನ ರುಮಾಲು. ಅಷ್ಟೇ ನಮಗೆ ಉಳಿದಿರುವುದು"[956] ಎಂಬುದಾಗಿ ಮೈಸೂರಿನ ವೇಷಭೂಷಣಗಳಲ್ಲಿನ ಪಾಶ್ಚಿಮಾತ್ಯ ಪ್ರಭಾವದ ಬಗ್ಗೆ ಟೀಕೆಗಳು ಬರುತ್ತಿದ್ದವು. ಮದ್ರಾಸ್ ಪ್ರಾಂತ್ಯಗಳಲ್ಲಿ ಮೈಸೂರಿನ ದರ್ಬಾರು ಡ್ರೆಸ್ ಬಗ್ಗೆ ಟೀಕೆಗಳಿದ್ದವು. ಸಂಗೀತ ವಿದ್ವಾಂಸರಾದ ಕೆ. ವಾಸುದೇವಾಚಾರ್ಯರ ಗುರು ಪಟ್ಣಂ ಸುಬ್ರಹ್ಮಣ್ಯರವರು "ಮೈಸೂರು ಮೊದಲಿನಿಂದಲೂ ಕಲೆಯ ಬೀಡಾಗಿದೆ" ಎಂದು ಪ್ರಶಂಸಿಸುತ್ತಿದ್ದರು. ಒಮ್ಮೆ ಅವರು "ನಿಮ್ಮೂರು ಎಲ್ಲ ದೃಷ್ಟಿಯಿಂದಲೂ ಸರಿ ವಾಸು, ಒಂದು ಮಾತ್ರ ಭಯಂಕರ" ಎಂದರು ಗುರುಗಳು. ಬೆರಗಾದೆ ನಾನು "ಆ ಕರಿಯ ಅಂಗಿಯೊಳಗೆ ಮೈಯನ್ನು ಬಲವಂತವಾಗಿ ತುರುಕಿ, ಸೊಂಟಕ್ಕೆ ಬಿಗಿದು ಕಟ್ಟಿ, ತಲೆಯ ಮೇಲೆ ಕೊಡದ ಗಾತ್ರ ಪೇಟವನ್ನಿಟ್ಟು ಯಜ್ಞ ಪಶುವಿನಂತೆ ಹಿಡಿದುಕೊಂಡು ಹೋಗಿ ದೊರೆಗಳ ಮುಂದೆ ಕೂಡಿಸಿ 'ಹಾಡು' ಎನ್ನುತ್ತಾರಲ್ಲ; ಅದು ಅತಿ ಭಯಂಕರ ಅನುಭವ ವಾಸು! ಈಗಲೂ ಮೈ ಬೆವರುತ್ತೆ ಅದನ್ನು ಜ್ಞಾಪಿಸಿಕೊಂಡರೆ" ಎಂದು ನಕ್ಕರು[957]. ಹೀಗೆ ಮೈಸೂರು ರಾಜಾಸ್ಥಾನದ ಗಂಬೀರತೆ ಮತ್ತು ಭೂಷಣವನ್ನು ಹೆಚ್ಚಿಸಲು ಅಳವಡಿಸಿಕೊಂಡ ಪಾಶ್ಚಿಮಾತ್ಯ ಪ್ರಭಾವದ ವೇಷಭೂಷಣಗಳು ಇಲ್ಲಿನ ಸ್ಥಳೀಯ ಹವಾಗುಣಕ್ಕೆ ಹೊಂದಿಕೊಳ್ಳುವುದಿಲ್ಲ ಎಂಬುದನ್ನು ಅರಿಯದಾಗಿದ್ದರು. ಆದರೆ ರಾಷ್ಟ್ರೀಯತೆ ವಿದ್ಯಾವಂತರಲ್ಲಿ ತೀವ್ರಗೊಂಡು ರಾಜಪ್ರಭುತ್ವವನ್ನು ವಿರೋಧಿಸಲು ಅದು ನಿಯಮಗೊಳಿಸಿದ ವೇಷಭೂಷಣಗಳನ್ನು ತಿರಸ್ಕರಿಸುವ ಮೂಲಕ ವ್ಯಕ್ತಪಡಿಸುವಂತೆ ಮಾಡಿತು. ಪೇಟವನ್ನು ತೊರೆದು, ಕ್ರಾಪಿನಲ್ಲಿಯೇ ಕಾಲೇಜಿಗೆ ಹೋಗುವ ಕ್ರಾಂತಿಕಾರಕ ಧೈರ್ಯವನ್ನು ಕುವೆಂಪುರವರು ಆರಂಭಿಸಿದ್ದು ಇತರ ಅಧ್ಯಾಪಕರಿಗೆ ಮೇಲ್ಪಂಕ್ತಿಯಾಯಿತು[958]. ಹಾಗೆಯೇ ಪಾಠ ಹೇಳಲು

---

*956. ವಿಶ್ವಕರ್ನಾಟಕ., ದಿನಪತ್ರಿಕೆ, ದಿನಾಂಕ 5-6-1927, ಕಾಲಂ -2, ಪು. 2*

*957. ವಾಸುದೇವಾಚಾರ್ಯ ಕೆ., ನೆನಪುಗಳು, ಪು. 92-93*

*958. ಕುವೆಂಪು., ನೆನಪಿನ ದೋಣಿಯಲ್ಲಿ., ಪು. 650*

*959. ಮೂರ್ತಿರಾವ್ ಎ.ಎನ್., ಚಿತ್ರಗಳು ಪತ್ರಗಳು, ಪು. 43*

ಹೋಗುವಾಗ ಗೌನನ್ನು ಬಳಸುವುದನ್ನು ಬಿಟ್ಟರು[959].

ವೇಷಭೂಷಣಗಳು ಬದಲಾದ ಹಾಗೆ ತಲೆಯ ಕೂದಲನ್ನು ಕತ್ತರಿಸಿ ಕ್ರಾಪು ಕಟಿಂಗ್ ಮಾಡಿಸಿಕೊಳ್ಳುವುದು ಆಧುನಿಕ ಕೇಶಾಲಂಕಾರದ ಲಕ್ಷಣವಾಯಿತು. ಕ್ರೈಸ್ತ ಮಿಷನರಿಗಳ ಮಾಸ್ತರುಗಳು "ಬಿಟ್ಟಿದ್ದ ಕ್ರಾಪು! ಅವರು ಎಣ್ಣೆ ಹಾಕಿ ಬಾಚಿ ಬೈತಲೆ ತೆಗೆದರೆಂದರೆ, ಮುಂದಲೆ ಚೌರ ಮಾಡಿಸಿಕೊಂಡು ಹಿಂದಲೆ ಜುಟ್ಟು ಬಿಟ್ಟಿದ್ದ ನಮ್ಮ ತಲೆಗಳು ನಾಚಿ ಮೂಲೆ ಸೇರುವಂತಾಗುತ್ತಿತ್ತು. ಅವರ ಕ್ರಾಪನ್ನೇ ನೋಡಿ ನೋಡಿ ಕರುಬಿ ನಮ್ಮ ತಲೆಗಳನ್ನು ಏತಕ್ಕೆ ಹಾಗೆ ಚೌರ ಮಾಡಿಸಿಕೊಳ್ಳಬಾರದು ಎಂದು ಮತೀಯ ಕ್ರಾಂತಿಭಾವವೋ ಎಂಬಂತ, ಒಂದು ಭಯಂಕರ ಮನೋಭಾವ ಇಣುಕುತ್ತಿತ್ತು" ಎಂದು ಉಲ್ಲೇಖಿಸಿರುವ ಕುವೆಂಪುರವರ ಅಭಿಪ್ರಾಯಗಳು ಅಂದಿನ ಕಾಲದ ವಿದ್ಯಾವಂತರಲ್ಲಿ ಸಾಂಪ್ರದಾಯಿಕ ಜುಟ್ಟು ಬಿಡುವುದರಿಂದ ಮುಕ್ತಗೊಂಡು ಕ್ರಾಪುಕಟಿಂಗ್ ಮಾಡಿಸಿಕೊಳ್ಳುವ ಆಕಾಂಕ್ಷೆಯನ್ನು ಕಾಣಬಹುದು[960].

ಕ್ರಾಪ್‌ಕಟ್ ಮಾಡಿಸಿಕೊಳ್ಳುವುದು ನವನಾಗರಿಕತೆಯ ಅರ್ಥಾತ್ ಪಾಶ್ಚಿಮಾತೀಕರಣದ ಲಕ್ಷಣವೆಂದೇ ಆ ಕಾಲದಲ್ಲಿ ಭಾವಿಸಲಾಗಿತ್ತು ಎಂಬುದು ಕೆಳಗಿನ ಎಂ. ವಿ. ಸೀತಾರಾಮಯ್ಯನವರ ಈ ಉಲ್ಲೇಖದಿಂದ ಸ್ಪಷ್ಟಗೊಳ್ಳುತ್ತದೆ "ನವ ನಾಗರಿಕತೆಯ ನಾಗಾಲೋಟದ ಬೆನ್ನೇರಲು ಸಾಹಸ ಪಟ್ಟಿರುವುದೂ ನಮ್ಮ ಬೀದಿಯೇ; ಜುಟ್ಟು ಜನಿವಾರಗಳ ಹೆಚ್ಚಳದ ಕಾಲದಲ್ಲಿ ಮೊದಲು 'ಕ್ರಾಪ್‌ಕಟ್' ಮಾಡಿಸಿಕೊಂಡವರು ನಮ್ಮ ಬೀದಿಯ ಒಬ್ಬಿಬ್ಬರು ದಿಟ್ಟ ತರುಣರು; (ಇವರಲ್ಲಿ ನಾನೂ ಒಬ್ಬ)"[961] ಹೀಗೆ ಒಟ್ಟಾರೆ ನಾಲ್ವಡಿಯವರ ಕಾಲದಲ್ಲಿ ವೇಷಭೂಷಣಗಳಲ್ಲಿ ಪಾಶ್ಚಿಮಾತೀಕರಣಗೊಳ್ಳುವ ಮೂಲಕ ನವನಾಗರಿಕರಾಗಲು ಜನ ಮುಂದಾದರು. ಅದು 'ನಗರ ಸಂಸ್ಕೃತಿ'ಯ ಶೋಭೆಯ ಚಿಹ್ನೆಯಾಯಿತು.

ಮೈಸೂರು ಸಂಸ್ಥಾನದ ಮನರಂಜನಾ ಅಂಶವಾದ ಆಟೋಟಗಳಲ್ಲೂ ಹಲವಾರು ಹೊಸ ಅಂಶಗಳು ಸೇರ್ಪಡೆಗೊಂಡವು. ನಾಲ್ವಡಿಯವರಿಗೆ ಶಿಕ್ಷಣದ ಭಾಗವಾಗಿ ಅನೇಕ ಪಾಶ್ಚಿಮಾತ್ಯ ಮೂಲದ ಆಟೋಟಗಳನ್ನು ಕಲಿಸಲಾಯಿತು. ಕುದುರೆ ಸವಾರಿ, ಪೋಲೋ, ಕ್ರಿಕೆಟ್, ರಾಕೆಟ್ಸ್ ಟೆನ್ನಿಸ್, ಫುಟ್‌ಬಾಲ್, ರೌಂಡ್‌ರೇಸ್, ಬೈಸಿಕಲ್

---

*960. ಕುವೆಂಪು., ನೆನಪಿನ ದೋಣಿಯಲ್ಲಿ., ಪು. 22*
*961. ಸೀತಾರಾಮಯ್ಯ ಎಂ.ವಿ., ಜೀವನ ನಾಟಕ, ಪು. 2-4*
*962. ವೆಂಕಟರಾಮಯ್ಯ ಸಿ.ಕೆ., ಆಳಿದ ಮಹಾಸ್ವಾಮಿಯವರು, ಪು. 86-88*
*963. ಅದೇ., ಪು. 242-243*

ಸವಾರಿ ಮುಂತಾದ ಹೊರಾಂಗಣದ ಆಟಗಳ ಜೊತೆಗೆ ಪೇಪರ್‌ಚೆಸ್, ಜೋಕರ್ ಎಂಬ ಇಸ್ಪೀಟ್ ಆಟಗಳನ್ನು ಕಲಿಸಲಾಗಿತ್ತು[962]. ನಾಲ್ವಡಿಯವರು ಪೋಲೋ ಚೆಂಡಾಟದಲ್ಲಿ ಭಾರತದಲ್ಲೇ ಪ್ರಸಿದ್ಧರಾಗಿದ್ದರು. 1908ರಲ್ಲಿ ನಾಲ್ವಡಿಯವರ ಟೀಮ್ ಪ್ರಸಿದ್ಧ ಪೋಲೋ ಆಟಗಾರರನ್ನೆಲ್ಲಾ ಸೋಲಿಸಿ ಪಾರಿತೋಷಕ ಪಡೆದಿತ್ತು. 1912ರಲ್ಲಿ ಷಾರ್ಟ್‌ಹಿಟ್, ಲಾಂಗ್ ಹಿಟ್, ಡ್ರಿಬ್ಲ್ ಮುಂತಾದ ವಿಧಾನಗಳಲ್ಲಿ ನಾಲ್ವಡಿಯವರ ಟೀಮ್ ಪ್ರಸಿದ್ಧರನ್ನೆಲ್ಲ ಸೋಲಿಸಿ ಬಹುಮಾನ ಪಡೆದಿತ್ತು. ರಾಕೆಟ್ಸ್ ಚೆಂಡಾಟದಲ್ಲೂ ನಾಲ್ವಡಿಯವರು ಆಗಿನ ಪ್ರಸಿದ್ಧ ಆಟಗಾರರಾಗಿದ್ದ ಕರ್ನಲ್ ಜೋನ್ಸ್, ಕರ್ನಲ್ ಪಿ. ಹೆಚ್. ಬೆನ್ಸನ್ ಮುಂತಾದವರನ್ನು ಸೋಲಿಸಿದ್ದರು[963]. ಹೀಗೆ ಒಳಾಂಗಣ ಆಟವಾಗಿ ಬಂದ ಪಾಶ್ಚಿಮಾತ್ಯ ಹಿನ್ನೆಲೆಯ ಇಸ್ಪೀಟ್ ಆಟ ಇಂಗ್ಲಿಷ್ ಕಲಿತ ವಿದ್ಯಾವಂತರ ಮನರಂಜನೆಯ ಆಟವಾಯಿತು. ಸಮಾಜದ ಗಣ್ಯರು ಕಾಲಹರಣ ಮಾಡಲು ಇಸ್ಪೀಟ್ ಮತ್ತು ಮಧುಸೇವನೆಯಲ್ಲಿ ತೊಡಗಿ ಹಾಳಾಗುತ್ತಿದ್ದಾರೆ. ಅದರ ಬದಲು ಅಭ್ಯಾಸದತ್ತ ತೊಡಗಬಾರದೇ ಎಂಬ ಕೊರಗೂ ಕಾಣಿಸಿಕೊಂಡಿತ್ತು[964]. ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರಂತಹ ಶಿಸ್ತಿನ ಜೀವನಕ್ಕೆ ಹೆಸರಾದವರೂ ಸಹ ಇಸ್ಪೀಟ್ ಮೋಹಕ್ಕೆ ಒಳಗಾಗಿ ಹಲವಾರು ಸಲ ತರಗತಿಗಳಿಗೆ ತಡವಾಗಿ ಹೋಗುವಂತಾಯಿತು ಎಂದು ಹಲುಬಿದ್ದಾರೆ[965].

ಕೈಗಾರಿಕೀಕರಣದಿಂದ ಬೆಳವಣಿಗೆಗೊಂಡ ಪ್ರಮುಖ ನಗರಗಳಲ್ಲಿ ಅದರಲ್ಲೂ ಕಾರ್ಮಿಕ ಕೇಂದ್ರಿತ ಪಟ್ಟಣಗಳಾದ ಬೆಂಗಳೂರು, ಮೈಸೂರು, ಭದ್ರಾವತಿ, ಕೋಲಾರ ಚಿನ್ನದ ಗಣಿ ಮುಂತಾದವುಗಳಲ್ಲಿ ಕಾರ್ಮಿಕರ ವಸತಿ ನೆಲೆಗಳು ಕೊಳೆಗೇರಿಗಳಾಗಿದ್ದು ಕಾರ್ಮಿಕರು ಹೀನಾಯವಾದ ಬದುಕನ್ನು ನಡೆಸುವಂತಾಗಿತ್ತು. ಹಾಗಾಗಿ ಮೈಸೂರು ಸರ್ಕಾರದ ಕೃಷಿ ಕೇಂದ್ರಿತ ಅರ್ಥವ್ಯವಸ್ಥೆಯನ್ನು ಕೈಗಾರಿಕಾ ಕೇಂದ್ರಿತವನ್ನಾಗಿಸುವ ಯೋಜನೆಯನ್ನು ವಿರೋಧಿಸುವ ಜನರು ಹುಟ್ಟಿಕೊಂಡರು. ಮೈಸೂರಿನ ಕೃಷಿ ಆಧುನೀಕರಣದ ರೂವಾರಿಯಾದ ಕೋಲ್‌ಮನ್ 1925ರಲ್ಲಿ ಮೈಸೂರಿನ ಪ್ರಜೆಗಳು ಅರ್ಪಿಸಿದ ಭಿನ್ನವತ್ತಳೆ ಸ್ವೀಕರಿಸುತ್ತಾ "ಈ ದೇಶವು ಹಾಗೆಯೇ ಒಕ್ಕಲುತನದ ಮನೆಯಾಗಿಯೇ ಇರಲೆಂದು, ಇರಬೇಕೆಂದು ಹಾರೈಸುತ್ತೇನೆ. ಮೈಕಟ್ಟಿನ ಒಕ್ಕಲಿಗರನ್ನು ದೊಡ್ಡ ದೊಡ್ಡ ಪಟ್ಟಣಗಳಿಗೆಳೆದು, ದುರ್ನಾತದ ಪೋಕರಿಗೇರಿಗಳಲ್ಲಿ ಅವರನ್ನು ದನಗಳಂತೆ ದೂಡುವ 'ಕೈಗಾರಿಕೆ ಮೈಸೂರು'- ಅಬ್ಬ! ಆ ಯೋಚನೆಯೇ ಸಾಕು!"[966] ಎಂದು ಹೇಳಿದ್ದರು. ಹೀಗೆ ಪಾಶ್ಚಿಮಾತ್ಯ ಮೂಲದ ಆಧುನಿಕಾಂಶಗಳ ಬಗ್ಗೆ ಕೆಲ ಸ್ಥಳೀಯರು ವಿರೋಧವನ್ನು, ಬೆಂಬಲವನ್ನು ಹೊಂದಿದ್ದರು.

---

964. *ಗುಂಡಪ್ಪ ಡಿ.ವಿ., ಜ್ಞಾಪಕ ಚಿತ್ರಶಾಲೆ, ಸಂ. 1. ಪು. 50-51*
965. *ಮಾಸ್ತಿ ವೆಂಕಟೇಶ ಅಯ್ಯಂಗಾರ್, ಭಾವ. ಸಂ. 1, ಪು. 162-163*
966. *ವಿಶ್ವಕರ್ನಾಟಕ, ದಿನಪತ್ರಿಕೆ, ದಿನಾಂಕ 28-8-1927*

ಹೀಗೆ ಮೇಲ್ಕಂಡಂತೆ ಸಂಸ್ಕೃತಿಯ ಪ್ರಾಕಾರಗಳಾದ ಭಾಷೆ, ಸಾಹಿತ್ಯ, ನಾಟಕರಂಗಗಳಲ್ಲಿ ಆರಂಭದ ಹಂತದಲ್ಲಿ ಪಾಶ್ಚಿಮಾತ್ಯ ಪ್ರಭಾವ ತೀವ್ರಗೊಂಡು ದೇಶೀಯ ಪ್ರಾಕಾರಗಳಲ್ಲಿ ತೀವ್ರತರವಾದ ಪರಿವರ್ತನೆಗಳುಂಟಾದವು. ಆದರೆ ದೇಶೀಯ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಸಂಶೋಧನೆಗಳಾದಂತೆ ಹಾಗೂ ರಾಷ್ಟ್ರೀಯ ಮಟ್ಟದಲ್ಲಾದ ಸ್ವದೇಶಿ, ರಾಷ್ಟ್ರೀಯವಾದದ ಹಿನ್ನೆಲೆಯಲ್ಲಿ ದೇಶೀಯ ಸಂಸ್ಕೃತಿಯ ಪುನರುಜ್ಜೀವನ ಚಟುವಟಿಕೆಗಳು ದೇಶೀಯ ಭಾಷೆ, ಸಾಹಿತ್ಯಗಳಲ್ಲಿ ದೇಸಿತನವನ್ನು ಬೆಳೆಸಿಕೊಳ್ಳುವಂತೆ ಮಾಡಿದವು. ಈ ಚಟುವಟಿಕೆಗಳು ಸಮಾಜದಲ್ಲಿಯೇ ಕಾಣಿಸಿಕೊಂಡಂತಹವು. ಇವುಗಳಲ್ಲಿನ ಪರಿವರ್ತನಾ ಪ್ರಕ್ರಿಯೆಗಳಲ್ಲಿ ನಾಲ್ವಡಿಯವರ ಪಾತ್ರ ಅಪರೋಕ್ಷವಾಗಿತ್ತು. ಆದರೆ ಇನ್ನಿತರ ಸಾಂಸ್ಕೃತಿಕ ಪ್ರಾಕಾರಗಳಾದ ಸಂಗೀತ, ಚಿತ್ರಕಲೆ, ಕಲೆ ಮತ್ತು ವಾಸ್ತುಶಿಲ್ಪಗಳು ಆಸ್ಥಾನ ಕೇಂದ್ರಿತವಾಗಿ, ನಾಲ್ವಡಿಯವರ ನೇತೃತ್ವದಲ್ಲೇ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಲಕ್ಷಣಗಳನ್ನು ಸಮ್ಮಿಲನಗೊಳಿಸಿಕೊಂಡು ಪರಿವರ್ತನೆಗೆ ಒಳಗಾದವು.

## ಅಧ್ಯಾಯ - 7

# *ಉಪಸಂಹಾರ*

"ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್-ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜದ ಮೇಲೆ ಪಾಶ್ಚಿಮಾತ್ಯ ಪ್ರಭಾವ-ಒಂದು ಸಮಗ್ರ ಅಧ್ಯಯನ(1894-1940)"ಎಂಬ ನಮ್ಮ ಸಂಶೋಧನಾ ಶೀರ್ಷಿಕೆಗೆ ಸಂಬಂಧಿಸಿದಂತೆ ಹಿಂದಿನ ಆರು ಅಧ್ಯಾಯಗಳಲ್ಲಿ ನಡೆಸಿರುವ ಸಂಶೋಧನೆಯಿಂದ ಒಡಮೂಡಿರುವ ತೀರ್ಮಾನಗಳನ್ನು ಈ ಕೆಳಗಿನಂತೆ ಕ್ರೋಢೀಕರಿಸಬಹುದು.

ಮೊದಲನೆಯದಾಗಿ ಆಧುನಿಕ ಮೈಸೂರಿನ ಇತಿಹಾಸವೆಂದರೆ ಪಾಶ್ಚಿಮಾತ್ಯ ಜಗತ್ತಿನ ಸಂಪರ್ಕ ಅದರಲ್ಲೂ ಪ್ರಮುಖವಾಗಿ ಬ್ರಿಟಿಷ್ ವಸಾಹತು ಆಡಳಿತ ಮತ್ತು ವ್ಯವಸ್ಥೆಯ ನೇರ ಸಂಪರ್ಕದಿಂದ ಪ್ರಭಾವಿತವಾದ ಕಾಲ ಎಂಬ ಹಿನ್ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆ. ಮೈಸೂರು ಪ್ರದೇಶವು 18ನೇ ಶತಮಾನದಲ್ಲೇ ಫ್ರೆಂಚರ ಮೂಲಕ ಹೈದರಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲೇ ಪಾಶ್ಚಿಮಾತ್ಯ ಸಂಪರ್ಕವನ್ನು ಪಡೆಯಿತು. ಟಿಪ್ಪುವಿನ ಅವಸಾನದೊಂದಿಗೆ1799ರಿಂದ ಬ್ರಿಟಿಷರು ಮೈಸೂರಿನ ಮೇಲೆ ನೇರ ಹತೋಟಿ ಹೊಂದಿದರು. ಆನಂತರ ಮೂರನೇ ಕೃಷ್ಣರಾಜಒಡೆಯರ್, ಐದು ದಶಕಗಳ ಕಾಲದ ಕಮಿಷನರುಗಳ ಆಡಳಿತ ಮತ್ತು ಹತ್ತನೇ ಚಾಮರಾಜ ಒಡೆಯರ ಕಾಲಗಳಲ್ಲಿ ಪಾಶ್ಚಿಮಾತ್ಯ ಮೂಲದ ವೈಚಾರಿಕ, ಸಾಂಸ್ಕೃತಿಕ ಮತ್ತು ಆಡಳಿತಾತ್ಮಕ ಪ್ರಭಾವಗಳು ಮೈಸೂರಿನ ಸಮಾಜದ ಮೇಲೆ ಉಂಟಾದವು. ಆದರೆ ಸಾಮಾಜಿಕ ಪರಿವರ್ತನೆಯ ಹಿನ್ನೆಲೆಯಲ್ಲಿ ವಿವೇಚಿಸಿದಾಗ ಆ ಕಾಲವು 'ತಟಸ್ಥ' ಮನೋಭಾವನೆಯನ್ನು ಹೊಂದಿದ ಕಾಲವಾಗಿತ್ತು. ಆದರೆ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲ 'ತಟಸ್ಥ' ದೋರಣೆಯಿಂದ ದೂರ ಸರಿದು ಹಿಂದೆ ಆರಂಭವಾಗಿದ್ದ ಪರಿವರ್ತನಾ ಪ್ರಕ್ರಿಯೆಗಳಿಗೆ ಸ್ಪಷ್ಟವಾದ ಚಾಲನೆಯನ್ನು ಪಡೆಯಿತು ಎಂಬುದು ಸ್ಪಷ್ಟವಾದ ಅಂಶವಾಗಿದೆ.

ಎರಡನೆಯದಾಗಿ ಯಾವುದೇ ಸಮಾಜವು ಯಾವ ಕಾಲದಲ್ಲೂ ಸ್ಥಗಿತ ಸ್ಥಿತಿಯಲ್ಲಿರುವುದಿಲ್ಲ. ಪರಿವರ್ತನೆ ಜಗದ ನಿಯಮ ಎಂಬಂತೆ ಎಲ್ಲ ಕಾಲದ ಸಮಾಜಗಳಲ್ಲೂ ಪರಿವರ್ತನಾ ಪ್ರಕ್ರಿಯೆಗಳು ನಡೆಯುತ್ತಲೇ ಇರುತ್ತವೆ. "ಪರಿವರ್ತನೆ" ಎಂಬುದು ಯಾವುದೇ ಸಂಪ್ರದಾಯ ಸಮಾಜವನ್ನು ಅದರ ಸ್ಥಿತಿಯಲ್ಲಿ ಇರಲು ಬಿಡುವುದಿಲ್ಲ.

ಸಂಪ್ರದಾಯ ಹಾಗೂ ಆಧುನಿಕ ಸ್ಥಿತಿಗಳು ಒಂದೇ ಕಾಲದಲ್ಲಿ ಅಸ್ತಿತ್ವದಲ್ಲಿರುತ್ತವೆ ಎಂಬುದರ ಹಿನ್ನೆಲೆಯಲ್ಲಿ "ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜ" ಎಂಬ ಪರಿಕಲ್ಪನೆಯನ್ನು ರೂಪಿಸಿಕೊಂಡು ಅದು ನಮ್ಮ ಅಧ್ಯಯನ ಕಾಲಾವಧಿಯಲ್ಲಿ ಪಾಶ್ಚಿಮಾತ್ಯ ಪ್ರಭಾವವನ್ನು ಸ್ವೀಕರಿಸುವಲ್ಲಿ ಮತ್ತು ತಿರಸ್ಕರಿಸುವಲ್ಲಿ ಪ್ರಮುಖ ಪಾತ್ರವಹಿಸಿತು ಎಂಬುದಾಗಿದೆ.

ಮೂರನೆಯದಾಗಿ ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜವು ಪಾಶ್ಚಿಮಾತ್ಯ ಪ್ರಭಾವಗಳಿಂದ ಬಂದ ನವೀನ ಅಂಶಗಳನ್ನು ಅಳವಡಿಸಿಕೊಳ್ಳುವಂತೆ ಮಾಡುವ ಬದಲಾವಣೆಯ ನಿಯೋಗಿ, ಪ್ರೇರಕ ಶಕ್ತಿ ಅಂದಿನ ಆಳರಸರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ಎಂಬುದು. ನಾಲ್ವಡಿಯವರು ತಮ್ಮ ರಾಜ್ಯ ಹಾಗೂ ತಮ್ಮ ಅಧೀನದ ಪ್ರಜೆಗಳನ್ನು ಪ್ರಗತಿಯತ್ತ ಕೊಂಡೊಯ್ಯಬೇಕೆಂಬ ಕಾಳಜಿಯೇ ಪರಿವರ್ತನಾ ಪ್ರಕ್ರಿಯೆಯ ಪ್ರೇರಕಶಕ್ತಿಯಾಗುವಂತೆ ಮಾಡಿತು. ಪರಿವರ್ತನಾ ಪ್ರಕ್ರಿಯೆಯು ಯಾವ ಮೂಲದಿಂದ ಬಂದಿತೆಂಬುದೂ ಸಹ ಸಮಾಜದ ಸ್ವೀಕೃತಿಗೆ ಅಥವಾ ಪ್ರತಿರೋಧಕ್ಕೆ ಕಾರಣವಾಗುತ್ತದೆ. ಆ ಹಿನ್ನೆಲೆಯಲ್ಲಿ ನಾಡಿನ ಆಳರಸರಾದ ನಾಲ್ವಡಿಯವರು ಜನರಲ್ಲಿ ಗಳಿಸಿದ್ದ ಗೌರವ, ಅಭಿಮಾನಗಳೂ ಸಹ ಪ್ರತಿರೋಧದ ತೀವ್ರತೆಯನ್ನು ಕಡಿಮೆಗೊಳಿಸಲು ಹಾಗೂ ಪರಿವರ್ತನಾ ಪ್ರಕ್ರಿಯೆಯನ್ನು ತೀವ್ರಗೊಳಿಸಲು ಸಹಾಯಕವಾದವು. ನಾಲ್ವಡಿಯವರು ಸಾಂಪ್ರದಾಯಿಕ ಹಾಗೂ ಆಧುನಿಕ ಎರಡೂ ಸಂಸ್ಕೃತಿಗಳ ಸಮನ್ವಯತೆಯ ಸಂಕೇತವಾಗಿ 'ಯಥಾರಾಜ ತಥಾಪ್ರಜಾ' ಎಂಬ ಪ್ರಾಚೀನ ನಾಣ್ಣುಡಿಯಂತೆ ಪ್ರಜೆಗಳು ರಾಜನನ್ನು ಹಿಂಬಾಲಿಸುವಂತೆ ಮಾಡಿದರು.

ನಾಲ್ಕನೆಯದಾಗಿ ವ್ಯಕ್ತಿ ಸಮಷ್ಠಿಯಿಂದ ಬಲವನ್ನು ಪಡೆದುಕೊಳ್ಳುತ್ತಾನೆ. ಮತ್ತು ಸಮಷ್ಠಿಗೆ ತನ್ನದೇ ಆದ ಕಾಣಿಕೆಗಳನ್ನು ನೀಡುತ್ತಾನೆ ಎಂಬ ಹಿನ್ನೆಲೆಯಲ್ಲಿ ನಾಲ್ವಡಿಯವರ ಜೀವನ ಮತ್ತು ವ್ಯಕ್ತಿತ್ವದ ವಿಕಾಸ ಪ್ರಮುಖ ಪಾತ್ರ ವಹಿಸಿತ್ತೆಂಬುದು. ನಾಲ್ವಡಿ ಕೃಷ್ಣರಾಜ ಒಡೆಯರು ಬದುಕಿದ್ದ ಕಾಲ ಆಧುನಿಕ ಭಾರತದ ಇತಿಹಾಸದಲ್ಲಿ ನವೋದಯ ಮತ್ತು ಪ್ರಗತಿಶೀಲ ಪ್ರವೃತ್ತಿಯ ಕಾಲವಾಗಿತ್ತು. ಅಂದು ಸಮಾಜವು ಪರಿವರ್ತನೆ, ಪ್ರಗತಿಗಳನ್ನು ಎಲ್ಲ ಕ್ಷೇತ್ರಗಳಲ್ಲೂ ಬಯಸುತ್ತಿತ್ತು. ಸರ್ಕಾರಗಳು ಸಾರ್ವಜನಿಕ ಅಭಿಪ್ರಾಯಗಳನ್ನು ಪರಿಗಣಿಸಿ ಆಡಳಿತ ನಡೆಸುವುದು ಅವಶ್ಯಕವಾಗಿತ್ತು. ಅಂತಹ ಸಂದರ್ಭದಲ್ಲಿ ನಾಲ್ವಡಿಯವರು ಸಂಪ್ರದಾಯವಾದಿ ಆಗಿದ್ದಿದ್ದರೆ ಪರಿವರ್ತನೆ ಬಯಸುವ ಸಮೂಹದಿಂದ ವಿರೋಧ ಎದುರಿಸಬೇಕಿತ್ತು. ಹಾಗೆಯೇ ವ್ಯವಸ್ಥೆಯನ್ನು ಸಂಪೂರ್ಣವಾಗಿ ಬದಲಾಯಿಸಬೇಕೆನ್ನುವ ಕ್ರಾಂತಿಕಾರಕ ಆಧುನಿಕ

ಪ್ರವೃತ್ತಿಯವರಾಗಿದ್ದರೆ ಸಂಪ್ರದಾಯವಾದಿ ಸಮೂಹದ ವಿರೋಧ ಎದುರಿಸಬೇಕಿತ್ತು. ಹೀಗೆ ಸಂಪ್ರದಾಯತೆ ಹಾಗೂ ಆಧುನಿಕತೆ ಎರಡೂ ಗುಂಪುಗಳನ್ನು ಜೊತೆಯಲ್ಲಿ ಕೊಂಡೊಯ್ಯಲು ಅವೆರಡರ ಸಮನ್ವಯ ನೀತಿಯನ್ನು ಅನುಸರಿಸುವುದು ಅವಶ್ಯವಾಗಿತ್ತು. ನಾಲ್ವಡಿಯವರಲ್ಲಿ ಇಂತಹ ಸಮನ್ವಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಅವರಿಗೆ ದೊರೆತ ಸಾಂಪ್ರದಾಯಿಕ ಹಾಗೂ ಆಧುನಿಕ ಶಿಕ್ಷಣ, ವ್ಯಾಪಕವಾದ ಪ್ರವಾಸಗಳು, ವಿವಿಧ ಜನವರ್ಗಗಳೊಂದಿಗಿನ ಒಡನಾಟದ ಪ್ರಭಾವ, ಪರಂಪರೆಯಿಂದ ಗಳಿಸಿದ ಸಂಸ್ಕೃತಿ ಮತ್ತು ಜೀವನಾನುಭವಗಳು ಪ್ರಮುಖ ಪಾತ್ರವಹಿಸಿದ್ದವು. ನಾಲ್ವಡಿಯವರ ಈ ಸಮನ್ವಯತೆಯ ವ್ಯಕ್ತಿತ್ವವು ಕೆಲವೊಮ್ಮೆ ಅವರಲ್ಲಿನ ದ್ವಂದ್ವತೆಯಾಗಿಯೂ ಕಾಣಿಸಿಕೊಳ್ಳುತ್ತದೆ.

ಉದಾಹರಣೆಗೆ ನಾಲ್ವಡಿಯವರಿಗೆ ಪೂರ್ಣಸೂರ್ಯಗ್ರಹಣವನ್ನು ಪ್ರಾತ್ಯಕ್ಷಿಕವಾಗಿ ವೀಕ್ಷಿಸಲು ಪೂನಾದ ಮಸೂರ್‌ಗೆ ಪ್ರವಾಸ ಕರೆದುಕೊಂಡು ಹೋಗಲಾಯಿತು. ಅಲ್ಲಿ ಟೆಲಿಸ್ಕೋಪ್ ಮೂಲಕ ಸೂರ್ಯಗ್ರಹಣವನ್ನುತೋರಿಸಿ ಗ್ರಹಣವನ್ನುಕುರಿತಂತೆ ಗ್ರಹ, ಉಪಗ್ರಹ ಹಾಗೂ ನಕ್ಷತ್ರಗಳ ಚಲನೆ ಮತ್ತು ಸ್ಥಾನಗಳೇ ಕಾರಣವೆಂಬ ಆಧುನಿಕ ವಿಜ್ಞಾನವನ್ನು ತಿಳಿಸಲಾಯಿತು. ಹೀಗೆ ಟ್ಯೂಟರ್ ಫ್ರೇಜರ್‌ರವರು ನಾಲ್ವಡಿಯವರಲ್ಲಿ ಆಧುನಿಕ, ವೈಚಾರಿಕ ಅಂಶಗಳನ್ನು ಪ್ರಯೋಗಿಕ ಅಧ್ಯಯನಗಳ ಮೂಲಕ ಬೆಳೆಸಲು ಪ್ರಯತ್ನಿಸಿದರು. ಆದರೆ ನಾಲ್ವಡಿಯವರು ಆಧುನಿಕ ವಿಚಾರಧಾರೆಗಳನ್ನು ತಿಳಿದುಕೊಳ್ಳುತ್ತಿದ್ದರಾದರೂ ಅದಕ್ಕೆ ಸಂಬಂದಿಸಿದ ಸಾಂಪ್ರದಾಯಿಕ ಆಚರಣೆಗಳನ್ನು ಬಿಡುತ್ತಿರಲಿಲ್ಲ. ಗ್ರಹಣಗಳಾದ ಸಂದರ್ಭದಲ್ಲಿ ನಡೆಸಬೇಕಾದ ಸಾಂಪ್ರದಾಯಿಕ ಆಚರಣೆಗಳನ್ನು ಚಾಚೂ ತಪ್ಪದೆ ನಡೆಸುತ್ತಿದ್ದರು. ಈ ಅಂಶವು ಒಬ್ಬ ವ್ಯಕ್ತಿಯು ಆಧುನಿಕತೆಗೆ ಅಥವಾ ಪಾಶ್ಚಿಮಾತ್ಯ ಸಂಸ್ಕೃತಿಗೆ ಎಷ್ಟೇ ತೆರೆದುಕೊಂಡರೂ ತನ್ನ ಪರಂಪರೆಯಿಂದ ಗಳಿಸಿದ ಸಂಪ್ರದಾಯನ್ನು ಬಿಡಲಾರ ಎಂಬುದಕ್ಕೆ ಅತ್ಯುತ್ತಮ ಉದಾಹರಣೆ, ಅದಕ್ಕೆ ಕಾರಣ ಸಂಪ್ರದಾಯವು ಜನ ರೂಢಿಯಲ್ಲಿರುವ ವಿಶಿಷ್ಟವಾದ ಆಚರಣೆಯಾಗಿದ್ದು ಅದರ ಬೇರುಗಳು ಜನಾಂಗದ, ವ್ಯಕ್ತಿಯ ರಕ್ತರಕ್ತದಲ್ಲೂ ಸೇರಿ ಹೋಗಿರುತ್ತವೆ ಎಂಬುದೇ ಆಗಿದೆ. ನಾಲ್ವಡಿಯವರ ಇಡೀ ಶಿಕ್ಷಣದ ಉಸ್ತುವಾರಿ ಹೊತ್ತಿದ್ದ ಟ್ಯೂಟರ್ ಎಸ್.ಎಂ. ಫ್ರೇಜರ್‌ರವರು ತಮ್ಮ ಅಂತಿಮ ವರದಿಯಲ್ಲಿ ನಾಲ್ವಡಿಯವರ ವ್ಯಕ್ತಿತ್ವ ಎಂತಹದಾಗಿತ್ತು ಎಂಬುದನ್ನು ಹೀಗೆ ಹೇಳಿದ್ದಾರೆ "ಇಡೀ ಕುಟುಂಬದಲ್ಲಿ ಧಾರ್ಮಿಕವಾಗಿ ಅತ್ಯಂತ ಸಂಪ್ರದಾಯವಾದಿಗಳಾಗಿ ಬೆಳೆದಿರುವ ನಾಲ್ವಡಿಯವರು ಜಾತಿ ವ್ಯವಸ್ಥೆಯನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದವರಾಗಿದ್ದರು........... ಅಪರೂಪವಾದ ಇಂತಹ ಸಂಪ್ರದಾಯದ ವ್ಯಕ್ತಿತ್ವವು ಅವರಲ್ಲಿದ್ದು ಆಧುನಿಕ ಶಿಕ್ಷಣವನ್ನು ಉಳಿಸಿಕೊಳ್ಳುವಂತಹ

ಮತ್ತು ಸಂಪ್ರದಾಯವನ್ನು (ಹಳೆಯದನ್ನು) ರಕ್ಷಿಸುವಂತಹ ಬಹು ಮುಖ್ಯವಾದ ಗುಣಗಳನ್ನು ಅವರು ಹೊಂದಿದ್ದರು."[967]. ಈ ಹೇಳಿಕೆಯು ನಾಲ್ವಡಿಯವರ ಜೀವನ ಮತ್ತು ವ್ಯಕ್ತಿತ್ವವು ಸಾಂಪ್ರದಾಯಿಕ ಹಾಗೂ ಆಧುನಿಕಕತೆಗಳ ಸಮನ್ವಯ ತೆಯಿಂದ ರೂಪುಗೊಂಡದ್ದಾಗಿತ್ತು ಎಂಬ ನಮ್ಮ ಪರಿಕಲ್ಪನೆಗೆ ಉತ್ತಮ ಉದಾಹರಣೆಯಾಗಿದೆ.

ಐದನೆಯದಾಗಿ ನಾಲ್ವಡಿಯವರ ಆಧುನಿಕ ಚಿಂತನೆಗಳು ಪಾಶ್ಚಿಮಾತ್ಯ ಮಾದರಿಯ ಶಿಕ್ಷಣದ ಪ್ರಭಾವದಿಂದ ರೂಪುಗೊಂಡವಾಗಿದ್ದು ಅವು ಪಾಶ್ಚಿಮಾತ್ಯ ರೀತಿಯ ಲೌಕಿಕ ಬೆಳವಣಿಗೆಯನ್ನು ತಮ್ಮ ರಾಜ್ಯದಲ್ಲೂ ಕಾಣಬೇಕೆಂಬ ಇಚ್ಛೆಯನ್ನು ಹೊಂದಿದ್ದವಾಗಿದ್ದವು. ಆ ದಿಸೆಯಲ್ಲಿ ಪಾಶ್ಚಿಮಾತ್ಯ ಮೂಲದ ಆಧುನಿಕಾಂಶಗಳನ್ನು ಸಂಸ್ಥಾನದಾದ್ಯಂತ ಜಾರಿಗೊಳಿಸಿ ಪಾಶ್ಚಿಮಾತ್ಯ ದೇಶಗಳ ಮಟ್ಟಕ್ಕೆ ತಮ್ಮ ಸಂಸ್ಥಾನವನ್ನು ಬೆಳೆಸಬೇಕೆಂಬ ಮಹತ್ವಾಕಾಂಕ್ಷೆಯನ್ನು ಹೊಂದಿದ್ದರು. ಪ್ರಮುಖವಾಗಿ ಆರ್ಥಿಕ ಕ್ಷೇತ್ರವನ್ನು ದೇಶೀಯ ಆರ್ಥಿಕ ವ್ಯವಸ್ಥೆಗೆ ಹೋಲಿಸಿ ಪಾಶ್ಚಿಮಾತ್ಯ ಆರ್ಥಿಕ ವ್ಯವಸ್ಥೆಯು ಆಧುನಿಕವಾದ, ಬೆಳವಣಿಗೆಗೊಂಡ ವ್ಯವಸ್ಥೆಯಾಗಿದ್ದು ಅಂತಹ ವ್ಯವಸ್ಥೆಯನ್ನು ತಾವೂ ಮುಟ್ಟಬೇಕೆಂಬ ಇಚ್ಛಾಶಕ್ತಿ ಹೊಂದಿದ್ದರು. ಪಾಶ್ಚಿಮಾತ್ಯ ದೇಶಗಳಲ್ಲಿನ 'ಸಮಗ್ರ ಅಭಿವೃದ್ಧಿ' ಸಾಧಿಸುವುದೆಂದರೆ ಆಧುನಿಕತೆಯನ್ನು ಸಾಧಿಸಿದಂತೆ ಎಂಬ ಹಿನ್ನೆಲೆಯಲ್ಲಿ ನಾಲ್ವಡಿಯವರು ಕೃಷಿ, ಕೈಗಾರಿಕೆ, ಹಣಕಾಸು ಸಂಸ್ಥೆಗಳು, ಸಾರಿಗೆ ಸಂಪರ್ಕ ವ್ಯವಸ್ಥೆ, ವ್ಯಾಪಾರ ವಾಣಿಜ್ಯ ಮುಂತಾದ ಆರ್ಥಿಕ ಅಂಶಗಳಲ್ಲಿ ಆಧುನಿಕತೆಯನ್ನು ತಂದರು. ನಾಲ್ವಡಿಯವರ ನೇತೃತ್ವದ ಮೈಸೂರು ಸರ್ಕಾರ ಕೈಗೊಂಡ ಕೃಷಿ ಅಭಿವೃದ್ಧಿ ಮತ್ತು ಆಧುನಿಕ ಕ್ರಮಗಳು ಅದಕ್ಕೆ ಮಾದರಿ ರಾಜ್ಯ (model state) ಎಂಬ ಹೆಗ್ಗಳಿಕೆಯನ್ನು ತಂದುಕೊಟ್ಟವು. ದಿ ಮದ್ರಾಸ್ ಮೇಲೆ ಪತ್ರಿಕೆ 'ಅಗ್ರಿಕಲ್ಚರಲ್ ರಿಸರ್ಚ್ ಇನ್ ಮೈಸೂರ್' [968] ಎಂಬ ಲೇಖನ ಹಾಗೂ ದಿ ಟೈಮ್ಸ್ ಪತ್ರಿಕೆಯು 'ಮಾಡೆಲ್ ಫಾರ್ಮ್ಸ್ ಇನ್ ಎನ್ ಇಂಡಿಯನ್ ಫ್ಯೂಡೇಟರಿ ಸ್ಟೇಟ್'[969] ಎಂಬ ಶೀರ್ಷಿಕೆಗಳಲ್ಲಿ ಇಂಗ್ಲೆಂಡ್‌ನ ಪ್ರಾಯೋಗಿಕ ಕೃಷಿಕರ ಒಲವು ಮತ್ತು ಆಸಕ್ತಿಗಳನ್ನು ಮೈಸೂರಿನ ಕೃಷಿ ಕ್ಷೇತ್ರಕ್ಕೆ ಅಳವಡಿಸಲು ಪ್ರಯತ್ನಿಸುತ್ತಿದ್ದ ಮೈಸೂರಿನ ರಾಜ್ಯವನ್ನು ಮಾದರಿ ರಾಜ್ಯ ಬಿರುದು ಹೊಂದಲು ಅರ್ಹರು ಎಂದು ಬರೆದವು. ಹೀಗೆ ನಾಲ್ವಡಿಯವರು ಆರ್ಥಿಕ ಕ್ಷೇತ್ರಗಳಲ್ಲಿ ಆಧುನಿಕತೆಯನ್ನು ಅಳವಡಿಸಲು ಪ್ರಯತ್ನಿಸಿದ್ದು ಅವರಿಗೆ ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಗತಿಪರ ರಾಜನೆಂಬ ಗೌರವ ದೊರಕಿಸಿತು.

---

967. ***ಫೈಲ್ ನಂ. ಆರ್/2 (31/299) ಕಾನ್ಫಿಡೆನ್ಷಿಯಲ್ ಸೀರಿಯಲ್.***, ನಂ.1 ಆಫ್ ಫೈಲ್ ನಂ. 26ಆಫ್ 1902.ಫೈನಲ್ ರಿಪೋರ್ಟ್ ಆಫ್ ಮಿ. ಫ್ರೇಜರ್ ಆನ್ ದಿ ಮಹಾರಾಜಾಸ್ ಎಜುಕೇಷನ್, ಐ.ಓ.ಆರ್. ಲಂಡನ್,
968. ***ದಿ ಮದ್ರಾಸ್ ಮೇಲ್,*** ದಿನಾಂಕ 3-3-1903, ಪ್ರೆಸ್‌ಕಟಿಂಗ್ಸ್ : 1(ಎ), ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಮೈಸೂರು, ಪು. 38
969. ***ದಿ ಟೈಮ್ಸ್,*** ದಿನ ಪತ್ರಿಕೆ, ದಿನಾಂಕ : 19-8-1904, ಪೇಪರ್ ಕಟಿಂಗ್ಸ್, ಪು. 2.

ಆರನೆಯದಾಗಿ ನಾಲ್ವಡಿಯವರು ದೇಶದ ಸಂಪತ್ತನ್ನು ವೃದ್ಧಿಸುವಲ್ಲಿ ಬೃಹತ್ ಕೈಗಾರಿಕೆಗಳ ಕೊಡುಗೆ ಅಪಾರವಾದುದು ಮತ್ತು ಬೃಹತ್ ಕೈಗಾರಿಕೆಗಳು ಪಾಶ್ಚಿಮಾತ್ಯ ನಾಗರಿಕತೆಯ ಹೆಗ್ಗುರುತುಗಳೆಂದು ಅಭಿಪ್ರಾಯಪಟ್ಟಿದ್ದರು ಹಾಗೂ ಕೈಗಾರಿಕೀಕರಣವನ್ನು ಪ್ರೋತ್ಸಾಹಿಸಿದ್ದರು. ಹಾಗೆಯೇ ಕೈಗಾರಿಕೆಗಳನ್ನು ಹೆಚ್ಚಿಸುವ ಮೂಲಕ ಜೀವನಕ್ಕಾಗಿ ಭೂಮಿಯನ್ನಾಶ್ರಯಿಸುವವರ ಸಂಖ್ಯೆಯನ್ನು ತಗ್ಗಿಸಬೇಕೆಂದು ಹೇಳಿದ್ದರು. ಆ ಮೂಲಕ ಕೃಷಿಯ ಮೇಲಿನ ಅಧಿಕ ಒತ್ತಡವನ್ನು ಕೈಗಾರಿಕಾ ವಲಯದತ್ತ ತಿರುಗಿಸಿ ನಿರುದ್ಯೋಗ ನಿವಾರಣೆ ಮಾಡಬಹುದೆಂಬ ಅವರ ಚಿಂತನೆಗಳು ಕೃಷಿ ಹಾಗೂ ಕೈಗಾರಿಕೆಗಳನ್ನು ಸಮನಾಗಿ ಬೆಳೆಸುವ ಉದ್ದೇಶದಿಂದ ಕೂಡಿದ್ದವೆಂಬುದಾಗಿದೆ. ಆ ಹಿನ್ನೆಲೆಯಲ್ಲೂ ನಾಲ್ವಡಿ ಯವರ ಚಿಂತನೆ ದೇಶೀಯ ಕೃಷಿ, ಪಾಶ್ಚಿಮಾತ್ಯ ಮೂಲದ ಕೈಗಾರಿಕೆ ಎರಡನ್ನು ಸಮನ್ವಯಗೊಳಿಸುವುದೇ ಆಗಿತ್ತು ಎಂದೇಳಬಹುದು.

ಏಳನೆಯದಾಗಿ ನಾಲ್ವಡಿಯವರು ಬೃಹತ್ ಕೈಗಾರಿಕೆಗಳ ಸ್ಥಾಪನೆಯನ್ನು ಪ್ರತಿಪಾದಿಸಿದರೂ ಸಹ ದೇಶೀಯ ಗೃಹ ಕೈಗಾರಿಕೆಗಳು, ಉತ್ಪಾದನೋದ್ಯಮಗಳು ಮತ್ತು ಕುಶಲಕಲೆಗಳಲ್ಲಿ ಆಧುನಿಕವಾದ ತಾಂತ್ರಿಕ ಮತ್ತು ವೈಜ್ಞಾನಿಕ ಅಂಶಗಳನ್ನು ಅಳವಡಿಸಿ ಪಾಶ್ಚಿಮಾತ್ಯ ಕೈಗಾರಿಕಾ ದೇಶಗಳ ಪೈಪೋಟಿಯನ್ನೆದುರಿಸಿ ನಿಲ್ಲುವಂತಾಗಲು ಅನೇಕ ಕ್ರಮಗ ಳನ್ನು ಕೈಗೊಂಡರು. ಆ ಮೂಲಕ ರಾಷ್ಟ್ರೀಯ ಮಟ್ಟದಲ್ಲಿ ನಡೆಯುತ್ತಿದ್ದ ಸ್ವದೇಶಿ ಆಂದೋಲನಕ್ಕೆ ಬೆಂಬಲ ನೀಡುವಂತೆ ಮೈಸೂರು ಸಂಸ್ಥಾನದ ಬದನವಾಳು ಗ್ರಾಮದಲ್ಲಿ ಖಾದಿ ಗ್ರಾಮೋದ್ಯೋಗ ಕೇಂದ್ರವನ್ನು ಸ್ಥಾಪಿಸಿದ್ದಲ್ಲದೆ ಖಾದಿ ಪ್ರಚಾರಕ್ಕೂ ಪ್ರೋತ್ಸಾಹ ನೀಡಲಾಯಿತು. ಈ ನಿಲುವು ಸಂಸ್ಥಾನದೊಳಗೆ ರಾಷ್ಟ್ರೀಯ ಹೋರಾಟದ ತೀವ್ರತೆಯನ್ನು ತಡೆಗಟ್ಟಿತು ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಗಾಂಧೀಜಿಯಂತಹ ರಾಷ್ಟ್ರನಾಯಕರೇ ಮೈಸೂರು ರಾಜ್ಯವನ್ನು 'ರಾಮ ರಾಜ್ಯ' ವೆಂದು ಕರೆಯುವಂತಾಯಿತು.

ಎಂಟನೆಯದಾಗಿ ಒಂದು ಸಮಾಜವು ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಗೆ ಸಕಾರಾತ್ಮಕವಾಗಿ ಅಥವಾ ನಕಾರಾತ್ಮಕವಾಗಿ ಸ್ಪಂದಿಸುವಂತೆ ಮಾಡುವ ನಿರ್ಧಾರಕ ಶಕ್ತಿಯಾದ "ಮನೋಪ್ರವೃತ್ತಿಯನ್ನು" ನಾಲ್ವಡಿಯವರು ಶಿಕ್ಷಣ, ಶಾಸನಗಳೆಂಬ ಎರಡು ಮಾಧ್ಯಮಗಳ ಮೂಲಕ ಹಾಗೂ ತಮ್ಮ ವರ್ಚಸ್ವಿ ಭಾಷಣಗಳ ಮೂಲಕ ಮಾರ್ಪಡಿಸಲು ಪ್ರಯತ್ನಿಸಿದರೆಂಬುದು ಈ ಮನೋಪ್ರವೃತ್ತಿಯು ಒಂದು ನಿರ್ದಿಷ್ಟ ಸಮಾಜದ ಸಂಸ್ಕೃತಿಯಲ್ಲಿನ ರಾಜಕೀಯ, ಸಮಾ ಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ ಮುಂತಾದ ಅಂಶಗಳಿಂದ ರೂಪುಗೊಂಡಿರುವುದರಿಂದ ಆ ಕ್ಷೇತ್ರಗಳಲ್ಲಿ ಆಧುನಿ

ಕತೆ ತರುವ ಮೂಲಕ ಇಡೀ ಸಮಾಜದ ಜನತೆಯ ಮನೋಪ್ರವೃತ್ತಿಯನ್ನು ಪರಿವರ್ತಿಸುವ ಮೂಲಕ ಸಾಮಾಜಿಕ ಪರಿವರ್ತನೆಗೆ ಚಾಲನೆ ನೀಡಿದರೆಂದು ಹೇಳಬಹುದು.

ಒಂಭತ್ತನೆಯದಾಗಿ ನಾಲ್ವಡಿಯವರು ಶಿಕ್ಷಣವನ್ನು ಸಾಮಾಜಿಕ ಪರಿವರ್ತನೆಯನ್ನು ತರುವ ಪ್ರಭಾವಶಾಲಿ ಮಾಧ್ಯಮವನ್ನಾಗಿ ಬೆಳೆಸಿಕೊಂಡರೆಂಬುದು. ಸಮಾಜವು ಬದಲಾವಣೆಯನ್ನು ಮತ್ತು ಬೆಳವಣಿಗೆಯನ್ನು ಅರಸುತ್ತಾ ಸಾಗುವಂತೆ ಮಾಡುವಲ್ಲಿ ಮತ್ತು ಬದಲಾವಣೆಗಳನ್ನು ಒಪ್ಪಿ ಅಳವಡಿಸಿಕೊಳ್ಳುವಂತೆ ಮಾಡುವಲ್ಲಿ ಶಿಕ್ಷಣ ಪ್ರಮುಖ ಪಾತ್ರ ವಹಿಸುತ್ತದೆ. ಶಿಕ್ಷಣದ ಪ್ರಭಾವದಿಂದ ಆಗುವ ಸಾಮಾಜಿಕ ಪರಿವರ್ತನೆಯು ನಿಶ್ಯಬ್ಧವಾದ ಕ್ರಾಂತಿ. ಈ ಪ್ರಕ್ರಿಯೆಯಲ್ಲಿ ಯಾವುದೇ ಒತ್ತಡ ಅಥವಾ ಬಲವಂತವಿರುವುದಿಲ್ಲ. ಅದಕ್ಕೆ ಬದಲು ಸ್ವಯಂಪ್ರೇರಣೆ ಪ್ರಮುಖವಾಗಿರುತ್ತದೆ. ಈ ಸ್ವಯಂ ಪ್ರೇರಣಾ ಮನೋಭಾವನೆಯನ್ನು ರೂಪಿಸುವ ಶಕ್ತಿಯೇ ಶಿಕ್ಷಣ. ಇಂತಹ ಶಿಕ್ಷಣವನ್ನು ಸಾರ್ವತ್ರಿಕಗೊಳಿಸಲು ನಾಲ್ವಡಿಯವರು ಸರ್ಕಾರದ ಮೂಲಕ ಹಲವಾರು ಯೋಜನೆಗಳನ್ನು, ಶಾಸನಗಳನ್ನು ಜಾರಿಗೊಳಿಸಿದರು. ಪ್ರತ್ಯೇಕ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವ ಮೂಲಕ ಬೌದ್ಧಿಕ ವರ್ಗದ ಆಮದನ್ನು ತಪ್ಪಿಸಿದರು ಹಾಗೂ ಸ್ಥಳೀಯವಾದ ಹೊಸ ಬೌದ್ಧಿಕ ವರ್ಗ ರೂಪುಗೊಂಡು ಸಮಾಜ ಸುಧಾರಣೆ, ಬೆಳವಣಿಗೆ ಪ್ರಕ್ರಿಯೆಗಳಲ್ಲಿ ಪಾಲ್ಗೊಳ್ಳುವಂತೆ ಮಾಡಿದರು.

ಹತ್ತನೆಯದಾಗಿ ಸಾಮಾಜಿಕವಾಗಿ ಹಾಗೂ ಪ್ರಾದೇಶಿಕವಾಗಿ ಅಸಮರ್ಪಕವಾಗಿ ಹಂಚಲ್ಪಟ್ಟಿದ್ದ ಆಧುನಿಕ ಶಿಕ್ಷಣ ಹಾಗೂ ಅದರ ಫಲವಾದ ಸರ್ಕಾರಿ ಹುದ್ದೆಗಳನ್ನು ವಂಚಿತ ವರ್ಗಕ್ಕೂ ಹಂಚುವ ಮೂಲಕ ಸಾಮಾಜಿಕ ನ್ಯಾಯ ಒದಗಿಸಿ ಸಮಾನತೆಯಾಧರಿತ ಕಲ್ಯಾಣ ರಾಜ್ಯವನ್ನು ಸ್ಥಾಪಿಸಲು ಮುಂದಾದರೆಂಬುದು. ಪ್ರಾಚೀನ ಕಾಲದಿಂದ ಶಿಕ್ಷಣದಿಂದ ವಂಚಿತವಾಗಿದ್ದ ಬಹುಸಂಖ್ಯಾತ ಬ್ರಾಹ್ಮಣೇತರ ವರ್ಗವು ಆಧುನಿಕ ಶಿಕ್ಷಣ ಮತ್ತು ಸರ್ಕಾರಿ ಹುದ್ದೆಗಳಿಗಾಗಿ ಬೇಡಿಕೆ ಸಲ್ಲಿಸಿದಾಗ ಪರಿಶೀಲಿಸಿದ ನಾಲ್ವಡಿಯವರು "ಪ್ರಗತಿಯಲ್ಲಿ ಹಿಂದೆ ಬಿದ್ದಿರುವ ಎಲ್ಲಾ ಜಾತಿ ವರ್ಗಗಳನ್ನು ಈ ಪ್ರಗತಿಯ ಓಟದಲ್ಲಿ ಉತ್ತೇಜನ ನೀಡುವುದನ್ನು ಮುಂದಿನ ದಿನಗಳಲ್ಲಿ ಹಿಂದೆಂದಿಗಿಂತಲೂ ಹೆಚ್ಚಾಗಿ ನೀಡುವ ನೀತಿಯನ್ನು ಜಾರಿಗೊಳಿಸುತ್ತೇವೆ"[970] ಎಂದು ಘೋಷಿಸುವ ಮೂಲಕ ಸಾಮಾಜಿಕ ನ್ಯಾಯದ ಮಹತ್ವವನ್ನು ಎತ್ತಿಸಾರಿದರು. ಶಿಕ್ಷಣದಿಂದ ವಂಚಿತವಾಗಿದ್ದ ಪಂಚಮರು ಮತ್ತು ಸ್ತ್ರೀಯರಿಗೂ ಶಿಕ್ಷಣವನ್ನು ನೀಡುವ ಮೂಲಕ ಶೈಕ್ಷಣಿಕ ಅಸಮತೋಲನವನ್ನು ಸರಿಪಡಿಸಲು ಹಾಗೂ ಅವರನ್ನು ಮುಖ್ಯ ವಾಹಿನಿಗೆ ತರಲು ಪ್ರಯತ್ನಿಸಿದರು. ಪ್ರತಿ ಗ್ರಾಮ

---

970 ***ಸ್ಪೀಚಸ್ ಬೈ ಹಿಸ್ ಹೈನೆಸ್***, ಪೂರ್ವೋಕ್ತ, ಪು. 153-155

ದಲ್ಲೂ ಶಾಲೆ, ಗ್ರಾಮೀಣ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮತ್ತು ಫೀ ರಿಯಾಯ್ತಿ ಮುಂತಾದ ಸೌಲಭ್ಯಗಳನ್ನು ಒದಗಿಸುವ ಮೂಲಕ ಪ್ರಾದೇಶಿಕ ಅಸಮಾನತೆಯನ್ನು ಸರಿಪಡಿಸಲು ಪ್ರಯತ್ನಿಸಿದರು.

ಹನ್ನೊಂದನೆಯದಾಗಿ ನಾಲ್ವಡಿಯವರು ಶಾಸನಗಳನ್ನು ಯಥಾಸ್ಥಿತಿ ಮುಂದುವರಿಸಿಕೊಂಡು ಹೋಗುವ ಉದ್ದೇಶದ ಜೊತೆಗೆ ಸಾಮಾಜಿಕ ಬೆಳವಣಿಗೆ, ಬೆಳವಣಿಗೆಯಲ್ಲಾಗುವ ಏರುಪೇರುಗಳನ್ನು ಸರಿಪಡಿಸಲು ಬದಲಾವಣೆಗಳನ್ನು ಸ್ಥಿರೀಕರಿಸಿ ಸಮಾಜದ ಸಿಂಧುತ್ವಗೊಳಿಸಲು ಇವೇ ಮೊದಲಾದ ಉದ್ದೇಶಗಳಿಗಾಗಿ ಬಳಸಿಕೊಂಡರೆಂಬುದು. ಹಾಗೆಯೇ ರಾಜ್ಯದ, ಕರ್ತವ್ಯವಾದ 'ಸಾಮಾಜಿಕ ಕಲ್ಯಾಣ' ವನ್ನು ಸಾಧಿಸಲು ಹಾಗೂ 'ಕಲ್ಯಾಣ ರಾಜ್ಯ'ದ ಗುರಿಯನ್ನು ಸಾಧಿಸಲು ಪ್ರಜೆಗಳ ಭೌತಿಕ, ಸಾಮಾಜಿಕ, ಬೌದ್ಧಿಕ ಹಾಗೂ ನೈತಿಕ ಉನ್ನತಿಯನ್ನು ಸಾಧಿಸಲು ಶಾಸನಗಳನ್ನು ಮಾಧ್ಯಮಗಳಾಗಿ ಬಳಸಿಕೊಂಡರು ಎಂಬುದಾಗಿದೆ.

ಹನ್ನೆರಡನೆಯದಾಗಿ ನಾಲ್ವಡಿಯವರು ಜ್ಞಾನ ಪ್ರವಾಹವನ್ನು ಜನಸಾಮಾನ್ಯರಿಗೆ ಮುಟ್ಟಿಸಿ ಅವರು ಸಂಸ್ಕೃತಿಯನ್ನು ಸಂಸ್ಕರಿಸಬೇಕೆಂದು ಆಶಿಸಿದ್ದರು. ಸಾಂಸ್ಕೃತಿಕ ಅಂಶಗಳಾದ ಭಾಷೆ, ಸಾಹಿತ್ಯ, ನಾಟಕ, ಸಂಗೀತ, ಕಲೆ ಮತ್ತು ವಾಸ್ತುಶಿಲ್ಪಗಳಲ್ಲಿ ಭಾರತೀಯ ಹಾಗೂ ಪಾಶ್ಚಿಮಾತ್ಯ ಅಂಶಗಳೆರಡನ್ನೂ ಸಮನ್ವಯಗೊಳಿಸಿಕೊಂಡು ಬೆಳೆಯುವಂತೆ ಪ್ರೋತ್ಸಾಹಿಸಿದರೆಂಬುದು ಹಾಗೂ ಅವುಗಳ ಸಮನ್ವಯ ರೂಪವಾಗಿ ತಮ್ಮನ್ನು ತಾವೇ ರೂಪಿಸಿಕೊಂಡರೆಂದೂ ಹಾಗೂ ಜನತೆಗೆ ಮಾದರಿಯಾದರೆಂಬುದಾಗಿದೆ.

ಅಂತಿಮವಾಗಿ ನಾಲ್ವಡಿಯವರು ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಗಳ ಪ್ರಭಾವಕ್ಕೊಳಗಾಗಿದ್ದು ಅವುಗಳನ್ನು ಲೌಕಿಕಾಂಶಗಳಾದ ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ ಹಣಕಾಸು ವ್ಯವಸ್ಥೆ ಮುಂತಾದವುಗಳಲ್ಲಿ ಅಳವಡಿಸಲು ಕ್ರಾಂತಿಕಾರಕವಾಗಿ ಮುನ್ನುಗ್ಗುವರಾಗಿದ್ದರು. ಆದರೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅವರು ಹೊಂದಿದ್ದ ಸಾಂಪ್ರದಾಯಿಕ ಹಾಗೂ ಧಾರ್ಮಿಕ ನಿಷ್ಠೆಗಳು ಆ ಕ್ಷೇತ್ರಗಳಲ್ಲಿ ಕ್ರಾಂತಿಕಾರಕವಾದ, ಸಮಾಜವನ್ನು ವಿರೋಧಿಸಿ ಸುಧಾರಣೆ ತರುವ ಮನೋಭಾವವನ್ನು ಹೊಂದಿರಲಿಲ್ಲ ಎಂಬುದಾಗಿದೆ. ಉದಾಹರಣೆಗೆ ಅವರು 1901ರಲ್ಲಿ ಟ್ಯೂಟರ್ ಎಸ್.ಎಂ. ಫ್ರೇಜರ್‌ರೊಂದಿಗೆ ಬರ್ಮಾ ಪ್ರವಾಸ ಕೈಗೊಂಡಾಗ ಅಲ್ಲಿನ ಸ್ತ್ರೀಯರು ಹೊಂದಿದ್ದ ಸ್ವಾತಂತ್ರ್ಯವನ್ನು ನೋಡಿ ಪ್ರಭಾವಿತರಾಗಿದ್ದರು. ಆದರೆ ತಮ್ಮ ಸಂಸ್ಥಾನದಲ್ಲಿ 1 927 ರ ವರೆಗೂ ಅವರಿಗೆ ರಾಜಕೀಯ ಹಕ್ಕುಗಳನ್ನು ನೀಡುವ ಔದಾರ್ಯವನ್ನು ತೋರಿಸಿರಲಿಲ್ಲ. ಹಾಗೆಯೇ ಗುಬ್ಬಿ ಕಂಪನಿಯ 'ಸದಾರಮೆ' ನಾಟಕದ ವೀರಣ್ಣನ

ವರ ಪಾತ್ರಗಳನ್ನು ನೋಡಲು ಅಪೇಕ್ಷಿಸಿದ ನಾಲ್ವಡಿಯವರು ಅರಮನೆಯಲ್ಲಿ ಪ್ರದರ್ಶನ ಏರ್ಪಡಿಸಲು ಪ್ರಯತ್ನಿಸಿದಾಗ ಆ ನಾಟಕದಲ್ಲಿ ಸ್ತ್ರೀಯರು ಪಾತ್ರವನ್ನು ವಹಿಸುವರೆಂಬ ಕಾರಣಕ್ಕೆ ಅರಮನೆಯಲ್ಲಿ ಆಡಲು ಕೆಲವರು ಅವಕಾಶ ಕೊಡಲಿಲ್ಲ[971]. ಎಲ್ಲ ಸರ್ಕಾರಿ ಶಾಲೆ ಮತ್ತು ಅನುದಾನಿತ ಶಾಲೆಗಳಲ್ಲಿ ಪಂಚಮರಿಗೆ ಪ್ರವೇಶ ಒದಗಿಸಲು 1919ರಲ್ಲಿ ಒಂದು ಆಜ್ಞೆಯನ್ನೇ ಹೊರಡಿಸಿದ ನಾಲ್ವಡಿಯವರು ಪ್ರಜೆಗಳ ಅರಮನೆಯೆಂದು ಖ್ಯಾತಿಯಾಗಿದ್ದ ಅಂಬಾವಿಲಾಸ ಅರಮನೆಗೆ ಅಸ್ಪೃಶ್ಯರಾದ ಪಂಚಮರಿಗೆ ಪ್ರವೇಶಾವಕಾಶ ನೀಡಿದ್ದು 1936ರಲ್ಲಿ! ಈ ಮೇಲಿನ ಅಂಶಗಳು ಫ್ರೇಜರ್‌ರವರು ತಮ್ಮ ಅಂತಿಮ ವರದಿಯಲ್ಲಿ ಹೇಳಿರುವ ಹಾಗೆ ನಾಲ್ವಡಿಯವರ ಸಂಪ್ರದಾಯದ ವ್ಯಕ್ತಿತ್ವ ಮತ್ತು ಅರಮನೆಯ ಸಾಂಪ್ರದಾಯಿಕ ಗುಂಪು ತನ್ನ ಪ್ರಾಬಲ್ಯ ಹೊಂದಿದ್ದು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳಲ್ಲಿ ಹಲವಾರು ಪರಿವರ್ತನೆಗಳನ್ನು ತರಲು ನಾಲ್ವಡಿಯವರಿಗೆ ಅವಕಾಶ ಮಾಡಿಕೊಡಲಿಲ್ಲ ಎಂದು ಹೇಳಬಹುದು.

ಒಟ್ಟಾರೆ ನಾಲ್ವಡಿಯವರು ಪಾಶ್ಚಿಮಾತ್ಯ ಪ್ರಭಾವವನ್ನು ಅಳವಡಿಸುವಾಗ ಲೌಕಿಕಾಂಶಗಳಲ್ಲಿ ಆಧುನಿಕತೆ ಮತ್ತು ಪಾಶ್ಚಿಮಾತ್ಯೀಕರಣವನ್ನು ಸಮಾನ ಅರ್ಥದಲ್ಲಿ ಗ್ರಹಿಸಿಕೊಂಡಿದ್ದರು. ಆದರೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳಲ್ಲಿ ಅದಕ್ಕೆ ವಿಭಿನ್ನವಾದ ದೇಶೀಯ ಪರಂಪರೆಯ ನೆಲೆಗಟ್ಟಿನ ಮೇಲೆ ವಿಶ್ವದ ಮಟ್ಟದಲ್ಲಾದ ಆದರ್ಶವಾದ ಮತ್ತು ಮಾನವತಾವಾದಗಳಿಂದ ಒಡಮೂಡಿದ ಮೌಲ್ಯಗಳನ್ನು ಅಳವಡಿಸುವ ಮೂಲಕ ಸಾಮಾಜಿಕ ಪರಿವರ್ತನೆಗೆ ಮುಂದಾದರೆಂದು ತೀರ್ಮಾನಿಸಬಹುದು.

---

971. *ಸಿಂಧುವಳ್ಳಿ ಅನಂತಮೂರ್ತಿ ಮತ್ತು ಎಚ್.ಕೆ. ರಾಮನಾಥ್ (ಸಂ).*, ಕರ್ನಾಟಕ ರಂಗಭೂಮಿ ನೆನ್ನೆ ಇಂದು ನಾಳೆ, ಪು. 55

*ಅನುಬಂಧ - I*

# Time-Table for the H.H. The Maharaja's Class

| Days | 11 am. to 12 Noon | H.H. The Maharaja Only | 12 Noon to 1 pm Class | H.H. The Maharaja Only | 1pm to 2 pm Class | 2 pm to 2.45 pm | 2.45 pm to 3.45 pm | 3.45 pm to 4.45 pm |
|---|---|---|---|---|---|---|---|---|
| Mon | Indian History (i) | Special Lectures in Law and administrative Subjects (i) | English (ii) | Special Lectures in Law and administrative Subjects (i) | Kannada (iv) | RECESS | Mathematics | Science (v) |
| Tue | English | | Mathematics (iii) | | Science (v) | | Ancient History of India | Science (v) |
| Wed | Indian History | | English (ii) | | Kanarese (iv) | | Mathematics | Science (v) |
| Thu | English | | Magnetics (iii) | | Science (v) | | Ancient History of India | Science (v) |
| Fri | Indian History | | English (ii) | | Kanarese (iv) | | Mathematics | Science (v) |
| Sat | English | | Mathematics (iii) | | Kanarese (iv) | | Urdu | Drawing |

**N B :** Evenings Classes During The week

2 Hours Urdu (ii)

2 Hours Kannada (vii)

**Teachers**

(1) Mr. S.M. Fraser
(2) M. Hassanthi
(3) M. A. Singerachari
(4) B. Bhimarao
(5) P. Raghavendra Rao
(6) Narayana Iyengar
(7) Pandit Aiya Sastri

*1900-1901 ರಲ್ಲಿ ಮಹಾರಾಜರಿಗೆ ಬೋಧಿಸುತ್ತಿದ್ದ ಪುಸ್ತಕಗಳೆಂದರೆ*

ಜನರಲ್ ಸ್ಕೆಚ್ ಆಫ್ ಯೂರೋಪಿನ್ ಹಿಸ್ಟರಿ ಬೈ ಈ.ಎ. ಫ್ರೀಮನ್, ಹಿಸ್ಟರಿ ಆಫ್ ಇಂಗ್ಲೆಂಡ್ ಬೈ ಆರ್ನಾಲ್ಡ್ ಫಾಸ್ಟರ್, ರೂಲರ್ಸ್ ಆಫ್ ಇಂಡಿಯಾ ಸೀರಿಸ್ (ಕ್ಲೈವ್, ವಾರನ್ ಹೇಸ್ಟಿಂಗ್ಸ್, ಹೈದರಾಲಿ ಅಂಡ್ ಟಿಪ್ಪುಸುಲ್ತಾನ್ ಅಂಡ್ ಮಾರ್ಕ್ವಿಸ್ ಆಫ್ ವೆಲ್ಲಸ್ಲಿ), ಎನ್ಷಿಯಂಟ್ ಇಂಡಿಯಾ ಬೈ ಆರ್.ಸಿ. ದತ್ (ಇಪೋಕ್ಸ್ ಆಫ್ ಇಂಡಿಯನ್ ಹಿಸ್ಟರಿ ಸೀರಿಸ್)

ರಾಜಕೀಯ, ಆರ್ಥಿಕತೆ, ಇಂಗ್ಲಿಷ್, ವಿಜ್ಞಾನ, ಗಣಿತಶಾಸ್ತ್ರ, ಕನ್ನಡ, ಉರ್ದು, ಚಿತ್ರಕಲೆ, ಆಧುನಿಕ ರಾಜತಾಂತ್ರಿಕ ಕಲೆ, - ರಾಜ್ಯದ ಆಡಳಿತ, ಶಾಸನಗಳು, ಕಂದಾಯ ವ್ಯವಸ್ಥೆ ಮುಂತಾದವು.

*ಆಧಾರ: ಫೈಲ್ ನಂ. ಆರ್/2(8/64), ರಿಪೋರ್ಟ್ ಆನ್ ದಿ ಎಜುಕೇಷನ್ ಅಂಡ್ ಟ್ರೆನ್ನಿಂಗ್ ಆಫ್ ಹೆಚ್.ಹೆಚ್.ದಿ. ಮಹಾರಾಜ ಆಫ್ ಮೈಸೂರ್, ಬ್ರಿಟಿಷ್ ಲೈಬ್ರರಿ, ಲಂಡನ್, ಪು. 1-4*

ಅನುಬಂಧ - II

## Statement of marks for March 1899, H.H. the Maharaja's Class

| Rank for Feb 1899 | Name | Mathematics | | | | | English | | | | | | | | History & Geography | | | | | Vernacular | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | Arithmetic | Algebra | Geometry | Total | Rank | Text | Reading | Dictation | Recitation | Composition | Grammar | Total | Rank | History of England | History of Mysore | Geography | Total | Rank | Political economy | Physics | Total | Rank | Kannada | Urdu | Total | Rank | Grand Total |
| I | M.I. Mirza | 19 | 34 | 53 | 106 | III | 8 | 10 | 19 | 28 | 40 | 104 | 209 | I | 46 | 170 | 38 | 254 | I | 8 | 80 | 88 | I | - | 26 | 26 | VII | 683 |
| II | T.S. Alikhan | 34 | 42 | 71 | 147 | I | 6 | 8 | 8 | 22 | 21 | 56 | 1221 | IV | 41 | 166 | 242 | 249 | II | 13 | 61 | 74 | IV | 21 | 28 | 49 | IV | 640 |
| III | H.H. the Maharaja | 23 | 33 | 49 | 105 | IV | 6 | 7 | 15 | 33 | 28 | 85 | 174 | II | 45 | 123 | 43 | 211 | IV | 11 | 72 | 83 | II | 37 | 30 | 67 | I | 640 |
| IV | M Lakshmikantraj Urs | 12 | 17 | 25 | 54 | V | 6 | 7 | 12 | 26 | 12 | 52 | 115 | V | 40 | 144 | 37 | 221 | III | 11 | 66 | 77 | III | 33 | 28 | 61 | II | 528 |
| V | A.C. Basavaraj Urs | 30 | 37 | 56 | 123 | II | 6 | 7 | 15 | 25 | 16 | 83 | 152 | III | 32 | 102 | 36 | 170 | VII | 5 | 63 | 68 | V | 27 | - | 27 | VI | 540 |
| VI | B. Shanker Rao | 7 | 7 | 33 | 47 | VI | 5 | 7 | 7 | 20 | 5 | 51 | 101 | VII | 34 | 113 | 32 | 179 | V | 5 | 50 | 55 | VI | 27 | 22 | 49 | V | 431 |
| VII | M.C. Subbaraj Urs | 10 | 18 | 18 | 46 | VII | 5 | 7 | 1 | 12 | 29 | 60 | 114 | VI | 30 | 114 | 28 | 172 | VI | 4 | 48 | 52 | VII | 35 | 25 | 60 | III | 442 |

Rank for 1899 March

M.I. Mirza - I
T.S. Alikhan - II
H.H. Maharaja - III
M. Lakshmikant Urs - V
M. Basavaraj Urs - IV
B. Shanker Rao - VII
M.C. Subbaraj Urs - VI

Number of days Absent

(1) 5 sick
(2) Nil
(3) Nil
(4) Nil
(5) Nil
(6) 2 sick
(7) Nil

**Remarks**

The Maharajas has not done a good month's work. It is unsatisfactory that he would have been badly by the Mirza although the latter was absent for 5 days. In History H.H. has been beaten even by Lakshmikantraj Urs

***S.M. Frazer***
***Tutor of H.H. the Maharaj***
***of Mysore***

## Statement of Marks for April 1899, H.H. the Maharaja's Class

| Rank for Feb 1899 | Name | English | | | | | Mathematics | | | | | | | | History & Geography | | | | | Science | | | | Vernacular | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | Text | Reading | Dictation | Recitation | Composition | Grammar | Total | Rank | Arithmetic | Algebra | Geometry | Total | Rank | History of England | History of India | Geography | Total | Rank | Political economy | Physics | Total | Rank | Kannada | Urdu | Total | Rank | Grand Total | Rank for April 99 |
| I | M.I. Mirza | 0 | - | 10 | 10 | 15 | 33 | 68 | VII | 12 | 107 | 36 | 153 | IV | 19 | 36 | 24 | 79 | VI | - | 38 | 38 | VI | - | 27 | 27 | VII | 367 | VI |
| II | T.S. Alikhan | 8 | - | 11 | 15 | 15 | 32 | 81 | II | 46 | 123 | 59 | 228 | I | 83 | 59 | 99 | 241 | I | 23 | 46 | 68 | I | 40 | 42 | 82 | IV | 700 | I |
| III | H.H. the Maharaja | 0 | - | 6 | 19 | 15 | 36 | 76 | III | 22 | 90 | 60 | 172 | III | 82 | 54 | 85 | 221 | II | 6 | 46 | 52 | II | 61 | 41 | 102 | I | 623 | II |
| IV | A.C. Basavaraj Urs | 7 | - | 14 | 16 | 6 | 43 | 86 | I | 30 | 125 | 56 | 211 | II | 71 | 59 | 62 | 190 | IV | 16 | 28 | 44 | IV | 45 | - | 45 | V | 596 | III |
| V | M. Lakshmikantraj Urs | 5 | - | 13 | 12 | 7 | 36 | 73 | IV | 19 | 63 | 47 | 129 | V | 68 | 59 | 74 | 201 | III | 16 | 34 | 50 | III | 59 | 41 | 100 | II | 553 | IV |
| VI | Subbarja Urs | 6 | - | 6 | 11 | 10 | 37 | 70 | V | 16 | 44 | 22 | 82 | VI | 45 | 55 | 49 | 149 | V | 14 | 29 | 43 | V | 67 | 30 | 97 | III | 441 | V |
| VII | B. Shankar Rao | 0 | - | 6 | 9 | 5 | 49 | 69 | VI | 4 | 15 | 15 | 34 | VII | 12 | 18 | 16 | 46 | VII | - | 11 | 11 | VII | 14 | 14 | 28 | VI | 188 | VII |

Number of days Absent

(1) 10 sick
(2) Nil
(3) 3 Leave
(4) Nil
(5) Absent Nil
(6) 11 sick

**Remarks**

The Maharaja absence for 3 day at Bangalore lost him Marks and puts him between his rival, Ali Khan

*From : **From hill 3rd May 1899, OOtacamund***



ಆಳಿದ ಮಹಾಸ್ವಾಮಿಯವರ ವಿವಾಹಕಾಲದ ಚಿತ್ರ

*ಅನುಬಂಧ - IV*

**ಮುಂಬೈ ಪ್ರಾಂತ್ಯದ ಮೈಸೂರ್‌ನಲ್ಲಿ 1898 ಜನವರಿ ರಂದು ಸೂರ್ಯಗ್ರಹಣವನ್ನು ವೀಕ್ಷಿಸಲು ಕುಳಿತಿರುವ ನಾಲ್ವಡಿ ಮತ್ತು ತಂಡದವರ ದೃಶ್ಯ**



*ಆಧಾರ* : *The Quarterly Journal of the Mythic Society. The Third & Fourth Numbers of Vol. XXXI Is Issued as Momorial Number of Sri Krishnaraja Wadiyar Bahadur, Maharaja of Mysore*

ಅನುಬಂಧ-V



ಬರ್ಮಾ ದೇಶದ ಪ್ರವಾಸಕಾಲದಲ್ಲಿ ಪ್ರಾಣದಾನಮಾಡಿದ ಮೇಕೆಯೊಡನೆ

## ಅನುಬಂಧ-VI

### ನಾಲ್ವಡಿಯವರ ಧಾರ್ಮಿಕ ಪ್ರವಾಸಕ್ಕೆ ಸಂಬಂಧಿಸಿದ ಚಿತ್ರಗಳು ಹಾಗೂ ಮಾರ್ಗಸೂಚಿ





KAILAS—FROM BARKHA MAIDAN



FROZEN GOWRIKUND

ಆಧಾರ : *Q.J.M.S. New Series, Vol. XXII, No. 3*




ROUTE FROM ALMORA TO MANASAROVARA AND KAILASA

## ನಾಲ್ವಡಿಯವರ ಬಾಲ್ಯದ ಚಿತ್ರಗಳು



ಶೈಶವ
(ಶ್ರೀ ಚಾಮರಾಜೇಂದ್ರ ಒಡೆಯರವರು ಆಳಿದ ಮಹಾಸ್ವಾಮಿಯವರನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡಿದ್ದಾರೆ. ಶ್ರೀ ಕೃಷ್ಣಾಜಮ್ಮಣ್ಣಿಯವರು ಪಾರ್ಶ್ವದಲ್ಲಿ ಕುಳಿತಿದ್ದಾರೆ. ಶ್ರೀ ಜಯಲಕ್ಷ್ಮಮ್ಮಣ್ಣಿಯವರು ನಿಂತಿದ್ದಾರೆ)



ಬಾಲ್ಯದಲ್ಲಿ ಕುದುರೆಯಮೇಲೆ
(ಶ್ರೀ ಚಾಮರಾಜೇಂದ್ರ ಒಡೆಯರವರು ಆಳಿದ ಮಹಾಸ್ವಾಮಿಯವರನ್ನು ಕುದುರೆಯಮೇಲೆ ಕುಳ್ಳಿರಿಸಿರುವುದು)



ಬಾಲ್ಯದಲ್ಲಿ
(ನಿಂತಿರುವವರು ಆಳಿದ ಮಹಾಸ್ವಾಮಿಯವರು; ಕುಳಿತಿರುವವರು ಅವರ ಸೋದರರು)

ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ವೇಶಭೂಷಣದಲ್ಲಿ ಮಹಾರಾಜ ನಾಲ್ವಡಿಯವರು



# ಪರಾಮರ್ಶಿತ ಆಕರಗಳ ಪಟ್ಟಿ

*ಮೂಲ ಆಕರಗಳು*

## *i) ORIENTAL AND INDIA OFFICE COLLECTIONS. BRITISH LIBRARY (FORMERLY INDIA OFFICE LIBRARY), LONDON.*

*FILES :*

1. File No; R/1(1/201), SI March 1898, 48-51, Selection of an English tutor of Superintend the Education on of the Eldest son of His Highness The Maharaja of Hydrabad (1897-98).

2. File No; R/1(1/143), No-32, 33, 34, 35 dated : 6-2-1895, Telegram massage to Bangalore.

3. File No; R/1(1/143), Demo-office file dated : 5-1-1895, Mysore. Letter from Col. P.D. Henderson (Resident of Mysore) to W.J. Conninghm (Foreign Secretary).

4. File No; R/2(8/64), Statement of Marks for March 1899 ; H.H. Maharaja's class, Report on the Education and Training of H.H. The Maharaja of Mysore.

5. File No; R/2(31/299), Confidential ; Sl.No. 1 of file No. 26, of 1902. Final Report of Mr. Fraser on the Maharaja's Education on 13-7-1902.

6. File No; R/2(31/299), The Report Submitted to D. Rebertson, Resident of Mysore.

7. File No; R/2(30/279), Report on the Marriage of the Maharaja's, 1900.

8. File No; R/1(1/143), SI April 1895, 1-43, death of H.H. The Maharaja Sri Chamarajendra Wodeyar Bahadur, G.C.S.I., of Mysore, Succession of his Eldest son Krishnaraja Wodeyar Bahadur and arrangements for the Administration of the state during his minority (1894-95).

9. File No; R/1(1/81), SI June 1888, 74-76, Question of the relations of the British Government, towards Native state and function of Political officers (1876, 1887, 1888).

10. File No; R/1(1/260), SI March 1901, 1-17, Note on Mysore (1900)

11. File No; R/1(1/143), 1895 Foreign Department secret - I, Proclamations, April 1895, Nos-1-43

12. File No; R/1(1/261), Proceedings of the Foreign department, March 1901 - Administration arrangements in Mysore. Proclamation No-137

13. File No; R/2(8/64), From: S.M. Fraser Esquire, I.C.S., Tutor and Governor to H.H. The Maharaja of Mysore To, the Honorable Mr. J.A. Crawford, I.C.S., offg: Resident in Mysore, Dated : 16-12-1901, Mysore.

14. File No; R/1(1/143), No. 33, Programme of the Ceremonial to be observed at the Installation of His Highness Maharaja Sri Krishnaraja Wodeyar Bahadur on the Throne of Mysore at 30 minutes after 12 O'clock noon on Friday, the Ist February 1895.

*ii)* ***ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಮತ್ತು ಪ್ರಾಂತೀಯ ಪತ್ರಾಗಾರ ಇಲಾಖೆ, ಮೈಸೂರುಗಳಲ್ಲಿ ಸಂಗ್ರಹಿಸಿದ ಮೂಲ ಆಕರಗಳು.***

***ಅಪ್ರಕಟಿತ***

***Files***

1. File No. 2, Sl. No. 8 of 1898, 1899, Provincial Tour of H.H. The Maharaja in 1898-99, Mysore.

2. File No. 3-14, Sl.No. 7-36, Muncipal 1914, Bangalore.

3. File No. 454-13, Sl.No. 1-17, Education, 1913-14, Bangalore.

4. File No. 89-17, Sl.No. 4, 46, 48, Education, 1917, Bangalore.

5. File No. 128 of 1915, Industries and commerce, The Mysore Factory Regulation, Bangalore.

6. File No. 52-1912, Legislative; Introduction of the Widow Remarriage act XV of 1856 in to Mysore (D.R.A. 12 of 1912) Bangalore.

7. File No. 65 of 1935 Sl. No.1, Legislative Amendment of the Mysore Infant Marriage Prevention Regulation of 1894, Bangalore.

8. File No. 50 of 1917, The Prevention of Infant Marriage Regulation on 1894, Bangalore.

9. File No. G.O. 2636, Home department, dated : 9-10-1926, Bangalore.

10. Government order No. 958-68-A and 26-15-2 dated 27-8-1915.

11. Government order No. R. 10822-5. L.R. 12-16-143, dated 5-5-1917.

12. Government order No. 6433-83, A and E:54-17-9, dated:9-11-1919

13. Government order No. F.L. 2760-808-G-F 214-10-88, dated: 23-12-1913

### ಪ್ರಕಟಿತ (ಮೈಸೂರು ಸರ್ಕಾರದ ವತಿಯಿಂದ ಪ್ರಕಟಿಸಲ್ಪಟ್ಟವು.)

1. Address of the Dewan to the Mysore Representative Assembly, 1903, 1905, Bangalore.

2. Administration Report of Industries and Commerce, 1928-29, 1932-35, 1937-38

3. Annual Report on the Co-operative societies in Mysore, 1926-27.

4. Agriculture in Mysore, 2nd and Revised Edition, Bangalore, 1939.

5. Central Banking Enquire Committee, Majority report.

6. Census of India, 1891, Mysore, Volume 25, in 4 Parts, Bangalore, 1893.

7. Census of India, 1901, Vol. 24, 2 Parts, Bangalore, 1903.

8. Census of India, 1911, Vol.21, 2 Parts, Balgalore, 1912.

9. Census of India, 1921, Vol. 23, 2 Parts, Bangalore, 1923.

10. Census of India, 1931, Vol.25, 2 Part s, Bangalore, 1932.

11. Census of India, 1941, Mysore-Part I. Report, Part II, Tables, 1943.

12. Factories Mannual, 1944.

